ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

## ಭೇದಸೌರಭ-೩

ಸಂಪುಟ-೪

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಮೂಲಸಹಿತ ಸಮಗ್ರ ಕನ್ನಡಾನುವಾದ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಭೇದಸೌರಭಮ್ - ೩

## ಸಂಪುಟ - ೪

ಅನುಗ್ರಹ :

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು

ಪ್ರಥಮಪರ್ಯಾಯ, ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ.ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು :

ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ಭೇದಸೌರಭ - ಭಾಗ ೧**

© Copyrights reserved

ಪುಟಗಳು - LII + 409 = 461

ಸಂಪುಟ - ೪(೧೦)

ಮುದ್ರಿತ ಪ್ರತಿಗಳು - ೧೦೦೦

ಪ್ರಕಾಶಕರು - ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ.

ಮುಖಪುಟವಿನ್ಯಾಸ : ಎಂ. ಶರತ್ ಚಂದ್ರ

ಪುಟ ಸಂಯೋಜನೆ : ಬದರಿನಾರಾಯಣಾಚಾರ್ಯ ಎಸ್. ಕಡ್ಡಿ

ಅಕ್ಷರ ಜೋಡಣೆ : ಕೆ. ಗಣಪತಿ ಭಟ್
ಶ್ರೀಮತಿ ನಾಗಲತಾ (ಸುಧಾ),
ಎಂ. ಶರತ್ ಚಂದ್ರ

ಮುದ್ರಕರು : ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ✆ : **7899779255**

ಗ್ರಂಥಪ್ರಾಪ್ತಿ : ಸೋದೆ ಶ್ರೀವಾದಿರಾಜಮಠ, ಉಡುಪಿ.

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವ ಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

# ರಾಜರ ಸಂದೇಶ

## "ತತ್ವವಾದದಲ್ಲಿ ವಿಶ್ವಾಸತಾಳಿರಿ!"

ತತ್ಪೂರ್ವಸರ್ವರಾದ್ಧಾಂತ-
ಸಿದ್ಧಾರ್ಥಾನಾಂ ನಿಷೇದ್ಧರಿ ।
ಪರೇ ಚ ತತ್ವವಾದೇಽಸ್ಮಿನ್-
ಗರೀಯಸಿ ಭರೋ ಮಮ ॥

ಏಕವಿಂಶತಿ ಭಾಷ್ಯದೂಷಕವಾದ ಮಧ್ವಸಿದ್ಧಾಂತದಲ್ಲಿ ನನಗೆ ಬಲು ವಿಶ್ವಾಸ.

## "ಪ್ರಾಜ್ಞರಿಗೆ ಮಧ್ವಮತ"

ವಿದ್ಯಾಽವಿದ್ಯಾವಿಭಾಗಜ್ಞಃ
ಕಿಮಜ್ಞಃ ಪ್ರಾಜ್ಞವದ್ಭವೇತ್ ।
ಅಂಧಸ್ಯೇಂದೂದಯೇಽಪಾಂಧ್ಯಂ
ಅಂಧಕಾರೋದಯೇಽಪಿ ಹಿ ॥

ವಿದ್ಯಾ-ಅವಿದ್ಯಾಗಳ ವಿಭಾಗವು ಪ್ರಾಜ್ಞನಿಗಲ್ಲದೆ ಅಜ್ಞನಿಗೆ ತಿಳಿಯುವುದೇ? ಚಂದ್ರೋದಯವಾಗಲೀ ಅಂಧಕಾರೋದಯವಾಗಲೀ ಕುರುಡನ ಅಂಧತ್ವದಲ್ಲಿ ಯಾವ ಬದಲಾವಣೆಯೂ ಇಲ್ಲವಷ್ಟೆ! ಮಧ್ವಮತ ಪಿಡಿದವ ಪ್ರಾಜ್ಞನೇ ಸರಿ!




# ಪ್ರಕಾಶಕರ ನುಡಿ

ಐದುಸೌರಭಗಳಲ್ಲಿಯೇ ಅತ್ಯಂತ ವಿಸ್ತಾರವಾದ ಸೌರಭ ಭೇದಸೌರಭ. ಭೇದಸೌರಭಕ್ಕೆ ಸಂಬಂಧಿಸಿದ ಎರಡು ಪ್ರತಿಗಳು ಸೋದೆಮಠದ ಗ್ರಂಥಾಲಯದಿಂದ ಉಪಲಬ್ಧವಾಗಿವೆ. ಅದರಲ್ಲಿ ಒಂದು ಪ್ರತಿಯು ಸುಮಾರು ೪೦೦ ವರ್ಷಗಳ ಹಿಂದಿನದ್ದಾಗಿದ್ದು, ಇನ್ನೊಂದು ಸುಮಾರು ೨೦೦ ವರ್ಷಗಳ ಹಿಂದಿನದ್ದು. ಎರಡು ಪ್ರತಿಗಳಲ್ಲಿಯೂ ಕೂಡ ಸಮಗ್ರಶ್ಲೋಕಗಳ ವ್ಯಾಖ್ಯಾನವು ಉಪಲಬ್ಧವಾಗಿಲ್ಲ. ಸುಮಾರು ಸಾವಿರಶ್ಲೋಕಗಳತನಕ ಉಪಲಬ್ಧವಿದೆ. ಅದರಲ್ಲಿ ಪ್ರಾಚೀನ ಪ್ರತಿಯಲ್ಲಿ ನಾಲ್ಕು ಶ್ಲೋಕಗಳು ಅಧಿಕವಾಗಿ ದೊರೆತಿವೆ. ಅದನ್ನು ಗ್ರಂಥದ ಆ ಪ್ರಸಂಗದಲ್ಲಿ ಸೂಚಿಸಲಾಗಿದೆ. ಈ ಗ್ರಂಥದ ಅನುವಾದದ ಬಿಟ್ಟುಹೋದ ಭಾಗಗಳನ್ನು ಪಿ.ಎಸ್. ಶೇಷಗಿರಿ ಆಚಾರ್ಯರು ಅನುವಾದಿಸಿ ಗ್ರಂಥವನ್ನು ಪರಿಶೀಲಿಸಿದ್ದಾರೆ. ಅದರಂತೆ ಪಾಂಡುರಂಗಾಚಾರ್ಯರು, ಬೆ.ನಾ. ವಿಜಯೀಂದ್ರಾಚಾರ್ಯರು ನಿರ್ವಹಿಸಿರುತ್ತಾರೆ. ಮೂಲಪ್ರತಿಯ ಶೋಧಕೆಲಸವನ್ನು ವಿದ್ವಾನ್ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಶಿಷ್ಯರಾದ ವಿದ್ವಾನ್ ಬಿ.ಎನ್. ಮಾಧವಾಚಾರ್ಯ ಇವರು ನಡೆಸಿಕೊಟ್ಟಿರುತ್ತಾರೆ. ಅನೇಕ ಜನ ವಿದ್ವಾಂಸರು ಪ್ರೌಢವಾದ ಅನುವಾದಗಳನ್ನು ನಡೆಸಿಕೊಟ್ಟಿರುತ್ತಾರೆ. ಇವರೆಲ್ಲರಿಗೂ ಕೂಡ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಪ್ರಕಾಶರು
**ಶ್ರೀಮದ್ವ್ಯಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,**
ಸೋದೆ ಶ್ರೀವಾದಿರಾಜಮಠ,
ರಥಬೀದಿ, ಉಡುಪಿ.

|| ಶ್ರೀ ವಾದಿರಾಜಗುರುಭ್ಯೋ ನಮಃ ||

# ಉಪೋದ್ಘಾತ

ಯುಕ್ತಿಮಲ್ಲಿಕೆಯಲ್ಲಿ ವಾದಿರಾಜರು ಗುಣಸೌರಭ ಮತ್ತು ಶುದ್ಧಿಸೌರಭಗಳಿಂದ ಹರಿಯ ಗುಣಪೂರ್ಣತ್ವವನ್ನು ಮತ್ತು ದೋಷದೂರತ್ವವನ್ನು ಸಮರ್ಥನೆಮಾಡಿದ್ದಾರೆ. ಈ ಎರಡು ಧರ್ಮಗಳು ಜೀವೇಶ್ವರರಿಗೆ ಭೇದವಿದ್ದರೆ ಮಾತ್ರ ಉಪಪನ್ನವಾಗುತ್ತದೆ. ಭೇದವನ್ನು ಒಪ್ಪದಿರುವ ವಾದಿಗಳೂ ಇದ್ದಾರೆ. ಆದ್ದರಿಂದ ತಾವು ಮೊದಲಿನ ಎರಡು ಸೌರಭಗಳಲ್ಲಿ ಸಾಧಿಸಿದ ಪ್ರಮೇಯದ ಸ್ಥೈರ್ಯಕ್ಕಾಗಿ ಇಲ್ಲಿ ಭೇದವನ್ನು ಸಮರ್ಥಿಸುವುದು ಯುಕ್ತವಾಗಿದೆ. ಜೀವೇಶ್ವರ ಭೇದವೇ ಅಲ್ಲದೆ ಉಳಿದ ನಾಲ್ಕುಭೇದಗಳನ್ನೂ ಶ್ರುತಿ, ಸ್ಮೃತಿ, ಯುಕ್ತಿ ಮತ್ತು ಪ್ರತ್ಯಕ್ಷಪ್ರಮಾಣಗಳಿಂದ ಈ ಸೌರಭದಲ್ಲಿ ಸಮರ್ಥಿಸುತ್ತಾರೆ.

## ಸತ್ಯಂ ಜ್ಞಾನಮನಂತಂ ಬ್ರಹ್ಮ :

ಪ್ರಾರಂಭದಲ್ಲಿ ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ತೈತ್ತಿರೀಯ ಶ್ರುತಿಯ ಅರ್ಥವನ್ನು ವಿಮರ್ಶೆಮಾಡುತ್ತಾರೆ. ಮಾಯಾವಾದಿಗಳು ಜೀವಬ್ರಹ್ಮರಿಗೆ ಅಭೇದವನ್ನು ಹೇಳುವವರು. ಆದ್ದರಿಂದ ಅವರು ನಮಗೆ ಮುಖ್ಯವಾದ ಪ್ರತಿಕಕ್ಷಿಗಳು. ಅವರು ಹೇಳುವ ಶ್ರುತ್ಯರ್ಥವನ್ನು ನಿರಾಕರಿಸದೆ ನಾವು ಹೇಳುವ ಅರ್ಥವು ದೃಢವಾಗುವುದಿಲ್ಲವಾದ್ದರಿಂದ ಎಲ್ಲಾ ಶ್ರುತಿಗಳೂ ಪರರು ಹೇಳುವ ಅರ್ಥವನ್ನು ಹೇಳಿ ಅದರಲ್ಲಿ ಅನುಪಪತ್ತಿಯನ್ನು ತೋರಿಸಿ ನಮ್ಮ ಅರ್ಥವನ್ನು ಸಮರ್ಥನೆಮಾಡುವುದು ರಾಜರ ಪದ್ಧತಿ. ಪ್ರಕೃತ, ಈ ಶ್ರುತಿಯು ಬ್ರಹ್ಮನ ಲಕ್ಷಣವನ್ನು ಹೇಳುತ್ತದೆ. ಸತ್ಯಂ ಎಂದರೆ ಜಗತ್ತಿನ ಸೃಷ್ಟಿಕರ್ತಾ, ಸಂಹಾರಕರ್ತಾ, ಪಾಲನಕರ್ತಾ ಎಂದು ಅರ್ಥ. ಜ್ಞಾನಂ ಎಂದರೆ ಸರ್ವಜ್ಞನೆಂದು ಅರ್ಥ. ಅನಂತರ ಶಬ್ದಾರ್ಥದ ವಿಷಯದಲ್ಲಿ ವಿವಾದವಿದೆ. ಆದ್ದರಿಂದ ಪ್ರಧಾನವಾಗಿ ವಿಚಾರಮಾಡುತ್ತಾರೆ.

ಅನಂತಶಬ್ದಕ್ಕೆ ಮೂರುವಿಧವಾದ ಅಂತರಹಿತವಾದದ್ದು ಎಂದು ಅರ್ಥ. ಅವು ದೇಶತಃ ಅಂತರಾಹಿತ್ಯ, ಕಾಲತಃ ಅಂತರಾಹಿತ್ಯ ಮತ್ತು ವಸ್ತುತಃ ಅಂತರಾಹಿತ್ಯ ಎಂದು ಮಾಯಾವಾದಿಗಳು ಹೇಳುತ್ತಾರೆ. ನಾವಾದರೂ ದೇಶತಃ ಆನಂತ್ಯ, ಕಾಲತಃ ಆನಂತ್ಯ ಮತ್ತು ಗುಣತಃ ಆನಂತ್ಯ ಎಂದು ಹೇಳುತ್ತೇವೆ. ಮೊದಲನೆಯ ಎರಡು

ರೀತಿಯ ಆನಂತ್ಯದಲ್ಲಿ ವಿವಾದವಿಲ್ಲ. ಮೂರನೆಯದರಲ್ಲಿ ವಿವಾದ. ನಮ್ಮ ಅರ್ಥಕ್ಕೆ ಪೋಷಕವಾಗಿರುವುದು **'ಅಥಕಸ್ಮಾದುಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ'** ಎಂಬ ಶ್ರುತಿ. ಆದರೆ ಪರರು ಈ ಶ್ರುತಿಯನ್ನು ಒಪ್ಪುವುದಿಲ್ಲ. ಅಪ್ರಸಿದ್ಧಶ್ರುತಿ ಎಂದು ಹೇಳುತ್ತಾರೆ. ಆದ್ದರಿಂದ ಅವರು ಹೇಳುವ ಅರ್ಥದಲ್ಲಿ ಮೊದಲು ಅನುಪಪತ್ತಿಯನ್ನು ತೋರಿಸಬೇಕು. ಅಂತ ಎಂದರೆ ಪರಿಚ್ಛೇದ. ಅನಂತ ಎಂದರೆ ಪರಿಚ್ಛೇದರಹಿತ ಎಂದು ಅರ್ಥ. ದೇಶತಃ ಅನಂತ ಎಂದರೆ ದೇಶದ ವಿವಕ್ಷೆಯಿಂದ ಪರಿಚ್ಛೇದವಿಲ್ಲದ ವಸ್ತು, ಎಂದರೆ ಒಂದು ದೇಶದಲ್ಲಿದೆ ಮತ್ತೊಂದು ದೇಶದಲ್ಲಿ ಇಲ್ಲ ಎಂದು ಹೇಳಲಾಗದ ವಸ್ತು, ಎಂದರೆ ದೇಶದಿಂದ ವ್ಯಾಪ್ತವಾದ ವಸ್ತು ಎಂದು ಅರ್ಥವಾಗುತ್ತದೆ. ಹಾಗೆಯೇ ಕಾಲತಃ ಆನಂತ್ಯ ಎಂದರೆ ಕಾಲದ ಪರಿಚ್ಛೇದವಿಲ್ಲದುದು, ಎಂದು ಅರ್ಥವಾಗುತ್ತದೆ. ಹಾಗೆಯೇ ಕಾಲತಃ ಆನಂತ್ಯ ಎಂದರೆ ಕಾಲದ ಪರಿಚ್ಛೇದವಿಲ್ಲದುದು, ಎಂದರೆ ಸಕಲಕಾಲದಲ್ಲಿ ಇರುವ ವಸ್ತು ಎಂದರೆ ನಿತ್ಯವಾದ ವಸ್ತು ಎಂದು ಅರ್ಥವಾಗುತ್ತದೆ. ಈಗ ವಸ್ತುತಃ ಅನಂತ ಎಂಬ ಮೂರನೆಯ ಅರ್ಥದಲ್ಲಿ ಪರರು ವಸ್ತುಪ್ರತಿಯೋಗಿಕಭೇದರಹಿತವಾದದ್ದು ಎಂದು ಅರ್ಥಮಾಡುತ್ತಾರೆ. ಅನಂತ ಶಬ್ದದಲ್ಲಿ ಒಂದೇ ಬಾರಿ ಶ್ರುತವಾದ ಅಂತಶಬ್ದಕ್ಕೆ ಎರಡು ಬಾರಿ ಪರಿಚ್ಛೇದ ಎಂದರೆ ಎಲ್ಲೆ ಎಂದು ಅರ್ಥಮಾಡಿ ಮೂರನೆಯ ಬಾರಿಗೆ ಭೇದ ಎಂದು ಅರ್ಥಮಾಡುವುದು ಸರಿಯಲ್ಲ. ಹಾಗೆ ಮಾಡಿದರೆ ಪ್ರಾಯಪಾಠವಿರೋಧರೂಪವಾದ ದೋಷವೂ ಮತ್ತು ಕರಣವಾದ ಶಬ್ದಕ್ಕೆ ವಿರಮ್ಯವ್ಯಾಪಾರರೂಪವಾದ ದೋಷವೂ ಬರುತ್ತದೆ. ಮತ್ತು ಪರಸ್ಪರವಿರೋಧವೂ ಉಂಟಾಗುತ್ತದೆ. ವಸ್ತುತಃ ಅನಂತಶಬ್ದಕ್ಕೆ ಸಕಲವಸ್ತು ಪ್ರತಿಯೋಗಿಕಭೇದಶೂನ್ಯ ಎಂದು ಅವರ ಅರ್ಥ. ಸಕಲವಸ್ತುಗಳಲ್ಲಿ ಅಣುವಾದ ಪರಮಾಣುಗಳೂ, ಅನಿತ್ಯವಾದ ಘಟಾದಿಗಳೂ ಸೇರುತ್ತವೆ. ಆದರಿಂದ ಅಣುವಿನ ಅಭೇದವೂ ಅನಿತ್ಯದ ಅಭೇದವೂ ಸಿದ್ಧವಾಗುತ್ತದೆ. ದೇಶದಿಂದ ಅನಂತ ಎಂದು ಸರ್ವದೇಶವ್ಯಾಪ್ತತ್ವವನ್ನು ಹೇಳಿ ಪುನಃ ಅಣುವಿನ ಅಭೇದವನ್ನು ಹೇಳಿದರೆ ಅಣುತ್ವಪ್ರಸಂಗವು ಬರುತ್ತದೆ. ಹಾಗೆಯೇ ಕಾಲತಃ ಅನಂತ ಎಂದು ನಿತ್ಯತ್ವವನ್ನು ಹೇಳಿ ಅನಿತ್ಯದ ಅಭೇದವನ್ನು ಹೇಳಿದರೆ ಪರಸ್ಪರ ವಿರುದ್ಧವಾಗುತ್ತದೆ. ಶ್ರುತಿಯು ಉನ್ಮತ್ತಭಾಷಿತವಲ್ಲ. ಆದ್ದರಿಂದ ತಾನೇ ಹೇಳಿದ ಅರ್ಥವನ್ನು ತಾನೇ ಹೇಗೆ ನಿಷೇಧಮಾಡುತ್ತದೆ? ಆದ್ದರಿಂದ ಸಕಲ ವಸ್ತುಪ್ರತಿಯೋಗಿಕ ಭೇದಶೂನ್ಯ ಎಂದು ಅರ್ಥಮಾಡಬಾರದು. ದೇಶಾನಂತ್ಯ ಎಂದರೆ ಸಕಲ ದೇಶಸಂಬಂಧ ಎಂದು ಅರ್ಥಮಾಡಿದಂತೆ, ಕಾಲಾನಂತ್ಯ ಎಂದರೆ ಸಕಲಕಾಲ ಸಂಬಂಧ ಎಂದು

ಅರ್ಥಮಾಡಿದಂತೆ, ವಸ್ತುತಃ ಅನಂತ ಎಂದರೆ ಸಕಲವಸ್ತುವಿನ ಸಂಬಂಧ ಎಂದು ಅರ್ಥವನ್ನು ಮಾಡು. ಅದು ಬ್ರಹ್ಮನಿಗೆ ಗುಣವಾಗಿಯೇ ಸಿದ್ಧಿಸುತ್ತದೆ. ಸಕಲವಸ್ತುಗಳ ಅಭೇದವನ್ನು ಹೇಳಿ ಹೇಯವಸ್ತುಗಳ ಅಭೇದವನ್ನೂ ಹೇಳಿದರೆ ಮಹಾದೋಷವೇ ಪ್ರಾಪ್ತವಾಗುತ್ತದೆ. ದೇಶಕಾಲಗಳು ಒಂದು ದೃಷ್ಟಿಯಲ್ಲಿ ಆಧೇಯವಾದ್ದರಿಂದ ಬ್ರಹ್ಮನುವಿಲ್ಲ ವಸ್ತುಗಳಿಗೂ ಆಧಾರನಾಗಿದ್ದಾನೆಂದು ಅರ್ಥ. ಹೀಗೆ ವಸ್ತುತಃ ಆನಂತ್ಯವನ್ನು ಹೇಳಿದರೂ ಅದನ್ನು ಬ್ರಹ್ಮನ ಗುಣಪರವಾಗಿ ಪರ್ಯವಸಾನಮಾಡಲು ಬರುವಾಗ ಅಭೇದವನ್ನು ಹೇಳಿ ದೋಷದಲ್ಲಿ ಪರ್ಯವಸಾನವನ್ನು ಮಾಡುವುದು ಯುಕ್ತವಲ್ಲ.

ನಾವು ಹೇಳುವ ಗುಣತಃ ಆನಂತ್ಯದ ವಿಷಯದಲ್ಲಿ ಶ್ರುತಿಯೇ ಇದೆ. ಅಲ್ಲದೆ 'ಮಾಂತ್ರವರ್ಣಿಕಮೇವ ಚ ಗೀಯತೇ' ಎಂಬ ಸೂತ್ರವು 'ಸತ್ಯಂ ಜ್ಞಾನಮನಂತಂಬ್ರಹ್ಮ' ಎಂದು ಮಂತ್ರವರ್ಣದಲ್ಲಿ ಹೇಳಲ್ಪಟ್ಟ ವಸ್ತುವೇ ಪ್ರಕರಣ ಮತ್ತು ಅನ್ನಮಯಾದಿ ಐದು ಪ್ರಕರಣಗಳಲ್ಲಿ ಸ್ತೋತ್ರಮಾಡಲ್ಪಡುತ್ತದೆ ಎಂದು ಹೇಳುತ್ತದೆ. ಸತ್ಯಶಬ್ದಾರ್ಥವನ್ನು ಸೃಷ್ಟಿ, ಅನ್ನಮಯ ಮತ್ತು ಪ್ರಾಣಮಯ ಪ್ರಕರಣಗಳಲ್ಲಿ ಸ್ತೋತ್ರಮಾಡಿ, ಜ್ಞಾನಶಬ್ದಾರ್ಥವನ್ನು ಮನೋಮಯ ವಿಜ್ಞಾನಮಯ ಪ್ರಕರಣಗಳಲ್ಲಿ ಸ್ತೋತ್ರಮಾಡಿದ ಮೇಲೆ ಬರುವ ಆನಂದಮಯಪ್ರಕರಣವು ಅನಂತಶಬ್ದಾರ್ಥವನ್ನೇ ಸ್ತೋತ್ರಮಾಡಬೇಕಷ್ಟೆ? ಆದ್ದರಿಂದ ಅನಂತ ಎಂದರೆ ಆನಂದಾದಿಗುಣಗಳಿಂದಲೇ ಆನಂತ್ಯವೆಂದು ಸಿದ್ಧವಾಗುತ್ತದೆ. ಅನಂತಗುಣಗಳಲ್ಲಿ ಒಂದೊಂದನ್ನು ತೆಗೆದುಕೊಂಡು ಪರೀಕ್ಷೆಮಾಡಲು ಸಾಧ್ಯವಿಲ್ಲವಾದ್ದರಿಂದ ಶ್ರುತಿಯು ಪ್ರಧಾನವಾದ ಆನಂದರೂಪವಾದ ಒಂದು ಗುಣವನ್ನು ತೆಗೆದುಕೊಂಡು ಅದನ್ನು ವಿಮರ್ಶೆಮಾಡಿ ಬ್ರಹ್ಮನಿಗೆ ಪೂರ್ಣಾನಂದತ್ವವನ್ನು ಸಮರ್ಥನೆಮಾಡುತ್ತದೆ. ಪ್ರಸಿದ್ಧವಾದ ತೈತ್ತಿರೀಯ ಶಾಖೆಯಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದಿದ್ದರೆ ಯಜುರ್ವೇದದ ಇನ್ನೊಂದು ಶಾಖೆಯಲ್ಲಿ 'ಸತ್ಯಂ ಜ್ಞಾನಮಾನಂದಂ ಬ್ರಹ್ಮ' ಎಂಬ ಪಾಠವೇ ಇದೆ. ಆದ್ದರಿಂದಲೂ ಆನಂತ್ಯವನ್ನು ಆನಂದಾದಿಗುಣಗಳಿಂದಲೇ ಎಂದು ಹೇಳಬೇಕು. ಆದ್ದರಿಂದ ಅನಂತ ಎಂಬ ಈ ಮೂರುವರ್ಣಗಳ ಶಬ್ದವೇ ತ್ರಿವಿಕ್ರಮನ ಮೂರು ಪಾದವಿನ್ಯಾಸಗಳಂತೆ ಪರವಾದಿಗಳನ್ನು ಸೋಲಿಸಿ ವೈದಿಕಮತಕ್ಕೆ ಜಯವನ್ನು ತಂದುಕೊಡುವುದೆಂದು ರಾಜರು ತಾವು ಪ್ರತಿಷ್ಠಿಸಿದ ತ್ರಿವಿಕ್ರಮಮೂರ್ತಿಯನ್ನು ಸ್ಮರಣೆಮಾಡುತ್ತಾರೆ.

ತತ್ತ್ರಿವರ್ಣಂ ಪದಮಿದಂ ತ್ರಿವಿಕ್ರಮಪದೋಪಮಂ ।
ಜಯ/ ಪರಾಯ ದೈತ್ಯಾನಾಂ ಜಯಾಯ ಚ ಸತಾಮಭೂತ್ ॥

## 'ಮಹದ್ಗುಣತ್ವಾದ್ ಯಮನಂತಮಾಹುಃ'

ಭಾಗವತ ಪ್ರಥಮಸ್ಕಂದದಲ್ಲಿ 'ಮಹದ್ಗುಣತ್ವಾದ್ ಯಮನಂತಮಾಹುಃ' ಎಂಬ ಸೂತರ ವಾಕ್ಯವಿದೆ. ಈ ವಾಕ್ಯವು ಅನಂತಶಬ್ದದ ಪ್ರವೃತ್ತಿನಿಮಿತ್ತವನ್ನು ಹೇಳುತ್ತದೆ. ಪೂರ್ಣಗುಣತ್ವದ ನಿಮಿತ್ತದಿಂದಲೇ ದೇವರಿಗೆ ಅನಂತ ಎಂದು ಹೆಸರು ಎಂದು ಈ ವಾಕ್ಯದ ಅರ್ಥ. ದೇಶತಃ ಆನಂತ್ಯದಲ್ಲಿ ಮತ್ತು ಕಾಲತಃ ಆನಂತ್ಯದಲ್ಲಿ ವಾದಿಗಳಿಗೆ ವಿವಾದವಿಲ್ಲದಿರುವುದರಿಂದ ಅದನ್ನು ಹೇಳದೆ ವಿವಾದಗ್ರಸ್ತವಾದ ಮೂರನೆಯ ರೀತಿಯ ಆನಂತ್ಯವನ್ನೇ ಗುಣತಃ ಆನಂತ್ಯ ಎಂದು ಹೇಳಿ ವಸ್ತುತಃ ಆನಂತ್ಯ ಎಂಬ ಪಕ್ಷವನ್ನು ನಿರಾಕರಿಸುತ್ತಾರೆ. ಗುಣತಃ ಆನಂತ್ಯವನ್ನು ಹೇಳುವುದಾದರೆ ವ್ಯಾಕರಣರೀತ್ಯಾ **'ಮಹಾಗುಣತ್ವಾತ್'** ಎಂದು ಶಬ್ದಸ್ವರೂಪವಿರಬೇಕಾಗಿದ್ದಿತು. ಆದರೆ ಹಾಗೆ ಮಾಡಿದರೆ ಮಹಾ-ಅಗುಣತ್ವಾತ್ ಎಂದು ಯಾರಾದರೂ ಪದಚ್ಛೇದವನ್ನು ಅನುಸಂಧಾನಮಾಡುವ ಸಾಧ್ಯತೆ ಇದೆ. ಅದು ಪ್ರಮಾಣ ವಿರುದ್ಧವಾದುದು. ವೇದಾಂತಶಾಸ್ತ್ರದಲ್ಲಿ ಭಗವಂತನ ಮಹಿಮೆಯನ್ನು ತಿಳಿದುಕೊಳ್ಳುವುದೇ ಪರಮೋದ್ದೇಶ. ಆದ್ದರಿಂದ ಸ್ಮೃತಿಯು ವ್ಯಾಕರಣದ ನಿಯಮವನ್ನು ಬದಿಗೊತ್ತಿ ಪ್ರಮೇಯ ಶುದ್ಧಿಯ ದೃಷ್ಟಿಯಿಂದ 'ಮಹದ್ಗುಣತ್ವಾತ್' ಎಂಬ ಪ್ರಯೋಗಿಸಿದೆ ಎಂದು ರಾಜರು ವಿಶ್ಲೇಷಣೆಯನ್ನು ಮಾಡಿದ್ದಾರೆ.

'ಮಹದ್ಗುಣತ್ವಾತ್' ಎಂದರೆ ಕೇವಲ ಗುಣಗಳಿಂದ ಪೂರ್ಣತೆ ಎಂದು ಇಷ್ಟೇ ಅರ್ಥವಲ್ಲ. ಅಂತಹ ಅನಂತಗುಣಗಳಲ್ಲಿ ದೇಶದಿಂದ ವ್ಯಾಪ್ತತ್ವವೂ ಒಂದು ಗುಣ, ಕಾಲದಿಂದ ನಿತ್ಯತ್ವವೂ ಒಂದು ಗುಣ. ಗುಣಗಳ ಆನಂತ್ಯವನ್ನು ಹೇಳಿದರೆ ಅದರಲ್ಲಿ ವ್ಯಾಪ್ತತ್ವ ನಿತ್ಯತ್ವಗಳೂ ಸೇರಿಕೊಂಡಿರುವುದರಿಂದ ಭಾಗವತವು ಅದನ್ನು ಪ್ರತ್ಯೇಕವಾಗಿ ಹೇಳಲಿಲ್ಲ. ಅನಂತ ಎಂಬ ಒಂದೇ ಶಬ್ದದಿಂದಲೇ ಮೂರುವಿಧವಾದ ಆನಂತ್ಯವನ್ನು ಹೇಳುವುದರಿಂದ ಈ ಭಾಗವತವಾಕ್ಯದ ಸಮಾಖ್ಯೆಯಿಂದ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ತೈತ್ತಿರೀಯ ಶ್ರುತಿಗೆ ಗುಣತಃ ಆನಂತ್ಯವನ್ನೇ ಅರ್ಥವೆಂದು ಹೇಳಬೇಕು.

## 'ಮಯ್ಯನಂತಗುಣೇऽನಂತೇ'

'ಮಯ್ಯನಂತ ಗುಣೇऽನಂತೇ ಗುಣತೋऽನಂತ ವಿಗ್ರಹೇ' ಎಂಬುದು ಭಾಗವತ ಚತುರ್ಥಸ್ಕಂಧದಲ್ಲಿ ದೇವರವಾಕ್ಯ. ಇದರಲ್ಲಿ ಮೂರುಸಲ ಅನಂತಶಬ್ದಪ್ರಯೋಗವಿದೆ. ಅನಂತವಿಗ್ರಹೇ ಎಂದರೆ ಅನಂತರೂಪವುಳ್ಳ ನನ್ನಲ್ಲಿ ಎಂದು ಅರ್ಥ. ಇನ್ನು 'ಅನಂತಗುಣೇ', 'ಗುಣತಃ ಅನಂತೇ' ಎಂಬ ಎರಡು ಶಬ್ದಗಳಿದೆ. ಅದರಲ್ಲಿ ಅನಂತಗುಣ ಎಂಬ ಶಬ್ದವು ಬಹುವ್ರೀಹಿ ಸಮಾಸಾಶ್ರಯಣದಿಂದ ಅನಂತಗುಣವುಳ್ಳವನು ಎಂದರೆ ಅವನಲ್ಲಿರುವ ಗುಣಗಳ ಸಂಖ್ಯೆಗೆ ಮಿತಿಯಿಲ್ಲ ಎಂದು ಅರ್ಥವನ್ನು ಕೊಡುತ್ತದೆ. ಗುಣತಃ ಅನಂತ ಎಂಬ ಶಬ್ದವೂ ಅನಂತಸಂಖ್ಯೆಯ ಗುಣಗಳನ್ನು ಹೇಳುವುದಲ್ಲದೆ ಒಂದೊಂದು ಗುಣವೂ ಅಂತವಿಲ್ಲದ್ದು ಎಂದರೆ ಎಲ್ಲೆ ಇಲ್ಲದ್ದು ಎಂದು ಪ್ರತಿಯೊಂದು ಗುಣದ ಅಪರಿಚ್ಛಿನ್ನತ್ವವನ್ನು ಹೇಳುತ್ತದೆ. ಸಮುದ್ರವನ್ನು ರತ್ನತಃ ಅನಂತ ಎಂದು ಹೇಳುತ್ತಾರೆ. ಎಂದರೆ ಅನಂತಸಂಖ್ಯೆಯ ರತ್ನಗಳಿವೆ ಎಂದು ಹೇಳಿದಂತೆ ಗುಣತಃ ಅನಂತ ಎಂಬ ಶಬ್ದವೂ ಗುಣಗಳ ಸಂಖ್ಯಾರೂಪವಾದ ಪರಿಚ್ಛೇದದ ಅಭಾವವನ್ನು ಹೇಳುತ್ತದೆ. ಅಷ್ಟನ್ನೇ ಹೇಳಿದರೆ ಪಾನರುಕ್ತ್ಯವು ಬರುವುದರಿಂದ ಒಂದೊಂದು ಗುಣದ ಅಪರಿಮಿತಿಯನ್ನು ಹೇಳುತ್ತದೆ. ಸಂಯೋಗವಿಭಾಗ ಈ ಗುಣಗಳನ್ನು ಶಾಸ್ತ್ರದಲ್ಲಿ ಅವ್ಯಾಪ್ತವೃತ್ತಿ ಎಂದು ಕರೆಯುತ್ತಾರೆ. ಎಂದರೆ ಒಂದೇ ವಸ್ತುವಿನಲ್ಲಿ ಒಂದು ಕಡೆ ಇದೆ ಇನ್ನೊಂದು ಕಡೆಯಲ್ಲಿ ಇಲ್ಲ ಎಂದು ಅರ್ಥ. ಆದರೆ ಚೇತನಗುಣಗಳಾದ ಜ್ಞಾನಾನಂದಾದಿಗಳನ್ನು ಯಾರೂ ಅವ್ಯಾಪ್ತವೃತ್ತಿ ಎಂದು ಹೇಳುವುದಿಲ್ಲ. ಅವು ವ್ಯಾಪ್ತವ್ಯಕ್ತಿಗಳು. ಎಂದರೆ ಚೇತನಗಳು ಎಷ್ಟು ದೇಶವನ್ನು ಆಕ್ರಮಿಸುತ್ತದೆಯೋ ಅಷ್ಟುದೇಶವನ್ನು ಆಕ್ರಮಿಸಿ ಇರುವ ವಸ್ತುಗಳು. ಜ್ಞಾನಾನಂದಾದಿಗಳಿಗೆ ಆಶ್ರಯನಾದ ಪರಮಚೇತನನಾದ ಬ್ರಹ್ಮನು ಸರ್ವದೇಶಕಾಲಗಳಲ್ಲಿ ಇರುವುದರಿಂದ ಅಷ್ಟು ದೇಶಕಾಲಗಳನ್ನು ವ್ಯಾಪಿಸಿ ಇರುವ ಜ್ಞಾನಾನಂದಾದಿಗುಣಗಳೂ ದೇಶದಿಂದ ವ್ಯಾಪ್ತ ಮತ್ತು ಕಾಲದಿಂದ ನಿತ್ಯ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಗುಣತಃ ಅನಂತ ಎಂಬ ಶಬ್ದವು ಈ ಎರಡನೆಯ ವಿಧವಾದ ಆನಂತ್ಯವನ್ನು ಹೇಳುತ್ತದೆ. ಆದ್ದರಿಂದ ಈ ಭಾಗವತವಾಕ್ಯದ ಸಮಾಜ್ಞೆಯಿಂದಲೂ ತೈತ್ತಿರೀಯಶ್ರುತಿಯಲ್ಲಿರುವ ಅನಂತಶಬ್ದಕ್ಕೆ ಗುಣಗಳಿಂದಲೇ ಆನಂತ್ಯವನ್ನು ಹೇಳಬೇಕು. ಸರ್ವವಸ್ತುಪ್ರತಿಯೋಗಿಕಭೇದಶೂನ್ಯತ್ವವನ್ನು ಹೇಳಿ ಭೇದವನ್ನು ನಿರಾಕರಿಸುವುದು ಶ್ರುತಿಯ ಅಭಿಪ್ರಾಯವೂ ಅಲ್ಲ. ಸ್ಮೃತಿಯ ಅಭಿಪ್ರಾಯವೂ ಅಲ್ಲ ಎಂದು ಸಮರ್ಥಿಸುತ್ತಾರೆ.

## ಭೇದನಿರಾಕರಣೆಯ ಬ್ರಹ್ಮಸೂತ್ರಗಳಿಗೆ ವಿರುದ್ಧ :

ಎಲ್ಲಾ ವೇದಗಳ ಮತ್ತು ಉಪನಿಷತ್ತುಗಳ ಅರ್ಥವನ್ನು ನಿರ್ಣಯಿಸಲು ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು. ಸೂತ್ರ ಎಂದರೆ ಸೂಚಕ-ಸೂಚನೆ ಮಾಡುವುದು ಎಂದು ಅರ್ಥ. ಆದ್ದರಿಂದ ಸೂತ್ರದಿಂದ ಸೂಚಿತವಾಗುವ ಪ್ರಮೇಯಗಳು ಗ್ರಾಹ್ಯವಾಗುತ್ತವೆ. ಇನ್ನು ಸೂತ್ರದಲ್ಲಿ ಕಂಠತಃ ಮತ್ತೆ ಮತ್ತೆ ಹೇಳಿದ ಪ್ರಮೇಯಗಳಂತೂ ಎಲ್ಲಾ ವಿದ್ವಾಂಸರಿಗೆ ಶಿರೋರತ್ನಪ್ರಾಯವಾಗುತ್ತದೆ. ದಾರಿಯಲ್ಲಿ ಕತ್ತಲೆಯಲ್ಲಿ ಹೋಗುವವನಿಗೆ ದೀಪವು ಮಾರ್ಗದರ್ಶನವನ್ನು ಮಾಡುತ್ತದೆ. ಅದರಂತೆ ವೇದೋಪನಿಷತ್ತುಗಳ ವಿಚಾರಮಾಡಲು ಹೊರಟವರಿಗೆ ಬ್ರಹ್ಮಸೂತ್ರಗಳೇ ದಾರಿದೀಪಗಳು. ಆದ್ದರಿಂದ ಬ್ರಹ್ಮಸೂತ್ರಗಳನ್ನು ತಿರಸ್ಕರಿಸಿ ಶ್ರುತಿಗೆ ಅರ್ಥವನ್ನು ಹೇಳುವವರು ಶ್ರುತಿಮಾತೆಯ ಕಂಠದಿಂದ ಮಂಗಳಸೂತ್ರವನ್ನೇ ಕಿತ್ತಂತೆ. ಆನಂದಮಯಾಧಿಕರಣದಲ್ಲಿ ಸೂತ್ರವು ಆನಂದಮಯನು ಬ್ರಹ್ಮನೆಂದು ಹೇಳುತ್ತದೆ. ಮಾಯಾವಾದಿಗಳು ಮಾತ್ರ ಆನಂದಮಯನು ಬ್ರಹ್ಮನಲ್ಲ. ಆನಂದಮಯನ ಪುಚ್ಛದಲ್ಲಿಯೇ ಬ್ರಹ್ಮಶಬ್ದವು ಶ್ರುತವಾಗಿರುವುದರಿಂದ ಆನಂದಮಯನ ಪುಚ್ಛನು ಮಾತ್ರ ಬ್ರಹ್ಮ. ಆನಂದಮಯ ಎಂಬುವುದು ಒಂದು ಜಡವಾದ ಕೋಶವೆಂದು ಹೇಳುತ್ತಾರೆ. ಅದಕ್ಕಾಗಿ 'ಶ್ರುತಿಸೂತ್ರವಿರೋಧೇತು ಗುಣೇತ್ವನ್ಯಾಯಕಲ್ಪನಾ' ಎಂಬ ಒಂದು ನ್ಯಾಯವನ್ನು ಕಲ್ಪನೆ ಮಾಡುತ್ತಾರೆ. ಎಂದರೆ ಶ್ರುತಿಸೂತ್ರಗಳಿಗೆ ವಿರೋಧವು ಬಂದರೆ ಅಪ್ರಧಾನವಾದ ಬ್ರಹ್ಮಸೂತ್ರಕ್ಕೇ ಬೇರೆ ಅರ್ಥವನ್ನು ಕಲ್ಪನೆಮಾಡಬೇಕು ಎಂದು ಅರ್ಥ. ಹೀಗೆ ಹೇಳುವವರು ಶ್ರುತಿಸೂತ್ರಗಳಿಗೆ ವಿರೋಧವು ಬರುವುದೆಂದೂ ಬ್ರಹ್ಮನಲ್ಲಿಯೇ ಪುನಃ ಪುನಃ ಜಗತ್ಕಾರಣತ್ವ ಶ್ರುತವಾದರೂ ಅದನ್ನು ತಿರಸ್ಕರಿಸಿ ಜಗತ್ಕಾರಣತ್ವವು ಬ್ರಹ್ಮನ ತಟಸ್ಥಲಕ್ಷನವೆಂದು ಹೇಳುವ ನಿನಗೆ ಶ್ರುತಿಯಲ್ಲಿ ಎಷ್ಟು ಗೌರವವಿದೆಯೆಂದು ಎಲ್ಲಾ ವಿದ್ವಾಂಸರೂ ತಿಳಿದಿದ್ದಾರೆ.

ಅಂತಹ ವಿರೋಧವು ಬಂದಾಗ ಸೂತ್ರಗಳನ್ನು ಬಿಟ್ಟು ಶ್ರುತಿಗೇ ನೇರವಾದ ಅರ್ಥವನ್ನು ಮಾಡಬೇಕೆಂದು ಅಂಗೀಕರಿಸಿದ್ದಾರೆ ಎಂದಾಯಿತು. ಹೀಗೆ ಬ್ರಹ್ಮಸೂತ್ರಗಳನ್ನೇ ತಿರಸ್ಕರಿಸುವವರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸುವ ಅಧಿಕಾರವನ್ನೇ ಹೊಂದಿರುವುದಿಲ್ಲ. ಅವರು ರಚಿಸಿದ ಭಾಷ್ಯವು ಭಾಷ್ಯಲಕ್ಷಣರಹಿತವಾಗಿ ದುರ್ಭಾಷ್ಯವೆನಿಸುತ್ತದೆ. ಅದು ಗ್ರಾಹ್ಯವಲ್ಲ. ಪ್ರಧಾನ ಅಪ್ರಧಾನಗಳಿಗೆ ವಿರೋಧಬಂದಾಗ ಅಪ್ರಧಾನವನ್ನು ತಿರಸ್ಕರಿಸಿ ಪ್ರಧಾನವನ್ನು

ಆದರಿಸಬೇಕು ಎಂಬ ನ್ಯಾಯವನ್ನು ಅವರೇ ಜನ್ಮಾಧಿಕರಣದಲ್ಲಿ ತ್ಯಜಿಸಿದ್ದಾರೆ. ಜನ್ಮಾದಿಸೂತ್ರವೂ **'ಯತೋವಾ ಇಮಾನಿ ಭೂತಾನಿ ಜಾಯಂತೇ'** ಎಂಬ ಶ್ರುತಿಯೂ ಸಹ ಬ್ರಹ್ಮನಿಗೆ ಜಗತ್‌ಸೃಷ್ಟಿಯಲ್ಲಿ ಕರ್ತೃತ್ವವನ್ನು ಹೇಳುತ್ತದೆ. ಆದರೆ ಅದ್ವೈತಿಗಳು 'ಜನಿಕರ್ತುಃ ಪ್ರಕೃತಿಃ' ಎಂಬ ವ್ಯಾಕರಣಸೂತ್ರವನ್ನು ಆದರಿಸಿ ಇಲ್ಲಿ ಜನಿಧಾತುವಿನ ಪ್ರಯೋಗವಿರುವುದರಿಂದ ಬ್ರಹ್ಮನಿಗೆ ಉಪಾದಾನತ್ವವೇ ಇದೆ ಎಂದು ಹೇಳುತ್ತಾರೆ. ಹೀಗೆ ಪ್ರಧಾನವಾದ ಬ್ರಹ್ಮಸೂತ್ರಕ್ಕೂ ಅಪ್ರಧಾನವಾದ ಪಾಣಿನಿಸೂತ್ರಕ್ಕೂ ವಿರೋಧಬಂದರೆ ಆನಂದಮಯಾಧಿಕರಣದಲ್ಲಿ ತಾವು ಅನುಸರಿಸಿದ ನ್ಯಾಯವನ್ನು ಬಿಟ್ಟು ಇಲ್ಲಿ ಪಾಣಿನಿಸೂತ್ರಕ್ಕೇ ಪ್ರಾಧಾನ್ಯವನ್ನು ಕೊಟ್ಟು ಬ್ರಹ್ಮನಿಗೆ ಉಪಾದಾನತ್ವವೇ ಇದೆ ಎಂದು ಹೇಳುತ್ತಾರೆ. ರಾಜರು ಈ ವಿಷಯದಲ್ಲಿ ಹಾಸ್ಯವನ್ನು ಮಾಡುತ್ತಾ ಜಾರನ ಕಾಲಿಗೆ ಬೀಳುವುದಕ್ಕಿಂತ ಪತಿಯಪಾದಗಳಿಗೆ ನಮಸ್ಕರಿಸುವುದು ಶ್ಲಾಘ್ಯವಾದದ್ದು ತಿನ್ನುತ್ತಾರೆ. ಅಷ್ಟೇ ಅಲ್ಲದೆ ವೈಯಾಕರಣರಿಗೆ ಬೇಡದಿದ್ದ ಒಂದು ಸೂತ್ರವನ್ನು ಸ್ವೀಕರಿಸಿ ವ್ಯಾಸರ ಸೂತ್ರವನ್ನು ತಿರಸ್ಕರಿಸುವುದು ಭಾಷ್ಯಾಕಾರರ ಲಕ್ಷಣವಲ್ಲ. ಶ್ರುತಿಯಲ್ಲಿಯೇ ಆದರವಿಲ್ಲದವರು ಸೂತ್ರವನ್ನು ಏಕೆ ತಿರಸ್ಕರಿಸುತ್ತೀರಿ ಎಂದು ಪ್ರಶ್ನೆಮಾಡುತ್ತಾರೆ.

**ಶ್ರುತೌ ಮಹಾನಾದರಸ್ತೇ ಸರ್ವೇ ಜಾನಂತಿ ಪಂಡಿತಾಃ ।**
**ಆಮ್ರೇಡಿತ ಬ್ರಹ್ಮಶ್ರುತ್ಯಾ ತಟಸ್ಥಂ ಯಸ್ಯ ಲಕ್ಷಣಮ್ ॥**

ಪ್ರಕೃತ ಜೀವೇಶ್ವರಭೇದದ ವಿಷಯದಲ್ಲಿಯೂ ಬ್ರಹ್ಮಸೂತ್ರಗಳನ್ನು ತಿರಸ್ಕರಿಸುವುದೇ ನಿನ್ನ ಸ್ವಭಾವವಾಗಿದೆ. ಸೂತ್ರಕಾರರಾದರೋ ಜೀವಬ್ರಹ್ಮಭೇದವನ್ನು ಸೂತ್ರಗಳಲ್ಲಿ ಸಾರಿಸಾರಿ ಹೇಳಿದ್ದಾರೆ. 'ಸ್ಥಿತ್ಯದನಾಭ್ಯಾಂ ಚ' ಎಂಬ ಸೂತ್ರದಲ್ಲಿ ಕರ್ಮಫಲಭೋಕ್ತೃತ್ವ ಮತ್ತು ಅದಿಲ್ಲದಿದ್ದರೂ ಪೂರ್ಣತ್ವರೂಪವಾದ ಯುಕ್ತಿಪುರಸ್ಸರವಾಗಿ ಭೇದವನ್ನು ಹೇಳಿದ್ದಾರೆ. **'ಶಾರೀರಶ್ಚೋಭಯೇಪಿ ಭೇದೇನೈನಮಧೀಯತೇ'** ಎಂಬ ಸೂತ್ರದಲ್ಲಿ ಕಾಣ್ವಶಾಖೆಯಲ್ಲಿಯೂ ಮತ್ತು ಮಾಧ್ಯಂದಿನಶಾಖೆಯಲ್ಲಿಯೂ **'ಯ ಆತ್ಮನಿ ತಿಷ್ಠನ್ ಯ ಆತ್ಮನೋ ಅಂತರಃ', 'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರಃ'** ಎಂದು ಆತ್ಮ ಮತ್ತು ವಿಜ್ಞಾನಶಬ್ದದಿಂದ ಹೇಳಲ್ಪಟ್ಟ ಜೀವನ ಭೇದವನ್ನೇ ಬ್ರಹ್ಮನಿಗೆ ಹೇಳಿದ್ದಾರೆ. 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಸೂತ್ರದಲ್ಲಿ **'ಅಂತಶ್ಚಂದ್ರಮಸಿ ಮನಸಾಚರಂತಂ, ಇಂದ್ರಸ್ಯಾತ್ಮಾ ನಿಹಿತಃ ಪಂಚಹೋತಾ, ವಾಯೋರಾತ್ಮಾನಂ ಕವಯೋ ನಿಚಿಕ್ಯುಃ, ಸಹೈವಸಂತಂ ನ ವಿಜಾನಂತಿ ದೇವಾಃ'** ಎಂಬ ಮಂತ್ರದಲ್ಲಿ

ಇಂದ್ರಚಂದ್ರವಾಯು ಆದಿತ್ಯ ಮೊದಲಾದ ದೇವತೆಗಳಿಂದಲೂ ಭೇದವನ್ನು ಹೇಳಿದ್ದಾರೆ. 'ಭೇದವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿಯೇ 'ಸಯಶ್ಚಾಯಂ ಪುರುಷೇ', 'ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽ- ಭಯಂ ಪ್ರತಿಷ್ಠಾಂ ವಿಂದತೇ' ಎಂದು ಜೀವಬ್ರಹ್ಮರ ಭೇದವನ್ನೇ ಹೇಳಿದ್ದಾರೆ. 'ಭೇದವ್ಯಪದೇಶಾಚ್ಚ' ಮತ್ತು 'ಭೇದವ್ಯಪದೇಶಾಚ್ಚಾನ್ಯಃ' ಎಂಬ ಸೂತ್ರಗಳಲ್ಲಿ ಭೇದೋಕ್ತೇಶ್ಚ, ಭೇದೋಕ್ತೇಶ್ಚಾನ್ಯಃ' ಎಂದು ಲಘುವಾದ ಸೂತ್ರವನ್ನು ರಚಿಸಬಹುದಾಗಿದ್ದಿತು. ಆದರೆ ಉಕ್ತಿ ಎಂಬ ಪದವನ್ನು ಬಿಟ್ಟು ವ್ಯಪದೇಶ ಎಂಬ ಪದವನ್ನು ಉಪಯೋಗಿಸಿರುವ ವೇದವ್ಯಾಸರಿಗೆ ಅಭಿಪ್ರಾಯವಿಶೇಷವಿದೆ. ಅಪದೇಶ ಎಂದರೆ ಉಪದೇಶ ಎಂದು ಅರ್ಥ. ಉಪನಿಷತ್ತುಗಳಲ್ಲಿಯೂ ಭಾಗವತದಲ್ಲಿಯೂ ಗೀತೆಯಲ್ಲಿಯೂ 'ಉಪ' ಎಂಬ ಅರ್ಥದಲ್ಲಿ 'ಅಪ' ಎಂಬ ಉಪಸರ್ಗವನ್ನು ಬಳಸಿರುವುದು ಬಹಳವಾಗಿ ಕಂಡುಬರುತ್ತದೆ. ವಿ ಎಂದರೆ ವಿಶಿಷ್ಟ ಎಂದು ಅರ್ಥ. ಆದ್ದರಿಂದ ವ್ಯಪದೇಶ ಎಂದರೆ ವಿಶಿಷ್ಟವಾದ ಉಪದೇಶ ಎಂದು ಅರ್ಥವಾಯಿತು. ವಿಶಿಷ್ಟವಾದ ಉಪದೇಶವಾಗಬೇಕಾದರೆ ಉಪದೇಶವಿಷಯವು ಪಾರಮಾರ್ಥಿಕವಾಗಿರಬೇಕು. ಆದ್ದರಿಂದ ಈ ಉಪದೇಶಗಳ ವಿಷಯವಾದ ಭೇದವು ಪಾರಮಾರ್ಥಿಕ, ಹೊರತು ವ್ಯಾವಹಾರಿಕವಲ್ಲ ಎಂದು ತಿಳಿಸುವುದು ವೇದವ್ಯಾಸರ ಉದ್ದೇಶ. ಆದ್ದರಿಂದ ಉಕ್ತಿ ಎನ್ನುವ ಶಬ್ದವನ್ನು ಬಿಟ್ಟು ವ್ಯಪದೇಶ ಎಂಬ ಶಬ್ದವನ್ನು ಬಳಸಿದ್ದಾರೆ.

ಅದರಂತೆ **'ವಿಶೇಷಣ ಭೇದ ವ್ಯಪದೇಶಾಭ್ಯಾಂ ಚ ನೇತಕಾ'** ಎಂಬ ಸೂತ್ರದಲ್ಲಿಯೂ **'ನ ಪ್ರತೀಕೇ ನ ಹಿಸಃ'** ಎಂಬ ಸೂತ್ರದಲ್ಲಿಯೂ ಜೀವರಿಂದ ಭೇದವನ್ನು ಹೇಳಿದ್ದಾರೆ ನ ಪ್ರತೀಕ ಸೂತ್ರದಲ್ಲಿ ನಾಮಾದಿಪ್ರಾಣಪರ್ಯಂತವಾದ ದೇವತೆಗಳೇ ಪ್ರತೀಕಗಳು. ಆ ದೇವತೆಗಳಿಂದಲೂ ಭೇದವನ್ನು ಹೇಳಿದ್ದಾರೆ –

ದೇವತೆಗಳಿಂದಲೇ ಐಕ್ಯವು ಕೂಡದಿರುವಾಗ ಇನ್ನು ಮನುಷ್ಯಜೀವರಿಗೆ ಬ್ರಹ್ಮನಿಂದ ಐಕ್ಯವು ಎಲ್ಲಿಂದ ಬರಬೇಕು? 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಲ್ಲಿ ಮುಕ್ತರಿಗೂ ದೇವರ ಪ್ರಾಪ್ತಿ ಇದೆಯೇ ಹೊರತು ಅಭೇದವಿಲ್ಲವೆಂದು ಹೇಳಿದ್ದಾರೆ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರದಲ್ಲಿ ಸುಷುಪ್ತಿ ಮತ್ತು ಉತ್ಕ್ರಾಂತಿಗಳಲ್ಲಿ ಜೀವನು ಪರಮಾತ್ಮನಿಂದ ಆಲಿಂಗಿತನಾಗಿರುತ್ತಾನೆ, ಆರೂಢನಾಗಿರುತ್ತಾನೆ ಎಂದು ಹೇಳಿ ಜೀವಬ್ರಹ್ಮರಿಗೆ ಭೇದವನ್ನೇ ಹೇಳಿದ್ದಾರೆ. ಸುಷುಪ್ತಿಯು ಮೋಕ್ಷಕ್ಕೆ ಸದೃಶವಾದ ಸ್ಥಿತಿಯಾದ್ದರಿಂದ ಇದರಿಂದ

ಮೋಕ್ಷದಲ್ಲಿಯೂ ಜೀವೇಶ್ವರಭೇದವು ಸಿದ್ಧವಾಗುತ್ತದೆ. 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಂತೂ ಕೌಶಿಕಶ್ರುತಿಯಲ್ಲಿರುವ ಉಪಪತ್ತಿಗಳನ್ನು ತೋರಿಸಿ ಜೀವೇಶ್ವರಭೇದವನ್ನು ಸಮರ್ಥಿಸಿದ್ದಾರೆ. ಫಲಾಧ್ಯಾಯದಲ್ಲಿ 'ಸಮ್ಪದ್ಯಾವಿಹಾಯ ಸ್ವೇನ ಶಬ್ದಾತ್' ಎಂಬ ಸೂತ್ರದಲ್ಲಿ ಮೋಕ್ಷದಲ್ಲಿ ಜೀವನಿಗೆ ಬ್ರಹ್ಮಸಂಪತ್ತಿಯೇ ಉಂಟಾಗುತ್ತದೆ. ಜೀವತ್ವವು ಹೋಗುವುದಿಲ್ಲ ಎಂದು ಹೇಳಿ ಭೇದವನ್ನು ಸಮರ್ಥಿಸಿದ್ದಾರೆ. 'ಜಗದ್ವ್ಯಾಪಾರವರ್ಜಂ' ಎಂಬ ಸೂತ್ರದಲ್ಲಿ ಮುಕ್ತನಿಗೆ ಜಗತ್ಕರ್ತೃವು ಇಲ್ಲವೆಂದು ಹೇಳಿ ಮುಕ್ತಜೀವನಿಗೂ ಪರಮಾತ್ಮನಿಗೂ ಭೇದವನ್ನೇ ಸಮರ್ಥಿಸಿದ್ದಾರೆ. ಹೀಗೆ ಪ್ರತಿಸೂತ್ರದಲ್ಲಿಯೂ ಕಂಠತಃ ಅಥವಾ ಅರ್ಥತಃ ಸೂತ್ರಕಾರರು ಭೇದವನ್ನೇ ಘೋಷಿಸಿರುವಾಗ ಜೀವೇಶ್ವರಭೇದವು ಅಪ್ರಾಮಾಣಿಕವಾದುದು.

'ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್' ಎಂಬ ಸೂತ್ರದಲ್ಲಿ ಇಂದ್ರನು ವಿಶ್ವಾಮಿತ್ರನಿಗೆ ನಾನೇ ಪ್ರಾಣನಾಮಕನಾದ ನಾರಾಯಣ ಎಂದು ಹೇಳಿದರೂ, ಇಂದ್ರನು ನಾರಾಯಣನಲ್ಲ ಇಂದ್ರನಲ್ಲಿ ಸರ್ವೋತ್ತಮನಾದ ನಾರಾಯಣನ ಸನ್ನಿಧಾನವಿರುವುದರಿಂದ ಇಂದ್ರನು ತನ್ನನ್ನು ನಾರಾಯಣ ಎಂದು ಹೇಳಿದ್ದಾನೆ. ಕಾದಕಬ್ಬಿಣವನ್ನು ಬೆಂಕಿ ಎಂದು ಹೇಳಿದಂತೆ ಎಂದು ಅರ್ಥಾಂತರವನ್ನು ಹೇಳಿದ್ದಾರೆ. ಇಂದ್ರನಂತಹ ಶ್ರೇಷ್ಠದೇವತೆಯೂ ನಾರಾಯಣನಲ್ಲವೆಂದು ಹೇಳಿದ ಮೇಲೆ ಉಳಿದ ಜೀವರಿಗೆ ಬ್ರಹ್ಮನಿಂದ ಐಕ್ಯವು ಎಂದೂ ಸೂತ್ರಕಾರರಿಗೆ ಸಮ್ಮತವಲ್ಲವೆಂದು ತಿಳಿಯಬೇಕು.

ಮತ್ತು ಶಾಂಕರಭಾಷ್ಯದಲ್ಲಿ 'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್' ಎಂಬ ಸೂತ್ರದಲ್ಲಿ **'ಪತೀವ್ಯಯೇ ಸರ್ವ ಏಕೀ ಭವಂತಿ'** ಎಂದು ಹೇಳಿರುವುದರಿಂದ ಮೋಕ್ಷದಲ್ಲಿ ಭೋಕ್ತೃವಿಗೆ ಭೋಜ್ಯತ್ವಾಪತ್ತಿ ಮತ್ತು ಭೋಜ್ಯಕ್ಕೆ ಭೋಕ್ತೃತ್ವಾಪತ್ತಿ ಎಂದು ಪೂರ್ವಪಕ್ಷವನ್ನು ಮಾಡಿ, ಎಂದರೆ ಸರ್ವಾಭೇದವನ್ನು ಪೂರ್ವಪಕ್ಷಮಾಡಿ 'ಸ್ಯಾಲ್ಲೋಕವತ್' ಎಂದು ಆ ಶಂಕೆಯನ್ನು ಅಂಗೀಕರಿಸಿ ಸಮುದ್ರಕ್ಕೂ ಫೇನತರಂಗಗಳಿಗೂ ಇರುವಂತೆ ಭೇದವು ಉಪಪನ್ನವಾಗುತ್ತದೆ ಎಂದು ಉಪಪಾದನೆ ಮಾಡಿದ್ದಾರೆ. ಅದರ ಮುಂದಿನ **'ತದನನ್ಯತ್ವಮಾರಂಭಣಶಬ್ದಾದಿಭ್ಯಃ'** ಎಂಬ ಸೂತ್ರದಲ್ಲಿ ಜೀವರಿಗೆ ಬ್ರಹ್ಮಾಭೇದವನ್ನೇ ಸಿದ್ಧಾಂತಮಾಡುತ್ತಾರೆ. ಪೂರ್ವಾಧಿಕರಣದ ಪೂರ್ವಪಕ್ಷವೇ ಉತ್ತರಾಧಿಕರಣದ ಸಿದ್ಧಾಂತವಾಗುವುದಾದರೆ ಅಂತಹ ಭಾಷ್ಯವು

ದುರ್ಭಾಷ್ಯಲಕ್ಷಣಯುಕ್ತವಾದುದರಿಂದ ಅದು ಎಂದೂ ಗ್ರಾಹ್ಯವಲ್ಲ. ಇಂತಹ ಸಿದ್ಧಾಂತವನ್ನು ಸ್ವೀಕರಿಸುವ ಯಾವ ತಟಸ್ಥಜನರೂ ನಮ್ಮ ಪಕ್ಷದಲ್ಲಿಲ್ಲದಿರುವುದರಿಂದ ಬ್ರಹ್ಮನ ಲಕ್ಷಣವನ್ನೇ ತಟಸ್ಥವನ್ನಾಗಿ ಮಾಡುವುದು ಬೆಳ್ಳಿಯದೆಂದು ತಿಳಿದು ಜನ್ಮಾದಿಕಾರಣತ್ವವನ್ನು ಬ್ರಹ್ಮನ ತಟಸ್ಥಲಕ್ಷಣವೆಂದು ಹೇಳಿದ್ದಾರೆ ಎಂದು ಹಾಸ್ಯಮಾಡಿದ್ದಾರೆ.

ಆದ್ದರಿಂದ ಜೀವಬ್ರಹ್ಮಾಭೇದವು ಸೂತ್ರಕಾರರಾದ ವೇದವ್ಯಾಸರಿಗೆ ಸರ್ವಥಾ ಅಸಮ್ಮತವಾದುದು ಎಂದು ಇನ್ನೂ ಅನೇಕ ಯುಕ್ತಿಗಳನ್ನು ಹೇಳಿ ಸಮರ್ಥನೆಮಾಡಿದ್ದಾರೆ.

## ಭೇದನಿಷೇಧ ವಚನಗಳಿಗೆ ಗತಿಕಲ್ಪನೆ :

ಜೀವೇಶ್ವರಭೇದವು ಶ್ರುತಿಸೂತ್ರಗಳಿಗೆ ಅಸಮ್ಮತವಾದುದರಿಂದ ಸ್ಮೃತಿಗಳಲ್ಲಿ ಎಲ್ಲಾದರೂ ಭೇದವಿಲ್ಲ ಎಂಬ ವಚನಗಳು ಕಂಡುಬಂದರೆ ಅದಕ್ಕೆ ಅನ್ಯಾರ್ಥವನ್ನು ಮಾಡಬೇಕು. ಅದಕ್ಕೆ ಏನೂ ಪ್ರಯಾಸವಿಲ್ಲ. ಭೇದಶಬ್ದಕ್ಕೆ ಅನೇಕಾರ್ಥಗಳಿವೆ. ಪರಸ್ಪರಭೇದ, ಸ್ಥಾನಭೇದ, ವಿರೋಧ, ಬುದ್ಧಿಭೇದ, ನಾಶ, ಅನ್ಯೋನ್ಯಮಿಶ್ರಣ, ಅಸಂಯುಕ್ತವಾಗಿ ಇರುವುದು, ಭ್ರಮ ಇವೆಲ್ಲವೂ ಭೇದಶಬ್ದವಾಚ್ಯಗಳಾಗಿವೆ. ಭಾಗವತದಲ್ಲಿಯೇ ಇವೆಲ್ಲದಕ್ಕೂ ಉದಾಹರಣೆಗಳು ದೊರೆಯುತ್ತವೆ. ಘಟಪಟಗಳಿಗೆ ಪರಸ್ಪರ ಭೇದವಿರುವುದು ಸ್ಪಷ್ಟ. ಭಿನ್ನಾಸೇನಾ ಎಂಬಲ್ಲಿ ಸೈನ್ಯವು ಚದುರಿತು ಎಂದರೆ ಒಂದೇ ಸ್ಥಾನದಲ್ಲಿದ್ದ ಸೈನ್ಯಕ್ಕೆ ಸ್ಥಾನಭೇದ ಉಂಟಾಯಿತು ಎಂದು ಅರ್ಥ. ಮಿತ್ರಭೇದ ಎಂಬಲ್ಲಿ ಮಿತ್ರರಿಗೆ ಪರಸ್ಪರ ವಿರೋಧ ಎಂದು ಅರ್ಥ. ಸ್ನೇಹಿತರಾದವರು ಬೇರೆ ಬೇರೆಯಾದರು ಭಿನ್ನರಾದರು ಎಂಬ ಶಬ್ದವನ್ನು ಬುದ್ಧಿಭೇದ ಎಂಬ ಅರ್ಥದಲ್ಲಿ ಬಳಸುತ್ತೇವೆ. ಭಿನ್ನೋ ಘಟಃ ಎಂದರೆ ಘಟವು ನಾಶವಾಯಿತು ಎಂದು ಅರ್ಥ. ಅನ್ಯೋನ್ಯಮಿಶ್ರಣ ಎಂಬ ಅರ್ಥದಲ್ಲಿ ಮಾಘಕಾವ್ಯದ 'ಏಕತ್ರಸ್ಫಟಿಕತಟಾಂಶುಭಿನ್ನನೀರಾ ನೀಲಾಶ್ಮದ್ಯುತಿ-ಭಿದುರಾಂಭಸೋಽಪರತ್ರ' ಎಂಬ ಶ್ಲೋಕವು ಪ್ರಸಿದ್ಧವಾಗಿದೆ. 'ಭಿನ್ನಸಂಯೋಜಯಾಮಾಸ' ಎಂಬ ತೃತೀಯ ಸ್ಕಂಧದ ಶ್ಲೋಕದಲ್ಲಿ ಪರಸ್ಪರವಾಗಿ ಅಸಂಯುಕ್ತವಾಗಿದ್ದ ತತ್ತ್ವಗಳನ್ನು ಹರಿಯು ಸೇರಿಸಿದನು ಎಂದು ಅಸಂಯುಕ್ತಸ್ಥಿತಿಯನ್ನು ಭೇದವೆಂದು ಕರೆದಿದ್ದಾರೆ. ಭ್ರಮವೂ ಸಹ ಅರ್ಥವು ಇರುವ ರೀತಿಯನ್ನು ಬಿಟ್ಟು ಇನ್ನೊಂದು ರೀತಿಯನ್ನು ತೋರಿಸುವುದರಿಂದ

ಭೇದವೆಂದು ಕರೆಯಲ್ಪಡುತ್ತದೆ. ಸಾಮ, ಭೇದ, ದಾನ, ದಂಡಗಳಲ್ಲಿ ಒಂದಾದ ಭೇದ ಎಂಬ ತಂತ್ರವೂ ಭೇದಶಬ್ದದಿಂದ ಕರೆಯಲ್ಪಡುತ್ತದೆ. ಹೀಗೆ ಭೇದಶಬ್ದಕ್ಕೆ ಅನೇಕಾರ್ಥಗಳಿರುವುದರಿಂದ ಶಾಸ್ತ್ರಸಮ್ಮತವಾದ ಜೀವೇಶ್ವರರ ಪರಸ್ಪರಭೇದವನ್ನು ಅಪಲಾಪಮಾಡದೆ ಬೇರೆ ಅರ್ಥವನ್ನು ನಿಷೇಧಿಸಬೇಕು.

## ತ್ರಯಾನಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಮ್ :

**'ತ್ರಯಾಣಾಮೇಕಭಾವಾನಂ ಯೋ ನ ಪಶ್ಯತಿ ವೈ ಭಿದಾಮ್ । ಸರ್ವಭೂತಾತ್ಮನಾಂ ಬ್ರಹ್ಮನ್ ಸ ಶಾಂತಿಮಧಿಗಚ್ಛತಿ'** ಇದು ದಕ್ಷಯಜ್ಞಪ್ರಸಂಗದಲ್ಲಿ ಹರಿಯು ದಕ್ಷನನ್ನು ಕುರಿತು ಹೇಳುವ ಮಾತು. ಇಲ್ಲಿ ಭಿದಾಶಬ್ದಕ್ಕೆ ಏನು ಅರ್ಥವನ್ನು ಮಾಡಬೇಕೆಂದು ಭಾಗವತಸ್ಪಷ್ಟ ವಚನಗಳಿಂದಲೇ ನಿರ್ಣಯಿಸಬೇಕು. ದಶಮಸ್ಕಂಧದಲ್ಲಿ '**ವಿತರ್ಕಃ ಸಮಭೂತ್ ತೇಷಾಂ ತ್ರಿಷ್ವಧೀಶೇಶು ಕೋ ಮಹಾನ್ । ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ। ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಂ ॥**' ಎಂದು ಸರಸ್ವತೀ ನದೀತೀರದ ಋಷಿಗಳು ಮೂರು ಅಧೀಶ್ವರರಾದ ಬ್ರಹ್ಮವಿಷ್ಣುಮಹೇಶ್ವರರಲ್ಲಿ ಯಾರು ಅಧಿಕರು ಎಂಬ ಸಂಶಯವನ್ನು ತಾಳಿ ಭೃಗುಗಳನ್ನು ಪರೀಕ್ಷೆಗಾಗಿ ಕಳುಹಿಸಿ ಪರೀಕ್ಷಿಸಿ ಹಿಂದಿರುಗಿದ ಭೃಗುಗಳ ಮಾತಿನಂತೆ ಸರ್ವಭಯ ಪರಿಹಾರಕನಾದ ಅತ್ಯುಚ್ಚಸುಖಪ್ರದನಾದ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದರು ಎಂಬ ಆಖ್ಯಾನವಿದೆ. ಇಂತಹ ಹತ್ತಾರು ಪ್ರಸಂಗಗಳನ್ನು ಭಾಗವತದಿಂದಲೇ ಉದಾಹರಿಸಬಹುದು. ಆ ಎಲ್ಲಾ ಪ್ರಸಂಗಗಳಿಂದ ಮತ್ತು ಇಲ್ಲಿಯೇ ಇರುವ ಭೃಗುವಚನ ಮತ್ತು ರುದ್ರವಚನಗಳಿಂದ ವಿಷ್ಣುವೇ ಸರ್ವೋತ್ತಮನೆಂದು ತಿಳಿಯುತ್ತದೆ. ಆದ್ದರಿಂದ ಇಲ್ಲಿರುವ ಭಿದಾಶಬ್ದಕ್ಕೆ ವಿರೋಧ ಎಂದು ಅರ್ಥಮಾಡಿ ಭೇದವಿಲ್ಲ ಎಂದರೆ ವಿರೋಧವಿಲ್ಲ ಎಂಬ ಅರ್ಥವನ್ನು ಹೇಳಬೇಕು. ಅದಕ್ಕೆ ಪೋಷಕವಾಗಿ ಏಕಭಾವಾನಾಂ ಎಂಬ ಹೇತುಗರ್ಭವಿಶೇಷಣವನ್ನು ಕೊಟ್ಟಿದ್ದಾರೆ. ಭಾವ ಎಂದರೆ ಅಭಿಪ್ರಾಯ ಎಂಬ ಅರ್ಥವು ಶಾಸ್ತ್ರದ ಪರಿಚಯವಿದ್ದವರಿಗೆಲ್ಲಾ ಇರುತ್ತದೆ. ಆದ್ದರಿಂದ ಭೇದಾಭಾವಕ್ಕೆ ಪ್ರಯೋಜಕವಾದುದು ಒಂದೇ ಅಭಿಪ್ರಾಯ. ಅಭಿಪ್ರಾಯಭೇದ ಇಲ್ಲದಿರುವುದರಿಂದ ವಿರೋಧವಿಲ್ಲ ಎಂದೇ ಅರ್ಥವೇ ಹೊರತು ಪರಸ್ಪರ ಭೇದವಿಲ್ಲ ಎಂಬ ಅರ್ಥವಲ್ಲ. ಏಕೆಂದರೆ '**ತಮುಪಾಗತ ಮಾಲಕ್ಷ್ಯ ಸರ್ವೇ ಸುರಗಣಾದಯಃ । ಪ್ರನೇಮುಃ ಸಹನೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ।**

ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ । ಮೂರ್ಧ್ನಿ ಉದ್ಧೃತಾಂಜಲಿಪುಟಾ ಉಪತಸ್ಥುರಧೋಕ್ಷಜಮ್ । ಅಪ್ಯರ್ವಾಗ್‌ವೃತ್ತಯೋ ಯಸ್ಯಮಹಿತ್ವೇಸ್ವಭುವಾದಯಃ । ಯಥಾಮತಿ ಗೃಣಂತಿಸ್ಮಕೃತಾನುಗ್ರಹವಿಗ್ರಹಂ ।' ಹರಿಯು ಪ್ರಾಪ್ತವಾದುದನ್ನು ನೋಡಿ ಬ್ರಹ್ಮರುದ್ರೇಂದ್ರರೇ ಮೊದಲಾದ ಎಲ್ಲಾ ದೇವಗಳ ಗಣಗಳೂ ತಕ್ಷಣದಲ್ಲಿ ಎದ್ದು ನಮಸ್ಕರಿಸಿದರು. ಹರಿಯ ಕಾಂತಿಯ ಎದುರಿನಲ್ಲಿ ಅವರ ಕಾಂತಿಯು ಕುಂದಿತು. ಭಯದಿಂದ ಅವರ ನಾಲಿಗೆಗಳು ಉಡುಗಿದುವು. ಅವರು ತಮ್ಮ ತಲೆಗಳ ಮೇಲೆ ಕೈಗಳನ್ನು ಜೋಡಿ ಅಧೋಕ್ಷಜನನ್ನು ಸ್ತೋತ್ರಮಾಡಿದರು. ಹರಿಗಿಂತಲೂ ಯಾವಾಗಲೂ ಮಹಿಮೆಯಲ್ಲಿ ಅಧಮರೇ ಆದರೂ ತಮಗೆ ಸಾಧ್ಯವಿದ್ದಷ್ಟು ಹರಿಯನ್ನು ಸ್ತೋತ್ರಮಾಡಿದರು ಎಂದು ಬಹಳ ಸ್ಪಷ್ಟವಾಗಿ ದೇವತೆಗಳಿಗೂ ಹರಿಗೂ ಭೇದವನ್ನೂ ಮತ್ತು ಹರಿಗೆ ಸರ್ವೋತ್ತಮತ್ವವನ್ನೂ ಹೇಳಿರುವುದರಿಂದ 'ಯೋನಪಶ್ಯತಿವೈಭಿದಾಂ' ಮುಂತಾದ ವಾಕ್ಯಗಳಿಗೆ ಸ್ವರೂಪ ಮೊದಲಾದ ಅನೇಕ ಅರ್ಥಪರವಾಗಿ ವ್ಯಾಖ್ಯಾನಮಾಡಿದ್ದಾರೆ.

## ಪುರಾಣಗಳಲ್ಲಿ ಸಾತ್ವಿಕಾದಿ ವಿಭಾಗ :

ಪುರಾಣಗಳಲ್ಲಿ ಸಾತ್ವಿಕ ರಾಜಸ ತಾಮಸಗಳೆಮ್ಬ ವಿಭಾಗವಿದೆ. ಸಾತ್ವಿಕಪುರಾಣದಲ್ಲಿಯೂ ಸಮಾಧಿ, ದರ್ಶನ, ಗುಹ್ಯ ಎಂಬ ಭಾಷಾಪ್ರಭೇದಗಳಿವೆ. ಆದ್ದರಿಂದ ಪುರಾಣದಲ್ಲಿ ಹೇಳಿರುವುದೆಲ್ಲಾ ಸತ್ಯವೆಂಬ ನಿಯಮವಿಲ್ಲ. ರಾಜಸತಾಮಸ ಜೀವರ ಅಭಿರುಚಿಗೆ ಅನುಗುಣವಾಗಿ ವೇದವ್ಯಾಸರು ಮೂರು ರೀತಿಯ ಪುರಾಣಗಳನ್ನೂ ರಚಿಸಿದ್ದಾರೆ. 'ಶೃಣು ದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಮ್ । ಯೇಷಾಂ ಶ್ರವಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ । ಮಾತ್ಸ್ಯಂ ಕಾರ್ಮಂ ತಥಾ ಲೈಂಗ್ಯ ಶೈವಂ ಸ್ಕಾಂದಂ ತಥೈವ ಚ । ಆಗ್ನೇಯಂ ತು ಷಪೇತಾನಿ ತಾಮಸಾನಿ ನಿಬೋಧ ಮೇ । ವೈಷ್ಣವಂ ನಾರದೀಯಂ ತು ತಥಾ ಭಾಗವತಂ ಶುಭಂ । ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ । ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿವೈ । ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ । ಭವಿಷ್ಯದ್ ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ । ಸಾತ್ವಿಕಾ ಮೋಕ್ಷದಾಃ ಪ್ರೋಕ್ತಾ ರಾಜಸಾಃ ಸ್ವರ್ಗದಾಃ ಶುಭಾಃ । ತಥೈವ ತಾಮಸಾ ದೇವಿ ನಿರಮಪ್ರಾಪ್ತಿ ಹೇ ತವಃ' 'ಎಲೌ ದೇವಿಯೇ ತಾಮಸಪುರಾಣಗಳನ್ನು ಕ್ರಮವಾಗಿ ಹೇಳುತ್ತೇನೆ ಕೇಳು. ಕೇವಲ

ಅವುಗಳ ಶ್ರವಣದಿಂದಲೇ ಜ್ಞಾನಿಗಳೂ ಪತಿತರಾಗುತ್ತಾರೆ. ಮತ್ಸ್ಯಪುರಾಣ, ಕೂರ್ಮಪುರಾಣ, ಲಿಂಗಪುರಾಣ, ಶಿವಪುರಾಣ ಸ್ಕಂದಪುರಾಣ ಮತ್ತು ಅಗ್ನಿಪುರಾಣಗಳು ತಾಮಸವಾದವು. ವಿಷ್ಣುಪುರಾಣ, ನಾರದೀಯಪುರಾಣ, ಭಾಗವತ, ಗರುಡಪುರಾಣ, ಪದ್ಮಪುರಾಣ ಮತ್ತು ವರಾಹ ಪುರಾಣಗಳು ಸಾತ್ವಿಕವಾದವು. ಬ್ರಹ್ಮಾಂಡ, ಬ್ರಹ್ಮವೈವರ್ತ, ಭವಿಷ್ಯತ್, ವಾಮನ, ಮಾರ್ಕಂಡೇಯ ಮತ್ತು ಬ್ರಹ್ಮಪುರಾಣಗಳು ರಾಜಸವಾದವು. ಸಾತ್ವಿಕಪುರಾಣಗಳು ಮೋಕ್ಷಪ್ರದವಾದವು. ಶುಭವಾದ ರಾಜಸಪುರಾಣಗಳು ಸ್ವರ್ಗಪ್ರದವಾದವು. ತಾಮಸಪುರಾಣಗಳಾದರೋ ನರಕಕ್ಕೇ ಕರೆದುಕೊಂಡು ಹೋಗುತ್ತದೆ' ಎಂದು ಪದ್ಮಪುರಾಣದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಅದರಂತೆ ಗರುಡಪುರಾಣದಲ್ಲಿ **'ಶಾಸ್ತ್ರಾಣ್ಯಪಿ ಚ ಸರ್ವಾಣಿ ತ್ರಿವಿಧಾನಿ ಮಹಾಮತೇ । ಯಾನಿ ಸತ್ವಪರಂ ವಿಷ್ಣುಂ ವದಂತಿ ಪರಮೇಶ್ವರಂ । ತಾನಿ ಸರ್ವಾಣಿ ಶಾಸ್ತ್ರಾಣಿ ಸಾತ್ವಿಕಾನಿ ಮತಾನಿ ವೈ । ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಂ । ಪರತ್ವೇನ ವದಚ್ಛಾಸ್ತ್ರಂ ರಾಜಸಂ ಪರಿಚಕ್ಷತೇ । ಯಚ್ಛಾಸ್ತ್ರಂ ಲಿಂಗಪಾರಮ್ಯಂ ಪರಂ ದೇವಮುಮಾಪತಿಮ್ । ತಮಃ ಪ್ರವರ್ತಕಂ ವಕ್ತಿ ತತ್ ತಾಮಸಮುದಾಹೃತಂ। ಸತ್ವನಿಷ್ಠಾಂ ಹಿ ಪುರುಷಾವಿಷ್ಣುಮೇವ ಯಜಂತಿ ತೇ । ಬ್ರಹ್ಮಾಣಂ ರಾಜಸಾಃ ಸರ್ವೇ ತಮೋನಿಷ್ಠಾಸ್ತು ಶೂಲಿನಂ ।'**, 'ಎಲೈ ಮಹಾಮೇಧಾವಿಯಾದ ಗರುಡನೇ ಎಲ್ಲಾ ಶಾಸ್ತ್ರಗಳೂ ಮೂರು ವಿಧವಾಗಿದೆ. ಯಾವುವು ವಿಷ್ಣುವನ್ನು ನಿರ್ದೋಷ ಗುಣಪರಿಪೂರ್ಣನೆಂದೂ, ಸರ್ವೋತ್ತಮನೆಂದೂ ಹೇಳುತ್ತದೆಯೋ ಅವೆಲ್ಲವೂ ಸಾತ್ವಿಕವಾದುವುಗಳು. ಪ್ರಜಾಪತಿಯನ್ನಾಗಲೀ, ಅಗ್ನಿಯನ್ನಾಗಲೀ, ಸರಸ್ವತಿಯನ್ನಾಗಲೀ ಸರ್ವೋತ್ತಮವೆಂದು ವರ್ಣಿಸುವ ಶಾಸ್ತ್ರಗಳು ರಾಜಸಗಳು. ಯಾವ ಶಾಸ್ತ್ರಗಳು ತಮೋಗುಣಪ್ರವರ್ತಕನಾದ ರುದ್ರನನ್ನು ಸರ್ವೋತ್ತಮವೆಂದು ಲಿಂಗಪಾರಮ್ಯವನ್ನು ಹೇಳುತ್ತವೆಯೋ ಅವೆಲ್ಲವೂ ತಾಮಸಗಳು. ಸಾತ್ವಿಕಶ್ರದ್ಧೆಯುಳ್ಳವರು ವಿಷ್ಣುವನ್ನೇ ಭಜಿಸುತ್ತಾರೆ. ರಾಜಸಶ್ರದ್ಧೆಯುಳ್ಳವರು ಬ್ರಹ್ಮದೇವರನ್ನು ಭಜಿಸುತ್ತಾರೆ. ತಾಮಸಶ್ರದ್ಧೆಯುಳ್ಳವರು ಶಿವನನ್ನು ಭಜಿಸುತ್ತಾರೆ' ಎಂದು ಸ್ಪಷ್ಟವಾಗಿ ಬ್ರಹ್ಮವಿಷ್ಣುಮಹೇಶ್ವರರಿಗೆ ಭೇದವನ್ನೂ ಅವರನ್ನು ಉಪಾಸನೆ ಮಾಡುವವರ ಸ್ವಭಾವಭೇದವನ್ನೂ ತಿಳಿಸಿದ್ದಾರೆ. ಸಾತ್ವಿಕರೇ ಜ್ಞಾನಕ್ಕೆ ಅಧಿ ಕಾರಿಗಳಾದ್ದರಿಂದ ಈ ಸಾತ್ವಿಕಾದಿ ವಿಭಾಗವನ್ನು ಸಾತ್ವಿಕಪುರಾಣದಲ್ಲಿಯೇ ತಿಳಿಸಿದ್ದಾರೆ. ರಾಜಸತಾಮಸಪುರಾಣಗಳಲ್ಲಿ ತಿಳಿಸಿಲ್ಲ. ಆದ್ದರಿಂದ ವೇದಶಾಸ್ತ್ರಪ್ರಮೇಯಕ್ಕೆ ಯಾವ ರಾಜಸತಾಮಸಪುರಾಣಗಳ ವಿರೋಧದ

ಭಯವೂ. ಸಾತ್ವಿಕಪುರಾಣಗಳಿಂದಲಂತೂ ವಿರೋಧವಿಲ್ಲ. ವಿರೋಧವನ್ನು ಹೇಳುವಂತೆ ತೋರುವ ವಚನಗಳಿಗೂ ಅರ್ಥಾಂತರವನ್ನು ಮಾಡಿ ವಿರೋಧವನ್ನು ಪರಿಹಾರಮಾಡಬೇಕೆಂದು ಅಭಿಪ್ರಾಯ.

## 'ಭಯಂ ದ್ವಿತೀಯಾಭಿನಿವೇಶತಃ ಸ್ಯಾತ್' ಶ್ಲೋಕದ ವಿಮರ್ಶೆ :

**'ಭಯಂ ದ್ವಿತೀಯಾಭಿನಿವೇಶತಃ ಸ್ಯಾದೀಶಾದಪೇತಸ್ಯ ವಿಪರ್ಯಯೋಽಸ್ಮೃತಿಃ । ಯನ್ಮಾಯಯತೋ ಬುಧ ಆಭಜೇತ್ ತಂ ಭಕ್ತ್ಯೈಕವಶ್ಯಂ ಗುರುದೇವತಾತ್ಮಾ'** ಎಂಬುದು ಏಕಾದಶಸ್ಕಂಧದಲ್ಲಿ ಜಾಯಂತೇಯೋಪಾಖ್ಯಾನದಲ್ಲಿ ಬರುವ ಒಂದು ಶ್ಲೋಕ. ಇದಕ್ಕೆ ಮಾಯಾವಾದಿಗಳು ದ್ವಿತೀಯ ವಸ್ತುವನ್ನು ಅಂಗೀಕರಿಸಿದರೆ ಭಯವುಂಟಾಗುತ್ತದೆ. ಆದ್ದರಿಂದ ದ್ವಿತೀಯವಸ್ತುವಿಲ್ಲ ಎಂದರೆ ಭೇದವಿಲ್ಲ. ಜೀವಬ್ರಹ್ಮರಿಗೆ ಅಭೇದವೇ ಇದೆ ಎಂದು ಅರ್ಥಮಾಡುತ್ತಾರೆ. ಅದನ್ನು ನಿರಾಕರಿಸಲು ರಾಜರು ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಇಲ್ಲಿ ದ್ವಿತೀಯ ಎಂದರೆ ತನಗಿಂತ ಭಿನ್ನವಾದ ದೇಹಗೇಹಾದಿಗಳು ಎಂದು ಅರ್ಥ. ಆಚಾರ್ಯರು ಭಾಗವತತಾತ್ಪರ್ಯದಲ್ಲಿ ಪ್ರಮಾಣವನ್ನು ಉದಾಹರಿಸಿ ಈ ಅರ್ಥವನ್ನು ನಿರ್ಣಯಿಸಿದ್ದಾರೆ. ಅಂತಹ ದೇಹಗೇಹಾದಿಗಳಲ್ಲಿ ಅಭಿನಿವೇಶ ಎಂದರೆ ಅತಿಶಯವಾದ ಮಮತೆ. ಅದರಿಂದ ಭಯವುಂಟಾಗುತ್ತದೆ ಎಂದು ಹೇಳಿದರೆ ದೇಹಗೇಹಾದಿಗಳಲ್ಲಿ ಮಮತೆಯನ್ನು ತ್ಯಜಿಸಬೇಕೆಂದು ಅರ್ಥವಾಗುತ್ತದೆಯೇ ಹೊರತು ದೇಹಗೇಹಾದಿಗಳೇ ಇಲ್ಲ. ಅವುಗಳು ಮಿಥ್ಯಾ ಎಂಬ ಅರ್ಥವು ಸಿದ್ಧವಾಗುವುದಿಲ್ಲ. ಅವೆಲ್ಲವೂ ಮಿಥ್ಯಾ ಎಂದಾದರೆ ಮಾತ್ರ ಜೀವಬ್ರಹ್ಮಭೇದವು ಸಿದ್ಧಿಸುವುದಷ್ಟೆ? ಆತ್ಮಾತಿರಿಕ್ತವಾದ ದ್ವಿತೀಯವೆಲ್ಲವನ್ನೂ ಪೂರ್ವಾರ್ಧದಲ್ಲಿ ನಿಷೇಧಮಾಡಿದರೆ ಉತ್ತರಾರ್ಧದಲ್ಲಿ ಭಕ್ತಿಭಜನೆಗಳನ್ನು ವಿಧಾನಮಾಡುವುದು ಹೇಗೆ ಸಂಗತವಾಗುತ್ತದೆ? ಅವೂ ದ್ವಿತೀಯಗಳೇ ಅಷ್ಟೆ? ಆದ್ದರಿಂದ ಪೂರ್ವಾರ್ಧಕ್ಕೆ ದ್ವಿತೀಯ ನಿಷೇಧಪರವಾಗಿ ಅರ್ಥವನ್ನು ಮಾಡಬಾರದು. ಗುರುದೇವಾತ್ಮಾ ಎಂಬ ಪದವು ಬ್ರಹ್ಮಾದಿದೇವತೆಗಳನ್ನು ಗುರುವೆಂದು ಪೂಜಿಸು ಸರ್ವೋತ್ತಮವಾದ ದೇವತೆ ಎಂದು ಪೂಜಿಸಬೇಡ ಎಂದೂ ಅರ್ಥವನ್ನು ಕೊಡುತ್ತದೆ. ಯಾವ ಮತದಲ್ಲಿ ಗುರುವು ದೇವತೆಯೋ ನಮ್ಮ ಮತದಲ್ಲಿ ಗುರುಗಳಾದ ಮಧ್ವಾಚಾರ್ಯರು ದೇವತೋತ್ತಮರಾದ ವಾಯುದೇವರಷ್ಟೆ. ಅಂತಹ ಆಚಾರ್ಯರನ್ನು ಪಡೆಯುವ ಪ್ರಯತ್ನವನ್ನು ಮಾಡಿ ಅವರು ಉಪದೇಶಿಸಿದ ಮಾರ್ಗದಲ್ಲಿ ಭಕ್ತಿಯಿಂದ ಭಜನೆಮಾಡು ಎಂಬ

ಅರ್ಥವನ್ನೂ ಕೊಡುತ್ತದೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ಅರ್ಥಗಳನ್ನು ಹೇಳಿದ್ದಾರೆ. ಅವೆಲ್ಲವನ್ನೂ ಗ್ರಂಥದ ಅಧ್ಯಯನದಿಂದಲೇ ತಿಳಿಯಬೇಕು.

## 'ಅಹಂ ಭವಾನ್ ನ ಚಾನ್ಯಸ್ತ್ವಂ' ವಾಕ್ಯದ ವಿಮರ್ಶೆ :

**'ಅಹಂ ಭವಾನ್ ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವಭೋ । ನನೌ ಪಶ್ಯಂತಿ ಕವಯಃ ಛಿದ್ರಂ ಜಾತು ಮನಾಗಪಿ'** ಎಂಬ ಶ್ಲೋಕವು ಚತುರ್ಥಸ್ಕಂಧದಲ್ಲಿ ಪುರಂಜನೋಪಾಖ್ಯಾನದಲ್ಲಿ ಬರುತ್ತದೆ. ಇದು ಅವಿಜ್ಞಾತಸಖನಾದ ಪರಮಾತ್ಮನು ಪುರಂಜನನನ್ನು ಕುರಿತು ಹೇಳುವ ಮಾತು. ಈ ವಾಕ್ಯಕ್ಕೆ ಮೇಲೆ ತೋರುವ ಅರ್ಥವು 'ಎಲೈ ಪುರಂಜನನೇ ನಾನೇ ನೀನು. ನೀನು ಬೇರೆಯಲ್ಲ. ನಿನ್ನನ್ನು ನಾನು ಎಂದೇ ತಿಳಿ. ಜ್ಞಾನಿಗಳು ನಮ್ಮಿಬ್ಬರ ನಡುವೆ ಯಾವಾಗಲೂ ಯಾವ ಭೇದವನ್ನೂ ಕಾಣುವುದಿಲ್ಲ' ಎಂದು ಹೀಗಿದೆ. ಸಾತ್ವಿಕಪುರಾಣವಾದ ಭಾಗವತದಲ್ಲಿ ಹೀಗೆ ಸ್ಪಷ್ಟವಾಗಿ ಜೀವಬ್ರಹ್ಮಭೇದವನ್ನು ಹೇಳಿದ್ದಾರಷ್ಟೆ ಎಂಬ ಶಂಕೆಯು ಬರುತ್ತದೆ. ಅದನ್ನು ನಿವಾರಿಸಲು ರಾಜರು ವ್ಯಾಖ್ಯಾನಮಾಡಬೇಕು. ಶ್ಲೋಕ ಸರಿಯಾಗಿದೆಯೇ ಇದೆ. ಮೊದಲು ಮಾಡಿದ ವಾಕ್ಯಗಳ ವಿರಾಮತಪ್ಪಾಗಿದೆ. ಅದನ್ನು ಹೀಗೆ ಸರಿಮಾಡಬೇಕು. ಅಹಂ ಭವಾನ್ ನ. ಚ ಅನ್ಯಸ್ತ್ವಂ. ತ್ವಮೇವಾಹಂ ವಿಚಕ್ಷಭೂ. ಉತ್ತರಾರ್ಧದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಈಗ ಹೊರಡುವ ಅರ್ಥ. ನಾನು ನೀನಲ್ಲ. ಮತ್ತೇನೆಂದರೆ ನೀನು ಬೇರೆಯಾದವನು. ನೀನು ನಿನ್ನನ್ನು ನಾನು ಎಂದು ತಿಳಿದುಕೊಳ್ಳುವಾಗ ನಿನ್ನನ್ನು ಮಾತ್ರ ನಾನು ಎಂದು ತಿಳಿದುಕೋ. ಆ 'ನಾನು' ಎಂಬ ಅಂಶದಲ್ಲಿ ನನ್ನನ್ನೂ (ಅವಿಜ್ಞಾತಸಖನಾದ ಪರಮಾತ್ಮನನ್ನೂ) ಸೇರಿಸಬೇಡ ಎಂದು. ಈ ಅರ್ಥದಲ್ಲಿ ಭೇದವು ಸ್ಪಷ್ಟವಾಗಿ ತೋರುತ್ತದೆ. ಈ ಶ್ಲೋಕಕ್ಕೆ ಎರಡು ರೀತಿಯಲ್ಲಿಯೂ ವಾಕ್ಯಚ್ಛೇದ ಮಾಡಬಹುದು. ಪೂರ್ವಪಕ್ಷಿಯಂತೆ ಅಹಂ ಭವಾನ್. ನಚಾನ್ಯಸ್ತ್ವಂ. ತ್ವಮೇವಾಹಂ ವಿಚಕ್ಷ್ವ ಎಂದು ವಾಕ್ಯವಿರಾಮವನ್ನು ಮಾಡಬಹುದು. ಸಿದ್ಧಾಂತಿಗಳು ಹೇಳುವಂತೆಯೇ ಏಕೆ ಮಾಡಬೇಕು ಎಂಬುದಕ್ಕೆ ರಾಜರು ಕಾರಣವನ್ನು ಹೇಳುತ್ತಾರೆ. ಈ ಶ್ಲೋಕದ ಅನಂತರ ಮೂರನೆಯ ಶ್ಲೋಕವು ಹೀಗಿದೆ : **'ಬರ್ಹಿಷ್ಮನ್ ಏತದಧ್ಯಾತ್ಮಂ ಪಾರೋಕ್ಷ್ಯೇಣಪ್ರದರ್ಶಿತಂ। ಯತ್ ಪರೋಕ್ಷಪ್ರಿಯೋದೇವಃ ಭಗವಾನ್ ವಿಶ್ವಭಾವನಃ'**, 'ಎಲೈ ಪ್ರಾಚೀನಬರ್ಹಿಯೇ ಈ ಅಧ್ಯಾತ್ಮವಿದ್ಯೆಯನ್ನು ನಾನು ಒಗಟಿನಂತೆ ಹೇಳಿದ್ದೇನೆ. ಏಕೆಂದರೆ ಜಗತ್ಕರ್ತನಾದ ಹರಿಗೆ ಒಗಟಿನಂತೆ ಹೇಳುವುದು ಪ್ರಿಯವಾದುದು'. ಇದೇ ಉಪಾಖ್ಯಾನದ ಕೊನೆಯಲ್ಲಿ ಮೈತ್ರೇಯರೂ ಸಹ

'ಅಧ್ಯಾತ್ಮಪಾರೋಕ್ಷ್ಯಮಿದಂ ಮಾಯಾಧಿಗತಮುತ್ತಮಂ', 'ಈ ಶ್ರೇಷ್ಠವಾದ ಒಗಟಿನರೂಪದಲ್ಲಿರುವ ಅಧ್ಯಾತ್ಮವಿದ್ಯೆಯನ್ನು ನಾನು ಪಡೆದೆ' ಎಂದು ಹೇಳುತ್ತಾರೆ. ಇದನ್ನು ಒಗಟಿನಂತೆ ಬಿಡಿಸಬೇಕೇ ಹೊರತು ಮೇಲೆತೋರುವ ಅರ್ಥವು ಒಗಟಿನ ಅರ್ಥವಲ್ಲ ಸಿದ್ಧಾಂತಿಗಳು ಬಿಡಿಸಿದಂತೆ ಶಾಸ್ತ್ರಕ್ಕೆ ಅವಿರುದ್ಧವಾಗಿ ಬಿಡಿಸಿದರೆ ಮಾತ್ರ ಸ್ಪಷ್ಟವಾದ ನಿಜವಾದ ಅರ್ಥವು ದೊರೆಯುತ್ತದೆ ಎಂದು ಕಾರಣವನ್ನು ಹೇಳುತ್ತಾರೆ. ಇನ್ನು ಭೇದವನ್ನು ನಿಷೇಧಮಾಡುತ್ತದೆ ಎಂದು ಒಪ್ಪಿದರೂ ಅದನ್ನು ಆಲಂಕಾರಿಕವೆಂದು ಹೇಳಬೇಕು. ರಾಜರು ತನಗೆ ಪ್ರಿಯನಾದ ಮಂತ್ರಿಯನ್ನು ಕುರಿತು ನಾನೇ ನೀನು, ನೀನು ಬೇರೆಯಲ್ಲ ಎಂದು ಹೇಳಿದರೆ ಹೇಗೆ ಮಂತ್ರಿಯಲ್ಲಿ ರಾಜನಿಗೆ ಅತಿಶಯವಾದ ಪ್ರೀತಿಯನ್ನೇ ವ್ಯಕ್ತಮಾಡುತ್ತದೆಯೋ ಹಾಗೆ ಇಲ್ಲಿಯೂ ಪುರಂಜನನಲ್ಲಿ ಅವಿಜ್ಞಾತಸಖನಿಗೆ ಅತಿಶಯಿತವಾದ ಪ್ರೀತಿಯನ್ನು ತೋರಿಸುತ್ತದೆಯೇ ಹೊರತು ಅಭೇದವನ್ನು ಹೇಳುವುದಿಲ್ಲ. ಒಂದೇ ದೇಹದಲ್ಲಿ ಒಟ್ಟಿಗೆ ಇಬ್ಬರು ಇರುವಾಗ ಏಕೆ ಭೇದವು ಕಾಣುವುದಿಲ್ಲ ಎಂಬ ಪ್ರಶ್ನೆಗೆ ಉತ್ತರಾರ್ಧವು ಉತ್ತರವನ್ನು ಹೇಳುತ್ತದೆ. ನಾವು ಹಾಲು ನೀರುಗಳಂತೆ ಒಬ್ಬರ ಜೊತೆಯಲ್ಲೊಬ್ಬರು ಪ್ರೀತಿಯಿಂದ ಬೆರೆತಿರುವುದರಿಂದ ನಮ್ಮಲ್ಲಿ ಭೇದವಿದ್ದರೂ ಅದು ಇನ್ನೊಬ್ಬರಿಗೆ ಕಾಣುವುದಿಲ್ಲ ಎಂದು. ಆದ್ದರಿಂದ ಇಂತಹ ಮಾತು ವಾಕ್ಯಗಳಾದ್ದರೂ ನನಗೆ ಭಯವಿಲ್ಲ ಎಂದು ರಾಜರು ಹೇಳುತ್ತಾರೆ.

## ಭೇದಶ್ರುತಿಗಳಿಗೆ ನಿರವಕಾಶತ್ವಸಮರ್ಥನೆ :

ಭೇದಶ್ರುತಿಗೆ ಮಾತ್ರ ಐಕ್ಯಶ್ರುತಿಗೆ ಹೇಳಿದಂತೆ ಮತಿಭೇದ ಎಂಬ ಅರ್ಥವನ್ನಾಗಲೀ ಸ್ಥಾನಭೇದ ಎಂಬ ಅರ್ಥವನ್ನಾಗಲೀ ಮಾಡಲು ಬರುವುದಿಲ್ಲ. ಒಂದೇಕಾಲದಲ್ಲಿ ಒಬ್ಬನಿಗೇ ಮತಿಭೇದವು ಉಂಟಾಗುವುದಿಲ್ಲ. ಏಕಕಾಲದಲ್ಲಿ ಉಂಟಾಗುವ ಮತಿಭೇದವು ಸ್ವರೂಪಭೇದವಿದ್ದರೆ ಮಾತ್ರ ಸಾಧ್ಯ. ಸ್ಥಾನಭೇದವೂ ಸಹ ಒಂದೇ ವಸ್ತುವಿಗೆ ಒಂದೇ ಕಾಲದಲ್ಲಿ ಇರಲು ಸಾಧ್ಯವಿಲ್ಲ. ಎರಡು ವಸ್ತುಗಳು ಬೇಕೇಬೇಕು. ಅವುಗಳಿಗೆ ಸ್ವರೂಪಭೇದವು ಅವಶ್ಯಕವೇ ಆಗಿದೆ. ಆದ್ದರಿಂದ ಭೇದಶ್ರುತಿಯು ಸುಮಂಗಲಿ ಇದ್ದಂತೆ. ಸುಮಂಗಲಿಯು ಎಲ್ಲಿಗೆ ಹೋದರೂ ತನ್ನ ಮಾಂಗಲ್ಯಸೂತ್ರವನ್ನು ಹೇಗೆ ತ್ಯಜಿಸುವುದಿಲ್ಲವೋ ಅದರಂತೆ ಭೇದಶ್ರುತಿಯನ್ನು ಮತಿಭೇದ ಮತ್ತು ಸ್ಥಾನಭೇದಾರ್ಥಗಳಲ್ಲಿ ತೆಗೆದುಕೊಂಡು ಹೋದರೂ ಅದು ತನ್ನ ಪ್ರಾಣಪದಕದಂತಿರುವ ಸ್ವರೂಪಭೇದವನ್ನು ಮಾತ್ರ ಎಂದೂ ಬಿಡುವುದಿಲ್ಲ. ಆದ್ದರಿಂದ ಭೇದಶ್ರುತಿಗೆ ಭೇದವನ್ನು ಬಿಟ್ಟು ಬೇರೆಯ ಅರ್ಥದಲ್ಲಿ ಅವಕಾಶವಿಲ್ಲ.

ಆದ್ದರಿಂದ ಭೇದಶ್ರುತಿಯನ್ನು ನಿರವಕಾಶವೆನ್ನುತ್ತೇವೆ. ಐಕ್ಯಶ್ರುತಿಗೆ ಸ್ಥಾನೈಕ್ಯ, ಮುಕ್ತ್ಯೈಕ್ಯ ಮೊದಲಾದ ಅರ್ಥಗಳನ್ನು ಹೇಳಬಹುದು. ಪ್ರಥಮಸ್ಕಂಧದಲ್ಲಿ ಅರ್ಜುನನು **'ಶಯ್ಯಾಸನಾಟಕತ್ಥನಭೋಜನಾದಿಷ್ವೈಕ್ಯಾದ್ ವಯಸ್ಯ ಋಭುಮಾನಿತಿ ವಿಪ್ರಲಬ್ಧಃ । ಸಖ್ಯು ಸಜೀವ ಪಿತೃವತ್ ತನಯಸ್ಯ ಸರ್ವಂ ಸೇಹೇ ಮಹಾಮಹಿತಯಾ ಕುಮತೇರಘಂ ಮೇ'** ಎಂದು ಶಯನಾಸನಭೋಜನಾದಿ ವ್ಯಾಪಾರಗಳಲ್ಲಿ ಸಮಾನತೆ ಇರುವುದರಿಂದಲೂ ಐಕ್ಯವ್ಯವಹಾರವಿದೆಯೆಂದು ಹೇಳುತ್ತಾನೆ. ಹೀಗೆ ಅನೇಕ ಅರ್ಥಗಳಿರುವುದರಿಂದ ಅಭೇದಶ್ರುತಿಯು ಸಾವಕಾಶ. ಸಾವಕಾಶ ನಿರವಕಾಶಗಳಿಗೆ ವಿರೋಧವು ಬಂದರೆ ಸಾವಕಾಶವು ಬಾಧಿತವಾಗುತ್ತದೆಯೇ ಹೊರತು ನಿರವಕಾಶವು ಬಾಧಿತವಾಗುವುದಿಲ್ಲ. ಆದ್ದರಿಂದ ಭೇದಶ್ರುತಿಗೆ ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯ.

## 'ನಿತ್ಯೋನಿತ್ಯಾನಾಂ' ಶ್ರುತ್ಯರ್ಥ :

**'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ'** ಎಂಬ ಕಾಠಕೋಪನಿಷತ್ತಿನ ವಾಕ್ಯವನ್ನು ವಿಮರ್ಶೆಮಾಡುತ್ತಾರೆ. ಅವನು ನಿತ್ಯರಲ್ಲಿ ನಿತ್ಯನಾದವನು. ಚೇತನರಲ್ಲಿ ಚೇತನನಾದವನು. ಅನಿತ್ಯಸುಖವನ್ನು ಕೊಡುವ ಈ ಎಲ್ಲಾ ಜಡಪದಾರ್ಥಗಳನ್ನು ಅವನೊಬ್ಬನೇ ಅನೇಕ ಜೀವರಿಗೆ ಚೆನ್ನಾಗಿ ಸೃಷ್ಟಿಮಾಡಿಕೊಡುವವನು. ಈ ಜೀವರೆಲ್ಲರೂ ಸುಖವನ್ನು ಬಯಸುವವರು. ಅವನು ಈ ಜೀವರಿಗೆಲ್ಲಾ ಅಂತರ್ಯಾಮಿ ಅವನನ್ನು ಕೆಲವರು ನೋಡುತ್ತಾರೆ ಕೆಲವರು ನೋಡುವುದೇ ಇಲ್ಲ. ಯಾರು ಅವನನ್ನು ಈ ರೀತಿಯಾಗಿ ಅಂತರ್ಯಾಮಿಯನ್ನಾಗಿ ನೋಡುತ್ತಾರೆಯೋ ಅವರಿಗೇ ಶಾಶ್ವತವಾದ ಸುಖ. ಬೇರೆ ರೀತಿಯಲ್ಲಿ ಎಂದರೆ ಜೀವರಿಂದ ಅಭಿನ್ನನನ್ನಾಗಿ ನೋಡುವವರಿಗೆ ಮತ್ತು ಸರ್ವಥಾ ನೋಡದೆ ಇರುವವರಿಗೆ ಶಾಶ್ವತವಾದ ಸುಖವಿಲ್ಲ. ಈ ರೀತಿಯಾಗಿ ಸಿದ್ಧಂತಾಭಿಮತವಾದ ಎಲ್ಲಾ ಪ್ರಮೇಯಗಳನ್ನೂ ಈ ಒಂದು ವಾಕ್ಯವೇ ಹೇಳುತ್ತದೆ. ಇದರಿಂದ ಇನ್ನೂ ಎಷ್ಟೋ ಪ್ರಮೇಯಗಳೂ ಮತ್ತು ಪರಮತನಿರಾಕರಣೆಯೂ ಸಿದ್ಧವಾಗುತ್ತವೆ. ಲಟ್ ಪ್ರತ್ಯಯವು ಚೇತನನಿಗೇ ಜನ್ಮಾದಿಕರ್ತೃತ್ವವನ್ನು ಹೇಳುವುದರಿಂದ ಜನ್ಮಾದಿಕರ್ತೃತ್ವವು ಬ್ರಹ್ಮನ ತಟಸ್ಥಲಕ್ಷಣ ಎಂಬ ವಾದವು ನಿರಾಕೃತವಾಗುತ್ತದೆ.

**ಚೇತನಸ್ಯೈವ ಜನ್ಮಾದಿಕರ್ತೃತ್ವಂ ಯಲ್ಲಟೋದಿತಂ ।**
**ತಟಸ್ಥತ್ವಕಥಾ ತಸ್ಮಾನ್ಮತಸ್ಥಾಽಭೂತ್ ಕುಯೋಗಿನಾಂ ॥**

ಅದರಂತೆ ಬ್ರಹ್ಮನಿಗೆ ಜಗದುಪಾದಾನತ್ವವೂ, ಕರ್ತೃತ್ವಾದಿ ಧರ್ಮಗಳಿಗೆ ಬ್ರಹ್ಮನಲ್ಲಿ ಆರೋಪವೂ ನಿರಾಕೃತವಾಗುತ್ತದೆ. ಕರ್ತೃತ್ವವನ್ನು ಹೇಳಿದುದರಿಂದ ಉಪಾದಾನಾದಿ ವಿಜ್ಞಾನದಿಂದ ಸಾರ್ವಜ್ಞಾದಿ ಮಹಾಗುಣಗಳೇ ಸಿದ್ಧಿಸುತ್ತದೆ. ಈಶ್ವರನಿಗೆ ಮಹಾಸಾಮರ್ಥ್ಯವೂ ಪ್ರಭುತ್ವವೂ ಜೀವರಿಗೆ ಪಾರತಂತ್ರ್ಯವೂ ಸಿದ್ಧವಾಗುತ್ತದೆ. ಚೇತನರಲ್ಲಿ ಚೇತನ ಎಂದು ನಿರ್ಧಾರಣೆಯನ್ನು ಮಾಡಿದುದರಿಂದ ಉಳಿದ ಚೇತನರಿಗೆ ಅನಿತ್ಯಜ್ಞಾನವಿದ್ದರೆ ಈಶ್ವರನಿಗೆ ನಿತ್ಯಜ್ಞಾನವೂ, ನಿತ್ಯೋ ನಿತ್ಯಾನಾಂ ಎಂದು ಹೇಳಿದುದರಿಂದ ದೇಹದಿಂದಲೂ ನಿತ್ಯತ್ವವೂ ಸಿದ್ಧವಾಗುತ್ತದೆ. ಸ್ವರೂಪತಃ ನಿತ್ಯತ್ವವು ಜೀವರಿಗೂ ಇರುವುದರಿಂದ ಆ ಅಭಿಪ್ರಾಯದಿಂದ ನಿತ್ಯರಲ್ಲಿ ನಿತ್ಯನೆಂದು ನಿರ್ಧಾರಣೆಯನ್ನು ಮಾಡಲು ಬರುವುದಿಲ್ಲ. ಏಕೋ ಬಹೂನಾಂ ಎಂದು ಅನಂತಜೀವರಲ್ಲಿ ಇರುವ ಈಶ್ವರನ ರೂಪಗಳಿಗೆ ಏಕತ್ವವನ್ನು ಹೇಳಿದುದರಿಂದ ಈಶ್ವರನಿಗೂ ಅವನ ಅನಂತ ಅವತಾರಗಳಿಗೂ ಅಭೇದವು ಸಿದ್ಧವಾಗುತ್ತದೆ. ಒಬ್ಬನಿಗೇ ಅನಂತತ್ವವನ್ನು ಹೇಳುವುದರಿಂದ ಭೇದಕಾರ್ಯಕಾರಿಯಾದ ವಿಶೇಷವೂ ಸಿದ್ಧವಾಗುತ್ತದೆ. ಆನಂದಮಯನ ಅವಯವ ಮತ್ತು ಅವಯವಿಗಳಿಗೆ ಅಭೇದವು ಸುತರಾಂ ಸಿದ್ಧವಾಗುತ್ತದೆ. ತನ್ನಲ್ಲಿರುವ ಎಲ್ಲಾ ಗುಣಗಳಿಗೂ ಅಭೇದವನ್ನು ಹೇಳಿರುವುದರಿಂದ ಆ ಗುಣಗಳಿಗೆ ಅಬಾಧ್ಯತ್ವವೂ ಮತ್ತು ಚಿನ್ಮಯತ್ವವೂ ಸಿದ್ಧವಾಗುತ್ತದೆ ಆತ್ಮಸ್ಥಂ ಎಂಬ ಪದವು ಜೀವರಲ್ಲಿ ಧ್ಯೇಯನಾಗಿದ್ದಾನೆಂದು ಹೇಳುವುದರಿಂದ ಇಷ್ಟದೇವತ್ವವು ಸಿದ್ಧವಾಗುತ್ತದೆ. ಅದರಿಂದಲೇ ಸೌಂದರ್ಯವೂ ಸುಪ್ರಸನ್ನತೆಯೂ ಸಿದ್ಧವಾಗುತ್ತದೆ. ಇಂತಹ ಗುಣಗಳ ಜ್ಞಾನದಿಂದ ಮೋಕ್ಷವಾಗುತ್ತದೆ ಎಂದು ಹೇಳಿದುದರಿಂದ ಅವನ ಗುಣಸಮುದ್ರಕ್ಕೆ ಪಾರಮಾರ್ಥಿಕತ್ವವು ಸಿದ್ಧವಾಗುತ್ತದೆ. ತೇಷಾಂ ಶಾಶ್ವತಂ ಸುಖಂ ಎಂದು ಹೇಳಿದುದರಿಂದ ತೇಷಾಂ ಎಂಬಲ್ಲಿನ ಬಹುವಚನದಿಂದ ಮುಕ್ತರಿಗೆ ಬಹುತ್ವವೂ ಲಬ್ಧವಾಗುತ್ತದೆ. ಯಾರು ಹೀಗೆ ನೋಡುತ್ತಾರೆಯೋ ಅವರಿಗೆ ಪ್ರಸನ್ನನಾಗಿ ಮೋಕ್ಷವನ್ನು ಕೊಡುತ್ತಾನೆ ಎಂಬ ಅರ್ಥವು ಬರುವುದರಿಂದ ಮುಕ್ತಿಪ್ರದತ್ವ ಮತ್ತು ಮುಕ್ತಸ್ವಾಮಿತ್ವಗಳು ಸಿದ್ಧವಾಗುತ್ತದೆ. ಯೇನುಪಶ್ಯಂತಿ ಎಂಬಲ್ಲಿ ಲಟ್‌ಪ್ರತ್ಯಯವು ದರ್ಶನಕ್ಕೆ ಸುಖಸಮಾನಕಾಲೀನತ್ವವನ್ನು ಹೇಳಿರುವುದರಿಂದ ಈ

ಅಂತರ್ಯಾಮಿತ್ವಾದಿ ಜ್ಞಾನವು ಮುಕ್ತಿಯಲ್ಲಿಯೂ ಅನುವೃತ್ತವಾಗುವುದೆಂದು ಸಿದ್ಧಿಸುತ್ತದೆ. ಕಾಮಾನ್ ಎಂದು ಹೇಳಿರುವುದರಿಂದ ಜಡಬಹುತ್ವವು ಸಿದ್ಧವಾಗುತ್ತದೆ. ಬಹೂನಾಂ ಎಂಬ ಜೀವಬಹುತ್ವದಿಂದ ಜೀವಭೇದವು ಸಿದ್ಧವಾಗುತ್ತದೆ. ಏಕೋ ಬಹೂನ್ನಾಂ ಕಾಮಾನ್ ಎಂಬ ಪದಗಳಿಂದ ಜೀವೇಶ್ವರಭೇದವೂ ಜಡೇಶ್ವರಭೇದವೂ ಜೀವಜಡಭೇದವೂ ಸಿದ್ಧವಾಗುತ್ತದೆ. ಹೀಗೆ ಪಂಚಭೇದಗಳು, ಮೋಕ್ಷಕ್ಕೆ ನಿತ್ಯಸುಖಾತ್ಮಕತ್ವ, ಭೇದಜ್ಞಾನಮಾತ್ರ ಸಾಧ್ಯತ್ವ, ಜೀವರ ತಾರತಮ್ಯ, ಜೀವರ ತ್ರೈವಿಧ್ಯ, ಜಗತ್ಸತ್ಯತ್ವ, ಪ್ರವಾಹತಃ ನಿತ್ಯತ್ವ ಎಲ್ಲವೂ ಸಿದ್ಧವಾಗುತ್ತದೆ. ಆದರಿಂದ ಏಕಜೀವವಾದವೂ, ಜೀವಾಭೇದವಾದವೂ, ಜೀವೇಶ್ವರಭೇದವಾದವೂ, ಚೇತನಕ್ಕೆ ಕರ್ತೃತ್ವವಿಲ್ಲವೆಂಬ ವಾದವೂ ನಿಷ್ಪ್ರಕಾರಕವಾದ ಐಕ್ಯಜ್ಞಾನದಿಂದ ಮೋಕ್ಷಪ್ರಾಪ್ತಿ ಎಂಬ ವಾದವೂ, ಜಗದಸತ್ಯತ್ವವಾದವೂ, ಏಕಕಾಲದಲ್ಲಿ ಎಲ್ಲರಿಗೂ ಮೋಕ್ಷ ಎಂಬ ವಾದವೂ ನಿರಸ್ತವಾಗುತ್ತದೆ. ಹೀಗೆ ಒಂದೊಂದು ಶ್ರುತಿಯೂ ಇಷ್ಟು ಅರ್ಥಗಳನ್ನು ಹೇಳುವಾಗ ಎಲ್ಲಾ ಶ್ರುತಿಗಳಿಗೆ ವ್ಯಾಖ್ಯಾನಮಾಡುವುದರಲ್ಲಿ ನಿಪುಣರಾದ ಸೂತ್ರಕಾರರನ್ನು ಮತ್ತು ಭಾಷ್ಯಕಾರರನ್ನು ಸ್ತೋತ್ರಮಾಡುತ್ತೇವೆ ಎಂದು ಹೇಳುತ್ತಾರೆ.

**ಏಕಾವಂತಮಪಿ ಹ್ಯರ್ಥಮೇಕೈವ ಶ್ರುತಿರಾದದೇ ।**
**ಸರ್ವಶ್ರುತ್ಯರ್ಥಕುಶಲೌ ಸೂತ್ರಭಾಷ್ಯಾಕೃತೌ ಸ್ತುಮಃ ॥**

ಹೀಗೆ ಒಂದೊಂದು ಶ್ರುತಿವಾಕ್ಯವೂ ಅಭೇದವನ್ನು ನಿರಾಸಮಾಡಿ ಭೇದವನ್ನು ಸಮರ್ಥಿಸುವುದರಿಂದ 'ದ್ವಿರ್ಬದ್ಧಸ್ಯ ಸುಬದ್ಧತಾ' ಎಂಬ ನ್ಯಾಯದಂತೆ ಭೇದವು ಬಹಳ ದೃಢವಾಗುತ್ತದೆ ಎಂದು ಹೇಳುತ್ತಾರೆ.

## 'ಏಕಮೇವಾದ್ವಿತೀಯಂ' ಶ್ರುತ್ಯರ್ಥ :

ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಶ್ರುತಿಯಲ್ಲಿ ಅದ್ವಿತೀಯಂ ಎಂಬ ಪದದಿಂದ ದ್ವಿತೀಯಾಭಾವವು ಹೇಳಲ್ಪಡುತ್ತದೆ. ಮತ್ತು ಅದರಿಂದ ಜೀವಬ್ರಹ್ಮಭೇದವು ಸಿದ್ಧವಾಗುತ್ತದೆ ಎಂದು ಪರವಾದಿಗಳ ಅಭಿಪ್ರಾಯ. ಅದನ್ನು ನಿರಾಕರಿಸಲು ರಾಜರು ಇಲ್ಲಿ ವಿಮರ್ಶೆಮಾಡುತ್ತಾರೆ. ಅನಶ್ವ ಎಂಬ ಶಬ್ದದಿಂದ ಹೇಗೆ ಅಶ್ವಭಿನ್ನ ಎಂಬ ಅರ್ಥವು ಬರುತ್ತದೆಯೋ ಅದರಂತೆ ಅದ್ವಿತೀಯ ಎಂಬ ಪದದಿಂದ ದ್ವಿತೀಯ ಭಿನ್ನ ಎಂಬ ಅರ್ಥವೇ ಬರುತ್ತದೆ. ದ್ವಿತೀಯಾಭಾವವು ಅರ್ಥವಾಗಬೇಕಾದರೆ 'ನ ವಿದ್ಯತೇ ದ್ವಿತೀಯಂ ಯಸ್ಮಾತ್' ಎಂದು ವಿಗ್ರಹವನ್ನು ಆಶ್ರಯಿಸಿ ಬಹುವ್ರೀಹಿ ಸಮಾಸವನ್ನು ಮಾಡಬೇಕು. 'ನ ದ್ವಿತೀಯಂ' ಎನ್ನುವುದು

ತತ್ಪುರುಷಸಮಾಸ. ತತ್ಪುರುಷಸಮಾಸವು ದ್ವಿತೀಯಭಿನ್ನ ಎಂಬ ಅರ್ಥವನ್ನು ಕೊಡುತ್ತದೆ. ತತ್ಪುರುಷ ಮತ್ತು ಬಹುವ್ರೀಹಿಸಮಾಸಗಳಲ್ಲಿ ತತ್ಪುರುಷವು ಶ್ರೇಷ್ಠವಾದುದು ಮತ್ತು ಬಹುವ್ರೀಹಿಯು ಅಧಮವಾದುದು. ಆದುದರಿಂದ ತತ್ಪುರುಷವನ್ನೇ ಆಶ್ರಯಿಸಬೇಕು. ಆಗ ದ್ವಿತೀಯಾಭಾವರೂಪವಾದ ಅರ್ಥವು ದೊರೆಯುವುದಿಲ್ಲ. ಅಲ್ಲದೆ ಈ ವಾಕ್ಯವು ಪ್ರಳಯಕಾಲದ ಬ್ರಹ್ಮನನ್ನು ಹೇಳುತ್ತದೆ. ಆದ್ದರಿಂದ ಬಹುವ್ರೀಹಿಯನ್ನು ಆಶ್ರಯಿಸಿದರೂ ಅದ್ವಿತೀಯಶಬ್ದಕ್ಕೆ ದ್ವಿತೀಯಪ್ರಾಗಭಾವವುಳ್ಳವನು ಅಥವಾ ದ್ವಿತೀಯ ಧ್ವಂಸವುಳ್ಳವನು ಎಮ್ದೇ ಅರ್ಥವಾಗುತ್ತದೆ. ಎಂದರೆ ಹಿಂದಿನ ಜಗತ್ತಿನ ಧ್ವಂಸವಾಗಲೀ ಮುಂದೆ ಜನಿಸುವ ಜಗತ್ತಿನ ಪ್ರಾಗಭಾವವಾಗಲೀ ಸಿದ್ಧವಾಗುತ್ತದೆ. ತ್ರೈಕಾಲಿಕಾಭಾವರೂಪವಾದ ಮಿಥ್ಯಾತ್ವವು ಸಿದ್ಧಿಸುವುದಿಲ್ಲ. ಆಗಲೂ 'ಅಗ್ರೇ' ಎಂಬ ಶಬ್ದದಿಂದ ಹೇಳಲ್ಪಟ್ಟ ಕಾಲವು ಇರುವುದರಿಂದ ಬ್ರಹ್ಮನಿಗೆ ದ್ವಿತೀಯರಹಿತ್ವವು ಬರುವುದಿಲ್ಲ. ನಿನ್ನ ವಾಕ್ಯವೇ ನಿನಗೆ ವಿರುದ್ಧವಾಯಿತು. ಅಚ್ಯುತನಿಗೆ ನೀಚೈಕ್ಯವನ್ನು ಹೇಳಲು ಹೊರಟರೆ ನಿನ್ನ ಕತ್ತಿಯಿಂದ ನಿನ್ನನ್ನೇ ಕತ್ತರಿಸಿಕೊಳ್ಳುತ್ತೀಯೆ. 'ಕಾಲಸ್ಯ ಕುಟಿಲಾಗತಿಃ' ಎಂದು ರಾಜರು ಅಪಹಾಸಮಾಡುತ್ತಾರೆ.

## 'ನೇಹನಾನಾಸ್ತಿ ಕಿಂಚನ' ಶ್ರುತ್ಯರ್ಥ :

'ನೇಹನಾನಾಸ್ತಿ ಕಿಂಚನ' ಎಂಬ ವಾಕ್ಯವಾದರೂ ಇಹ= ಬ್ರಹ್ಮನಲ್ಲಿ ನಾನಾ= ಭಿನ್ನವಾದುದು ಕಿಂಚನ= ಯಾವುದೂ ನಾಸ್ತಿ= ಇಲ್ಲ ಎಂದು ಹೇಳುವುದರಿಂದ ನೀನು ಜೀವಜಡಾತ್ಮಕವಾದ ಸಮಸ್ತ ಜಗತ್ತಿನಿಂದ ಬ್ರಹ್ಮನಿಗೆ ಐಕ್ಯವನ್ನು ಹೇಳಬೇಕು. ಆದರೆ ನೀನು ಜೀವ ಬ್ರಹ್ಮೈಕ್ಯವನ್ನು ಹೇಳುತ್ತೀಯೆ. ಜಡಬ್ರಹ್ಮೈಕ್ಯವನ್ನು ಒಪ್ಪುವುದಿಲ್ಲ. ಕಿಂಚನ ಎಂಬ ಶಬ್ದಕ್ಕೆ ಕೇವಲ ಚಿನ್ಮಾತ್ರ ಎಂದಾಗಲೀ ಜೀವ ಎಂದಾಗಲೀ ಎಂದೂ ಅರ್ಥವಲ್ಲ. ಅದು ತನ್ನ ತೆಕ್ಕೆಯಲ್ಲಿ ಎಲ್ಲವನ್ನೂ ಸಂಗ್ರಹಿಸುವ ಪದ. 'ಇಹ' ಮತ್ತು 'ನಾನಾ' ಎಂಬ ಪದಗಳ ವಿರೋಧವಿರುವುದರಿಂದ ಈ ಶ್ರುತಿಯೂ ಮಿಥ್ಯಾತ್ವವನ್ನು ಹೇಳುವುದಿಲ್ಲ. ನಾನಾಶಬ್ದಕ್ಕೆ ಭಿನ್ನ ಎಂದು ಅರ್ಥ. ಭಿನ್ನವಾದುದು ಇಲ್ಲ ಎಂದರೆ ಅಭಿನ್ನವಾದುದು ಇದೆ ಎಂದೇ ಅರ್ಥವಾಗುತ್ತದೆ. ಇಹ= ಇಲ್ಲಿ ಬ್ರಹ್ಮನಲ್ಲಿ ಇಲ್ಲ ಎಂದು ಹೇಳಿದರೆ ಎಲ್ಲಿಯೂ ಇಲ್ಲ ಎಂದು ಅರ್ಥವಾಗುವುದಿಲ್ಲ. ತಮ್ಮ ತಮ್ಮ ಉಪಾದಾನಕಾರಣಗಳಲ್ಲಿ ಜಗತ್ತಿನ ನಿಷೇಧವನ್ನು ಈ ವಾಕ್ಯವು ಹೇಳುವುದಿಲ್ಲ. ಘಟದಲ್ಲಿ ಜಲವಿಲ್ಲ ಎಂದು ಹೇಳಿದರೆ ಹೇಗೆ ಘಟಜಲವು ಮಾತ್ರ ನಿಷಿದ್ಧವಾಗುತ್ತದೆ ಬೇರೆ ಸ್ಥಳದಲ್ಲಿ ಜಲವಿಲ್ಲ ಎಂದು

ಅರ್ಥವಾಗುವುದಿಲ್ಲವೋ ಅದರಂತೆ ಬ್ರಹ್ಮನಲ್ಲಿ ಭಿನ್ನವಾದುದು ಇಲ್ಲ ಎಂದು ಹೇಳಿದರೆ ಬೇರೆ ಸ್ಥಳದಲ್ಲಿರುವ ಭಿನ್ನವಸ್ತುವಿಗೆ ನಿಷೇಧವು ಲಬ್ಧವಾಗುವುದಿಲ್ಲ. ಆದ್ದರಿಂದ ಬ್ರಹ್ಮನಲ್ಲಿಯೇ ಪುಸ್ತಕವಾದ ಸರ್ವಜ್ಞತ್ವಾದಿ ಧರ್ಮಗಳಿಗೆ ಬ್ರಹ್ಮನಿಂದ ಭೇದವಿಲ್ಲ ಎಂದೇ ಈ ವಾಕ್ಯವು ಹೇಳುತ್ತದೆ. ಅಥವಾ ಈ ವಾಕ್ಯವನ್ನು 'ನೇಹನಾನಾ', 'ಅಸ್ತಿಕಿಂಚನ' ಎಂದು ಎರಡು ವಾಕ್ಯಗಳಾಗಿ ಪರಿಗಣಿಸಬೇಕು. 'ನೇಹನಾನಾ' ಎಂದರೆ ಬ್ರಹ್ಮನಲ್ಲಿ ಭಿನ್ನವಾದ ರೂಪ, ಗುಣ, ಕ್ರಿಯಾದಿಗಳು ಯಾವುದೂ ಇಲ್ಲ ಎಂದು ಅರ್ಥ. ಹಾಗಾದರೆ ಬ್ರಹ್ಮನ ರೂಪಗಳು ಗುಣಗಳು ಇತ್ಯಾದಿ ಸಂಬಂಧ ವ್ಯವಹಾರ ಮತ್ತು ಬಹುತ್ವವ್ಯವಹಾರವು ಹೇಗೆ ಕೊಡುತ್ತದೆ ಎಂಬ ಪ್ರಶ್ನೆಗೆ 'ಅಸ್ತಿಕಿಂಚನ' ಎಂಬ ವಾಕ್ಯವು ಉತ್ತರವನ್ನು ಹೇಳುತ್ತದೆ. ಕಿಂಚನ ಎಂದರೆ ಒಂದು ಸಣ್ಣ ವಸ್ತುವು ಎಂದರೆ ಭೇದಪ್ರತಿನಿಧಿಯಾದ ವಿಶೇಷವೆಂಬ ವಸ್ತುವು ಅಸ್ತಿ ಇದೆ ಎಂದು. ಹೀಗೆ ಈ ವಾಕ್ಯವೇ ವಿಶೇಷವನ್ನೂ ಸಮರ್ಥನೆ ಮಾಡಿಕೊಡುತ್ತದೆ. ನೀನು ಹೇಳುವಂತೆ ನೇಹನಾನಾಸ್ತಿ ವಾಕ್ಯವು ಜಗತ್ತನ್ನೇ ನಿಷೇಧಮಾಡುವುದಾದರೆ ಆಗ ಜಗತ್ತಿಗೆ ಸ್ವರೂಪೇಣ ತ್ರೈಕಾಲಿಕ ನಿಷೇಧವೇ ಉಂಟಾಗುವುದರಿಂದ ಅಸತ್ವವೇ ಪ್ರಾಪ್ತವಾಗುತ್ತದೆ. ಮಿಥ್ಯಾತ್ವವು ಸಿದ್ಧಿಸುವುದಿಲ್ಲ. ಪಾರಮಾರ್ಥಿಕವಾಗಿ ಮೂರು ಕಾಲದಲ್ಲಿಯೂ ಇಲ್ಲ ಎಂದು ಹೇಳುವುದಾದರೆ ಶ್ರುತಿಯಲ್ಲಿ ಪಾರಮಾರ್ಥಿಕವಾಗಿ ಎಂದು ಹೇಳುವ ಪದವಿಲ್ಲ. ಅಂತಹ ಪದವನ್ನು ಅಧ್ಯಾಹಾರ ಮಾಡುತ್ತೇವೆ ಎಂದು ಹೇಳಿದರೆ ಹಾಗಾದರೆ ಭ್ರಾಂತ್ಯಾ= ಭ್ರಾಂತಿಯಿಂದ ಎಂಬ ಪದವನ್ನು ಅಧ್ಯಾಹಾರಮಾಡು. ದ್ವಿತೀಯವಾದ ಜಗತ್ತು ಭ್ರಾಂತಿಯಿಂದ ಮಾತ್ರ ತ್ರಿಕಾಲದಲ್ಲಿ ಇಲ್ಲವೆಂದು ಹೇಳಿದರೆ ಜಗತ್ತು ಪ್ರಾಮಾಣಿಕವಾಗಿ ಇದೆ ಎಂದು ಸಿದ್ಧವಾಗಿ ಜಗತ್ತು ಉಳಿಯುತ್ತದೆ. ನಿನಗೆ ಭಿಕ್ಷೆಯೂ ದೊರೆಯುತ್ತದೆ. ಆದ್ದರಿಂದ ನಿನ್ನ ಮನಸ್ಸಿಗೆ ಬಂದಂತೆ ನಿನ್ನ ಸಿದ್ಧಾಂತವನ್ನು ಉಳಿಸಲು ಪದಗಳನ್ನು ಅಧ್ಯಾಹಾರ ಮಾಡುವುದಿಲ್ಲ. ಈ ಶ್ರುತಿಯು ಯಾವ ರೀತಿಯಿಂದಲೂ ಮಿಥ್ಯಾತ್ವವನ್ನು ಹೇಳುವುದಿಲ್ಲ.

### 'ಯದೇವೇಹ ತದಮುತ್ರ' ಶ್ರುತ್ಯರ್ಥ :

'ಯದೇವೇಹ ತದಮುತ್ರ ಯದಮುತ್ರ ತದನ್ವಿಹ । ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ' ಎಂಬ ಕಾಠಕಶ್ರುತಿಯನ್ನು ವಿಮರ್ಶೆಮಾಡುತ್ತಾರೆ. ಈ ವಾಕ್ಯವು ವೈಕುಂಠದಲ್ಲಿರುವ ಪರಮಾತ್ಮನ ರೂಪಕ್ಕೂ ಮತ್ತು ಭೂಮಿಯಲ್ಲಿ ಅವತಾರಮಾಡಿದ ರೂಪಗಳಿಗೂ ಅಭೇದವನ್ನು ಹೇಳುತ್ತದೆ.

ಭೇದದರ್ಶನದಿಂದ ಅನರ್ಥವಾಗುವುದೆಂದು ಹೇಳಿ ಭೇದಾಭೇದದರ್ಶನವನ್ನೂ ನಿಂದಿಸುತ್ತದೆ. ಏಕೆಂದರೆ ಭೇದಾಭೇದವನ್ನು ಒಪ್ಪಿದರೂ ಭೇದದಲ್ಲಿಯೂ ಪರ್ಯವಸಾನವಾಗುವುದಷ್ಟೆ? ಭೇದದರ್ಶನದಿಂದ ಏಕೆ ಅನರ್ಥವುಂಟಾಗಗುತ್ತದೆ ಎಂದು ಕಾರಣವನ್ನು ಹೇಳಲು ಮೊದಲನೆಯ ಅರ್ಥದಿಂದ ಅವನರೂಪಗಳಿಗೆ ಅಭೇದವೇ ಇರುವುದರಿಂದ ಭೇದವಿಲ್ಲ ಎಂದು ಹೇಳುತ್ತದೆ. ಭೇದವಿಲ್ಲದ ಸ್ಥಳದಲ್ಲಿ ಭೇದದರ್ಶನವು ಮಿಥ್ಯಾದರ್ಶನವಾದ್ದರಿಂದಲೇ ಶ್ರುತಿಯು ಭೇದದರ್ಶನಕ್ಕೆ ಅನರ್ಥಫಲವನ್ನು ಹೇಳುತ್ತಿದೆ ಎಂದೂ ಸಿದ್ಧವಾಗುತ್ತದೆ. ಆದ್ದರಿಂದ ಭೇದದರ್ಶನ ನಿಂದೆಯು 'ನ ಚ ನಗ್ನಾಂ ಪ್ರಿಯಂ ಕ್ವಚಿತ್' ಎಂಬ ನಗ್ನಸ್ತ್ರೀದರ್ಶನ ನಿಷೇಧ ವಾಕ್ಯದಂತೆ ಪ್ರವೃತ್ತವಾಗಿಲ್ಲ. ನನ್ನ ಸ್ತ್ರೀಯು ಮಿಥ್ಯಾಭೂತವಾದ ವಸ್ತುವಲ್ಲ. ಕಾಮುಕರು ನಗ್ನ ಪರಸ್ತ್ರೀ ದರ್ಶನವನ್ನು ಮಾಡುತ್ತಾರೆ. ಆದ್ದರಿಂದ ಪಾಪಸಾಧನವಾದ್ದರಿಂದ ನಗ್ನಪರಸ್ತ್ರೀದರ್ಶನವು ನಿಂದಿಸಲ್ಪಟ್ಟಿದೆ. ಭೇದದರ್ಶನನಿಂದೆಯು ಹಾಗಲ್ಲ. ಭೇದವು ಮಿಥ್ಯೆಯಾದುದರಿಂದಲೇ ನಿಂದಿಸಲ್ಪಟ್ಟಿದೆ. **'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ'** ಎಂಬ ಮುಂದಿನ ವಾಕ್ಯವೂ ಸಹ ಏವಂ ಎಮ್ಬ ಶಬ್ದದಿಂದ ಪರಮಾತ್ಮನರೂಪಗಳಲ್ಲಿ ಭೇದಚಿಂತನೆಯನ್ನು ಮಾಡುವವನು ಹೇಗೆ ಅಧೋಗತಿಗೆ ಹೋಗುತ್ತಾನೆಯೋ ಎಂದು ಪರಾಮರ್ಶಮಾಡಿ ಅದರಂತೆ ಪರಮಾತ್ಮನ ಧರ್ಮಗಳಲ್ಲಿ ಭೇದಚಿಂತನೆಯನ್ನು ಮಾಡುವವನಿಗೂ ಅಧೋಗತಿಯಾಗುತ್ತದೆ ಎಂದು ಹೇಳುತ್ತದೆ. ಆದ್ದರಿಂದ ಉಪಕ್ರಮ, ಉಪಸಂಹಾರಗಳಿಗೆ ಅನುಗುಣವಾಗಿ ಇಲ್ಲಿ ಪರಮಾತ್ಮನ ರೂಪಗುಣಕ್ರಿಯಾದಿಗಳಲ್ಲಿ ಅಭೇದವೇ ಸಿದ್ಧವಾಗುತ್ತದೆ. ಈ ಶ್ರುತಿಯಲ್ಲಿ ಜೀವೇಶ್ವರಭೇದನಿಷೇಧದ ವಾರ್ತೆಯೇ ಇಲ್ಲ. 'ಈಶಾನೋ ಭೂತಭವ್ಯಸ್ಯ' ಎಂದು ಸರ್ವಜಗತ್ಸ್ವಾಮಿತ್ವವನ್ನು ಹೇಳಿದೆ. 'ತಂ ದೇವಾಃ ಸರ್ವೇ ಅರ್ಪಿತಾ ತದುನಾತ್ಯೇತಿ ಕಶ್ಚನ' ಎಂದು ದೇವತೆಗಳಿಗೂ ಅವನೇ ಆಶ್ರಯನೆಂದೂ ಅವನು ಅವರಿಗಿಂತ ಉತ್ತಮನೆಂದೂ ಹೇಳಲಾಗಿದೆ. **'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾಭವತೀ ಗೌತಮ'** ಎಂದೂ ಮುಕ್ತಜೀವನಿಗೂ ಸಾದೃಶ್ಯ ಮತ್ತು ಭೇದಗಳನ್ನೇ ಹೇಳಿದೆ. ಆದ್ದರಿಂದ ಇಲ್ಲಿ ಜೀವೇಶ್ವರಭೇದವೇ ಸಿದ್ಧವಾಗುತ್ತದೆ. ಮೋಕ್ಷದಲ್ಲಿಯೂ ಜೀವೇಶ್ವರಭೇದವನ್ನು ಹೇಳಿರುವುದರಿಂದ ಭೇದಕ್ಕೆ ಪಾರಮಾರ್ಥಿಕತ್ವವೂ ಸಿದ್ಧವಾಗುತ್ತದೆ.

## 'ಬ್ರಹ್ಮಾಹಮಸ್ಮಿ' ಶ್ರುತ್ಯರ್ಥ :

ಬ್ರಹ್ಮಾಹಮಸ್ಮಿ ಎಂಬ ಯಜುರ್ವೇದದ ಮಂತ್ರದಿಂದಲೂ ಅಭೇದವು ಸಿದ್ಧವಾಗುವುದಿಲ್ಲ. ಬ್ರಹ್ಮ ಎಂಬಲ್ಲಿರುವ ಪ್ರಥಮಾವಿಭಕ್ತಿಯು 'ಸುಪಾಂ ಸುಲುಕ್' ಎಂಬ ಸೂತ್ರದಂತೆ ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳುತ್ತದೆ. ನಾನು ಬ್ರಹ್ಮನಲ್ಲಿದ್ದೇನೆ ಎಂಬ ಸ್ಪಷ್ಟವಾದ ಅರ್ಥವಿರುವಾಗ ಐಕ್ಯಭ್ರಮವನ್ನು ಹೊಂದಬೇಡ. ಐಕ್ಯವನ್ನು ಹೇಳಬೇಕಾದರೆ ಅಹಂ ಮತ್ತು ಬ್ರಹ್ಮ ಈ ಎರಡು ಪದಗಳಿಗೂ ಲಕ್ಷಣಾ ಮಾಡಬೇಕು. ಏಕೆಂದರೆ ಅಹಂ ಎಂಬುದು ಅಲ್ಪಜ್ಞತ್ವ ವಿಶಿಷ್ಟ ಚೇತನ ಮತ್ತು ಬ್ರಹ್ಮ ಎಂಬುದು ಸರ್ವಜ್ಞತ್ವ ವಿಶಿಷ್ಟ ಚೇತನ. ಅವುಗಳಿಗೆ ಐಕ್ಯವು ಕೂಡುವುದಿಲ್ಲ. ನೀನು 'ಸುಪಾಂ ಸುಲುಕ್' ಸೂತ್ರವನ್ನು ಒಪ್ಪದಿದ್ದರೆ ಒಂದೇ ಪದಕ್ಕಾದರೂ ಲಕ್ಷಣಾವನ್ನು ಮಾಡಿ ನಾನು ಬ್ರಹ್ಮಸದೃಶ ಎಂದು ಅರ್ಥವನ್ನು ಹೇಳು. ಎರಡು ಪದಗಳಿಗೆ ಜಘನ್ಯವೃತ್ತಿಯನ್ನು ಅನುಸರಿಸುವುದಕ್ಕಿಂತ ಒಂದು ಪದಕ್ಕೆ ಜಘನ್ಯವೃತ್ತಿಯನ್ನು ಅನುಸರಿಸುವುದು ಮೇಲು. ಇದು ಅಂಗೀಕೃತ್ಯವಾದ. ಏಕೆಂದರೆ ವ್ಯಾಕರಣಸಮ್ಮತಿ ಇರುವುದರಿಂದ ನಮ್ಮ ಪಕ್ಷದಲ್ಲಿ ಯಾವ ಪದಕ್ಕೂ ಲಕ್ಷಣಾವೃತ್ತಿ ಇಲ್ಲ. ಆದ್ದರಿಂದ ಬ್ರಹ್ಮ ಸದೃಶ, ಬ್ರಹ್ಮನಿಂದ ನಿಯಮ್ಯ ಎಂಬ ಅರ್ಥವು ಸಹಜವಾಗಿ ದೊರೆಯುತ್ತದೆ. ಇಲ್ಲದಿದ್ದರೆ **'ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ಪುನಾತುಮಾಮ್'** – ಹಿರಣ್ಯಶೃಂಗನಾದ ವರುಣನಿಗೆ ಶರಣಾಗತನಾಗುತ್ತೇನೆ. ಅವನು ನನ್ನನ್ನು ಪವಿತ್ರೀಕರಿಸಲಿ ಎಂಬ ಪ್ರಾರ್ಥನೆಯು ಸ್ನಾನಮಾಡಿದವನಿಗೆ 'ಗಚ್ಛೇದ್ ಬ್ರಹ್ಮಸರೋಕತಾಮ್' ಎಂದು ಹೇಳಿದ ಬ್ರಹ್ಮಸಾಲೋಕ್ಯರೂಪವಾದ ಫಲವೂ ಮುಖ್ಯೈಕ್ಯವನ್ನು ಅಂಗೀಕರಿಸಿದರೆ ಅನುಪಪನ್ನ ನಾನೇ ಆಗಿದ್ದೇನೆ ಬ್ರಹ್ಮನಲ್ಲ ಎಂಬ ಅರ್ಥವನ್ನೇ ಹೇಳುತ್ತದೆ. ಹಾಗಾದರೆ ಮಧ್ಯೇ ಇರುವ 'ಬ್ರಹ್ಮಾಹಮಸ್ಮಿ' ಎಂಬ ಮೂರು ವಾಕ್ಯಗಳಿಗೆ ಏನು ಅರ್ಥವೆಂದು ಜಿಜ್ಞಾಸೆಯುಂಟಾದರೆ ಬೃಹಿವೃದ್ಧೌ ಎಂದು ಧಾತುವಿರುವುದರಿಂದ ಬ್ರಹ್ಮಶಬ್ದಕ್ಕೆ ವೃದ್ಧನಾಗಿದ್ದೇನೆ, ಬೆಳೆದಿದ್ದೇನೆ, ಪೂರ್ಣನಾಗಿದ್ದೇನೆ ಎಂದು ಅರ್ಥ. **'ಆರ್ದ್ರಂ ಜ್ವಲತಿ ಅಹಮಸ್ಮಿ । ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ'** ಎಂಬ ವಾಕ್ಯಗಳಿವೆ. ಪಾಪದಿಂದ ಆವೃತವಾಗಿದ್ದ ಜೀವಚೈತನ್ಯನಾದ ನಾನು ತೀರ್ಥೋದಕದಿಂದ ಆರ್ದ್ರನಾಗಿ ಜ್ಯೋತಿಯಂತೆ ಬೆಳಗುತ್ತಿದ್ದೇವೆ. ಪೂರ್ಣನಾಗಿದ್ದೇನೆ ಎಂದು ಅರ್ಥ ಜೀವನನ್ನು ಶ್ರುತಿಯು ಜ್ಯೋತಿ, ಬ್ರಹ್ಮ ಎಂಬ ಶಬ್ದಗಳಿಂದಲೇ ಹೇಳುತ್ತದೆ. ಪರಮಾತ್ಮನನ್ನಾದರೂ ಪರಂಜ್ಯೋತಿ, ಪರಬ್ರಹ್ಮಶಬ್ದಗಳಿಂದ ಹೇಳುತ್ತದೆ ಎಂಬುದನ್ನು ಗಮನಿಸಬೇಕು. ಮತ್ತು ಅಹಂ ಶಬ್ದಕ್ಕೆ

ನಿನ್ನ ಮತದಲ್ಲಿ ಆತ್ಮಾ ಎಂದು ಅರ್ಥವಲ್ಲ. ಅದು ಚಿದಚಿತ್ಸಂವಲನರೂಪವಾದ್ದರಿಂದ ಜಡವಾದುದು. ಅದಕ್ಕೆ ಬ್ರಹ್ಮೈಕ್ಯವು ಕೂಡುವುದೇ ಇಲ್ಲ. ಅಹಂಕಾರಾರೋಪಾಧಿಷ್ಠಾನಕ್ಕೂ ಮತ್ತು ಬ್ರಹ್ಮಚೈತನ್ಯಕ್ಕೂ ಅಭೇದವು ಸಿದ್ಧವಾಗಬಹುದೇ ಹೊರತು ಜೀವಬ್ರಹ್ಮಾಭೇದವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಶ್ರುತಿಯೂ ನಿನಗೆ ಇಷ್ಟವಾದ ಅರ್ಥವನ್ನು ಸಾಧಿಸಿ ಕೊಡುವುದಿಲ್ಲ.

ಅದರಂತೆ ಬೃಹದಾರಣ್ಯಕೋಪನಿಷತ್ತಿನಲ್ಲಿ 'ಅಹಂಬ್ರಹ್ಮಾಸ್ಮಿ' ಎಂಬ ವಾಕ್ಯವಿದೆ. ಅದು ಒಂದು ವಾಕ್ಯವಲ್ಲ, ವಾಕ್ಯಖಂಡಮಾತ್ರ ಪೂರ್ಣವಾಕ್ಯವೆಂದರೆ **'ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ ತತ್ ಸರ್ವಮಭವತ್'** ಎಂದು. ಅದರ ಹಿಂದಿನ ವಾಕ್ಯ **'ಕಿಂ ತದ್ ಬ್ರಹ್ಮಾವೇತ್ ಯೇನ ತತ್ ಸರ್ವಮಭವತ್'** ಎಂದು. ಮನುಷ್ಯರು ಪೂರ್ಣನಾದ ಬ್ರಹ್ಮಜ್ಞಾನವನ್ನು ಸಂಪಾದಿಸಿ ತಮಗೆ ಯೋಗ್ಯವಾದ ಪೂರ್ಣತ್ವವನ್ನು ಪಡೆಯುವುದಾದರೆ ಸ್ವತಃ ಪೂರ್ಣನಾದ ಬ್ರಹ್ಮನು ಏನನ್ನು ತಿಳಿದು ಪೂರ್ಣನಾದನು ಎಂದು ಪ್ರಶ್ನೆ. ಬ್ರಹ್ಮನು ತನ್ನನ್ನೇ ತಿಳಿದು ಪೂರ್ಣನಾದನು ಎಂದು ಉತ್ತರ. ಆತ್ಮಾನಮೇವ ಎಂಬ ಅವಧಾರಣೆಯು ಜೀವನನ್ನು ಬ್ರಹ್ಮನೆಂದು ತಿಳಿಯಲಿಲ್ಲ ಎಂದು ಅರ್ಥಾತ್ ಹೇಳುತ್ತದೆ. ಇಂತಹ ವಾಕ್ಯಗಳನ್ನು ಜೀವಬ್ರಹ್ಮಾಭೇದ ಸಾಧನೆಗಾಗಿ ಹೇಳುವವರು ಪೂರ್ವಾಪರಜ್ಞಾನವಿಲ್ಲದವರು ಎಂದು ರಾಜರು ಹೇಳುತ್ತಾರೆ.

## 'ತತ್ತ್ವಮಸಿ' ಶ್ರುತ್ಯರ್ಥ :

**'ಐಕದಾತ್ಮ್ಯಮಿದಂ ಸರ್ವಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'** ಎಂಬುದು ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಬರುವ ವಾಕ್ಯ. ಇದು ಉದ್ದಾಲಕರು ತಮ್ಮ ಪುತ್ರನಾದ ಶ್ವೇತಕೇತುವಿಗೆ ಉಪದೇಶಮಾಡುವ ವಾಕ್ಯ. ಇದು ಉದ್ದಾಲಕರು ತಮ್ಮ ಪುತ್ರನಾದ ಶ್ವೇತಕೇತುವಿಗೆ ಉಪದೇಶಮಾಡುವ ವಾಕ್ಯ. ಹನ್ನೆರಡು ವರ್ಷ ಗುರುಕುಲವಾಸವನ್ನು ಮಾಡಿ ಅಧ್ಯಯನಸಂಪನ್ನನಾಗಿ ಮಹಾಮೇಧಾವಿಯಾಗಿ ತನ್ನನ್ನೇ ದೇವಕಾಂಶವೆಂದು ತಿಳಿದುಕೊಂಡಿದ್ದು ಸ್ತಬ್ಧನಾಗಿರುವ ಶ್ವೇತಕೇತುವಿಗೆ ಅವನ ಸ್ತಬ್ಧತೆಯನ್ನು ಪರಿಹಾರಮಾಡಲು ಮಾಡುವ ಉಪದೇಶ. ಅವನನ್ನು ಕುರಿತು ನೀನೇ ಬ್ರಹ್ಮ ಎಂದು ಉಪದೇಶಮಾಡಿದರೆ ಎಂದು ಉಪದೇಶಿಸುವುದೇ ಯುಕ್ತವಾಗಿದೆ. ಆದ್ದರಿಂದ ಸ ಆತ್ಮಾ ತತ್ತ್ವಮಸಿ ಎಂಬಲ್ಲಿ ಸ ಆತ್ಮಾ ಅತತ್ ಎಂದು ಎರಡು ರೀತಿಯೂ

ಪದಚ್ಛೇದವು ಕೂಡುವುದರಿಂದ ಅಸತ್ ಎಂದೇ ಏಕೆ ಮಾಡಬೇಕು ಎಂಬ ಪ್ರಶ್ನೆಬರುತ್ತದೆ. 'ಶಬ್ದೋ ನಿತ್ಯಃ ಘಟವತ್' ಎಂಬ ವಾಕ್ಯದಲ್ಲಿ 'ಶಬ್ದಃ ನಿತ್ಯಃ', 'ಶಬ್ದಃ ಅನಿತ್ಯಃ' ಎಂದು ಎರಡು ರೀತಿಯಲ್ಲಿ ಪದಚ್ಛೇದ ಮಾಡಲು ಬಂದರೂ ಘಟದ ದೃಷ್ಟಾಂತವನ್ನು ಕೊಟ್ಟಿರುವುದರಿಂದ ಅದು ಅನಿತ್ಯವಾಗಿರುವುದರಿಂದ ಶಬ್ದಃ ಅನಿತ್ಯಃ ಎಂದು ಹೇಗೆ ಪದಚ್ಛೇದಮಾಡುತ್ತೇವೆಯೋ ಅದರಂತೆ ಇಲ್ಲಿಯು ಶಕುನಿಸೂತ್ರಾದಿ ಒಮ್ಬತ್ತು ಭೇದಪರವಾದ ದೃಷ್ಟಾಂತಗಳನ್ನೇ ಕೊಟ್ಟಿರುವುದರಿಂದ ಅತತ್ ಎಂದೇ ಪದಚ್ಛೇದಮಾಡಬೇಕು.

ಇನ್ನು ಆತ್ಮಾತತ್ ಎಂದು ಪದಚ್ಛೇದಮಾಡಿದರೂ ಅದರಿಂದ ಅಭೇದವು ಸಿದ್ಧವಾಗುವುದಿಲ್ಲ. ಅಗ್ನಿರ್ಮಾಣವಕಃ, ಸಿಂಹೋ ದೇವದತ್ತಃ ಎಂಬ ವಾಕ್ಯಗಳಿಂದ ಹೇಗೆ ಅಭೇದವು ಸಿದ್ಧವಾಗುವುದಿಲ್ಲವೋ ಅಗ್ನಿಸದೃಶ, ಸಿಂಹಸದೃಶ ಎಂಬ ಅರ್ಥವೇ ಸಿದ್ಧವಾಗುತ್ತದೆಯೋ ಅದರಂತೆ ಇಲ್ಲಿಯೂ ಬ್ರಹ್ಮಸದೃಶ ಎಂಬ ಅರ್ಥವೇ ಸಿದ್ಧವಾಗುತ್ತದೆ. ನಾನು ಸರ್ವಜ್ಞನಲ್ಲ, ನಾನು ನಿರ್ದುಃಖನಲ್ಲಿ ಎಂಬ ಪ್ರತ್ಯಕ್ಷವು ಎಲ್ಲರಿಗೂ ಇರುವಂತೆ ಶ್ವೇತಕೇತುವಿಗೆ. ಬ್ರಹ್ಮನಲ್ಲದ ನನ್ನನ್ನು ಬ್ರಹ್ಮ ಎಂದು ಗುರುವು ಏಕೆ ಹೇಳುತ್ತಿದ್ದಾನೆ? ನನಗೆ ಉಪದೇಶ ಮಾಡಿದ ತನ್ನನ್ನು ಬ್ರಹ್ಮನೆಂದು ಹೇಳದೆ ನನ್ನನ್ನು ಬ್ರಹ್ಮನೆಂದು ಏಕೆ ಹೇಳುತ್ತಿದ್ದಾನೆ? ಈ ರೀತಿ ಚಿಂತನೆಯನ್ನು ಮಾಡಿದ ಶ್ವೇತಕೇತುವು ಬ್ರಹ್ಮನ ಗುಣಗಳಿಗೆ ಸದೃಶವಾದ ಗುಣಗಳು ನನ್ನಲ್ಲಿರುವ ಕಾರಣದಿಂದಲೇ ಹೀಗೆ ಹೇಳುತ್ತಿದ್ದಾನೆ ಎಂದು ಆಲೋಚಿಸಿ ಬ್ರಹ್ಮನ ಸಾದೃಶ್ಯವನ್ನೇ ತಿಳಿಯುತ್ತಾನೆಯೇ ಹೊರತು ತನ್ನಲ್ಲಿ ಬ್ರಹ್ಮನ ಅಭೇದವನ್ನು ತಿಳಿಯುವುದಿಲ್ಲ.

ಈ ಉಪದೇಶವು 'ಸ್ವಪ್ನಾಂತಂ ಯೇ ಸೌಮ್ಯ ವಿಜಾನೀಹಿ' – ಪ್ರೀತಿಪಾತ್ರನೇ ಸುಷುಪ್ತಿಯ ಅವಸ್ಥೆಯನ್ನು ಗಮನಿಸು ಎಂದು ಪ್ರಾರಂಭವಾಗುತ್ತದೆ. 'ಯತ್ರಾಯಂ ಪುರುಷಃ ಸ್ವಪಿತಿ ನಾಮ ಸತಾಸೌಮ್ಯ ತದಾ ಸಂಪನ್ನೋ ಭವತಿ' – ಜೀವನು ಸುಷುಪ್ತ್ಯವಸ್ಥೆಯಲ್ಲಿ ಸನ್ನಾಮಕನಾದ ಬ್ರಹ್ಮನ ಸಂಪತ್ತಿಯನ್ನು ಪಡೆಯುತ್ತಾನೆ; ಎಂದು ಸುಷುಪ್ತಿಯಲ್ಲಿ ಬ್ರಹ್ಮನ ಪ್ರಾಪ್ತಿಯನ್ನೇ ಹೇಳುತ್ತದೆಯೋ ಹೊರತು ಅಭೇದವನ್ನು ಹೇಳುವುದಿಲ್ಲ. ಇನ್ನೊಂದು ಶ್ರುತಿಯು 'ಪ್ರಾಜ್ಞೆನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ ನಾಂತರಂ' ಎಂದು ಸುಪ್ತಿಯಲ್ಲಿ ಭಗವಂತನ ಆಲಿಂಗನವನ್ನೇ ಹೇಳುತ್ತದೆ. ಆಲಿಂಗನವು ಇಬ್ಬರಿಗೇ ಇರಬೇಕಾದ್ದರಿಂದ ಸುಪ್ತಿಯ ಸ್ಥಿತಿಯಲ್ಲಿಯೂ ಜೀವಪರಮಾತ್ಮರ ಭೇದವನ್ನೇ ಮೊದಲು ಉಪದೇಶಿಸುತ್ತದೆ.

ಅನಂತರ ಉಪನಿಷತ್ತು ಶಕುನಿಸೂತ್ರ, ಮಧು ಮಧುಕೃತ್, ನದೀಸಮುದ್ರ, ಅಣಿಮಧಾನಾ, ಲವಣಲವಣ ರಸ, ಸ್ತೇನಾಪಹಾರ್ಯ, ಗಾಂಧಾರ ಪುರುಷ ಮೊದಲಾದ ಒಂಬತ್ತು ದೃಷ್ಟಾಂತಗಳನ್ನು ಹೇಳಿ ಭೇದವನ್ನು ಸಮರ್ಥಿಸುತ್ತದೆ. ಎಲ್ಲ ಸ್ಥಳಗಳಲ್ಲಿಯೂ ಭೇದವು ಸ್ಪಷ್ಟವಾಗಿ ಕಾಣುತ್ತದೆ. ಮಧು ದೃಷ್ಟಾಂತದಲ್ಲಿ ರಸಗಳಿಗೆ 'ಏಕತಾ' – ಎಂದರೆ ಐಕ್ಯವುಂಟಾಗುವುದೆಂಬ ಅರ್ಥವು ಬರುವ ಶಬ್ದವಿದೆ. ಆದರೆ ನಾನಾಪುಷ್ಪ ರಸಗಳಿಗೆ ಮಿಶ್ರಣವೇ ಹೊರತು ಏಕತೆಯಿಲ್ಲ. ಏಕತೆಯೇ ಇದ್ದಿದ್ದರೆ ಮೊದಲಿನ ಪುಷ್ಪರಸಕ್ಕೆ ಬೇರೆ ಎಷ್ಟು ರಸಗಳನ್ನು ತಂದು ಸೇರಿಸಿದರೂ ಅದರ ಪರಿಮಾಣ ಮೊದಲಿನ ಪುಷ್ಪರಸದಷ್ಟೇ ಇರಬೇಕಾಗಿದ್ದಿತು. ಆದರೆ ಹಾಗೆ ಇರುವುದಿಲ್ಲ. ಮಧುವು ವೃದ್ಧಿಯಾಗಿ ಜೇನುಗೂಡಿನಲ್ಲಿ ತುಂಬಿಕೊಳ್ಳುತ್ತದೆ. ಆದ್ದರಿಂದ ಇದು ಅಭೇದಕ್ಕೆ ದೃಷ್ಟಾಂತವಲ್ಲ. ನದೀಸಮುದ್ರ ದೃಷ್ಟಾಂತದಲ್ಲಿಯೂ ನದಿಗಳು ಸಮುದ್ರವಾಗುವುದಿಲ್ಲ. ನದಿಯ ನೀರು ಬೇರೆ ಸಮುದ್ರದ ನೀರು ಬೇರೆ. ಅವುಗಳಿಗೆ ಮಿಶ್ರಣವಾಗುತ್ತದೆಯೇ ಹೊರತು ಅಭೇದವುಂಟಾಗುವುದಿಲ್ಲ. ಅಥವಾ ಸಮುದ್ರವೆಂದರೆ ಒಂದು ದೊಡ್ಡ ಹಳ್ಳ. ಎಲ್ಲಾ ನದಿಗಳ ನೀರುಗಳೂ ಹೋಗಿ ಆ ಹಳ್ಳದಲ್ಲಿ ಸೇರುತ್ತವೆ. 'ಸ ಸಮುದ್ರ ಏವ ಭವತಿ' ಎಂಬ ವಾಕ್ಯಕ್ಕೆ ಸಮುದ್ರವು ಸಮುದ್ರವಾಗಿಯೇ ಇರುತ್ತದೆ ಎಂದು ಅರ್ಥ ನದಿಗಳು ಸಮುದ್ರವಾಗುತ್ತದೆ ಎಂದು ಅರ್ಥವಲ್ಲ. ಹಾಗೆ ಅರ್ಥವು ಅಭಿಪ್ರೇತವಾಗಿದ್ದರೆ 'ತಾಃ ಸಮುದ್ರ ಏವ ಭವಂತಿ' ಎದು ಉಪನಿಷದ್ವಾಕ್ಯವಿರಬೇಕಾಗಿದ್ದಿತು. ಲೌಕಿಕರೂ ಸಹ ಈಗಲೂ ಗಂಗಾಸಾಗರ ಸಂಗಮವೆಂದು ಹೇಳುತ್ತಾರೆ, ಗಂಗಾಸಾಗರೈಕ್ಯವೆಂದು ಹೇಳುವುದಿಲ್ಲ. ದಧೀಚಿ ಋಷಿಗಳು ಸ್ನಾನವನ್ನು ಮಾಡಲು ದೇವತೆಗಳು ಎಲ್ಲಾ ನದಿಗಳ ಜಲವನ್ನು ತಂದು ಹಾಕಿ ಮಾಡಿದ ತೀರ್ಥಕ್ಕೆ ಇಂದಿಗೂ ಮಿಶ್ರಕತೀರ್ಥವೆಂದು ಹೆಸರಿದೆ. ಮಹಾಭಾರತದಲ್ಲಿಯೂ ಇದರ ಉಲ್ಲೇಖವಿದೆ. 'ಸಿತಾಸಿತೇ ಸರಿತಾಮತ್ರ ಸಂಗತೇ' ಎಂದು ವೇದವೂ ಗಂಗಾಯಮುನೆಯರ ಸಂಗಮವನ್ನು ಹೇಳುತ್ತದೆಯೇ ಹೊರತು ಐಕ್ಯವನ್ನು ಹೇಳುವುದಿಲ್ಲ. ಮತ್ತು ಇಲ್ಲಿನ ಸುಪ್ತಿಮೊದಲಾದ ದೃಷ್ಟಾಂತಗಳಲ್ಲಿ '**ಸತ ಆಗಮ್ಯ ನ ವಿದುಃ, ಸತಿ ಸಂಪದ್ಯ ನ ವಿದುಃ, ತ ಇಹ ಮೃತೋ ವಾ ವ್ಯಾಘ್ರೋವಾ ದಂಶವೋ ಪತಂಗೋವಾ ಮಶಕೋವಾ ಯದ್ಯದ್ ಭವತಿ ತತ್ತದಾ ಭವಂತಿ**' ಎಂದು ಭೇದಜ್ಞಾನವಿಲ್ಲದ ಕಾರಣದಿಂದಾಗಿ ಜೀವರಿಗೆ ನಾನಾ ನೀಚಯೋನಿಗಳು ಬರುತ್ತದೆಂದು ಹೇಳುತ್ತದೆ. ಆದ್ದರಿಂದಲೂ ಇಲ್ಲಿ ಶ್ರುತಿಯ ತಾತ್ಪರ್ಯವಿಷಯವಾದದ್ದು ಭೇದವೆಂದೇ ತಿಳಿಯುತ್ತದೆ. ಆದ್ದರಿಂದ ನೀವು ಮಹಾವಾಕ್ಯವೆಂದು ಪರಿಗಣಿಸುವ

ತತ್ತ್ವಮಸಿವಾಕ್ಯವೂ ಸಹ ನಿಮಗೆ ಪ್ರತಿಕೂಲವಾಗಿಯೇ ಇದೆ ವಿಸ್ತಾರವಾಗಿ ಪ್ರತಿಪಾದನೆ ಮಾಡಿದ್ದಾರೆ.

ಇದರಂತೆ ಯೋಸಾವಸೌ ಸೋಹಮಸ್ಮಿ, ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋ ಹಮಿತಿ, ಮೊದಲಾದ ಭೇದನಿಷೇಧ ಪರವಾಗಿ ಕಾಣುವ ಎಲ್ಲ ಶ್ರುತಿಗಳನ್ನೂ ವಿಚಾರಮಾಡಿ ಅವೆಲ್ಲವೂ ಭೇದವನ್ನೇ ಸಮರ್ಥನೆಮಾಡುತ್ತದೆ ಎಂದು ಪ್ರತಿಪಾದಿಸಿ ಇದು ಪರವಾದಿಗಳ ಹಸ್ತದಿಂದ ಅವರಿಗೆ ಪ್ರಿಯವಾದ ಆಯುಧವನ್ನು ಕಸಿದುಕೊಂಡು ಅವರನ್ನೇ ಹೊಡೆಯುವ ಕೌಶಲವೆಂದು ಹೇಳಿದ್ದಾರೆ. ಯುದ್ಧದಲ್ಲಿ ಶತ್ರುವಿನ ಆಯುಧವನ್ನು ತೆಗೆದುಕೊಂಡು ಶತ್ರುವನ್ನೇ ಹೊಡೆಯುವುದು ಹೇಗೆ ಕೌಶಲವೋ ಹಾಗೆ ಪರವಾದಿಗಳಿಗೆ ಅಭಿಮತವಾದ ವಾಕ್ಯಗಳಿಂದಲೇ ಪರವಾದಿಗಳನ್ನು ನಿರಾಕರಿಸುವುದು ಶ್ರೀಮಧ್ವಾಚಾರ್ಯರ ಶಿಷ್ಯರಾದ ತಮ್ಮ ಕೌಶಲವೆಂದು ಹೇಳಿದ್ದಾರೆ.

ಒಂದುಪಕ್ಷ ನೀವು ಹೇಳುವಂತೆ ಶ್ವೇತಕೇತುವಿಗೆ ಈ ವಾಕ್ಯಗಳು ಬ್ರಹ್ಮಾಭೇದವನ್ನು ಹೇಳುತ್ತವೆಂದು ಅಂಗೀಕರಿಸಿದರೂ ನಿಮಗೆ ಅಭಿಮತವಾದ ಎಲ್ಲಾ ಜೀವರಿಗೆ ಬ್ರಹ್ಮಾಭೇದವನ್ನು ಹೇಳುವ ಯಾವ ವಾಕ್ಯವೂ ಯಾವ ವೇದದಲ್ಲಿಯೂ ಸಿಗುವುದಿಲ್ಲ ಎಂದು ಹೇಳಿದ್ದಾರೆ.

## 'ದ್ವಾಸುಪರ್ಣಾ' ಶ್ರುತ್ಯರ್ಥ :

**'ದ್ವಾಸುಪರ್ಣಾ ಸುಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋ ರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ'** ಎನ್ನುವುದು ಅಥರ್ವಣೋಪನಿಷತ್ತಿನ ಮಂತ್ರ. ದೇಹವೆಂಬ ಒಂದೇ ಅಶ್ವತ್ಥವೃಕ್ಷದಲ್ಲಿ ಸ್ನೇಹಿತರೂ, ಜೊತೆಯಲ್ಲಿಯೇ ಇರುವವರೂ ಆದ ಜೀವ ಮತ್ತು ಪರಮಾತ್ಮ ಎಂಬ ಎರಡು ಹಕ್ಕಿಗಳು ಪರಸ್ಪರವಾಗಿ ಆಲಿಂಗನವನ್ನು ಮಾಡಿಕೊಂಡಿದೆ. ಅವುಗಳ ಮಧ್ಯೆ ಬ್ರಹ್ಮಾಭಿನ್ನವಾದ ಜೀವವೆಂಬ ಹಕ್ಕಿಯು ಪುಣ್ಯಪಾಪ ಕರ್ಮಗಳಿಂದುಂಬಾದ ಸುಖದುಃಖರೂಪವಾದ ಫಲವನ್ನು ಉಣ್ಣುತ್ತಾನೆ. ಜೀವನಿಂದ ಭಿನ್ನವಾದ ಪರಮಾತ್ಮನೆಂಬ ದೊಡ್ಡ ಹಕ್ಕಿಯಾದರೋ ಉಣ್ಣದೆಯೇ ಸರ್ವತಃ ಪ್ರಕಾಶಮಾನನಾಗಿ ಮಹಾಪ್ರಭುವಾಗಿದ್ದಾನೆ ಎಂದು ಹೇಳುವ ಈ ಶ್ರುತಿಯು ಜೀವಪರಮಾತ್ಮರಿಗೆ ಸಯುಕ್ತಿಕವಾಗಿ ಭೇದವನ್ನು ಪ್ರತಿಪಾದಿಸುತ್ತದೆ. ಇದು ನಿರವಕಾಶ ಶ್ರುತಿ. ಇದನ್ನು ಯಾರು ಮಾನ್ಯಮಾಡುವುದಿಲ್ಲ? ಈ ಶ್ರುತಿಯು

ಮೊದಲು ದ್ವಾ ಎಂದು ಭೇದವ್ಯಾಪ್ತವಾದ ಜೀವೇಶ್ವರರ ದ್ವಿತ್ವವನ್ನು ಹೇಳಿ, ಅನಂತರ ಅಶನ-ಅನಶನರೂಪವಾದ ವಿರುದ್ಧ ಧರ್ಮಾಧಿಕರಣತ್ವವನ್ನು ಹೇಳಿ ಭೇದವನ್ನು ಸಮರ್ಥಿಸುತ್ತದೆ. ಅನಂತರ ಅನ್ಯಃ, ಅನ್ಯಃ ಎಂದು ಎರಡು ಬಾರಿ ಹೇಳಿ ಸ್ಪಷ್ಟವಾಗಿ ಜೀವೇಶ್ವರಭೇದವನ್ನು ಸ್ಥಾಪಿಸುತ್ತದೆ. ಆದ್ದರಿಂದ ಭೇದದ ವಿಷಯದಲ್ಲಿ ಅಭ್ಯಾಸ ಮತ್ತು ಉಪಪತ್ತಿರೂಪವಾದ ತಾತ್ಪರ್ಯಲಿಂಗಗಳಿರುವುದರಿಂದ ಈ ಶ್ರುತಿಯು ಪ್ರಬಲವಾಗಿದೆ. ಐಕ್ಯಶ್ರುತಿಯು ದುರ್ಬಲವಾಗಿರುವ ಕಾರಣ ಅದಕ್ಕೇ ಅರ್ಥಾಂತರವನ್ನು ಹೇಳಬೇಕು. ಒಬ್ಬನೇ ಬ್ರಹ್ಮನಿಗೆ ಪಾರಮಾರ್ಥಿಕವಾಗಿ ಅನಶನ, ವ್ಯಾವಹಾರಿಕವಾಗಿ ಅಶನ ಎಂಬ ನಿನ್ನ ಶಂಕಾಪಿಶಾಚಿಯನ್ನು ಓಡಿಸು. ಶ್ರುತಿಯು ಒಬ್ಬನಿಗೇ ಅಶನ-ಅನಶನಗಳು ಹೇಳಿದ್ದರೆ. ಈ ಶಂಕೆಯನ್ನು ಮಾಡಬಹುದಾಗಿದ್ದಿತು. ಆದರೆ ತಯೋರನ್ಯಃ, ಅನಶ್ನನ್ನನ್ಯಃ ಎಂದು ಸ್ಪಷ್ಟವಾಗಿ ಭಿನ್ನ-ಭಿನ್ನರಿಗೇ ಅಶನ-ಅನಶನಗಳನ್ನು ಹೇಳಿರುವುದರಿಂದ ನಿನ್ನ ಶಂಕೆಗೆ ಕಾರಣವೇ ಇಲ್ಲ. ತಯೋರನ್ಯಃ ಎಂಬಲ್ಲಿ ಶ್ರುತಿಯು ಜೀವಧರ್ಮಿಕಭೇದವನ್ನೂ ಅನಶ್ನನ್ನನ್ಯಃ ಎಂಬಲ್ಲಿ ಈಶ್ವರ ಧರ್ಮಿಕವಾದ ಭೇದವನ್ನೂ ಹೇಳುತ್ತಿದೆ. ಶ್ರುತಿಯು ಜೀವನಿಗೆ ಸ್ಪಷ್ಟವಾಗಿ ಹೇಳಿದ ಅಶನವನ್ನು ಮಿಥ್ಯಾ ಎಂದು ಹೇಳಿ ಜೀವರಿಗೆ ಹೇಳದಿದ್ದ ಅನಶನವನ್ನು ಪಾರಮಾರ್ಥಿಕ ಎಂದು ನಿನ್ನನ್ನು ಬಿಟ್ಟು ಬೇರೆ ಯಾರು ಹೇಳುತ್ತಾರೆ? ಹೀಗೆ ವಿರುದ್ಧ ಧರ್ಮಗಳಲ್ಲಿ ಒಂದಕ್ಕೆ ಪಾರಮಾರ್ಥಿಕತ್ವವನ್ನೂ ಇನ್ನೊಂದಕ್ಕೆ ಅಪಾರಮಾರ್ಥಿಕತ್ವವನ್ನೂ ಹೇಳಿ ವಿರೋಧವನ್ನು ಪರಿಹಾರ ಮಾಡುವುದಾದರೆ ವ್ಯಾಹತಿ ಎಂಬ ವಚನದೋಷವೇ ಉಚ್ಛಿನ್ನವಾಗುತ್ತದೆ. 'ಮೇ ಮಾತಾ ವಂಧ್ಯಾ' ಎಂಬಲ್ಲಿಯೂ ಮಾತೃತ್ವವು ವ್ಯಾವಹಾರಿಕ, ವಂಧ್ಯಾತ್ವವು ಪಾರಮಾರ್ಥಿಕ ಎಂದು ಹೇಳಿ ವಿರೋಧವನ್ನು ಪರಿಹಾರಮಾಡಬಹುದು. ಹೀಗೆ ಭಾವಾಭಾವಗಳಿಗೆ ವಿರೋಧವೇ ಇಲ್ಲದಿದ್ದರೆ ನೀನು ಭಾವರೂಪವಾದ ಅಜ್ಞಾನವನ್ನು ಹೇಗೆ ಸಮರ್ಥಿಸುತ್ತೀಯೆ? ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನವು ಕಾರಣ, ಪ್ರತಿಯೋಗಿಜ್ಞಾನವೇ ಇರುವಾಗ ಜ್ಞಾನಸಾಮಾನ್ಯಾಭಾವರೂಪವಾದ ಅಜ್ಞಾನದ ಜ್ಞಾನವು ಬರಲು ಸಾಧ್ಯವಿಲ್ಲವೆಂದಷ್ಟೇ ನೀನು ಭಾವರೂಪವಾದ ಅಜ್ಞಾನವನ್ನು ಸಾಧಿಸುತ್ತೀಯೆ. ಆದ್ದರಿಂದ ನೀನೂ ಸಹ ಭಾವಾಭಾವವಿರೋಧವನ್ನು ಹೇಳಬೇಕು. ಇಲ್ಲದಿದ್ದರೆ ಜಗತ್ತಿಗೆ ಏಕಕಾಲದಲ್ಲಿ ಸತ್ತ್ವಾಸತ್ತ್ವಗಳು ಉಪಪನ್ನವಾಗುವುದರಿಂದ ನೀನು ಸದಸದ್ವಿಲಕ್ಷಣತ್ವರೂಪವಾದ ಮಿಥ್ಯಾತ್ವವನ್ನು ಅಂಗೀಕಾರ ಮಾಡುವ ಪ್ರಸಂಗವೇ ಇಲ್ಲವೆಂದಾಗುತ್ತದೆ. ವಾಕ್ಯಾರ್ಥದಲ್ಲಿ ಅನುಪಪತ್ತಿ ಇದ್ದರೆ ಮಾತ್ರ

ಒಂದುಪಕ್ಷವನ್ನೋ ಅವಾಂತರವಾಕ್ಯವನ್ನೋ ಅಧ್ಯಾಹಾರ ಮಾಡಿ ವಿರೋಧವನ್ನು ಪರಿಹರಿಸಬೇಕು. ಇಲ್ಲಿ ವಾಕ್ಯಾರ್ಥದಲ್ಲಿ ಯಾವ ಅನುಪಪತ್ತಿಯೂ ಇಲ್ಲ. ಮುಕ್ತನಿಗೂ ಸಹ ಶ್ರುತಿಯು 'ಸೋಶ್ನುತೇ ಸರ್ವಾನ್ ಕಾಮಾನ್' ಎಂದು ಶ್ರುತಿಯು ಅಶನವನ್ನೇ ಹೇಳುತ್ತದೆ. ಆದ್ದರಿಂದ ಮೋಕ್ಷದಲ್ಲಿರುವ ಅಶನವು ಹೇಗೆ ಅಪಾರಮಾರ್ಥಿಕವಾಗುತ್ತದೆ? ಆದ್ದರಿಂದ ಯಥಾಶ್ರುತಾರ್ಥದಲ್ಲಿ ಯಾವ ಅನುಪಪತ್ತಿಯೂ ಇಲ್ಲದಿರುವುದರಿಂದ ಇಲ್ಲಿ ಅಪಾರಮಾರ್ಥಿಕವಾಗಿ ಅಶನ ಎಂದು ಅಧ್ಯಾಹಾರ ಮಾಡಬೇಕಾದ ಅವಶ್ಯಕತೆ ಇಲ್ಲ. ಆದ್ದರಿಂದ ಈ ಶ್ರುತಿಯು ಸ್ಪಷ್ಟವಾಗಿ ಜೀವೇಶ್ವರ ಭೇದವನ್ನು ಸಾಧಿಸುತ್ತದೆ ಎಂದು ಉಪಪಾದನೆ ಮಾಡುತ್ತಾರೆ.

## 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' - ಶ್ರುತ್ಯರ್ಥ :

**'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರ ಮೀಶಂ ಪುರುಷಂ ಬ್ರಹ್ಮಯೋನಿಮ್। ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯುಮುಪೈತಿ'** ಎಂಬುದೂ ಅಥರ್ವಣೋಪನಿಷತ್ತಿನ ಒಂದು ಮಂತ್ರ. ಯಾವಾದ ಜೀವನು ಸುವರ್ಣವರ್ಣನಾದ ಜಗತ್ಕರ್ತನಾದ ಬ್ರಹ್ಮದೇವರ ತಂದೆಯಾದ ಪ್ರಭುವಾದ ಪರಮಾತ್ಮನನ್ನು ನೋಡುತ್ತಾನೆಯೋ ಆಗ ಅವನು ಅಜ್ಞಾನರೂಪವಾದ ಅಂಜನವನ್ನು ತೊರೆದು ಸಕಲ ಕರ್ಮಗಳನ್ನು ದೂರ ಎಸೆದು ಪರಮಾತ್ಮನ ಪರಮಸಾಮ್ಯವನ್ನು ಹೊಂದುತ್ತಾನೆ ಎಂದು ಅರ್ಥ. ಇಲ್ಲಿ ಕರ್ತೃತ್ವ, ಈಶತ್ವ, ಪುರುಷತ್ವ (ಪೂರ್ಣಷಡ್ಗುಣತ್ವ) ಬ್ರಹ್ಮಪಿತೃತ್ವ ಮೊದಲಾದ ಜೀವಧರ್ಮವಿರುದ್ಧವಾದ ಧರ್ಮಗಳನ್ನೇ ಹೇಳಿ ಇಂತಹ ಭೇದಕಧರ್ಮಪ್ರಯುಕ್ತವಾದ ಭೇದವುಳ್ಳ ಪರಮಾತ್ಮನ ಸಾಕ್ಷಾತ್ಕಾರದಿಂದಲೇ ಅಜ್ಞಾನನಾಶ, ಪುಣ್ಯಪಾಪಕ್ಷಯ, ಪರಮಸಾಮ್ಯರೂಪವಾದ ಮಹಾಮೋಕ್ಷವನ್ನು ಹೇಳುತ್ತಿದೆ. ಅಂತಹ ಆಕಾರಸಹಿತನಾದ, ವರ್ಣ (ಬಣ್ಣ) ಸಹಿತನಾದ ಪರಮಾತ್ಮನ ಸಾಕ್ಷಾತ್ಕಾರವು ಭೇದಸಾಕ್ಷಾತ್ಕಾರವೇ ಅಲ್ಲವೇ? ಯದಾ-ತದಾ ಎಂಬ ಶಬ್ದಗಳು ಯಾವಾಗ ಅಂತಹ ಸಾಕ್ಷಾತ್ಕಾರವನ್ನು ಪಡೆಯುತ್ತಾನೆಯೋ ಆಗ ಮೋಕ್ಷವನ್ನು ಪಡೆಯುತ್ತಾನೆ ಎಂದು ಹೇಳುವುದರಿಂದ ಸಾಕ್ಷಾತ್ಕಾರಕ್ಕೂ ಮತ್ತು ಮೋಕ್ಷಕ್ಕೂ ಮಧ್ಯೆ ವ್ಯವಧಾನವಿಲ್ಲವೆಂದೂ ಆದ್ದರಿಂದಲೇ ಸಾಕ್ಷಾತ್ಕಾರಕ್ಕೆ ವಿಷಯವಾದುದು ಮಹಾಮೋಕ್ಷಕ್ಕೆ ಉಪಯೋಗಿ ಎಂದೂ ತಿಳಿಯುತ್ತದೆ. ಆದ್ದರಿಂದ ಸಾಕಾರತ್ವಸುವರ್ಣತ್ವಾದಿ ಎಲ್ಲಾ ಧರ್ಮಗಳೂ ಮತ್ತು ಪರಮಾತ್ಮಧರ್ಮಿಕವಾದ

ಭೇದವೂ ಅಬಾಧ್ಯವೆಂದು ಸಿದ್ಧವಾಗುತ್ತದೆ. ಮೋಕ್ಷದಲ್ಲಿಯೂ ಸಾಮ್ಯವನ್ನೇ ಹೇಳಿರುವುದರಿಂದ ಸಾಮ್ಯವು ಎರಡು ವಸ್ತುಗಳಿಗೇ ಇರಲು ಸಾಧ್ಯವಾದ್ದರಿಂದ ಮೋಕ್ಷದಲ್ಲಿಯೂ ಭೇದವು ಸಿದ್ಧವಾಗುತ್ತದೆ. ಮೋಕ್ಷದಲ್ಲಿ ಯಾವ ಅಜ್ಞಾನಕಾರ್ಯವೂ ಇಲ್ಲದಿರುವುದರಿಂದ ಮೋಕ್ಷದಲ್ಲಿರುವ ಭೇದವು ಪಾರಮಾರ್ಥಿಕವೆಂದೂ ಸಿದ್ಧವಾಗುತ್ತದೆ.

## ಖಂಡನಕಾರನ ನಿರಾಕರಣೆ :

ಖಂಡನಕಾರರು ಎಲ್ಲಾ ಭೇದವನ್ನೂ ನಿರಾಕರಿಸುತ್ತಾನೆ. ಅದು ಈ ರೀತಿ. ಭೇದವು ಧರ್ಮಿಗಿಂತ ಭಿನ್ನವೋ ಅಭಿನ್ನವೋ ಅಥವಾ ಭಿನ್ನಾಭಿನ್ನವೋ? ಧರ್ಮಿಗಿಂತ ಭೇದವು ಭಿನ್ನವಾದರೆ ಧರ್ಮಿ ಮತ್ತು ಭೇದಗಳ ಮಧ್ಯದಲ್ಲಿ ಇನ್ನೊಂದು ಭೇದವನ್ನು ಒಪ್ಪಬೇಕು. ಅದೂ ಸಮಾನನ್ಯಾಯದಿಂದ ಧರ್ಮಿಗಿಂತ ಭಿನ್ನವಾಗಿರಬೇಕು. ಆಗ ಧರ್ಮಿ ಮತ್ತು ಆ ಭೇದಗಳ ಮಧ್ಯೆ ಇನ್ನೊಂದು ಭೇದವನ್ನು (ಮೊದಲಿನ ಭೇದದಿಂದ ಮೂರನೆಯ ಭೇದವನ್ನು) ಒಪ್ಪಬೇಕಾಗುತ್ತದೆ. ಈ ಭೇದಪರಂಪರೆಗೆ ಪರ್ಯವಸಾನವಿಲ್ಲದಿರುವುದರಿಂದ ಅನವಸ್ಥಾದೋಷವು ಬರುತ್ತದೆ. ಭೇದವು ಧರ್ಮಿಯಿಂದ ಅಭಿನ್ನವೆಂದು ಹೇಳಿದರೆ ಭೇದವಾಗಲೀ ಧರ್ಮಿಯಾಗಲೀ ಒಂದೇ ಉಳಿಯಬೇಕು. ಎರಡು ಪದಾರ್ಥಗಳು ಉಳಿಯಲು ಸಾಧ್ಯವಿಲ್ಲ. ಇನ್ನು ಭಿನ್ನಾಭಿನ್ನವೆಂಬ ಮೂರನೆಯ ಪಕ್ಷವು ವಿರುದ್ಧವಾದುದು. ಆದ್ದರಿಂದ ಭೇದವನ್ನು ಅಂಗೀಕರಿಸಲು ಬರುವುದಿಲ್ಲ ಎಂದು ಅವನ ವಾದ.

ಈ ವಾದಕ್ಕೆ ಎರಡು ದೋಷಗಳು. ಹೀಗೆ ಭೇದವು ವಿಕಲ್ಪಾಸಹವಾಗಿ ದುಷ್ಟವಾದರೆ ವ್ಯಾವಹಾರಿಕಭೇದವನ್ನು ಒಪ್ಪುವುದೂ ಅಯುಕ್ತವಾದುದು ಎಂದು ಮೊದಲನೆಯ ದೋಷ. ಅನವಸ್ಥಾದಿ ದೋಷಗಳಿರುವಾಗ ವ್ಯಾವಹಾರಿಕ ವಸ್ತುವನ್ನಾದರೂ ಹೇಗೆ ಅಂಗೀಕಾರ ಮಾಡಲು ಸಾಧ್ಯ? ಘಟವು ವ್ಯಾವಹಾರಿಕವಾದ್ದರಿಂದ ತನಗೆ ತಾನೇ ಕಾರಣ ಎಂದು ಹೇಳಬಹುದೇ? ಅಥವಾ ಘಟಪಟಗಳಿಗೆ ಪರಸ್ಪರಕಾರಣತ್ವವನ್ನು ಹೇಳಬಹುದೇ? ಯಾರೂ ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಪವಿತ್ರವಾದ ವಸ್ತುವಿಗೆ ಅನವಸ್ಥಾದಿದೋಷದೂರವಾದ ಒಂದು ವ್ಯವಸ್ಥೆಯ ಕಲ್ಪನೆಯನ್ನು ನೀವೂ ಮಾಡಬೇಕು. ಆದ್ದರಿಂದ ಹೀಗೆ ವಿಕಲ್ಪವನ್ನು ಮಾಡಿ ಭೇದವನ್ನು ನಿರಾಕರಿಸುವುದು ಸರಿಯಲ್ಲ ಎಂಬುದು ಮೊದಲನೆಯ ದೋಷ. ಎರಡನೆಯ ದೋಷವೆಂದರೆ ಭೇದವನ್ನು

ನಿರಾಕರಣೆಮಾಡುವವರು ಐಕ್ಯವನ್ನು ಒಪ್ಪುತ್ತೀರಿ. ಆ ಐಕ್ಯವು ಧರ್ಮಿಯಿಂದ ಭಿನ್ನವೋ ಅಭಿನ್ನವೋ ಅಥವಾ ಭಿನ್ನಾಭಿನ್ನವೋ ಎಂಬ ವಿಕಲ್ಪವು ಅಲ್ಲಿಯೂ ಬರುತ್ತದೆ. ಭಿನ್ನವಾದರೆ ನಮಗೆ ಹೇಳಿದಂತೆಯೇ ಅನವಸ್ಥಾದೋಷವಿದೆ. ಅಭಿನ್ನವಾದರೆ ನಮಗೆ ಹೇಳಿದ ಅನ್ಯತರಪರಿಶೇಷಪ್ರಸಂಗರೂಪವಾದ ದೋಷವು ನಿಮಗೂ ಇದೆ. ಭಿನ್ನಾಭಿನ್ನವೆಂದು ಹೇಳಿದರೆ ನಮಗೆ ಹೇಳಿದಂತೆ ವಿರೋಧವೂ ಇದೆ. ಆದ್ದರಿಂದ ಯಾವ ದೋಷವು ಇಬ್ಬರಿಗೂ ಸಮಾನವೋ ಅದನ್ನು ಇನ್ನೊಬ್ಬರ ಮೇಲೆ ಆಪಾದನೆ ಮಾಡಬಾರದು. ವಸ್ತುತಃ ನಾವು ವಿಶೇಷವನ್ನು ಒಪ್ಪಿ ಈ ಎಲ್ಲಾ ದೋಷಗಳನ್ನೂ ಪರಿಹಾರ ಮಾಡುತ್ತೇವೆ. ನಿರ್ವಿಶೇಷವಾದಿಯಾದ ನೀನು ಮಾತ್ರ ದೋಷಗಳನ್ನು ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಇದು ಎರಡನೆಯ ದೋಷ.

### ಏಕವಿಜ್ಞಾನೇನ ಸರ್ವಜ್ಞಾನ ವಿಚಾರ :

ಕಾಣ್ವಶ್ರುತಿಯು **'ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಸ್ಯಾತ್'** ಎಂಬ ಉಪಕ್ರಮವನ್ನು ಮಾಡಿ **'ಏತಾವದರೇ ಖಲ್ವಮೃತತ್ವಂ ಗಾರ್ಗಿ'** ಎಂದು ಉಪಸಂಹಾರ ಮಾಡುತ್ತದೆ. **'ಆತ್ಮನು ಜ್ಞಾತನಾದರೆ ಇವೆಲ್ಲರೂ ಜ್ಞಾತವಾಗುತ್ತದೆ, ಗಾರ್ಗಿ ಇದೇ ಮೋಕ್ಷ'** ಎಂದು ಸಾಮಾನ್ಯವಾದ ಅರ್ಥ. ನೇಗಿಲು ನನ್ನ ಜೀವನ ಎಂದು ಹೇಳಿದರೆ ನೇಗಿಲು ನನ್ನ ಜೀವನಕ್ಕೆ ಕಾರಣ ಎಂದು ಅರ್ಥವಾಗುವಂತೆ ಆತ್ಮವಿಜ್ಞಾನವೇ ಮೋಕ್ಷ ಎಂದು ಹೇಳಿದರೆ ಆತ್ಮವಿಜ್ಞಾನವೇ ಮೋಕ್ಷಕ್ಕೆ ಕಾರಣ ಎಂಬ ಅರ್ಥವು ಲಭಿಸುತ್ತದೆ. ಈ ಅರ್ಥವನ್ನು ಅದ್ವೈತ ವ್ಯಾಖ್ಯಾನಕಾರರೂ ಒಪ್ಪುತ್ತಾರೆ. ಆದ್ದರಿಂದ ಮೋಕ್ಷಕ್ಕೆ ಸಾಧನವಾದ ಈ ಜ್ಞಾನವು ನಿಮ್ಮ ಪ್ರಕಾರ ಚರಮಸಾಕ್ಷಾತ್ಕಾರವೇ ಆಗಬೇಕು. ಅದು ಚಿನ್ಮಾತ್ರವಿಷಯಕ ಪ್ರಮೆಯೆಂದು ನೀವು ಒಪ್ಪುತ್ತೀರಷ್ಟೆ? ಆ ಜ್ಞಾನದಲ್ಲಿ ಚೈತನ್ಯವನ್ನು ಬಿಟ್ಟು ಬೇರೆ ಏನೂ ತೋರುವುದಿಲ್ಲವಾದ್ದರಿಂದ ಅದು ಸರ್ವವಿಜ್ಞಾನವಾಗುವುದು ಹೇಗೆ? ಆದ್ದರಿಂದಲೇ ಅಲ್ಲಿ ಸರ್ವವೂ ಆರೋಪಿತವಾಗಿ ತೋರುತ್ತದೆ ಎಂದು ಹೇಳಲೂ ಸಾಧ್ಯವಿಲ್ಲ. ಒಂದು ಪಕ್ಷ ಸರ್ವನಾಸ್ತಿತ್ವವು ಆ ಜ್ಞಾನದಲ್ಲಿ ತೋರುತ್ತದೆ ಎಂದರೆ ಅದೂ ಸರಿಯಲ್ಲ. ನಾಸ್ತಿತಾಜ್ಞಾನವೆಂದರೆ ಅಭಾವಜ್ಞಾನ. ಸರ್ವಜ್ಞಾನವೆಂದರೆ ಸರ್ವಾಭಾವಜ್ಞಾನವೆಂದಾಯಿತು. ಇರಲಿ. ಆದರೆ ನೀವು ಚರಮಜ್ಞಾನವನ್ನು ನಿರ್ವಿಕಲ್ಪಕವೆಂದು ಒಪ್ಪುತ್ತೀರಿ. ಯಾವ ವಾದಿಗಳೂ ಅಭಾವನಿರ್ವಿಕಲ್ಪಕವನ್ನು ಒಪ್ಪುವುದಿಲ್ಲ. ಆದ್ದರಿಂದ ಜ್ಞಾನದಲ್ಲಿ ಸರ್ವಾಭಾವವಾದರೂ ತೋರುವುದು ಹೇಗೆ? ಇನ್ನು ಸರ್ವಾಭಾವಜ್ಞಾನಿಯನ್ನು ಯಾರು ಸರ್ವಜ್ಞಾನಿ ಎಂದು

ಹೇಳುತ್ತಾರೆ. ನೇದಂ ರಜತಂ ಎಂಬ ಬಾಧಜ್ಞಾನವುಳ್ಳವನನ್ನು ಯಾರಾದರೂ ರಜತಜ್ಞಾನಿ ಎನ್ನುತ್ತಾರೆಯೇ? ಹಾಗೆ ಹೇಳುವುದಾದರೆ ಭೇದಾಭಾವವನ್ನು ತಿಳಿದ ನಿನ್ನನ್ನು ಭೇದಜ್ಞನೆಂದೂ ಐಕ್ಯಭಾವವನ್ನು ತಿಳಿದ ಪರವಾದಿಯನ್ನು ಐಕ್ಯಜ್ಞನೆಂದೂ ವ್ಯವಹರಿಸಬೇಕಾಗುತ್ತದೆ. ಆದ್ದರಿಂದ ಏಕಜ್ಞಾನದಿಂದ ಸರ್ವಜ್ಞಾನವನ್ನು ಅವುಗಳ ಅಭೇದದಿಂದಲೇ ಕೂಡಿಸಬೇಕಾಗುವುದರಿಂದ ಏಕಜ್ಞಾನದಲ್ಲಿ ವಿಷಯನಾದ ಸದ್ರೂಪನಾದ ಬ್ರಹ್ಮನಿಗೆ ಏಕಜ್ಞಾನದಲ್ಲಿ ವಿಷಯವಾದ ಮಿಥ್ಯಾಭೂತವಾದ ಸರ್ವಜಗತ್ತಿನಿಂದ ಐಕ್ಯವೇ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅದರಿಂದ ನಿನಗೆ ಪ್ರತಿಕೂಲವೇ ಆಗುತ್ತದೆ. ಜೀವೈಕ್ಯವು ಸಿದ್ಧವಾಗುವುದಿಲ್ಲ. ಮಿಥ್ಯಾಭೂತಜಡೈಕ್ಯವು ಸಿದ್ಧವಾಗುತ್ತದೆ. ನಿನಗೆ ಬೇಕಾದುದು ಜೀವಬ್ರಹ್ಮೈಕ್ಯ. ಬ್ರಹ್ಮಜ್ಞಾನದಿಂದ ಎಲ್ಲಾ ಜಗತ್ತೂ ಜ್ಞಾತವಾಗುತ್ತದೆ ಎಂದು ಹೇಳುತ್ತಿದ್ದೀಯೆ. ಇದಕ್ಕೆ ಪರಸ್ಪರವಾಗಿ ಏನು ಸಂಬಂಧವಿದೆ? ಅದಲ್ಲದೆ ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂಬುದು ನಿನಗೆ ವಿರುದ್ಧವಾದ ಹೇತುವಾಯಿತು. ಜಗತ್ತು ಪರಮಾರ್ಥಸತ್ಯವಾದುದು ಚರಮಜ್ಞಾನಕ್ಕೆ ವಿಷಯವಾದುದರಿಂದ ಬ್ರಹ್ಮನಂತೆ ಎಂದು ಅನುಮಾನ ಪ್ರಯೋಗವನ್ನು ಮಾಡಿ ನಾವು ಜಗತ್ತಿಗೆ ಪಾರಮಾರ್ಥಿಕಸತ್ಯತ್ವವನ್ನೇ ಸಾಧಿಸಬಹುದು. ಆದ್ದರಿಂದ ಸತ್ಯತ್ವ ಚೇತನತ್ವಾದಿ ಧರ್ಮಗಳಿಗೆ ಜಗತ್ತು ಬ್ರಹ್ಮನಿಗೆ ಸದೃಶವಾಗಿರುವುದರಿಂದಲೇ ಏಕಜ್ಞಾನೇನ ಸರ್ವವಿಜ್ಞಾನವನ್ನು ಹೇಳಬೇಕು. ಅಥವಾ ಅವನ ಅಂಗಗಳಲ್ಲಿ ಎಲ್ಲಾ ಜಗತ್ತೂ ಆಶ್ರಿತವಾಗಿರುವುದರಿಂದ ಬ್ರಹ್ಮನ ಸಾಕ್ಷಾತ್ಕಾರವು ಬರುವಾಗ ಜಗತ್ತೂ ಕಾಣುವುದರಿಂದ ಸರ್ವವಿಜ್ಞಾನವನ್ನು ಹೇಳಬೇಕು. ಅನೇಕ ಆಭರಣಗಳಿಂದ ಅಲಂಕೃತವಾದ ಪುರುಷನ ಪ್ರತ್ಯಕ್ಷವುಂಟಾದಾಗ ಅವನು ಧರಿಸಿದ ಆಭರಣಗಳ ಪ್ರತ್ಯಕ್ಷವೂ ಉಂಟಾಗುತ್ತದಷ್ಟೆ? ಆದ್ದರಿಂದಲೇ ಅಕ್ರೂರನು ಕೃಷ್ಣನನ್ನೂ ಮಧುರೆಗೆ ಕರೆದುಕೊಂಡು ಹೋಗುತ್ತಾ ದಾರಿಯಲ್ಲಿ 'ಭೂಮಿಯಲ್ಲಿ ಜಲದಲ್ಲಿ ಮತ್ತು ಆಕಾಶದಲ್ಲಿ ಎಷ್ಟು ಅದ್ಭುತಗಳಿವೆಯೋ ಅವೆಲ್ಲವನ್ನೂ ವಿಶ್ವರೂಪನಾದ ನಿನ್ನಲ್ಲಿ ನೋಡಿದ್ದೇನೆ' ಎಂದು ಹೇಳುತ್ತಾನೆ. ತಾಯಿಯಾದ ಯಶೋದೆಯೂ ಕೃಷ್ಣನ ಬಾಯಿಯಲ್ಲಿ ಸರ್ವಜಗತ್ತನ್ನೂ ನೋಡಿದ್ದಾಳಷ್ಟೆ? ಈಗಲೂ ಲೌಕಿಕರು ಗ್ರಾಮದ ಪ್ರಭುವನ್ನು ನೋಡಿದರೆ ಎಲ್ಲವನ್ನೂ ನೋಡಿದಂತಾಯಿತು ಎಂದು ಹೇಳುತ್ತಾರೆ. ಎಲ್ಲಾ ಗ್ರಾಮವನ್ನು ನೋಡಿದರೆ ಏನು ಫಲವೂ (ಅದಕ್ಕಿಂತೆ ಹೆಚ್ಚಿನ ಫಲವು) ನಿನ್ನ ದರ್ಶನದಿಂದ ಉಂಟಾಗುತ್ತದೆ ಎಂದು ಅಭಿಪ್ರಾಯ. ಅದರಂತೆ ಜಗತ್ತಿನ ಜ್ಞಾನದಿಂದ ಉಂಟಾಗುವ ಫಲವೂ ಅದಕ್ಕಿಂತ ಹೆಚ್ಚಿನ ಫಲವೂ ಪರಮಾತ್ಮನ

ಜ್ಞಾನದಿಂದ ಉಂಟಾಗುತ್ತದೆ ಎಂಬುದೇ ಈ ವಾಕ್ಯಕ್ಕೆ ಸೂಕ್ತವಾದ ಅರ್ಥವಾಗುತ್ತದೆ. ಇಂತಹ ಮಹಾಫಲಪ್ರದತ್ವರೂಪ ಮಹಿಮೆಯ ಲಾಭಕ್ಕಾಗಿಯೇ ಶ್ರುತಿಯು ಲಘುಭೂತವಾದ ಇಂತಹ ಮಾರ್ಗವನ್ನು ಲಕ್ಷಣಾವೃತ್ತಿಯಿಂದ ಅನುಸರಿಸುತ್ತದೆ. ಗಂಗಾಯಾಂ ಘೋಷಃ ಎಂಬಲ್ಲಿ ಗಂಗಾ ಪದಕ್ಕೆ ತೀರದಲ್ಲಿ ಲಕ್ಷಣಾವೃತ್ತಿಯನ್ನು ಮಾಡಿದರೆ ತೀರದಲ್ಲಿ ಪಾವಿತ್ರ್ಯವು ಲಭ್ಯವಾಗುತ್ತದೆ. ಅದರಂತೆ ಇಲ್ಲಿ ಎಲ್ಲಾ ಜಗತ್ತಿನ ವಿಜ್ಞಾನದಿಂದ ಉಂಟಾಗುವ ಫಲವು ಬ್ರಹ್ಮಜ್ಞಾನದಿಂದ ಉಂಟಾಗುತ್ತದೆ ಎಂದು ಹೇಳಿದರೆ ವಾಕ್ಯವು ಗುರುಭೂತವಾಗುತ್ತದೆ. ಆದ್ದರಿಂದ ಇವೆರಡು ಉದ್ದೇಶದಿಂದ ಶ್ರುತಿಯ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಿದೆ ಎಂದು ತಿಳಿಯಬೇಕು.

ಏಕಜೀವವಾದ ನಿರಾಸ :

**ಖಲ ಏವ ಖಲೋ ಲೋಕೇ ನಾಸುರಾವ್ವೈರಿ ವೈರಿಣಃ ।**
**ಏಕೋ ಜೀವಃ ಸ ನಿದ್ರಾತಿ ತಸ್ಯಸ್ವಪ್ನಃ ಕಿಲಾಖಿಲಮ್ ॥**

ಎಂಬ ಶ್ಲೋಕದಿಂದ ರಾಜರು ಈ ಪ್ರಕರಣವನ್ನು ಆರಂಭಿಸುತ್ತಾರೆ. ಅಸುರರು ನಿಜವಾದ ಖಳರಲ್ಲ. ಅವರು ತಮ್ಮ ವೈರಿಗಳಾದ ದೇವತೆಗಳಲ್ಲಿ ಮಾತ್ರ ವೈರವನ್ನು ಮಾಡುತ್ತಾರೆ. ನಿಜವಾದ ಖಳರು ಮಾತ್ರ ತಮಗೆ ವೈರವನ್ನು ಮಾಡದಿದ್ದವರಲ್ಲೂ ವೈರವನ್ನು ಮಾಡಿ ಅವರ ಕ್ಷಯವನ್ನು ಬಯಸುತ್ತಾರೆ. ಏಕಜೀವವಾದಿಗಳೂ ಅಂತಹವರೇ. ಜೀವನು ಒಬ್ಬನೆ. ಅವನು ಮಲಗಿ ನಿದ್ರಿಸುತ್ತಿದ್ದಾನೆ. ಅವನಿಗೆ ಬೀಳುತ್ತಿರುವ ಸ್ವಪ್ನವೇ ಈ ಸಮಸ್ತವಾದ ಜಗತ್ತು. ಅವನು ಸ್ವಪ್ನದಿಂದ ಎದ್ದು ತಕ್ಷಣ ಈ ಜಗತ್ತು ಅದರ್ಶನವನ್ನು ಹೊಂದುತ್ತದೆ. ಇದು ಅವರ ವಾದ.

ವಿಷಯಲಂಪಟರಾದವರಿಗೆ ಹಗಲು ರಾತ್ರಿ ಎಂಬ ಪ್ರಭೇದವು ತಿಳಿಯುವುದಿಲ್ಲ. ಈ ಎಲ್ಲಾ ಜಾಗ್ರತಕಾಲವೂ ಸುಪ್ತನ ಸ್ವಪ್ನವೆಂದು ಹೇಳುವವರ ಪರಿಸ್ಥಿತಿಯೂ ಅದೇ ಪಂಚತಂತ್ರದಲ್ಲಿ ದೇಹವು ನಿಶ್ಚಲವಾಗಿದ್ದರೂ ಕೈಯ್ಯಲ್ಲಿದ್ದ ದಂಡಪಿಂಡಗಳನ್ನು ನೋಡಿ ಅವನು ಬದುಕಿದ್ದಾನೆಂದು ತಿಳಿದು ನರಿಯು ಓಡಿಹೋಯಿತು ಎಂಬ ಕಥೆ ಇದೆ. ಜಗತ್ತಿನಲ್ಲಿ ಇಷ್ಟು ವ್ಯಾಪಾರಗಳನ್ನು ಮಾಡುತ್ತಿರುವ ದೇಹಗಳನ್ನು ನೋಡಿ ಅವು ನಿರ್ಜೀವವಾದ ಶವಗಳೆಂದು ಹೇಳುವುದು ಅದ್ಭುತವಾದುದು. ಏಕೆಂದರೆ ಸ್ವಪ್ನದಲ್ಲಿ ಕಾಣುವ ದೇಹಗಳಂತೆ ಎಲ್ಲಾ ಶರೀರಗಳು ನಿರ್ಜೀವವಾದ ಶರೀರಗಳೆಂದು ಏಕಜೀವವಾದಿಗಳು ಹೇಳುತ್ತಾರೆ.

ಇವರು ನಿರ್ಜೀವವಾದಿಗಳಾದ ಚಾರ್ವಾಕರನ್ನು ಅಪಹಾಸಮಾಡುವುದು ಒಬ್ಬ ವೇಶ್ಯೆಯು ಇನ್ನೊಬ್ಬ ವೇಶೆಯನ್ನು ಓಡಿ ಅಪಹಾಸಮಾಡಿದಂತೆ. ಹೀಗೆ ಹೇಳುವವರು ಶುಕಾದಿಗಳಿಗೆ ಯಾರಿಗೂ ಮೋಕ್ಷವಿಲ್ಲ ಎಂದು ಹೇಳಿ ಎಲ್ಲರ ಮೋಕ್ಷಾಶೆಯನ್ನೇ ಛೇದಿಸುತ್ತಾರೆ. ಅಧ್ಯಯನ, ಯಜನ, ಶ್ರವಣಮನನಾದಿಗಳು, ಸ್ನಾನದಾನಾದಿಗಳು ಎಲ್ಲವೂ ಸ್ವಪ್ನದಲ್ಲಿ ನಡೆಯುವ ಕ್ರಿಯೆಯಾದ್ದರಿಂದ ಅವು ಯಾವುದಕ್ಕೂ ಫಲವಿಲ್ಲ ಎಂಬುದು ಆಶ್ಚರ್ಯ. ಹಾಗೆಯೇ ಅನಾದಿಕಾಲದಿಂದ ಯಾವನು ನಿದ್ರಿಸುತ್ತಿದ್ದಾನೆಯೋ ಅವನು ಕಲ್ಪಕನಾದವನು. ಸರ್ವಜ್ಞರಾದ ವೇದವೇದಾಂತ ಕರ್ತೃಗಳೆಲ್ಲರೂ ಕಲ್ಪಿಕರಾದವರು. ಹೀಗೆ ಯಾರು ಆರ್ಯಮರ್ಯಾದೆಯನ್ನು ಉಲ್ಲಂಘಿಸುತ್ತಾರೆಯೋ ಅವರೊಡನೆ ಮಾತನಾಡುವುದೂ ಹೇಯವಾದುದು. ಅಚೇತನನಾದವನು ಗುರು, ಅವನು ಉಪದೇಶವನ್ನು ಮಾಡುತ್ತಾನೆ. ನಿದ್ರಿಸುತ್ತಿರುವ ಶಿಷ್ಯನು ಶ್ರವಣಮಾಡುತ್ತಾನಷ್ಟೆ? ಗುರುವಿನ ವಿದ್ಯೆಯೂ ಸಹ ಶಿಷ್ಯನ ಅಜ್ಞಾನದಿಂದ ಕಲ್ಪಿತವಾದದ್ದು. ಶಿಷ್ಯನು ಭೇದಜ್ಞನಾಗಿದ್ದಾನೆ. ಏಕೆಂದರೆ ಅವನು ಗುರುವಿನಿಂದ ಉಪದೇಶವನ್ನು ಕೇಳುತ್ತಾನೆ. ಗುರುವು ಐಕ್ಯಜ್ಞಾನಿ. ಏಕೆಂದರೆ ಅವನು ಐಕ್ಯವನ್ನು ಉಪದೇಶಮಾಡುತ್ತಾನೆ. ಶಿಷ್ಯನಿಗೆ ಮೋಕ್ಷವಾಗುತ್ತದೆ. ಗುರುವಿಗೆ ಮೋಕ್ಷವಾಗುವುದಿಲ್ಲ. ಸರ್ವಜಗತ್ತನ್ನೂ ಸಕಲಶಾಸ್ತ್ರಗಳನ್ನೂ ಕಲ್ಪಿಸುವವನು ಶಿಷ್ಯ. ಯಾವನೋ ಒಬ್ಬ ಕಲ್ಪಿತನಾದವನು ಗುರು. ಇಂತಹ ಅಸಂಗತ ವಿಷಯಗಳ ಕಂತೆ ಈ ಏಕಜೀವವಾದ ಈ ವಾದವನ್ನು ನಿರಾಕರಿಸುತ್ತಾರೆ. ಗುರುವು ಉಪದೇಶಿಸುವ ಐಕ್ಯಜ್ಞಾನವು ಪ್ರಮೆಯೇ ಅಥವಾ ಭ್ರಮವೋ. ಪ್ರಮೆಯಾದರೆ ಸ್ವಪ್ನದಲ್ಲಿ ಕಲ್ಪಿತಗುರುವಿನ ಉಪದೇಶದಂತೆ ನಮಗೆಲ್ಲಾ ಕಾಣುವ ಸ್ವಪ್ನವೂ ಕೂಡ ಭ್ರಮರೂಪವಾಗುವುದಿಲ್ಲ. ಆಗ ಎಲ್ಲಾ ಸ್ವಪ್ನವೂ ಭ್ರಮವೆಂಬ ನಿನ್ನ ಮತವು ಹೋಗುತ್ತದೆ. ಗುರುವಿನ ಉಪದೇಶಾದಿಗಳು ಸ್ವಪ್ನದಲ್ಲಿ ಎಂದು ಹೇಳಿದರೆ ಅದು ಜಾಗ್ರದ್ದಶೆ ಎಂದು ಹೇಳಿದಂತಾಯಿತು. ಜಾಗ್ರದವಸ್ಥೆಯಲ್ಲಿ ಅನೇಕ ಜೀವರಿದ್ದಾರೆ. ಸ್ವಪ್ನದಲ್ಲಿ ಮಾತ್ರ ಒಬ್ಬನೇ ಎಂದು ನಿನ್ನ ಮತ. ಆದ್ದರಿಂದ ಈಗ ಏಕಜೀವವಾದವನ್ನು ಸಮರ್ಥಿಸಲು ದೃಷ್ಟಾಂತವೇ ಇಲ್ಲವೆಂದಾಗುತ್ತದೆ ಮತ್ತು ಮನೆಮನೆಗಳಲ್ಲಿ ಬೀಳುವ ಸ್ವಪ್ನಗಳಿಗೆ ದ್ರಷ್ಟೃಗಳು ಅನೇಕರಿದ್ದಾರೆ. ಹೀಗಿರುವಾಗ ಸ್ವಪ್ನಸಾಮ್ಯವನ್ನು ಹೇಳಿದರೆ ಜೀವಬಹುತ್ವವೇ ಸಿದ್ಧವಾಗುತ್ತದೆಯೇ ಹೊರತು ಏಕಜೀವ ಎಂದು ಸಿದ್ಧವಾಗುವುದಿಲ್ಲ. 'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಬ್ರಹ್ಮಸೂತ್ರವು ಸ್ವಾಪ್ನ ಪದಾರ್ಥಗಳಿಗೆ ಸೃಷ್ಟಿಯನ್ನು

ಹೇಳುತ್ತಿದೆ. ಆ ಸ್ವಾಪ್ನಪದಾರ್ಥಗಳು ಜಡಗಳೂ ವ್ಯಾಘ್ರಾದಿ ಚೇತನಗಳೂ ಆಗಿವೆ. ಆದ್ದರಿಂದ ನನ್ನ ರೀತಿಯಲ್ಲಿ ಸ್ವಪ್ನವು ಸತ್ಯ ಮತ್ತು ಸ್ವಪ್ನದಲ್ಲಿ ಜೀವಬಹುತ್ವವೇ ಇರುವುದರಿಂದ ನಿನ್ನ ಅನುಮಾನಕ್ಕೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಬರುತ್ತದೆ. ಮನೆಮನೆಗಳಲ್ಲಿ ಕಾಣುತ್ತಿರುವ ಸ್ವಪ್ನಗಳೂ ಆ ಏಕಜೀವನೇ ಕಾಣುತ್ತಿರುವ ಸ್ವಪ್ನಗಳು ಎಂದು ಹೇಳಿದರೆ ನಮಗೆಲ್ಲರಿಗೂ ಇರುವ ಜಾಗ್ರದವಸ್ಥೆ ಯಾರಿಗೆ ಎಂದು ಹೇಳು. ನಿನ್ನ ರೀತಿಯಲ್ಲಿ ನಮ್ಮ ಶರೀರದಲ್ಲಿ ಜೀವವೇ ಇಲ್ಲವಷ್ಟೆ? ಆದ್ದರಿಂದ ಈ ಜಾಗ್ರದವಸ್ಥೆಯ ಸಾಕ್ಷಿ ಯಾರು? ಆ ಏಕಜೀವನೇ ಈ ಜಾಗ್ರದವಸ್ಥೆಗಳನ್ನೂ ಅನುಭವಿಸುತ್ತಿದ್ದಾನೆಂದು ಹೇಳಿದರೆ ಏಕಕಾಲದಲ್ಲಿ ಒಬ್ಬನೇ ಜೀವನಿಗೆ ಸ್ವಪ್ನಾವಸ್ಥೆಯನ್ನೂ ಮತ್ತು ಜಾಗ್ರದವಸ್ಥೆಯನ್ನೂ ಒಪ್ಪಬೇಕಾಗುತ್ತದೆ. ಇದು ಅನುಭವ ವಿರುದ್ಧವಾದುದು. ಮತ್ತು ಜಾಗ್ರದವಸ್ಥೆಯೂ ಅವನಿಗೇ ಎಂದು ಹೇಳಿದರೆ ಜಾಗ್ರದವಸ್ಥೆಯಲ್ಲಿರುವ ಗುರುವೇ ಉಪದೇಶಮಾಡುವುದರಿಂದ ತನಗೆ ತಾನೇ ಉಪದೇಶಕನೆಂದು ಒಪ್ಪಬೇಕಾಗುತ್ತದೆ. ಹೀಗೆ ಅನೇಕ ದೋಷಗಳಿಂದ ದೃಷ್ಟವಾದುದರಿಂದ ಏಕಜೀವವಾದವು ಅಪ್ರಾಮಾಣಿಕವೆಂದು ಸಮರ್ಥನೆ ಮಾಡುತ್ತಾರೆ. ಏಕಜೀವವಾದದಲ್ಲಿ ಬ್ರಹ್ಮನಿಗೇ ಜೀವಬಾಧವು ಬಂದು ಅವನೇ ಸ್ವಪ್ನದಲ್ಲಿ ಈ ಜಗತ್ತನ್ನು ಕಲ್ಪಿಸುತ್ತಾನೆ. ಬೇರೆ ಜೀವರೇ ಇಲ್ಲ ಎಂದು ಹೇಳುವುದರಿಂದ ಜೀವಬ್ರಹ್ಮಭೇದದ ಪ್ರಸಕ್ತಿಯಾಗಲೀ, ಜೀವಜೀವ ಭೇದದ ಪ್ರಸಕ್ತಿಯಾಗಲೀ ಇಲ್ಲ ಎಂದು ಏಕಜೀವವಾದಿಗಳ ಅಭಿಪ್ರಾಯ. ಏಕಜೀವವಾದವನ್ನು ನಿರಾಕರಿಸುವುದರಿಂದ ಅನೇಕ ದೇಹಗಳೂ, ಅನೇಕ ದೇಹದಲ್ಲಿ ಚೇತನಗಳೂ, ಅವರಿಗೆ ಸುಖದುಃಖಾದ್ಯನುಸಂಧಾನವ್ಯವಸ್ಥೆಯೂ ಇರುವುದರಿಂದ ಜೀವಭೇದಸಿದ್ಧಿಗೆ ಯಾವ ತೊಂದರೆಯೂ ಇಲ್ಲ. ಶ್ರುತಿಗಳಿಂದ ಈಶ್ವರನೂ ಸಿದ್ಧನಾಗುವುದರಿಂದ ನಾಹಂ ಸರ್ವಜ್ಞ ಮೊದಲಾದ ಪ್ರತ್ಯಕ್ಷಗಳಿಂದ ಜೀವಬ್ರಹ್ಮಭೇದದ ಸಿದ್ಧಿಗೂ ಯಾವ ಅನುಪಪತ್ತಿಯೂ ಇಲ್ಲವೆಂದು ರಾಜರ ಅಭಿಪ್ರಾಯ.

**ಭಾಗವತಾದಿ ವಾಕ್ಯಗಳ ಸಂವಾದ :**

ಭಾಗವತಾದಿ ವಾಕ್ಯಗಳ ಆಧಾರದಿಂದಲೂ ಜೀವೇಶ್ವರಭೇದವನ್ನು ಸಮರ್ಥಿಸುತ್ತಾ ಮೊದಲು ಶ್ರುತಿಗೀತೆಯ ಒಂದು ಶ್ಲೋಕವನ್ನು ವಿಮರ್ಶೆಮಾಡುತ್ತಾರೆ.

**'ತರ್ಹಿ ನ ಸನ್ನ ಚಾಸಮುಭಯಂ ನ ಚ ಕಾಲಜವಃ ಕಿಮಪಿ-**
**ನ ತತ್ರ ಶಾಸ್ತ್ರಮಪಕೃಷ್ಯ ಶಯಿತ ಯದಾ ।**
**ಜನಿಮಸತಃ ಸತೋ ಮೃತಿಮಜಾತ್ಮನಿ ಯೇ ಚ ಭಿದಾಂ-**
**ವಿಪಣಮೃತೇ ಸ್ಮರಂತ್ಯುಪವಿಶದ್ವನಿಮಾರುವತಃ ॥'**

ಯಾರು ನಿರ್ವ್ಯಾಜವಾಗಿ ನಿನ್ನನ್ನು ಉಪಾಸನೆ ಮಾಡಿ ನಿನ್ನಲ್ಲಿ ಜೀವಭೇದವನ್ನು ತಿಳಿಯುತ್ತಾರೆಯೋ ಅಂತಹ ನಿರುಪಾಧಿಕಯೋಗಿಗಳು ವಾಯುದೇವರ ಮತವನ್ನು ಅವಲಂಬಿಸಿ ಮಾಡುವ ವ್ಯಾಖ್ಯಾನ ಶಬ್ದದಲ್ಲಿ ಮತ್ತು ಅದರಲ್ಲಿ ನೀನು ಸನ್ನಿಹಿತನಾಗು ಎಂದು ದೇವರಿಗೆ ಲಕ್ಷ್ಮೀದೇವಿಯ ಪ್ರಾರ್ಥನೆ.

ಸ್ಮರಂತಿ ಎಂಬ ಶಬ್ದದಿಂದ ಉಪಸ್ಥಿತರಾದ ಜೀವರ ಪ್ರತಿಯೋಗಿಕವಾದ ಬ್ರಹ್ಮಧರ್ಮಿಕವಾದ ಭೇದವೇ ಇಲ್ಲಿ ಭಿದಾ ಶಬ್ದದಿಂದ ಪ್ರಸ್ತುತವಾಗಿದೆ. 'ಅಪ್ರಕೃಷ್ಯ ಶಯಿತ' - ಎಲ್ಲವನ್ನೂ ಹಿಂದೆ ತೆಗೆದುಕೊಂಡು ಮಲಗಿದಾಗ ಎಂಬ ಶಬ್ದವು ಪ್ರಳಯಕಾಲವನ್ನು ಹೇಳುತ್ತದೆ. ಸರ್ವಲಯವಾದರೂ ಯಾವುದು ಉಳಿದಿರುತ್ತದೆಯೋ ಅದು ಪರಮಾತ್ಮನಂತೆ ಯಾವಾಗಲೂ ಇರುವ ವಸ್ತು. ಇಲ್ಲಿ ಪರಮಾತ್ಮಧರ್ಮಿಕವಾದ ಭೇದವನ್ನು ಪ್ರಳಯಕಾಲದಲ್ಲಿಯೂ ಇದೆ ಎಂದು ಹೇಳಿದ್ದಾರೆ. ಭೇದವನ್ನು ಸ್ಮರಣೆಮಾಡುವ ಜೀವರಿಗೆ ಪರಮಾತ್ಮನ ಪ್ರವೇಶರೂಪವಾದ ಫಲವೂ ಇಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಜೀವಬ್ರಹ್ಮಭೇದವು ಪಾರಮಾರ್ಥಿಕವೆಂದು ಸಿದ್ಧವಾಗುತ್ತದೆ.

ಅದರಂತೆ **'ತ್ವಶೋಕಮೋಹೌ ಸ್ನೇಹೋವಾ ಭಯಂ ವಾಯೇಽಜ್ಞಸಂಭವಾಃ। ತ್ವಚಾಖಂಡಿತವಿಜ್ಞಾತ ಜ್ಞಾನೈಶ್ವರ್ಯೇಶ್ವರೋ ಹರಿಃ'** ಎಂಬ ಶ್ಲೋಕದಲ್ಲಿ ಈಶ್ವರಚೈತನ್ಯವು ಸರ್ವದಾ ದೋಷೋಪಮರ್ದನ ಸಮರ್ಥವಾದುದೆಂದೂ ಜೀವಚೈತನ್ಯವು ಆ ವಿಷಯದಲ್ಲಿ ಅಶಕ್ತವಾದುದೆಂದೂ ಹೇಳಿ ವಿರುದ್ಧಧರ್ಮಾಧಿ ಕರಣತ್ವರೂಪವಾದ ಹೇತುವಿನಿಂದ ಜೀವೇಶ್ವರ ಭೇದವನ್ನೇ ಸಮರ್ಥಿಸಿದ್ದಾರೆ.

ಮುಚುಕುಂದನ ಕಥೆಯಲ್ಲಿ ಕಾಲಯವನನು ಕೃಷ್ಣನನ್ನು ಹಿಂಬಾಲಿಸಿ ಬಂದು ಮಲಗಿ ನಿದ್ರಿಸುತ್ತಿದ್ದ ಮುಚುಕುಂದನನ್ನು ಕೃಷ್ಣನೆಂದು ತಿಳಿದು ಅವನನ್ನು ಒದ್ದು ಭಸ್ಮವಾದ ವಿಷಯವು ತಿಳಿದುಬರುತ್ತದೆ. ಒಬ್ಬ ಜೀವನನ್ನು ಬ್ರಹ್ಮನೆಂದು ತಿಳಿದುದದಿಂದಲೇ ಕಾಲಯವನನು ಇಷ್ಟು ಅನರ್ಥವನ್ನು ಅನುಭವಿಸುವಾಗ ಪ್ರತಿಯೊಬ್ಬ ಜೀವರನ್ನೂ ಬ್ರಹ್ಮನೆಂದು ಅನುಸಂಧಾನ ಮಾದಿದರೆ ಎಂತಹ ಅನರ್ಥವಾದೀತು ಎಂದು ರಾಜರು ಎಚ್ಚರಿಸಿದ್ದಾರೆ.

ಪೌಂಡ್ರಕವಾಸುದೇವನ ಕಥೆಯಲ್ಲಿ 'ತ್ವಂ ವಾಸುದೇವೋ ಭಗವಾನತೀರ್ಣೋ ಜಗತ್ಪತಿಃ। ಇತಿ ಪ್ರಸ್ತೋಭಿತೋ ಬಾಲೈಃ ಮೇನೇ ಸ್ವಾತ್ಮಾನಮಚ್ಯುತಮ್' ಎಂಬ ಶ್ಲೋಕವಿದೆ. ಪ್ರಸ್ತೋಭ ಎಂಬ ಶಬ್ದವು ಇಂತಹ ಮಾತು ಸುಳ್ಳು ಹೊಗಳಿಕೆಯ ಮಾತು ಎಂದು ಅರ್ಥವನ್ನು ಕೊಡುತ್ತದೆ. ಬಾಲೈಃ ಎಂಬ ಶಬ್ದವು ಇಂತಹ ಮಾತುಗಳನ್ನಾಡುವವರು ಬಾಲರೇ ಹೊರತು ವಿವೇಕಿಗಳಲ್ಲ ಎಂಬ ಅರ್ಥವನ್ನು ಕೊಡುತ್ತದೆ. ಪೌಂಡ್ರಕನ ದೂತನು ಯಾದವರ ಸಭೆಯಲ್ಲಿ ಬಂದು ಆ ವಿಷಯವನ್ನು ತಿಳಿಸಿದಾಗ 'ಕತ್ಥನಂ ತದುಪಾಕರ್ಣ್ಯ ಪೌಂಡ್ರಕಸ್ಯಾಲ್ಪಮೇಧಸಃ। ಉಚ್ಚಕೈರುಗ್ರಸೇನಾದ್ಯಾಃ ಸಭ್ಯಾಃ ಪ್ರಜಹಸುಃ ಕಿಲ' ಆ ಕತ್ಥನವನ್ನು ಕೇಳಿ ಉಗ್ರಸೇನ ಮೊದಲಾದ ಸಭ್ಯರೆಲ್ಲರೂ ಗಟ್ಟಿಯಾಗಿ ನಕ್ಕರು ಎಂದು ಹೇಳಿದ್ದಾರೆ. ಆದ್ದರಿಂದ ನಾನು ವಾಸುದೇವನೆಂದು ಹೇಳುವುದು ಕೇವಲ ಕತ್ಥನ- ಜಂಭದ ಮಾತು. ಅಂತಹ ಮಾತುಗಳನ್ನು ಆಡುವವನು ಅಲ್ಪಮೇಧಾಃ - ಅಲ್ಪಬುದ್ಧಿಯುಳ್ಳವನು. ಅಂತಹ ಮಾತನ್ನು ಕೇಳಿದ ವಿವೇಕಿಗಳೆಲ್ಲರ ಪ್ರತಿಕ್ರಿಯೆ – ಜಹಸುಃ, ಗಟ್ಟಿಯಾಗಿ ನಗುವುದು. ಹೀಗೆ ಹೇಳಿ ಪ್ರತಿಯೊಂದು ಶಬ್ದದಿಂದಲೂ ಪೌಂಡ್ರಕನ ಬ್ರಹ್ಮಾಭೇದಜ್ಞಾನವನ್ನು ನಿಂದಿಸಿರುವುದರಿಂದ ಅಂತಹ ಅಭೇದವು ಅಪ್ರಾಮಾಣಿಕವೆಂದು ತಿಳಿಯುತ್ತದೆ.

ತೃತೀಯ ಸ್ಕಂಧದಲ್ಲಿ 'ಭೇದದೃಷ್ಟ್ಯಾಽಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ' ಎಂದು ಕಪಿಲನಾಮಕ ಪರಮಾತ್ಮನು ಮೋಕ್ಷಸಾಧನಗಳನ್ನು ಹೇಳುತ್ತಾ ಭೇದದೃಷ್ಟ್ಯಾ ಎಂದು ಜೀವೇಶ್ವರಭೇದಜ್ಞಾನವು ಮೊದಲನೆಯ ಸಾಧನವೆಂದು ತಿಳಿಸಿದ್ದಾನೆ. ಪಂಚಮಸ್ಕಂಧದಲ್ಲಿ ಋಷಭನಾಮಕ ಪರಮಾತ್ಮನು ತನ್ನ ಪುತ್ರರಿಗೆ ಉಪದೇಶಮಾಡುತ್ತಾ 'ವಿವಿಕ್ತದೃಷ್ಟಿಃ ತದುತಾರ್ಹಣಂ ಮೇ' ಭೇದಜ್ಞಾನವು ನನ್ನ ಶ್ರೇಷ್ಠವಾದ ಪೂಜೆ ಎಂದು ಹೇಳಿದ್ದಾನೆ. ಅಧೋಲೋಕಗಳನ್ನು ವರ್ಣನೆ ಮಾಡುವ ಸಂದರ್ಭದಲ್ಲಿ ಅತಳಲೋಕವನ್ನು ವರ್ಣಿಸುತ್ತಾ 'ಯಾಯೈ ಬಿಲಾಯನಂ ಪ್ರವಿಷ್ಟಂ ಪುರುಷಂ ರಸೇನ ಹಾಟಕಾಖ್ಯೇನ ಪಾಯಯಿತ್ವಾ ಸ್ವವಿಲಾಸಾವಲೋಕನಾನುರಾಗಸ್ಮಿತಸಲ್ಲಾಪೋಪಗೂಹನಾದಿಭಿಃ ಸ್ವೈರಂ ಕಿಲ ರಮಯಂತಿ। ಯಸ್ಮಿನ್ನುಪಭುಕ್ತೇ ಪುರುಷ ಈಶ್ವರೋಽಹಂ ಸಿದ್ಧೋಽಹಂ ಇತ್ಯಯುತಮಹಾಗಜಬಲಮಾತ್ಮಾನಂ ಮನ್ಯಮಾನಃ ಕತ್ಥತೇ ಮದಾಂಧ ಇವ' ಅತಳ ಲೋಕದಲ್ಲಿ ಸ್ವೈರಿಣ್ಯಾದಿ ಸ್ತ್ರೀಯರು ಅಲ್ಲಿಗೆ ಬಂದ ಪುರುಷನಿಗೆ ಹಾಟಕ ಎಂಬ ರಸವನ್ನು ಕುಡಿಸಿ ತಮ್ಮ ವಿಲಾಸಾದಿಗಳನ್ನು ನೋಡುವಂತೆ ಮಾಡಿ ರಮಿಸುತ್ತಾರೆ. ಆ ರಸವನ್ನು ಕುಡಿದ ತಕ್ಷಣ ಪುರುಷನು ನಾನು ಈಶ್ವರ, ನಾಗು

ಸಿದ್ಧ ಎನ್ನುತ್ತಾ ತನಗೆ ಹತ್ತು ಸಾವಿರ ಮಹಾಗಜಗಳ ಬಲವಿದೆಯೆಂದು ಭಾವಿಸಿ ಮದಾಂಧನಂತೆ ಬಡಬಡಿಸುತ್ತಾನೆ ಎಂದು ಹೇಳಿ ಈಶ್ವರಾಭೇದವನ್ನು ಹೇಳುವವರು ಮದ್ಯಪಾನಮಾಡಿದವರು ಮಾತ್ರ ಎಂದು ಹೇಳಿದ್ದಾರೆ.

ಏಕಾದಶಸ್ಕಂಧದಲ್ಲಿ ಉದ್ಧವನ 'ಕಾವಿದ್ಯಾ' ಎಂಬ ಪ್ರಶ್ನೆಗೆ ಉತ್ತರವಾಗಿ ಕೃಷ್ಣನು 'ವಿದ್ಯಾ ಆತ್ಮನಿ ಭಿದಾಬೋಧಃ' ಎಂದು ಜೀವೇಶ್ವರಭೇದಜ್ಞಾನವನ್ನೇ ವಿದ್ಯೆ ಎಂದು ಹೇಳಿದ್ದಾನೆ. **'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ । ಬಂಧೋಽಸ್ಯಾವಿದ್ಯಯಾಽನಾದಿರ್ವಿದ್ಯಯಾ ಚ ಕಥೇತರತ್'** – ಮಹಾಮತಿಯಾದ ಉದ್ಧವನೇ ನನ್ನ ಭಿನ್ನಾಂಶನಾದ ಜೀವನಿಗೇ ಅವಿದ್ಯೆಯಿಂದ ಅನಾದಿಯಾದ ಬಂಧವಿದೆ ಮತ್ತು ವಿದ್ಯೆಯಿಂದ ಮೋಕ್ಷವುಂಟಾಗುತ್ತದೆ ಎಂದು ವಿದ್ಯಾಶಬ್ದೋಕ್ತವಾದ ಜೀವೇಶ್ವರಭೇದ ಜ್ಞಾನವನ್ನೇ ಮೋಕ್ಷಸಾಧವಾಗಿ ಹೇಳಿದ್ದಾನೆ. ತನ್ನ ಅಂಶನಾದ ಜೀವನಿಗೆ ಬಂಧ ಮತ್ತು ಬಂಧದಿಂದ ಮೋಕ್ಷ, ತನಗೆ ಇಲ್ಲ ಎಂದು ವಿರುದ್ಧ ಧರ್ಮಗಳನ್ನು ಹೇಳಿ ಜೀವೇಶ್ವರರ ಭೇದವನ್ನೇ ಸಮರ್ಥಿಸಿದ್ದಾನೆ.

ಗೀತೆಯಲ್ಲಿ ಆಸುರೀ ಸಂಪತ್ತನ್ನು ಹೇಳುತ್ತಾ **'ಈಶ್ವರೋಽಹಮಹಂ ಭೋಗೀಸಿದ್ಧೋಽಹಂ ಬಲವಾನ್ ಸುಖೀ । ಆಢ್ಯೋಽಭಿಜನವಾನಸ್ಮಿ ಇತ್ಯಜ್ಞಾನವಿಮೋಹಿತಾಃ'** – ನಾನು ಈಶ್ವರ, ನಾನು ಸಿದ್ಧ, ನಾನು ಭೋಗೀ ಎಂದು ಅಜ್ಞಾನವಿಮೋಹಿತರಾಗಿ ಹೇಳುತ್ತಾರೆ ಎಂದು ಜೀವೇಶ್ವರಾಭೇದ ಜ್ಞಾನವನ್ನು ನಿಂದಿಸಿದ್ದಾರೆ ಇನ್ನೂ ಅನೇಕಾನೇಕ ಸ್ಮೃತಿ ವಾಕ್ಯಗಳಿಂದ ಜೀವೇಶ್ವರಾಭೇದವು ಅಪ್ರಾಮಾಣಿಕವಾದುದೆಂದು ರಾಜರು ಸ್ಥಾಪಿಸಿದ್ದಾರೆ.

## ಭೇದೋಮಿಥ್ಯಾಭೇದತ್ವಾತ್ ಚಂದಭೇದವತ್- ಈ ಅನುಮಾನದ ವಿಮರ್ಶೆ:

ಅದ್ವೈತಿಗಳು ಭೇದೋ ಮಿಥ್ಯಾಭೇದತ್ವಾತ್ ಚಂದ್ರಭೇದವತ್ ಎಂಬ ಅನುಮಾನದಿಂದ ಎಲ್ಲಾ ಭೇದಗಳಿಗೂ ಮಿಥ್ಯಾತ್ವವನ್ನು ಸಾಧಿಸಲು ಉದ್ಯುಕ್ತರಾಗುತ್ತಾರೆ. ಆದ್ದರಿಂದ ರಾಜರು ಈ ಅನುಮಾನವನ್ನು ವಿಸ್ತಾರವಾಗಿ ವಿಮರ್ಶೆಮಾಡಿ ನಿರಾಕರಿಸಿದ್ದಾರೆ.

ಭೇದವು ಮಿಥ್ಯಾ. ಭೇದವಾದುದರಿಂದ. ಚಂದ್ರಭೇದದಂತೆ ಎಂದು ಅನುಮಾನದ ಆಕಾರ. ಇದಕ್ಕೆ ಮೊದಲು **'ಭೇದೋ ನ ಮಿಥ್ಯಾಭೇದತ್ವಾತ್**

ಬ್ರಹ್ಮಮೋಕ್ಷಭೇದವತ್' ಎಂಬ ಪ್ರತ್ಯನುಮಾನವನ್ನು ಹೇಳುತ್ತಾರೆ. ಪರಮತದಲ್ಲಿ ಬ್ರಹ್ಮನು ಸತ್ಯ. ಮೋಕ್ಷವಾದರೂ ಪಂಚಮಪ್ರಕಾರವುಳ್ಳದ್ದು. ಅವತಾರದ ಪ್ರಕಾರ ಸದಸದ್ವಿಲಕ್ಷಣತ್ವ ಎಂಬುದು ನಾಲ್ಕನೆಯ ಪ್ರಕಾರ. ಅವಿದ್ಯೆಯು ಸದಸದ್ವಿಲಕ್ಷಣವಾದುದು. ಅವಿದ್ಯಾನಿವೃತ್ತಿಯೇ ಮೋಕ್ಷ. ಅವಿದ್ಯೆಯು ಸದಸದ್ವಿಲಕ್ಷಣವಾಗಿರುವಾಗ ಅವಿದ್ಯಾನಿವೃತ್ತಿಯೂ ಸದಸದ್ವಿಲಕ್ಷಣವಾಗಲಾರದು. ಪ್ರತಿಯೊಗಿ ಮತ್ತು ಅಭಾವಗಳಿಗೆ ಸಮಾನಯೋಗಕ್ಷೇಮವಿರುವುದಿಲ್ಲ. ಆದ್ದರಿಂದ ಅವಿದ್ಯಾನಿವೃತ್ತಿಯು ಸದಸದ್ವಿಲಕ್ಷಣವಿಲಕ್ಷಣತ್ವರೂಪವಾದ ಪಂಚಮಪ್ರಕಾರೋಪೇತವಾದುದು ಎಂದು ಹೇಳುತ್ತಾರೆ. ಸದಸದ್ವಿಲಕ್ಷಣರೂಪವಾದ ಚತುರ್ಥಪ್ರಕಾರವು ಮಿಥ್ಯಾತ್ವರೂಪವಾದುದು. ಆದ್ದರಿಂದ ತದ್ವಿಲಕ್ಷಣತ್ವರೂಪವಾದ ಪಂಚಮಪ್ರಕಾರವಾದರೂ ಮಿಥ್ಯಾವಿಲಕ್ಷಣತ್ವ ರೂಪವಾದ್ದರಿಂದ ಅಂತಹ ಪ್ರಕಾಶದಿಂದ ಕೂಡಿದ ಅವಿದ್ಯಾನಿವೃತ್ತಿರೂಪವಾದ ಮೋಕ್ಷದಲ್ಲಿ ಮಿಥ್ಯಾತ್ವವಿಲ್ಲ. ಅದರಂತೆ ಪಕ್ಷವಾದ ಜೀವೇಶ್ವರಾದಿ ಸಮಸ್ತ ಭೇದಗಳಲ್ಲಿಯೂ ಮಿಥ್ಯಾತ್ವಾಭಾವವನ್ನು ಸಾಧಿಸುತ್ತೇವೆ ಎಂದು ಹೇಳುತ್ತಾರೆ.

ಇನ್ನು ನಿನ್ನ ಅನುಮಾನದಲ್ಲಿ ದೃಷ್ಟಾಂತವಾಗಿ ಹೇಳಿರುವ ಚಂದ್ರಭೇದವು ಯಾವುದು? ಅಂಗುಲ್ಯವಷ್ಟಂಭದಿಂದ ಚಕ್ಷುಸ್ಸಿಗೆ ಆಕಾಶದಲ್ಲಿ ಎರಡು ಚಂದ್ರಗಳು ಕಾಣುತ್ತವೆ. ಒಂದು ಅನಾರೋಪಿತ ಚಂದ್ರ. ಇನ್ನೊಂದು ಆರೋಪಿತ ಚಂದ್ರ. ನೀನು ಅನಾರೋಪಿತ ಚಂದ್ರನಲ್ಲಿರುವ ಆರೋಪಿತಚಂದ್ರ ಪ್ರತಿಯೋಗಿಕವಾದ ಭೇದವನ್ನು ದೃಷ್ಟಾಂತವಾಗಿ ಹೇಳುತ್ತೀಯೋ ಅಥವಾ ಆರೋಪಿತ ಚಂದ್ರನಲ್ಲಿರುವ ಆರೋಪಿತ ಚಂದ್ರ ಪ್ರತಿಯೋಗಿಕವಾದ ಭೇದವನ್ನು ಹೇಳುತ್ತಿದ್ದೀಯೋ ಎಂದು ಪ್ರಶ್ನೆ. ಮೊದಲನೆಯ ಪಕ್ಷದಲ್ಲಿ ವಾಸ್ತವ ಚಂದ್ರನಲ್ಲಿರುವ ಅನಾರೋಪಿತ ಚಂದ್ರ ಪ್ರತಿಯೋಗಿಕಭೇದವು ಸತ್ಯವಾದುದು. ಮಿಥ್ಯೆಯಲ್ಲ. ಬಾಧವು ಬಂದಾಗ 'ಶುಕ್ತಿಃ ರಜತಂ ನ' ಎಂದು ಅಧಿಷ್ಠಾನವಾದ ಶುಕ್ತಿಯಲ್ಲಿ ಆರೋಪಿತ ರಜತಪ್ರತಿಯೋಗಿಕವಾದ ಭೇದವು ಎಲ್ಲರಿಗೂ ಅನುಭವ ಸಿದ್ಧವಾಗಿದೆಯಷ್ಟೆ? ಆದ್ದರಿಂದ ಆ ಭೇದವನ್ನು ದೃಷ್ಟಾಂತವನ್ನಾಗಿ ಹೇಳಿದರೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಬರುತ್ತದೆ. ಇನ್ನು ಎರಡನೆಯ ಮತ್ತು ಮೂರನೆಯ ಪಕ್ಷದಲ್ಲಿ ಅಂತಹ ಆರೋಪಿತ ವಸ್ತುನಿಷ್ಠವಾದ ಭೇದವನ್ನೇ ನಾವು ಒಪ್ಪುವುದಿಲ್ಲ. ಆದ್ದರಿಂದ ಅಂತಹ ಭೇದವನ್ನು ದೃಷ್ಟಾಂತವನ್ನಾಗಿ ಮಾಡಿದರೆ ಆರೋಪಿತ ಭೇದವಾಯಿತು.

ಆರೋಪಿತ ಮತ್ತು ಅನಾರೋಪಿತವಾದವುಗಳಲ್ಲಿ ಒಂದು ಸಾಮಾನ್ಯ ಧರ್ಮವಿರುವುದಿಲ್ಲ. ವಾಸ್ತವಸರ್ಪ ಮತ್ತು ರಜ್ಜುಸರ್ಪದಲ್ಲಿ ಅನುಗತವಾದ-ಸರ್ಪತ್ವ ಸಾಮಾನ್ಯವು ಇರುವುದಿಲ್ಲವಷ್ಟೆ? ಅದರಂತೆ ಇಲ್ಲಿ ಭೇದತ್ವವೇ ಇಲ್ಲ ಭೇದತ್ವರೂಪವಾದ ಹೇತುವೇ ಬರುವುದಿಲ್ಲವಾದ್ದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯವು ಬರುತ್ತದೆ. ಆದ್ದರಿಂದ ವ್ಯಾಪ್ತಿಗ್ರಹಣಸ್ಥಳವೇ ಇಲ್ಲದಿರುವುದರಿಂದ ನಿನ್ನ ಅನುಮಾನವು ದುಷ್ಟವಾಗುತ್ತದೆ.

ಆರೋಪಿತಚಂದ್ರನಲ್ಲಿ ಅನಾರೋಪಿತ ಚಂದ್ರಭೇದವು ಏಕಿಲ್ಲ? ಅನಾರೋಪಿತ ಚಂದ್ರನಲ್ಲಿ ಆರೋಪಿತ ಚಂದ್ರಭೇದವಿರುವಾಗ ಈ ಭೇದವನ್ನೂ ಒಪ್ಪಬೇಕಷ್ಟೆ ಎಂಬ ಪ್ರಶ್ನೆಗೆ ಉತ್ತರವಾಗಿ ಅಭಾವಗಳ ಸ್ವರೂಪವನ್ನು ವಿಸ್ತಾರವಾಗಿ ವಿಮರ್ಶೆಮಾಡಿದ್ದಾರೆ. ಒಂದು ವಸ್ತುವು ವಿದ್ಯಮಾನವಾದರೆ ಅದು ತನ್ನ ಸ್ವರೂಪದಿಂದ ಇರುತ್ತದೆ. ಸ್ವರೂಪವೆಂದರೂ ತಾದಾತ್ಮ್ಯವೆಂದರೂ ಒಂದೇ. ತನ್ನ ತಾದಾತ್ಮ್ಯದಿಂದ ತಾನು ಇರುವ ವಸ್ತುವಿನಲ್ಲಿ ಇನ್ನೊಂದರ ತಾದಾತ್ಮ್ಯದ ಪ್ರಸಕ್ತಿ ಇರುತ್ತದೆ. ಆಗ ಇನ್ನೊಂದು ವಸ್ತುವಿನ ತಾದಾತ್ಮ್ಯವನ್ನು ನಿಷೇಧಮಾಡುತ್ತೇವೆ. ಈ ತಾದಾತ್ಮ್ಯನಿಷೇಧವೇ ಭೇದ. ಘಟವು ಘಟಸ್ವರೂಪದಿಂದ ಇದೆ. ಪಟಸ್ವರೂಪದಿಂದ ಇಲ್ಲ. ಈ ಪಟಸ್ವರೂಪದಿಂದ ಇಲ್ಲ ಎಂದು ಹೇಳುವುದೂ ಪಟತಾದಾತ್ಮ್ಯವಿಲ್ಲ ಎಂದು ಹೇಳುವುದೂ ಒಂದೇ. ಇದನ್ನೇ ಘಟದಲ್ಲಿರುವ ಪಟಭೇದವೆಂದು ಕರೆಯುತ್ತೇವೆ. ಆರೋಪಿತವಾದ ವಸ್ತುವು ಅಸತ್ತಾದುದು. ಅದಕ್ಕೆ ತನ್ನ ತಾದಾತ್ಮ್ಯವೇ ಇಲ್ಲ. ಆದ್ದರಿಂದ ಇನ್ನೊಂದರ ತಾದಾತ್ಮ್ಯದ ಪ್ರಸಕ್ತಿಯೂ ಇಲ್ಲ, ಪ್ರತಿಭೇದವೂ ಇಲ್ಲ. ಆದ್ದರಿಂದ ಅಸದ್ಧರ್ಮಿಕವಾದ ಯಾವುದೇ ಭೇದವನ್ನು ಒಪ್ಪುವುದಿಲ್ಲ. ಆದ್ದರಿಂದಲೇ ಆಚಾರ್ಯರು **'ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾ ಪೃಥಕ್'** ಭಾವದಲ್ಲಿರುವ ಭೇದವು ಭಾವಸ್ವರೂಪವಾದುದು. ಅಭಾವದಲ್ಲಿರುವ ಭೇದವು ಅಭಾವಸ್ವರೂಪವಾದುದು ಎಂದು ಭಾವಾಭಾವಗಳಲ್ಲಿರುವ ಭೇದವನ್ನು ಹೇಳಿದ್ದಾರೆಯೇ ಹೊರತು ಅಸತ್ತಿನಲ್ಲಿರುವ ಭೇದವು ಯಾವ ರೂಪವಾದದ್ದು ಎಂದು ಹೇಳಲಿಲ್ಲ. ಏಕೆಂದರೆ ಅಸದ್ಧರ್ಮಿಕವಾದ ಭೇದವು ಅವರಿಗೆ ಅಸಮ್ಮತವಾದದ್ದು.

ಅತ್ರಘಟೋ ಭವಿಷ್ಯತಿ– ಇಲ್ಲಿ ಘಟವುಂಟಾಗುತ್ತದೆ ಎಂಬುದು ಪ್ರಾಗಭಾವದ ಪ್ರತೀತಿ. ಅತ್ರಘಟೋ ನಷ್ಟಃ– ಇಲ್ಲಿ ಘಟವು ನಷ್ಟವಾಯಿತು ಎಂಬುದು ಧ್ವಂಸದ ಪ್ರತೀತಿ, ಘಟಃ ಪಟೋನ– ಘಟವು ಪಟವಲ್ಲ ಎಂಬುದು ಅನ್ಯೋನ್ಯಾಭಾವ

ಪ್ರತೀತಿ. ಈ ಮೂರು ಅಭಾವಗಳಿಗೂ ಧರ್ಮಿಯ ಸತ್ವವು ನಿಯತವಾಗಿ ಅಪೇಕ್ಷಿತವಾಗುತ್ತದೆ. ಆದ್ದರಿಂದ ಅಸತ್ತಿನಲ್ಲಿ ಅನ್ಯೋನ್ಯಾಭಾವರೂಪವಾದ ಭೇದವನ್ನು ಒಪ್ಪಿದರೆ ಧರ್ಮಿಯ ಸತ್ವವನ್ನು ಒಪ್ಪಬೇಕಾಗುತ್ತದೆ. ಅದು ವ್ಯಾಹತವಾದುದು. ಆದ್ದರಿಂದ ಅಸತ್ತಿನಲ್ಲಿ ಭೇದವಿಲ್ಲ.

ಪ್ರಾಗಭಾವದಲ್ಲಿ ಪ್ರತಿಯೋಗಿಗೆ ಪಶ್ಚಾತ್ ಸತ್ಯವಿದೆ. ಆದ್ದರಿಂದಲೇ ಅದು ಪ್ರಾಗಭಾವ- ಎಂದರೆ ಪ್ರತಿಯೋಗಿಗಿಂತ ಮೊದಲು ಇರುವ ಅಭಾವ. ಧ್ವಂಸಸ್ಥಳ ಪ್ರತಿಯೋಗಿಗೆ ಮೊದಲು ಸತ್ವವಿದೆ. ಆದ್ದರಿಂದ ಅದು ಉತ್ತರಾಭಾವಕಾಲದಲ್ಲಾಗಲೀ ಅಥವಾ ಭವಿಷ್ಯತ್ ಕಾಲದಲ್ಲಾಗಲೀ ಪ್ರತಿಯೋಗಿಯ ಸತ್ವವಿಲ್ಲವೋ ಅದೇ ಅತ್ಯಂತಾಭಾವ.

ಘಟದ ಪ್ರಾಗಭಾವ ಧ್ವಂಸಗಳ ಪ್ರತೀತಿ ಬರುವಾಗ ಅತ್ರಘಟೋ ನಾಸೀತ್, ಅತ್ರಘಟೋ ಧ್ವಸ್ತಃ ಎಂದು ಅಧಿಕರಣವಿಶೇಷಗಳ ಪ್ರತೀತಿಯು ಇದೆ. ಅತ್ಯಂತಾಭಾವದ ಪ್ರತೀತಿಯು ಬರುವಾಗ ಶಶವಿಷಾಣಂ ನಾಸ್ತಿ ಶಶವಿಷಾಣವು ಇಲ್ಲ. ಶುಕ್ತಿರಜತಂ ನಾಸ್ತಿ- ಶುಕ್ತಿರಜತವು ಇಲ್ಲ ಎಂದು ಅಧಿಕರಣವಿಶೇಷವನ್ನು ಉಲ್ಲೇಖಿಸದೆ ಪ್ರತೀತಿಯು ಬರುತ್ತದೆ. ಶಶವಿಷಾಣಂ ನಾಸ್ತಿ ಎಂದರೆ ಸರ್ವದೇಶೇ ಸರ್ವಕಾಲೇ ಶಶವಿಷಾಣಂ ನಾಸ್ತಿ ಎಂದೇ ಅರ್ಥ. ಶಶವಿಷಾಣಾತ್ಯಂತಾಭಾವಕ್ಕೆ ಎಲ್ಲ ದೇಶವೂ ಎಲ್ಲ ಕಾಲವೂ ಧರ್ಮಿಯಾಗುತ್ತದೆ. ಆದ್ದರಿಂದ ಅತ್ಯಂತಾಭಾವಕ್ಕೂ ಧರ್ಮಿಯ ಅಪೇಕ್ಷೆ ಇದೆ. ಹೀಗೆ ಹೇಳಿ ಅಭಾವಗಳ ಸ್ವಭಾವವಿಷಯದಲ್ಲಿ ಒಂದು ಸಂಗ್ರಾಹಕವಾದ ಮಾತನ್ನಾಡಿದ್ದಾರೆ.

**ಅತೋಽಭಾವೋಽತಿದುಷ್ಟೋಽಯಂ ಸ್ವಗೋತ್ರಕಲಹಪ್ರಿಯಃ ।**
**ಧರ್ಮಿಣ್ಯೇಕಃ ಸದೈಕಾಕೀ ಪ್ರತಿಯೋಗಿನಿ ತೇ ತ್ರಯಃ ॥**

ಈ ಅಭಾವವು ಅತಿದುಷ್ಟವಾದುದು. ಭಾವವು ಅಭಾವದ ಜೊತೆಯಲ್ಲಿ ಮಾತ್ರ ವಿರೋಧಮಾಡುತ್ತದೆ. ಅಭಾವವಾದರೂ ತನ್ನ ಗೋತ್ರಕ್ಕೇ ಸೇರಿದ ಉಳಿದ ಅಭಾವಗಳ ಜೊತೆಯಲ್ಲಿಯೂ ವಿರೋಧವನ್ನು ಮಾಡುತ್ತವೆ. ಒಂದು ಅಭಾವವು ಧರ್ಮಿಯಲ್ಲಿ ಏಕಾಕಿಯಾಗಿರುತ್ತದೆ. ಉಳಿದ ಮೂರು ಅಭಾವಗಳು ಪ್ರತಿಯೋಗಿಯಲ್ಲಿ ಏಕಾಕಿಯಾಗಿರುತ್ತವೆ ಎಂದು ಹೇಳಿದ್ದಾರೆ.

ಎಂದರೆ ಘಟದಲ್ಲಿ ಘಟಸ್ವರೂಪವಾದ ಭೇದವು ಎಂದರೆ ಅನ್ಯೋನ್ಯಾಭಾವವಿರುವಾಗ ಆ ಘಟದ ಪ್ರಾಗಭಾವವೂ ಇಲ್ಲಿ ಧ್ವಂಸವು ಇಲ್ಲ ಅತ್ಯಂತಾಭಾವವೂ ಇಲ್ಲ. ಆದ್ದರಿಂದ ಅನ್ಯೋನ್ಯಾಭಾವವು ಧರ್ಮಿಯಲ್ಲಿ ಏಕಾಕಿ.

ಉಳಿದ ಮೂರು ಅಭಾವಗಳು ಎಂದರೆ ಪ್ರಾಗಭಾವಧ್ವಂಸ ಮತ್ತು ಅತ್ಯಂತಾಭಾವಗಳು. ಇವು ಪ್ರತಿಯೋಗಿಯಲ್ಲಿ ಎಂದರೆ ಘಟದಲ್ಲಿ ಪ್ರಾಗಭಾವ ಪ್ರತಿಯೋಗಿತ್ವವು ಇರುವಾಗ ಪ್ರತಿಯೋಗಿಯಾದ ಘಟದ ಧ್ವಂಸವು ಇರುವುದಿಲ್ಲ, ಅತ್ಯಂತಾಭಾವವು ಇರುವುದಿಲ್ಲ. ಹಾಗೆಯೇ ಘಟಸ್ವರೂಪವಾದ ಅನ್ಯೋನ್ಯಾಭಾವವೂ ಇರುವುದಿಲ್ಲ. ಘಟದಲ್ಲಿ ಧ್ವಂಸಪ್ರತಿಯೋಗಿತ್ವವಿರುವಾಗ ಅದರಂತೆ ಘಟಪ್ರಾಗಭಾವವಿಲ್ಲ, ಘಟಾತ್ಯಂತಾಭಾವವಿಲ್ಲ ಮತ್ತು ಘಟಸ್ವರೂಪವಾದ ಅನ್ಯೋನ್ಯಾಭಾವವೂ ಇಲ್ಲ. ಅದರಂತೆ ಘಟದ ಅತ್ಯಂತಾಭಾವವಿರುವಾಗ ಘಟದ ಪ್ರಾಗಭಾವವಿಲ್ಲ, ಧ್ವಂಸವಿಲ್ಲ ಮತ್ತು ಅನ್ಯೋನ್ಯಾಭಾವವಿಲ್ಲ. ಹೀಗೆ ಅಭಾವವು ಸ್ವಗೋತ್ರಕ್ಕೆ ಸೇರಿದ ಅಭಾವಗಳ ಜೊತೆಯಲ್ಲಿಯೂ ಕಲಹವನ್ನು ಮಾಡಿ ಧರ್ಮಿಯಲ್ಲಿ ಅಥವಾ ಪ್ರತಿಯೋಗಿಯಲ್ಲಿ ಒಂದೊಂದೇ ಇರುತ್ತದೆ ಎಂದು ಹೇಳುತ್ತಾರೆ. ತಥಾಚ ಎಲ್ಲಾ ಅಭಾವಗಳಿಗೆ ಧರ್ಮಿಸತ್ವವು ನಿಯತವಾದ್ದರಿಂದ ಆರೋಪಿತಭೇದಗಳಲ್ಲಿ ಭೇದತ್ವಸಾಮಾನ್ಯವಿಲ್ಲ. ಆದ್ದರಿಂದ ನಿಮ್ಮ ಅನುಮಾನಕ್ಕೆ ದೃಷ್ಟಾಂತದಲ್ಲಿ ಸಾಧನವೈಕಲ್ಯವು ಬರುವುದರಿಂದ ಅದು ದುಷ್ಟವಾದುದು ಎಂದು ನಿರಾಕರಿಸಿ ಭೇದಸತ್ಯತ್ವವನ್ನು ಸ್ಥಾಪಿಸಿದ್ದಾರೆ.

**'ವಿಮತಾ ಆತ್ಮಾನಃ ಪರಮಾತ್ಮನಃ ಪರಮಾರ್ಥತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್, ವಿಮತಾನಿ ಶರೀರಾಣಿ ಮದೀಯಭೋಗಾಯತನಾಗಿ ಶರೀರತ್ವಾತ್ ಮದೀಯಶರೀರವತ್'** ಮೊದಲಾದ ಭೇದಸಾಮಾನ್ಯ ನಿರಾಸಕವಾದ ಅವರ ಅನುಮಾನಗಳಿಗೆ **'ವಿಮತಾನಿ ಕಲತ್ರಾಣಿ ಮದೀಯಭೋಗಾಯತನಾಗಿ ಕಲತ್ರತ್ವಾತ್ ಮದೀಯ ಕಲತ್ರವತ್'** ಮುಂತಾದ ಅಭಾಸಸಮಾನಯೋಗಕ್ಷೇಮವನ್ನು ಹೇಳಿ ನಿರಾಕರಣೆ ಮಾಡಿದ್ದಾರೆ.

## ಬಿಂಬಪ್ರತಿಬಿಂಬಭಾವ ವಿಮರ್ಶೆ :

ಮಾಯಾವಾದಿಗಳು ಜೀವಬ್ರಹ್ಮರಿಗೆ ಪ್ರತಿಬಿಂಬ ಬಿಂಬಭಾವವನ್ನು ಒಪ್ಪಿ ಬಿಂಬಪ್ರತಿಬಿಂಬಗಳಿಗೆ ಅಭೇದವೇ ಇರುವುದರಿಂದ ಜೀವಬ್ರಹ್ಮರಿಗೂ ಅಭೇದವೇ ಇದೆ ಎಂದು ಹೇಳುತ್ತಾರೆ. ನಾವು ಬಿಂಬಪ್ರತಿಬಿಂಬಗಳಿಗೆ ಭೇದವೇ ಇದೆ. ಬಿಂಬಪ್ರತಿಬಿಂಬಭಾವದಿಂದ ಜೀವಬ್ರಹ್ಮರಿಗೆ ಭೇದವೇ ಸಿದ್ಧವಾಗುವುದೆಂದು ಹೇಳುತ್ತೇವೆ.

'ಯಥೈವಾ ಪುರುಷೇ ಚ್ಛಾಯಾ ಏತಸ್ಮಿನ್ನೇತದಾತತಂ' ಎಂಬ ಉಪನಿಷದ್ವಾಕ್ಯವು ಛಾಯಾ ಪುರುಷದೃಷ್ಟಾಂತದಿಂದ ಬ್ರಹ್ಮಜೀವರಿಗೆ ಬಿಂಬಪ್ರತಿಬಿಂಬಭಾವವನ್ನು ಹೇಳುತ್ತದೆ. ಬಹಳ ರೀತಿಯಿಂದ ಸಾಮ್ಯವಿರುವುದರಿಂದ ಈ ದೃಷ್ಟಾಂತವನ್ನು ಶಾಸ್ತ್ರಜ್ಞರು ಮುಖ್ಯೋಪಮಾ ಎಂದು ಹೇಳುತ್ತಾರೆ. ಛಾಯೆಯು ಪುರುಷನ ಆಕಾರವನ್ನು ಹೊಂದುತ್ತದೆ. ಛಾಯೆಯ ಚಲನೆಯು ಪುರುಷನ ಚಲನೆಯ ಅಧಿೀನವಾಗಿದೆ. ಛಾಯೆಯು ಪುರುಷನಿಗಿಂತ ಭಿನ್ನವಾಗಿದೆ. ದೃಷ್ಟಾಂತವನ್ನು ಶೋಧಿಸಿದರೆ ಇಷ್ಟು ಅಂಶಗಳು ದೊರೆಯುತ್ತವೆ. ಛಾಯೆಉ ಪುರುಷನಿಗಿಂತ ಭಿನ್ನವೆಂದು ಸರ್ವಾನುಭವಸಿದ್ಧವಾದರೂ 'ಏಕಸ್ಮಿನ್ನೇತದಾತಕಂ' ಪುರುಷನನ್ನು ಆಶ್ರಯಿಸಿಕೊಂಡಿದೆ ಎಂದು ಪುರುಷನಿಗೆ ಆಧಾರತ್ವವನ್ನೂ ಛಾಯೆಗೆ ಆಧೇಯತ್ವವನ್ನೂ ಹೇಳಿ ಈ ವಿರುದ್ಧಧರ್ಮಾದಿಕರಣತ್ವರೂಪವಾದ ಯುಕ್ತಿಯಿಂದ ಭೇದದಲ್ಲಿ ತನ್ನ ತಾತ್ಪರ್ಯವನ್ನು ಸೂಚಿಸಿದೆ. ಛಾಯಾಶಬ್ದಪ್ರಯೋಗದಿಂದಲೇ ಜೀವನು ಭೃತ್ಯ ಎಂದು ಸೂಚಿಸುತ್ತದೆ. ಏಕೆಂದರೆ ಅನುಕೂಲನಾದ ಭೃತ್ಯವನ್ನು ಸ್ವಾಮಿಯ ಛಾಯೆಯೆಂದು ಹೇಳುತ್ತಾರೆ. ಛಾಯಾ ಎಂಬ ಶಬ್ದದಿಂದಲೇ ಜೀವನು ಪ್ರತಿಬಿಂಬನೆಂದೂ ಸಿದ್ಧವಾಗುತ್ತದೆ. ಏಕೆಂದರೆ ಪ್ರತಿಬಿಂಬವನ್ನು ಪ್ರತಿಚ್ಛಾಯೆ ಎಂದು ಕರೆಯುತ್ತಾರೆ. ದೃಷ್ಟಾಂತವನ್ನು ನೋಡಿದರೆ ಛಾಯೆಗೆ ಇರುವ ಪುರುಷನ ಸಾಮ್ಯವು ಅಲ್ಪವೆಂದೇ ತೋರುತ್ತದೆ. ಪುರುಷನಿಗಿರುವ ಜ್ಞಾನ ಬಲಗಳು ಛಾಯೆಗೆ ಇರುವುದಿಲ್ಲವಷ್ಟೆ? ಪುರುಷ ಶಬ್ದವನ್ನು ದಾರ್ಷ್ಟಾಂತಿಕದಲ್ಲೂ ಅನುವೃತ್ತಿಮಾಡಿಕೊಳ್ಳಬೇಕಾಗುವುದರಿಂದ ಹರಿಯಲ್ಲಿ ಆಧಾರತ್ವ, ಸಾಕಾರತ್ವ, ಸ್ವಾಮಿತ್ವ ಮತ್ತು ಪೂರ್ಣತ್ವಗಳು ಸಿದ್ಧವಾಗುತ್ತವೆ. ಬಾಧಿತವಾದ ಸಾಮ್ಯವೊಂದನ್ನು ಬಿಟ್ಟು ಉಳಿದೆಲ್ಲಾ ಸಾಮ್ಯಗಳೂ ದೃಷ್ಟಾಂತ ದಾರ್ಷ್ಟಾಂತಿಕಗಳಲ್ಲಿ ಇರಬೇಕಷ್ಟೆ? ಇಲ್ಲದಿದ್ದರೆ ಯಥಾ-ತಥಾ ಶಬ್ದಗಳು ವ್ಯರ್ಥವಾಗುತ್ತವೆ.

**'ರೂಪಂ ರೂಪಂ ಪ್ರತಿರೂಪೋ ಬಭೂವ'** ಎಂಬ ಕಾಠಕಶ್ರುತಿಯೂ ಇಂದ್ರನ ಒಂದೊಂದು ರೂಪಗಳನ್ನು ಕುರಿತು ಜೀವನುಪ್ರತಿಬಿಂಬನಾದವನು ಎಂದು ಹೇಳಿ ಬಿಂಬಪ್ರತಿಬಿಂಬಗಳಿಗೆ ಸದೃಶರೂಪ ಆಕಾರಗಳನ್ನು ಹೇಳುತ್ತದೆ. ಇಂದ್ರನ ಪರಮೈಶ್ವರ್ಯವು ಜೀವನಲ್ಲಿ ಇಲ್ಲವೆಂದು ತೋರಿಸಿ ವಿಸದೃಶತ್ವವನ್ನೂ ಹೇಳುತ್ತದೆ. ಆದ್ದರಿಂದಲೇ ಪ್ರತಿಬಿಂಬ ಶಬ್ದದಿಂದ ಹೇಳಲ್ಪಡುತ್ತದೆ. ವಿಸದೃಶತ್ವವೇ ಇಲ್ಲದಿದ್ದರೆ ಅದೂ ಬಿಂಬವೇ ಆಗುತ್ತಿದ್ದಿತು. ವಿಸದೃಶತ್ವವು

ಭೇದಜ್ಞಾಪಕವಾದ್ದರಿಂದ ಇಲ್ಲಿಯೂ ಭೇದವೇ ಸಿದ್ಧವಾಗುತ್ತದೆ. ಬಿಂಬ ಪ್ರತಿಬಿಂಬಗಳಿಗೆ ಪ್ರತ್ಯಕ್-ಪರಾಗ್ಭಾವವಿದೆ. ಪ್ರತ್ಯಕ್‌ಪರಾಗ್ಭಾವವಿದ್ದಲ್ಲಿ ಭೇದವಿದೆ ಎಂದು ನಿಮ್ಮ ಮೂಲಭಾಷ್ಯಾಕಾರರೇ ಒಪ್ಪಿದ್ದಾರೆ. ಜ್ಞಾನ-ಜ್ಞೇಯಗಳಿಗೆ ಪ್ರತ್ಯಕ್ ಪರಾಗ್ಭಾವವಿರುವುದರಿಂದ ಅವು ಹೇಗೆ ಭಿನ್ನವೋ ಬಿಂಬ ಪ್ರತಿಬಿಂಬಗಳೂ ಅದರಂತೆಯೇ ಭಿನ್ನವಾಗಿವೆ. ಬಿಂಬಪ್ರತಿಬಿಂಬಗಳಲ್ಲಿ ಸಾದೃಶ್ಯವೂ ಪೂರ್ಣವಾಗಿಲ್ಲದಿರುವುದರಿಂದ ಇನ್ನು ಅಭೇದವು ಎಲ್ಲಿಂದ ಬರಬೇಕು? ಕಸ್ತೂರಿಯ ಪ್ರತಿಬಿಂಬದಲ್ಲಿ ಪರಿಮಳವಾಗಲೀ, ಅಗ್ನಿಯ ಪ್ರತಿಬಿಂಬದಲ್ಲಿ ದಾಹಕತ್ವವಾಗಲೀ, ಪರ್ವತ ಪ್ರತಿಬಿಂಬದಲ್ಲಿ ಗುರುತ್ವವಾಗಲೀ ಇಲ್ಲವೆಂದು ಎಲ್ಲರ ಅನುಭವಸಿದ್ಧವಾಗಿದೆ. ಪಾರ್ಶ್ವದಲ್ಲಿ ನಿಂತ ಇನ್ನೊಬ್ಬ ಪುರುಷನು ಮುಖ ಮತ್ತು ಪ್ರತಿಬಿಂಬಗಳೆರಡನ್ನೂ ಭಿನ್ನವೆಂದೇ ನೋಡುತ್ತಾನೆ. ಭೇದಪ್ರತ್ಯಕ್ಷಕ್ಕೆ ಬಾಧಕವಿಲ್ಲ. ಕನ್ನಡಿಯಲ್ಲಿನ ಪ್ರತಿಬಿಂಬವನ್ನು ನೋಡಿ ಮುಖ ಎಂದು ವ್ಯವಹಾರವು ಚಿತ್ರದಲ್ಲಿ ಬರೆದ ಸಿಂಹವನ್ನು ನೋಡಿ ಸಿಂಹ ಎಂದು ವ್ಯವಹಾರಮಾಡಿದಂತೆ ಕೇವಲ ಸಾದೃಶ್ಯದಿಂದ ಉಪಪನ್ನವಾಗುತ್ತದೆ. ಆದ್ದರಿಂದ ಬಿಂಬ ಪ್ರತಿಬಿಂಬಗಳು ಭಿನ್ನವಾದವುಗಳು. ಪ್ರತಿಬಿಂಬಕ್ಕೆ ಬಿಂಬ ಸನ್ನಿಧಾನವು ನಿಮಿತ್ತಕಾರಣ. ಉಪಾಧಿಯೇ ಉಪಾದಾನ. ಈಶ್ವರನೇ ಕರ್ತೃ. ಹೀಗೆ ತಂತುವಿನಿಂದ ಪಟವು ಉತ್ಪನ್ನವಾದಂತೆ ಪ್ರತಿಬಿಂಬವು ಉತ್ಪತ್ತಿಯನ್ನು ಹೊಂದುತ್ತದೆ. ಹೀಗೆ ಒಪ್ಪಬೇಕೇ ಹೊರತು ಕಣ್ಣಿನ ರಶ್ಮಿಗಳು ಕನ್ನಡಿಗೆ ಹೊಡೆದು ಹಿಂದಿರುಗಿ ಮುಖವನ್ನೇ ನೋಡುತ್ತವೆ ಮುಂತಾದ ಪರರ ಪ್ರಕ್ರಿಯೆಯು ಅಪ್ರಾಮಾಣಿಕವೆಂದು ಅನೇಕ ಯುಕ್ತಿಗಳಿಂದ ಸಾಧಿಸಿದ್ದಾರೆ.

## ಉಪಸಂಹಾರ :

ಜೀವೇಶ್ವರಭೇದ, ಜೀವಜಡಭೇದ, ಜಡೇಶ್ವರಭೇದ, ಜೀವಜೀವಭೇದ, ಜಡಜಡಭೇದ ಈ ಐದು ಭೇದಗಳೂ ಸತ್ಯವಾದುವು ಎಂದು ಈ ಸೌರಭವನ್ನು ಪ್ರಾರಂಭಿಸಿದರೂ ವಿಶೇಷವಾಗಿ ಜೀವೇಶ್ವರಭೇದದ ಸಮರ್ಥನೆಗೇ ಹೆಚ್ಚು ಭಾಗವನ್ನು ಇಲ್ಲಿ ಮೀಸಲಾಗಿಟ್ಟಿದ್ದಾರೆ. ಏಕೆಂದರೆ ಅದ್ವೈತಿಗಳು ಪ್ರಧಾನತತ್ತ್ವವಾದ ಜೀವಬ್ರಹ್ಮಾಭೇದವು ನಮಗೆ ಅತ್ಯಂತನಿರಾಕರಣೀಯವಾದುದು. ಈ ಭೇದಗಳ ವಿಷಯದಲ್ಲಿ ಪ್ರತ್ಯಕ್ಷ ಅನುಮಾನಗಳನ್ನು ಹೇಳಿರುವುದಲ್ಲದೆ ವಿಶೇಷವಾಗಿ ಶ್ರುತಿಸ್ಮೃತಿಗಳನ್ನು ಉದಾಹರಿಸಿ ಸಮರ್ಥನೆ ಮಾಡಿದ್ದಾರೆ. ಅಲ್ಲದೆ ಪರರು ಅಭೇದಸಾಧಕವಾಗಿ ಹೇಳುವ ಯುಕ್ತಿಗಳನ್ನು ಮತ್ತು ಶ್ರುತಿಗಳನ್ನು ನಿರಾಕರಿಸಿ

ಪಂಚಭೇದಗಳನ್ನು ಸಾಧಿಸಿ ಅದರಿಂದ ವಿಷ್ಣುಸರ್ವೋತ್ತಮತ್ವವು ಸಿದ್ಧವಾಗುವುದೆಂದು ತಿಳಿಸಿದ್ದಾರೆ.

ಗುರುಗಳ ಆಜ್ಞೆಯಂತೆ ಈ ಮುನ್ನುಡಿಯನ್ನು ಬರೆದಿದ್ದೇನೆ. ಗ್ರಂಥವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಗುರುಮುಖದಿಂದ ಕ್ರಮಬದ್ಧವಾದ ಅಧ್ಯಯನವನ್ನು ಮಾಡಬೇಕು. ಅಂತಹ ಅಧ್ಯಯನವನ್ನು ಮಾಡಲು ಈ ಮುನ್ನುಡಿಯ ಅಭಿರುಚಿಯನ್ನುಂಟು ಮಾಡುವುದಾದರೆ ಈ ಪ್ರಯತ್ನವನ್ನು ಸಾರ್ಥಕವೆಂದು ಭಾವಿಸಿ **ಶ್ರೀಹರಿವಾಯುಗುರುಗಳನ್ನು ವಿಶೇಷವಾಗಿ ವಾದಿರಾಜರನ್ನು ಮತ್ತು ಶ್ರೀವಿದ್ಯಾಗುರುಗಳನ್ನು ಶ್ರೀವಿಶ್ವೇಶತೀರ್ಥರನ್ನು ಮತ್ತು ಶ್ರೀವಿಶ್ವವಲ್ಲಭತೀರ್ಥರನ್ನು ಸ್ಮರಿಸಿ ನಮಸ್ಕರಿಸಿ** ಈ ಲೇಖನವನ್ನು ಮುಗಿಸುತ್ತಿದ್ದೇನೆ. ಶ್ರೀಕೃಷ್ಣಾರ್ಪಣಮಸ್ತು.

**- ಪಿ.ಎಸ್. ಶೇಷಗಿರಿ ಆಚಾರ್ಯ**

## ಭೇದಸೌರಭದ ಲೇಖನಯಜ್ಞದಲ್ಲಿ ಭಾಗವಹಿಸಿದ ವಿದ್ವಾಂಸರುಗಳು

★ ವಿದ್ವಾನ್ ಬನ್ನಂಜೆ ಗೋಪಾಲಕೃಷ್ಣ ಉಪಾಧ್ಯಾಯ, ಉಡುಪಿ
★ ಡಾ।। ಚತುರ್ವೇದಿ ವೇದವ್ಯಾಸಾಚಾರ್ಯ, ಬೆಂಗಳೂರು
★ ಡಾ।। ಎ. ಗುರುರಾಜ ಗುಡಿ, ಅಥಣಿ
★ ವಿದ್ವಾನ್ ಗುರುರಾಜಾಚಾರ್ಯ ಕುಲಕರ್ಣಿ, ಬೆಂಗಳೂರು
★ ವಿದ್ವಾನ್ ವಾಳ್ವೇಕರ್ ಶ್ರೀಹರಿ ಆಚಾರ್ಯ, ಹುಬ್ಬಳ್ಳಿ
★ ಡಾ।। ಸಿ.ಎಚ್. ಶ್ರೀನಿವಾಸಮೂರ್ತಿ, ಮೈಸೂರು
★ ವಿದ್ವಾನ್ ರಘುಪತಿ ಉಪಾಧ್ಯಾಯ, ಬೆಂಗಳೂರು
★ ವಿದ್ವಾನ್ ಎಸ್. ವಿಟ್ಠಲದಾಸ ಭಟ್, ಬೆಂಗಳೂರು
★ ವಿದ್ವಾನ್ ಎನ್. ಪಾಂಡುರಂಗಾಚಾರ್ಯ ಪಾಂಡುರಂಗಿ
★ ಡಾ।। ಶ್ರೀಕಾಂತಾಚಾರ್ಯ ಬಾಯರಿ
★ ವಿದ್ವಾನ್ ಅಬ್ಬೂರು ನಾಗೇಂದ್ರಾಚಾರ್ಯ
★ ವಿದ್ವಾನ್ ಮಾತರಿಶ್ವಾಚಾರ್ಯ, ಬೆಂಗಳೂರು
★ ವಿದ್ವಾನ್ ಶ್ರೀನಿವಾಸಾಚಾರ್ಯ ಹೊನ್ನಿದಿಬ್ಬ
★ ವಿದ್ವಾನ್ ಗುರುಮೂರ್ತಿ ಆಚಾರ್ಯ, ಬೆಂಗಳೂರು
★ ವಿದ್ವಾನ್ ಪ್ರತೋಷಾಚಾರ್ಯ, ಬೆಂಗಳೂರು
★ ವಿದ್ವಾನ್ ರಾಘವೇಂದ್ರಾಚಾರ್ಯ ಪುರಾಣಿಕ್, ಉಡುಪಿ
★ ಡಾ।। ಎನ್. ವೇಂಕಟೇಶಾಚಾರ್ಯ, ಬೆಂಗಳೂರು
★ ವಿದ್ವಾನ್ ರಾಜಗೋಪಾಲಾಚಾರ್ಯ ಉಪಾಧ್ಯಾಯ, ಮೈಸೂರು

**ಮೂಲಪ್ರತಿಶೋಧಕರು :-**

★ ವಿದ್ವಾನ್ ಬಿ.ಎನ್. ಮಾಧವಾಚಾರ್ಯ, ಬೆಂಗಳೂರು
ವಿದ್ವಾನ್ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಶಿಷ್ಯರು

★ ಭೇದಸೌರಭದ ಅನೇಕ ಭಾಗಗಳನ್ನು ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಅನುವಾದ ಮಾಡಿರುತ್ತಾರೆ.

# ಭೇದಸೌರಭಮ್ - ಸಂಪುಟ - ೪

## ವಿಷಯಾನುಕ್ರಮಣಿಕೆ



—೦—

॥ ಶ್ರೀಮದ್‌ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

ಸರ್ವವಸ್ತ್ವಾತ್ಮಕತ್ವಂ ಚ ಯದನಂತತ್ವಮೀರಿತಮ್ ।
ತದಯುಕ್ತತಮಂ ಮನ್ಯೇ ಯುಕ್ತಾಯುಕ್ತವಿಚಾರಣೇ ॥ ೧ ॥

ಸಮಸ್ತವಸ್ತುರೂಪತ್ವಂ ನ ತಾವತ್ ಸ್ವಸ್ಯ ಶೋಭತೇ ।
ಜಡಾನೃತವಿರೋಧಿತ್ವಂ ಯದ್ ಬ್ರಹ್ಮಣಿ ಜಗೌ ಸ್ವಯಮ್ ॥ ೨ ॥

ಶ್ರುತಿಃ ಪ್ರಾಗ್‌ಜ್ಞಾನಮಿತ್ಯಾಹ ಯತಸ್ತಜ್ಜಡರೂಪತಾ ।
ನ ತಸ್ಯಾಶ್ಚ ಮತಾ ನಾಪಿ ಶಬ್ದಸ್ಯ ಹೃದಯಂಗಮಾ ॥ ೩ ॥

**ಅರ್ಥ–** ಚ= ಮತ್ತು, ಅನಂತತ್ವಂ= ಅನಂತತ್ವವೆಂದರೆ, ಸರ್ವವಸ್ತ್ವಾತ್ಮಕತ್ವಂ= ಸರ್ವವಸ್ತು ಸ್ವರೂಪತ್ವ ಎಂದು, ಯತ್= ಯಾವ ಅನಂತಶಬ್ದಾರ್ಥವು, ಈರಿತಂ= ಹೇಳಲ್ಪಟ್ಟಿದೆಯೋ, ಯುಕ್ತಾಯುಕ್ತವಿಚಾರಣೇ= ಯುಕ್ತಾಯುಕ್ತವಿಚಾರವನ್ನು ಮಾಡಿದರೆ, ತತ್= ಅದು, ಅಯುಕ್ತತಮಂ= ಅತ್ಯಂತ ಅಯುಕ್ತವೆಂದು, ಮನ್ಯೇ= ತಿಳಿಯುತ್ತೇನೆ. ಸಮಸ್ತ ವಸ್ತುರೂಪತ್ವಂ= ಸಮಸ್ತವಸ್ತುರೂಪತ್ವವು, ತಾವತ್= ಮೊದಲನೆಯದಾಗಿ, ಸ್ವಸ್ಯ= ತನಗೆ, ನ ಶೋಭತೇ= ಶೋಭಿಸುವುದಿಲ್ಲ, ಯತ್= ಏಕೆಂದರೆ, ಸ್ವಯಂ= ತಾನೇ, ಜಡಾನೃತ ವಿರೋಧಿತ್ವಂ= ಬ್ರಹ್ಮಸ್ವರೂಪವು ಜಡಾನೃತ ವಿರೋಧಿ ಎಂದು, ಜಗೌ= ಹೇಳಿದ್ದಾನೆ, ಮತ್ತು, ಶ್ರುತಿಃ= ಶ್ರುತಿಯು, ಯತ್= ಯಾವ ಕಾರಣದಿಂದ, ಪ್ರಾಕ್= ಮೊದಲು, ಜ್ಞಾನಮಿತ್ಯಾಹ= ಜ್ಞಾನವೆಂದು ಹೇಳಿತೋ, ಆ ಕಾರಣದಿಂದ, ಜಡರೂಪತಾ= ಬ್ರಹ್ಮನಿಗೆ ಜಡರೂಪತ್ವವು, ತಸ್ಯಾಶ್ಚ= ಆ ಶ್ರುತಿಗೂ ಸಹ, ಮತಾ ನ= ಸಮ್ಮತವಾದುದಲ್ಲ, ಅಪಿ= ಮತ್ತು, ಶಬ್ದಸ್ಯ= ಅನಂತ ಎಂಬ ಶಬ್ದಕ್ಕೆ, ಹೃದಯಂಗಮಾ= ಸ್ವಾರಸಿಕವಾದ, ಮನೋಹರವಾದ ಅರ್ಥವು, ನ= ಆಗುವುದಿಲ್ಲ.

ಅನುವಾದ– ಅನಂತ ಶಬ್ದಕ್ಕೆ ಸರ್ವವಸ್ತ್ವಾತ್ಮಕತ್ವ ಎಂದು ಅರ್ಥ ಎಂದು ಅದ್ವೈತಿಗಳು ಹೇಳಿರುವುದು ಯುಕ್ತಾಯುಕ್ತವಿಚಾರಣೆಯನ್ನು ಮಾಡಿದರೆ ಅತ್ಯಂತ ಅಯುಕ್ತವಾದುದೆಂದು ಭಾವಿಸುತ್ತೇನೆ. ಸಮಸ್ತ ವಸ್ತುರೂಪತ್ವವು ಮೊದಲನೆಯದಾಗಿ

ತನಗೇ ಶೋಭಿಸುವುದಿಲ್ಲ. ಏಕೆಂದರೆ ಬ್ರಹ್ಮಸ್ವರೂಪವು ಜಡಾನೃತವಿರೋಧಿ ಎಂದು ತಾನೇ ಹೇಳಿದ್ದಾನೆ. ಶ್ರುತಿಯಾದರೂ ಮೊದಲು ಜ್ಞಾನಂ ಎಂದು ಹೇಳಿರುವ ಕಾರಣದಿಂದ, ಜಡ ರೂಪತ್ವವು, ಅದಕ್ಕೂ ಸಮ್ಮತವಾದುದಲ್ಲ ಮತ್ತು ಸರ್ವವಸ್ತ್ವಾತ್ಮಕತ್ವವು ಅನಂತಶಬ್ದದ ಸ್ವಾರಸಿಕವಾದ, ಮನೋಹರವಾದ ಅರ್ಥವೂ ಅಲ್ಲ.

**ಭಾವವಿಲಾಸಿನೀ**– ಅಧುನಾ ವಿಷ್ಣೋರ್ಜೀವಜಡಾತ್ಮಕಪ್ರಪಂಚಾದತ್ಯಂತಭಿನ್ನತಾಂ ಸಾಧಯಿತುಂ ತೃತೀಯಸೌರಭಮುಪಕ್ರಮತೇ – **ಸರ್ವವಸ್ತ್ವಾತ್ಮಕತ್ವಂ ಚೇತಿ** ॥ ಸತ್ಯಂ ಜ್ಞಾನಮನಂತಂ ಬ್ರಹ್ಮೇತಿ ಶ್ರುತೌ ವಿದ್ಯಾಮಾನಮನಂತತ್ವಂ ಸರ್ವವಸ್ತ್ವಾತ್ಮಕತ್ವಮಿತಿ ಯದುಚ್ಯತೇ ತದಿತಿ ಸಂಬಂಧಃ । ಮಾಯಾವಾದಿನೋಽಹ್ಯನಂತಶಬ್ದಸ್ಯ ದೇಶತಃ ಅಂತರಾಹಿತ್ಯಂ ಕಾಲತಃ ಅಂತರಾಹಿತ್ಯಂ ವಸ್ತುತಃ ಅಂತರಾಹಿತ್ಯಂ ಚೇತ್ಯಂತ ಶಬ್ದಾರ್ಥಃ । ತತ್ರ ವಸ್ತುತೋಽಂತರಾಹಿತ್ಯಂ ನಾಮ ಸಕಲವಸ್ತುಭೇದರಾಹಿತ್ಯಮಿತಿ ವದಂತಿ । ತದಯುಕ್ತಮಮಿತಿ ಭಾವಃ ॥ ೧ ॥

ಕುತೋ ನಯುಕ್ತಮಿತ್ಯತ ಆಹ – **ಸಮಸ್ತೇತಿ** ॥ ಅನೃತಜಡವಿರೋಧಿರೂಪಮಂತತ್ರಯಮಲಬಂಧನ ದುಃಖತಾವಿರುದ್ಧಮಿತಿ ಗ್ರಂಥೇ ಬ್ರಹ್ಮಣೋಽನೃತಸಮಸ್ತವಸ್ತುವಿರೋಧಿತ್ವಕಥನಾತ್ ಇದಾನೀಂ ಸಮಸ್ತವಸ್ತುಭೇದರಾಹಿತ್ಯ ಕಥನಮಿದಂ ಸ್ವಮತವಿರುದ್ಧತ್ವಾದಯುಕ್ತಮಿತಿ ಭಾವಃ ॥ ೨ ॥

ದೂಷಣಾಂತರಂ ಚಾಹ – **ಶ್ರುತಿರಿತಿ** ॥ ಯತಃ ಶ್ರುತಿಃ ಸತ್ಯಂ ಜ್ಞಾನಮನಂತಮಿತಿ ಶ್ರುತಿಃ । ಪ್ರಾಕ್‌ಪೂರ್ವಭಾಗೇ ಜ್ಞಾನಮಿತಿ ಜ್ಞಾನರೂಪತಾಮಾಹ–**ತತ್ತಸ್ಮಾತ್ತಸ್ಯಾಃ ಶ್ರುತೇಃ** ॥ ಉಪಲಕ್ಷಣಂ ಚೈತತ್ । ಸತ್ಯಮಿತಿ ಬ್ರಹ್ಮಣಃ ಪ್ರಾಕ್ ಸತ್ಯತ್ವೋಕ್ತೇರಧುನಾಽನೃತಜಗದ್ರೂಪತ್ವಾಂಗೀಕಾರೇ ಪರಮತೇ ಶ್ರುತಿವಿರೋಧಶ್ಚೇತ್ಯಪಿ ದ್ರಷ್ಟವ್ಯಮ್ । ದೋಷಾಂತರಂ ಚ ವಕ್ತುಮಾರಭತೇ ॥ **ನಾಪೀತಿ** ॥ ಶಬ್ದಸ್ಯಾನಂತಶಬ್ದಸ್ಯ । ಹೃದಯಂಗಮಾ ಅಭಿಪ್ರೇತಾ ॥ ೩ ॥

**ವಿವರಣೆ**– ಈಗ ವಿಷ್ಣುವಿಗೆ ಸರ್ವಜೀವ ಜಡಾತ್ಮಕವಾದ ಪ್ರಪಂಚದಿಂದ ಅತ್ಯಂತ ಭೇದವನ್ನು ಸಾಧಿಸಲು ಮೂರನೆಯ ಸೌರಭವನ್ನು ಆರಂಭಿಸುತ್ತಿದ್ದಾರೆ. 'ಸತ್ಯಂ ಜ್ಞಾನಮನಂತಂ' ಎಂಬ ಶ್ರುತಿಯಲ್ಲಿ ಇರುವ ಅನಂತ ಶಬ್ದಕ್ಕೆ ಮಾಯಾವಾದಿಗಳು ದೇಶತಃ ಅನಂತ, ಕಾಲತಃ ಅನಂತ ಮತ್ತು ವಸ್ತುತಃ ಅನಂತ ಎಂಬ ಮೂರು ಅರ್ಥಗಳನ್ನು ಹೇಳುತ್ತಾರೆ. ಅದರಲ್ಲಿ 'ವಸ್ತುತೋ ಅನಂತ' ಎಂದರೆ ವಸ್ತುವಿನ ಅಂತದಿಂದ ರಹಿತವಾದುದು; ಎಂದರೆ ವಸ್ತುವಿನ ಭೇದದಿಂದ ರಹಿತವಾದುದು. ಆದ್ದರಿಂದ ಬ್ರಹ್ಮನು ಸಕಲ ವಸ್ತ್ವಾತ್ಮಕನಾದವನು ಎಂಬ ಅರ್ಥವನ್ನು ಹೇಳುತ್ತಾರೆ. ಈ ಅರ್ಥವು ಅತ್ಯಂತ ಅಯುಕ್ತವಾದುದು. ಏಕೆಂದರೆ ತಮ್ಮ ಗ್ರಂಥದಲ್ಲಿ ಬ್ರಹ್ಮನ ಸ್ವರೂಪವನ್ನು ಹೇಳುತ್ತಾ, ಅನೃತಜಡವಿರೋಧಿರೂಪಂ, ಅಂತತ್ರಯಮಲಬಂಧನದುಃಖತಾವಿರುದ್ಧಂ ಎಂದು ಹೇಳಿ, ಅನೃತ ಮತ್ತು ಸಮಸ್ತ ಜಡವಸ್ತುಗಳಿಂದ ವಿರುದ್ಧವಾದ ಸ್ವಭಾವವನ್ನು ಅಂಗೀಕರಿಸಿ,

ಈಗ ಸಮಸ್ತ ವಸ್ತುಭೇದರಾಹಿತ್ಯವನ್ನು ಹೇಳಿದರೆ ಅದು ತಾವು ಮುಂಚೆ ಹೇಳಿದ್ದಕ್ಕೆ ವಿರುದ್ಧವಾಗುತ್ತದೆ. ಮತ್ತು ಶ್ರುತಿಯಲ್ಲಿ ಮೊದಲು ಜ್ಞಾನಂ ಎಂಬ ಪದವಿದೆ, ಅನಂತರ 'ಅನಂತಂ' ಎಂಬ ಪದವಿದೆ. ಜ್ಞಾನಂ ಎಂಬ ಪದದಿಂದ ಜ್ಞಾನರೂಪತ್ವವನ್ನು ಹೇಳಿದ ಮೇಲೆ, ಅದರ ಅನಂತರ ಬರುವ ಅನಂತಶಬ್ದದಿಂದ ಸರ್ವವಸ್ತುಗಳಲ್ಲಿ ಸೇರಿದ ಜಡರೂಪತ್ವವನ್ನು ಹೇಗೆ ಹೇಳಲು ಸಾಧ್ಯ? ಹಾಗೆಯೇ 'ಜ್ಞಾನಂ' ಎಂಬ ಪದಕ್ಕಿಂತ ಮೊದಲೇ ಸತ್ಯಂ ಎಂಬ ಪದವಿದೆ. ಬ್ರಹ್ಮನಿಗೆ ಸತ್ಯರೂಪತ್ವವನ್ನು ಅಂಗೀಕಾರ ಮಾಡಿದ ಮೇಲೆ ಅನಂತಶಬ್ದದಿಂದ ಅನೃತವಸ್ತುವಿನ ಭೇದವಿಲ್ಲವೆಂದು ಹೇಳಿದರೆ ಅನೃತರೂಪತ್ವವು ಉಂಟಾಗುತ್ತದೆ. ಆಗಲೂ ವಿರೋಧ ಬರುವುದರಿಂದ ಸರ್ವವಸ್ತು-ವಿಷಯಕಭೇದರಾಹಿತ್ಯವು ಅನಂತಶಬ್ದದ ಸ್ವಾರಸಿಕವಾದ ಸುಂದರವಾದ ಅರ್ಥ-ವಲ್ಲವೆಂದು ತಿಳಿಯುತ್ತದೆ.

**ಯದ್ ದೇಶತೋ ವ್ಯಾಪ್ತಿಮಾಹ ದೇಶತಃ ಸೋಽಂತಶೂನ್ಯತಾಂ ।**
**ಕಾಲತೋ ವ್ಯಾಪ್ತಿಮಾಚಷ್ಟ ಕಾಲತಶ್ಚಾಂತಶೂನ್ಯತಾಂ ॥ ೪ ॥**

**ವಿಭೋಸ್ತದಣುರೂಪತ್ವಂ ನಿತ್ಯಸ್ಯಾನಿತ್ಯರೂಪತಾಂ ।**
**ಕಥಂ ಪುನರಸೌ ಬ್ರೂಯಾನ್ನಹಿ ಸ ಸ್ವಾತ್ಮಘಾತಕಃ ॥ ೫ ॥**

**ದೇಶಕಾಲವ್ಯಾಪ್ತತೋಕ್ತ್ಯಾ ಯತ್ ತದ್ ಭಿನ್ನಮಭೂತ್ಪುರಾ ।**
**ಕಥಂ ಪುನರ್ವಸ್ತುರೂಪಾತ್ ತತ ಏವ ತದೇಕತಾ ॥ ೬ ॥**

**ಅರ್ಥ**— ಯತ್= ಏಕೆಂದರೆ, ಸಃ= ಅನಂತ ಶಬ್ದವು, ದೇಶತೋ ಅಂತಶೂನ್ಯತಾಂ= ದೇಶದಿಂದ ಅಂತರಾಹಿತ್ಯವನ್ನು, ದೇಶತೋ ವ್ಯಾಪ್ತಿಂ ಆಹ= ದೇಶದಲ್ಲಿ ವ್ಯಾಪ್ತಿ ಎಂದು ಹೇಳಿದೆ, ಕಾಲತಶ್ಚ ಅಂತಶೂನ್ಯತಾಂ= ಮತ್ತು ಕಾಲದಿಂದ ಅಂತಶೂನ್ಯತ್ವವನ್ನು, ಕಾಲತೋ ವ್ಯಾಪ್ತಿಂ= (ಕಾಲದಲ್ಲಿ) ಕಾಲದಿಂದ ವ್ಯಾಪ್ತಿ ಎಂದು ಆಚಷ್ಟ= ಹೇಳಿದೆ. ತತ್= ಆ ಕಾರಣದಿಂದ, ಅಸೌ= ಈ ಅನಂತಶಬ್ದವು, ಪುನಃ= ಮತ್ತೆ, ವಿಭೋಃ= ವ್ಯಾಪ್ತನಾದ ಬ್ರಹ್ಮನಿಗೆ, ಅಣುರೂಪತ್ವಂ= ಅಣುರೂಪತ್ವವನ್ನಾಗಲೀ, ನಿತ್ಯಸ್ಯ= ನಿತ್ಯವಾದ ಬ್ರಹ್ಮನಿಗೆ, ಅನಿತ್ಯ-ರೂಪತಾಂ= ಅನಿತ್ಯರೂಪತ್ವವನ್ನಾಗಲೀ, ಕಥಂ= ಹೇಗೆ, ಬ್ರೂಯಾತ್= ಹೇಳೀತು, ಸಃ= ಆ ಶಬ್ದವು, ಸ್ವಾತ್ಮಘಾತಕಃ= ತನ್ನನ್ನೇ ತಾನು ನಾಶಮಾಡಿಕೊಳ್ಳುವುದಾಗಿ, ನ ಹಿ= ಆಗುವುದಿಲ್ಲವಷ್ಟೇ. ಯತ್= ಆ ಯಾವ ಬ್ರಹ್ಮವಸ್ತುವು, ಪುರಾ= ಮೊದಲು, ದೇಶಕಾಲ-ವ್ಯಾಪ್ತತೋಕ್ತ್ಯಾ= ದೇಶ ಮತ್ತು ಕಾಲದಲ್ಲಿ ವ್ಯಾಪ್ತಿಯನ್ನು ಹೇಳಿದುದರಿಂದ, ತದ್ಭಿನ್ನಂ ಅಭೂತ್= ದೇಶಕಾಲಗಳಿಂದ ಭಿನ್ನವಾಯಿತೋ, ಪುನಃ= ಪುನಃ, ವಸ್ತುರೂಪಾತ್= ಸಮಸ್ತ ವಸ್ತುರೂಪವಾದುದರಿಂದ, ತತ ಏವ= ಆ ಅನಂತ ಶಬ್ದದಿಂದಲೇ, ತದೇಕತಾ= ಆ ದೇಶಕಾಲಗಳ ಐಕ್ಯವು, ಕಥಂ= ಹೇಗೆ ಉಂಟಾಗುತ್ತದೆ?

**ಅನುವಾದ–** ಶ್ರುತಿಯಲ್ಲಿರುವ ಅನಂತಶಬ್ದವು ದೇಶತಃ ಅನಂತ ಎಂದು ಹೇಳಿದರೆ, ಎಲ್ಲದೇಶದಲ್ಲೂ ವ್ಯಾಪ್ತಿಯಿದೆ ಎಂದು ಅರ್ಥ. ಹಾಗೆಯೇ ಕಾಲತಃ ಅಂತಶೂನ್ಯತ್ವಂ ಎಂದು ಹೇಳುತ್ತದೆ ಎಂದರೆ ಸರ್ವಕಾಲದಲ್ಲಿಯೂ ಇದೆ ಎಂದು ಅರ್ಥ. ಈ ಅನಂತ ಶಬ್ದವು ಸರ್ವವಸ್ತ್ವಾತ್ಮಕತ್ವವನ್ನು ಹೇಳಿದರೆ ವ್ಯಾಪ್ತನಾದ ಅವನಿಗೆ ಅಣುರೂಪತ್ವವೂ ನಿತ್ಯವಾದ ಅವನಿಗೆ ಅನಿತ್ಯರೂಪತ್ವವೂ ಪ್ರಾಪ್ತವಾಗುತ್ತದೆ. ಅದನ್ನು ಅನಂತಶಬ್ದವು ಹೇಗೆ ಹೇಳೀತು? ಅದು ಸ್ವಾತ್ಮಘಾತಕವಲ್ಲವಷ್ಟೇ? ದೇಶಕಾಲವ್ಯಾಪ್ತಿಯನ್ನು ಹೇಳಿದ ಕಾರಣದಿಂದ ಯಾವುದು ಮೊದಲು ದೇಶಕಾಲಗಳಿಗಿಂತ ಭಿನ್ನವೆಂದು ಸಿದ್ಧವಾಯಿತೋ, ಆ ವಸ್ತುವಿಗೆ ಪುನಃ ಅನಂತ ಎಂಬ ಶಬ್ದದಿಂದ ಸರ್ವವಸ್ತುರೂಪತ್ವವನ್ನು ಹೇಳಿ, ಅದೇ ದೇಶಕಾಲಗಳಿಂದ ಐಕ್ಯವನ್ನು ಹೇಗೆ ಹೇಳಲು ಸಾಧ್ಯ?

**ಭಾವವಿಲಾಸಿನೀ–** ಕುತ ಇತ್ಯತ ಆಹ – ಯದಿತಿ ॥ ಯದ್ಯಸ್ಮಾತ್ಸ ಶಬ್ದಃ ದೇಶತೋಽಂತ ಶೂನ್ಯತಾಂ ದೇಶತೋಽವ್ಯಾಪ್ತಿಮಾಹ । ತಥೋಽಕ್ತ್ಯಾಪೀಮಮೇವಾರ್ಥಮಾಹೇತಿ ಯಾವತ್ । ಅಂತೋಽಹ್ಯವಧಿಃ । ತಚ್ಛೂನ್ಯತಾನಾಮ ಸಕಲದೇಶವರ್ತಿತ್ವರೂಪವ್ಯಾಪ್ತಿರೇವೇತಿ ಭಾವಃ । ಕಾಲತೋಽಂತಶೂನ್ಯತಾಂ ಚ ಕಾಲತೋ ವ್ಯಾಪ್ತಿಮಾಚಷ್ಟೇತಿ ಯೋಜನಾ । ಭಾವಸ್ತು ಪೂರ್ವವದೇವ ॥ ೪ ॥

ತತ್ತಸ್ಮಾದ್ವಿಭೋಃ ಸಕಲದೇಶವ್ಯಾಪ್ತತ್ವಾಪರಪರ್ಯಾಯಮಹಾಪರಿಮಾಣಸ್ಯ ಅಣುರೂಪತ್ವಮಣುಪರಿಮಾಣಘಟಪಟಾದಿರೂಪತ್ವಂ ನಿತ್ಯಸ್ಯ ಸಕಲಕಾಲವ್ಯಪ್ತತ್ವಾಪರಪರ್ಯಾಯ ನಿತ್ಯತ್ವವತೋಽನಿತ್ಯರೂಪತ್ವಮನಿತ್ಯಘಟಪಟಾದಿರೂಪತಾಂ ಚಾಸಾವನಂತಶಬ್ದಃ ಪುನರ್ದೇಶವ್ಯಾಪ್ತತ್ವಕಾಲವ್ಯಾಪ್ತತ್ವಕಥನಾಂತರಮೇವ ಕಥಂ ಬ್ರೂಯಾದಿತಿ ಸಂಬಂಧಃ । ಪೂರ್ವಾರ್ಧದ್ವಯೇ ವ್ಯಾಪ್ತತ್ವನಿತ್ಯತ್ವೇ ಉಕ್ತ್ವಾ ತೃತೀಯಾರ್ಧೇಽಸ್ಮಿಂಸ್ತದ್ವಿರುದ್ಧಮಣುಪದಾರ್ಥೈಕ್ಯಂ ಚ ಕಥಂ ಸ ಶಬ್ದಃ ಸಂಘಟಯೇದಿತಿ ಭಾವಃ । ತತ್ರ ಹೇತುಃ ಸಶಬ್ದಃ ಸ್ವಾತ್ಮಘಾತಕೋಽ ನಹೀತಿ । ಸ್ವೋಕ್ತಾರ್ಥಘಾತಕೋಽಪಿ ಸ್ವಾಪ್ರಾಮಾಣ್ಯಹೇತುತ್ವಾತ್ಸ್ವಘಾತಕ ಏವೇತಿ ಭಾವೇನೋಕ್ತಂ ಸ್ವಾತ್ಮಘಾತಕ ಇತಿ । ಪೂರ್ವೋತ್ತರವಿರುದ್ಧಾರ್ಥಭಾಷಿತ್ವಾತ್ ಶಬ್ದಸ್ಯ ಸ್ವಘಾತಕತ್ವೇನಾಪ್ರಾಮಾಣ್ಯಂ ಸ್ಯಾದತೋ ನಾಯಂ ಶಬ್ದಸ್ಯಾಪ್ಯಭಿಮತೋಽರ್ಥ ಇತಿ ಭಾವಃ । ಅತ್ರ ಚ ಅಣುತ್ವಮಹತ್ತ್ವಪ್ರಾಪ್ತ್ಯಾನಿತ್ಯತ್ವ ಅನಿತ್ಯತ್ವಪ್ರಾಪ್ತ್ಯಾ ಚ ವಿರೋಧದ್ವಯಂ ದ್ರಷ್ಟವ್ಯಮ್ ॥ ೫ ॥

ವಿರೋಧಾಂತರಂ ಚಾಹ–**ದೇಶೇತಿ** ॥ ಯದ್‌ಬ್ರಹ್ಮ ದೇಶಕಾಲವ್ಯಾಪ್ತತ್ವೋಕ್ತ್ಯಾ ಪುರಾಪೂರ್ವಮರ್ಧದ್ವಯಕಥನಸಮಯೇ ತದ್ಭಿನ್ನಂ ದೇಶಕಾಲಾಭ್ಯಾಂ ಭಿನ್ನಂ ವ್ಯಾಪ್ಯವ್ಯಾಪಕಯೋರ್ಭೇದಾವಶ್ಯಂಭಾವಾದಿತಿ ಭಾವಃ । ಪುನರ್ವಸ್ತುರೂಪಾತ್ ತತ ಏವ ದೇಶಕಾಲತ ಏವ । ತದೇಕತಾ ತಸ್ಯ ಬ್ರಹ್ಮಣಃ ಏಕತಾ । ಸ್ಯಾದಿತಿ ಶೇಷಃ । ಸಕಲವಸ್ತ್ವಾತ್ಮಕತ್ವ ಕಥನೇ ವಸ್ತುರೂಪತನ್ಮಧ್ಯಪತಿತಗಗನಕಾಲೈಕ್ಯಸ್ಯಾಪ್ಯುಕ್ತತ್ವಾದಿತಿ ಭಾವಃ । ದೇಶಕಾಲವ್ಯಾಪ್ತತ್ವೋಕ್ತಿದಶಾಯಾಂ

ಬ್ರಹ್ಮಣೋ ದೇಶಕಾಲಭೇದಮುಕ್ತ್ವಾ ಪುನಃ ಸಕಲವಸ್ತ್ವಾತ್ಮಕತ್ವೋಕ್ತಿ ದಶಾಯಾಂತಾಭ್ಯಾಮೇವ ದೇಶಕಾಲಾಭ್ಯಾಮೈಕ್ಯಕಥನಾಚ್ಚ ಪೂರ್ವೋತ್ತರವಿರೋಧ ಇತಿ ಸಾಕ್ಷಾದ್ವಾಚನಿಕತಯಾತಿಪ್ರಬಲಂ ವಿರೋಧಾಂತರಂ ದ್ರಷ್ಟವ್ಯಯಮ್ ॥ ೬ ॥

**ವಿವರಣೆ—** ಮಾಯಾವಾದಿಗಳು ಹೇಳಿದ ಅರ್ಥವು ಏಕೆ ಸ್ವಾರಸಿಕವಾದ ಅರ್ಥವಲ್ಲವೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ದೇಶತಃ ಅನಂತ ಎಂದರೆ ದೇಶತಃ ವ್ಯಾಪ್ತಿ ಎಂದು ಅರ್ಥ, ಅಂತ ಎಂದರೆ ಅವಧಿ, ಅವಧಿ ಶೂನ್ಯತ್ವವೆಂದರೆ ಸಕಲದೇಶಗಳಲ್ಲಿಯೂ ಇದೆ ಎಂದು ಅರ್ಥ. ಹಾಗೆಯೇ ಕಾಲತಃ ಅಂತಶೂನ್ಯತ್ವ ಎಂದರೆ ಸಕಲಕಾಲಗಳಲ್ಲಿಯೂ ಇದೆ ಎಂದು ಅರ್ಥ. ದೇಶದಲ್ಲಿ ಇರುವ ವಸ್ತುವಿಗೂ ಮತ್ತು ಕಾಲದಲ್ಲಿ ಇರುವ ವಸ್ತುವಿಗೂ, ದೇಶಕಾಲಗಳಿಂದ ಆಧಾರಾಧೇಯ ಭಾವ ಇರುವುದರಿಂದ ಭೇದವೇ ಸಿದ್ಧವಾಗುವುದಷ್ಟೇ? ಈಗ ಅನಂತಶಬ್ದವು ವಸ್ತುತಃ ಅಂತಶೂನ್ಯತ್ವ ಎಂದರೆ ಸಕಲವಸ್ತುಗಳ ಭೇದಾಭಾವವನ್ನು ಹೇಳಿದರೆ, ಆ ವಸ್ತುಗಳಲ್ಲಿ ದೇಶಕಾಲಗಳೂ ಸೇರುವುದರಿಂದ ದೇಶದ ಅಭೇದವು ಮತ್ತು ಕಾಲದ ಅಭೇದವು ಪ್ರಾಪ್ತವಾಗುತ್ತದೆ. ಸಕಲ ವಸ್ತುಗಳಲ್ಲಿ ಘಟಪಟಾದಿ ಅನಿತ್ಯವಸ್ತುಗಳು ಸೇರುವುದರಿಂದ, ಅನಿತ್ಯವಸ್ತುಗಳಿಂದ ಭೇದಾಭಾವವು ಪ್ರಾಪ್ತವಾಗುತ್ತದೆ. ಘಟಪಟಗಳಿಂದ ಅಭೇದವನ್ನು ಹೇಳಿದರೆ, ಪರಿಮಿತವಾದವಸ್ತುವಿನ ಅಭೇದವನ್ನು ಹೇಳುವುದರಿಂದ ಬ್ರಹ್ಮನ ದೇಶತಃ ವ್ಯಾಪ್ತಿಯು ಹೋಗುತ್ತದೆ. ಘಟಪಟಾದಿಗಳು ಅನಿತ್ಯವಾದುದರಿಂದ, ಅನಿತ್ಯವಸ್ತುವಿನ ಭೇದಾಭಾವವನ್ನು ಹೇಳಿದರೆ ಬ್ರಹ್ಮನ ನಿತ್ಯತ್ವವು ಹೊರಟು ಹೋಗುತ್ತದೆ. ಆದ್ದರಿಂದ ಅನಂತಪದಾರ್ಥವು ಹೇಳುವ ಮೂರು ಅರ್ಥಗಳಲ್ಲಿ ಮೊದಲನೆ ಎರಡರ್ಥಗಳು ಮೂರನೇ ಅರ್ಥದಿಂದ ನಾಶವನ್ನು ಹೊಂದುತ್ತವೆ. ತನ್ನ ಅರ್ಥವು ನಾಶವಾದರೆ ಶಬ್ದಕ್ಕೆ ನಾಶವಾದಂತೆ. ಆದ್ದರಿಂದ ಅನಂತಶಬ್ದವು ವಸ್ತುತಃ ಅಂತರಾಹಿತ್ಯವೆಂಬ ಅರ್ಥವನ್ನು ಹೇಳಿದರೆ, ದೇಶತಃ ಆನಂತ, ಕಾಲತಃ ಆನಂತ್ಯಗಳು ನಾಶವಾಗುವುದರಿಂದ, ಅನಂತ ಶಬ್ದವು ತನ್ನನ್ನೇ ತಾನು ಆತ್ಮಹತ್ಯೆ ಮಾಡಿಕೊಂಡಂತೆ ಆಗುತ್ತದೆ.

**ಸಕೃಚ್ಚುತ್ರಾಂತಶಬ್ದೇನ ಪರಿಚ್ಛೇದಂ ಸ್ಥಲದ್ವಯೇ ।**
**ವದಂಸ್ತದೈವ ಭೇದಂ ಚ ಕಥಮೇಕತ್ರ ವಕ್ತಿ ಸಃ ॥ ೭ ॥**

**ಅರ್ಥ—** ಸಃ= ಆ ಅನಂತ ಎಂಬ ಶಬ್ದವು, ಸ್ಥಲದ್ವಯೇ= ದೇಶತಃ ಆನಂತ್ಯ ಮತ್ತು ಕಾಲತಃ ಆನಂತ್ಯ ಎಂಬ ಎರಡು ಸ್ಥಳಗಳಲ್ಲಿ, ಪರಿಚ್ಛೇದಂ= ಪರಿಚ್ಛೇದವನ್ನು, ವದನ್= ಹೇಳುತ್ತಾ, ಸಕೃಚ್ಚುತ್ರಾಂತಶಬ್ದೇನ= ಒಂದೇ ಬಾರಿ ಉಚ್ಚರಿಸಲ್ಪಟ್ಟ ಅಂತಶಬ್ದದಿಂದ, ತದೈವ= ಆಗಲೇ, ಏಕತ್ರ= ಅಲ್ಲಿಯೇ, ಭೇದಂ ಚ= ಭೇದ ಎಂಬ ಅರ್ಥವನ್ನು, ಕಥಂ ವಕ್ತಿ= ಹೇಗೆ ಹೇಳುತ್ತದೆ.

**ಅನುವಾದ–** ಅನಂತ ಎಂಬ ಶಬ್ದದಲ್ಲಿ ಘಟಕವಾಗಿರುವ ಅಂತ ಎಂಬ ಶಬ್ದವು ಒಂದೇ ಸಲ ಶ್ರುತವಾಗಿದೆ. ಆ ಅಂತಶಬ್ದಕ್ಕೆ ದೇಶಕಾಲಗಳ ವಿಷಯದಲ್ಲಿ ಪರಿಚ್ಛೇದ ಎಂದು ಎರಡು ಕಡೆಗಳಲ್ಲಿ ಅರ್ಥವನ್ನು ಮಾಡಿ, ವಸ್ತುತಃ ಅನಂತ ಎಂಬಲ್ಲಿ ಮಾತ್ರ ಅಂತ ಶಬ್ದಕ್ಕೆ ಭೇದ ಎಂದು ಅರ್ಥಮಾಡಿದರೆ ಒಂದೇ ಸಲ ಉಚ್ಚರಿಸಲ್ಪಟ್ಟ ಅಂತಶಬ್ದವು ಒಮ್ಮೆಲೇ ಹೀಗೆ ಭಿನ್ನವಾದ ಅರ್ಥವನ್ನು ಹೇಗೆ ಹೇಳುತ್ತದೆ?

**ಭಾವವಿಲಾಸಿನೀ–** ದೋಷಾಂತರಮಪ್ಯಾಹ – **ಸಕೃಚ್ಛ್ರುತೇತಿ** ॥ ಸ್ಥಲದ್ವಯೇ ದೇಶೇಕಾಲೇಚ । ತದೈವ ಪರಿಚ್ಛೇದಕಥನಕಾಲ ಏವ । ಏಕತ್ರ ವಸ್ತುತೋ ಭೇದರಾಹಿತ್ಯ ಕಥನಸ್ಥಲೇ । ಸಃ ಅನಂತ-ಶಬ್ದಃ । ಸಕಲವಸ್ತ್ವಾತ್ಮಕತ್ವಕಥನಸಮಯೇऽಂತಶಬ್ದೇನ ಭೇದಸ್ಯೈವ ವಕ್ತವ್ಯತ್ವಾದಿತಿ ಭಾವಃ ॥೭॥

**ವಿವರಣೆ–** ಈ ಶ್ಲೋಕದಲ್ಲಿ ಅನಂತಶಬ್ದಕ್ಕೆ ಮಾಯಾವಾದಿಗಳು ಮಾಡುವ ಅರ್ಥಕ್ಕೆ ದೋಷಾಂತರವನ್ನು ಹೇಳುತ್ತಾರೆ. ಅನಂತ ಎಂಬ ಶಬ್ದದಲ್ಲಿ ಇರುವ ಅಂತ ಎಂಬ ಶಬ್ದವು ಒಂದೇ ಸಲ ಶ್ರುತವಾಗುತ್ತದೆ. ಒಂದು ಬಾರಿ ಶ್ರುತವಾದ ಶಬ್ದವು ಒಂದೇ ಅರ್ಥವನ್ನು ಹೇಳುತ್ತದೆ ಎಂಬುದು ಸಕಲ ತಾಂತ್ರಿಕರಿಗೂ ಸಮ್ಮತವಾದುದು. ಆದರೆ ಅದ್ವೈತಿಗಳು ಮಾತ್ರ, ದೇಶತಃ ಅನಂತ ಎಂದರೆ ದೇಶದಿಂದ ಪರಿಚ್ಛೇದರಾಹಿತ್ಯ ಎಂದು ಅರ್ಥವನ್ನು ಹೇಳಿ, ಕಾಲತಃ ಅನಂತ ಎಂದರೆ ಕಾಲದಿಂದ ಪರಿಚ್ಛೇದರಾಹಿತ್ಯ ಎಂದು ಹೇಳಿ, ವಸ್ತುತಃ ಅನಂತ ಎಂದರೆ ಮಾತ್ರ ಸಕಲವಸ್ತುಗಳಿಂದ ಭೇದರಾಹಿತ್ಯ ಎಂಬ ಅರ್ಥವನ್ನು ಹೇಳುತ್ತಾರೆ. ಆದ್ದರಿಂದ ಒಂದೇ ಸಲ ಉಚ್ಚರಿಸಲ್ಪಟ್ಟ ಅಂತ ಶಬ್ದವು ಎರಡು ಕಡೆಗಳಲ್ಲಿ ಪರಿಚ್ಛೇದ ಎಂಬ ಅರ್ಥವನ್ನು, ಒಂದು ಕಡೆ ಭೇದ ಎಂಬ ಅರ್ಥವನ್ನು ಕೊಡುತ್ತದೆ ಎಂದು ಅಂಗೀಕರಿಸಿದಂತಾಯಿತು. ಇದು ಸರ್ವತಾಂತ್ರಿಕ ಅಭ್ಯುಪಗಮ ವಿರುದ್ಧವಾದುದು.

**ನ ಹಿ ದ್ವಿಜಿಹ್ವಃ ಶಬ್ದೋऽಸೌ ನಾಪಿ ತ್ರಿಕ್ಷಣವರ್ತಿನಃ ।**
**ವಿರಮ್ಯ ವ್ಯಾಪೃತಿರ್ಯುಕ್ತಾ ನಾಪಿ ಸಾ ವಿದುಷಾಂ ಮತಾ ॥ ೮ ॥**

**ಅರ್ಥ–** ಅಸೌಶಬ್ದಃ= ಅನಂತ ಎಂಬ ಈ ಶಬ್ದವು, ದ್ವಿಜಿಹ್ವಃ ನ ಹಿ= ಎರಡು ನಾಲಿಗೆಯುಳ್ಳದ್ದಲ್ಲ ಅಪಿ= ಮತ್ತು, ತ್ರಿಕ್ಷಣವರ್ತಿನಃ= ಮೂರು ಕ್ಷಣ ಮಾತ್ರ ಇರುವ ಶಬ್ದಕ್ಕೆ, ವಿರಮ್ಯವ್ಯಾಪೃತಿಃ= ನಿಂತು ನಿಂತು ತನ್ನ ಕೆಲಸವನ್ನು ಮಾಡುವುದು, ನ ಯುಕ್ತಾ= ಯುಕ್ತವಲ್ಲ, ಅಪಿ= ಮತ್ತು, ಸಾ= ವಿರಮ್ಯ ವ್ಯಾಪಾರವು ವಿದುಷಾಂ= ವಿದ್ವಜ್ಜನರಿಗೆ ಮತಾ ನ= ಸಮ್ಮತವಲ್ಲ.

**ಅನುವಾದ–** ಅನಂತ ಎಂಬ ಶಬ್ದವು ಎರಡು ನಾಲಿಗೆಯುಳ್ಳದ್ದಲ್ಲ ಮತ್ತು ಮೂರು ಕ್ಷಣ ಮಾತ್ರ ಇರುವ ಶಬ್ದಕ್ಕೆ ವಿರಮ್ಯ ವ್ಯಾಪಾರವು ಕೂಡುವುದಿಲ್ಲ ಮತ್ತು ಕರಣವಾದ ಶಬ್ದಕ್ಕೆ ವಿರಮ್ಯವ್ಯಾಪಾರವು ವಿದ್ವಜ್ಜನರಿಗೆ ಸಮ್ಮತವೂ ಅಲ್ಲ.

**ಭಾವವಿಲಾಸಿನೀ–ಕುತೋನವಕ್ತೀತ್ಯತ ಆಹ–ನಹೀತಿ ॥** ಅಸಾವನಂತಶಬ್ದಃ। ದ್ವಿಜಿಹ್ವಃ ದ್ವೇಜಿಹ್ವೇ ಯಸ್ಯೇತಿ ವ್ಯುತ್ಪತ್ತ್ಯಾ ದ್ವಿಜಿಹ್ವೋ ನಹಿ । ಏಕದೈಕಮೇವಾರ್ಥಂ ಶಬ್ದೋ ವಕ್ತೀತಿ ತಾವತ್ಸ್ವಭಾವಃ ತಥಾ ಚ ಸ್ಥಲದ್ವಯೇ ಪರಿಚ್ಛೇದಾಖ್ಯಮರ್ಥಮಂತಶಬ್ದೇನ ವದಂಸ್ತದೈವಾನ್ಯತ್ರ ಭೇದಮಪಿ ವಕ್ತುಂ ಜಿಹ್ವಾದ್ವಯವತ್ತ್ವೇ ಸತಿ ಪ್ರಭವತಿ । ಅನ್ಯಥಾನೇತಿ ವಿನೋದೋಕ್ತಿರಿಯಮ್ । ನನು ಸಕೃತ್ಪ್ರಯುಕ್ತ ಏವ ಶಬ್ದಃ ಪ್ರಾಕ್‌ಪರಿಚ್ಛೇದಮುಕ್ತ್ವಾನಂತರಂ ಭೇದಂ ಚ ಸ ಏವ ವದತು ಕೋ ದೋಷ ಇತ್ಯತ ಆಹ – **ನಾಪೀತಿ ॥** ವಿರಮ್ಯ ಏಕಾರ್ಥಕಥನಂ ಸಮಾಪ್ಯ ವ್ಯಾಪೃತಿಃ ತದನಂತರಮರ್ಥಾಂತರ-ಕಥನವ್ಯಾಪಾರ ಇತ್ಯರ್ಥಃ। ತ್ರಿಕ್ಷಣಾವಸ್ಥಾಯಿನಃ ಶಬ್ದಸ್ಯ ತದಯೋಗಾದಿತಿ ಭಾವಃ (ಉಪಲಕ್ಷಣಂ ಚೈತತ್ । ಸತ್ಯಮಿತಿ ಬ್ರಹ್ಮಣಃ ಪ್ರಾಕ್ ಸತ್ಯತ್ವೋಕ್ತೇಃ ಅಧುನಾ ಅನೃತಜಗದ್ರೂಪತ್ವಾಂಗೀಕಾರೇ ಪರಮತೇ ಶ್ರುತಿವಿರೋಧಶ್ಚೇತ್ಯಪಿ ದ್ರಷ್ಟವ್ಯಂ) ಅಸ್ಮಾಕಂ ಮತೇ ಶಬ್ದಸ್ಯ ನಿತ್ಯತ್ವೇಪಿ ವ್ಯಂಜಕಧ್ವನೌ ಸತ್ಯೇವಾರ್ಥಕಥನಾಖ್ಯ ಫಲಾಂಗೀಕಾರಾತ್ । ತಸ್ಯ ಚ ತ್ರಿಕ್ಷಣಾವಸ್ಥಾಯಿತ್ವಾತ್ ದೋಷೋಯಂ ಸಮಾನ ಇತಿ ದ್ರಷ್ಟವ್ಯಮ್ । ಸಾ ವಿರಮ್ಯವ್ಯಾಪೃತಿಃ ॥ ೮ ॥

**ವಿವರಣೆ–** ಅನಂತಶಬ್ದವು ಅಂತ ಶಬ್ದದಿಂದ ಒಂದು ಸಲ ಪರಿಚ್ಛೇದವನ್ನೂ ಇನ್ನೊಂದು ಸಲ ಭೇದವನ್ನೂ ಹೇಳಿದರೆ ಎರಡು ನಾಲಿಗೆಯುಳ್ಳದ್ದಾಯಿತು. ಒಂದು ಸಲ ಉಚ್ಚರಿಸಲ್ಪಟ್ಟ ಶಬ್ದವು ಒಂದೇ ಬಾರಿ ಅರ್ಥದ ಜ್ಞಾನವನ್ನು ಹುಟ್ಟಿಸುತ್ತದೆ. ಅದು ಒಂದೇ ರೀತಿಯಾಗಿರುತ್ತದೆ. ಒಂದು ಸಲ ಒಂದು ಅರ್ಥವನ್ನು ಹೇಳಿ ಅನಂತರ ಇನ್ನೊಂದು ಅರ್ಥವನ್ನು ಹೇಳಿದರೆ ಅದಕ್ಕೆ ವಿರಮ್ಯ ವ್ಯಾಪಾರವೆನ್ನುತ್ತಾರೆ. ಯಾವ ವಿವೇಕಿಗಳೂ ಕರಣಗಳಿಗೆ ವಿರಮ್ಯ ವ್ಯಾಪಾರವನ್ನು ಒಪ್ಪುವುದಿಲ್ಲ. ಶಬ್ದವೂ ಒಂದು ಕರಣವಾದ್ದರಿಂದ ಅದಕ್ಕೂ ವಿರಾಮವ್ಯಾಪಾರವಿಲ್ಲ. ಆದ್ದರಿಂದ ಭೇದ ಎಂಬ ಅರ್ಥವನ್ನು ಹೇಳಬಾರದು ಎಂದು ಅಭಿಪ್ರಾಯ.

ದೇಶಕಾಲಾಂತಶೂನ್ಯತ್ವಂ ದೇಶೇ ಕಾಲೇ ಚ ವರ್ತನಂ ।
ಯಥಾ ವಸ್ತ್ವಂತಶೂನ್ಯತ್ವಂ ತಥಾ ವಸ್ತುಷು ವರ್ತನಂ ।
ಭವೇತ್ ಪರಂ ದ್ವಿಧಾ ನೈಕಪಂಕ್ತೌ ಯತ್ ಪರಿವೇಷಣಂ ॥ ೯ ॥

**ಅರ್ಥ–** ಯಥಾ= ಹೇಗೆ, ದೇಶಕಾಲಾಂತಶೂನ್ಯತ್ವಂ= ದೇಶಕಾಲಗಳಿಂದ ಅಂತರಾಹಿತ್ಯವೆಂದರೆ, ದೇಶೇ ಕಾಲೇ ಚ ವರ್ತನಂ= ಸರ್ವ ದೇಶದಲ್ಲಿಯೂ ಮತ್ತು ಸರ್ವಕಾಲದಲ್ಲಿಯೂ ಇದೆ ಎಂದು ಅರ್ಥವಾಗುತ್ತದೆಯೋ, ತಥಾ= ಹಾಗೇ, ವಸ್ತ್ವಂತಶೂನ್ಯತ್ವಂ= ವಸ್ತುತಃ ಅಂತಶೂನ್ಯತ್ವವೆಂದರೆ, ವಸ್ತುಷು ವರ್ತನಂ= ಸರ್ವವಸ್ತುವಿನಲ್ಲಿದೆ ಎಂದೇ ಭವೇತ್= ಅರ್ಥವಾಗುತ್ತದೆ. ಯತ್= ಏಕೆಂದರೆ, ಏಕಪಂಕ್ತೌ= ಒಂದೇ ಪಂಕ್ತಿಯಲ್ಲಿ, ದ್ವಿಧಾ= ಎರಡು ರೀತಿಯಲ್ಲಿ, ಪರಿವೇಷಣಂ ನ= ಬಡಿಸುವುದು ಇರುವುದಿಲ್ಲ.

**ಅನುವಾದ–** ದೇಶಕಾಲಾಂತಶೂನ್ಯತ್ವವೆಂದರೆ ಸರ್ವದೇಶದಲ್ಲಿಯೂ, ಸರ್ವಕಾಲದಲ್ಲಿಯೂ ಇದೆ ಎಂದು ಅರ್ಥ ಹೇಗೋ ಅದರಂತೆ ವಸ್ತ್ವಂತಶೂನ್ಯತ್ವವೆಂದರೆ ಸರ್ವವಸ್ತುವಿನಲ್ಲಿಯೂ ಇದೆ ಎಂದೇ ಅರ್ಥ. ಒಂದೇ ಪಂಕ್ತಿಯಲ್ಲಿ ಎರಡು ವಿಧವಾಗಿ ಬಡಿಸಿ ಪಂಕ್ತಿಭೇದವನ್ನು ಮಾಡುವುದಿಲ್ಲವಷ್ಟೇ?

**ಭಾವವಿಲಾಸಿನೀ–**ಕಸ್ತರ್ಹಿವಸ್ತುತೋಽನಂತತ್ವವಾದಿನಾಂಮತೇ ಯುಕ್ತಾರ್ಥ ಇತ್ಯತಃ ಪ್ರಸಂಗಾತ್ ತಮಪ್ಯಾಹ – **ದೇಶಕಾಲೇತಿ** ॥ ದೇಶೇ ಕಾಲೇ ಚ ವರ್ತನಂ ಯಥಾ ತಥೇತಿ ಸಂಬಂಧಃ। ವಸ್ತುಷು ಸಕಲವಸ್ತುಷು। ಪರಂ ಕೇವಲಮ್। ದೇಶಕಾಲಾಂತಶೂನ್ಯತ್ವಮ್ ಯಥಾ ಸಕಲದೇಶ-ಕಾಲವರ್ತಿತ್ವಂ ತಥಾವಸ್ತುತೋಽಂತಶೂನ್ಯತ್ವಮಪಿ ಸಕಲವಸ್ತುಷು ವರ್ತನಮೇವಸ್ಯಾತ್। ಪರಿಚ್ಛೇದಶೂನ್ಯತ್ವಸ್ಯ ತ್ರಿಷು ಸ್ಥಾನೇಷ್ವಪಿ ಏಕವಿಧ್ಯೇನ ಭಾವ್ಯತ್ವಾದಿತಿ ಭಾವಃ। ಯದ್ಯಸ್ಮಾತ್। ಏಕಪಂಕ್ತೌಭೋಕ್ತ್ಯಣಾಂ ಲೋಕೇ ದ್ವಿಧಾ ಪ್ರಕಾರದ್ವಯೇನ ಪರಿವೇಷಣಮನ್ನಶಾಕಾದಿದಾನಂ ನ ಉಚಿತಂ ನಿಷಿದ್ಧಮಿತಿ ಯಾವತ್। ತಸ್ಮಾತ್ತದ್ವತ್ಸ್ಥಲದ್ವಯೇಽಂತಶಬ್ದೇನ ಯೋಽರ್ಥಃ ಕಥಿತಃ ಸ ಏವಾಪರತ್ರಾಪಿ ಕಥನೀಯಃ। ಅನ್ಯಥಾ ಪ್ರಾಯಪಾಠವಿರೋಧಾದಿತಿ ಭಾವಃ ॥ ೯ ॥

**ವಿವರಣೆ–** ನಮಗೆ ಅಭಿಮತವಾದ ಅನಂತಶಬ್ದಾರ್ಥವನ್ನು ಇಲ್ಲಿ ಹೇಳುತ್ತಾರೆ. ದೇಶದ ದೃಷ್ಟಿಯಿಂದ ಅಂತಶೂನ್ಯತ್ವವೆಂದರೆ ಎಲ್ಲ ದೇಶದಲ್ಲಿಯೂ ಇದೆ ಎಂದು ಪ್ರಾಪ್ತವಾಗುತ್ತದೆ. ಹಾಗೆಯೇ ಕಾಲತಃ ಅಂತಶೂನ್ಯತ್ವವೆಂದರೆ ಎಲ್ಲ ಕಾಲದಲ್ಲಿಯೂ ಇದೆ ಎಂದು ಅರ್ಥವಾಗುತ್ತದೆ. ಇದು ನಿನಗೂ ಸಮ್ಮತವಾದದ್ದು, ಅದರಂತೆ ವಸ್ತುತಃ ಅಂತಶೂನ್ಯತ್ವವೆಂದರೆ ಎಲ್ಲ ವಸ್ತುಗಳಲ್ಲಿಯೂ ಇದೆ ಎಂದು ಅರ್ಥವನ್ನು ಮಾಡಬೇಕು. ಯದ್ಯಪಿ ನಾವು ದೇಶತಃ ಅನಂತ, ಕಾಲತಃ ಅನಂತ ಮತ್ತು ಗುಣತಃ ಅನಂತ ಎಂಬುದು ಅನಂತಶಬ್ದಾರ್ಥವೆಂದು ಹೇಳುತ್ತೇವೆ. ಆದರೆ ವಸ್ತುತಃ ಅನಂತವೆಂದು ಸ್ವೀಕರಿಸಿದರೂ ಹೀಗೆ ಅರ್ಥವನ್ನು ಹೇಳಿದರೆ ಯಾವ ವಿರೋಧವೂ ಇಲ್ಲವೆಂದು ಅಭಿಪ್ರಾಯ. ಇಲ್ಲದಿದ್ದರೆ ದೇಶಕಾಲಗಳ ಆನಂತ್ಯವೆಂದು ಹೇಳುವಾಗ ಅಂತಶಬ್ದಕ್ಕೆ ಪರಿಚ್ಛೇದವೆಂದೂ, ವಸ್ತುತಃ ಆನಂತ್ಯವೆಂದು ಹೇಳುವಾಗ ಅಂತಶಬ್ದಕ್ಕೆ ಭೇದವೆಂದೂ ಅರ್ಥಮಾಡಿದರೆ ಒಂದೇ ಪಂಕ್ತಿಯಲ್ಲಿರುವ ಶಬ್ದಕ್ಕೆ ಎರಡು ಅರ್ಥಮಾಡಿದುದರಿಂದ ಪಂಕ್ತಿದೋಷ ಉಂಟಾಗುತ್ತದೆ, ಎಂದರೆ ಪ್ರಾಯಪಾಠವಿರೋಧವು ಬರುತ್ತದೆ ಎಂದು ಅಭಿಪ್ರಾಯ. ಪ್ರಾಯಪಾಠವೆಂದರೆ ಎರಡು ಬಾರಿ ಹೇಳಿದ ಅರ್ಥವನ್ನೇ ಮೂರನೇ ಬಾರಿ ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ಹಿಂದೆ ಎರಡು ಬಾರಿ ತೆಗೆದುಕೊಂಡ ಅರ್ಥಕ್ಕೆ ವಿರೋಧಬರುತ್ತದೆ ಎಂದು ಅರ್ಥ.

**ಬಹುವಸ್ತ್ವಾಶ್ರಯತ್ವಂ ವಾ ಭವೇಲ್ಲೋಕನಿದರ್ಶನಾತ್ ।**
**ರತ್ನತೋಽನಂತ ಇತ್ಯಾಹುರ್ಯತೋ ರತ್ನಾಕರಂ ಜನಾಃ ।**
**ತಥಾ ಗುಣಾನಂತತಾ ಚ ಸ್ಯಾದ್ ಗುಣ್ಯೈಃ ಪೂರ್ಣತಾ ಹರೇಃ ॥ ೧೦ ॥**

**ಅರ್ಥ–** ವಾ= ಅಥವಾ, ಲೋಕನಿದರ್ಶನಾತ್= ಲೋಕದೃಷ್ಟಾಂತದಿಂದ, ಬಹು-ವಸ್ತ್ವಾಶ್ರಯತ್ವಂ= ಬಹುವಸ್ತುಗಳನ್ನು ಕುರಿತ ಆಧಾರತ್ವವು, ಭವೇತ್= ಅನಂತಶಬ್ದದ ಅರ್ಥವಾಗುತ್ತದೆ, ಯತಃ= ಏಕೆಂದರೆ, ಜನಾಃ= ಜನರು, ರತ್ನಾಕರಂ= ರತ್ನಗಳಿಗೆ ಆಶ್ರಯವಾದ ಸಮುದ್ರವನ್ನು, ರತ್ನತೋಽನಂತಃ= ರತ್ನಗಳಿಂದ ಅನಂತ, ಇತ್ಯಾಹುಃ= ಎಂದು ಹೇಳುತ್ತಾರೆ, ತಥಾ= ಹಾಗೆಯೇ, ಹರೇಃ= ಹರಿಗೆ, ಗುಣಾನಂತತಾ ಚ= ಗುಣಾನಂತತ್ವವೂ ಕೂಡ, ಗುಣೈಃ= ಗುಣಗಳಿಂದ, ಪೂರ್ಣತಾ= ಪೂರ್ಣತ್ವವೇ, ಸ್ಯಾತ್= ಆಗುತ್ತದೆ.

**ಅನುವಾದ–** ವಸ್ತುತಃ ಅನಂತವೆಂದರೆ ಸಕಲವಸ್ತ್ವಾಶ್ರಯತ್ವ ಎಂಬ ಅರ್ಥವನ್ನು ಲೋಕದ ದೃಷ್ಟಾಂತದಿಂದ ಹೇಳಬಹುದು. ಏಕೆಂದರೆ ಜನರು ಅನಂತ ರತ್ನಗಳಿಗೆ ಆಶ್ರಯವಾದ ಸಮುದ್ರವನ್ನು ರತ್ನಾಕರವೆಂದು ಕರೆಯುತ್ತಾರೆ. ಹಾಗೆಯೇ ಗುಣಾನಂತ್ಯ ಎಂದರೆ ಶ್ರೀಹರಿಗೆ ಗುಣಗಳಿಂದ ಪೂರ್ಣತ್ವ ಎಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಸಂಭಾವಿತಮರ್ಥಾಂತರಂ ಚಾಹ – **ಬಹುವಸ್ತ್ವಿತಿ** ॥ ಬಹುವಸ್ತ್ವಾಶ್ರಯತ್ವಂ ಅಪರಿಚ್ಛಿನ್ನವಸ್ತ್ವಾಧಾರತ್ವಂ ವಾ ಭವೇತ್ ಅನಂತಶಬ್ದಸ್ಯಾರ್ಥೋ ಭವೇತ್ ಲೋಕನಿದರ್ಶನಾತ್ ಲೌಕಿಕದೃಷ್ಟಾಂತಾತ್ । ತದೇವದರ್ಶಯತಿ ॥ **ರತ್ನತ ಇತಿ** ॥ ಯತಃ ಯಸ್ಮಾತ್ ಜನಾಃ ರತ್ನಾಕರಂ ಸಕಲರತ್ನಾಧಾರಂ ಸಮುದ್ರಂ ರತ್ನತೋಽನಂತ ಇತ್ಯಾಹುಃ। ಯಥಾ ರತ್ನತೋಽನಂತ ಇತ್ಯುಕ್ತೇ ಸಕಲರತ್ನಾಧಾರ ಇತ್ಯರ್ಥೋಭವತಿ ತಥಾ ವಸ್ತುತೋನಂತ ಇತ್ಯುಕ್ತೇ ಸಕಲವಸ್ತ್ವಾಧಾರ ಇತ್ಯಪ್ಯರ್ಥೋ ಭವತಿ। ಪರಿಚ್ಛೇದಶೂನ್ಯತ್ವಂ ಹಿ ಶಬ್ದಲಭ್ಯೋಽರ್ಥಃ। ವಸ್ತುತ ಇತಿ ಚ ಯೋಗ್ಯತಯಾ ಗೃಹ್ಯತೇ। ತಚ್ಚ ಸಕಲವಸ್ತುಷು ಬ್ರಹ್ಮಣಃ ಪರಿಚ್ಛೇದಾಭಾವೇ ವಾ ಸಕಲವಸ್ತೂನಾಂ ಬ್ರಹ್ಮಣಿ ಪರಿಚ್ಛೇದಾಭಾವೇ ವಾ ಸ್ಯಾದೇವ। ವಸ್ತುಪರಿಚ್ಛೇದಾಭಾವಸ್ಯೋ-ಭಯಥಾಪಿ ಸಂಭವಾತ್। ಸಕಲವಸ್ತುಭೇದಶೂನ್ಯತ್ವಂ ತು ನ ಶಬ್ದಸ್ಯ ಪ್ರಾಗುಕ್ತಾರ್ಥ-ದ್ವಯುಮರ್ಯಾದಯಾ। ನಲೋಕಮರ್ಯಾದಯಾಪೀತಿ ಭಾವಃ। ಪ್ರಾಸಂಗಿಕಾರ್ಥಕಥನಸ್ಯ ಪ್ರಕೃತೋಪಯೋಗಮಾಹ – **ತಥೇತಿ** ॥ ತಥಾ ರತ್ನಾಕರಸ್ಯ ರತ್ನತೋನಂತತ್ವವತ್। ಹರೇರ್ಗುಣಾನಂತತಾಚ। ಗುಣೈಃ ಸಕಲಶುಭಗುಣೈಃ ಪೂರ್ಣತಾ ಸಕಲಶುಭಗುಣಾಧಾರತೇತಿ ಯಾವತ್। ಅನೇನ ದೇಶಕಾಲಯೋರಧಿಕರಣಯೋರ್ಬ್ರಹ್ಮಣ ಆಶ್ರಿತತ್ವಾದ್ಗುಣೇಷ್ವಪಿ ಬ್ರಹ್ಮಣ ಆಶ್ರಿತತ್ವಮೇವಸಿದ್ಧ್ಯೇತ್। ಗುಣಾನಾಂ ಬ್ರಹ್ಮಣ್ಯಾಶ್ರಿತತ್ವಂ ತು ಕಥಂ ಸಿದ್ಧ್ಯೇದಿತಿ ಚೋದ್ಯಮಪಿ ಪರಿಹೃತಮ್। ನಾಪಿ ಪ್ರಾಯಪಾಠವಿರೋಧಃ। ಶಬ್ದಪಠಿತಸ್ಯ ಪರಿಚ್ಛೇದಸ್ಯ ಸ್ಥಲತ್ರಯೇ-ಪ್ಯಪರಿತ್ಯಾಗಾತ್। ಯೋಗ್ಯತಯಾ ಗೃಹೀತಸ್ಯ ವೈಚಿತ್ರ್ಯೇಪಿ ತಸ್ಯ ಸಾಕ್ಷಾತ್ ಶಬ್ದತೋಽ-ಪರಿಪಾಠೇನ ಪ್ರಾಯಪಾಠವಿರೋಧಸ್ಯಾನವಕಾಶಾದಿತ್ಯೇಕಂ ಸಮಾಧಾನಮ್ ॥ ೧೦ ॥

**ವಿವರಣೆ–** ಅನಂತ ಶಬ್ದಕ್ಕೆ ಹೇಳಬಹುದಾದ ಇನ್ನೊಂದು ಅರ್ಥವನ್ನು ಲೋಕದೃಷ್ಟಾಂತದಿಂದ ಹೇಳುತ್ತಾರೆ. ಸಮುದ್ರವನ್ನು ರತ್ನತಃ ಅನಂತ ಎಂದು ಹೇಳುತ್ತಾರೆ.

ರತ್ನತಃ ಅನಂತ ಎಂದರೆ ಅನೇಕ ರತ್ನಗಳಿಗೆ ಆಶ್ರಯವಾಗಿದೆ ಎಂದೇ ಅರ್ಥ. ಆದ್ದರಿಂದಲೇ ಸಮುದ್ರಕ್ಕೆ ರತ್ನಾಕರ ಎಂದು ಹೆಸರು. ಹಾಗೆಯೇ, ವಸ್ತುತಃ ಅನಂತ ಎಂದರೆ ಎಲ್ಲ ವಸ್ತುಗಳಿಗೆ ಆಶ್ರಯವಾಗಿದೆ ಎಂದೇ ಅರ್ಥ. ಅದರಂತೆ ಗುಣಾನಂತ್ಯ ಎಂದರೆ ಹರಿಯು ಎಲ್ಲಾ ಗುಣಗಳಿಗೂ ಆಶ್ರಯನಾಗಿದ್ದಾನೆ, ಗುಣಗಳಿಂದಲೂ ಪೂರ್ಣನಾಗಿದ್ದಾನೆ ಎಂದೇ ಅರ್ಥವಾಗುತ್ತದೆ.

**ಅಂತೋ ನೇತ್ಯೇವ ಶಬ್ದಾರ್ಥಃ ಸ ತು ಯೋಗ್ಯೋ ವಿಮೃಶ್ಯ(ಗ್ಯ)ತೇ।**
**ದೇಶತಃ ಕಾಲತಶ್ಚಾಂತೋ ನಾಮ ದೇಶಾಚ್ಚ ಕಾಲತಃ ॥ ೧೧ ॥**

**ಪರಿಚ್ಛೇದಃ ಸ ಚೇಯತ್ತಾ ಸಾ ಚ ಕ್ವಚಿದಸಂಗತಿಃ ।**
**ಕ್ವಚಿಚ್ಚ ಸಂಗತಿಸ್ತಾಭ್ಯಾಂ ಶೂನ್ಯತಾ ಸರ್ವಸಂಗಮಃ ॥ ೧೨ ॥**

**ತತ್ ಸರ್ವದೇಶಕಾಲೇಷು ಸಂಬಂಧೋಽನಂತತಾ ಯಥಾ ।**
**ಸಮಸ್ತಗುಣಸಂಬಂಧೋ ಗುಣಾನಂತ್ಯಂ ತಥಾ ವಿಭೋಃ ॥ ೧೩ ॥**

**ಅರ್ಥ–** ಅಂತೋ ನ= ಅಂತವು ಇಲ್ಲ, ಇತ್ಯೇವ= ಎಂದೇ, ಶಬ್ದಾರ್ಥಃ= ಶಬ್ದಾರ್ಥವಾಗುತ್ತದೆ, ಸ ತು= ಅಂತಾಭಾವವಾದರೂ, ಯೋಗ್ಯಃ= ಯೋಗ್ಯವಾದುದೇ, ವಿಮೃಗ್ಯತೇ= ಹುಡುಕಲ್ಪಡುತ್ತದೆ, ದೇಶತಃ ಕಾಲತಶ್ಚ= ದೇಶ ಮತ್ತು ಕಾಲಗಳಿಂದ, ಅಂತೋ ನಾಮ= ಅಂತವೆಂದರೆ, ದೇಶಾಚ್ಚ ಕಾಲತಃ= ದೇಶಗಳಿಂದ ಮತ್ತು ಕಾಲಗಳಿಂದ, ಪರಿಚ್ಛೇದಃ= ಪರಿಚ್ಛೇದವು, ಸ ಚ= ಆ ಪರಿಚ್ಛೇದವಾದರೂ, ಇಯತ್ತಾ= ಪರಿಮಿತಿರೂಪವಾದುದು, ಸಾ ಚ= ಪರಿಮಿತಿಯೆಂದರೆ, ಕ್ವಚಿದಸಂಗತಿಃ= ಒಂದು ಕಡೆಯಲ್ಲಿ ಇಲ್ಲ, ಕ್ವಚಿಚ್ಚ ಸಂಗತಿಃ= ಮತ್ತು ಒಂದು ಕಡೆಯಲ್ಲಿ ಇದೆ ಎಂದು ಅರ್ಥ, ತಾಭ್ಯಾಂ ಶೂನ್ಯತಾ= ಅವುಗಳಿಂದ ಶೂನ್ಯತಾ ಎಂದರೆ, ಸರ್ವಸಂಗಮಃ= ಸರ್ವಸಂಬಂಧವಿದೆ ಎಂದೇ ಅರ್ಥ, ತತ್= ಆದ್ದರಿಂದ, ಸರ್ವದೇಶಕಾಲೇಷು= ಎಲ್ಲ ದೇಶಕಾಲಗಳಲ್ಲಿಯೂ, ಸಂಬಂಧಃ= ಸಂಬಂಧವು, ಯಥಾ= ಹೇಗೆ, ಅನಂತತಾ= ದೇಶತಃ ಆನಂತ್ಯ ಮತ್ತು ಕಾಲತಃ ಆನಂತ್ಯವಾಗುತ್ತದೆಯೋ, ತಥಾ= ಹಾಗೆ, ವಿಭೋಃ= ವ್ಯಾಪ್ತನಾದ ಶ್ರೀಹರಿಗೆ, ಸಮಸ್ತಗುಣಸಂಬಂಧಃ= ಸಮಸ್ತಗುಣಗಳ ಸಂಬಂಧವೇ, ಗುಣಾನಂತ್ಯಂ= ಗುಣಾನಂತ್ಯ ಎನಿಸಿಕೊಳ್ಳುತ್ತದೆ.

**ಅನುವಾದ–** ಅನಂತ ಶಬ್ದಕ್ಕೆ ಅಂತವಿಲ್ಲ ಎಂದು ಇಷ್ಟೇ ಶಬ್ದಾರ್ಥ. ಯಾವುದರ ಅಂತವಿಲ್ಲವೆಂದು ಅನ್ವಯವನ್ನು ಹೇಳಲು ಯೋಗ್ಯವಾದುದನ್ನು ಹುಡುಕಬೇಕು. ದೇಶತಃ ಅನಂತ ಮತ್ತು ಕಾಲತಃ ಅನಂತವೆಂದರೆ ದೇಶದಿಂದಲೂ ಮತ್ತು ಕಾಲದಿಂದಲೂ ಪರಿಚ್ಛೇದವೆಂದು ಅರ್ಥ. ಪರಿಚ್ಛೇದವೆಂದರೆ ಪರಿಮಿತಿ. ಪರಿಮಿತಿಯೆಂದರೆ ಒಂದು ಕಡೆ ಇದೆ, ಒಂದು ಕಡೆ ಇಲ್ಲ ಎಂದು ಅರ್ಥ. ಆ

ಪರಿಮಿತಿಯಿಂದ ಶೂನ್ಯತೆ ಎಂದರೆ ಸರ್ವಸಂಬಂಧವನ್ನು ಹೊಂದಿದೆ ಎಂದು ಅರ್ಥ. ಆದ್ದರಿಂದ ಹೇಗೆ ದೇಶತಃ ಅನಂತ ಮತ್ತು ಕಾಲತಃ ಅನಂತವೆಂದರೆ ಸರ್ವದೇಶ ಸಂಬಂಧವುಳ್ಳದ್ದು ಮತ್ತು ಸರ್ವಕಾಲ ಸಂಬಂಧವುಳ್ಳದ್ದು ಎಂದು ಅರ್ಥವಾಗುತ್ತದೆಯೋ ಅದರಂತೆ ವಿಭುವಾದ ಹರಿಗೆ ಗುಣಾನಂತ್ಯವೆಂದರೆ ಸಮಸ್ತ ಗುಣಗಳ ಸಂಬಂಧವಿರುವುದು ಎಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಗ್ರಂಥಕಾರಸ್ತ್ವೇತಾವದಪಿ ವೈಷಮ್ಯಮಸಹಮಾನಃ ಸರ್ವತ್ರಾಪ್ಯೇಕ ಪ್ರಕಾರತಾಮೇವ ವಿಶದಯತಿ – **ಅಂತ ಇತಿ** ॥ ಅಂತೋ ನೇತ್ಯೇವ ಅಂತೋನಯಸ್ಯೇತ್ಯೇವ ಶಬ್ದಾರ್ಥಃ ಅನಂತಶಬ್ದಪದಮರ್ಯಾದಯಾ ಲಭ್ಯೋಽರ್ಥಃ । ಸತು ಶಬ್ದಾರ್ಥಸ್ತು ಯೋಗ್ಯಃ ಯೇನಯೇನಾಂತಶೂನ್ಯತ್ವಂ ಯುಜ್ಯತೇ ಸ ಸರ್ವೋಽಪೀತ್ಯರ್ಥಃ । ವಿಮೃಶ್ಯತೇ ವಿಚಾರ-ಮರ್ಯಾದಯಾಽಽನೀಯತೇ । ನತು ಶಬ್ದಶಕ್ತ್ಯೈವಲಭ್ಯತೇ । ವಿಚಾರಲಭ್ಯೋಽರ್ಥಸ್ತು ವಿಚಾರೇ ಕ್ರಿಯಮಾಣೇ ಯಸ್ಯ ಪದಾರ್ಥಸ್ಯಾಧಾರತ್ವಂ ಸ ತಥೈವಾಽಽನೀಯತೇ । ಯಸ್ಯ ಚ ಬ್ರಹ್ಮಣ್ಯಾ-ಧೇಯತ್ವಂ ಸ ತು ತಥೈವಾನೀಯತ ಇತಿ ಭಾವಃ । ತತ್ರ ದೇಶಕಾಲಯೋಃ ಕಥಂ ಯೋಗ್ಯ-ತೇತ್ಯತಸ್ತಾಂ ದರ್ಶಯತಿ – **ದೇಶತ ಇತಿ** ॥ ಸ ಚ ಪರಿಚ್ಛೇದಶ್ಚೇಯತ್ತಾ । ಸಾ ಕ್ವಚಿದಸಂಗತಿಃ ಕ್ವಚಿಚ್ಚಸಂಗತಿರಿತಿ ಯೋಜನಾ । ಕಯೋಶ್ಚಿದ್ದೇಶಕಾಲಯೋರಸಂಬಂಧಃ ಕಯೋಶ್ಚಿದ್ದೇಶ-ಕಾಲಯೋಃ ಸಂಬಂಧಶ್ಚ ದೇಶಕಾಲಪರಿಚ್ಛೇದೋ ನಾಮೇತ್ಯರ್ಥಃ । ತಾಭ್ಯಾಂ ಕ್ವಾಚಿತ್ಕ-ದೇಶಕಾಲಸಂಬಂಧಕ್ವಾಚಿತ್ಕತದಸಂಬಂಧಾಭ್ಯಾಂ ಶೂನ್ಯತಾರಹಿತತಾ ತಯೋರಭಾವ ಇತಿ ಯಾವತ್ । ಅಯಮೇವ ಶಾಬ್ದಃ ಸರ್ವಸಂಗಮಃ ಸಕಲದೇಶಕಾಲಸಂಬಂಧಃ । ಅಯಮಾರ್ಥಃ ದೇಶೇಕಾಲೇ ಚ ಕ್ವಾಚಿತ್ಕಸಂಬಂಧಕ್ವಾಚಿತ್ಕಾ ಸಂಬಂಧಯೋರಭಾವೋನಾಮ ಸಕಲದೇಶಕಾಲ ಸಂಬಂಧ ಏವೇತ್ಯರ್ಥತೋಲಬ್ಧಃ ॥ ೧೧-೧೨ ॥

ತತ್ತಸ್ಮಾತ್ । ಅನಂತತಾ ದೇಶಕಾಲಾನಂತತಾ । ಸಕಲ ದೇಶಕಾಲಸಂಬಂಧ ಏವ ದೇಶ-ಕಾಲಾನಂತತಾಯಥೇತ್ಯರ್ಥಃ । ತಥಾ ವಿಭೋರ್ನಾರಾಯಣಸ್ಯ ಗುಣಾನಂತ್ಯಮ್ ಗುಣಾ-ನಂತತ್ವಂ ಚ ಸಮಸ್ತಗುಣಸಂಬಂಧ ಏವ । ಯಥಾ ದೇಶತೋಽನಂತ ಇತ್ಯುಕ್ತೇ ಸಮಸ್ತ ದೇಶ-ಸಂಬಂಧ ಆಯಾತಿ ತಥಾ ಗುಣತೋಽನಂತ ಇತ್ಯುಕ್ತೇಽಪಿ ಸರ್ವಗುಣಸಂಬಂಧ ಏವಾಯಾತಿ । ಏತಾವತ್ಯರ್ಥೇ ನ ಕುತ್ರಾಪಿ ವೈಚಿತ್ರ್ಯಮಿತಿ ಭಾವಃ ॥ ೧೩ ॥

**ವಿವರಣೆ–** ಅನಂತ ಶಬ್ದದ ಅರ್ಥವನ್ನು ವಿಚಾರ ಮಾಡಿ, ಮಾಯಾವಾದಿಗಳು ಹೇಳುವ ಅರ್ಥವನ್ನು ನಿರಾಕರಣೆ ಮಾಡುತ್ತಾರೆ. ಅನಂತಶಬ್ದಕ್ಕೆ ಅಂತವಿಲ್ಲ ಎಂದು ಇಷ್ಟೇ ಅರ್ಥ. ಯಾವುದರ ಅಂತವಿಲ್ಲ ಎಂದು ಗೊತ್ತಾಗುವುದಿಲ್ಲ. ಅದಕ್ಕಾಗಿ ಶಾಸ್ತ್ರದಲ್ಲಿ ಯೋಗ್ಯವಾದ ವಸ್ತುವನ್ನು ಹುಡುಕಿದರೆ ದೇಶದಿಂದ, ಕಾಲದಿಂದ ಮತ್ತು ಗುಣಗಳಿಂದ ಅಂತವಿಲ್ಲ ಎಂದೇ ಅರ್ಥವು ದೊರೆಯುತ್ತದೆ. ಗುಣಗಳಿಂದ ಅಂತವಿಲ್ಲ ಎಂಬ ಅಂಶವನ್ನು ಬಿಟ್ಟು ವಸ್ತುಗಳಿಂದ ಅಂತವಿಲ್ಲ ಎಂದು ಇಟ್ಟುಕೊಂಡರೂ ಯಾವ

ಹಾನಿಯೂ ಉಂಟಾಗುವುದಿಲ್ಲ. ಅಂತವೆಂದರೆ ಪರಿಚ್ಛೇದ. ದೇಶತಃ ಅಂತವೆಂದರೆ ಒಂದು ದೇಶದಲ್ಲಿ ಇದೆ, ಒಂದು ದೇಶದಲ್ಲಿ ಇಲ್ಲ ಎಂದು ಅರ್ಥ. ದೇಶತಃ ಅಂತಾಭಾವವೆಂದರೆ ಒಂದು ದೇಶದಲ್ಲಿ ಇದೆ, ಒಂದು ದೇಶದಲ್ಲಿ ಇಲ್ಲ ಎಂಬುದು ಇಲ್ಲ, ಸರ್ವದೇಶದಲ್ಲಿಯೂ ಇದೆ ಎಂದೇ ಅರ್ಥವಾಗುತ್ತದೆ. ಅದರಂತೆಯೇ ಕಾಲತಃ ಅಂತವೆಂದರೆ ಒಂದು ಕಾಲದಲ್ಲಿ ಇದೆ, ಇನ್ನೊಂದು ಕಾಲದಲ್ಲಿ ಇಲ್ಲ ಎಂದು ಅರ್ಥ. ಕಾಲತಃ ಅಂತವಿಲ್ಲವೆಂದು ಹೇಳಿದರೆ, ಸರ್ವಕಾಲದಲ್ಲಿಯೂ ಸಂಬಂಧವನ್ನು ಹೊಂದಿದೆ ಎಂದು ಅರ್ಥ. ಅದರಂತೆ ವಸ್ತುತಃ ಅನಂತವೆಂದು ಹೇಳಿದರೆ, ಬ್ರಹ್ಮನಿಗೆ ವಸ್ತುಗಳಿಂದ ಪರಿಚ್ಛೇದವಿಲ್ಲ ಅಥವಾ ವಸ್ತುಗಳಿಗೆ ಬ್ರಹ್ಮನಿಂದ ಪರಿಚ್ಛೇದವಿಲ್ಲ ಎಂದು ಏನು ಅರ್ಥವನ್ನು ಮಾಡಿದರೂ, ಹಾನಿಯಿಲ್ಲ. ಬ್ರಹ್ಮನಿಗೆ ವಸ್ತುಗಳಿಂದ ಪರಿಚ್ಛೇದವಿಲ್ಲವೆಂದರೆ ಬ್ರಹ್ಮನು ಒಂದು ವಸ್ತುವಿನಲ್ಲಿದ್ದಾನೆ, ಇನ್ನೊಂದು ವಸ್ತುವಿನಲ್ಲಿಲ್ಲ ಎಂಬುದು ಇಲ್ಲ ಎಂದರೆ ಎಲ್ಲಾ ವಸ್ತುಗಳಲ್ಲಿಯೂ ಇದ್ದಾನೆ ಎಂದೇ ಅರ್ಥ. ವಸ್ತುಗಳಿಗೆ ಬ್ರಹ್ಮನಲ್ಲಿ ಪರಿಚ್ಛೇದವಿದೆಯೆಂದರೆ ಕೆಲವು ವಸ್ತುಗಳು ಬ್ರಹ್ಮನಲ್ಲಿವೆ, ಇನ್ನು ಕೆಲವು ವಸ್ತುಗಳು ಬ್ರಹ್ಮನಲ್ಲಿಲ್ಲ ಎಂದು ಅರ್ಥ. ವಸ್ತುತಃ ಪರಿಚ್ಛೇದವಿಲ್ಲವೆಂದರೆ ಎಲ್ಲ ವಸ್ತುಗಳೂ ಬ್ರಹ್ಮನಲ್ಲಿವೆ ಎಂದೇ ಅರ್ಥ. ಆದ್ದರಿಂದ ಎಲ್ಲ ವಸ್ತುಗಳೂ ಬ್ರಹ್ಮನನ್ನು ಆಧರಿಸಿವೆ ಮತ್ತು ಎಲ್ಲ ವಸ್ತುಗಳಲ್ಲಿಯೂ ಬ್ರಹ್ಮನು ಪ್ರವಿಷ್ಟನಾಗಿದ್ದಾನೆ ಎಂದೇ ಅರ್ಥವು ಬರುತ್ತಿದೆ, ಅದು ಶಾಸ್ತ್ರ ವಿರುದ್ಧವಲ್ಲ. ಆದರೆ ನಿಜವಾಗಿ ವಿಚಾರ ಮಾಡಿದರೆ, ಮೂರನೇ ಆನಂತ್ಯವು ವಸ್ತುತಃ ಅನಂತ್ಯವಲ್ಲ, ಅದು ಗುಣಾನಂತ್ಯ. ಬ್ರಹ್ಮನಲ್ಲಿ ಗುಣಗಳ ಪರಿಚ್ಛೇದವೆಂದರೆ ಬ್ರಹ್ಮನಲ್ಲಿ ಒಂದು ಗುಣ ಇದೆ, ಇನ್ನೊಂದು ಗುಣ ಇಲ್ಲ ಎಂದು ಅರ್ಥ. ಗುಣತಃ ಅನಂತವೆಂದರೆ ಈ ಪರಿಸ್ಥಿತಿಯಿಲ್ಲ, ಎಲ್ಲ ಗುಣಗಳೂ ಬ್ರಹ್ಮನಲ್ಲಿವೆ ಎಂದು ಅರ್ಥ. ಆದ್ದರಿಂದ ಅನಂತ ಶಬ್ದದಿಂದ ದೇಶದಿಂದ ವ್ಯಾಪ್ತಿಯೂ, ಕಾಲದಿಂದ ನಿತ್ಯತ್ವವೂಮತ್ತು ಅನಂತಗುಣಪೂರ್ಣತ್ವವೂ ಸಿದ್ಧವಾಗುತ್ತವೆ.

**ಅತೋ ನ ಪಂಕ್ತಿಭೇದೋsಸ್ತಿ ಪಂಕ್ತಿಪಾವನಪಂಕ್ತಿಷು ।**
**ಅಂತಸ್ಯ ತನ್ನಿಷೇಧಸ್ಯ ಸರ್ವತ್ರೈಕವಿಧತ್ವತಃ ॥ ೧೪ ॥**

**ಅರ್ಥ–** ಅತಃ= ಆದ್ದರಿಂದ, ಅಂತಸ್ಯ= ಅಂತಶಬ್ದಾರ್ಥವು, ತನ್ನಿಷೇಧಸ್ಯ= ಅಂತದ ನಿಷೇಧವು, ಸರ್ವತ್ರ= ಮೂರು ಕಡೆಗಳಲ್ಲಿಯೂ, ಏಕವಿಧತ್ವತಃ= ಒಂದೇ ರೀತಿ ಇರುವುದರಿಂದ, ಪಂಕ್ತಿಪಾವನಪಂಕ್ತಿಷು= ಪಂಕ್ತಿಪಾವನರಾದ ಶ್ರೀಮಧ್ವಾಚಾರ್ಯರ ಅರ್ಥನಿರೂಪಣೆಯ ಪಂಕ್ತಿಗಳಲ್ಲಿ, ಪಂಕ್ತಿಭೇದಃ= ಪಂಕ್ತಿಭೇದವು, ನಾಸ್ತಿ= ಇರುವುದಿಲ್ಲ.

**ಅನುವಾದ–** ಅಂತದ ನಿಷೇಧವು ಮೂರು ಕಡೆಗಳಲ್ಲಿಯೂ ಒಂದೇ ರೀತಿ ಇರುವುದರಿಂದ, ಪಂಕ್ತಿ ಪಾವನರಾದ ಆಚಾರ್ಯರ ಅಭಿಪ್ರಾಯಕ್ಕೆ ಅನುಗುಣವಾದ ವ್ಯಾಖ್ಯಾನದಲ್ಲಿ ಪಂಕ್ತಿ ಭೇದದ ದೋಷವು ಇರುವುದಿಲ್ಲ.

**ಭಾವವಿಲಾಸಿನೀ–** ಅತಃ ಸರ್ವತ್ರಾಪಿ ಸಾಮ್ಯಾತ್ । ಪಂಕ್ತಿಪಾವನಪಂಕ್ತಿಷು । ಪಂಕ್ತಿಪಾವನಾನಾಮಾಚಾರ್ಯಾಣಾಂ ಪಂಕ್ತಿಷು । ಪಂಕ್ತಿಭೇದಃ ಪಂಕ್ತೌ ಪರಿವೇಷ್ಯಮಾಣಾನ್ನಭೇದ ಇತ್ಯರ್ಥಃ । ಯಥಾಸ್ತಿಕಶಿರೋಮಣೇರಾಚಾರ್ಯಸ್ಯ ಪಂಕ್ತಿಷು ಪಂಕ್ತಿಭೇದೋ ನಾಸ್ತಿ ತಥಾಽಽಚಾರ್ಯೈರುಚ್ಯಮಾನಶಬ್ದಾರ್ಥೇಷ್ವಪಿ ಪ್ರಾಯಪಾತವಿರೋಧೋನಾಸ್ತೀತಿ ಧ್ವನಿತೋಽಪ್ಯರ್ಥ ಊಹ್ಯಃ । ತತ್ರಹೇತುಮಾಹ – **ಅಂತಸ್ಯೇತಿ** ॥ ಏಕವಿಧತ್ವತಃ ಪರಿಚ್ಛೇದರೂಪತ್ವೇನೈಕವಿಧ್ಯಾತ್ ॥ ೧೪ ॥

**ವಿವರಣೆ–** ಮೂರು ಕಡೆಗಳಲ್ಲಿಯೂ ಅಂತವೆಂದರೆ ಪರಿಚ್ಛೇದವೆಂದೇ, ಅಂತನಿಷೇಧವೆಂದರೆ ಅಂತಹ ಪರಿಚ್ಛೇದದ ನಿಷೇಧವೆಂದೇ ಅರ್ಥವನ್ನು ಮಾಡಿ ದೇಶತಃ ಅನಂತತ್ವವನ್ನುಕಾಲತಃ ಅನಂತತ್ವವನ್ನು ಮತ್ತು ವಸ್ತುತಃ ಅನಂತತ್ವವನ್ನು (ಗುಣತಃ ಅನಂತತ್ವವನ್ನು) ಕೂಡಿಸಿರುವುದರಿಂದ, ಇಲ್ಲಿ ಒಂದೇ ಶಬ್ದಕ್ಕೆ, ಒಂದೇ ವಾಕ್ಯದಲ್ಲಿ ಎರಡು ಬೇರೆ ಅರ್ಥವನ್ನು ಮಾಡಿ ಪಂಕ್ತಿಭೇದ ಮಾಡುವ ಪ್ರಸಂಗವಿಲ್ಲ. ನಾವು ಹೇಳಿದ ಅರ್ಥ ಆಚಾರ್ಯರಿಗೆ ಸಮ್ಮತವಾದ ಅರ್ಥ. ಆಚಾರ್ಯರು ಪಂಕ್ತಿಪಾವನರು. ಅವರ ಪಂಕ್ತಿಯಲ್ಲಿ ಭೇದವು ಬಂದರೆ ಅದು ಪಂಕ್ತಿಪಾವನತ್ವಕ್ಕೆ ವಿರುದ್ಧವಾದುದು. ಅಂತಹ ಪಂಕ್ತಿಭೇದವು ಅವರ ವ್ಯಾಖ್ಯಾನದಲ್ಲಿ ಎಂದೂ ಬರುವುದಿಲ್ಲ. ಆದ್ದರಿಂದ ನಾವು ಹೇಳಿದ ಅರ್ಥವು ಅತ್ಯಂತ ಗ್ರಾಹ್ಯವಾದುದು ಎಂದು ಅಭಿಪ್ರಾಯ.

**ಸಂಬಂಧಶ್ಚ ಯಥಾಯೋಗಂ ಸಂಯೋಗೋ ದ್ರವ್ಯಯೋಸ್ತಯೋಃ ।**
**ಗುಣಾನಾಂ ಗುಣಿನಶ್ಚೈವಂ ಗುಣಗುಣ್ಯಾತ್ಮತಾ ಪರಂ ॥ ೧೫ ॥**

**ಅರ್ಥ–** ಸಂಬಂಧಶ್ಚ= ದೇಶ–ಕಾಲ–ಗುಣಸಂಬಂಧವಾದರೂ, ಯಥಾಯೋಗಂ= ಅವುಗಳಿಗೆ ಯೋಗ್ಯವಾದ ರೀತಿಯಲ್ಲಿ ಉಂಟಾಗುವುದು, ದ್ರವ್ಯಯೋಃ= ದ್ರವ್ಯಗಳಾದ, ತಯೋಃ= ಆ ದೇಶಕಾಲಗಳಿಗೆ, ಸಂಯೋಗಃ= ಸಂಯೋಗರೂಪವಾದ ಸಂಬಂಧವು ಉಂಟಾಗುತ್ತದೆ, ಪರಂ= ಆದರೆ, ಗುಣಾನಾಂ ಗುಣಿನಶ್ಚ= ಗುಣಗಳಿಗೂ ಮತ್ತು ಗುಣಿಗೂ, ಏವಂ= ಈ ರೀತಿಯಾಗಿ, ಗುಣಗುಣ್ಯಾತ್ಮತಾ= ಗುಣಗುಣಿಭಾವವೇ ಸಂಬಂಧವಾಗುತ್ತದೆ.

**ಅನುವಾದ–** ಬ್ರಹ್ಮನಲ್ಲಿ ದೇಶ–ಕಾಲ–ಗುಣಸಂಬಂಧವು ಯಥಾಯೋಗ್ಯವಾಗಿ ಆಗುತ್ತವೆ. ದೇಶಕಾಲಗಳು ಮತ್ತು ಬ್ರಹ್ಮನು ದ್ರವ್ಯವಾಗಿರುವುದರಿಂದ ಬ್ರಹ್ಮನಲ್ಲಿ ದೇಶಸಂಬಂಧ ಮತ್ತು ಕಾಲಸಂಬಂಧಗಳು ಸಂಯೋಗರೂಪವಾಗಿರುತ್ತವೆ. ಬ್ರಹ್ಮನಿಗೂ ಮತ್ತು ಬ್ರಹ್ಮನ ಗುಣಗಳಾದ ಸರ್ವಜ್ಞತ್ವಾದಿಗಳಿಗೂ ಗುಣಗುಣಿಭಾವವೇ ಸಂಬಂಧವಾಗುತ್ತವೆ.

**ಭಾವವಿಲಾಸಿನೀ–** ಸಂಬಂಧಶ್ಚ ದೇಶಕಾಲಗುಣಾನಾಂ ಸಂಬಂಧಃ । ಯಥಾ ಯೋಗ್ಯಂ ಯೋಗ್ಯತಾಮನತಿಕ್ರಮ್ಯ । ಯತ್ರ ಯತ್ರ ಯೋ ಯೋಗ್ಯೋ ಭವತಿ ಸ ಏವ ಗ್ರಾಹ್ಯ

**ಇತ್ಯರ್ಥಃ । ತದೇವ ದರ್ಶಯತಿ – ಸಂಯೋಗ ಇತಿ ॥ ತಯೋರ್ದೇಶಕಾಲಯೋಃ । ಪರಂ ಕೇವಲಂ ಗುಣಗುಣ್ಯಾತ್ಮತಾ ಗುಣಗುಣಿಭಾವಾಖ್ಯಃ ಸಂಬಂಧಃ । ಆಧಾರಾಧೇಯಭಾವ ಇತಿ ಯಾವತ್ । ಏವಂಚ ದೇಶಕಾಲಾದಿಭಿಸ್ತ್ರಿಭಿರಪಿ ಹರೇರಾಧಾರಾಧೇಯಭಾವ ಏವಾರ್ಥೋಽಪಿ ಸಂಬಂಧಃ । ಸ ಚ ಕ್ವಚಿದಾಧಾರತ್ವಪೂರ್ವಕಃ ಕ್ವಚಿದಾಧೇಯತ್ವಪೂರ್ವ ಇತಿ ನ ನಾಮ್ನಾಪಿ ವಿಶೇಷಃ। ಇಯತ್ತಾರೂಪ ಪರಿಚ್ಛೇದಾಭಾವಃ ಸರ್ವತ್ರಾನಂತತೇತಿ ನ ಕುಚೋದ್ಯಾನವಕಾಶಃ ॥ ೧೫ ॥**

**ವಿವರಣೆ–** ದೇಶ-ಕಾಲ ಮತ್ತು ಗುಣಗಳ ವಿಷಯದಲ್ಲಿ ಸಂಬಂಧವು ಅಲ್ಪವ್ಯತ್ಯಾಸ ವಿದ್ದರೂ ಏಕರೂಪವಾಗಿರುವುದೆಂದು ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ. ಬ್ರಹ್ಮನು ಮತ್ತು ದೇಶಕಾಲಗಳು ದ್ರವ್ಯಗಳು. ಆದ್ದರಿಂದ ಬ್ರಹ್ಮನಿಗೂ ಮತ್ತು ದೇಶಕಾಲಗಳಿಗೂ ಇರುವ ಸಂಬಂಧವು ಸಂಯೋಗರೂಪವಾಗುತ್ತದೆ. ದೇಶಕಾಲಗಳು ಎಲ್ಲ ವಸ್ತುಗಳಿಗೂ ಆಧಾರಭೂತವಾದವು. ಎಲ್ಲ ದೇಶಕಾಲಗಳಲ್ಲಿ ಬ್ರಹ್ಮನು ಆಧೇಯನಾಗಿದ್ದಾನೆ ಎಂಬ ಕಾರಣದಿಂದ ಈ ದೇಶಕಾಲ ಸಂಯೋಗರೂಪವಾದ ಸಂಬಂಧವು ಆಧಾರಾಧೇಯಭಾವರೂಪವಾದ ಸಂಬಂಧದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಸರ್ವಜ್ಞತ್ವಾದಿಗುಣಗಳು ದ್ರವ್ಯವಲ್ಲವಾದ ಕಾರಣ ತಾರ್ಕಿಕರು ಅಲ್ಲಿ ಸಂಯೋಗವನ್ನು ಒಪ್ಪುವುದಿಲ್ಲ. ಆದ್ದರಿಂದ ಆ ಗುಣಗಳಿಗೂ ಬ್ರಹ್ಮನಿಗೂ ಬೇರೆ ಸಂಬಂಧವನ್ನೇ ಹೇಳಬೇಕು. ಬ್ರಹ್ಮನಲ್ಲಿ ಆ ಗುಣಗಳು ಯಾವುದಾದರೂ ಸಂಬಂಧದಿಂದ ಇವೆ ಎಂದು ಹೇಳಬೇಕು. ಆಗ ಬ್ರಹ್ಮನು ಆಧಾರನಾಗುತ್ತಾನೆ, ಗುಣಗಳು ಆಧೇಯನಾಗುತ್ತವೆ. ಆದ್ದರಿಂದ ಗುಣಗುಣಿಭಾವರೂಪವಾದ ಸಂಬಂಧವನ್ನು ಹೇಳಿದರೂ ಅದು ಆಧಾರಾಧೇಯಭಾವರೂಪವಾದ ಸಂಬಂಧದಲ್ಲಿಯೇ ಪರ್ಯವಸಾನಹೊಂದುತ್ತದೆ. ಆದ್ದರಿಂದ ಮೂರು ಕಡೆಗಳಲ್ಲಿ ಆಧಾರಾಧೇಯಭಾವರೂಪವಾದುದೇ ಸಂಬಂಧ. ದೇಶಕಾಲಗಳ ದೃಷ್ಟಿಯಿಂದ ಬ್ರಹ್ಮನು ಆಧೇಯನಾಗುತ್ತಾನೆ. ಗುಣಗಳ ದೃಷ್ಟಿಯಿಂದ ಬ್ರಹ್ಮನು ಆಧಾರನಾಗುತ್ತಾನೆ, ಇಷ್ಟೇ ವ್ಯತ್ಯಾಸ. ಆದ್ದರಿಂದ ಸಂಬಂಧವು ಒಂದೇ ರೀತಿಯಿರುವುದರಿಂದ ಮತ್ತು ಅಂತ ಎಂಬ ಶಬ್ದಕ್ಕೆ ಪರಿಚ್ಛೇದ ಎಂಬ ಒಂದೇ ಅರ್ಥವನ್ನು ಮಾಡಿದ್ದರಿಂದ ಸರ್ವತ್ರ ಏಕರೂಪತೆಯೇ ಇದೆ.

**ಶಿಶೋರ್ವೃದ್ಧಸ್ಯ ಯೂನಶ್ಚ ಯಥಾಯೋಗ್ಯಂ ಹಿ ಭೋಜನಂ ।**
**ಭಿನ್ನಭಿನ್ನಾನ್ನದಾನೇ ಹಿ ಪಂಕ್ತಿಭೇದಂ ವಿದುರ್ಬುಧಾಃ ॥ ೧೬ ॥**

**ಅರ್ಥ–** ಶಿಶೋಃ= ಶಿಶುವಿಗೆ, ವೃದ್ಧಸ್ಯ= ಮುದುಕನಿಗೆ, ಯೂನಶ್ಚ= ಮತ್ತು ಯುವಕನಿಗೆ, ಯಥಾಯೋಗ್ಯಂ= ಯಥಾಯೋಗ್ಯವಾಗಿಯೇ, ಭೋಜನಂ ಹಿ= ಭೋಜನವಷ್ಟೇ, ಭಿನ್ನಭಿನ್ನಾನ್ನದಾನೇ= ಬೇರೆ ಬೇರೆ ಅನ್ನವನ್ನು ನೀಡಿದರೆ ಮಾತ್ರ, ಬುಧಾಃ= ಜ್ಞಾನಿಗಳು, ಪಂಕ್ತಿಭೇದಂ= ಪಂಕ್ತಿಭೇದವೆಂದು, ವಿದುರ್ಹಿ= ತಿಳಿಯುತ್ತಾರಷ್ಟೇ.

**ಅನುವಾದ–** ಶಿಶುವಿಗೂ, ಯುವಕನಿಗೂ ಮತ್ತು ವೃದ್ಧನಿಗೂ ಬೇರೆ ಬೇರೆ ಪ್ರಮಾಣದಲ್ಲಿ ಅನ್ನವನ್ನು ಬಡಿಸುತ್ತಾರೆ. ಅದು ಪಂಕ್ತಿಭೇದವಾಗುವುದಿಲ್ಲ. ಆದರೆ ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಅನ್ನಬಡಿಸಿದರೆ ಮಾತ್ರ ಅದು ಪಂಕ್ತಿಭೇದ ಎಂದು ಜ್ಞಾನಿಗಳು ತಿಳಿಯುತ್ತಾರೆ.

**ಭಾವವಿಲಾಸಿನೀ–** (ಅರ್ಥೇಚಾರ್ಥೇ ಈಷದ್ವೈಷಮ್ಯಮಾತ್ರಾನ್ನ) ಶಬ್ದೋಕ್ತ ಸಂಬಂಧಶ್ಚ ಏಕತ್ರ ಸಂಯೋಗಃ ಅಪರತ್ರ ಗುಣಗುಣಿಭಾವ ಇತ್ಯೇತಾವತಾ ನ ಪ್ರಾಯಪಾಠವಿರೋಧ ಇತ್ಯತ್ರ ದೃಷ್ಟಾಂತಮಾಹ – **ಶಿಶೋರಿತಿ** ॥ ಯಥಾಯೋಗ್ಯಂ ಶಿಶೋರತ್ಯಲ್ಪಂ ವೃದ್ಧಸ್ಯಾಲ್ಪಂ ಯೂನಶ್ಚ ಬಹುಲಂ ಚೇತ್ಯರ್ಥಃ । ತರ್ಹಿ ಕದಾ ಪಂಕ್ತಿಭೇದ ಇತ್ಯತ ಆಹ – **ಭಿನ್ನಭಿನ್ನಾನ್ನೇತಿ** ॥ ಏಕತ್ರ ಸದನ್ನಮಪರತ್ರ ಕದನ್ನಂ ಚ ದೀಯತೇ ಚೇತ್ ತದಾಪಂಕ್ತಿಭೇದಃ ॥ ೧೬ ॥

**ವಿವರಣೆ–** ಒಂದೇ ಅರ್ಥವನ್ನು ಮಾಡಿದಾಗ ಅಲ್ಪವ್ಯತ್ಯಾಸವಿದ್ದರೂ ದೋಷವು ಉಂಟಾಗುವುದಿಲ್ಲ ಎಂಬುದನ್ನು ಒಂದು ದೃಷ್ಟಾಂತದಿಂದ ಇಲ್ಲಿ ಸಮರ್ಥನೆ ಮಾಡುತ್ತಾರೆ. ಮಗುವಿಗೆ ಅತ್ಯಲ್ಪವಾದ ಅನ್ನ, ವೃದ್ಧನಿಗೆ ಅದಕ್ಕಿಂತ ಹೆಚ್ಚು ಅನ್ನ, ಯುವಕನಿಗೆ ಅದಕ್ಕಿಂತ ಹೆಚ್ಚು ಅನ್ನ ಬಡಿಸಿದರೆ ಅದನ್ನು ಯಾರೂ ಪಂಕ್ತಿಭೇದವೆಂದು ಕರೆಯುವುದಿಲ್ಲ. ಆದರೆ ಒಬ್ಬನಿಗೆ ಶ್ರೇಷ್ಠವಾದ ಅನ್ನ, ಇನ್ನೊಬ್ಬನಿಗೆ ಕದನ್ನವನ್ನು ಬಡಿಸಿದರೆ ಮಾತ್ರ ಅದನ್ನು ಪಂಕ್ತಿಭೇದವೆಂದು ಕರೆಯುತ್ತಾರೆ. ಹಾಗೆಯೇ ಇಲ್ಲಿ ನಾವು ದೇಶಕಾಲಗುಣ ಮೂರು ವಿಷಯಗಳಲ್ಲಿಯೂ ಆಧಾರಾಧೇಯಭಾವರೂಪ ಸಂಬಂಧವನ್ನೇ ಅರ್ಥವೆಂದೂ, ಅಂತಶಬ್ದಕ್ಕೆ ಅವಧಿ ಎಂದೇ ಅರ್ಥವೆಂದೂ ಹೇಳಿದ್ದೇವೆ. ದೇಶಕಾಲಗಳ ವಿಷಯದಲ್ಲಿ ಬ್ರಹ್ಮನು ಆಧೇಯನಾಗುತ್ತಾನೆ. ಗುಣಗಳ ವಿಷಯದಲ್ಲಿ ಬ್ರಹ್ಮನು ಆಧಾರನಾಗುತ್ತಾನೆ ಎಂಬ ಅಲ್ಪವ್ಯತ್ಯಾಸವು ದೋಷವನ್ನು ಉಂಟು ಮಾಡುವುದಿಲ್ಲ. ಆದರೆ ದೇಶಕಾಲ ವಿಷಯದಲ್ಲಿ ಪರಿಚ್ಛೇದ ಎಂದರೆ ಅವಧಿ ಎಂಬ ಅರ್ಥವನ್ನು ಹೇಳಿ, ವಸ್ತುವಿನ ವಿಷಯದಲ್ಲಿ ಮಾತ್ರ ಪರಿಚ್ಛೇದ ಎಂದರೆ ಭೇದ ಎಂಬ ಅರ್ಥವನ್ನು ಮಾಡಿದರೆ, ನಿಶ್ಚಯವಾಗಿ ಪಂಕ್ತಿಭೇದ ಉಂಟಾಗುತ್ತದೆ ಎಂದು ಅಭಿಪ್ರಾಯ.

ಏಕಾನ್ನಸ್ಯ ಯಥಾಯೋಗಂ ದಾನೇ ಕೋ ನೇತಿ ಶಂಸತಿ ।
ಅತೋ ವಸ್ತುಪರತ್ವೋಕ್ತಿರ್ವಸ್ತುತತ್ವಾಜ್ಞತಾವಶಾತ್ ॥ ೧೭ ॥

**ಅರ್ಥ–** ಏಕಾನ್ನಸ್ಯ= ಒಂದೇ ವಿಧವಾದ ಅನ್ನವನ್ನು, ಯಥಾಯೋಗಂ= ಅವರ ಯೋಗ್ಯತೆಗೆ ಅನುಗುಣವಾಗಿ, ದಾನೇ= ಕೊಟ್ಟರೆ, ಕಃ= ಯಾವನು, ನ ಇತಿ= ಬೇಡವೆಂದು (ದೋಷವೆಂದು) ಶಂಸತಿ= ಹೇಳುತ್ತಾನೆ, ಅತಃ= ಆದ್ದರಿಂದ, ವಸ್ತುಪರತ್ವೋಕ್ತಿಃ= ಸರ್ವವಸ್ತುಗಳಿಂದ ಭೇದಶೂನ್ಯತ್ವವನ್ನು ಹೇಳುವುದು, ವಸ್ತುತತ್ವಾಜ್ಞತಾವಶಾತ್= ವಸ್ತುತತ್ವವನ್ನು ತಿಳಿಯದಿರುವ ಕಾರಣದಿಂದಲೇ.

**ಅನುವಾದ–** ಒಂದೇ ವಿಧವಾದ ಅನ್ನವನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಬಡಿಸಿದರೆ ಅದನ್ನು ಯಾರೂ ದೋಷವೆಂದು ಹೇಳುವುದಿಲ್ಲ. ಆದ್ದರಿಂದ ವಸ್ತು ಪರತ್ವೋಕ್ತಿಯು ಎಂದರೆ ಸಕಲವಸ್ತುಗಳಿಂದ ಭೇದರಾಹಿತ್ಯದ ವಚನವು ವಾಸ್ತವ ಸ್ಥಿತಿಯ ಅಜ್ಞಾನದ ಕಾರಣದಿಂದಲೇ ಉಂಟಾಗಿದೆ (ಎಂದು ನಮ್ಮ ಅಭಿಪ್ರಾಯ).

**ಭಾವವಿಲಾಸಿನೀ–** ಏಕಸ್ಯೈವಾನ್ನಸ್ಯ ತತ್ತದ್ಯೋಗ್ಯತ್ರನುಸಾರೇಣದಾನೇ ನ ಪಂಕ್ತಿಭೇದಃ । ಏವಂ ಶಬ್ದಾರ್ಥ ಭೂತಸಂಬಂಧಸ್ಯ ಯತ್ರ ಯತ್ರ ಯಥಾ ಯೋ ವಕ್ತುಂ ಶಕ್ಯತೇ ತಥಾ ತಥಾಗ್ರಹಣೇನ ಪ್ರಾಯಪಾಠವಿರೋಧೋಽಪೀತಿ ಭಾವಃ। ಅತಃ ಪೂರ್ವೋಕ್ತಪರಿಚ್ಛೇದಭೇದಾಖ್ಯಾರ್ಥ ದ್ವಯರೂಪ ಗ್ರಹಣದೂಷಣಾತ್ । ವಸ್ತುಪರತ್ವೋಕ್ತಿಃ ಶ್ರುತೇರ್ವಸ್ತುತಃ ಪರಿಚ್ಛೇದರಾಹಿತ್ಯಪರತ್ವೋಕ್ತಿ-ರಿತ್ಯರ್ಥಃ ವಸ್ತುತತ್ವಾಜ್ಞತಾವಶಾತ್ । ವಸ್ತುನೋ ಯಥಾರ್ಥಜ್ಞಾನಾಭಾವಾದಿತ್ಯರ್ಥಃ। ವಸ್ತುತಃ ಪರಿಚ್ಛೇದರಾಹಿತ್ಯಂ ಸಕಲವಸ್ತ್ವಾತ್ಮಕತ್ವಮಿತಿ ಯಾವತ್ । ಪರೇಣೋಕ್ತಂ ಯತ್ತತ್ವಾಜ್ಞಾನ-ವಿಜೃಂಭಿತಮಿತಿ ಭಾವಃ। ಅಥವಾ ಯೋಽನಂತಶ್ರುತೌ ವಸ್ತುಪರತ್ವೋಕ್ತಿರ್ವಸ್ತುನಃ ಸಕಲವಸ್ತುನಃ ಪರತ್ವೋಕ್ತಿಃ ಪರಬ್ರಹ್ಮತ್ವೋಕ್ತಿಃ ಪರೇಷಾಂ ಸಾ ವಸ್ತುತತ್ವಾಜ್ಞತಾವಶಾದಿತಿ ಯೋಜನಾ ॥೧೭॥

**ವಿವರಣೆ–** ಆಧಾರಾಧೇಯಭಾವರೂಪಸಂಬಂಧವು ಮೂರು ಕಡೆಗಳಲ್ಲಿಯೂ ಏಕರೂಪವಾಗಿದೆ. ಅದನ್ನು ಬಿಟ್ಟು ದೇಶಕಾಲಗಳಲ್ಲಿ ಮಾತ್ರ ಅನಂತತ್ವವೆಂದರೆ ಪರಿಚ್ಛೇದಾಭಾವ, ವಸ್ತುವಿಷಯದಲ್ಲಿ ಅನಂತತ್ವವೆಂದರೆ ಭೇದಾಭಾವವೆಂದು ಹೇಳಿ ಸಮಸ್ತ ವಸ್ತುವಿನಿಂದ ಅಭೇದವನ್ನು ಹೇಳಿದರೆ ಅದು ವಾಸ್ತವವಾದ ತತ್ತ್ವವನ್ನು ತಿಳಿಯದಿರುವ ಕಾರಣದಿಂದಲೇ ಆಗುತ್ತದೆ. ಏಕೆಂದರೆ ಸಮಸ್ತ ವಸ್ತುಗಳಿಂದ ಅಭೇದವನ್ನು ನೀನು ಒಪ್ಪುವುದಿಲ್ಲ. ಜಡಾಭೇದ, ಅನೃತಾಭೇದ ಇವುಗಳು ನಿನ್ನ ಮತಕ್ಕೂ ವಿರುದ್ಧವಾದವು. ಆದ್ದರಿಂದ ನಿನಗೆ ವಾಸ್ತವಿಕತೆಯ ಅರಿವೂ ಇಲ್ಲ, ನಿನ್ನ ಮತದ ಪ್ರಕ್ರಿಯೆಯ ಅರಿವೂ ಇಲ್ಲ ಎಂದು ಅಭಿಪ್ರಾಯ.

**ಕಿಂ ಚಾಂತಶೂನ್ಯತೈವಾತ್ರ ಶಕ್ಯೋಽರ್ಥೋ ಯೋಗ್ಯತಾವಶಾತ್ ।**
**ಆನೇಯಮನ್ಯದ್ಯೋಗ್ಯಂ ಚ ನೈತದುಕ್ತಪ್ರಕಾರತಃ ॥ ೧೮ ॥**

**ಅರ್ಥ–** ಕಿಂ ಚ= ಮತ್ತು, ಅತ್ರ= ಇಲ್ಲಿ, ಅಂತಶೂನ್ಯತೈವ= ಅಂತರಾಹಿತ್ಯವೇ, ಶಕ್ಯಾರ್ಥಃ= ಶಬ್ದಶಕ್ತಿಯಿಂದ ಲಭ್ಯವಾದ ಅರ್ಥ, ಅನ್ಯತ್= ಬೇರೆ ಅಂಶವನ್ನು, ಯೋಗ್ಯತಾವಶಾತ್= ಯೋಗ್ಯತೆಯನ್ನು ಅನುಸರಿಸಿ, ಆನೇಯಂ= ತರಬೇಕು, ಏತತ್= ವಸ್ತುವೆಂಬ ಅರ್ಥವಾದರೂ, ಉಕ್ತಪ್ರಕಾರತಃ= ನಿನ್ನ ಮತಕ್ಕೇ ವಿರುದ್ಧವಾದ ಕಾರಣದಿಂದ, ಯೋಗ್ಯಂ ಚ ನ= ಯೋಗ್ಯವೂ ಅಲ್ಲ.

**ಅನುವಾದ–** ಅನಂತ ಎಂಬ ಶಬ್ದಕ್ಕೆ ಅಂತರಹಿತವಾದುದು ಎಂದಿಷ್ಟೇ ಶಬ್ದಶಕ್ತಿಯಿಂದ ಲಭ್ಯವಾದ ಅರ್ಥ. ಯೋಗ್ಯತೆಯ ವಶದಿಂದ ದೇಶಕಾಲಾದಿಗಳನ್ನು ತರಬೇಕು.

**ಆದರೆ ವಸ್ತುವನ್ನು ಮಾತ್ರ ಹಾಗೆ ತರಲು ಸಾಧ್ಯವಿಲ್ಲ. ಏಕೆಂದರೆ ಅದು ನಿನ್ನ ಮತಕ್ಕೇ ವಿರುದ್ಧವಾಗಿವೆ**

**ಭಾವವಿಲಾಸಿನೀ— ದೂಷಣಾಂತರಂ ಚಾಹ – ಕಿಂಚೇತಿ ॥ ಅತ್ರಾನಂತಶಬ್ದೇ ಶಕ್ಯಃ ಸಾಕ್ಷಾಚ್ಛಬ್ದವಾಚ್ಯಃ। ಅನ್ಯದ್ದೇಶಕಾಲದಿಕಮ್'। ಏತತ್ ವಸ್ತು। ಉಕ್ತಪ್ರಕಾರತಃ। ಸರ್ವಾತ್ಮಕತ್ವಸ್ಯ ಸ್ವಮತಾದಿವಿರುದ್ಧತ್ವಾತ್ ಯೋಗ್ಯಂ ನೇತಿ ಸಂಬಂಧಃ ॥ ೧೮ ॥**

**ವಿವರಣೆ—** ಅನಂತಶಬ್ದಕ್ಕೆ ಅಂತರಹಿತವಾದುದು ಎಂದಿಷ್ಟೇ ಅರ್ಥ. ಯಾವುದರ ಅಂತರಹಿತವಾದುದು ಎಂಬ ಪ್ರಶ್ನೆ ಬಂದರೆ, ದೇಶದಿಂದ ಅಂತರಹಿತವಾದುದು, ಕಾಲದಿಂದ ಅಂತರಹಿತವಾದುದು ಎಂದು, ವಸ್ತುವಿನ ಯೋಗ್ಯತೆಯನ್ನು ಅನುಸರಿಸಿ ದೇಶಕಾಲಗಳನ್ನು ತಂದು ಅದರ ಅಂತರಾಹಿತ್ಯವನ್ನು ಹೇಳಬೇಕು. ಹಾಗೆಯೇ ವಸ್ತುವೆಂಬ ಅರ್ಥವನ್ನು ತೆಗೆದುಕೊಂಡು ಅದರಿಂದ ಅಂತರಾಹಿತ್ಯವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಹಾಗೆ ಹೇಳಿದರೆ ಬ್ರಹ್ಮನಿಗೆ ಸರ್ವವಸ್ತ್ವಾತ್ಮಕತ್ವವು ಬರುತ್ತದೆ. ಆ ಸರ್ವವಸ್ತುಗಳಲ್ಲಿ ಜಡ, ಅನೃತಗಳೂ ಸೇರಿವೆ. ಬ್ರಹ್ಮನಿಗೆ ಜಡಾಭೇದವನ್ನು, ಅನೃತಾಭೇದವನ್ನು ನೀನು ಒಪ್ಪುವುದಿಲ್ಲ. ಆದ್ದರಿಂದ ಯೋಗ್ಯವಾದ ದೇಶ-ಕಾಲಾನಂತ್ಯವನ್ನು ಮತ್ತು ಗುಣಾನಂತ್ಯವನ್ನು ಮಾತ್ರ ಹೇಳಬೇಕು, ಹೊರತು ವಸ್ತು ಪರಿಚ್ಛೇದಶೂನ್ಯತ್ವರೂಪವಾದ ಆನಂತ್ಯವನ್ನು ಹೇಳಬಾರದು.

**ಮಹತ್ತ್ವಸ್ಯ ವಿರೋಧಿತ್ವಾದಪಿ ನೈತದಿಹೋಚಿತಂ ॥ ೧೯ ॥**

**ಅರ್ಥ—** ಏತತ್= ಈ ಸರ್ವವಸ್ತು ಅಭೇದವು, ಮಹತ್ತ್ವಸ್ಯ ವಿರೋಧಿತ್ವಾದಪಿ= ಮಹತ್ತ್ವಕ್ಕೆ ವಿರೋಧಿಯಾದುದರಿಂದಲೂ, ಇಹ= ಇಲ್ಲಿ, ಉಚಿತಂ ನ= ಉಚಿತವಾದುದಲ್ಲ.

**ಅನುವಾದ— ಸರ್ವವಸ್ತ್ವಾತ್ಮಕತ್ವವು ಬ್ರಹ್ಮನ ಮಹತ್ವಕ್ಕೆ ವಿರೋಧಿಯಾದುದರಿಂದ ಇಲ್ಲಿ ಯೋಗ್ಯತೆಯಿಂದ ವಸ್ತುವನ್ನು ಸ್ವೀಕರಿಸಲು ಬರುವುದಿಲ್ಲ.**

**ಭಾವವಿಲಾಸಿನೀ—** ಪ್ರಕಾರಾಂತರೇಣಾಪ್ಯಯೋಗ್ಯತಾಮಾಹ – **ಮಹತ್ತ್ವಸ್ಯೇತಿ** ॥ ಏತತ್ ಸರ್ವಾತ್ಮಕತ್ವಮ್ । ಸರ್ವಾತ್ಮಕತ್ವೇ ಬ್ರಹ್ಮಣೋಮಹತ್ತ್ವಾಸಂಭವಃ । ಸಚ ಬ್ರಹ್ಮವಿದಾಪ್ನೋತಿ ಪರಮಿತಿ ಪೂರ್ವವಾಕ್ಯೋಕ್ತಪರಶಬ್ದೇನ ವಿರುದ್ಧಃ। ಅತೋಽಪಿನೋಚಿತಮಿತಿ ಸಂಬಂಧಃ ॥೧೯॥

**ವಿವರಣೆ—** ಬ್ರಹ್ಮವಿದಾಪ್ನೋತಿಪರಂ ಎಂಬ ಮಂತ್ರವು ಪರಶಬ್ದದಿಂದ ಬ್ರಹ್ಮನಲ್ಲಿ ಮಹತ್ವವನ್ನು ಹೇಳುತ್ತದೆ. ಸರ್ವವಸ್ತುಗಳ ಅಭೇದವನ್ನು ಅಂಗೀಕಾರ ಮಾಡಿದರೆ ಉಂಟಾಗುವ ಜಡಾಭೇದ ಮತ್ತು ಅನೃತಾಭೇದಗಳು ಬ್ರಹ್ಮನ ಮಹತ್ವಕ್ಕೆ ವಿರೋಧಿಗಳಾಗಿವೆ. ಆದ್ದರಿಂದ ಇಲ್ಲಿ ನೀವು ಹೇಳಿದಂತೆ ವಸ್ತುತಃ ಅನಂತ ಎಂದು ಹೇಳಲು ಬರುವುದಿಲ್ಲ.

**ಆಧಾರಭೂತೌ ಯದ್ ದೇಶಕಾಲಾವಖಿಲವಸ್ತುನಃ ।**
**ತಾಭ್ಯಾಮವಧ್ಯಭಾವಸ್ತು ತೌ ದ್ವೌ ಸರ್ವೌ ಚ ನಃ ಪ್ರಭೋಃ ।**
**ಆಧಾರಭೂತಾವಿತ್ಯರ್ಥೇ ಫಲತ್ಯಾಧಾರರೂಪಿಣಃ ॥ ೨೦ ॥**

**ಗುಣಶ್ಚಾಧೇಯರೂಪಾಸ್ತೇ ತೈರವಧ್ಯುಜ್ಝಿತಿರ್ಹರೇಃ ।**
**ಸರ್ವಸ್ಯ ಗುಣರಾಶೇಶ್ಚ ಸ್ವಸ್ಮಿನ್ನಾಹಿತತಾಂ ನಯೇತ್ ॥ ೨೧ ॥**

**ಅರ್ಥ–** ಯತ್= ಯಾವಕಾರಣದಿಂದ, ದೇಶಕಾಲೌ= ದೇಶಕಾಲಗಳು, ಅಖಿಲವಸ್ತುನಃ= ಎಲ್ಲಾ ವಸ್ತುಗಳಿಗೂ, ಆಧಾರಭೂತೌ= ಆಧಾರವಾಗಿವೆಯೋ, ಆ ಕಾರಣದಿಂದ, ತಾಭ್ಯಾಂ= ಆ ದೇಶಕಾಲಗಳಿಂದ, ಅವಧ್ಯಭಾವಸ್ತು= ಅವಧಿ ಇಲ್ಲವೆಂದರೆ, ತೌ ಸರ್ವೌ ದ್ವೌ= ಆ ಎಲ್ಲ ದೇಶಕಾಲಗಳೂ, ನಃ ಪ್ರಭೋಃ= ನಮ್ಮ ಸ್ವಾಮಿಯಾದ ನಾರಾಯಣನಿಗೆ, ಆಧಾರಭೂತೌ= ಆಧಾರವಾಗಿವೆ, ಇತ್ಯರ್ಥೇ= ಎಂಬ ಅರ್ಥದಲ್ಲಿ, ಫಲತಿ= ಪರ್ಯವಸಾನವನ್ನು ಹೊಂದುತ್ತದೆ, ಆಧಾರರೂಪಿಣಃ= ಎಲ್ಲದಕ್ಕೂ ಆಧಾರನಾದ ನಾರಾಯಣನಿಗೆ, ಗುಣಾಶ್ಚ= ಸರ್ವಜ್ಞತ್ವಾದಿ ಗುಣಗಳಾದರೂ, ಆಧೇಯರೂಪಾಃ= ಆಧೇಯಗಳಾಗಿವೆ, ತೈಃ= ಅಂತಹ ಗುಣಗಳಿಂದ, ಅವಧ್ಯುಜ್ಝಿತಿಃ= ಅವಧಿರಾಹಿತ್ಯವು, ಹರೇಃ= ನಾರಾಯಣನಿಗೆ (ನಲ್ಲಿ), ಸರ್ವಗುಣರಾಶೇಃ= ಎಲ್ಲ ಗುಣರಾಶಿಗೆ, ಸ್ವಸ್ಮಿನ್= ತನ್ನಲ್ಲಿ, ಆಹಿತತಾಂ= ಆಧೇಯತ್ವವನ್ನು, ನಯೇತ್= ಉಂಟುಮಾಡಿಕೊಡುತ್ತದೆ.

**ಅನುವಾದ–** ದೇಶಕಾಲಗಳು ಎಲ್ಲ ವಸ್ತುಗಳಿಗೂ ಆಧಾರಭೂತವಾದುವು. ದೇಶಕಾಲಗಳಿಂದ ಅವಧಿ ಇಲ್ಲ ಎಂದು ಹೇಳಿದರೆ, ಆ ಎಲ್ಲ ದೇಶಕಾಲಗಳೂ ನಾರಾಯಣನಿಗೆ ಆಧಾರವಾಗಿವೆ ಎಂಬ ಅರ್ಥವು ದೊರೆಯುತ್ತದೆ. ಗುಣಗಳು ಆಧೇಯರೂಪವಾದುವು. ಅವು ಆಧಾರವಲ್ಲ. ಎಲ್ಲ ಗುಣಗಳಿಗೂ ಆಧಾರನಾದವನು ನಾರಾಯಣನೇ. ಆಧೇಯಭೂತವಾದ ಗುಣಗಳಿಂದ ಅವಧಿರಾಹಿತ್ಯವನ್ನು ಹೇಳಿದರೆ ಎಲ್ಲ ಗುಣರಾಶಿಯೂ ನಾರಾಯಣನಲ್ಲಿ ಆಹಿತವಾಗಿದೆ ಎಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪ್ರಾಯಪಾಠವಿರೋಧಂ ಪರಿಹರತಿ ॥ **ಆಧಾರೇತಿ** ॥ ಯದ್ಯಸ್ಮಾತ್ । ಅಖಿಲವಸ್ತುನಃ ಆಧಾರಭೂತಾವಿತಿ ಸಂಬಂಧಃ । ಅತ್ರೇದಮಿದಾನೀಂ ವರ್ತತ ಇತಿ ಸರ್ವತ್ರ ವ್ಯವಹಾರಾದ್ದೇಶಕಾಲೌ ಸರ್ವಸ್ಯಾಪ್ಯಾಧಾರಾವಿತಿ ಭಾವಃ । ತಾಭ್ಯಾಂ ದೇಶಕಾಲಾಭ್ಯಾಮ್ । ನೋಽಸ್ಮಾಕಂ ಪ್ರಭೋರ್ನಾರಾಯಣಸ್ಯೇತ್ಯರ್ಥಃ । ಅಸ್ಮಿನ್ನರ್ಥೇ । ಆಧಾರಭೂತೇ ದೇಶೇಕಾಲೇಚ ಹರೇರವಧ್ಯಭಾವಃ ಸಕಲದೇಶಕಾಲೇಷು ಆಹಿತತ್ವಮೇವ ಯೋಗ್ಯತಾವಶಾದಾನೀಯತೇ । ನತು ತದರ್ಥಂ ಪೃಥಕ್ಪ್ರಯತನೀಯಮಿತಿ ಭಾವಃ ।

**ಆಧಾರರೂಪಿಣೋ ಹರೇರ್ಗುಣಾಸ್ತ್ವಾಧೇಯರೂಪಾಃ । ತೈರ್ಗುಣೈರವಧ್ಯುಜ್ಞಿತಿಃ ಅವಧೇರಭಾವಃ । ಸ್ವಸ್ಮಿನ್ ಹರೌ । ಆಹಿತತಾಂ ಆಶ್ರಿತತ್ವಮ್ ॥ ೨೦-೨೧ ॥**

**ವಿವರಣೆ–** ದೇಶಕಾಲ ಮತ್ತು ಗುಣಗಳಲ್ಲಿ ಒಂದೇ ವಿಧವಾದ ಆಧಾರಾಧೇಯ ಭಾವರೂಪವಾದ ಸಂಬಂಧವನ್ನು 'ಹೇಳುತ್ತೇವೆ. ಆಗ ಸರ್ವದೇಶಕಾಲಗಳು ನಾರಾಯಣನಿಗೆ ಆಧಾರವೆಂದು ಹೇಳುವುದರಿಂದ ನಾರಾಯಣನು ದೇಶದಿಂದ ವ್ಯಾಪ್ತನೆಂದು, ಕಾಲದ ದೃಷ್ಟಿಯಿಂದ ನಿತ್ಯನೆಂದು ಸಿದ್ಧವಾಗುತ್ತದೆ. ಗುಣಗಳು ಆಧಾರವಲ್ಲ, ಅವು ಇನ್ನೊಂದು ವಸ್ತುವನ್ನು ಆಶ್ರಯಿಸಿಕೊಂಡಿರುವಂತಹವು. ಆದ್ದರಿಂದ ಸರ್ವಾಧಾರನಾದ ಹರಿಯನ್ನೇ ಅವು ಆಶ್ರಯಿಸಿಕೊಂಡಿರುತ್ತವೆ. ಅಂತಹ ಗುಣಗಳಿಂದ ಅವಧಿಯಿಲ್ಲವೆಂದು ಹೇಳಿದರೆ ನಾರಾಯಣನು ಸರ್ವಗುಣಾಶ್ರಯನೆಂದೇ ಸಿದ್ಧನಾಗುತ್ತಾನೆ.

**ಯದ್ ಧರ್ಮೀ ಸ್ವಯಮಾಧಾರೋ ಧರ್ಮಾಸ್ತ್ವಾಧೇಯರೂಪಿಣಃ ।**
**ಅತೋಂತಶಬ್ದಸ್ತ್ರಿಸ್ಥಾನ್ಯಾಮಪ್ಯವಧ್ಯರ್ಥಕೋ ಭವೇತ್ ॥ ೨೨ ॥**

**ಅರ್ಥ–** ಯತ್= ಯಾವ ಕಾರಣದಿಂದ, ಧರ್ಮೀ= ಧರ್ಮಿಯು, ಸ್ವಯಂ= ತಾನು, ಆಧಾರಃ= ಆಧಾರರೂಪವಾಗಿದೆಯೋ, ಧರ್ಮಾಸ್ತು= ಧರ್ಮಗಳಾದರೂ, ಆಧೇಯರೂಪಿಣಃ= ಆಧೇಯರೂಪಗಳಾಗಿವೆಯೋ, ಅತಃ= ಆ ಕಾರಣದಿಂದ, ಅಂತಶಬ್ದಃ= ಅನಂತಶಬ್ದ ಘಟಕವಾದ ಅಂತಶಬ್ದವು, ತ್ರಿಸ್ಥಾನ್ಯಾಮಪಿ= ದೇಶಕಾಲಗುಣಗಳೆಂಬ ಮೂರು ಸ್ಥಾನಗಳಲ್ಲಿಯೂ, ಅವಧ್ಯರ್ಥಕೋ ಭವೇತ್= ಅವಧಿ ಎಂಬ ಅರ್ಥವನ್ನೇ ಹೇಳುತ್ತದೆ.

**ಅನುವಾದ–** ಧರ್ಮಿಯು ಆಧಾರಭೂತವಾದುದು. ಧರ್ಮಗಳು ಧರ್ಮಿಯಲ್ಲಿ ಇರುವುದರಿಂದ ಆಧೇಯರೂಪವಾದುವು. ಆ ಕಾರಣದಿಂದ ಅಂತಶಬ್ದಕ್ಕೆ ಮೂರು ಕಡೆಗಳಲ್ಲಿಯೂ ಅವಧಿ ಎಂಬ ಒಂದೇ ಅರ್ಥ.

**ಭಾವವಿಲಾಸಿನೀ–** ತತ್ರ ಹೇತುಮಾಹ – **ಯದಿತಿ** ॥ ಯದ್ಯಸ್ಮಾದ್ಧರ್ಮೀ ಸ್ವಯಂ ಧರ್ಮಿಭೂತಪದಾರ್ಥೋ ಘಟಾದಿಃ। ಧರ್ಮಾಸ್ತದ್ಧರ್ಮಭೂತಾರೂಪರಸಾದ್ಯಾಃ। ತಸ್ಮಾದ್ಧರಿರಪಿ ಸ್ವಧರ್ಮಾಣಾಮಾಧಾರಃ । ತದ್ಧರ್ಮಾಸ್ತು ಸಾರ್ವಜ್ಞಪೂರ್ವಾ ಆಧೇಯಾ ಇತಿ ತೈರವಧ್ಯುಜ್ಞಿತಿಃ ಸರ್ವಸ್ಯ ಗುಣರಾಶೇಶ್ಚ ಸ್ವಸ್ಮಿನ್ಯೋಗ್ಯತಾವಶಾದೇವಾಹಿತತಾಂ ನಯೇತ್ । ನತು ತದರ್ಥಂ ಪೃಥಕ್ಪ್ರಯತನೀಯಮಿತಿ ಭಾವಃ । ಅಸ್ತ್ವೇವಂ ತತಃ ಕಿಮಿತ್ಯತ ಆಹ – **ಅತ ಇತಿ** ॥ ತ್ರಿಸ್ಥಾನ್ಯಾಂ ದೇಶಕಾಲಗುಣಾಖ್ಯಸ್ಥಾನತ್ರಯೇ ॥ ೨೨ ॥

**ವಿವರಣೆ–** ಘಟಾದಿಗಳು ಧರ್ಮಿಗಳು, ಅದರಲ್ಲಿರುವ ರೂಪರಸಾದಿಗಳು ಧರ್ಮಗಳು ಘಟಾದಿಗಳನ್ನು ಆಶ್ರಯಿಸಿಕೊಂಡಿರುತ್ತವೆ. ಅದರಂತೆ ಹರಿಯು

ಸರ್ವಧರ್ಮಗಳಿಗೆ ಆಧಾರನಾದವನು, ಸರ್ವಜ್ಞತ್ವಾದಿ ಧರ್ಮಗಳು ಅವನನ್ನು ಆಶ್ರಯಿಸಿಕೊಂಡಿರುತ್ತವೆ. ಆದ್ದರಿಂದ ಅವನು ಸರ್ವಗುಣಾಶ್ರಯ ಎಂದು ಸಿದ್ಧವಾಯಿತು. ಈಗ ನಾವು ಅಂತ ಎಂಬ ಶಬ್ದಕ್ಕೆ ಅವಧಿ ಎಂಬ ಒಂದೇ ಅರ್ಥವನ್ನು ಹೇಳಿ, ದೇಶದ ಅವಧಿಯೂ ಇಲ್ಲ, ಕಾಲದ ಅವಧಿಯೂ ಇಲ್ಲ, ಗುಣದ ಅವಧಿಯೂ ಇಲ್ಲ ಎಂಬ ಒಂದೇ ಅರ್ಥವನ್ನು ಮೂರು ಕಡೆಗಳಲ್ಲಿಯೂ ಹೇಳುವುದರಿಂದ ನಮಗೆ ಅರ್ಥಭೇದವಿಲ್ಲ.

**ನಾರ್ಥಭೇದಸ್ತತೋಽಸ್ಮಾಕಂ ಮತೇ ಸುಜನಸಮ್ಮತೇ ।**
**ವಸ್ತುಸ್ವಭಾವಾನುಗುಣ್ಯಾತ್ ಫಲಂ ಸ್ವಾತ್ಯಂಬುಕಾರ್ಯವತ್ ॥ ೨೩ ॥**

**ಅರ್ಥ–** ತತಃ= ಆ ಕಾರಣದಿಂದ, ಸುಜನಸಮ್ಮತೇ= ಸಜ್ಜನರಿಗೆ ಸಮ್ಮತವಾದ, ಅಸ್ಮಾಕಂ ಮತೇ= ನಮ್ಮ ಮತದಲ್ಲಿ, ಸ್ವಾತ್ಯಂಬುಕಾರ್ಯವತ್= ಸ್ವಾತಿ ಮಳೆಯ ನೀರಿನ ಕಾರ್ಯದಂತೆ, ವಸ್ತುಸ್ವಭಾವಾನುಗುಣ್ಯಾತ್= ವಸ್ತುಸ್ವಭಾವಕ್ಕೆ ಅನುಗುಣವಾಗಿ ಇರುವುದರಿಂದ, ಅರ್ಥಭೇದಃ= ಅರ್ಥಭೇದವು, ನ= ಇರುವುದಿಲ್ಲ.

**ಅನುವಾದ–** ಆದ್ದರಿಂದ, ಸಜ್ಜನರಿಗೆ ಸಮ್ಮತವಾದ ನಮ್ಮ ಮತದಲ್ಲಿ ಸ್ವಾತಿ ಮಳೆಯ ಒಂದೇ ವಿಧವಾದ ನೀರು ಆಯಾ ವಸ್ತುವಿನ ಸ್ವಭಾವಕ್ಕೆ ಅನುಗುಣವಾಗಿ ಬೇರೆ ಬೇರೆ ಕಾರ್ಯವನ್ನು ಮಾಡುವಂತೆ ನಮಗೆ ಅರ್ಥಭೇದವು ಇರುವುದಿಲ್ಲ.

**ಭಾವವಿಲಾಸಿನೀ–** ತತಃ ಸರ್ವತ್ರಾಪ್ಯೇಕಾರ್ಥತ್ವಾದರ್ಥಭೇದಃ ಸಕೃತ್ ಪ್ರಯುಕ್ತಶಬ್ದಸ್ಯ ನಾನಾರ್ಥತ್ವಂ । ಕಿಂತ್ವೇಕತ್ರ ಸಾಕ್ಷಾಚ್ಛ್ರುತಾಂತ ಶಬ್ದಸ್ಯೈವಭೇದಾರ್ಥಕತ್ವಂ ವದತಃ ಪರಸ್ಯೈವೇತಿ ಸೂಚಯಿತುಮಸ್ಮನ್ಮತ ಇತ್ಯುಕ್ತಮ್ । ಏತಾದೃಶದೋಷಂ ಪರಮತೇ ದೃಷ್ಟ್ವಾ ಸುಜನಾಸ್ತತ್ ಪರಿತ್ಯಜ್ಯಾಸ್ಮನ್ಮತಮೇವ ಸಂಗೃಹ್ಣಂತೀತಿ ಭಾವೇನೋಕ್ತಂ ಸುಜನಸಮ್ಮತ ಇತಿ । ವಸ್ತುಸ್ವಭಾವಾನುಗುಣ್ಯಾತ್ ತತ್ತದ್ವಸ್ತುಸ್ವಭಾವಾನುಸಾರಾತ್ । ಫಲಂ ದೇಶಕಾಲಯೋರ್ಭಗವತ ಆಹಿತತ್ವಂ ಸ್ವಗುಣಾನ್ ಪ್ರತಿತ್ವಾಧಾರತ್ವಮಿತಿ ಫಲಮ್ । ತತ್ರ ದೃಷ್ಟಾಂತಃ – **ಸ್ವಾತ್ಯಂಬು-ಕಾರ್ಯವದಿತಿ** ॥ ಯಥೈಕಮೇವಸ್ವಾತ್ಯಂಬು ಶುಕ್ತೌಪತಿತಂ ಮಣಿರ್ಭವತಿ ಪದ್ಮಪತ್ರೇಪತಿತಂ ಮಣಿವದ್ಬಿಂದೂಭವತಿ । ತಪ್ತಾಯಃ ಪಿಂಡಪತಿತಂ ನಷ್ಟಂ ಭವತಿ । ತಥಾ ಶಬ್ದಸ್ಯೈಕತ್ವೇಪಿ ತತ್ತತ್ಪದಾರ್ಥ ಸ್ವಭಾವಾದೇವಾತ್ರಾಪಿ ವೈಚಿತ್ರ್ಯಮಿತಿ ಭಾವಃ ॥ ೨೩ ॥

**ವಿವರಣೆ–** ಹಿಂದೆ ಹೇಳಿದ ಅರ್ಥವನ್ನೇ ಒಂದು ದೃಷ್ಟಾಂತದಿಂದ ಸಮರ್ಥನೆ ಮಾಡುತ್ತಾರೆ. ಸ್ವಾತಿ ಮಳೆಯ ನೀರು ಕಾದ ಕಬ್ಬಿಣದ ಮೇಲೂ, ಶುಕ್ತಿಯ ಹುಳುವಿನ ಮೇಲೆಯೂ ಮತ್ತು ಪದ್ಮಪತ್ರದ ಮೇಲೆಯೂ ಬೀಳುತ್ತದೆ. ನೀರು ಒಂದೇ ಆದರೂ ಆಯಾ ವಸ್ತುವಿನ ಸ್ವಭಾವವನ್ನು ಅನುಸರಿಸಿ, ಕಾದ ಕಬ್ಬಿಣದ ಮೇಲೆ ಬಿದ್ದ ನೀರು ಆವಿಯಾಗಿ ಹೋಗುತ್ತದೆ, ಶುಕ್ತಿ ಹುಳುವಿನ ಮೇಲೆ ಬಿದ್ದ ನೀರು ಅದನ್ನು ಮುತ್ತಾಗಿ

ಪರಿವರ್ತಿಸುತ್ತದೆ, ಪದ್ಮಪತ್ರದ ಮೇಲೆ ಬಿದ್ದ ನೀರು ಮುತ್ತಿನಂತೆ ಕಾಣುತ್ತದೆ. ಆದರಂತೆ ಅಂತಶಬ್ದವು ಅವಧಿಯೆಂಬ ಒಂದೇ ಅರ್ಥವನ್ನು ಹೇಳಿದರೂ ಆದರಿಂದ ದೇಶಕಾಲಗಳಲ್ಲಿ ಆಹಿತತ್ವವೂ, ಎಲ್ಲಾ ಗುಣಗಳಿಗೆ ಆಶ್ರಯತ್ವವೂ ನಾರಾಯಣನಿಗೆ ಸಿದ್ಧವಾಗುತ್ತದೆ. ಇದು ದೇಶ-ಕಾಲ ಮತ್ತು ಗುಣಗಳ ಸ್ವಭಾವವನ್ನು ಅನುಸರಿಸಿದೆಯೇ ಹೊರತು ಅವಧಿ ಎಂಬ ಅರ್ಥದಲ್ಲಿ ಭೇದವಿಲ್ಲ. ಆದ್ದರಿಂದ ಸುಜನಸಮ್ಮತವಾದ ಈ ಮತವನ್ನು ಅಂಗೀಕರಿಸಬೇಕು ಎಂದು ಅಭಿಪ್ರಾಯ.

**ಮಹದ್ಗುಣತ್ವಾದ್ ಯಮನಂತಮಾಹುರಿತಿ ಚ ಸ್ಫುಟಂ ।**
**ಯತೋ ಭಾಗವತೇ ಪ್ರೋಕ್ತಂ ತತೋಽಪ್ಯೇತದಸಂಗತಂ ॥ ೨೪ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಭಾಗವತೇ= ಭಾಗವತ ಗ್ರಂಥದಲ್ಲಿ, ಸ್ಫುಟಂ= ಸ್ಪಷ್ಟವಾಗಿ, ಯಂ= ಯಾವನನ್ನು, ಮಹದ್ಗುಣತ್ವಾತ್= ಸರ್ವಗುಣಪೂರ್ಣನಾದುದರಿಂದ, ಅನಂತಂ= ಅನಂತನೆಂದು, ಆಹುಃ= ಕರೆಯುತ್ತಾರೆಯೋ, ಇತಿ= ಎಂದು, ಪ್ರೋಕ್ತಂ= ಹೇಳಲ್ಪಟ್ಟಿದೆಯೋ, ತತೋಽಪಿ= ಆ ಕಾರಣದಿಂದಲೂ, ಏತತ್= ಸರ್ವವಸ್ತ್ವಾತ್ಮಕತ್ವ ರೂಪವಾದ ಅರ್ಥವು, ಅಸಂಗತಂ= ಅಸಂಗತವಾದುದು.

**ಅನುವಾದ–** ಯಾವ ಕಾರಣದಿಂದ ಭಾಗವತದಲ್ಲಿ ಸರ್ವಗುಣಪೂರ್ಣನಾದ ಕಾರಣ ಹರಿಯನ್ನು ಅನಂತನೆಂದು ಕರೆಯುತ್ತಾರೆ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆಯೋ, ಆ ಕಾರಣದಿಂದಲೂ ಅನಂತಶಬ್ದಕ್ಕೆ ಸರ್ವವಸ್ತ್ವಾತ್ಮಕತ್ವ ಎಂಬ ಅರ್ಥವು ಅಸಂಗತವಾದುದು.

**ಭಾವವಿಲಾಸಿನೀ–** ಪರಕೀಯಾರ್ಥೇ ದೋಷಾಂತರಂ ಚಾಹ – **ಮಹದ್ಗುಣತ್ವಾದಿತಿ** ॥ ಯತಃ ಯಸ್ಮಾತ್ । ತತೋಽಪಿ ಭಾಗವತೇ ಭಗವತೋ ಗುಣೈರಂತರಹಿತತ್ವೇನಾನಂತಪದವಾಚ್ಯತ್ವೋಕ್ತೇರಪಿ । ಏತತ್ ವಸ್ತುತೋಽನಂತತ್ವಮ್ । ಅಯಮಾಶಯಃ । ಅಂತತ್ರಯಶೂನ್ಯತ್ವಂ ಅನಂತತ್ವಮಿತ್ಯಾವಯೋರುಭಯೋರಪಿ ಸಮ್ಮತಮ್ । ದೇಶಕಾಲಯೋಶ್ಚ ಕಾಲಾನಂತ್ಯಂ ದೇಶಾನಂತ್ಯಮಿತಿ ದ್ವಿಪ್ರಕಾರತಾಪಿ ಸಂಪ್ರತಿಪನ್ನೈವ । ತೃತೀಯಪ್ರಕಾರಶ್ಚೋಕ್ತ ಭಾಗವತವಾಕ್ಯಾನುಸಾರೇಣ ಗುಣಾನಂತ್ಯಮೇವವಕ್ತುಮುಚಿತಂ । ನತು ಸ್ವಕಪೋಲಕಲ್ಪಿತಂ ವಸ್ತುತೋಽನಂತತ್ವಮಿತಿ । ಮಹಚ್ಛಬ್ದಸ್ಯಾಂತೇ ಆಕಾರೇಣ ವಿಕಾರಾಭಾವಸ್ತದರ್ಥಸ್ಯ ಮಹತ್ತ್ವಸ್ಯಾಪ್ಯಂತೇ ಸಾವಧಿಕತ್ವರೂಪವಿಕಾರಾಭಾವಜ್ಞಾಪನಾರ್ಥಂ ಅಗುಣೇತಿ ಪದಚ್ಛೇದಭ್ರಮನಿವಾರಣಾರ್ಥಂ ಚ । ಏತೇನೈತದಪಿ ಪರಾಸ್ತಮ್ । ಪರೋಕ್ತವಸ್ತುತೋಽನಂತತ್ವಸ್ಯ ವಿರುದ್ಧತ್ವೇಪಿ ಗುಣತೋಽನಂತತ್ವವತ್ ಸಕಲವಸ್ತ್ವಾಧಾರತಯಾ ಭಗವತಿ ವಸ್ತುತೋಽನಂತತ್ವಮೇವ ಕುತೋಽನೋಕ್ತಮಿತಿ । ಭಾಗವತೋಕ್ತಸ್ಯ ಗುಣಾನಂತ್ಯಸ್ಯಾವಶ್ಯಂ ಸಂಗ್ರಾಹ್ಯತ್ವಾತ್ । ಉಕ್ತವಿಧಯಾಸ್ಯ ಚ ಸಂಗ್ರಹೇ ಪ್ರಕಾರಚತುಷ್ಟಯತ್ವಾಪಾತೇನ ಸರ್ವಸಮ್ಮತತ್ರಿತ್ವಭಂಗಪ್ರಸಂಗಾತ್ ॥ ೨೪ ॥

**ವಿವರಣೆ–** ಅನಂತ ಶಬ್ದಕ್ಕೆ ಅಂತತ್ರಯರಹಿತ ಎಂಬ ಅರ್ಥವು ನಮಗೂ ಮತ್ತು ಪರವಾದಿಗಳಿಗೂ ಸಮ್ಮತವಾದುದು. ಅಂತತ್ರಯರಹಿತ ಎಂಬಲ್ಲಿ ದೇಶತಃ ಅಂತರಾಹಿತ್ಯ ಮತ್ತು ಕಾಲತಃ ಅಂತರಾಹಿತ್ಯ ಎಂಬ ಎರಡು ರಾಹಿತ್ಯಗಳು ಉಭಯವಾದಿಗಳಿಗೂ ಸಮ್ಮತವಾದುದು. ಇನ್ನು ಮೂರನೆಯ ಆನಂತ್ಯವನ್ನು ಯಾವ ರಾಹಿತ್ಯದಿಂದ ಹೇಳಬೇಕು ಎಂಬುದು ಪ್ರಶ್ನೆ. ಅದನ್ನು ಅನುಸರಿಸಿ ಗುಣಗಳಿಂದ ಆನಂತ್ಯ ಎಂದು ಹೇಳಬೇಕೇ ಹೊರತು ಸ್ವಕಪೋಲ ಕಲ್ಪಿತವಾಗಿ ವಸ್ತುತಃ ಆನಂತ್ಯ ಎಂದು ಹೇಳಬಾರದು. ಆದ್ದರಿಂದ ಅನಂತಶಬ್ದವು ಸರ್ವಗುಣಪೂರ್ಣತ್ವವನ್ನೇ ಸಮರ್ಥಿಸಿಕೊಡುತ್ತದೆ. ಮಹದ್ಗುಣತ್ವಾತ್ ಎಂಬ ಸಮಾಸದಲ್ಲಿ ವ್ಯಾಕರಣ ರೀತ್ಯಾ ಮಹತ್ ಎಂಬ ಶಬ್ದದಲ್ಲಿ ತಕಾರಕ್ಕೆ ವಿಕಾರ ಉಂಟಾಗಿ, ಮಹಾಗುಣತ್ವಾತ್ ಎಂದು ಆಗಬೇಕಾಗಿದ್ದಿತು. ಆದರೆ ಹಾಗೆ ಮಾಡದೆ ವೇದವ್ಯಾಸರು ಮಹದ್ಗುಣತ್ವಾತ್ ಎಂದೇ ಪ್ರಯೋಗಿಸಿದ್ದಾರೆ. ಅದರ ಅಭಿಪ್ರಾಯವೇನೆಂದರೆ ಗುಣಾನಂತ್ಯದಲ್ಲಿ ಸಾವಧಿಕತ್ವರೂಪವಾದ ಯಾವ ವಿಕಾರವೂ ಇಲ್ಲವೆಂದು. ಆದ್ದರಿಂದ ಬ್ರಹ್ಮನಲ್ಲಿ ನಿರವಧಿಕ ಸರ್ವಗುಣಪೂರ್ಣತ್ವವೇ ಸಿದ್ಧವಾಗುತ್ತದೆ. ಅದೂ ಅಲ್ಲದೆ, ಮಹಾಗುಣತ್ವಾತ್ ಎಂದು ಪ್ರಯೋಗಿಸಿದರೆ ಅದನ್ನು ಮಹಾ ಅಗುಣತ್ವಾತ್ ಎಂದೂ ಪದಚ್ಛೇದ ಮಾಡಿ ಅರ್ಥಮಾಡಿಕೊಳ್ಳುವ ಸಂಭವವಿದೆ. ಹಾಗೆ ಆಗಬಾರದೆಂದು ವೇದವ್ಯಾಸರು ವ್ಯಾಕರಣಶಾಸ್ತ್ರಕ್ಕಿಂತ ಪ್ರಮೇಯವು ಶ್ರೇಷ್ಠವಾದುದೆಂದು ತಿಳಿದು, ಪ್ರಮೇಯದ ವಿಷಯದಲ್ಲಿ ಸಂಶಯವು ಬರಬಾರದೆಂದು ಮಹದ್ಗುಣತ್ವಾತ್ ಎಂದೇ ಪ್ರಯೋಗಮಾಡಿದ್ದಾರೆ. ಇನ್ನು ವಸ್ತುತಃ ಅನಂತತ್ವವನ್ನು ಹೇಳಿದರೆ, ಮೂರು ರೀತಿ ಅನಂತತ್ವವನ್ನು ಬಿಟ್ಟು ನಾಲ್ಕನೇ ರೀತಿಯ ಅನಂತತ್ವವನ್ನು ಹೇಳಿದಂತಾಗುತ್ತದೆ, ಅದು ಯುಕ್ತವಲ್ಲ, ಆದ್ದರಿಂದ ಅದನ್ನು ಭಾಗವತದಲ್ಲಿ ಹೇಳಲೇ ಇಲ್ಲ. ಅಷ್ಟೇ ಅಲ್ಲದೆ, ಸತ್ಯಶಬ್ದವು ಮುಂದೆ ಹೇಳುವಂತೆ ಸರ್ವಪಾಲಕತ್ವ ಎಂದರೆ ಸರ್ವವಸ್ತು ಪಾಲಕತ್ವವನ್ನು ಹೇಳುತ್ತದೆ. ಆದ್ದರಿಂದ ಸರ್ವವಸ್ತುವಿನ ಸಂಬಂಧರೂಪವಾದ ವಸ್ತುತಃ ಅನಂತತ್ವವು ಸತ್ಯ ಶಬ್ದದಿಂದಲೇ ತಿಳಿದುಬರುವುದರಿಂದ, ಅದನ್ನು ಹೇಳಿದರೆ ಪುನರುಕ್ತವೂ ಆಗುತ್ತದೆ ಎಂಬ ಕಾರಣದಿಂದ ವಸ್ತುತಃ ಅನಂತತ್ವವನ್ನು ವೇದವ್ಯಾಸರು ಹೇಳಲಿಲ್ಲ.

**ಅರ್ಥದ್ವಯೇ ನ ಸಂದೇಹಸ್ತೃತೀಯೇಽರ್ಥೇ ಹಿ ಸಂಶಯಃ ।**
**ಅತೋ ವಿಶಿಷ್ಯ ತಂ ವ್ಯಾಸೋ ನಿರ್ಣಯಾಯಾನ್ವವರ್ಣಯತ್ ॥ ೨೫ ॥**

**ಅರ್ಥ–** ಅರ್ಥದ್ವಯೇ= ದೇಶತಃ ಆನಂತ್ಯ ಮತ್ತು ಕಾಲತಃ ಆನಂತ್ಯ ಎಂಬ ಎರಡು ಅರ್ಥದಲ್ಲಿ, ಸಂದೇಹಃ ನ= ಸಂಶಯವಿಲ್ಲ, ತೃತೀಯಾರ್ಥೇ= ಮೂರನೆಯ ಅರ್ಥದಲ್ಲಿ, ಸಂಶಯಃ ಹಿ= ಸಂಶಯವಿದೆಯಷ್ಟೇ, ಅತಃ= ಆದ್ದರಿಂದ, ನಿರ್ಣಯಾಯ= ಆ ಮೂರನೆಯ ಅರ್ಥವನ್ನು ನಿರ್ಣಯಿಸಲು, ವ್ಯಾಸಃ= ವ್ಯಾಸರು, ವಿಶಿಷ್ಯ= ವಿಶೇಷವಾಗಿ, ತಂ= ಆ ಮೂರನೆಯ ಅರ್ಥವನ್ನು, ಅನ್ವವರ್ಣಯತ್= ನಿರೂಪಿಸಿದರು.

**ಅನುವಾದ–** ದೇಶತಃ ಅನಂತ್ಯ ಮತ್ತು ಕಾಲತಃ ಅನಂತ್ಯ ಎಂಬ ಎರಡು ಅರ್ಥಗಳಲ್ಲಿ ಸಂಶಯವಿಲ್ಲ, ಮೂರನೆಯ ಅರ್ಥ ಯಾವುದು ಎಂಬುದೇ ಸಂಶಯಗ್ರಸ್ತವಾಗಿದೆ. ಆದ್ದರಿಂದ ವ್ಯಾಸರು ಆ ಮೂರನೆಯ ಅರ್ಥವನ್ನು ವಿವರಿಸಲು ವಿಶೇಷವಾಗಿ ಗುಣತಃ ಅನಂತ್ಯವನ್ನೇ ವರ್ಣಿಸಿದ್ದಾರೆ.

**ಭಾವವಿಲಾಸಿನೀ–** ಸರ್ವಸ್ರಷ್ಟೃತ್ವಸರ್ವಾಧಾರತ್ವಾಪರಪರ್ಯಾಯಸರ್ವಪಾಲಕತ್ವ ಸರ್ವಸಂಹರ್ತೃತ್ವಾಖ್ಯಾರ್ಥತ್ರಯಪ್ರತಿಪಾದಕಸತ್ಯಶಬ್ದೇನ ಗತಾರ್ಥತ್ವಾಘಾತಾಚ್ಚ । ತರ್ಹಿ ಭಾಗವತೇ ಭಗವತಾವ್ಯಾಸೇನ ಕಿಮರ್ಥಮೇಕಮೇವೋದಿತಮಿತ್ಯತ ಆಹ – **ಅರ್ಥೇತಿ** ॥ ಯತಃ ಅರ್ಥದ್ವಯೇ ದೇಶತೋಽನಂತತ್ವಕಾಲತೋಽನಂತತ್ವಾಖ್ಯಾರ್ಥದ್ವಯೇ । ತೃತೀಯೇ ಅರ್ಥೇ ಅನಂತಪದಾರ್ಥೇ । ಸಂಶಯಃ ಗುಣಾನಂತ್ಯಂ ವಾ ವಸ್ತುತ ಆನಂತ್ಯಂ ವೇತಿ ಸಂದೇಹಃ । ಅತಃ ವಾದಿವಿವಾದಸದ್ಭಾವಾತ್ । ತಂ ಗುಣಾನಂತ್ಯರೂಪಾರ್ಥಮ್ । ನಿರ್ಣಯಾಯ ಸ್ವಚರಣ-ಕಮಲಚಂಚರೀಕ- ಮಧ್ವಮುನಿನೋಕ್ತಾರ್ಥನಿರ್ಣಯಾಯ । ವಸ್ತುತಸ್ತು ವ್ಯಾಪ್ತತ್ವ-ನಿತ್ಯತ್ವಯೋರಪಿ ಗುಣತ್ವಾತ್ ಗುಣಾನಂತ್ಯಮೇವಾನಂತಶಬ್ದಾರ್ಥ ಇತಿ ಗುರುಶಿಷ್ಯಯೋ-ರ್ವ್ಯಾಸಮಧ್ವಯೋರ್ಹೃದ್ಗಮಿತಿ ಜ್ಞೇಯಮ್ ॥ ೨೫ ॥

**ವಿವರಣೆ–** ಅನಂತಶಬ್ದಕ್ಕೆ ಮೊದಲನೆಯ ಎರಡು ಅರ್ಥಗಳು, ದೇಶದಿಂದ ಅನಂತ್ಯ ಮತ್ತು ಕಾಲದಿಂದ ಅನಂತ್ಯ. ಇದರಲ್ಲಿ ಯಾರಿಗೂ ವಿವಾದವಿಲ್ಲ, ಆದ್ದರಿಂದ ಅದನ್ನು ಹೇಳಬೇಕಾದ ಅವಶ್ಯಕತೆ ಇಲ್ಲ. ಮೂರನೆಯ ಅನಂತ್ಯವು ಗುಣದಿಂದ ಅನಂತ್ಯವೋ ಅಥವಾ ವಸ್ತುವಿನಿಂದ ಅನಂತ್ಯವೋ ಎಂಬ ವಿವಾದಕ್ಕೆ ಸಿಲುಕಿದೆ. ಆದ್ದರಿಂದ ಅದನ್ನು ನಿರ್ಣಯ ಮಾಡಲು ಅದು ಗುಣತಃ ಅನಂತ್ಯವೇ ಎಂದು ವರ್ಣನೆ ಮಾಡಿ ವ್ಯಾಸರು ತೀರ್ಮಾನಿಸಿದ್ದಾರೆ. ವಸ್ತುತಃ ಗುಣತಃ ಅನಂತ್ಯವನ್ನು ಹೇಳಿದರೆ ದೇಶತಃ ಆನಂತ್ಯ ಮತ್ತು ಕಾಲತಃ ಆನಂತ್ಯವು ಅದರಲ್ಲಿಯೇ ಸೇರಿಕೊಳ್ಳುತ್ತವೆ. ದೇಶತಃ ಆನಂತ್ಯ ಎಂದರೆ ವ್ಯಾಪ್ತತ್ವ, ಕಾಲತಃ ಆನಂತ್ಯವೆಂದರೆ ನಿತ್ಯತ್ವ. ಎಲ್ಲ ಗುಣಗಳಲ್ಲಿ ನಿತ್ಯತ್ವ ಮತ್ತು ವ್ಯಾಪ್ತತ್ವ ಸೇರುವುದರಿಂದ, ಗುಣತಃ ಆನಂತ್ಯವನ್ನು ಹೇಳಿದರೆ ಮೂರು ರೀತಿಯ ಆನಂತ್ಯವನ್ನು ಒಂದೇ ಶಬ್ದದಿಂದ ಹೇಳಿದಂತಾಗುತ್ತದೆ. ಆದ್ದರಿಂದ ವ್ಯಾಸರು ಯಾವ ಆನಂತ್ಯವನ್ನೂ ಬಿಡದೆ ಪ್ರಾಮಾಣಿಕವಾದ ಮೂರು ಆನಂತ್ಯವನ್ನೂ ಮಹದ್ಗುಣತ್ವಾತ್ ಎಂಬ ಒಂದೇ ಶಬ್ದದಿಂದ ಹೇಳಿದ್ದಾರೆ ಎಂದು ಅಭಿಪ್ರಾಯ.

**ಸದ್ಭಾವಂ ಯಾಪಯೇದ್ ಯಸ್ಮಾತ್ ಸತ್ಯಸ್ತಸ್ಮಾತ್ ಕಿಲ ಪ್ರಭುಃ ।**
**ಭಾವಪ್ರಧಾನೋ ನಿರ್ದೇಶೋಽಸ್ಯ್ಯಂತರ್ನೀತೋ ಯತಶ್ಚ ಣಿಚ್ ॥ ೨೬ ॥**

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ಸದ್ಭಾವಂ= ಸತ್ತ್ವವನ್ನು ಯಾಪಯೇತ್= ಹೊಂದಿಸುತ್ತಾನೆಯೋ, ತಸ್ಮಾತ್= ಆ ಕಾರಣದಿಂದ, ಪ್ರಭುಃ= ನಮ್ಮ ಸ್ವಾಮಿಯಾದ

ನಾರಾಯಣನು, ಸತ್ಯಃ ಕಿಲ= ಸತ್ಯಶಬ್ದವಾಚ್ಯನಷ್ಟೇ. ಭಾವಪ್ರಧಾನಃ= ಭಾವಪ್ರಧಾನವಾದ, ನಿರ್ದೇಶಃ= ವಾಕ್ಯಪ್ರಯೋಗವು, ಅಸ್ತಿ= ಇದೆ, ಯತಃ= ಯಾವ ಕಾರಣದಿಂದ, ಅಂತರ್ಣೀತಃ= ಅಂತರ್ಣೀತವಾದ, ಣಿಚ್ ಚ= ಣಿಚ್ ಪ್ರಯೋಗವು ಇದೆಯೋ (ಆ ಕಾರಣದಿಂದ) ಇದೇ ಅರ್ಥವು ಸಿದ್ಧವಾಗುತ್ತದೆ.

**ಅನುವಾದ– ನಮ್ಮ ಪ್ರಭುವಾದ ನಾರಾಯಣನು ಜಗತ್ತಿಗೆ ಸದ್ಭಾವವನ್ನು ಉಂಟು ಮಾಡುವುದರಿಂದ ಸತ್ಯಶಬ್ದವಾಚ್ಯನಾಗುತ್ತಾನೆ. ಯಾವ ಕಾರಣದಿಂದ ಶಾಸ್ತ್ರಗಳಲ್ಲಿ ಭಾವಪ್ರಧಾನ ನಿರ್ದೇಶವೂ ಮತ್ತು ಅಂತರ್ಣೀತ ಣಿಚ್ ಪ್ರಯೋಗವೂ ಇದೆಯೋ, ಆ ಕಾರಣದಿಂದ ಈ ಅರ್ಥವು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ಅಧುನಾ ಸತ್ಯಂ ಜ್ಞಾನಮನಂತಂ ಬ್ರಹ್ಮೇತಿ ಮಂತ್ರವರ್ಣೋಕ್ತಲಕ್ಷಣತ್ರಯ ವ್ಯಾಖ್ಯಾನರೂಪೋತ್ತರಗ್ರಂಥಾರ್ಥಪರ್ಯಾಲೋಚನಯಾಪ್ಯಸ್ಮದುಕ್ತ ಗುಣಾನಂತ್ಯ-ಮೇವಾನಂತಶಬ್ದಾರ್ಥೋ ನ ಪರೋಕ್ತ ಇತಿ ವಕ್ತುಂ ಲಕ್ಷಣಾನಿ ವಿವೃಣ್ವನ್ನುತ್ತರಪ್ರಬಂಧಾರ್ಥೇನ ಸಂಗಮಯತಿ – **ಸದ್ಭಾವಮಿತ್ಯಾದಿನಾ** ॥ ಸತೋಭಾವಃ ಸದ್ಭಾವಃ ಸತ್ತ್ವಮ್ ಸೃಷ್ಟಿರಿತ್ಯರ್ಥಃ। ಯಾಪಯೇತ್ಸರ್ವಸ್ಯ ಜಗತಃ ಪ್ರಾಪಯೇತ್ । ತಸ್ಮಾತ್ ಜಗತ್ಸೃಷ್ಟಿಪ್ರಾಪಕತ್ವಾತ್ । ಸತ್ಯಃ ಸತ್ಯಶಬ್ದವಾಚ್ಯಃ । ನನು ಕಥಮನೇನ ಪದೇನಾಯಮರ್ಥೋಲಭ್ಯತ ಇತ್ಯತಃ ಸತ್ಯಶಬ್ದಮರ್ಯಾದಯೈವ ತಂ ದರ್ಶಯತಿ – **ಭಾವೇತಿ** ॥ ಯತಃ ಯಸ್ಮಾತ್ । ವೈಯಾಕರಣಮತೇ ಭಾವಪ್ರಧಾನೋ ನಿರ್ದೇಶೋಪ್ಯಸ್ತಿ । ಭವಿತೃವಾಚಿತಯಾ ಪ್ರಯುಕ್ತೋಪಿ ಯಃ ಶಬ್ದಃ ತನ್ನಿಷ್ಠಂ ಭಾವಂ ಪ್ರಧಾನೀಕೃತ್ಯ ವರ್ತತೇ ಸ ಭಾವಪ್ರಧಾನಃ । ಯಥಾ ದ್ವ್ಯೇಕಯೋ-ರ್ದ್ವಿವಚನೈಕವಚನೇ ಇತಿ ಸೂತ್ರೇ ದ್ವ್ಯೇಕಶಬ್ದೌದ್ವಿತ್ವೈಕತ್ವಾರ್ಥೌ । ಯತಶ್ಚಾಂತರ್ಣೀತೋಣಿಚ್ಚ ಪ್ರಯೋಗೇಷು ವರ್ತತೇ । ಸಾಕ್ಷಾತ್ ಕರ್ತೃವಾಚಿನಾ ಪದೇನ ಕಾರಯಿತು-ರ್ಗ್ರಹಣೇಽಂತರ್ಣೀತೋಣಿಜಿತ್ಯುಚ್ಯತೇ । ಯಥಾ ಮಾಮಯಂ ಪ್ರಚಲಿಷ್ಯತೀತ್ಯಾದೌ । ಅತ್ರ ಚಲಿಷ್ಯತೀತ್ಯಸ್ಯ ಚಾಲಯಿಷ್ಯತೀತ್ಯರ್ಥಸ್ಯ ಸರ್ವೈರಂಗೀಕಾರಾತ್ । ತತಃ ಸದ್ಭಾವಂ ಯಾಪಯೇದ್ಯಸ್ಮಾದಿತಿ ಪೂರ್ವೇಣಾನ್ವಯಃ ॥ ೨೬ ॥

**ವಿವರಣೆ–** ಇನ್ನು ತೈತ್ತರೀಯ ಉಪನಿಷತ್ತಿನ ಉತ್ತರಗ್ರಂಥವು ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ಮಂತ್ರದಲ್ಲಿ ಹೇಳಿದ ಮೂರು ಲಕ್ಷಣಗಳ ವ್ಯಾಖ್ಯಾನರೂಪವಾಗಿದೆ ಎಂಬುದರ ಪರ್ಯಾಲೋಚನೆಯಿಂದಲೂ ನಾವು ಹೇಳಿದ ಗುಣಾನಂತ್ಯವೇ ಅನಂತಶಬ್ದಾರ್ಥವೇ ಹೊರತು ಪರೋಕ್ತವಾದ ವಸ್ತುತಃ ಆನಂತ್ಯ ಅನಂತಶಬ್ದಾರ್ಥವಲ್ಲ ಎಂದು ತಿಳಿಸಲು ಸತ್ಯಜ್ಞಾನಾದಿ ಮಂತ್ರಗಳಲ್ಲಿ ಹೇಳಿದ ಲಕ್ಷಣಗಳನ್ನು ವಿವರಿಸುತ್ತಾ ಮಂತ್ರವರ್ಣಕ್ಕೂ ಮತ್ತು ಉತ್ತರ ಗ್ರಂಥಕ್ಕೂ ಸಂಬಂಧವನ್ನು ನಿರೂಪಿಸುತ್ತಾರೆ. ಸದ್ಭಾವಃ ಎಂದರೆ ಸತಃ ಭಾವಃ, ಎಂದರೆ ಸತ್ವ, ಎಂದರೆ ಸೃಷ್ಟಿ ಎಂದು ಅರ್ಥ. ಸೃಷ್ಟಿಯನ್ನು ಯಾಪಯೇತ್ ಉಂಟುಮಾಡುತ್ತಾನೆ ಎಂಬ ಕಾರಣದಿಂದ ನಾರಾಯಣನು

ಸತ್ಯಶಬ್ದವಾಚ್ಯನಾಗುತ್ತಾನೆ. ಇಲ್ಲಿ ಸತ್ ಎಂಬ ಶಬ್ದಕ್ಕೆ ಸತ್ವ ಎಂದು ಅರ್ಥ ಮಾಡಿದೆವು. ಸತ್ ಎಂಬ ಶಬ್ದವು ಭವಿತೃಪ್ರಧಾನವಾದ ಶಬ್ದ, ಸತ್ವ ಎಂಬುದು ಒಂದು ಭಾವ. ನಾವು ಭವಿತೃಪ್ರಧಾನವಾದ ಶಬ್ದಕ್ಕೆ ಭಾವಪರವಾಗಿ ಅರ್ಥವನ್ನು ಮಾಡಿದ್ದೇವೆ. ಇದು ಶಾಸ್ತ್ರಕಾರರಿಗೆ ಸಮ್ಮತವಾಗಿದೆ. ಉದಾಹರಣೆಗೆ ದ್ವ್ಯೇಕಯೋಃ ದ್ವಿವಚನೈಕವಚನೇ ಎಂಬ ವ್ಯಾಕರಣ ಸೂತ್ರವಿದೆ. ಅಲ್ಲಿ ಭವಿತೃವಾಚಕವಾದ ದ್ವಿ ಮತ್ತು ಏಕ ಶಬ್ದಗಳನ್ನು ದ್ವಿತ್ವ ಮತ್ತು ಏಕತ್ವರೂಪವಾದ ಭಾವಪರವಾಗಿ ಅರ್ಥಮಾಡಿದ್ದಾರೆ. ಹಾಗೆಯೇ ಸತ್ಯ ಎಂಬಲ್ಲಿರುವ ಯ ಎಂಬ ಶಬ್ದವು ಯಾಪ್ರಾಪಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ, ಹೊಂದುತ್ತದೆ ಎಂಬ ಅರ್ಥ. ಆದರೆ ನಾವು ಇಲ್ಲಿ ಯಾಪಯತಿ ಹೊಂದಿಸುತ್ತಾನೆ ಎಂಬ ಅರ್ಥವನ್ನು ಮಾಡಿದ್ದೇವೆ. ಇದು ಪ್ರೇರಣಾರ್ಥಕವಾದ ಣಿಚ್‌ಪ್ರತ್ಯಯಾಂತ ಧಾತುವಿನ ಅರ್ಥ. ಇಲ್ಲಿ ಯದ್ಯಪಿ ಣಿಚ್ ಪ್ರತ್ಯಯವು ಬಂದು, ಅಯಾದೇಶವು ಬಂದು, ಪುಗಾಗಮವು ಬಂದು ಯಾಪಯತಿ ಎಂದು ಆಗಬೇಕಾಗಿತ್ತು. ಆದರೆ ಣಿಚ್ ಪ್ರತ್ಯಯಕ್ಕೆ ಲೋಪವಾಗುವುದು ಶಾಸ್ತ್ರದಲ್ಲಿ ಕಂಡುಬಂದಿದೆ. ಆದ್ದರಿಂದ ಇಲ್ಲಿ ಣಿಚ್ ಗೆ ಶ್ರವಣವಿರುವುದಿಲ್ಲ. ಉದಾಹರಣೆಗೆ ಮಾಮಯಂ ಪ್ರಚಲಿಷ್ಯತಿ ಎಂಬ ಮಹಾಭಾರತ ವಾಕ್ಯವಿದೆ. ಇಲ್ಲಿ ಪ್ರಚಾಲಯಿಷ್ಯತಿ ಎಂದು ಅರ್ಥ. ಆದ್ದರಿಂದ ಣಿಚ್ ಅರ್ಥವು ಇದ್ದರೂ, ಣಿಚ್ ಕಾಣಿಸದಿದ್ದರೆ ಅದನ್ನು ಅಂತರ್ಣೀತ ಣಿಚ್ ಎಂದು ಕರೆಯುತ್ತೇವೆ. ಇಲ್ಲಿ ಯಶಬ್ದವು ಅಂತರ್ಣೀತಣಿಜಂತವಾದ ಯಾ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಉಂಟುಮಾಡುತ್ತಾನೆ ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದ ಸತ್ಯಶಬ್ದವು ಜಗತ್ಸೃಷ್ಟಿ ಕರ್ತನೆಂದು ಹೇಳುತ್ತದೆ.

ಸತ್ತ್ವಂ ಸೃಷ್ಟಿಃ ಸಂಹೃತಿಶ್ಚ ಜೀವನಂ ಚ ವಿದಾಂ ಮತೇ ।
ಕಾರ್ಯಾತ್ಮನಾ ವಿಶರಣಂ ಕಾರಣಸ್ಯ ಜನಿರ್ಮತಾ ॥ ೨೭ ॥

**ಅರ್ಥ**– ಸತ್ತ್ವಂ= ಸತ್ತ್ವವು, ವಿದಾಂ ಮತೇ= ಜ್ಞಾನಿಗಳ ಅಭಿಪ್ರಾಯದಲ್ಲಿ, ಸೃಷ್ಟಿಃ= ಸೃಷ್ಟಿ ರೂಪವಾದುದು, ಸಂಹೃತಿಶ್ಚ= ಮತ್ತು ಸಂಹಾರರೂಪವಾದುದು, ಜೀವನಂ ಚ= ಮತ್ತು ಜೀವನ ರೂಪವಾದುದು, ಕಾರ್ಯಾತ್ಮನಾ= ಕಾರ್ಯರೂಪವಾಗಿ, ವಿಶರಣಂ= ನಾಶವನ್ನು (ಪರಿಣಾಮವನ್ನು) ಹೊಂದುವುದೇ, ಕಾರಣಸ್ಯ= ಕಾರಣಕ್ಕೆ, ಜನಿಃ= ಉತ್ಪತ್ತಿ ಎಂದು, ಮತಾ= ಹೇಳಲ್ಪಡುವುದಷ್ಟೇ.

**ಅನುವಾದ**– ಜ್ಞಾನಿಗಳ ಅಭಿಪ್ರಾಯದಲ್ಲಿ ಸತ್ವ ಶಬ್ದಕ್ಕೆ ಸೃಷ್ಟಿ ಎಂದೂ, ಸಂಹಾರ ಎಂದೂ, ಜೀವನವೆಂದೂ ಅರ್ಥ. ಕಾರಣವು ಕಾರ್ಯರೂಪದಿಂದ ಪರಿಣಾಮವನ್ನು ನಾಶವನ್ನು ಹೊಂದುವುದೇ ಸೃಷ್ಟಿಯೆಂದು ಹೇಳುತ್ತಾರಷ್ಟೇ?

**ವಿವರಣೆ**– ಸತ್ವ ಎಂದರೆ ಇರುವಿಕೆ ಎಂದು ಅರ್ಥ. ಆದ್ದರಿಂದ ಸತ್ತ್ವ ಎಂದರೆ ವಿದ್ಯಮಾನತ್ವ ಎಂದೇ ಹೇಳಬೇಕು. ಸೃಷ್ಟಿ ಎಂಬ ಅರ್ಥ ಹೇಗೆ ಬರುತ್ತದೆ ಎಂಬ ಪ್ರಶ್ನೆಗೆ

ಉತ್ತರವನ್ನು ಇಲ್ಲಿ ಹೇಳುತ್ತಾರೆ. ಸದ್ಲೃವಿಶರಣಗತ್ಯವಸಾದನೇಷು ಎಂಬ ಧಾತುಪಾಠವಿದೆ. ಅದರಂತೆ ಈ ಸದ್ ಧಾತುವಿಗೆ ವಿಶರಣ, ಗತಿ, ಅವಸಾದನ ಎಂಬ ಮೂರು ಅರ್ಥವಿದೆ. ವಿಶರಣ ಎಂದರೆ ಪೂರ್ವ ರೂಪದ ನಾಶವನ್ನು ಹೊಂದಿ, ರೂಪಾಂತರಾತ್ಮನಾ ಪರಿಣಾಮವನ್ನು ಹೊಂದುವುದು ಎಂದು ಅರ್ಥ. ಕಾರಣವು ತನ್ನ ಮೊದಲ ರೂಪವನ್ನು ತ್ಯಜಿಸಿ ಕಾರ್ಯದ ರೂಪದಲ್ಲಿ ಪರಿಣಾಮವನ್ನು ಹೊಂದುವುದೇ ಸೃಷ್ಟಿಯಷ್ಟೇ. ಆದ್ದರಿಂದ ಸದ್ ಧಾತುವಿನ ಮೇಲೆ ಭಾವಾರ್ಥದ ಪ್ರತ್ಯಯವು ಬಂದರೆ, ಧಾತ್ವರ್ಥವಾದ ಸೃಷ್ಟಿಯೇ ದೊರೆಯುತ್ತದೆ. ಅದರಂತೆ ಅವಸಾದನ ಎಂಬ ಅರ್ಥವೂ ಇದೆ. ಅವಸಾದನ ಎಂದರೆ ನಾಶ. ಸತ್ವಂ ನಾಶಂ ಯಾಪಯತಿ, ಪ್ರಾಪಯತಿ. ಸತ್ತ್ವ ಎಂದರೆ ನಾಶವನ್ನು, ಯಾಪಯತಿ ಎಂದರೆ ಉಂಟುಮಾಡುತ್ತಾನೆ ಎಂಬ ಕಾರಣದಿಂದ ನಾರಾಯಣನು ಸತ್ಯಶಬ್ದವಾಚ್ಯನಾಗುತ್ತಾನೆ. ಹಾಗೆಯೇ, ಸತ್ತ್ವ ಎಂದರೆ ವಿದ್ಯಮಾನತ್ವ ಎಂದರೆ ಜೀವನ ಎಂದು ಅರ್ಥ. ಸತ್ತ್ವಂ ಜೀವನವನ್ನು, ಯಾಪಯತಿ ಉಂಟುಮಾಡುತ್ತಾನೆ ಎಂದರೆ ಪಾಲನೆಯನ್ನು ಮಾಡುತ್ತಾನೆ ಎಂಬ ಅರ್ಥದಿಂದಲೂ ನಾರಾಯಣನು ಸತ್ಯಶಬ್ದವಾಚ್ಯನಾಗುತ್ತಾನೆ. ಆದ್ದರಿಂದ ಸತ್ಯಶಬ್ದವು ನಾರಾಯಣನ ಸೃಷ್ಟಿಕರ್ತೃತ್ವವನ್ನು, ಸಂಹಾರಕರ್ತೃತ್ವವನ್ನು ಮತ್ತು ಪಾಲನಕರ್ತೃತ್ವವನ್ನು ತಿಳಿಸುತ್ತದೆ ಎಂದು ಅಭಿಪ್ರಾಯ.

**ಸದ್ಲೃಧಾತೋರ್ವಿಶರಣಂ ಚಾರ್ಥ ಇತ್ಯಪಿ ಸಂಮತಂ ।**
**ಯತಃ ಪ್ರಾಗಸತಃ ಸತ್ವಮುತ್ಪತ್ತಿರಿತಿ ಚೋಚ್ಯತೇ ॥ ೨೮ ॥**

**ಅರ್ಥ–** ಸದ್ಲೃಧಾತೋಃ= ಸದ್ ಧಾತುವಿಗೆ, ವಿಶರಣಂ= ವಿಶರಣವೂ ಸಹ, ಅರ್ಥ ಇತ್ಯಪಿ= ಅರ್ಥವೆಂದು, ಸಂಮತಂ= ಸಮ್ಮತವಾಗಿದೆ, ಯತಃ= ಯಾವ ಕಾರಣದಿಂದ, ಪ್ರಾಗಸತಃ= ಮೊದಲು ಇಲ್ಲದೇ ಇರುವುದಕ್ಕೆ, ಸತ್ವಂ= ಅನಂತರ ಉಂಟಾಗುವ ವಿದ್ಯಮಾನತ್ವವು, ಉತ್ಪತ್ತಿರಿತಿ ಚ= ಉತ್ಪತ್ತಿ ಎಂದು, ಉಚ್ಯತೇ= ಹೇಳಲ್ಪಡುತ್ತದೆಯೋ (ಆ ಕಾರಣದಿಂದ ಸತ್ಯಶಬ್ದವು ಸೃಷ್ಟಿಕರ್ತೃತ್ವವನ್ನು ಹೇಳುತ್ತದೆ).

**ಅನುವಾದ–** ಸದ್ ಧಾತುವಿನ ಮೂರು ಅರ್ಥಗಳಲ್ಲಿ ವಿಶರಣವು ಎಂದು ಅರ್ಥ ಎಂದು ಎಲ್ಲರಿಗೂ ಸಮ್ಮತವಾಗಿದೆ. ಸತ್ತ್ವ ಎಂದರೆ ಪ್ರಾಗಸತಃ ಸತ್ತ್ವ ಸಂಬಂಧಃ, ಮೊದಲು ಇಲ್ಲದಿರುವುದಕ್ಕೆ ಸತ್ತ್ವದ ಸಂಬಂಧವಾಗುವಿಕೆ ಎಂಬ ಅರ್ಥ ವಿರುವುದರಿಂದ, ಉತ್ಪತ್ತಿಯು ಸತ್ತ್ವ ಶಬ್ದದಿಂದ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ನನ್ವೇವಮಪಿ ಸತ್ತ್ವಂ ವಿದ್ಯಮಾನತ್ವಮೇವ ಸ್ಯಾತ್ । ಸೃಷ್ಟಿಃ ಕಥಮಿತ್ಯತ-ಸ್ತದಾಗಮನ ಪ್ರಕಾರಂ ವಿವೇಚಯಿತುಮರ್ಥಾಂತರಮಪಿ ಪ್ರತಿಜಾನೀತೇ – **ಸತ್ತ್ವಮಿತಿ** ॥ ವಿದಾಂಜ್ಞಾನಿನಾಮ್ । (ಚಿತ್ ಸಂಬಂಧ) ಪ್ರಕಾರಮೇವ ದರ್ಶಯತಿ – **ಕಾರ್ಯಾತ್ಮನೇತಿ** ॥ ಕಾರಣಸ್ಯ ಮೃದಾದೇಃ ಕಾರ್ಯಾತ್ಮನಾ ಘಟಾದ್ಯಾತ್ಮನಾ ಯದ್ವಿಶರಣಂ ಪೃಥುಬುಧ್ನೋದರೀ-

ಭಾವಾದಿಃ । ಸ್ವೈವಜನಿರ್ಮತೇತಿ ಸಂಬಂಧಃ । ಸದ್‌ಲೃಧಾತೋಃ ಸದ್‌ಲ್ ಇತಿಧಾತೋಃ ಸದ್‌ಲೃವಿಶರಣಗತ್ಯವಸಾದನೇಷ್ವಿತಿಧಾತುವ್ಯಾಖ್ಯಾನಾದಿತಿ ಭಾವಃ । ಪ್ರಕಾರಾಂತರೇಣಾಪಿ ಸತ್ತ್ವಶಬ್ದಸ್ಯ ಸೃಷ್ಟಿವಾಚಕತಾಂ ದರ್ಶಯತಿ – ಯತ ಇತಿ ॥ ಉಚ್ಯತೇ ತಾರ್ಕಿಕೈಃ ॥ ಪ್ರಾಗಸತ ಇತಿ ವಿಶೇಷಣಯೋಜನೇಽಪಿ ಸತ್ತಾಸಂಬಂಧಸ್ಯೈವ ಜನಿತ್ವಕಥನಾತ್ ಸತ್ತ್ವಮೇವಜನಿರಿತಿ ಭಾವಃ ॥ ೨೭-೨೮ ॥

**ವಿವರಣೆ–** ವಿಶರಣ ಎಂಬ ಅರ್ಥದಿಂದ ಸತ್ಯಶಬ್ದವನ್ನು ಹಿಂದಿನ ಶ್ಲೋಕದಲ್ಲಿ ನಾರಾಯಣನಲ್ಲಿ ಸಮನ್ವಯ ಮಾಡಿದ್ದಾಯಿತು. ಇನ್ನೊಂದು ದೃಷ್ಟಿಯಿಂದಲೂ ನಾರಾಯಣನು ಸತ್ಯಶಬ್ದವಾಚ್ಯನಾಗುತ್ತಾನೆಂದು ಇಲ್ಲಿ ನಿರೂಪಿಸುತ್ತಾರೆ. ಸತ್ತ್ವ ಎಂದರೆ ಮೊದಲು ಇಲ್ಲದಿರುವುದಕ್ಕೆ ಅನಂತರ ಬರುವ ವಿದ್ಯಮಾನತ್ವ ಎಂದು ಅರ್ಥ. ಅದನ್ನು ಯಾಪಯತಿ- ಉಂಟುಮಾಡುತ್ತಾನಾದ ಕಾರಣ, ಎಂದರೆ ಉತ್ಪತ್ತಿ ಕರ್ತೃನಾದ ಕಾರಣ ನಾರಾಯಣನು ಸತ್ಯಶಬ್ದವಾಚ್ಯನಾಗುತ್ತಾನೆ ಎಂಬ ಅರ್ಥವಿವರಣೆಯಿಂದ ಸತ್ಯಶಬ್ದದಿಂದ ನಾರಾಯಣನ ಸೃಷ್ಟಿಕರ್ತೃತ್ವವು ಸಿದ್ಧವಾಗುತ್ತದೆ.

ಅವಸಾದನಮಪ್ಯುಕ್ತಂ ತದ್ಧಾತ್ವರ್ಥತಯಾ ಯತಃ ।
ತತಃ ಸತ್ತ್ವಂ ಸಂಹೃತಿಶ್ಚ ಭವೇಚ್ಛಬ್ದವಿದಾಂ ಮತೇ ॥ ೨೯ ॥

**ಅರ್ಥ–** ಅವಸಾದನಮಪಿ= ಸಂಹಾರವು ಕೂಡ, ಯತಃ= ಯಾವ ಕಾರಣದಿಂದ, ತದ್ಧಾತ್ವರ್ಥತಯಾ= ಆ ಧಾತುವಿನ ಅರ್ಥವಾಗಿ, ಉಕ್ತಂ= ಹೇಳಲ್ಪಟ್ಟಿದೆಯೋ, ತತಃ= ಆ ಕಾರಣದಿಂದ, ಸತ್ತ್ವಂ= ಸತ್ತ್ವವೆಂದರೆ, ಶಬ್ದವಿದಾಂ ಮತೇ= ಶಬ್ದವನ್ನು ತಿಳಿದವರ ಅಭಿಪ್ರಾಯದಲ್ಲಿ, ಸಂಹೃತಿಶ್ಚ ಭವೇತ್= ಸಂಹಾರವೂ ಆಗುತ್ತದೆ.

**ಅನುವಾದ–** ಸದ್ ಧಾತುವಿನ ಮೂರು ಅರ್ಥಗಳಲ್ಲಿ ಅವಸಾದನವು ಒಂದು ಅರ್ಥವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಶಬ್ದವನ್ನು ತಿಳಿದವರ ಮತದಲ್ಲಿ ಸತ್ತ್ವಶಬ್ದಕ್ಕೆ ಸಂಹಾರವೆಂದೂ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ತದ್ಧಾತ್ವರ್ಥತಯಾ ಸದ್‌ಲೃಧಾತ್ವರ್ಥತಯಾ । ತತಃ ಅವಸಾದನಾಪರಪರ್ಯಾಯಸಂಹಾರಸ್ಯಾಪಿ ಧಾತ್ವರ್ಥತ್ವಾತ್ ॥ ೨೯ ॥

ವಿದ್ಯಮಾನತ್ವಮಪ್ಯಾಹುಃ ಸತ್ತ್ವಂ ಜೀವನಮೇವ ತತ್ ।
ಇದಂ ಚಾದ್ಯೈಃ ಪ್ರಕರಣೈಸ್ತ್ರಿಭಿರ್ವಿವ್ರಿಯತೇ ಕಿಲ ॥ ೩೦ ॥

**ಅರ್ಥ–** ವಿದ್ಯಮಾನತ್ವಂ ಅಪಿ= ವಿದ್ಯಮಾನತ್ವವನ್ನು ಕೂಡ, ಸತ್ತ್ವಂ= ಸತ್ತ್ವವೆಂದು, ಆಹುಃ= ಹೇಳುತ್ತಾರೆ, ತತ್= ವಿದ್ಯಮಾನತ್ವವೆಂದರೆ, ಜೀವನಮೇವ= ಜೀವನವೇ, ಇದಂ

ಚ= ಈ ಮೂರು ಅರ್ಥಗಳು, ಆದ್ಯೈಃ= ಮೊದಲಿನ, ತ್ರಿಭಿಃ ಪ್ರಕರಣೈಃ= ಮೂರು ಪ್ರಕರಣಗಳಿಂದ, ವಿವ್ರಿಯತೇ ಕಿಲ= ವಿವರಿಸಲ್ಪಡುವುದಷ್ಟೇ.

**ಅನುವಾದ–** ವಿದ್ಯಮಾನತ್ವವನ್ನೂ ಸತ್ಯಶಬ್ದಾರ್ಥವೆಂದು ಹೇಳುತ್ತಾರೆ. ವಿದ್ಯಮಾನತ್ವವೆಂದರೆ ಜೀವನವೇ. ಆದ್ದರಿಂದ ಈ ಸೃಷ್ಟಿಕರ್ತೃತ್ವ, ಸಂಹಾರಕರ್ತೃತ್ವ ಪಾಲನಕರ್ತೃತ್ವ ಈ ಮೂರು ಅರ್ಥಗಳು ಮೊದಲಿನ ಮೂರು ಪ್ರಕರಣದಿಂದ ವಿವರಿಸಲ್ಪಡುತ್ತವೆಯಷ್ಟೇ.

**ಭಾವವಿಲಾಸಿನೀ–** ಯತಶ್ಚ ವಿದ್ಯಮಾನತ್ವಮಪಿ ಸತ್ತ್ವಂ ತತ್ ವಿದ್ಯಮಾನತ್ವಂ ಚ ಜೀವನಮಾಹುರಿತಿ ಯೋಜನಾ । ಅತಃ ಸ್ಥಿತಿರಪಿ ಸತ್ತ್ವಶಬ್ದೇನೋಚ್ಯತ ಇತ್ಯಧ್ಯಾಹೃತ್ಯಯೋಜನೀಯಮ್ । ಸೃಷ್ಟಿಸ್ಥಿತಿಸಂಹಾರಾ ಇತಿ ತ್ರಿತಯಮಪಿ ಸತ್ತ್ವಮ್ । ತದೇತತ್ ತ್ರಿತಯಂ ಚ ಜಗತಃ ಯಾಪಯತೀತಿ ಸತ್ಯಶಬ್ದೋದಿತೋ ಭಗವಾನಿತಿ ಸಮುದಾಯಾರ್ಥಃ । ತತಃ ಕಿಂ ಪ್ರಕೃತ ಇತ್ಯತ ಆಹ – ಇದಂ ಚೇತಿ ॥ ತ್ರಿಭಿಃ । ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತ ಇತಿ ಸೃಷ್ಟಿಪ್ರಕರಣೇನ । ಸವಾ ಏಷ ಪುರುಷೋನ್ನರಸಮಯ ಇತ್ಯನ್ನಮಯಪ್ರಕರಣೇನ ತಸ್ಮಾದ್ವಾ ಏತಸ್ಮಾದನ್ನರಸಮಯಾತ್ ಅನ್ಯೋಂತರ ಆತ್ಮಾ ಪ್ರಾಣಮಯ ಇತಿ ಪ್ರಾಣಮಯ ಪ್ರಕರಣೇನ ಚೇತ್ಯರ್ಥಃ । ಆದ್ಯೈರ್ಬ್ರಹ್ಮವಲ್ಲೀಪ್ರಥಮಭಾಗಸ್ಥೈಃ ॥ ೩೦ ॥

**ವಿವರಣೆ–** ತೈತ್ತಿರೀಯೋಪನಿಷತ್‌ನಲ್ಲಿ ಮೊದಲು ಇರುವ ವಾಕ್ಯ ಸತ್ಯಂ ಜ್ಞಾನಮನಂತಂ ಎಂದು, ಇದನ್ನು ಮಂತ್ರವರ್ಣವೆಂದು ಕರೆಯುತ್ತಾರೆ. ಅನಂತರ ಬರುವ ಪ್ರಕರಣ ತಸ್ಮಾದ್ವಾ ಏತಸ್ಮಾ ದಾತ್ಮನಃ ಎಂಬ ಸೃಷ್ಟಿ ಪ್ರಕರಣ, ಅನಂತರ ಬರುವ ಪ್ರಕರಣ ಸವಾ ಏಷಪುರುಷೋ ಅನ್ನರಸಮಯಃ ಎಂಬ ಅನ್ನಮಯ ಪ್ರಕರಣ. ಅನಂತರ ಬರುವ ಪ್ರಕರಣ ಅನ್ಯೋಂತರ ಆತ್ಮಪ್ರಾಣಮಯಃ ಎಂಬ ಪ್ರಾಣಮಯ ಪ್ರಕರಣ. ಸತ್ಯಶಬ್ದಾರ್ಥವಾದ ಸೃಷ್ಟಿಕರ್ತೃತ್ವವು ಆಕಾಶಪ್ರಕರಣದಲ್ಲಿ ವಿವರಿಸಲ್ಪಡುತ್ತದೆ. ಸತ್ಯಶಬ್ದಾರ್ಥವಾದ ಸಂಹಾರಕರ್ತೃತ್ವವು ಅನ್ನಮಯಪ್ರಕರಣದಲ್ಲಿ ವಿವರಿಸಲ್ಪಡುತ್ತದೆ. ಸತ್ಯಶಬ್ದಾರ್ಥವಾದ ಜೀವನಕರ್ತೃತ್ವ ಅಥವಾ ಸ್ಥಿತಿಕರ್ತೃತ್ವವು ಪ್ರಾಣಮಯ ಪ್ರಕರಣದಲ್ಲಿ ವಿವರಿಸಲ್ಪಡುತ್ತದೆ. ಹೀಗೆ ಸತ್ಯಶಬ್ದಾರ್ಥದ ಮೂರು ಅರ್ಥಗಳು ತೈತ್ತರೀಯ ಉಪನಿಷತ್ತಿನ ಬ್ರಹ್ಮವಲ್ಲಿಯ ಮಂತ್ರವರ್ಣದ ನಂತರ ಬರುವ ಮೂರು ಪ್ರಕರಣಗಳಲ್ಲಿ ವಿವರಿಸಲ್ಪಡುತ್ತವೆ ಎಂದು ಅರ್ಥ.

**ಯತ ಆತ್ಮನ ಆಕಾಶ ಇತಿ ಭೂತಜನಿಂ ಪರಾತ್ ।**
**ಆಹ ಸೃಷ್ಟಿರ್ಮಹಾಸೃಷ್ಟಿಸ್ತೇನ ನಾಲ್ಪೇತಿ ಶಂಸತಿ ॥ ೩೧ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಆತ್ಮನಃ= ಬ್ರಹ್ಮನಿಂದ, ಆಕಾಶ ಇತಿ= ಆಕಾಶದ ಉತ್ಪತ್ತಿ ಎಂದು, ಪರಾತ್= ಪರಬ್ರಹ್ಮನಿಂದ, ಭೂತಜನಿಂ= ಆಕಾಶಾದಿ ಮಹಾಭೂತಗಳ

ಸೃಷ್ಟಿಯನ್ನು, ಆಹ= ಹೇಳಿತೋ, ತೇನ= ಆ ಕಾರಣದಿಂದ, ಸೃಷ್ಟಿಃ= ಇಲ್ಲಿ ಹೇಳಲ್ಪಡುವ ಸೃಷ್ಟಿಯು, ಮಹಾಸೃಷ್ಟಿಃ= ಮಹತ್ತಾದ ಸೃಷ್ಟಿ, ನ ಅಲ್ಪಾ= ಅಲ್ಪವಾದ ಸೃಷ್ಟಿಯಲ್ಲ, ಇತಿ= ಎಂದು, ಶಂಸತಿ= ಪ್ರಶಂಸಿಸುತ್ತದೆ.

**ಅನುವಾದ–** ಆತ್ಮನ ಆಕಾಶ ಸಂಭೂತಃ ಎಂಬ ಪ್ರಕರಣದಲ್ಲಿ ಹೇಳಲ್ಪಡುವ ಪರಬ್ರಹ್ಮನಿಂದ ಸೃಷ್ಟಿಯು ಮಹಾಭೂತಗಳ ಸೃಷ್ಟಿಯೇ ಆದುದರಿಂದ, ಈ ಸೃಷ್ಟಿಯು ಮಹಾಸೃಷ್ಟಿ, ಹೊರತಾಗಿ ಅಲ್ಪವಾದ ಸೃಷ್ಟಿಯಲ್ಲ ಎಂದು ಸೃಷ್ಟಿಪ್ರಕರಣವು ಸೃಷ್ಟಿಯನ್ನು ಪ್ರಶಂಸಿಸುತ್ತದೆ.

**ಭಾವವಿಲಾಸಿನೀ–** ವಿವರಣಪ್ರಕಾರಮೇವ ದರ್ಶಯತಿ – **ಯತ ಇತಿ** ॥ ಪರಾತ್ಪರಮಾತ್ಮನಃ । ಭೂತಜನಿಂ ಪಂಚಮಹಾಭೂತಜನಿಮ್ । ತೇನ ಸೃಷ್ಟಿಸ್ಸತ್ಯಮಿತಿ ಲಕ್ಷಣವಾಕ್ಯೇ ಪ್ರಾಗುಕ್ತಾ ಸೃಷ್ಟಿಃ ॥ ೩೧ ॥

**ವಿವರಣೆ–** ಸತ್ಯಶಬ್ದಾರ್ಥವಾದ ಸೃಷ್ಟಿಯು ಮಹಾಸೃಷ್ಟಿ. ಆದ್ದರಿಂದ ಅಂತಹ ಸೃಷ್ಟಿಕರ್ತೃತ್ವವು ಪರಬ್ರಹ್ಮನಲ್ಲಿಯೇ ಇರುತ್ತದೆ ಎಂದು ಉಪಪಾದನೆಯನ್ನು ಮಾಡಲು ಇಲ್ಲಿ ಪೀಠಿಕೆಯನ್ನು ರಚಿಸುತ್ತಾರೆ.

ಬ್ರಹ್ಮಣೋ ಲಕ್ಷಣಂ ನೋ ಚೇತ್ ಕುಂಭಕಾರೇಪಿ ಗಚ್ಛತಿ ।
ಅಬಾಧ್ಯತ್ವಮಪೀತೋ ನ ತತ್ಸೃಷ್ಟಿಕಥಯಾಪಿ ನ ॥ ೩೨ ॥

**ಅರ್ಥ–** ನೋ ಚೇತ್= ಇಲ್ಲದಿದ್ದರೆ, ಬ್ರಹ್ಮಣಃ ಲಕ್ಷಣಂ= ಬ್ರಹ್ಮನ ಲಕ್ಷಣವು, ಕುಂಭಕಾರೇಪಿ= ಕುಂಭಕಾರನಲ್ಲಿಯೂ, ಗಚ್ಛತಿ= ಹೋಗುತ್ತದೆ, ಇತೋಪಿ= ಈ ಕಾರಣದಿಂದಲೂ, ಅಬಾಧ್ಯತ್ವಂ= ಅಬಾಧ್ಯತ್ವವು, ನ= ಸತ್ಯಶಬ್ದಾರ್ಥವಲ್ಲ, ತತ್ಸೃಷ್ಟಿಕಥಯಾ= ಆಕಾಶಾದಿ ಸೃಷ್ಟಿಯ ವಿವರಣೆಯಿಂದಲೂ ಸಹ, ನ= ಅಬಾಧ್ಯತ್ವವು ಸತ್ಯಶಬ್ದಾರ್ಥವಲ್ಲ ಎಂದು ತಿಳಿಯುತ್ತದೆ.

**ಅನುವಾದ–** ಇಲ್ಲಿ ಹೇಳಿದ ಸೃಷ್ಟಿಯು ಮಹಾಸೃಷ್ಟಿಯೆಂದು ಅಂಗೀಕರಿಸದಿದ್ದರೆ, ಸಾಧಾರಣವಾದ ಸೃಷ್ಟಿಕರ್ತೃತ್ವವು ಬ್ರಹ್ಮನ ಲಕ್ಷಣವೆಂದಾಗಿ ಅದು ಕುಂಬಾರನಲ್ಲಿಯೂ ಘಟಕರ್ತೃತ್ವವಿರುವುದರಿಂದ ಅತಿವ್ಯಾಪ್ತವಾಗುತ್ತದೆ. ಇದೇ ಕಾರಣದಿಂದ ಅಬಾಧ್ಯತ್ವವು ಸತ್ಯಶಬ್ದಾರ್ಥವಲ್ಲ. ಏಕೆಂದರೆ ಘಟಾದಿಗಳಲ್ಲಿ ಅಬಾಧ್ಯತ್ವವಿರುವುದರಿಂದ ಬ್ರಹ್ಮನ ಲಕ್ಷಣಕ್ಕೆ ಘಟಾದಿಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಮುಂದೆ ಬ್ರಹ್ಮನಿಂದ ಮಾಡಲ್ಪಟ್ಟ ಸೃಷ್ಟಿಯನ್ನು ನಿರೂಪಣೆ ಮಾಡಿರುವುದರಿಂದ, ಸತ್ಯಶಬ್ದಕ್ಕೆ ಅಬಾಧ್ಯ ಎಂದು ಅರ್ಥವಾದರೆ ಸೃಷ್ಟಿಕಥನವೂ ಅಸಂಗತವಾಗುತ್ತದೆ.

**ಭಾವವಿಲಾಸಿನೀ—** ನನು ಕಿಮರ್ಥಮಿದಂ ವಿವರಣಮಿತ್ಯತ ಆಹ—ಬ್ರಹ್ಮಣ ಇತಿ ॥ ನೋಚೇತ್ ಪ್ರಾಗುಕ್ತಸೃಷ್ಟೇರ್ಮಹಾಸೃಷ್ಟಿತ್ವೇನ ವಿವರಣಂ ನ ಕ್ರಿಯತೇ ಚೇತ್ । ಲಕ್ಷಣಂ ಸತ್ಯತ್ವಾಖ್ಯ-ಲಕ್ಷಣಮ್ । ಸತ್ಯಪದೇನೋಕ್ತಸೃಷ್ಟಿಕರ್ತೃತ್ವಾಖ್ಯಲಕ್ಷಣಸ್ಯೈವಂ ವಿವರಣಾಕರಣೇ ಕುಂಭಕಾರೇಪಿ ತಲ್ಲಕ್ಷಣಮತಿವ್ಯಾಪ್ತಂ ಸ್ಯಾತ್ತೇನೇದಂ ವಿವರಣಮಿತಿ ಭಾವಃ। ಉಪಲಕ್ಷಣಂ ಚೈತತ್ । ಅದ್ಯತೇಽತ್ತಿ ಚ ಭೂತಾನಿತಸ್ಮಾದನ್ನಂ ತದುಚ್ಯತ ಇತಿ ಸಂಹಾರಸ್ಯಾಪಿ ಭೂತಸಂಹಾರರೂಪತ್ವೇನ ಮಹಾ-ಸಂಹಾರತ್ವಂ ಪಾಲನಸ್ಯಾಪಿ ಪ್ರಾಣಂ ದೇವಾ ಅನುಪ್ರಾಣಂತೀತ್ಯಾದಿನಾ ದೇವಾದಿಪಾಲನ-ರೂಪತ್ವೇನ ಮಹಾಪಾಲನತ್ವಂ ಚ ವಿವೃತಮ್। ತೇನ ಭೇಕಸಂಹರ್ತರಿ ಸರ್ಪೇ ಸ್ವಕುಟುಂಬರಕ್ಷಕೇ ಗೃಹಿಣಿಚಾತಿವ್ಯಾಪ್ತಿಃ ಪರಿಹೃತೇತಿ ದ್ರಷ್ಟವ್ಯಮ್ । ಅಸ್ಯ ಸರ್ವಸ್ಯಾಪಿ ಪರ್ಯಾಲೋಚನಯಾ ಪ್ರಾಗಸ್ಮಾಭಿರ್ಜಗತ ಇತಿ ವಿಶೇಷಣಂ ದತ್ತಮಿತಿ ಮಂತವ್ಯಮ್ । ಸ್ವಾಭಿಮತ ಲಕ್ಷಣಸ್ಯಾತಿ-ವ್ಯಾಪ್ತ್ಯಭಾವಮುತ್ತರಗ್ರಂಥಸಂಗತಿಂ ತತ ಏವಾಸಂಭವಾಸಂಭವಂ ಚ ದರ್ಶಯಿತ್ವಾ ಪರಾಭಿಮತಾಬಾಧ್ಯತ್ವಾಖ್ಯ ಲಕ್ಷಣಸ್ಯಾತಿವ್ಯಾಪ್ತಿಮುತ್ತರಗ್ರಂಥಾಸಂಗತಿಂ ಚ ದರ್ಶಯತಿ ॥ **ಅಬಾಧ್ಯತ್ವಮಿತಿ ॥** ಇತೋಽಪಿ ಕುಂಭಕಾರೇಽತಿ ವ್ಯಾಪ್ತೇರಪಿ। ತತ್ ಸೃಷ್ಟಿಕಥಯಾ ತಸ್ಯ ಬ್ರಹ್ಮಣಃ ಸೃಷ್ಟಿಕಥಯಾ ಸೃಷ್ಟಿಕರ್ತೃತ್ವಕಥಯಾ । ಅಬಾಧ್ಯತ್ವಂ ಸತ್ಯತ್ವಂ ಚೇದುತ್ತರತ್ರ ಬ್ರಹ್ಮಣಃ ಸೃಷ್ಟಿಕರ್ತೃತ್ವ-ಕಥನಂ ಪ್ರಕೃತಾನುಪಯುಕ್ತತ್ವೇನಾಸಂಗತಂ ಸ್ಯಾದಿತಿ ಭಾವಃ ॥ ೩೨ ॥

**ವಿವರಣೆ—** ಲಕ್ಷಣವೆಂದರೆ ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವರಹಿತವಾದ ಧರ್ಮ ಎಂದು ಅರ್ಥ. ಮಂತ್ರವರ್ಣವು ಬ್ರಹ್ಮನಲಕ್ಷಣವನ್ನು ಹೇಳಲು ಹೊರಟಿದೆ. ಸತ್ಯಪದದಿಂದ ಹೇಳುವ ಸೃಷ್ಟಿಕರ್ತೃತ್ವವು ಮಹಾಸೃಷ್ಟಿಕರ್ತೃತ್ವರೂಪವೇ ಆಗಬೇಕು. ಇಲ್ಲದಿದ್ದರೆ ಅದು ಬ್ರಹ್ಮನ ಲಕ್ಷಣವಾಗುವುದಿಲ್ಲ. ಏಕೆಂದರೆ ಮಹಾಸೃಷ್ಟಿಕರ್ತೃತ್ವವಲ್ಲದ ಅಲ್ಪಸೃಷ್ಟಿಕರ್ತೃತ್ವವು ಕುಂಬಾರನಲ್ಲಿಯೂ ಬರುತ್ತದೆ. ಆದ್ದರಿಂದ ಲಕ್ಷಣವು ಅತಿವ್ಯಾಪ್ತವಾಗುತ್ತದೆ. ಅದರಂತೆ ಸತ್ಯಶಬ್ದಕ್ಕೆ ಅಬಾಧ್ಯ ಎಂದು ಅರ್ಥ ಮಾಡಬಾರದು. ಹಾಗೆ ಮಾಡಿದರೆ ಅಬಾಧ್ಯತ್ವವು ಬ್ರಹ್ಮನ ಲಕ್ಷಣ ಎಂದಾಗುತ್ತದೆ. ಅಂತಹ ಅಬಾಧ್ಯತ್ವವು ಘಟದಲ್ಲಿಯೂ ಇರುವುದರಿಂದ ಬ್ರಹ್ಮನ ಲಕ್ಷಣಕ್ಕೆ ಪುನಃ ಅತಿವ್ಯಾಪ್ತಿಬರುತ್ತದೆ. ಅಲ್ಲದೇ, ಅಬಾಧ್ಯತ್ವವೇ ಸತ್ಯಶಬ್ದಾರ್ಥವಾದರೆ ಆಕಾಶಾದಿ ಸೃಷ್ಟಿಕಥನಕ್ಕೂ ಮತ್ತು ಅಬಾಧ್ಯತ್ವಕ್ಕೂ ಯಾವ ಸಂಗತಿಯೂ ಇಲ್ಲವಾದ್ದರಿಂದ ಮುಂದಿನ ಪ್ರಕರಣವು ಅಸಂಗತವಾಗುತ್ತದೆ.

**ವಾಗ್ ವಿಶ್ವಂ ಸತ್ಯಮಿತ್ಯಾದ್ಯಾ ಯದಬಾಧ್ಯಂ ಜಗಜ್ಜಗೌ ।**
**ತತೋಽಪಿ ನ ಯತೋಽನ್ಯತ್ರ ಗತಂ ಪ್ರಾಹುರಲಕ್ಷಣಂ ।**
**ಸೂತ್ರೇ ಜನ್ಮಾದಿಹೇತುತ್ವಲಕ್ಷಣೋಕ್ತೇಶ್ಚ ನೇತರತ್** ॥ ೩೩ ॥

**ಅರ್ಥ—** ಯತ್= ಯಾವ ಕಾರಣದಿಂದ, ವಿಶ್ವಂ ಸತ್ಯಮಿತ್ಯಾದ್ಯಾ= ವಿಶ್ವಂ ಸತ್ಯಂ ಮುಂತಾದ, ವಾಕ್= ವೇದವಾಕ್ಯಗಳು, ಜಗತ್= ಜಗತ್ತನ್ನು, ಅಬಾಧ್ಯಂ= ಅಬಾಧ್ಯವೆಂದು, ಜಗೌ= ಹೇಳಿದವೋ, ತತೋಽಪಿ= ಆ ಕಾರಣದಿಂದಲೂ, ನ= ಅಬಾಧ್ಯತ್ವವು

ಬ್ರಹ್ಮಲಕ್ಷಣವಲ್ಲ, ಯತಃ= ಏಕೆಂದರೆ, ಅನ್ಯತ್ರ ಗತಂ= ಬೇರೆ ಕಡೆಯಲ್ಲಿ ಹೋದ ಧರ್ಮವನ್ನು, ಅಲಕ್ಷಣಂ= ಲಕ್ಷಣವಲ್ಲವೆಂದು, ಪ್ರಾಹುಃ= ಹೇಳುತ್ತಾರೆ, ಚ= ಮತ್ತು, ಸೂತ್ರೇ= ಬ್ರಹ್ಮಸೂತ್ರದಲ್ಲಿ, ಜನ್ಮಾದಿಹೇತುತ್ವಲಕ್ಷಣೋಕ್ತೇಃ= ಜನ್ಮಾದಿಹೇತುತ್ವವನ್ನು ಲಕ್ಷಣವೆಂದು ಹೇಳಿದ ಕಾರಣದಿಂದಲೂ, ಇತರತ್= ಅಬಾಧ್ಯತ್ವವು, ನ= ಬ್ರಹ್ಮನ ಲಕ್ಷಣವಲ್ಲ.

**ಅನುವಾದ–** ವಿಶ್ವಂ ಸತ್ಯಂ ಮುಂತಾದ ವೇದವಾಕ್ಯವು ಜಗತ್ತನ್ನು ಅಬಾಧ್ಯವೆಂದು ಹೇಳುತ್ತದೆ. ಲಕ್ಷ್ಯವನ್ನು ಬಿಟ್ಟು ಬೇರೆ ಕಡೆ ಧರ್ಮವು ಹೋದರೆ ಅದನ್ನು ಲಕ್ಷಣವಲ್ಲವೆಂದು ಹೇಳುತ್ತಾರೆ. ಆದ್ದರಿಂದಲೂ ಅಬಾಧ್ಯತ್ವವು ಬ್ರಹ್ಮನ ಲಕ್ಷಣವಾಗುವುದಿಲ್ಲ. ಅಲ್ಲದೆ ಬ್ರಹ್ಮಸೂತ್ರದಲ್ಲಿ ಜಗಜ್ಜನ್ಮಾದಿಕಾರಣತ್ವವನ್ನು ಬ್ರಹ್ಮನ ಲಕ್ಷಣವೆಂದು ಹೇಳಿದ್ದಾರೆ. ಆ ಕಾರಣದಿಂದಲೂ ಅಬಾಧ್ಯತ್ವವು ಬ್ರಹ್ಮನ ಲಕ್ಷಣವಲ್ಲ.

**ಭಾವವಿಲಾಸಿನೀ–** ಪ್ರಾಗುಕ್ತಾತಿವ್ಯಾಪ್ತಿಂ ಪ್ರಮಾಣೇನ ದೃಢೀಕುರ್ವನ್ ಪ್ರಪಂಚಮಾತ್ರೇಽತಿವ್ಯಾಪ್ತಿಮಾಹ – **ವಾಗಿತಿ** ॥ ವಿಶ್ವಂ ಸತ್ಯಮಿತ್ಯಾದ್ಯಾವಾಗಿತಿ ಸಂಬಂಧಃ । ಯದ್ಯಸ್ಮಾತ್ ಜಗದಬಾಧ್ಯಂ ಜಗಾವಿತಿ ಸಂಬಂಧಃ । ಪ್ರಪಂಚಸ್ಯ ಸರ್ವಸ್ಯಾಪ್ಯಬಾಧ್ಯತ್ವೇಪಿ ಕುತೋಬ್ರಹ್ಮಲಕ್ಷಣ-ಮಲಕ್ಷಣಮಿತ್ಯತ ಆಹ – **ಯತ ಇತಿ** ॥ ಅನ್ಯತ್ರ ಲಕ್ಷ್ಯಾದನ್ಯತ್ರ । ಬ್ರಹ್ಮಸೂತ್ರತತ್ಸೂಚಿತಶ್ರುತಿಭ್ಯಾಂ ವಿರುದ್ಧತ್ವಾಚ್ಚ ನೇದಂ ಲಕ್ಷಣಮಿತ್ಯಾಹ – **ಸೂತ್ರ ಇತಿ** ॥ ಸೂತ್ರ ಇತ್ಯುಪಲಕ್ಷಣಮ್ । ಯತೋವಾ ಇಮಾನಿ ಭೂತಾನಿ ಜಾಯಂತ ಇತಿ ಸೂತ್ರಸೂಚಿತ ಶ್ರುತೌ ಚೇತ್ಯಪಿ ಗ್ರಾಹ್ಯಮ್ । ಇತರತ್ ಅಬಾಧ್ಯತ್ವಲಕ್ಷಣಮ್ ॥ ೩೩ ॥

**ವಿವರಣೆ–** ವಿಶ್ವಂ ಸತ್ಯಂ ಎಂಬ ವೇದವಾಕ್ಯವು ಜಗತ್ತು ಅಬಾಧ್ಯವೆಂದು ಹೇಳುತ್ತದೆ. ಅಬಾಧ್ಯತ್ವವು ಬ್ರಹ್ಮನ ಲಕ್ಷಣವಾದರೆ, ಅಂತಹ ಅಬಾಧ್ಯತ್ವವು ಜಗತ್ತಿನಲ್ಲಿಯೂ ಬರುವುದರಿಂದ ಆ ಲಕ್ಷಣಕ್ಕೆ ಅತಿವ್ಯಾಪ್ತಿಯುಂಟಾಗುತ್ತದೆ. ಅಲ್ಲದೆ ಸೂತ್ರಕಾರರು ದ್ವಿತೀಯ ಸೂತ್ರದಲ್ಲಿ ಜಗಜ್ಜನ್ಮಾದಿಕಾರಣತ್ವವನ್ನು ಬ್ರಹ್ಮನ ಲಕ್ಷಣವೆಂದು ಹೇಳಿದ್ದಾರೆ. ಇಲ್ಲದಿದ್ದರೆ ಅಬಾಧ್ಯತ್ವವೇ ಬ್ರಹ್ಮನ ಲಕ್ಷಣವೆಂದು ಹೇಳಬಹುದಾಗಿದ್ದಿತು. ಆದರೆ ಅಬಾಧ್ಯತ್ವವು ಲಕ್ಷಣವಾಗಲು ಸಾಧ್ಯವಿಲ್ಲ. ಆದ್ದರಿಂದಲೇ ಸೂತ್ರಕಾರರು ಜನ್ಮಾದಿ-ಕಾರಣತ್ವವನ್ನು ಲಕ್ಷಣವೆಂದು ಹೇಳಿದ್ದಾರೆ. ಈ ಎರಡು ನಿಮಿತ್ತಗಳಿಂದ ಅಬಾಧ್ಯತ್ವವು ಬ್ರಹ್ಮನ ಲಕ್ಷಣವಾಗುವುದಿಲ್ಲ ಎಂದು ಇಲ್ಲಿ ಸಮರ್ಥನೆ ಮಾಡುತ್ತಾರೆ.

ಕೇವಲ ಸೂತ್ರಕಾರರು ಜನ್ಮಾದಿಕಾರಣತ್ವವನ್ನು ಲಕ್ಷಣವಾಗಿ ಹೇಳಿದ್ದಾರೆ ಎಂದು ಇಷ್ಟೇ ಅಭಿಪ್ರಾಯವಲ್ಲ. ಆ ಬ್ರಹ್ಮಸೂತ್ರವು ಸೂಚನೆ ಮಾಡಿದ 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯು ಸೃಷ್ಟ್ಯಾದಿಕರ್ತೃತ್ವವನ್ನೇ ಹೇಳುತ್ತದೆ. ಆದ್ದರಿಂದ ಶ್ರುತಿ ಮತ್ತು ಸೂತ್ರ ಇವೆರಡರ ವಿರೋಧ ಬರುವುದರಿಂದ, ಅಬಾಧ್ಯತ್ವವು ಬ್ರಹ್ಮನ ಲಕ್ಷಣವಲ್ಲ ಎಂದು ತಿಳಿಯಬೇಕು.

ಅತಃ ಶ್ರುತಿಮತಂ ವೇತ್ತಿ ಪ್ರಾಣೋಸೌ ಭಾರತೀಪತಿಃ ।
ಅನ್ಯಸ್ತಾಮನ್ಯಥೀಕುರ್ವನ್ ಶೂನ್ಯೇ ತಮಸಿ ಪಾತ್ಯತೇ ॥ ೩೪ ॥

**ಅರ್ಥ–** ಅತಃ= ಆ ಕಾರಣದಿಂದ, ಭಾರತೀಪತಿಃ= ಭಾರತಿಪತಿಗಳಾದ, ಅಸೌ ಪ್ರಾಣಃ= ಈ ಮುಖ್ಯಪ್ರಾಣದೇವರು, ಶ್ರುತಿಮತಂ= ಶ್ರುತಿಯ ಅಭಿಪ್ರಾಯವನ್ನು, ವೇತ್ತಿ= ತಿಳಿದವರಾಗಿದ್ದಾರೆ, ಅನ್ಯಃ= ಪರನು, ತಾಂ= ಆ ಶ್ರುತಿಯನ್ನು, ಅನ್ಯಥೀ ಕುರ್ವನ್= ಬೇರೆ ಅರ್ಥವುಳ್ಳದ್ದನ್ನಾಗಿ ಮಾಡಿ, ಶೂನ್ಯೇ ತಮಸಿ= ಶೂನ್ಯವಾದ ತಮಸ್ಸಿನಲ್ಲಿ, ಪಾತ್ಯತೇ= ಬೀಳಿಸಲ್ಪಡುತ್ತಾನೆ.

**ಅನುವಾದ–** ಆ ಕಾರಣದಿಂದ ಶ್ರುತಿಮಾತೆಯ ಅಭಿಪ್ರಾಯವನ್ನು ಭಾರತೀಪತಿಗಳಾದ ಮುಖ್ಯಪ್ರಾಣದೇವರ ಅವತಾರವಾದ ಈ ಮಧ್ವಾಚಾರ್ಯರೊಬ್ಬರೇ ತಿಳಿದಿದ್ದಾರೆ. ಬೇರೆಯವರು ಆ ಶ್ರುತಿಯ ಅರ್ಥವನ್ನು ಕೆಡಿಸುವುದರಿಂದ ಅಂಧಃತಮಸ್ಸಿನಲ್ಲಿ ಬೀಳುತ್ತಾರೆ.

**ಭಾವವಿಲಾಸಿನೀ–** ಅತಃ ಪರೋದೀರಿತಾರ್ಥಸ್ಯ ಶ್ರುತಿಸೂತ್ರಾದಿವಿರುದ್ಧತ್ವಾತ್ ಆಚಾರ್ಯೋಕ್ತಾರ್ಥಸ್ಯ ಶ್ರುತಿಸೂಚಿತತ್ವಾಚ್ಚ । ಅಸೌ ಸದ್ಭಾವಂ ಯಾಪಯೇದ್ಯಸ್ಮಾತ್ತತ್ತ್ವಸ್ತಸ್ಮಾತ್ ಜನಾರ್ದನ ಇತ್ಯಾದಿನಾ ಏತಚ್ಛ್ರುತ್ಯರ್ಥಂ ವರ್ಣಯನ್ । ಅನ್ಯಃ ಮಾಯಾವಾದೀ । ತಾಂ ಶ್ರುತಿಮ್ । ಅನ್ಯಥೀಕುರ್ವನ್ ಅಸಂಗತಾರ್ಥೇ ಯೋಜಯನ್ ॥ ೩೪ ॥

**ವಿವರಣೆ–** ಪರರು ಹೇಳಿದ ಅರ್ಥಗಳು ಶ್ರುತಿಸೂತ್ರಸಮ್ಮತವಾದುದಲ್ಲವಾದ್ದರಿಂದ, ಆಚಾರ್ಯರು ಹೇಳಿದ ಅರ್ಥವೇ ಶ್ರುತಿಸೂತ್ರ ಸಮ್ಮತವಾದುದು ಎಂದು ಇಲ್ಲಿ ನಿರೂಪಿಸುತ್ತಾರೆ.

ಅತಃ ಸ್ವೇತರಸರ್ವಸ್ಯ ಸ್ರಷ್ಟೃತಾ ಸತ್ಯತಾ ಭವೇತ್ ॥ ೩೫ ॥

**ಅರ್ಥ–** ಅತಃ= ಆ ಕಾರಣದಿಂದ, ಸ್ವೇತರ= ತನ್ನಿಂದ ಭಿನ್ನವಾದ, ಸರ್ವಸ್ಯ= ಎಲ್ಲಾ ಜಗತ್ತಿನ, ಸ್ರಷ್ಟೃತಾ= ಸೃಷ್ಟಿಕಾರಣತ್ವವು, ಸತ್ಯತಾ= ಸತ್ಯಶಬ್ದದ ಅರ್ಥವಾಗಿ, ಭವೇತ್= ಆಗುತ್ತದೆ.

**ಅನುವಾದ–** ಆದ್ದರಿಂದ, ಸ್ವೇತರಸರ್ವಜಗತ್ಸೃಷ್ಟಿಕರ್ತೃತ್ವವು ಸತ್ಯಶಬ್ದಾರ್ಥವೆಂದು ಫಲಿತವಾಗುತ್ತದೆ.

**ಭಾವವಿಲಾಸಿನೀ–** ಅತಃ ಪೂರ್ವೋಕ್ತಪ್ರಕಾರಾತ್ । ಸ್ವೇತರಸರ್ವಸ್ಯ ಸ್ವವ್ಯತಿರಿಕ್ತಸ್ಯ ಸರ್ವಸ್ಯ ಜಗತ ಇತ್ಯರ್ಥಃ ॥ ೩೫ ॥

ಪುನರನ್ನಮಯತ್ವೋಕ್ತ್ಯಾ ಮಹಾಸಂಹರ್ತೃತೋಚ್ಯತೇ ।
ಅದ್ಯತೇಽತ್ತಿ ಚ ಭೂತಾನೀತ್ಯುಕ್ತೇಃ ಸಂಹರ್ತೃತಾನ್ನತಾ ॥ ೩೬ ॥

**ಅರ್ಥ–** ಪುನಃ= ಮತ್ತೆ, ಅನ್ನಮಯತ್ವೋಕ್ತ್ಯಾ= ಅನ್ನಮಯ ಎಂಬ ಉಕ್ತಿಯಿಂದ, ಮಹಾಸಂಹರ್ತೃತಾ= ಮಹಾಸಂಹರ್ತೃತ್ವವೇ, ಉಚ್ಯತೇ= ಹೇಳಲ್ಪಡುತ್ತದೆ, ಅದ್ಯತೇಽತ್ತಿ ಚ ಭೂತಾನಿ= ಎಲ್ಲ ಜೀವರನ್ನೂ ಸಂಹರಿಸುತ್ತಾನೆ ಮತ್ತು ಎಲ್ಲ ಜೀವರಿಂದಲೂ ಉಪಜೀವಿಸಲ್ಪಡುತ್ತಾನೆ, ಇತ್ಯುಕ್ತೇಃ= ಎಂದು ಹೇಳಿರುವುದರಿಂದ, ಅನ್ನತಾ= ಅನ್ನ ಶಬ್ದಾರ್ಥವು, ಸಂಹರ್ತೃತಾ= ಸಂಹರ್ತೃತ್ವರೂಪವೇ ಆಗುತ್ತದೆ.

**ಅನುವಾದ–** ಪುನಃ ಅನ್ನಮಯ ಪ್ರಕರಣದಲ್ಲಿ ಬ್ರಹ್ಮನಿಗೆ ಅನ್ನಮಯತ್ವವನ್ನು ಹೇಳಿ, ಸರ್ವ ಸಂಹರ್ತೃತ್ವವೇ ಹೇಳಲ್ಪಡುತ್ತದೆ. ಅದ್ಯತೇಽತ್ತಿ ಚ ಭೂತಾನಿ- ಜೀವರಿಂದ ಉಪಜೀವಿಸಲ್ಪಡುತ್ತಾನೆ ಮತ್ತು ಜೀವರನ್ನು ಸಂಹರಿಸುತ್ತಾನೆ ಎಂದು ಹೇಳಿರುವುದರಿಂದ, ಅನ್ನ ಶಬ್ದಕ್ಕೆ ಸಂಹರ್ತೃ ಎಂದು ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಸತ್ಯಶಬ್ದಸ್ಯಾರ್ಥಾಂತರಂ ಚ ಶ್ರುತಿರಾಹೇತ್ಯಾಹ – **ಪುನರಿತಿ** ॥ ಮಹಾಸಂಹರ್ತೃತಾ ಸ್ವೇತರಸಕಲಜಗತ್‌ಸಂಹರ್ತೃತಾ । ತತ್ಕಥಮಿತ್ಯತ ಆಹ – **ಅದ್ಯತ ಇತಿ** ॥ ಸಂಹರ್ತೃತಾ ಅತ್ತೃತ್ವಾಪರಪರ್ಯಾಯಾಽತ್ತೀತಿ ಶ್ರುತ್ಯುಕ್ತಾ ಅನ್ನತಾ ಅನ್ನಶಬ್ದ ಪ್ರವೃತ್ತಿ-ನಿಮಿತ್ತಮಿತ್ಯರ್ಥಃ ॥ ೩೬ ॥

**ವಿವರಣೆ–** ಅನ್ನಶಬ್ದಕ್ಕೆ ಅದ್ಯತೇ ಎಂಬ ಅಂಶದಿಂದ ಉಪಜೀವ್ಯತ್ವವೆಂದು ಹೇಳಿರುವುದರಿಂದ, ಪಾಲಕ ಎಂತಲೂ ಅರ್ಥವಾಗುತ್ತದೆ. ಈ ಪಾಲಕತ್ವವನ್ನು ಪ್ರಾಣಮಯ ಪ್ರಕರಣದಲ್ಲಿ ಸ್ಪಷ್ಟಪಡಿಸುತ್ತಾರೆ. ಇಲ್ಲಿ ಸರ್ವಸಂಹರ್ತೃತ್ವವನ್ನು ಉಪಪಾದನೆ ಮಾಡಬೇಕಾಗಿರುವುದರಿಂದ, ಅತ್ತಿಚ ಭೂತಾನಿ ಎಂಬಲ್ಲಿ ಹೇಳಿದ ಅತ್ತೃತ್ವವನ್ನು ತೆಗೆದುಕೊಂಡು ಸಂಹರ್ತೃತ್ವವನ್ನು ಹೇಳಿ, ಸರ್ವಭೂತಗಳನ್ನು ಸಂಹಾರ ಮಾಡುತ್ತಾನೆಂದು ಹೇಳುವುದರಿಂದ, ಇದು ಮಹಾಸಂಹರ್ತೃತ್ವವೆಂದು ಉಪಪಾದನೆ ಮಾಡುತ್ತಾರೆ.

**ಪ್ರಾಚುರ್ಯಾರ್ಥೋ ಮಯಟ್ ಪ್ರೋಕ್ತಃ ಸ್ವಯಂ ಸೂತ್ರಕೃತೈವ ಹಿ ।**
**ಸೂಚನಾತ್ ಖಲು ತತ್ ಸೂತ್ರಮತಃ ಪಂಚಸು ತಂ ನಯೇತ್ ॥ ೩೭ ॥**

**ಅರ್ಥ–** ಸೂತ್ರಕೃತಾ= ಸೂತ್ರಕಾರರಿಂದ, ಸ್ವಯಂ= ತಾವಾಗಿಯೇ, ಮಯಟ್= ಮಯಟ್ ಪ್ರತ್ಯಯವು, ಪ್ರಾಚುರ್ಯಾರ್ಥೇ= ಪ್ರಾಚುರ್ಯ ಎಂಬ ಅರ್ಥದಲ್ಲಿ, ಪ್ರೋಕ್ತಃ ಹಿ= ಹೇಳಲ್ಪಟ್ಟಿದೆಯಷ್ಟೇ, ಸೂಚನಾತ್= ಸೂಚನೆಯನ್ನು ಮಾಡುವ ಕಾರಣದಿಂದಲೇ, ಸೂತ್ರತ್ವಂ ಖಲು= ಸೂತ್ರವೆಂದು ಕರೆಯಲ್ಪಡುತ್ತದೆಯಷ್ಟೇ, ಅತಃ= ಆ ಕಾರಣದಿಂದ, ಪಂಚಸು= ಅನ್ನಮಯಾದಿ ಐದು ಸ್ಥಳಗಳಲ್ಲಿಯೂ, ತಂ= ಆ ಪ್ರಾಚುರ್ಯಾರ್ಥವನ್ನು, ನಯೇತ್= ತೆಗೆದುಕೊಂಡು ಹೋಗಬೇಕು (ಅನ್ವಯಿಸಬೇಕು).

**ಅನುವಾದ–** ಸೂತ್ರಕಾರರಾದ ವೇದವ್ಯಾಸರು ತಾವೇ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವೆಂದು ಹೇಳಿದ್ದಾರಷ್ಟೇ? ಸೂಚನೆ ಮಾಡುವುದರಿಂದ ಅವು ಸೂತ್ರಗಳೆನಿಸಿಕೊಳ್ಳುತ್ತವೆ. ಆ ಕಾರಣದಿಂದ ಅನ್ನಮಯಾದಿ ಪಂಚಪ್ರಕರಣಗಳಲ್ಲಿಯೂ ಅದೇ ಅರ್ಥವನ್ನು ತೆಗೆದುಕೊಳ್ಳಬೇಕು.

**ಭಾವವಿಲಾಸಿನೀ–** ತಸ್ಯ ಮಹತ್ತ್ವಪ್ರಾಪ್ತಿಪ್ರಕಾರಮಾಹ – **ಪ್ರಾಚುರ್ಯಾರ್ಥ ಇತಿ** ॥ ಸೂತ್ರಕೃತಾ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾದಿತ್ಯಾನಂದಮಯೇ ಮಯಟ್ ಶಬ್ದಾರ್ಥಂ ವದತಾ । ನನ್ವಾನಂದಮಯಶಬ್ದಸ್ಥಮಯಟ್‌ಪ್ರತ್ಯಯಸ್ಯ ಪ್ರಾಚುರ್ಯಾರ್ಥತ್ವೇಪ್ಯನ್ನಮಯೇ ತದರ್ಥತ್ವಂ ಕುತ ಇತ್ಯತ ಆಹ – **ಸೂಚನಾದಿತಿ** ॥ ಅತಃ ಸೂತ್ರಸ್ಯ ಸೂಚಕತ್ವಾತ್ತಂ ಮಯಟ್ ಪ್ರತ್ಯಯಾರ್ಥಂ ಪಂಚಸ್ವನ್ನಮಯಾದಿ ಪಂಚಕೇ। ಅತಃ ಅನ್ನಮಯಸ್ಥಮಯಟ್ ಶಬ್ದೋಽಪಿ ಪ್ರಾಚುರ್ಯಾರ್ಥ ಏವ ಅನ್ಯಥಾ ಪ್ರಾಯಪಾಠ ವಿರೋಧಾದಿತಿ ಸೂತ್ರಕೃತೋ ಹೃದಯಮ್। ಉಪಲಕ್ಷಣಂ ಚೈತತ್। ಅದ್ಯತೇತ್ತಿ ಚ ಭೂತಾನೀತಿ ಶ್ರುತಾವೇವ ಭೂತಾತ್ತೃತ್ವ ಕಥನೇನ ಮಹಾಸಂಹರ್ತೃತ್ವಲಾಭಾಚ್ಚೇತ್ಯಪಿ ದ್ರಷ್ಟವ್ಯಮ್ ॥ ೩೭ ॥

**ವಿವರಣೆ–** ಸಂಹರ್ತೃತ್ವ, ಸೃಷ್ಟಿಕರ್ತೃತ್ವ ಮೊದಲಾದವುಗಳು, ಮಹಾಸಂಹರ್ತೃತ್ವ ಮತ್ತು ಮಹಾಸೃಷ್ಟಿಕರ್ತೃತ್ವ ರೂಪವಾದ ಅರ್ಥಗಳಲ್ಲಿ ಹೇಗೆ ಪರ್ಯವಸಾನ ಹೊಂದುತ್ತವೆ ಎಂದು ಇಲ್ಲಿ ತಿಳಿಸುತ್ತಾರೆ. ಆನಂದಮಯಾಧಿಕರಣದ ಗುಣಸೂತ್ರವಾದ 'ವಿಕಾರಶಬ್ದಾತ್ ನೇತಿಚೇನ್ನ ಪ್ರಾಚುರ್ಯಾತ್' ಎಂಬ ಸೂತ್ರದಲ್ಲಿ ಸೂತ್ರಕಾರರು ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯವು ಅರ್ಥವೆಂದು ಹೇಳಿದ್ದಾರೆ. ಸೂತ್ರಗಳಿಗೆ ವಿಶ್ವತೋಮುಖತ್ವವಿದೆ. ಪ್ರತಿಯೊಂದು ವಾಕ್ಯವನ್ನು ಬೇರೆ ಬೇರೆಯಾಗಿ ವಿಮರ್ಶೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಒಂದು ನ್ಯಾಯವನ್ನು ಸೂಚನೆ ಮಾಡಿ, ಅದು ಅನ್ವಯವಾಗುವ ಎಲ್ಲ ಕಡೆಗಳಲ್ಲಿಯೂ ಅದನ್ನು ಅನುಸರಿಸಬೇಕು ಎಂದು ಸಿದ್ಧವಾಗುತ್ತದೆ. ಯದ್ಯಪಿ ಆನಂದಮಯಶಬ್ದದಲ್ಲಿರುವ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯವು ಅರ್ಥವೆಂದು ಹೇಳಿದ್ದಾರೆ. ಆದರೂ ಆನಂದಮಯಶಬ್ದವು ಅನ್ನಮಯಾದಿ ಉಳಿದ ನಾಲ್ಕುಶಬ್ದಗಳಿಗೂ ಸೂಚಕವಾಗಿರುವುದರಿಂದ, ಅದೇ ಪ್ರಾಚುರ್ಯಾರ್ಥವನ್ನು ಉಳಿದ ನಾಲ್ಕು ಕಡೆಗಳಲ್ಲಿಯೂ ತೆಗೆದುಕೊಳ್ಳಬೇಕು. ಅಷ್ಟೇ ಅಲ್ಲದೆ, ಅದ್ಯತೇಅತ್ತಿಚಭೂತಾನಿ ಎಂಬ ಶ್ರುತಿಯು ಸಮಸ್ತಭೂತಾತ್ತೃತ್ವವನ್ನು ಹೇಳುವುದರಿಂದ, ಕಂಠತಃ ಮಹಾಸಂಹತೃತ್ವವನ್ನು ಹೇಳುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿ ಹೇಳಿದ ಸಂಹಾರಕರ್ತೃತ್ವ ಮೊದಲಾದವುಗಳು, ಮಹಾ ಸಂಹಾರಕರ್ತೃತ್ವ ಮೊದಲಾದವುಗಳೆಂದು ತಿಳಿಯಬೇಕು.

ಇತಿ ಲಕ್ಷಣಸೂತ್ರೋಕ್ತಂ ತೃತೀಯಂ ಲಕ್ಷಣಂ ಶ್ರುತಿಃ ।
ಪ್ರಾಹಾನ್ನಮಯತಾವಾಚಾ ನಿಂದ್ಯದೇಹಸ್ತುತಿರ್ನ ಸಾ ॥ ೩೮ ॥

**ಅರ್ಥ–** ಇತಿ= ಈ ರೀತಿಯಲ್ಲಿ, ಶ್ರುತಿಃ= ಶ್ರುತಿಯು, ಲಕ್ಷಣಸೂತ್ರೋಕ್ತಂ= ಬ್ರಹ್ಮನ ಲಕ್ಷಣವನ್ನು ಹೇಳುವ ದ್ವಿತೀಯ ಸೂತ್ರದಲ್ಲಿ ಹೇಳಲ್ಪಟ್ಟ, ತೃತೀಯಂ ಲಕ್ಷಣಂ= ಮೂರನೆಯ ಲಕ್ಷಣವಾದ ಸಂಹಾರಕರ್ತೃತ್ವವನ್ನು, ಅನ್ನಮಯತಾ ವಾಚಾ= ಅನ್ನಮಯತ್ವವನ್ನು ಹೇಳುವ ಶಬ್ದದಿಂದ, ಪ್ರಾಹ= ಹೇಳಿತು, ಸಾ= ಆ ಶ್ರುತಿಯು, ನಿಂದ್ಯದೇಹಸ್ತುತಿಃ= ನಿಂದಿತವಾದ ದೇಹದ ಸ್ತುತಿಯು, ನ= ಅಲ್ಲ.

**ಅನುವಾದ–** ಜನ್ಮಾದ್ಯಸ್ಯ ಯತಃ ಎಂಬ ಲಕ್ಷಣಸೂತ್ರದಲ್ಲಿ ಎಂಟು ಲಕ್ಷಣಗಳು ಹೇಳಲ್ಪಟ್ಟಿವೆ. ಅದರಲ್ಲಿ ಮೂರನೆಯ ಲಕ್ಷಣವೆಂದರೆ ಸಂಹರ್ತೃತ್ವರೂಪವಾದುದು. ಅನ್ನಮಯಪ್ರಕರಣದಲ್ಲಿ ಶ್ರುತಿಯು ಬ್ರಹ್ಮನನ್ನು ಅನ್ನಮಯಶಬ್ದದಿಂದ ಹೇಳಿ, ಅವನು ಮಹಾಸಂಹರ್ತೃವೆಂದು ಹೇಳಿದೆ. ಅನ್ನಮಯಪ್ರಕರಣದಲ್ಲಿ ಶ್ರುತಿಯು ನಿಂದಿತವಾದ ದೇಹವನ್ನು ಸ್ತೋತ್ರ ಮಾಡುತ್ತಿಲ್ಲ.

**ಭಾವವಿಲಾಸಿನೀ–** ಲಕ್ಷಣಸೂತ್ರೇ ಜನ್ಮಾದ್ಯಸ್ಯ ಯತ ಇತಿ ಸೂತ್ರೇ । ಉಕ್ತಂ ತೃತೀಯಂ ಜಗತ್‌ಸಂಹರ್ತೃತ್ವಾಖ್ಯಮ್ । ಇತ್ಯುಕ್ತಪ್ರಕಾರೇಣಾನ್ನಮಯತಾವಾಚಾ ಪ್ರಾಹೇತಿ ಸಂಬಂಧಃ। ನನು ದೇಹಸ್ಯೈವ ಪ್ರಸ್ತಾವೋತ್ರ ಕುತೋನೇತ್ಯತ ಆಹ – ನಿಂದ್ಯೇತಿ ॥ ಸಾ । ಸ ವಾ ಏಷ ಪುರುಷೋನ್ನರಸಮಯ ಇತ್ಯಾದಿನಾ ಅನ್ನಾದ್ವೈಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚಪೃಥಿವೀಂ ಶ್ರಿತಾಃ । ಅಥೋ ಅನ್ನೇನೈವಜೀವಂತಿ । ಅಥೈನದಪಿಯಂತ್ಯತ ಇತಿ ತತ್ರೈವೋಕ್ತಶ್ಲೋಕೇನ ಚ ಕ್ರಿಯಮಾಣಸ್ತುತಿಃ ನಿಂದ್ಯದೇಹಸ್ತುತಿರ್ನಹೀತಿ ಯೋಜನಾ । ನಿಂದ್ಯೇತ್ಯನೇನ ತ್ವಕ್ ಶ್ಮಶ್ರು-ಲೋಮನಖಕೇಶಪಿನದ್ಧಮಂತರ್ಮಾಂಸಾಸ್ಥಿರಕ್ತ ಕೃಮಿವಿಡ್‌ಭರಿತಾಂತ್ರವೀತಮ್ । ಜೀವಚ್ಛವಂ ಭಜತಿ ಕಾಂತಮತಿರ್ವಿಮೂಢಾಯಾತೇಪದಾಬ್ಜಮಕರಂದಮಜಿಘ್ರತೀ ಸ್ತ್ರೀ । ಇತ್ಯಾದಿ ಭಾಗವತವಚನಂ ಸ್ಮಾರಯತಿ । ನಹಿ ಸಕಲಪ್ರಜಾಸ್ರಷ್ಟೃತ್ವಮಂತೇ ದೇಹಪಾತಾನಂತರಂ ಸಕಲ-ಪ್ರಜಾಪ್ರಾಪ್ಯತ್ವಂ ಚ ಏಷ ಪುರುಷ ಇತ್ಯುಕ್ತ ದೃಶ್ಯಮಾನದೇಹಸ್ಯೋಕ್ತವಿಧಯಾ ನಿಂದಾರ್ಹಸ್ಯ ಸಂಭವತೀತಿ ಭಾವಃ ॥ ೩೮ ॥

**ವಿವರಣೆ–** ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ಎಂಟು ಲಕ್ಷಣಗಳು ಹೇಳಲ್ಪಟ್ಟಿವೆ. ಅದರಲ್ಲಿ ಮೂರನೆಯ ಲಕ್ಷಣ ಜಗತ್ಸಂಹರ್ತೃತ್ವ. ಅನ್ನಮಯ ಎಂದರೆ ಮಹಾಸಂಹರ್ತೃ ಎಂದು ಅರ್ಥ. ಆದ್ದರಿಂದ ಸತ್ಯಶಬ್ದದ ಅರ್ಥವಾದ ಸಂಹರ್ತೃತ್ವವನ್ನು ಅನ್ನಮಯ ಶ್ರುತಿಯು ವಿವರಿಸುತ್ತದೆ. ಇದು ಅನ್ಯರು ಹೇಳುವಂತೆ ನಿಂದ್ಯವಾದ ದೇಹದ ಸ್ತುತಿಯಲ್ಲ. ಈ ನಮ್ಮ ದೇಹವು ಅತ್ಯಂತ ನಿಂದಿತವಾದುದೆಂದು ಭಾಗವತದ ವಚನವಿದೆ. ಇಲ್ಲಿ ಹೇಳುವ ಸಕಲ ಪ್ರಜಾಸ್ರಷ್ಟೃತ್ವವು ನಿಂದಿತವಾದ ನಮ್ಮ ದೇಹಗಳಿಗೆ ಉಪಪನ್ನವಾಗುವುದಿಲ್ಲ. ಹಾಗೆಯೇ ಕೊನೆಯಲ್ಲಿ ಹೇಳುವ ಮರಣಾಂತರ ಪ್ರಾಪ್ಯತ್ವವೂ ಸಹ ನಿಂದಿತವಾದ ದೇಹಕ್ಕೆ ಕೂಡುವುದಿಲ್ಲ. ಆದ್ದರಿಂದ ಅನ್ನಮಯ ಶಬ್ದದಿಂದ ಮಹಾಸಂಹರ್ತೃವಾದ ನಾರಾಯಣನೇ ಹೇಳಲ್ಪಡುತ್ತಾನೆ.

**ರೌದ್ರವ್ಯಾಪರತಾಶಂಕಾಭೇದಾಯಾಸ್ಯಾದಿತಃ ಕಥಾ ॥ ೩೯ ॥**

**ಅರ್ಥ–** ರೌದ್ರವ್ಯಾಪಾರತಾ ಶಂಕಾ ಭೇದಾಯ= ರುದ್ರದೇವರ ವ್ಯಾಪಾರದ ಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ, ಅಸ್ಯ= ಈ ಸಂಹರ್ತೃತ್ವಕ್ಕೆ, ಆದಿತಃ= ಮೊದಲೇ, ಕಥಾ= ನಿರೂಪಣೆ ಇದೆ.

**ಅನುವಾದ– ಸಂಹರ್ತೃತ್ವರೂಪಕ್ರಿಯೆಯು ರುದ್ರದೇವರ ವ್ಯಾಪಾರವೆಂಬ ಸಂಶಯವನ್ನು ಪರಿಹರಿಸುವುದಕ್ಕಾಗಿ ಶ್ರುತಿಯು ಮೊದಲೇ ನಾರಾಯಣನಿಗೆ ಸಂಹರ್ತೃತ್ವವನ್ನು ಹೇಳುತ್ತಿದೆ.**

**ಭಾವವಿಲಾಸಿನೀ–** ನನು ದ್ವಿತೀಯವ್ಯಾಪಾರಂ ಪಾಲನಂ ವಿಹಾಯ ಕುತಸ್ತೃತೀಯಸ್ಯ ಸಂಹಾರಸ್ಯ ಮಧ್ಯೇ ಗ್ರಹಣಮಿತ್ಯತ ಆಹ – **ರೌದ್ರೇತಿ** ॥ ಅಸ್ಯ ಸಂಹಾರಸ್ಯ ರೌದ್ರವ್ಯಾಪಾರತಾಶಂಕಾ-ಭೇದಾಯ ರುದ್ರೇಣ ಕ್ರಿಯಮಾಣವ್ಯಾಪಾರತ್ವ ಶಂಕಾಪನೋದಾಯ । ಉಪಲಕ್ಷಣಂ ಚೈತತ್। ಪರಮತನಿರಾಕರಣ ಏವ ಬಹುಸಾಹಸವತೀ ಶ್ರುತಿಶ್ಚತುರ್ಮುಖವ್ಯಾಪಾರತ್ವೇನ ಪ್ರಸಿದ್ಧಸೃಷ್ಟಿಂ ರುದ್ರವ್ಯಾಪಾರತ್ವೇನ ಪ್ರಸಿದ್ಧಸಂಹಾರಂ ಚ ಕ್ರಮೇಣ ವಿಷ್ಣೌ ಪ್ರಸಾಧ್ಯ ವಿಷ್ಣುವ್ಯಾಪಾರತ್ವೇನ ಪ್ರಸಿದ್ಧಪಾಲನಮಂತೇ ನಿಬಬಂಧೇತ್ಯಪಿ ದ್ರಷ್ಟವ್ಯಮ್ । ಆದಿತಃ ಪಾಲನಾದಪ್ಯಾದೌ । ಕಥಾಕಥನಮ್ ॥ ೩೯ ॥

**ವಿವರಣೆ–** ಅನ್ನಮಯ ಪ್ರಕರಣದಲ್ಲಿ ಸೃಷ್ಟಿಯು ಹೇಳಲ್ಪಡುತ್ತದೆ. ಸೃಷ್ಟಿಯನ್ನು ಹೇಳಿದ ನಂತರ ಹೇಳಬೇಕಾದುದು ಸ್ಥಿತಿ. ಎಂದರೆ ನಾರಾಯಣನ ಪಾಲನಕರ್ತೃತ್ವ. ಅದರ ನಂತರ ಸಂಹಾರ ಕರ್ತೃತ್ವದ ಪ್ರಸಕ್ತಿ. ಆದರೆ ಶ್ರುತಿಯು ಸೃಷ್ಟಿ ಪ್ರಕರಣದಲ್ಲಿ, ಮಹಾಸೃಷ್ಟಿಯನ್ನು ಹೇಳಿದ ಮೇಲೆ ತಕ್ಷಣ ಅನ್ನಮಯ ಪ್ರಕರಣದಲ್ಲಿ ಮಹಾ-ಸಂಹರ್ತೃತ್ವವನ್ನು ಹೇಳುತ್ತದೆ. ಸ್ಥಿತಿ ಪ್ರಕರಣವನ್ನು ಹೇಳಲಿಲ್ಲ. ಏಕೆಂದರೆ ಲೋಕದಲ್ಲಿ ಬ್ರಹ್ಮನು ಸೃಷ್ಟಿಕರ್ತನೆಂದೂ, ರುದ್ರನು ಸಂಹಾರಕರ್ತನೆಂದೂ, ವಿಷ್ಣುವು ಪಾಲನ-ಕರ್ತನೆಂದೂ ಪ್ರಸಿದ್ಧಿಯಿದೆ. ಆದ್ದರಿಂದ ಪಾಲನಕರ್ತೃತ್ವವನ್ನು ತಿಳಿಸಲು ಪ್ರಯಾಸ ಪಡಬೇಕಾಗಿಲ್ಲ. ಶ್ರುತಿಗೆ ಪರಮತನಿರಾಕರಣೆಯಲ್ಲಿಯೇ ಮಹಾತಾತ್ಪರ್ಯವಿದೆ. ಆದ್ದರಿಂದ ಅದು ಬ್ರಹ್ಮದೇವರ ವ್ಯಾಪಾರವೆಂದು ಪ್ರಸಿದ್ಧವಾದ ಸೃಷ್ಟಿಯನ್ನೂ, ರುದ್ರದೇವರ ವ್ಯಾಪಾರವೆಂದು ಪ್ರಸಿದ್ಧವಾದ ಸಂಹಾರವನ್ನೂ ಮೊದಲು ನಾರಾಯಣನಲ್ಲಿ ಪ್ರತಿಪಾದನೆ ಮಾಡಿ, ಸ್ಥಿತಿಕರ್ತೃತ್ವವನ್ನು ಪ್ರಾಣಮಯ ಪ್ರಕರಣದಲ್ಲಿ ಅನಂತರ ಪ್ರತಿಪಾದನೆ ಮಾಡುತ್ತದೆ. ಆ ಕಾರಣದಿಂದ ಸೃಷ್ಟಿಪ್ರಕರಣದ ಅನಂತರ ಸಂಹಾರ ಪ್ರಕರಣವು ಬಂದಿದೆ ಎಂದು ಅಭಿಪ್ರಾಯ.

**ಪ್ರಾಣನಂ ಜೀವನಂ ಪ್ರೋಕ್ತಂ ಪ್ರಾಚುರ್ಯಾರ್ಥೋ ಯತೋ ಮಯಟ್।**
**ಅತಃ ಪ್ರಾಣಮಯತ್ವೋಕ್ತ್ಯಾ ಮಹಾಪಾಲಕತೋಚ್ಯತೇ ॥ ೪೦ ॥**

**ಅರ್ಥ–** ಪ್ರಾಣನಂ= ಪ್ರಾಣನಂ ಎಂದರೆ, ಜೀವನಂ= ಜೀವನವೆಂದು, ಪ್ರೋಕ್ತಂ= ಹೇಳಲ್ಪಡುತ್ತದೆ, ಯತಃ= ಯಾವ ಕಾರಣದಿಂದ, ಮಯಟ್= ಮಯಟ್ ಪ್ರತ್ಯಯವು, ಪ್ರಾಚುರ್ಯಾರ್ಥಃ= ಪ್ರಾಚುರ್ಯಾರ್ಥವೆಂದು ಹೇಳಲ್ಪಡುತ್ತದೆಯೋ, ಅತಃ= ಆ ಕಾರಣದಿಂದ, ಪ್ರಾಣಮಯತ್ವೋಕ್ತ್ಯಾ= ಪ್ರಾಣಮಯ ಎಂಬ ವಚನದಿಂದ, ಮಹಾಪಾಲಕತಾ= ನಾರಾಯಣನ ಮಹಾಪಾಲಕತ್ವವೇ, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಪ್ರಾಣನವೆಂದರೆ ಜೀವನವೆಂದು ಅರ್ಥ. ಮಯಟ್ ಶಬ್ದಕ್ಕೆ ಪ್ರಾಚುರ್ಯಾರ್ಥವೆಂದು ಮೊದಲೇ ಹೇಳಿದೆ. ಆದ್ದರಿಂದ ಪ್ರಾಣಮಯಶಬ್ದಕ್ಕೆ ಮಹಾಪಾಲಕ ಎಂದು ಅರ್ಥವೆಂದು ಶ್ರುತಿಯಲ್ಲಿ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಅಧುನಾ ಸಕಲಜಗತ್ಪಾಲಕತ್ವಂ ಚ ಸತ್ಯಶಬ್ದಾರ್ಥ ಇತಿ ವಕ್ತುಮಾರಭತೇ – **ಪ್ರಾಣನಮಿತಿ** ॥ ಸತ್ತ್ವಂ ಜೀವನಮಿತಿ ಪ್ರಾಗುಪಪಾದಿತಮ್ । ಜೀವನಂ ಪಾಣನಮಿತಿ ಚ ಜೀವ ಪ್ರಾಣಧಾರಣ ಇತಿ ವಚನೇನ ಜೀವಧಾತೋಃ ಪ್ರಾಣಧಾರಕತ್ವಾರ್ಥ ಕಥನಾತ್ ಪರ್ಯಾಯಃ । ಪ್ರಕೃಷ್ಟಮನನಂ ಚೇಷ್ಟಾ ಯಸ್ಮಾದಿತಿ ಚ ವ್ಯುತ್ಪತ್ತ್ಯಾ ಪ್ರಾಣೋಜೀವನಹೇತುಃ । ಸತ್ತ್ವಂ ಜೀವನಂ ಯಾಪಯತೀತಿ ಚ ಸ ಏವೋಚ್ಯತೇ । ಅತಃ ಪ್ರಾಣಸತ್ಯಶಬ್ದಯೋ-ರೈಕಾರ್ಥ್ಯಮಿತಿ ಭಾವಃ । ಯತಃ ಯಸ್ಮಾತ್ । ಅತಃ ಪೂರ್ವೋಕ್ತನಿಮಿತ್ತಾತ್ ॥ ೪೦ ॥

**ವಿವರಣೆ–** ಇಲ್ಲಿ ಸಕಲಜಗತ್ಪಾಲಕತ್ವವು ಸತ್ಯಶಬ್ದಾರ್ಥವೆಂದು ಉಪಪಾದನೆ ಮಾಡುತ್ತಾರೆ. ಜೀವ ಧಾತುವಿಗೆ ಪ್ರಾಣಧಾರಣೆ ಎಂದು ಅರ್ಥ. ಆದ್ದರಿಂದ ಪ್ರಾಣನಂ ಎಂದರೆ ಜೀವಧಾರಕತ್ವ ಎಂದು ಅರ್ಥ. ಸತ್ವಂ ಎಂದರೆ ಜೀವನವನ್ನು ಎಂದರೆ ಪ್ರಾಣಧಾರಣೆಯನ್ನು, ಯಾಪಯತಿ- ಉಂಟುಮಾಡುತ್ತಾನೆ ಎಂಬ ಅರ್ಥದಲ್ಲಿ, ಸತ್ಯ ಎಂದರೆ ಪ್ರಾಣಧಾರಣೆಗೆ ಪ್ರೇರಕನಾದವನು, ಎಂದರೆ ಪಾಲಕನಾದವನು ಎಂಬ ಅರ್ಥವು ಸಿಗುತ್ತದೆ. ಮಯಟ್ ಶಬ್ದಕ್ಕೆ ಪ್ರಾಚುರ್ಯವೇ ಅರ್ಥವಾದುದರಿಂದ, ಮಯಟ್ ಶಬ್ದದಿಂದ ಮಹಾಪಾಲಕತ್ವವುಳ್ಳವನು ಎಂಬ ಅರ್ಥವೇ ಸಿದ್ಧವಾಗುತ್ತದೆ.

**ಸರ್ವಸಾಮಾನ್ಯವೇತೃತ್ವಂ ಜ್ಞಾನತ್ವಮಿತಿ ಚ ಶ್ರುತಿಃ ।**
**ಮನೋಮಯಗಿರಾ ಪ್ರಾಹ ಯತೋ ಧಾತುಃ ಸ ಬೋಧನೇ ॥ ೪೧ ॥**

**ಅರ್ಥ–** ಜ್ಞಾನತ್ವಂ= ಜ್ಞಾನತ್ವವೆಂದರೆ, ಸರ್ವಸಾಮಾನ್ಯವೇತೃತ್ವಂ= ಸರ್ವ ವಿಷಯದ ಸಾಮಾನ್ಯ ಜ್ಞಾನ, ಇತಿ= ಎಂದು, ಶ್ರುತಿಃ= ವೇದವು, ಮನೋಮಯಗಿರಾ= ಮನೋಮಯ ಎಂಬ ಶಬ್ದದಿಂದ, ಪ್ರಾಹ= ಹೇಳಿತು, ಯತಃ= ಏಕೆಂದರೆ, ಸ ಧಾತುಃ= ಆ ಮನು ಎಂಬ ಧಾತುವು, ಬೋಧನೇ= ಜ್ಞಾನಾರ್ಥದಲ್ಲಿ ಇದೆ.

**ಅನುವಾದ–** ಶ್ರುತಿಯು ಜ್ಞಾನವೆಂಬ ಮಂತ್ರವರ್ಣಶಬ್ದವನ್ನು ಸರ್ವಸಾಮಾನ್ಯ ಜ್ಞಾನವುಳ್ಳವನು ಎಂಬ ಅರ್ಥವನ್ನು ಉಳ್ಳದ್ದಾಗಿ, ಮನೋಮಯ ಎಂಬ

ಶಬ್ದದಿಂದ ಹೇಳಿತು. ಏಕೆಂದರೆ ಮನು ಅವಬೋಧನೇ ಎಂಬ ಧಾತುವು ಜ್ಞಾನರೂಪ ಅರ್ಥವನ್ನೇ ಹೇಳುತ್ತದೆಯಷ್ಟೇ?

**ಭಾವವಿಲಾಸಿನೀ–** ಅಧುನಾ ಜ್ಞಾನಪದೇನ ಸ್ವೋಕ್ತಲಕ್ಷಣಂ ವಿವೃಣ್ವಂತೀ ಶ್ರುತಿರ್ಮನೋಮಯ-ವಿಜ್ಞಾನಮಯಪ್ರಕರಣೇ ಪ್ರಾಸ್ತಾವಯದಿತ್ಯಾಹ – **ಸರ್ವೇತಿ** ॥ ಸಃ ಮನು ಇತಿ ಧಾತು-ರ್ಬೋಧನೇ ಅವಬೋಧನೇ ವರ್ತತೇ । ಮನು ಅವಭೋಧನ ಇತಿ ಧಾತೋರಿತ್ಯರ್ಥಃ । ವಿಜ್ಞಾನಮಯ ಪ್ರಕರಣೇ ಜ್ಞಾನಸ್ಯ ವೀತ್ಯುಪಸರ್ಗೇಣ ವಿಶೇಷಣಾತ್ ಅತ್ರ ಚ ತದಭಾವಾತ್ ಪ್ರತ್ಯುತಾವೇತ್ಯುಪಸರ್ಗೇಣ ನಿಕೃಷ್ಟತ್ವಕಥನಾತ್ ಪ್ರಾಚುರ್ಯಾರ್ಥಕಮಯಟ್ ಪ್ರಯೋಗಾಚ್ಚ ಸರ್ವಸಾಮಾನ್ಯವೇತ್ತೃತ್ವಂ ಜ್ಞಾನತ್ವಮಿತಿ ಜ್ಞಾನಪದೇನೋಕ್ತಂ ಲಕ್ಷಣಮಿತಿ ಮನೋಮಯಗಿರಾ ತಸ್ಮಾದ್ವಾ ಏತಸ್ಮಾತ್ ಪ್ರಾಣ ಮಯಾದನ್ಯೋಽಂತರ ಆತ್ಮಾಮನೋಮಯ ಇತಿ ಮನೋಮಯ-ಶಬ್ದೇನ ಪ್ರಾಹೇತಿ ಯೋಜನಾ ॥ ೪೧ ॥

**ವಿವರಣೆ–** ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ಮಂತ್ರವರ್ಣದಲ್ಲಿ ಜ್ಞಾನ ಎಂಬ ಶಬ್ದವನ್ನು ಮನೋಮಯ ಮತ್ತು ವಿಜ್ಞಾನಮಯ ಎಂಬ ಪ್ರಕರಣಗಳಿಂದ ವಿವರಿಸುತ್ತಾರೆ ಎಂದು ಉಪಪಾದನೆ ಮಾಡಲು ಇಲ್ಲಿ ಮನೋಮಯಶಬ್ದದ ಅರ್ಥವನ್ನು ವಿಚಾರ ಮಾಡುತ್ತಾರೆ. ಮನು ಅವಬೋಧನೇ ಎಂಬ ಧಾತು ಮತ್ತು ಧಾತುಪಾಠವಿದೆ. ವಿಜ್ಞಾನಮಯ ಎಂಬಲ್ಲಿ ಜ್ಞಾನಶಬ್ದದ ಜೊತೆಗೆ ವಿ ಎಂಬ ಉಪಸರ್ಗವನ್ನು ಸೇರಿಸಿ, ವಿಶೇಷ ಜ್ಞಾನ ಎಂಬ ಅರ್ಥವನ್ನು ಹೇಳುತ್ತಾರೆ. ಆದರೆ ಮನು ಎಂಬ ಧಾತುವು ಅವಬೋಧನೆ ಎಂಬ ಅರ್ಥದಲ್ಲಿ ಇದೆ ಎಂದು ಹೇಳುವಾಗ, ಬುಧ ಧಾತುವಿಗೆ ಅವ ಎಂಬ ಅಧಮತ್ತ್ವವನ್ನು ಹೇಳುವ ಉಪಸರ್ಗವನ್ನು ಸೇರಿಸಿರುವುದರಿಂದ, ಮನೋಮಯ ಪ್ರಕರಣದಲ್ಲಿ ಹೇಳಿದುದು ಸಾಮಾನ್ಯವಾದ ಜ್ಞಾನ, ವಿಜ್ಞಾನಮಯ ಪ್ರಕರಣದಲ್ಲಿ ಹೇಳಿದುದು ವಿಶೇಷವಾದ ಜ್ಞಾನವೆಂದು ಸಿದ್ಧವಾಗುತ್ತದೆ. ಮಯಟ್ ಶಬ್ದವಂತೂ ಪ್ರಾಚುರ್ಯಾರ್ಥದಲ್ಲಿಯೇ ಇದೆ. ಆದ್ದರಿಂದ ಸರ್ವವಿಷಯಕವಾದ ಸಾಮಾನ್ಯಜ್ಞಾನವೇ ಜ್ಞಾನಶಬ್ದಾರ್ಥವೆಂದು ಸಿದ್ಧವಾಗುತ್ತದೆ. ಈ ರೀತಿಯಲ್ಲಿ ಅನ್ಯೋಽಂತರ ಆತ್ಮಾ ಮನೋಮಯಃ ಎಂಬ ಶ್ರುತಿಯು ಬ್ರಹ್ಮನ ಸರ್ವಸಾಮಾನ್ಯ ವಿಷಯಕ ಜ್ಞಾನವನ್ನು ಹೇಳಿದೆ ಎಂದು ಉಪಪಾದನೆ ಮಾಡುತ್ತಾರೆ.

**ಯತೋ ಘಟಪಟತ್ವಾದಿಸಾಮಾನ್ಯಾನ್ಯಪಿ ವಸ್ತುಷು ।**
**ಸಂತಿ ಚಿತ್ರೇಷ್ವನಂತಾನಿ ತತ್ ತದ್ವೇತ್ತಾಪಿ ಸರ್ವವಿತ್ ॥ ೪೨ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಚಿತ್ರೇಷು= ವಿಚಿತ್ರವಾದ, ವಸ್ತುಷು= ಅನೇಕ ವಸ್ತುಗಳಲ್ಲಿ, ಘಟಪಟತ್ವಾದಿ ಸಾಮಾನ್ಯಾನ್ಯಪಿ= ಘಟತ್ವ, ಪಟತ್ವ ಮೊದಲಾದ ಸಾಮಾನ್ಯಗಳು, ಅನಂತಾನಿ= ಅನಂತವಾಗಿ, ಸಂತಿ= ಇವೆಯೋ, ತತ್= ಆ ಕಾರಣದಿಂದ, ತದ್ವೇತ್ತಾಪಿ= ಅದನ್ನು ತಿಳಿದವನೂ ಸಹ, ಸರ್ವವಿತ್= ಸರ್ವಜ್ಞನಾಗುತ್ತಾನೆ.

**ಅನುವಾದ–** ಪ್ರಪಂಚದಲ್ಲಿ ಇರುವ ವಿಚಿತ್ರವಾದ ಘಟಪಟಾದಿ ಅನಂತವಸ್ತುಗಳಲ್ಲಿ ಘಟತ್ವ, ಪಟತ್ವ ಮೊದಲಾದ ಅನಂತ ಸಾಮಾನ್ಯಗಳು ಇವೆ. ಆದ್ದರಿಂದ ಅದನ್ನು ತಿಳಿದವನೂ ಸರ್ವಜ್ಞನಾಗುತ್ತಾನೆ.

**ಭಾವವಿಲಾಸಿನೀ–** ನನು ಸಾಮಾನ್ಯವೇತ್ತೃತ್ವಂ ಅಸ್ಮದಾದಿಸಾಧಾರಣತ್ವಾತ್ ಕಥಂ ಲಕ್ಷಣಮಿತ್ಯತಸ್ತದಪಿ ಭಗವತ್ಯಸಾಧಾರಣಂ ಕರ್ತುಮಾಹ–**ಯತ ಇತಿ** ॥ ಯತಶ್ಚಿತ್ರೇಷು ವಸ್ತುಷು ಬ್ರಹ್ಮಾಂಡ- ಬಹಿರಂತರ್ಗತಾನಂತಪದಾರ್ಥೇಷು । ಅನಂತಾನ್ಯಸಂಖ್ಯಾನಿ । ತತ್ತಸ್ಮಾತ್ । ತದ್ವೇತ್ತಾ ಅನಂತ- ಘಟಪಟತ್ವಾದಿ ಸಾಮಾನ್ಯವೇತ್ತಾ ವಿಚಿತ್ರಾನಂತಪದಾರ್ಥೇಷು ವಿದ್ಯಮಾನಾನ್ಯನಂತ ಸಾಮಾನ್ಯಾನಿ ತದ್ವೈಚಿತ್ರ್ಯ ಪ್ರಕಾರಾಂಶ್ಚ ಯಥಾಽತಿಸ್ಪಷ್ಟಂ ಭಗವಾನ್ ವೇದ ನ ತಥಾಽಪರ ಇತಿ ಹೇತೋಃ ಇದಮಪಿ ಲಕ್ಷಣಮಸಾಧಾರಣಮೇವೇತಿ ಭಾವಃ । ಅತ ಏವ ಜ್ಞಾನ- ವಿಜ್ಞಾನಯೋಶ್ಚೈವೇತ್ಯತ್ರ ಜ್ಞಾನಪದೇನೋಕ್ತಸಾಮಾನ್ಯಜ್ಞಾನಸ್ಯಾಪಿ ಸಮಗ್ರಸ್ಯ ಷಣ್ಣಾಂ ಭಗ ಇತೀರಣೇತಿ ಭಗಶಬ್ದೇನೋಕ್ತಿಕೀರ್ತನಮ್ ॥ ೪೨ ॥

**ವಿವರಣೆ–** ಸರ್ವವಿಷಯಕ ಸಾಮಾನ್ಯಜ್ಞಾನವು ಜೀವರಾದ ನಮಗೂ ಇರುವುದರಿಂದ ಇದು ಹೇಗೆ ಬ್ರಹ್ಮನ ಲಕ್ಷಣವಾಗುತ್ತದೆ ಎಂಬುದಕ್ಕೆ ಇಲ್ಲಿ ಉತ್ತರವನ್ನು ನೀಡುತ್ತಾರೆ. ಜಗತ್ತಿನಲ್ಲಿ ಘಟ, ಪಟ ಮೊದಲಾದ ವಿಚಿತ್ರವಾದ ಅನೇಕ ವಸ್ತುಗಳಿವೆ. ಅದರಲ್ಲಿ ಇರುವ ಘಟತ್ವ, ಪಟತ್ವ ಸಾಮಾನ್ಯಗಳು ಅನಂತವಾಗಿಯೇ ಇವೆ. ಆದ್ದರಿಂದ ಜೀವರಿಗೆ ಅಂತಹ ಅನಂತ ಸಾಮಾನ್ಯಗಳ ಜ್ಞಾನವು ಎಂದೂ ಇಲ್ಲ. ಆದ್ದರಿಂದ ಬ್ರಹ್ಮನಿಗಿರುವ ಸರ್ವವಿಷಯಕ ಸಾಮಾನ್ಯ ಜ್ಞಾನವು ಸರ್ವಜ್ಞತ್ವ ರೂಪವೇ ಆಗುವುದರಿಂದ, ಅದು ಅವನ ಲಕ್ಷಣವಾಗುತ್ತದೆ. ಆದ್ದರಿಂದ ಭಗಶಬ್ದಾರ್ಥವನ್ನು ಹೇಳುತ್ತಾ, ಜ್ಞಾನ-ವಿಜ್ಞಾನಗಳನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದಾರೆ. ಆದ್ದರಿಂದ ಸರ್ವವಿಷಯಕ ಸಾಮಾನ್ಯಜ್ಞಾನವೂ ಒಂದು ಲಕ್ಷಣ, ಸರ್ವವಿಷಯಕ ವಿಶೇಷ ಜ್ಞಾನವೂ ಇನ್ನೊಂದು ಲಕ್ಷಣವಾಗುತ್ತದೆ.

ವಿಶಿಷ್ಟ ಸರ್ವವೇತ್ತೃತ್ವಂ ಜ್ಞಾನತ್ವಮಿತಿ ಸಾ ಪುನಃ ।
ವಿಜ್ಞಾನಮಯತೋಕ್ತ್ಯಾ ವೀತ್ಯುಪಸರ್ಗಯುತಾಽಬ್ರವೀತ್ ॥ ೪೩ ॥

**ಅರ್ಥ–** ಸಾ= ಆ ಶ್ರುತಿಯು, ಪುನಃ= ಮತ್ತೆ, ಜ್ಞಾನತ್ವಂ= ಜ್ಞಾನವೆಂದರೆ, ವಿಶಿಷ್ಟ ಸರ್ವವೇತ್ತೃತ್ವಂ= ಸರ್ವ ವಿಷಯಕ ವಿಶೇಷ ಜ್ಞಾನವೆಂದು, ವಿಜ್ಞಾನಮಯತೋಕ್ತ್ಯಾ= ವಿಜ್ಞಾನಮಯ ಎಂಬ ಮಾತಿನಿಂದ, ವೀತ್ಯುಪಸರ್ಗಯುತಾ= 'ವಿ' ಎಂಬ ಉಪಸರ್ಗದಿಂದ ಸೇರಿದುದಾಗಿ, ಅಬ್ರವೀತ್= ಹೇಳಿತು.

**ಅನುವಾದ–** ಆ ಶ್ರುತಿಯು ಪುನಃ ವಿಜ್ಞಾನಮಯ ಎಂದು ಹೇಳಿ ಆ ಶಬ್ದದಲ್ಲಿ 'ಜ್ಞಾ' ಧಾತುವಿಗೆ 'ವಿ 'ಎಂಬ ಉಪಸರ್ಗವನ್ನು ಸೇರಿಸಿ ಜ್ಞಾನವೆಂದರೆ ಸಕಲ ವಿಷಯಕ ವಿಶಿಷ್ಟ ಜ್ಞಾನವೆಂದು ಹೇಳಿತು.

**ಭಾವವಿಲಾಸಿನೀ–** ಸಾಶ್ರುತಿಃ ಪುನರ್ಮನೋಮಯಪ್ರಸ್ತಾವಾನಂತರಂ ವೀತ್ಯುಪಸರ್ಗಯುತಾ ಸೇತಿ (ಸಾ ಶ್ರುತಿಃ ಇತಿ) ಪೂರ್ವೇಣಾನ್ವಯಃ । ಶೇಷಂ ಪೂರ್ವವತ್ ॥ ೪೩ ॥

**ವಿವರಣೆ–** ಮನು ಅವಬೋಧನೇ ಎಂಬ ಧಾತುವಿನಲ್ಲಿ 'ಅವ' ಎಂಬ ಉಪಸರ್ಗವು ಜ್ಞಾನದಲ್ಲಿ ಒಂದು ನೀಚತ್ವವನ್ನು ಹೇಳುತ್ತದೆ. ಆದ್ದರಿಂದ ಸಾಮಾನ್ಯಜ್ಞಾನವೆಂದು ಸಿದ್ಧವಾಯಿತು. ಆದರೆ ವಿಜ್ಞಾನವೆಂಬಲ್ಲಿ 'ಜ್ಞಾ ಧಾತುವಿನ ಅರ್ಥ ಜ್ಞಾನ, 'ವಿ' ಎಂಬ ಉಪಸರ್ಗದ ಅರ್ಥ ವಿಶೇಷ, ವಿಶೇಷಜ್ಞಾನ ಎಂದು ಅರ್ಥವಾಯಿತು. ಮೊದಲು ಸಾಮಾನ್ಯ ಜ್ಞಾನವನ್ನು ಹೇಳಿದ ಶ್ರುತಿಯು ಅನಂತರ ಇಲ್ಲಿ ವಿಶೇಷ ಜ್ಞಾನವನ್ನು ಹೇಳುತ್ತದೆ. ಆಯಾ ವಸ್ತುಗಳ, ಆಯಾ ಧರ್ಮಗಳ, ಸಕಲ ವಿಶೇಷ ವಿಷಯಕವಾದ ಜ್ಞಾನವು ವಿಜ್ಞಾನವೆಂದು ಕರೆಸಿಕೊಳ್ಳಲ್ಪಡುತ್ತದೆ. ಮಯಟ್ ಶಬ್ದಕ್ಕೆ ಪ್ರಾಚುರ್ಯ ಎಂಬ ಅರ್ಥವು ಮೊದಲಿನಿಂದಲೂ ಇರುವುದರಿಂದ ವಿಜ್ಞಾನಮಯ ಶಬ್ದಕ್ಕೆ ಅಂತಹ ಅಶೇಷ ವಸ್ತುವಿಷಯಕ ವಿಶೇಷ ಜ್ಞಾನ ಹೊಂದಿದವನು ಎಂಬ ಅರ್ಥವು ದೊರೆತು ಅದು ಬ್ರಹ್ಮನ ಲಕ್ಷಣವೆಂದು ಸಿದ್ಧವಾಗುತ್ತದೆ. ಹೀಗೆ ಮಂತ್ರವರ್ಣದಲ್ಲಿ ಹೇಳಿದ ಜ್ಞಾನವೆಂಬ ಶಬ್ದವು ಮನೋಮಯ ಮತ್ತು ವಿಜ್ಞಾನಮಯಪ್ರಕರಣಗಳಲ್ಲಿ ಅರ್ಥಕಥನ ಪೂರ್ವಕವಾಗಿ ವಿವರಿಸಲ್ಪಟ್ಟಿದೆ.

ಪ್ರಾಗುಕ್ತಜ್ಞಾನತಾಮಾತ್ರಂ ಸರ್ವಜ್ಞತ್ವೇಽನಯತ್ ತತಃ ।
ನ ಚೇದ್ ಘಟಾದಿವೃತ್ತೇಶ್ಚ ಜ್ಞಾನತ್ವಾತ್ ಸ್ಯಾದಲಕ್ಷಣಂ ॥ ೪೪ ॥

ಸೃಷ್ಟ್ಯುಕ್ತ್ಯಾ ಪ್ರಾಪ್ತಸಾರ್ವಜ್ಞಲಕ್ಷಣಸ್ಯೇದಮೀರಣಂ ॥ ೪೫ ॥

**ಅರ್ಥ–** ತತಃ= ಆದ್ದರಿಂದಲೇ, ಪ್ರಾಗುಕ್ತಜ್ಞಾನತಾಮಾತ್ರಂ= ಮೊದಲು ಹೇಳಿದ ಜ್ಞಾನ ಸಾಮಾನ್ಯವನ್ನು, ಸರ್ವಜ್ಞತ್ವೇ ಅನಯತ್= ಸರ್ವಜ್ಞತ್ವ ಎಂಬ ಅರ್ಥದಲ್ಲಿ ಪರ್ಯವಸಾನವನ್ನು ಮಾಡಿತು, ನ ಚೇತ್= ಇಲ್ಲದಿದ್ದರೆ, ಘಟಾದಿವೃತ್ತೇಶ್ಚ= ಘಟಾದಿ ವೃತ್ತಿಯೂ ಸಹ, ಜ್ಞಾನತ್ವಾತ್= ಜ್ಞಾನವಾಡುದರಿಂದ, ಅಲಕ್ಷಣಂ ಸ್ಯಾತ್= ಬ್ರಹ್ಮನ ಲಕ್ಷಣವಾಗಲಾರದು.

ಸೃಷ್ಟ್ಯುಕ್ತ್ಯಾ= ಜಗತ್ಸೃಷ್ಟಿಯನ್ನು ಹೇಳಿದುದರಿಂದ, ಪ್ರಾಪ್ತ= ಪ್ರಾಪ್ತವಾದ, ಸಾರ್ವಜ್ಞ ಲಕ್ಷಣಸ್ಯ= ಸರ್ವಜ್ಞತ್ವದ ಲಕ್ಷಣಕ್ಕೆ, ಇದಂ= ಇದು, ಈರಣಂ= ವರ್ಣನೆಯ ರೂಪವಾದುದು.

**ಅನುವಾದ–** ಆದ್ದರಿಂದ ಮನೋಮಯ ಪ್ರಕರಣದಲ್ಲಿ ಹೇಳಿದ ಜ್ಞಾನಸಾಮಾನ್ಯವು ಸರ್ವಜ್ಞತ್ವರೂಪವಾದುದು ಎಂದು ಶ್ರುತಿಯು ಪರ್ಯವಸಾನವನ್ನು ಮಾಡಿತು. ಇಲ್ಲದಿದ್ದರೆ ಜ್ಞಾನ ಎಂದು ಇಷ್ಟೇ ಅರ್ಥವಾದರೆ, ಜೀವರಾದ ನಮಗಿರುವ

ಘಟಾದಿವೃತ್ತಿಯೂ ಸಹ ಜ್ಞಾನವಾದುದರಿಂದ, ಅಲ್ಲಿ ಅತಿವ್ಯಾಪ್ತಿಯು ಬರುವುದರಿಂದ ಬ್ರಹ್ಮನ ಲಕ್ಷಣವಾಗಲಾರದು. ಮೊದಲು ಸೃಷ್ಟಿಯನ್ನು ಹೇಳುವುದರಿಂದ, ಸೃಷ್ಟಿಗೆ ಬೇಕಾದ ಸರ್ವಜ್ಞತ್ವವು ಸೂಚಿತವಾಗುತ್ತದೆ. ಆ ಸರ್ವಜ್ಞತ್ವವನ್ನು ಶ್ರುತಿಯು ಮನೋಮಯ ಮತ್ತು ವಿಜ್ಞಾನಮಯ ಪ್ರಕರಣಗಳಲ್ಲಿ ವಿವರಿಸಿದೆ.

**ಭಾವವಿಲಾಸಿನೀ**– ತತಃ ಏವಂ ಸ್ವಯಮೇವ ವ್ಯಾಖ್ಯಾನಾತ್ । ಪ್ರಾಗುಕ್ತಜ್ಞಾನತಾಮಾತ್ರಂ ಜ್ಞಾನಮಿತ್ಯತ್ರೋಕ್ತ ಜ್ಞಾನತ್ವಮಾತ್ರಮಿತ್ಯರ್ಥಃ । ಸರ್ವಜ್ಞತ್ವೇಽನಯತ್ ನೀತವತೀ । ಪೂರ್ವೋಕ್ತಜ್ಞಾನತ್ವಮೇವ ಸರ್ವಜ್ಞತ್ವಂ ಯಥಾ ಭವತಿ ತಥಾಕರೋದಿತಿ ಭಾವಃ । ಏವಂ ವ್ಯಾಖ್ಯಾನಾಕರಣೇ ಕೋ ದೋಷ ಇತ್ಯತ ಆಹ – **ನಚೇದಿತಿ** ॥ ೪೪ ॥

ನನು ಸೂತ್ರೋಕ್ತಜನ್ಮಾದಿಹೇತುತ್ವಾಖ್ಯಲಕ್ಷಣೇಷು ಅಸ್ಯಾಭಾವಾತ್ ಕುತಃ ಶ್ರುತಿರಿದಂ ಲಕ್ಷಣಮುದಾಜಹಾರೇತ್ಯತ ಆಹ – **ಸೃಷ್ಟೀತಿ** ॥ ಸೃಷ್ಟ್ಯುಕ್ತ್ಯಾ ಸಕಲಜಗತ್ ಸೃಷ್ಟ್ಯುಕ್ತ್ಯಾ । ಸಕಲ-ಜಗತ್‌ಸ್ರಷ್ಟೃತ್ವಾದಿನಾಽರ್ಥಾತ್ ಪ್ರಾಪ್ತಂ ಯದ್ಭಗವತಃ ಸಾರ್ವಜ್ಞ್ಯಂ ತದೇವಲಕ್ಷಣಂ ತಸ್ಯೇರಣಂ ಕಥನಮ್ । ಸರ್ವಜ್ಞತ್ವಾತ್ತಸ್ಯೈವ ಜಗತ್‌ಸ್ರಷ್ಟೃತ್ವಾದಿಕಂ ನಾನ್ಯಸ್ಯೇತಿ ಸ್ವೋಕ್ತಲಕ್ಷಣ-ಸ್ಥಿರೀಕರಣಾಯ ಪ್ರಕರಣದ್ವಯೇನ ಸಾರ್ವಜ್ಞ್ಯಂ ವರ್ಣಿತವತೀತಿ ಭಾವಃ ॥ ೪೫ ॥

**ವಿವರಣೆ**– ಜನ್ಮಾದಿ ಸೂತ್ರದಲ್ಲಿ ಹೇಳಿದ ಎಂಟು ಲಕ್ಷಣಗಳಲ್ಲಿ ಸರ್ವಜ್ಞತ್ವವು ಇಲ್ಲವಾದ ಕಾರಣ ಶ್ರುತಿಯು ಮುಂದೆ ಏಕೆ ಸರ್ವಜ್ಞತ್ವವನ್ನು ಸಮರ್ಥನೆ ಮಾಡುತ್ತಿದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳುತ್ತಾರೆ. ಲಕ್ಷಣಸೂತ್ರದಲ್ಲಿ ಸರ್ವಜ್ಞತ್ವವನ್ನು ಕಂಠತಃ ಹೇಳದಿದ್ದರೂ, ಸರ್ವಸೃಷ್ಟಿಕರ್ತೃತ್ವವನ್ನು ಹೇಳಿದುದರಿಂದ, ಸರ್ವಜ್ಞನಲ್ಲದವನಿಗೆ ಸರ್ವಸೃಷ್ಟಿಕರ್ತೃತ್ವವು ಉಪಪನ್ನವಾಗುವುದಿಲ್ಲವಾದ್ದರಿಂದ ಲಕ್ಷಣ ಸೂತ್ರದಿಂದಲೇ ಅರ್ಥಾತ್ ಸರ್ವಜ್ಞತ್ವವು ಲಭ್ಯವಾಗಿದೆ. ಆದ್ದರಿಂದ ಆ ಸರ್ವಜ್ಞತ್ವವನ್ನು ಈ ಮನೋಮಯ ಮತ್ತು ವಿಜ್ಞಾನಮಯ ಪ್ರಕರಣಗಳಲ್ಲಿ ಶ್ರುತಿಯು ವರ್ಣಿಸುತ್ತಿದೆ ಎಂದು ಅಭಿಪ್ರಾಯ.

ಆನಂದಮಯವಾಚಾಂತೇ ಸ್ವೋಕ್ತಾನಂತತ್ವಮೇವ ಸಾ ।
ಜಗೌ ಕಿಲ ತದಾನಂತ್ಯಮಾನಂದಾದಿ ಗುಣೈರ್ನ ಕಿಂ ॥ ೪೬ ॥

**ಅರ್ಥ**– ಸಾ= ಆ ಶ್ರುತಿಯು, ಅಂತೇ= ಕೊನೆಯಲ್ಲಿ, ಆನಂದಮಯವಾಚಾ= ಆನಂದಮಯ ಎಂಬ ಶಬ್ದದಿಂದ, ಸ್ವೋಕ್ತಾನಂತತ್ವಮೇವ= ತಾನು ಮೊದಲು ಹೇಳಿದ ಅನಂತತ್ವವನ್ನೇ, ಜಗೌ ಕಿಲ= ಹೇಳಿತಷ್ಟೇ, ತತ್= ಆ ಕಾರಣದಿಂದ, ಆನಂತ್ಯಂ= ಅನಂತತ್ವವು, ಆನಂದಾದಿ ಗುಣೈರ್ನ ಕಿಂ= ಆನಂದಾದಿಗುಣಗಳಿಂದಲೇ ಅಲ್ಲವೇನು?

**ಅನುವಾದ–** ತೈತ್ತರೀಯ ಶ್ರುತಿಯು ತಾನು ಮೊದಲು ಹೇಳಿದ ಅನಂತತ್ವವನ್ನೇ ಕೊನೆಯಲ್ಲಿ ಆನಂದಮಯ ಶಬ್ದದಿಂದ ಹೇಳಿತಷ್ಟೇ. ಆದ್ದರಿಂದ ಆನಂತ್ಯವು ಆನಂದಾದಿ ಗುಣಗಳಿಂದಲೇ ಅಲ್ಲವೇನು?

**ಭಾವವಿಲಾಸಿನೀ–** ಆನಂದಮಯ ಪ್ರಕರಣೇನ ಮಂತ್ರವರ್ಣಾಂತೋಕ್ತಾನಂತತ್ವಾಖ್ಯ ಲಕ್ಷಣಂ ಪ್ರಪಂಚಯತೀತ್ಯಾಹ – **ಆನಂದಮಯೇತ್ಯಾದಿನಾ** ॥ ಅಂತೇ ಮಂತ್ರವರ್ಣವ್ಯಾಖ್ಯಾನಾಂತೇ । ಸಾ ಶ್ರುತಿಃ । ತತ್ತಸ್ಮಾದಾನಂದಮಯಪ್ರಕರಣೇನ ಪ್ರಪಂಚನಾತ್ । ಆನಂದಂ ಪ್ರಾಗುಕ್ತಂ ಆನಂತ್ಯಮಿತಿ ವಾ । ಆನಂದಾದಿ ಗುಣೈರ್ನ ಕಿಂ ಭವತ್ಯೇವ । ಅಂತೇ ಪ್ರೋಕ್ತಾನಂತತ್ವ ಲಕ್ಷಣಸ್ಯಾಂತಿಮೇನಾನಂದಮಯಪ್ರಕರಣೇನ ಪ್ರಪಂಚನಾತ್ ಆನಂದಾದಿ ಗುಣ-ಪೂರ್ಣತ್ವಮೇವಾನಂತತ್ವಂ ನ ಪರೋದೀರಿತಸಕಲವಸ್ತ್ವೈಕ್ಯಮ್ । ಉಕ್ತಪ್ರಪಂಚನಪ್ರಕರಣಾ-ಸಂಗತತ್ವಾತ್ । ಪ್ರತ್ಯುತ ಸ ಇದಂ ಸರ್ವಮಸೃಜತ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ತದನುಪ್ರವಿಶ್ಯೇತಿ ಸ್ವಸೃಷ್ಟಜಗದನುಪ್ರವೇಶಸ್ಯೈವ ಕಥನೇನೋತ್ತರವಿರುದ್ಧತ್ವಾಚ್ಚೇತಿ ಭಾವಃ ॥೪೬॥

**ವಿವರಣೆ–** ಆನಂದಮಯ ಪ್ರಕರಣದಿಂದ ಮಂತ್ರವರ್ಣದಲ್ಲಿ ಹೇಳಲ್ಪಟ್ಟ ಅನಂತತ್ವವೆಂಬ ಲಕ್ಷಣವನ್ನು ವಿಸ್ತರಿಸುತ್ತಾರೆ ಎಂದು ಇಲ್ಲಿ ಹೇಳುತ್ತಾರೆ. ಅನಂತ ಶಬ್ದದಿಂದ ಹೇಳಿದ ಅನಂತತ್ವವನ್ನೇ ಆನಂದಮಯ ಶಬ್ದದಿಂದ ವಿಸ್ತಾರವಾಗಿ ಹೇಳಿದೆ. ಆದ್ದರಿಂದ ಮೊದಲು ಹೇಳಿದ ಅನಂತತ್ವವು ಆನಂದಾದಿ ಗುಣಗಳಿಂದಲೇ ಎಂದು ಸಿದ್ಧವಾಗುತ್ತದೆ, ಹೊರತಾಗಿ ಸಕಲವಸ್ತ್ವೈಕ್ಯವು ಅನಂತಶಬ್ದಾರ್ಥವಲ್ಲ. ಏಕೆಂದರೆ ಐಕ್ಯವನ್ನು ಅಂಗೀಕರಿಸಿದರೆ ಮುಂದೆ ಹೇಳುವ 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಅನುಪ್ರವೇಶಾದಿಗಳು ವಿರುದ್ಧವಾಗುತ್ತವೆ.

**ಯದ್ಯಾನಂದೋ ಭವೇನ್ನಾಸೌ ಕಥಂ ಸೃಜ್ಯಂ ಸೃಜೇದಿತಿ ।**
**ಶ್ರುತ್ಯುಕ್ತಂ ಸಾ ಜಗೌ ಸೃಷ್ಟ್ಯೈ ಪೂರ್ಣಾನಂದಾಖ್ಯಲಕ್ಷಣಂ ॥ ೪೭ ॥**

**ಅರ್ಥ–** ಯದಿ= ಒಂದು ಪಕ್ಷ, ಅಸೌ= ಈ ಬ್ರಹ್ಮನು, ಆನಂದೋ ನ ಭವೇತ್= ಆನಂದ ಪೂರ್ಣನಾಗದಿದ್ದರೆ, ಸೃಜ್ಯಂ= ಸೃಷ್ಟಿಸಲ್ಪಡಬೇಕಾದ ವಸ್ತುವನ್ನು, ಕಥಂ ಸೃಜೇತ್= ಹೇಗೆ ಸೃಷ್ಟಿ ಮಾಡುತ್ತಾನೆ, ಇತಿ= ಎಂದು, ಶ್ರುತ್ಯುಕ್ತಂ= ಶ್ರುತಿಯಿಂದ ಹೇಳಲ್ಪಟ್ಟ, ಪೂರ್ಣಾನಂದಾಖ್ಯ ಲಕ್ಷಣಂ= ಪೂರ್ಣಾನಂದತ್ವರೂಪವಾದ ಲಕ್ಷಣವನ್ನು, ಸೃಷ್ಟ್ಯೈ= ಸೃಷ್ಟಿಯ ಸಿದ್ಧಿಗಾಗಿ, ಸಾ= ಉಪನಿಷತ್ತು, ಜಗೌ= ಹೇಳಿತು.

**ಅನುವಾದ–** ಈ ಬ್ರಹ್ಮನು ಆನಂದರೂಪನಾಗದಿದ್ದರೆ ಸೃಜ್ಯವಾದ ಜಗತ್ತನ್ನು ಹೇಗೆ ಸೃಷ್ಟಿಸುತ್ತಾನೆ ಎಂದು ಶ್ರುತ್ಯುಕ್ತವಾದ ಪೂರ್ಣಾನಂದತ್ವರೂಪವಾದ ಲಕ್ಷಣವನ್ನು ಸೃಷ್ಟಿಯನ್ನು ಉಪಪಾದನೆ ಮಾಡುವುದಕ್ಕಾಗಿ ಶ್ರುತಿಯು ಹೇಳಿತು.

**ಭಾವವಿಲಾಸಿನೀ–** ಅಸ್ಯಾಪಿ ಲಕ್ಷಣಸ್ಯ ಪ್ರಾಥಮಿಕ ಲಕ್ಷಣಸಂಗತಿಂ ಶ್ರುತ್ಯೈವಾಹ – ಯದಿತಿ ॥ ಅರ್ಥತಃ ಸಂಗೃಹೀತಯಾ ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾದಿತಿ ಶ್ರುತ್ಯಾ ಉಕ್ತಂ ಪೂರ್ಣಾನಂದಾಖ್ಯಲಕ್ಷಣಮ್ । ಸೃಷ್ಟ್ಯೈ ಪ್ರಾಗುಕ್ತಸೃಷ್ಟಿ ಸಮರ್ಥನಾಯ । ಸಾ ಮಂತ್ರವರ್ಣಶ್ರುತಿಃ । ಜಗೌ ಅನಂತಮಿತಿ ವಾಚಾ ಜಗೌ । ಸಾऽऽನಂದಮಯಶ್ರುತಿಃ । ತದೇವಪೂರ್ಣಾನಂದತ್ವಲಕ್ಷಣಂ ಪ್ರಪಂಚಯಿತ್ವಾ ಜಗಾವಿತಿ ಚ ಯೋಜನಾ ॥ ೪೭ ॥

**ವಿವರಣೆ–** ಪೂರ್ಣಾನಂದರೂಪವಾದ ಈ ಲಕ್ಷಣಕ್ಕೂ ಸೃಷ್ಟಿಕರ್ತೃತ್ವರೂಪವಾದ ಮೊದಲ ಲಕ್ಷಣದಿಂದ ಸಂಗತಿಯಿದೆ ಎಂದು ಶ್ರುತಿಯಿಂದಲೇ ಉಪಪಾದನೆ ಮಾಡುತ್ತಾರೆ. ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆನಂದೋ ನ ಸ್ಯಾತ್ ಎಂಬ ಪೂರ್ಣವಾಕ್ಯವನ್ನು ಅರ್ಥತಃ ಸಂಗ್ರಹ ಮಾಡಿದ್ದಾರೆ. ಪೂರ್ಣಾನಂದನಲ್ಲದಿದ್ದರೆ ಜಗತ್ತಿನ ಸೃಷ್ಟಿಯನ್ನು ಹೇಗೆ ಮಾಡುತ್ತಾನೆ ಎಂದು ಶ್ರುತಿಯು ಪ್ರಶ್ನಿಸುವುದರಿಂದ, ಸೃಷ್ಟಿಯನ್ನು ಮಾಡುವುದಕ್ಕೆ ಪೂರ್ಣಾನಂದತ್ವವು ಅವಶ್ಯಕವೆಂದು ಶ್ರುತಿಯೇ ಹೇಳುತ್ತದೆ. ಸೃಷ್ಟಿಯನ್ನು ಸಮರ್ಥನೆ ಮಾಡುವುದಕ್ಕಾಗಿಯೇ ಸೃಷ್ಟಿಗೆ ಅಗತ್ಯವಾದ ಪೂರ್ಣಾನಂದತ್ವ ಲಕ್ಷಣವನ್ನು ಆನಂದಮಯ ಪ್ರಕರಣದಲ್ಲಿ ಪ್ರಪಂಚನ ಮಾಡಿದ್ದಾರೆ ಎಂದು ಅಭಿಪ್ರಾಯ.

ಸೃಷ್ಟ್ಯಾದ್ಯಷ್ಟಕಮಧ್ಯಸ್ಥಜ್ಞಾನಮೋಕ್ಷಪ್ರದತ್ವಯೋಃ ।
ಉಪಯುಕ್ತತಯಾ ಚೈತದ್ ದ್ವಯಂ ಸೂತ್ರಕೃತೋ ಮತಂ ॥ ೪೮ ॥

**ಅರ್ಥ–** ಸೃಷ್ಟ್ಯಾದ್ಯಷ್ಟಕಮಧ್ಯಸ್ಥಜ್ಞಾನಮೋಕ್ಷಪ್ರದತ್ವಯೋಃ= ಸೃಷ್ಟಿಕರ್ತೃತ್ವ ಮೊದಲಾದ ಎಂಟು ಧರ್ಮಗಳ ಮಧ್ಯದಲ್ಲಿ ಇರುವ ಜ್ಞಾನಪ್ರದತ್ವ ಮತ್ತು ಮೋಕ್ಷಪ್ರದತ್ವಗಳಿಗೆ ಉಪಯೋಗಿಯಾದ ಕಾರಣದಿಂದ, ಏತದ್ವಯಂ ಚ= ಈ ಸರ್ವಜ್ಞತ್ವ ಮತ್ತು ಪೂರ್ಣಾನಂದತ್ವವು, ಸೂತ್ರಕೃತಃ= ಸೂತ್ರಕಾರರಿಗೆ, ಮತಂ= ಅಭಿಪ್ರೇತವಾದುದು.

**ಅನುವಾದ–** ಜನ್ಮಾದಿ ಸೂತ್ರದಲ್ಲಿ ಹೇಳಿದ ಸೃಷ್ಟ್ಯಾದ್ಯಷ್ಟಕರ್ತೃತ್ವಗಳ ಮಧ್ಯದಲ್ಲಿ ಸೇರಿದ ಜ್ಞಾನಪ್ರದತ್ವ ಮತ್ತು ಮೋಕ್ಷಪ್ರದತ್ವಕ್ಕೆ ಸರ್ವಜ್ಞತ್ವ ಮತ್ತು ಪೂರ್ಣಾನಂದತ್ವವು ಉಪಯೋಗಿಯಾದ್ದರಿಂದ ಈ ಎರಡು ಲಕ್ಷಣಗಳು ಸೂತ್ರಕಾರರಿಗೆ ಅಭಿಪ್ರೇತವಾದವು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಮನೋಮಯ ಪ್ರಕರಣತ್ರಯೋಕ್ತ ಲಕ್ಷಣದ್ವಯಸ್ಯ ಸಂಗತಿಮಾಹ – ಸೃಷ್ಟೀತಿ ॥ ಸೃಷ್ಟ್ಯಾದ್ಯಷ್ಟಕಸ್ಯ ಸೃಷ್ಟಿಸ್ಥಿತಿಸಂಹಾರನಿಯಮನ ಜ್ಞಾನಾ-ಜ್ಞಾನಬಂಧಮೋಕ್ಷಾಖ್ಯಾಷ್ಟಕಸ್ಯ ಮಧ್ಯೇಸ್ಥಿತೌ ಯೌಜ್ಞಾನಮೋಕ್ಷೌ ತತ್ ಪ್ರದತ್ವಯೋಃ ಜ್ಞಾನಪ್ರದತ್ವಮೋಕ್ಷಪ್ರದತ್ವಾಖ್ಯಲಕ್ಷಣಯೋರಿತ್ಯರ್ಥಃ । ಏತದ್ವಯಂ ಸರ್ವಜ್ಞತ್ವಪೂರ್ಣಾ-

ನಂದಾದಿಗುಣಭರಿತತ್ವಾಖ್ಯ ಲಕ್ಷಣದ್ವಯಮ್ । ಸೂತ್ರಕೃತಃ ವ್ಯಾಸಸ್ಯ ಮತಮಭಿಪ್ರೇತಮ್ । ಸ್ವಸ್ಯ ಸರ್ವಜ್ಞತ್ವಾಭಾವೇ ಕಥಂ ಭಗವತಃ ಜ್ಞಾನಪ್ರದತ್ವಂ ಸ್ವಸ್ಯ ಪೂರ್ಣಾನಂದತ್ವಾಭಾವೇ ಕಥಂ ಪೂರ್ಣಾನಂದಾಖ್ಯ ಮೋಕ್ಷದಾತೃತ್ವಂ ಚ ಯುಕ್ತಂ ಸ್ಯಾತ್ । ಅತೋ ಜನ್ಮಾದ್ಯಷ್ಟಕಮಧ್ಯಸ್ಥೋಕ್ತ-ಲಕ್ಷಣದ್ವಯಸಮರ್ಥಕಸರ್ವಜ್ಞತ್ವಪೂರ್ಣಾನಂದತ್ವಾಖ್ಯ ಲಕ್ಷಣಯೋರಪಿ ಸೂತ್ರಕೃದಭಿಮತ-ತ್ವಾಚ್ಛ್ರುತಿರಪಿ ತತ್ ಪ್ರಪಂಚನಂ ಕೃತವತೀತಿ ಜನ್ಮಾದಿಕಾರಣತ್ವಾಖ್ಯ ಸೌತ್ರಲಕ್ಷಣಸಂಗತಿರ್ವೇತಿ ಭಾವಃ ॥ ೪೮ ॥

**ವಿವರಣೆ–** ಬೇರೆ ರೀತಿಯಿಂದಲೂ ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಪ್ರಕರಣದಿಂದ ಹೇಳಲ್ಪಟ್ಟ ಎರಡು ಲಕ್ಷಣಗಳಿಗೆ ಸಂಗತಿಯನ್ನು ಹೇಳುತ್ತಾರೆ. ಮೋಕ್ಷವು ಯಥಾಯೋಗ್ಯವಾಗಿ ಜೀವನು ಸರ್ವಜ್ಞತ್ವವನ್ನು ಮತ್ತು ಪೂರ್ಣಾನಂದತ್ವವನ್ನು ಹೊಂದಿರುವಂತಹ ಅವಸ್ಥೆ. ಅಂತಹ ಮೋಕ್ಷವನ್ನು ಕೊಡುವವನು ಪರಬ್ರಹ್ಮ. ಅವನಿಗೇ ಸರ್ವಜ್ಞತ್ವ ಇಲ್ಲದಿದ್ದರೆ ಅವನು ಇನ್ನೊಬ್ಬರಿಗೆ ಹೇಗೆ ಸರ್ವಜ್ಞತ್ವವನ್ನು ಕೊಡುತ್ತಾನೆ? ಅವನಿಗೇ ಪೂರ್ಣಾನಂದತ್ವ ಇಲ್ಲದಿದ್ದರೆ, ಅವನು ಇನ್ನೊಬ್ಬರಿಗೆ ಹೇಗೆ ಪೂರ್ಣಾನಂದತ್ವವನ್ನು ಕೊಡುತ್ತಾನೆ? ಆದ್ದರಿಂದ ಅವನು ಸರ್ವಜ್ಞನೂ ಮತ್ತು ಪೂರ್ಣಾನಂದನೂ ಆಗಿರಬೇಕೆಂದು ಈ ಎರಡು ಲಕ್ಷಣಗಳನ್ನು ಈ ಮೂರು ಪ್ರಕರಣಗಳಲ್ಲಿ ಹೇಳಿದ್ದಾರೆ. ಆದ್ದರಿಂದ ಜನ್ಮಾದಿ ಸೂತ್ರದಲ್ಲಿ ಹೇಳಿದ ಜ್ಞಾನಪ್ರದತ್ವ ಮತ್ತು ಮೋಕ್ಷಪ್ರದತ್ವಕ್ಕೆ ಈ ಎರಡು ಲಕ್ಷಣಗಳು ಉಪಯೋಗಿಯಾಗಿವೆ ಎಂದು ಅಭಿಪ್ರಾಯ.

**ವ್ಯಾಪ್ತತ್ವಸರ್ವಶಕ್ತತ್ವದಯಾಲುತ್ವಾದಿಕಾನ್ ಗುಣಾನ್ ।**
**ಸೃಷ್ಟ್ಯರ್ಥಾನ್ ಸಂಗ್ರಹೀತುಂ ಸಾ ಪ್ರಾಗನಂತಗುಣಾನ್ ಜಗೌ ॥ ೪೯ ॥**

**ಅರ್ಥ–** ಸೃಷ್ಟ್ಯರ್ಥಾನ್= ಸೃಷ್ಟಿಗೆ ಉಪಯುಕ್ತವಾದ, ವ್ಯಾಪ್ತತ್ವಸರ್ವಶಕ್ತತ್ವ ದಯಾಲುತ್ವಾದಿಕಾನ್ ಗುಣಾನ್= ವ್ಯಾಪ್ತತ್ವ, ಸರ್ವಶಕ್ತತ್ವ, ದಯಾಲುತ್ವ ಮೊದಲಾದ ಗುಣಗಳನ್ನು, ಸಂಗ್ರಹೀತುಂ= ಸಂಗ್ರಹಿಸಲು, ಸಾ= ಶ್ರುತಿಯು (ಮಂತ್ರವರ್ಣವು), ಪ್ರಾಕ್= ಮೊದಲು, ಅನಂತಗುಣಾನ್= ಅನಂತಗುಣಗಳನ್ನು, ಜಗೌ= ಹೇಳಿತು.

**ಅನುವಾದ–** ಸೃಷ್ಟಿಗೆ ಉಪಯೋಗಿಯಾದ ವ್ಯಾಪ್ತತ್ವ ಸರ್ವಶಕ್ತತ್ವ ದಯಾಲುತ್ವ ಮೊದಲಾದ ಗುಣಗಳನ್ನು ಸಂಗ್ರಹಿಸಲು ಮಂತ್ರವರ್ಣವು ಮೊದಲೇ ಅನಂತಶಬ್ದದಿಂದ ಅನಂತ ಗುಣಗಳನ್ನು ಹೇಳಿತು.

**ಭಾವವಿಲಾಸಿನೀ–** ನನು ತರ್ಹಿ ಶ್ರುತ್ಯಾಪಿ ಸತ್ಯಂ ಜ್ಞಾನಮಾನಂದಂ ಬ್ರಹ್ಮೇತ್ಯೇವವಕ್ತವ್ಯಮ್ ಅನಂತಪದೇನ ಗುಣಪೂರ್ಣತ್ವಂ ಕಿಮರ್ಥಮುಕ್ತಮಿತ್ಯತ ಆಹ – ವ್ಯಾಪ್ತತ್ವೇತಿ ॥ ಆದಿಪದೇನೇಚ್ಛಾಪ್ರಯತ್ನಾದಿಗುಣಾಃ ಸಂಗೃಹ್ಯಂತೇ । ಸೃಷ್ಟ್ಯರ್ಥಾನ್ಸೃಷ್ಟಿಪ್ರಯೋಜನಕಾನ್

ಸೃಷ್ಟ್ಯುಪಯುಕ್ತಾನಿತ್ಯರ್ಥಃ । ಪ್ರಾಕ್‌ಪ್ರಥಮಪ್ರಸ್ತಾವೇ । ಸಕಲಜಗತ್ ಪ್ರಸ್ಫೂರ್ತಿ ಸರ್ವವ್ಯಾಪ್ತತ್ವ ಸರ್ವಶಕ್ತತ್ವದಯಾಲುತ್ವಸಿಸೃಕ್ಷಾದಿ ಗುಣಾ ಅಪೇಕ್ಷಿತಾಃ । ತೇಷಾಂ ಸರ್ವೇಷಾಮಪಿ ಸಂಗ್ರಹಾಯ ಶ್ರುತಿರನಂತಪದೇನಾನಂದಾದಿಗುಣಾನಂತ್ಯಮೇವೋಕ್ತವತೀ ನತ್ವಾನಂದಮಾತ್ರಮಿತಿ ಭಾವಃ ॥ ೪೯ ॥

**ವಿವರಣೆ–** ಹಾಗಾದರೆ, ಶ್ರುತಿಯಲ್ಲಿ ಸತ್ಯಂ ಜ್ಞಾನಂ ಆನಂದಂ ಬ್ರಹ್ಮ ಎಂದು ಇರಬೇಕಾದೀತು. ಅನಂತಪದದಿಂದ ಗುಣಪೂರ್ಣತ್ವವು ಏಕೆ ಹೇಳಲ್ಪಟ್ಟಿದೆ ಎಂಬ ಶಂಕೆಗೆ ಉತ್ತರ ಹೇಳುತ್ತಾರೆ. ಸೃಷ್ಟಿಯನ್ನು ಮಾಡಬೇಕಾದರೆ ಆನಂದ ಒಂದೇ ಗುಣವು ಸಾಕಾಗುವುದಿಲ್ಲ. ಸರ್ವ ಜಗತ್ತನ್ನು ಸೃಷ್ಟಿಯನ್ನು ಮಾಡಬೇಕಾದರೆ, ಅವನು ಸರ್ವತ್ರ ವ್ಯಾಪ್ತನಾಗಿರಬೇಕು, ಅವನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿರಬೇಕು, ಅವನಿಗೆ ದಯಾಲುತ್ವವಿರಬೇಕು, ಇಚ್ಛೆ ಇರಬೇಕು, ಪ್ರಯತ್ನವಿರಬೇಕು, ಹೀಗೆ ಅನೇಕ ಧರ್ಮಗಳು ಅಪೇಕ್ಷಿತವಾದ್ದರಿಂದ ಕೇವಲ ಆನಂದಂ ಎಂದು ಹೇಳಿದರೆ ಎಲ್ಲ ಧರ್ಮಗಳ ಲಾಭವಾಗುವುದಿಲ್ಲವಾದ್ದರಿಂದ ಸೃಷ್ಟಿಗೆ ಉಪಯೋಗಿಯಾದ ಎಲ್ಲಾ ಧರ್ಮಗಳನ್ನೂ ಸಂಗ್ರಹಿಸಲು ಶ್ರುತಿಯು ಅನಂತ ಪದದಿಂದ ಎಲ್ಲಾ ಗುಣಗಳನ್ನೂ ಹೇಳಿತು ಎಂದು ಅಭಿಪ್ರಾಯ.

**ತತ್ತತ್ಪೂರ್ತ್ಯೈ ತತ್ರ ಚೈಕಂ ಗುಣಂ ಪೂರ್ಣಮವರ್ಣಯತ್ ॥ ೫೦ ॥**

**ಅರ್ಥ–** ತತ್ತತ್ಪೂರ್ತ್ಯೈ= ಆಯಾ ಗುಣಗಳು ಪೂರ್ಣವಾಗಿದೆ ಎಂದು ತೋರಿಸಲು, ತತ್ರ= ಆ ಗುಣಗಳಲ್ಲಿ, ಏಕಂ ಗುಣಂ= ಒಂದು ಗುಣವನ್ನು, ಪೂರ್ಣಮ್= ಪೂರ್ಣವೆಂದು, ಅವರ್ಣಯತ್= ವರ್ಣಿಸಿತು.

**ಅನುವಾದ–** ಆ ಎಲ್ಲ ಗುಣಗಳೂ ಪೂರ್ಣವಾಗಿವೆ ಎಂದು ತಿಳಿಸಲು ಅವುಗಳಲ್ಲಿ ಒಂದು ಗುಣವನ್ನು ಪೂರ್ಣವಾಗಿದೆ ಎಂದು ವರ್ಣಿಸಿತು.

**ಭಾವವಿಲಾಸಿನೀ–** ತರ್ಹಿ ಪ್ರಪಂಚನಸಮಯೇ ಆನಂದಮಯಪದೇನಾನಂದಮಾತ್ರಸ್ಯ ಕುತಃ ಸಂಕೀರ್ತನಮಿತ್ಯತ ಆಹ – **ತತ್ತದಿತಿ** ॥ ತತ್ತತ್‌ಪೂರ್ತ್ಯೈತೇಷಾಂಗುಣಾನಾಂ ಪೂರ್ತ್ಯೈ । ತತ್ರ ಗುಣಸಮುದಾಯೇ । ಏಕಮಾನಂದಾಖ್ಯಮ್ । ಸಕಲಗುಣಾನಾಮಪಿ ಪೃಥಕ್‌ಪೃಥಕ್‌ಪೂರ್ಣತಾ ಸಮರ್ಥನೇ ಗ್ರಂಥಗೌರವಭಿಯಾಸಕಲಗುಣಾಗ್ರೇಸರಮಾನಂದಾಖ್ಯಗುಣಂ ಗುಣಾಂತರೋಪಲಕ್ಷಣತಯಾ ಪೂರ್ಣಮವರ್ಣಯದಿತಿ ಭಾವಃ ॥ ೫೦ ॥

**ವಿವರಣೆ–** ಹಾಗಾದರೆ ಪ್ರಪಂಚನ ಸಮಯದಲ್ಲಿ ಆನಂದಮಯಶಬ್ದದಿಂದ ಕೇವಲ ಆನಂದವನ್ನು ಮಾತ್ರ ಏಕೆ ಹೇಳಿದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಇಲ್ಲಿ ಆನಂದಗುಣವನ್ನು ಹೇಳುವುದರಲ್ಲಷ್ಟೇ ತಾತ್ಪರ್ಯವಿಲ್ಲ. ಆನಂದಗುಣದಲ್ಲಿ

ಪೂರ್ಣತ್ವವನ್ನು ಹೇಳುವುದರಲ್ಲಿ ತಾತ್ಪರ್ಯ. ಆನಂದಗುಣವು ಇತರ ಗುಣಗಳಿಗೂ ಉಪಲಕ್ಷಣವಾಗಿದೆ. ಆದ್ದರಿಂದ ಎಲ್ಲಾ ಗುಣಗಳಿಗೆ ಪೂರ್ಣತ್ವವನ್ನು ಹೇಳುವುದು ಶ್ರುತಿಯ ಅಭಿಪ್ರಾಯ. ಅದರಲ್ಲಿ ಒಂದು ಗುಣವನ್ನು ಶೃಂಗಗ್ರಾಹಿತಯಾ ಪರೀಕ್ಷೆ ಮಾಡಿ ತೋರಿಸಿದೆ.

**ಜನ್ಮಾದಿಕರ್ತೃತೋಕ್ತ್ಯಾ ಚ ಸೂತ್ರಾಭಿಪ್ರೇತಲಕ್ಷಣಂ ।**
**ಗುಣಾನಂತ್ಯಂ ಕಿಲ ಹರೇಸ್ತತೋಽಪ್ಯಾನಂತ್ಯಮಾಹ ಸಾ ॥ ೫೧ ॥**

**ಅರ್ಥ–** ಚ= ಮತ್ತು, ಜನ್ಮಾದಿಕರ್ತೃತೋಕ್ತ್ಯಾ= ಜನ್ಮಾದಿ ಕರ್ತೃತ್ವವನ್ನು ಹೇಳಿದ್ದರಿಂದಲೂ ಕೂಡ, ಸೂತ್ರಾಭಿಪ್ರೇತಲಕ್ಷಣಂ= ಸೂತ್ರಗಳಿಗೆ ಅಭಿಪ್ರೇತವಾದ ಲಕ್ಷಣವು, ಹರೇಃ= ಹರಿಯ, ಗುಣಾನಂತ್ಯಂ ಕಿಲ= ಗುಣಪೂರ್ಣತ್ವವಷ್ಟೇ, ತತೋಽಪಿ= ಆ ಕಾರಣದಿಂದಲೂ, ಸಾ= ಆ ಶ್ರುತಿಯು, ಆನಂತ್ಯ= ಅನಂತತ್ವವನ್ನು, ಆಹ= ಹೇಳಿತು.

**ಅನುವಾದ–** ಸೂತ್ರಕ್ಕೆ ಅಭಿಮತವಾದ ಹರಿಯ ಲಕ್ಷಣವೆಂದರೆ ಅನಂತಗುಣಪೂರ್ಣತ್ವ. ಸೂತ್ರದಲ್ಲಿ ಜನ್ಮಾದಿಕರ್ತೃತ್ವ ರೂಪಲಕ್ಷಣವನ್ನು ಹೇಳಿರುವುದೂ ಸಹ, ಹರಿಯ ಅನಂತಗುಣಪೂರ್ಣತ್ವದ ಸಿದ್ಧಿಗಾಗಿ. ಆ ಕಾರಣದಿಂದಲೂ ಸಹ ಅನಂತಂ ಎಂದು ಶ್ರುತಿಯು ಗುಣಾನಂತ್ಯವನ್ನೇ ಹೇಳಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಗುಣಾನಂತ್ಯಕಥನಸ್ಯೋಪಯೋಗಮಾಹ–**ಜನ್ಮಾದೀತಿ॥** ಸೂತ್ರಾಭಿಪ್ರೇತಲಕ್ಷಣಂ ಜನ್ಮಾದಿಸೂತ್ರಾಭಿಪ್ರೇತಲಕ್ಷಣಂ ಹರೇರ್ಗುಣಾನಂತ್ಯಂ ಕಿಲೇತಿ ಯೋಜನಾ । ಆದಿಸೂತ್ರೇ ಪೂರ್ಣತ್ವಾಭಿಧಾಯಕ ಬ್ರಹ್ಮಪದಪ್ರಯೋಗಾತ್ ಉತ್ತರತ್ರಚಾಧ್ಯಾಯ ಶೇಷೇಣ ಸಕಲಪದಸಮನ್ವಯದ್ವಾರಾಽನಂತಪದವಾಚ್ಯಾನಂತ-ಗುಣಪೂರ್ಣತ್ವಸ್ಯೈವ ಸಮರ್ಥನಾಚ್ಚ ಸೂತ್ರಕೃತೋಽಪ್ಯನಂತಗುಣಪೂರ್ಣತ್ವಮೇವ ಬ್ರಹ್ಮಲಕ್ಷಣ-ಮಭಿಮತಮ್ । ಜನ್ಮಾದಿಕಾರಣತ್ವಲಕ್ಷಣಂ ತು ತಸ್ಯಾಸಂಭಾವನಾಪರಿಹಾರಾಯ ಸಂಭಾವ-ಕತಯೋಕ್ತಮಿತಿ ಪ್ರಾಚಾಂ ಸಂಪ್ರದಾಯಂ ಕಿಲೇತ್ಯನೇನ ಸ್ಮಾರಯತಿ । ತತೋಽಪ್ಯುಕ್ತ ವಿಧಯಾ ಮುಖ್ಯಲಕ್ಷಣತ್ವಾದಪಿ । ಆನಂತ್ಯಂ ಗುಣಾನಂತ್ಯಮ್ । ಸಾ ಮಂತ್ರವರ್ಣಶ್ರುತಿಃ ॥ ೫೧ ॥

**ವಿವರಣೆ–** ರೀತ್ಯಂತರದಿಂದ ಶ್ರುತಿಯು ಗುಣಾನಂತ್ಯವನ್ನು ಹೇಳುವುದಕ್ಕೆ ಉಪಯೋಗವನ್ನು ಇಲ್ಲಿ ಸಮರ್ಥಿಸುತ್ತಾರೆ. ಬ್ರಹ್ಮನ ಲಕ್ಷಣವೆಂದರೆ ಅನಂತ-ಗುಣಪೂರ್ಣತ್ವ. ಅದು ಅಸಂಭಾವಿತವೆಂದು ತೋರಿದಾಗ, ಅಸಂಭಾವನಾ ಶಂಕೆಯನ್ನು ನಿವೃತ್ತಿ ಮಾಡಲು ಸೂತ್ರಕಾರರು ಜನ್ಮಾದಿಕಾರಣತ್ವವನ್ನು ಲಕ್ಷಣವಾಗಿ ಹೇಳಿದ್ದಾರೆ. ಆದ್ದರಿಂದ ಜನ್ಮಾದಿ ಕಾರಣತ್ವಲಕ್ಷಣವನ್ನು ಹೇಳಿರುವ ಉದ್ದೇಶವೂ ಸಹ ಅನಂತಗುಣ-ಪೂರ್ಣತ್ವವನ್ನು ಸಿದ್ಧಿ ಮಾಡುವುದಕ್ಕಾಗಿಯೇ. ಆದ್ದರಿಂದಲೂ ಸಹ ಅನಂತಂ ಎಂಬ

ಶಬ್ದವು ಪರಮಪ್ರಯೋಜನವಾದ ಅನಂತಗುಣಪೂರ್ಣತ್ವವನ್ನು ಸಮರ್ಥನೆ ಮಾಡುವುದಕ್ಕಾಗಿಯೇ ಇದೆ ಎಂದು ಅಭಿಪ್ರಾಯ.

**ಯದ್ಯಪ್ಯೇಕೈಕಸುಗುಣಸಂಪೂರ್ತಿರಪಿ ಲಕ್ಷಣಂ ।**
**ಜೀವಾತ್ಯಂತವಿಭೇದಾಯ ತಥಾಪಿ ಬಹುಕೀರ್ತನಂ ॥ ೫೨ ॥**

**ಅರ್ಥ–** ಏಕೈಕಸುಗುಣಸಂಪೂರ್ತಿರಪಿ= ಒಂದೊಂದು ಶೋಭನವಾದ ಗುಣದ ಪೂರ್ಣತ್ವವೂ ಸಹ, ಯದ್ಯಪಿ= ಯದ್ಯಪಿ, ಲಕ್ಷಣಂ= ಬ್ರಹ್ಮನ ಲಕ್ಷಣವಾಗುತ್ತದೆ, ತಥಾಪಿ= ಆದರೂ ಕೂಡ, ಜೀವಾತ್ಯಂತವಿಭೇದಾಯ= ಜೀವನಿಂದ ಅತ್ಯಂತ ಭೇದದ ಸಿದ್ಧಿಗಾಗಿ, ಬಹುಕೀರ್ತನಂ= ಶ್ರುತಿಯಲ್ಲಿ ಬಹುಗುಣಗಳ ಕೀರ್ತನೆ ಇದೆ.

**ಅನುವಾದ–** ಯದ್ಯಪಿ ಒಂದೊಂದು ಗುಣದ ಪೂರ್ಣತ್ವವನ್ನು ಹೇಳಿದರೂ ಅದು ಬ್ರಹ್ಮನ ಲಕ್ಷಣವಾಗುತ್ತದೆ. ಆದರೂ ಜೀವರಿಂದ ಅತ್ಯಂತ ಭೇದವನ್ನು ಸಮರ್ಥನೆ ಮಾಡಲು, ಅನೇಕ ಗುಣಗಳನ್ನೂ, ಅದರ ಪೂರ್ಣತ್ವವನ್ನೂ ಹೇಳಲಾಗಿದೆ.

**ಭಾವವಿಲಾಸಿನೀ–** ನನ್ವನಂತಗುಣಪೂರ್ಣತ್ವಂ ಲಕ್ಷಣಮಿತಿ ವದತೋಽಪಿ ಏಕೈಕ ಗುಣಪೂರ್ಣತ್ವಮಪಿ ಲಕ್ಷಣಮಭಿಪ್ರೇತಮ್ । ಆನಂದಾಖ್ಯಗುಣಪೂರ್ಣತ್ವಮಾತ್ರಸ್ಯಾಪಿ ಭಗವತೋಽನ್ಯತ್ರಾ-ಭಾವೇನಾತಿವ್ಯಾಪ್ತ್ಯಾದಿದೋಷಾಭಾವಾತ್ । ಏವಂ ಚಾನಂತಗುಣಪೂರ್ಣತ್ವಂ ವದಂತ್ಯಾಽನಂತಶ್ರುತ್ಯಾಽನಂತಲಕ್ಷಣಾನಿ ಕಿಮರ್ಥಮಭಿಹಿತಾನೀತ್ಯತ ಆಹ – ಯದ್ಯಪೀತಿ ॥ ತಥಾಪ್ಯೇಕೈಕಗುಣ ಪೂರ್ತೇರ್ಲಕ್ಷಣತ್ವೇಪಿ ಜೀವೇಭ್ಯೋಽತ್ಯಂತ ವಿಭೇದಾಯಾತ್ಯಂತ- ವೈಲಕ್ಷಣ-ಕ್ಷಣ್ಯಾಯೇತ್ಯರ್ಥಃ । ಬಹುಕೀರ್ತನಂ ಬಹುಲಕ್ಷಣಕಥನಮ್ । ಏಕೈಕ ಲಕ್ಷಣೇನ ಭಗವತಃ ಸಜಾತೀಯ ವಿಜಾತೀಯ ವ್ಯಾವೃತ್ತಿಸಿದ್ಧಾವಪ್ಯನಂತಪ್ರಕಾರೈರ್ಜೀವೇಭ್ಯೋಽತ್ಯಂತವೈಲಕ್ಷಣ್ಯ-ಬೋಧನಾಯಾನಂತಗುಣಪೂರ್ಣತ್ವಾಖ್ಯ ಲಕ್ಷಣ ಕಥನಮಿತಿ ಭಾವಃ ॥ ೫೨ ॥

**ವಿವರಣೆ–** ಅನಂತಗುಣಪೂರ್ಣತ್ವ ಒಂದು ಲಕ್ಷಣವೆಂದು ಹೇಳಿದರೂ, ಏಕೈಕ ಗುಣಪೂರ್ಣತ್ವವೂ ಲಕ್ಷಣವೆಂದು ಸೂತ್ರಕಾರರಿಗೆ ಅಭಿಪ್ರೇತವಾದುದು. ಈ ಏಕೈಕ ಗುಣಪೂರ್ಣತ್ವರೂಪಲಕ್ಷಣಕ್ಕೆ ಜೀವನಲ್ಲಿ ಅತಿ ವ್ಯಾಪ್ತಿಯು ಇಲ್ಲದಿರುವಾಗ ಅನಂತ ಲಕ್ಷಣಗಳನ್ನು ಒದಗಿಸಲು, ಅನಂತಗುಣಪೂರ್ಣತ್ವವನ್ನು ಏಕೆ ಹೇಳಬೇಕು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಯದ್ಯಪಿ ಒಂದೇ ಗುಣದ ಪೂರ್ತಿಯನ್ನು ಹೇಳಿದರೂ ಜೀವ ಭೇದವು ಸಿದ್ಧವಾಗುತ್ತದೆ. ಆದರೂ ಜೀವ-ಜಡಗಳಿಂದ ಬ್ರಹ್ಮನು ಅತ್ಯಂತ ಭಿನ್ನ ಎಂದು ದೃಢವಾಗಿ ಸಮರ್ಥನೆ ಮಾಡಲು, ಅನೇಕ ಗುಣಗಳ ಪೂರ್ಣತ್ವವನ್ನು ಉಪಪಾದನೆ ಮಾಡಿದರೆ ಜೀವ-ಜಡಾತ್ಮಕವಾದ ಪ್ರಪಂಚಕ್ಕಿಂತ ಬ್ರಹ್ಮನು ಅತ್ಯಂತ ಭಿನ್ನನೆಂದು ಸಿದ್ಧವಾಗುತ್ತದೆ. ಆದ್ದರಿಂದ ಅನಂತಗುಣಪೂರ್ಣತ್ವದ ವಚನವು ವ್ಯರ್ಥವಲ್ಲ ಎಂದು ಅಭಿಪ್ರಾಯ.

**ಪೃಥಕ್ ಪೃಥಗ್ ಲಕ್ಷಣತಾಂ ವಕ್ತುಂ ವಾನಂತವಿಸ್ತೃತೇಃ ।**
**ಅಶಕ್ತ್ಯಾ ವಾ ಸರ್ವಶುದ್ಧ್ಯೈ ತತ್ರಾದ್ಯಗುಣಶೋಧನಂ ॥ ೫೩ ॥**

**ಅರ್ಥ–** ಅನಂತವಿಸ್ತೃತೇಃ= ಅನಂತಗುಣ ವಿಸ್ತಾರವನ್ನು ಹೊಂದಿರುವುದರಿಂದ, ಪೃಥಕ್ ಪೃಥಕ್= ಬೇರೆ ಬೇರೆಯಾಗಿ, ಲಕ್ಷಣತಾಂ=ಲಕ್ಷಣವನ್ನು, ವಕ್ತುಂ= ಹೇಳಲು, ಅಶಕ್ತ್ಯಾವಾ= ಅಶಕ್ಯವಾದುದರಿಂದ, ಸರ್ವಶುದ್ಧ್ಯೈ= ಎಲ್ಲಾ ಗುಣಗಳ ಪೂರ್ಣತ್ವದ ಶುದ್ಧಿಗಾಗಿ, ತತ್ರ= ಆ ಗುಣಗಳಲ್ಲಿ, ಆದ್ಯಗುಣಶೋಧನಂ= ಪ್ರಧಾನವಾದ ಆನಂದಗುಣವನ್ನು ಶೋಧನೆ ಮಾಡಲಾಗಿದೆ.

**ಅನುವಾದ–** ಅಥವಾ ಬ್ರಹ್ಮನು ಅನಂತಗುಣಗಳಿಂದ ಕೂಡಿರುವುದರಿಂದ ಪ್ರತಿಯೊಂದು ಗುಣಕ್ಕೂ ಲಕ್ಷಣತ್ವವನ್ನು ಹೇಳಲು ಅಶಕ್ಯವಾದ್ದರಿಂದ, ಆ ಗುಣಸಮುದಾಯದಲ್ಲಿ ಮೊದಲನೆಯ ಅಂದರೆ ಶ್ರೇಷ್ಠವಾದ ಆನಂದ ಗುಣವನ್ನು ತೆಗೆದುಕೊಂಡು ಅದನ್ನು ಶ್ರುತಿಯು ಪರೀಕ್ಷೆಯಿಂದ ಶೋಧಿಸಿದೆ.

**ಭಾವವಿಲಾಸಿನೀ–** ಉಪಾದಾನೇ ಏಕಗುಣಸಂಗ್ರಹಸ್ಯೋಕ್ತಾನುವಾದಪೂರ್ವಕಂ ಪ್ರಯೋಜನಾಂತರಮಪ್ಯಾಹ – **ಪೃಥಕ್ ಪೃಥಗಿತಿ** ॥ ಪೃಥಕ್‌ಪೃಥಕ್ ಲಕ್ಷಣತಾಂ ಏಕೈಕ ಗುಣಪೂರ್ತೇರಪಿ ಲಕ್ಷಣತಾಂ ವಕ್ತುಂ ವೇತ್ಯೇಕಂ ನಿಮಿತ್ತಮ್ । ಅನಂತವಿಸ್ತೃತೇಃ ಅನಂತಗುಣಪೂರ್ಣತ್ವವಿಸ್ತಾರಸ್ಯಾಶಕ್ತ್ಯಾವೇತ್ಯಪರಮ್ । ಸರ್ವಶುದ್ಧ್ಯೈ ಸರ್ವೇಷಾಂ ಗುಣಾನಾಂ ಪೂರ್ಣತ್ವ ಶೋಧನಾಯ । ತತ್ರ ಗುಣಸಮುದಾಯೇ ಆದ್ಯಗುಣ ಆನಂದಃ ॥ ೫೩ ॥

**ವಿವರಣೆ–** ಆನಂದಮಯ ಪ್ರಕರಣದಲ್ಲಿ ಒಂದೇ ಗುಣವನ್ನು ತೆಗೆದುಕೊಳ್ಳುವುದಕ್ಕೆ ಇನ್ನೊಂದು ಪ್ರಯೋಜನವನ್ನು ಇಲ್ಲಿ ಹೇಳುತ್ತಾರೆ. ಅನಂತಗುಣಗಳನ್ನು ಪ್ರಾತಿಸ್ವಿಕವಾಗಿ ಹೇಳಲು ಸಾಧ್ಯವಿಲ್ಲ. ಆ ಕಾರಣದಿಂದ ಇಲ್ಲಿ ಒಂದೇ ಗುಣವನ್ನು ತೆಗೆದುಕೊಂಡು ಚರ್ಚೆ ಮಾಡಿದ್ದಾರೆ. ಅದರ ಪ್ರಯೋಜನ ಎಲ್ಲಾ ಗುಣಗಳ ಪೂರ್ಣತ್ವಲಾಭ ಎಂದು ಅಭಿಪ್ರಾಯ.

**ಗುಣಾಃ ಸರ್ವೇಽಪಿ ಸಿದ್ಧಾಃ ಸ್ಯುರಾನಂದಸ್ಯ ಪ್ರಪಂಚನೇ ।**
**ಇತ್ಯಾನಂದಮಯಂ ಸ್ತೌತಿ ಸರ್ವೇಯಂ ವಾಽಂತಿಮಸ್ತುತಿಃ ।**
**ಯದಿಯಂ ಷಟ್ಪ್ರಕರಣೇ ಗುಣಾನೇವಾಗೃಣಾತ್ ಪ್ರಭೋಃ ॥ ೫೪ ॥**

**ಅರ್ಥ–** ಆನಂದಸ್ಯ= ಆನಂದವನ್ನು, ಪ್ರಪಂಚನೇ= ವಿಸ್ತಾರವಾಗಿ ಹೇಳಿದರೆ, ಸರ್ವೇ ಗುಣಾ ಅಪಿ= ಎಲ್ಲ ಗುಣಗಳು, ಸಿದ್ಧಾಃ= ಸಿದ್ಧವಾಗುತ್ತವೆ, ಇತಿ= ಎಂದು, ವಾ= ಅಥವಾ, ಆನಂದಮಯಂ ಸ್ತೌತಿ= ಆನಂದಮಯವನ್ನು ಸ್ತೋತ್ರಮಾಡುತ್ತದೆ, ಇಯಂ= ಈ ಆನಂದಮಯ ಸ್ತೋತ್ರವು, ಅಂತಿಮಸ್ತುತಿಃ= ಕೊನೆಯಲ್ಲಿ ಹೇಳಿದ ಅನಂತ ಎಂಬ ಲಕ್ಷಣಪ್ರತಿಪಾದ್ಯನಾದ ಬ್ರಹ್ಮನ ಸ್ತುತಿಯಾಗಿದೆ, ಯತ್= ಏಕೆಂದರೆ, ಇಯಂ ಷಟ್ಪ್ರಕರಣೇ=

ಈ ಆರು ಪ್ರಕರಣಗಳು, ಪ್ರಭೋಃ= ಪ್ರಭುವಾದ ಪರಮಾತ್ಮನ, ಗುಣಾನೇವ= ಗುಣಗಳನ್ನೇ, ಅಗೃಣಾತ್= ಸ್ತೋತ್ರಮಾಡಿದೆ.

**ಅನುವಾದ–** ಆನಂದವನ್ನು ಪ್ರಪಂಚನ ಮಾಡಿದರೆ ಎಲ್ಲಾ ಗುಣಗಳೂ ಸಿದ್ಧವಾಗುತ್ತವೆ ಎಂದು ಈ ಆರುಪ್ರಕರಣ ರೂಪವಾದ ಸಕಲವಾದ ಉಪನಿಷತ್ತು ಅಂತಿಮವಾದ ಅನಂತ ಪದದಿಂದ ಹೇಳಲ್ಪಟ್ಟ ಆನಂದಗುಣವನ್ನೇ ಸ್ತೋತ್ರಮಾಡುತ್ತದೆ. ಏಕೆಂದರೆ ಈ ಆರು ಪ್ರಕರಣಗಳಲ್ಲಿಯೂ ಪ್ರಭುವಾದ ಹರಿಯ ಗುಣಗಳನ್ನೇ ಹೇಳಲ್ಪಟ್ಟಿವೆ.

**ಭಾವವಿಲಾಸಿನೀ–** ತದೇವವಿಶದಯತಿ **– ಗುಣಾ ಇತಿ** ॥ ಇತ್ಯನೇನ ಹೇತುನಾ । ಸರ್ವಾ ಆತ್ಮನ ಆಕಾಶ ಇತ್ಯಾದಿಕಾ ಆನಂದಮಯಪ್ರಪಂಚನಾಂತಾ ಷಟ್‌ಪ್ರಕರಣೀಯಂ ಶ್ರುತಿಃ ಅಂತಿಮಸ್ತುತಿಃ ಅಂತಿಮಸ್ಯ ಅನಂತಪದೋಕ್ತಾಂತಿಮಲಕ್ಷಣಸ್ಯಸ್ತುತಿರ್ವಾ ಪ್ರಪಂಚನ-ರೂಪಾವೇತ್ಯರ್ಥಃ । ಯದ್ಯಸ್ಮಾತ್ ಗುಣಾನ್ ಜಗತ್‌ಸ್ರಷ್ಟೃತ್ವಾದಿಗುಣಾನ್ ಅಗೃಣಾತ್ ಅಸ್ತೌದಿತಿ ಯೋಜನಾ । ಸತ್ಯಪದೋದಿತಂ ಪ್ರಥಮಲಕ್ಷಣಂ ಪ್ರಕರಣತ್ರಯೇಣ ಪ್ರಾಕ್-ಪ್ರತಿಪಾದ್ಯಜ್ಞಾನಪದೋಕ್ತದ್ವಿತೀಯಲಕ್ಷಣಂ ಪ್ರಕರಣದ್ವಯೇನ ತದನಂತರಂ ಪ್ರತಿಪಾದ್ಯ ಪುನರನಂತಪದೋದಿತ ಸಕಲಗುಣಪೂರ್ಣತಾಂ ಪ್ರತಿಪಾದಯಿತುಂ ಷಷ್ಠಪ್ರಕರಣಾಂತಾ ಸರ್ವಾಪೀಯಂ ಶ್ರುತಿಃ ಸಿಂಹಾವಲೋಕನನ್ಯಾಯೇನ ಪ್ರವೃತ್ತಾ । ಪಂಚಷಾನ್ ಗುಣಾನ್ ಪ್ರಸ್ತಾವ್ಯೇಯಮೇವ ದಿಗನ್ಯತ್ರಾಪೀತ್ಯುಪರತಾಚ । ಅತಃ ಪ್ರಸ್ತಾವಪ್ರಪಂಚನ- ಯೋರ್ನ ವೈಷಮ್ಯಮಿತಿ ಭಾವಃ ॥ ೫೪ ॥

**ವಿವರಣೆ–** ಅನಂತಪದದಿಂದ ಹೇಳಲ್ಪಟ್ಟ ಎಲ್ಲ ಗುಣಗಳೂ ಈ ಆರು ಪ್ರಕರಣಗಳಲ್ಲಿ ಸಿದ್ಧವಾಗುವುದೆಂದು ಇಲ್ಲಿ ಸಮರ್ಥನೆ ಮಾಡುತ್ತಾರೆ. ಸತ್ಯಪದದಿಂದ ಹೇಳಲ್ಪಟ್ಟ ಪ್ರಥಮ ಲಕ್ಷಣವನ್ನು ಸೃಷ್ಟಿ ಪ್ರಕರಣ, ಅನ್ನಮಯ ಪ್ರಕರಣ ಮತ್ತು ಪ್ರಾಣಮಯ ಪ್ರಕರಣಗಳು ವಿಸ್ತರಿಸುತ್ತವೆ. ಜ್ಞಾನಪದದಿಂದ ಹೇಳಲ್ಪಟ್ಟ ಸರ್ವಜ್ಞತ್ವರೂಪವಾದ ದ್ವಿತೀಯ ಲಕ್ಷಣವನ್ನು ಮನೋಮಯ ಪ್ರಕರಣ ಮತ್ತು ವಿಜ್ಞಾನಮಯ ಪ್ರಕರಣಗಳು ಪ್ರತಿಪಾದನೆ ಮಾಡುತ್ತವೆ. ಪುನಃ ಅನಂತಪದೋದಿತವಾದ ಅನಂತತ್ವರೂಪವಾದ ಎಂದರೆ ಆನಂದಾದಿ ಸಕಲಗುಣಪೂರ್ಣತ್ವರೂಪವಾದ ಲಕ್ಷಣವನ್ನು ಪ್ರತಿಪಾದನೆ ಮಾಡಲು ಈ ಆನಂದಮಯ ಪ್ರಕರಣವು ಪ್ರವೃತ್ತವಾಗಿದೆ. ಆನಂದಮಯ ಪ್ರಕರಣವಾದರೂ ಐದಾರು ಗುಣಗಳನ್ನು ಪ್ರಸ್ತಾವನೆ ಮಾಡಿ, ಬೇರೆ ಗುಣಗಳ ಶೋಧನೆಯಲ್ಲಿಯೂ ಇದೇ ರೀತಿ ಅನುಸರಿಸಬೇಕು ಎಂದು ಮಾರ್ಗವನ್ನು ತೋರಿಸಿದೆ. ಆದ್ದರಿಂದ ಪ್ರಸ್ತಾವನೆಗೂ, ಪ್ರಪಂಚನೆಗೂ ವೈಷಮ್ಯವಿಲ್ಲವೆಂದು ಅಭಿಪ್ರಾಯ.

ಸಾಕಾರತ್ವವಿದುಃಖತ್ವಾಪ್ರಾಕೃತತಾಸ್ಥಿತಾದಯಃ ।
ಏಕೈಕಾಂಗಬೃಹತ್ತ್ವಾದ್ಯಾಃ ಕಿಂ ನ ಸಿದ್ಧ್ಯಂತಿ ತತ್ ಸ್ತುತೌ ।
ಯತಃ ಪ್ರಿಯಶಿರಸ್ತ್ವಾದ್ಯಾ ಅಪಿ ತಸ್ಯ ಸ್ತುತೌ ಸ್ತುತಾಃ ॥ ೫೫ ॥

**ಅರ್ಥ–** ತತ್‌ಸ್ತುತೌ= ಆನಂದಮಯನ ಪಾದವನ್ನು ಸ್ತೋತ್ರಮಾಡಿದರೆ, ಸಾಕಾರತ್ವವಿದುಃಖತ್ವ ಅಪ್ರಾಕೃತತ್ವಾಸ್ತಿತಾದಯಃ= ಸಾಕಾರತ್ವ, ದುಃಖರಹಿತತ್ವ, ಅಪ್ರಾಕೃತತ್ವ, ಅಸ್ತಿತ್ವ ಮೊದಲಾದ ಗುಣಗಳು, ಏಕೈಕಾಂಗಬೃಹತ್ತ್ವಾದ್ಯಾಃ= ಒಂದೊಂದು ಅವಯವದ ಪೂರ್ಣತ್ವಾದಿ ಗುಣಗಳೂ ಸಹ, ಕಿಂ ನ ಸಿದ್ಧ್ಯಂತಿ= ಸಿದ್ಧವಾಗುವುದಿಲ್ಲವೇನು? ಯತಃ= ಏಕೆಂದರೆ, ತಸ್ಯ ಸ್ತುತೌ= ಆ ಪಾದದ ಸ್ತುತಿಯಲ್ಲಿಯೇ, ಪ್ರಿಯಶಿರಸ್ತ್ವಾದ್ಯಾಃ ಅಪಿ= ಪ್ರಿಯಶಿರಸ್ತ್ವಾದಿ ಗುಣಗಳೂ ಸಹ, ಸ್ತುತಾಃ= ಸ್ತೋತ್ರ ಮಾಡಲ್ಪಟ್ಟಿದೆ.

**ಅನುವಾದ– ಆನಂದಮಯನ ಪಾದರೂಪನಾದ ಬ್ರಹ್ಮನನ್ನು ಸ್ತೋತ್ರ ಮಾಡಿದರೂ, ಸಾಕಾರತ್ವ ದುಃಖರಹಿತತ್ವ, ಅಪ್ರಾಕೃತತ್ವ, ಅಸ್ತಿತ್ವ, ಏಕೈಕಾವಯವಬೃಹತ್ತ್ವ ಮೊದಲಾದ ಗುಣಗಳು ಸಿದ್ಧಿಸುವುದಿಲ್ಲವೇ? ಏಕೆಂದರೆ ಅದೇ ಸ್ತುತಿಯಲ್ಲಿ ಪ್ರಿಯಶಿರಸ್ತ್ವಾದಿ ಗುಣಗಳು ಹೇಳಲ್ಪಟ್ಟಿದೆ.**

**ಭಾವವಿಲಾಸಿನೀ–** ಕಿಂ ಚಾಸ್ಯಾಂ ಷಟ್‌ಪ್ರಕರಣ್ಯಾಮಾನುಷಂಗಿಕತಯಾ ಗುಣಾಂತರಸ್ತುತಿರಪ್ಯಸ್ತಿ । ಅತೋಽಪಿ ನ ಪ್ರಸ್ತಾವಪ್ರಪಂಚಯೋರ್ವೈಷಮ್ಯಮಿತ್ಯಾಹ – **ಸಾಕಾರತ್ವೇತಿ** ॥ ಅನ್ನಮಯಾದಿ ಪಂಚ ರೂಪಾಣಾಮಪಿ ತಸ್ಯೇದಮೇವಶಿರ ಇತ್ಯಾದಿನಾ ಶಿರಃ ಪಾಣ್ಯಾದ್ಯವಯವಸಮರ್ಥನಾತ್ ಸ ವಾ ಏಷ ಪುರುಷವಿಧ ಏವೇತ್ಯಾದಿನಾ ಸ್ಪಷ್ಟಂ ಪುರುಷವಿಧತ್ವೋಕ್ತ್ಯಾ ಚ ಸಾಕಾರತ್ವಮ್ । ಪ್ರಿಯಮೇವೇತ್ಯವಧಾರಣಾತ್ ವಿದುಃಖತ್ವಮ್ । ಆನಂದರೂಪತ್ವಕಥನಾದಪ್ರಾಕೃತತ್ವಮ್ । ಅಸ್ತಿಬ್ರಹ್ಮೇತಿ ಚೇದ್ವೇದೇತಿ ಅಸ್ತಿತಾ । ಆದಿಪದೇನಾತ್ಮಬ್ರಹ್ಮಾಕಾಶಾದಿ ಪದಬೋಧ್ಯಗುಣಾಃ । ಅನ್ನಂ ಹಿ ಭೂತಾನಾಂ ಜ್ಯೇಷ್ಠಮಿತ್ಯತ್ರೋಕ್ತಭೂತಜ್ಯೇಷ್ಠತ್ವಂ ವಿಜ್ಞಾನಂದೇವಾಃ ಸರ್ವೇ ಬ್ರಹ್ಮಜ್ಯೇಷ್ಠಮುಪಾಸತ ಇತ್ಯತ್ರೋಕ್ತದೇವಜ್ಯೇಷ್ಠತ್ವದೇವೋಪಾಸ್ಯತ್ವೇ । ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹೇತ್ಯತ್ರೋಕ್ತ ವಾಙ್ಮನಸಾಗೋಚರತ್ವಂ ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್‌ಕಾಮಾನ್ ಸಮಶ್ನುತ ಇತ್ಯತ್ರಪಾಪನಾಶಕತ್ವಸರ್ವಕಾಮಪ್ರದತ್ವಾದಯೋ ಗುಣಾಶ್ಚ ಸಂಗ್ರಾಹ್ಯಾಃ । ಬ್ರಹ್ಮಪುಚ್ಛಮಿತಿ ಪುಚ್ಛಪದೋಕ್ತಪಾದಸ್ಯ ಪೂರ್ಣತ್ವೋಕ್ತ್ಯಾಽರ್ಥಾತ್ ಸರ್ವಾವಯವಾನಾಮಪಿ ಬೃಹತ್ತ್ವಲಾಭಾತ್ ಏಕೈಕಾಂಗಬೃಹತ್ತ್ವಾದ್ಯಾ ಇತ್ಯುಕ್ತಮ್ । ಅತ್ರಾಪ್ಯಾದ್ಯಪದೇನ ಮುದಃ ಪ್ರಮುದ ಆಸತ ಇತ್ಯಾದಿನೋಕ್ತಮುದಾದಿ ರೂಪತ್ವಂ ಗ್ರಾಹ್ಯಮ್ । ತತ್ಸ್ತುತೌ ಪಾದಸ್ತುತೌ । ನನ್ವಿದಮಾನಂದಮಯೇ ನ ಶ್ರೂಯತ ಇತ್ಯತ ಆಹ – **ಯತ ಇತಿ** ॥ ಯತಃ ಯಸ್ಮಾತ್ । ತಸ್ಯಾಽನಂದಮಯಸ್ಯ । ಅತ್ರಾಪ್ಯಾದ್ಯಪದೇನ ಮೋದದಕ್ಷಿಣಪಕ್ಷತ್ವಾದಿಕಂ ಗ್ರಾಹ್ಯಮ್ ॥ ೫೫ ॥

**ವಿವರಣೆ–** ಅನ್ನಮಯಾದಿ ಪ್ರಕರಣಗಳಿಂದ ಸಿದ್ಧವಾಗುವ ಗುಣಗಳನ್ನು ಇಲ್ಲಿ ನಿರೂಪಿಸುತ್ತಾರೆ. ಅನ್ನಮಯಾದಿ ಐದು ಪ್ರಕರಣಗಳಲ್ಲಿಯೂ 'ತಸ್ಯ ಇದಮೇವ ಶಿರಃ' ಎಂಬ ವಾಕ್ಯವು ಇರುವುದರಿಂದ ಸಾಕಾರತ್ವವು ಸಿದ್ಧವಾಗುತ್ತದೆ. 'ತಸ್ಯ ಪ್ರಿಯಮೇವ ಶಿರಃ' ಎಂಬಲ್ಲಿರುವ ಏವಕಾರದಿಂದ ದುಃಖರಾಹಿತ್ಯವು ಸಿದ್ಧವಾಗುತ್ತದೆ. ಆನಂದರೂಪತ್ವವನ್ನು

ಹೇಳುವುದರಿಂದ ಅಪ್ರಾಕೃತತ್ವವು ಸಿದ್ಧವಾಗುತ್ತದೆ. ಅಸ್ತಿಬ್ರಹ್ಮೇತಿಚೇದ್ವೇದ ಎಂಬ ಮಂತ್ರದಿಂದ ಅಸ್ತಿತ್ವವು ಸಿದ್ಧವಾಗುತ್ತದೆ. ಆದಿ ಪದದಿಂದ ಆತ್ಮಾ, ಬ್ರಹ್ಮ, ಆಕಾಶ ಮೊದಲಾದ ಪದಗಳಿಂದ ಬೋಧ್ಯವಾದ ಗುಣಗಳು ಲಭ್ಯವಾಗುತ್ತವೆ. ಅನ್ನಂಹಿ ಭೂತಾನಾಂ ಜ್ಯೇಷ್ಠಂ ಎಂಬಲ್ಲಿ ಸರ್ವಭೂತೋತ್ತಮತ್ವವು ಲಭ್ಯವಾಗುತ್ತದೆ. ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ' ಎಂಬಲ್ಲಿ ದೇವಜ್ಯೇಷ್ಠತ್ವವು ಮತ್ತು ದೇವೋಪಾಸ್ಯತ್ವವು ಸಿದ್ಧವಾಗುತ್ತದೆ. 'ಯತೋ ವಾಚೋ ನಿರ್ವತಂತೇ' ಎಂಬಲ್ಲಿ ವಾಙ್ಮನಸಾಗೋಚರತ್ವವು ಸಿದ್ಧವಾಗುತ್ತದೆ. 'ಶರೀರೇ ಪಾಪ್ಮನೋ ಹಿತ್ವಾ' ಎಂಬಲ್ಲಿ ಪಾಪನಾಶಕತ್ವವು ಸಿದ್ಧವಾಗುತ್ತದೆ. 'ಸವಾನ್ ಕಾಮಾನ್ ಸಮಶ್ನುತೇ' ಎಂಬಲ್ಲಿ ಕಾಮಪ್ರದತ್ವವು ಸಿದ್ಧವಾಗುತ್ತದೆ. 'ಬ್ರಹ್ಮಪುಚ್ಛಂ' ಎಂಬ ವಾಕ್ಯದಿಂದ ಪುಚ್ಛವೇ ಪೂರ್ಣವಾಗಿರುವುದರಿಂದ ಸರ್ವಾಯವಗಳೂ ಪೂರ್ಣವಾಗಿವೆ ಎಂದು ಸಿದ್ಧವಾಗುತ್ತದೆ ಮತ್ತು ಎಲ್ಲಾ ಅವಯವಗಳೂ ಶಾಖಾಂತರದಲ್ಲಿ 'ಮುದಃಪ್ರಮುದ ಆಸತೇ' ಎಂಬಲ್ಲಿ ಹೇಳಿದಂತೆ ಮುದಾದಿರೂಪವು ಎಂದು ತಿಳಿಯುತ್ತದೆ. ಹೀಗೆ ಅನೇಕ ಗುಣಗಳು ಈ ಆರು ಪ್ರಕರಣಗಳಿಂದ ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

**ಯತಃ ಸೂತ್ರಕೃತಾ ಮಾಂತ್ರವರ್ಣಿಕಂ ಗೀಯತೇ ತ್ವಿತಿ ।**
**ಪ್ರೋಕ್ತೈಕವಾಕ್ಯತಾ ತಸ್ಮಾನ್ಮಂತ್ರಾರ್ಥೋSನ್ಯಃ ಕಥಂ ವದ ॥ ೫೬ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಸೂತ್ರಕೃತಾ= ಸೂತ್ರಕಾರರಿಂದ, ಮಾಂತ್ರವರ್ಣಿಕಂ ಗೀಯತೇ ತ್ವಿತಿ= ಮಾಂತ್ರವರ್ಣಿಕಮೇವ ಚ ಗೀಯತೇ ಎಂದು, ಏಕವಾಕ್ಯತಾ= ಮಂತ್ರವರ್ಣಕ್ಕೂ ಮತ್ತು ಆರು ಪ್ರಕರಣಗಳಿಗೂ ಏಕವಾಕ್ಯತೆಯು, ಪ್ರೋಕ್ತಾ= ಹೇಳಲ್ಪಟ್ಟಿದೆಯೋ, ತಸ್ಮಾತ್= ಆ ಕಾರಣದಿಂದಲೂ, ಮಂತ್ರಾರ್ಥಃ= ಮಂತ್ರವರ್ಣಾರ್ಥವು, ಕಥಂ ಅನ್ಯಃ = ಹೇಗೆ ಬೇರೆಯಾಗುತ್ತದೆ, ವದ= ಹೇಳು.

**ಅನುವಾದ–** ಸೂತ್ರಕಾರರು ಮಾಂತ್ರವರ್ಣಿಕಮೇವಚ ಗೀಯತೇ ಎಂಬಲ್ಲಿ ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ಮಂತ್ರವರ್ಣಕ್ಕೂ ಮತ್ತು ಮುಂದಿನ ಆರು ಪ್ರಕರಣಗಳಿಗೂ ಏಕವಾಕ್ಯತ್ವವನ್ನು ಹೇಳಿರುವುದರಿಂದ ಮಂತ್ರವರ್ಣದಲ್ಲಿರುವ ಅನಂತ ಪದವು ಹೇಗೆ ಬೇರೆ ಅರ್ಥವುಳ್ಳದ್ದಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಮಂತ್ರವರ್ಣಸ್ಯೋತ್ತರಪ್ರಕರಣಸ್ಯ ಚ ಯೇಯಮೇಕವಾಕ್ಯತಾ ಕೃತಾ ಸಾ ನ ಸ್ವಕಪೋಲಕಲ್ಪಿತಾ । ಕಿಂತು ಸೂತ್ರಕೃತೋಪ್ಯಭಿಮತೇತಿ ವಕ್ತುಂ ಸೂತ್ರಮೇವಾರ್ಥತೋ ದರ್ಶಯತಿ – **ಯತ ಇತಿ** ॥ ಯತಃ ಯಸ್ಮಾತ್ । ಮಾಂತ್ರವರ್ಣಿಕಂ ಗೀಯತೇತ್ವಿತ್ಯನೇನ ಮಾಂತ್ರವರ್ಣಿಕಮೇವಚ ಗೀಯತೇ ಇತಿ ಸೂತ್ರಂ ಸಂಗೃಹ್ಣಾತಿ । ತುಶಬ್ದ ಏವಾರ್ಥೇ ಚಶಬ್ದಾರ್ಥೇ ಚ । ಮಾಂತ್ರವರ್ಣಿಕಮಿತ್ಯನೇನ ಸಂಬಧ್ಯತೇ । ತಸ್ಮಾತ್ ಸೂತ್ರವಿರುದ್ಧತ್ವಾತ್ । ಅನ್ಯಃ ಮಾಯಾವಾದ್ಯುದೀರಿತಃ ॥ ೫೬ ॥

**ವಿವರಣೆ–** ಮಂತ್ರವರ್ಣಕ್ಕೂ ಮತ್ತು ಆರು ಪ್ರಕರಣಗಳಿಗೂ ಏಕವಾಕ್ಯತೆಯನ್ನು ನಾವು ಸ್ವಕಪೋಲಕಲ್ಪಿತವಾಗಿ ಹೇಳುತ್ತಿರುವುದಲ್ಲ ಅದನ್ನು ಸೂತ್ರಕಾರರಾದ ವೇದವ್ಯಾಸರೇ ಹೇಳಿದ್ದಾರೆ ಎಂದು ತೋರಿಸುತ್ತಾರೆ. ಆದ್ದರಿಂದ ಆರು ಪ್ರಕರಣಗಳಿಗೂ ಮತ್ತು ಸತ್ಯಜ್ಞಾನವಾಕ್ಯಕ್ಕೂ ಏಕವಾಕ್ಯತ್ವವನ್ನು ಅಂಗೀಕರಿಸಬೇಕು. ಮಾಯಾವಾದಿಗಳು ಹೇಳುವ ಅರ್ಥವು ಸೂತ್ರವಿರುದ್ಧವಾದುದರಿಂದ ಸೂತ್ರಕಾರರಿಗೆ ಅನಭಿಪ್ರೇತವಾದುದು ಎಂದು ಅಭಿಪ್ರಾಯ.

**ಏವಂ ಶ್ರುತ್ಯರ್ಥಕುಶಲಾಃ ಸರ್ವತ್ರಾಪ್ಯೇಕವಾಕ್ಯತಾಂ ।**
**ಕುರ್ಯುಸ್ತ್ವಾಚಾರ್ಯವಂತಶ್ಚೇತ್ ತಿರಸ್ಕುರ್ಯುರ್ನಚೇಚ್ಛ್ರುತಿಮ್ ॥ ೫೭ ॥**

**ಅರ್ಥ–** ಏವಂ= ಹೀಗೆ, ಶ್ರುತ್ಯರ್ಥಕುಶಲಾಃ= ಶ್ರುತ್ಯರ್ಥವನ್ನು ತಿಳಿದುಕೊಳ್ಳುವುದರಲ್ಲಿ ಕುಶಲರಾದವರು, ಆಚಾರ್ಯವಂತಶ್ಚೇತ್= ಶ್ರೇಷ್ಠರಾದ ಆಚಾರ್ಯರನ್ನು ಹೊಂದಿದ್ದರೆ, ಸರ್ವತ್ರಾಪಿ= ಎಲ್ಲ ಕಡೆಗಳಲ್ಲಿಯೂ ಕೂಡ, ಏಕವಾಕ್ಯತಾಂ= ಏಕವಾಕ್ಯತೆಯನ್ನೇ, ಕುರ್ಯುಃ= ಅನುಸಂಧಾನ ಮಾಡುತ್ತಾರೆ, ನ ಚೇತ್= ಶ್ರೇಷ್ಠರಾದ ಆಚಾರ್ಯರನ್ನು ಹೊಂದಿಲ್ಲದಿದ್ದರೆ, ಶ್ರುತಿಂ= ಶ್ರುತಿಯನ್ನು, ತಿರಸ್ಕುರ್ಯುಃ= ತಿರಸ್ಕರಿಸುತ್ತಾರೆ.

**ಅನುವಾದ–** ಹೀಗೆ, ಶ್ರೇಷ್ಠರಾದ ತತ್ತ್ವಜ್ಞಾನಿಗಳಾದ ಮಧ್ವಾಚಾರ್ಯರಂತಹ ಆಚಾರ್ಯರನ್ನು ಹೊಂದಿದ ಶ್ರುತ್ಯರ್ಥ ಕುಶಲರು ಎಲ್ಲ ಕಡೆಗಳಲ್ಲಿಯೂ ವೇದಗಳಿಗೆ ಏಕವಾಕ್ಯತೆಯನ್ನು ಅನುಸಂಧಾನ ಮಾಡುತ್ತಾರೆ. ಅಂತಹ ಆಚಾರ್ಯರನ್ನು ಅನುಸರಿಸದಿದ್ದವರು ಶ್ರುತಿಯನ್ನೇ ತಿರಸ್ಕರಿಸುತ್ತಾರೆ.

**ಭಾವವಿಲಾಸಿನೀ–** ಏವಂ ಚ ಸೂತ್ರಾನುಕೂಲಭಾಷ್ಯಕರ್ತೃತ್ವಾತ್ ಆಚಾರ್ಯವಾನ್ಪುರುಷೋ ವೇದೇತ್ಯುಪನಿಷದ್ವಾಕ್ಯಸ್ಯ ಮಧ್ವಾಚಾರ್ಯವಾನಿತ್ಯೇವಾರ್ಥ ಇತಿ ಸೂಚಯನ್ ಸ್ವಾಚಾರ್ಯ-ಚರಣಾನುಸಾರಿಣಃ ಟೀಕಾಕಾರಾದೀನ್ ಸ್ತೌತಿ – **ಏವಮಿತಿ** ॥ ಸರ್ವತ್ರ ಶ್ರುತಿಪುರಾಣಾದಿ ವಾಕ್ಯೇಷು । ಆಚಾರ್ಯವಂತಶ್ಚೇದಸ್ಮದಾಚಾರ್ಯವಂತಶ್ಚೇತ್ । ನಚೇದಸ್ಮದಾಚಾರ್ಯ- ಚರಣಾನು-ಸಾರಿಣೋ ನಚೇತ್ ಶ್ರುತಿಂ ತಿರಸ್ಕುರ್ಯುಃ ಪೂರ್ವೋತ್ತರ ವಿರುದ್ಧಾಯೋಗ್ಯಾರ್ಥಪರತ್ವೇನ ಯೋಜಯಂತೀತ್ಯರ್ಥಃ ॥ ೫೭ ॥

**ವಿವರಣೆ–** 'ಆಚಾರ್ಯವಾನ್ ಪುರುಷೋ ವೇದ' ಎಂಬ ಛಾಂದೋಗ್ಯೋ-ಪನಿಷತ್ತಿನ ವಾಕ್ಯದಂತೆ ಶ್ರೇಷ್ಠರಾದ ಆಚಾರ್ಯರನ್ನು ಹೊಂದಿದವರು ಮಾತ್ರ ತತ್ತ್ವಜ್ಞಾನವನ್ನು ಪಡೆಯುತ್ತಾರೆ ಎಂದು ಇಲ್ಲಿ ಹೇಳಿ ಮಧ್ವಾಚಾರ್ಯರು ಮತ್ತು ಅವರ ಅನುಸಾರಿಗಳಾದ ಟೀಕಾಕೃತ್ಪಾದರು ಮೊದಲಾದವರ ಪಾದವನ್ನು ಅನುಸರಿಸಿದವರಿಗೆ ಮಾತ್ರ ಪೂರ್ವೋತ್ತರ ಅವಿರುದ್ಧವಾದ ಶ್ರುತ್ಯರ್ಥವು ಗೋಚರಿಸುತ್ತದೆ. ಇದಿಲ್ಲದಿದ್ದವರು ಪೂರ್ವೋತ್ತರವಿರುದ್ಧವಾದ ಶ್ರುತ್ಯರ್ಥವನ್ನು ಹೇಳುತ್ತಾರೆ ಎಂದು ಅಭಿಪ್ರಾಯ ಪಡುತ್ತಾರೆ.

**ಸೂತ್ರೋಕ್ತಸೂಚಿತಾನ್ಯೇವಂ ಲಕ್ಷಣಾನಿ ಶ್ರುತಿಃ ಸತೀ ।**
**ಪ್ರಾಕ್ ಪ್ರಸ್ತಾವ್ಯ ಪುನಶ್ಚೈವಂ ವಿಚಾರ್ಯೋಽಪರತಾ ಕಿಲ ॥ ೫೮ ॥**

**ಅರ್ಥ–** ಸತೀ= ಸಾಧ್ವಿಯಾದ, ಶ್ರುತಿಃ= ಶ್ರುತಿಯು, ಸೂತ್ರೋಕ್ತಸೂಚಿತಾನಿ= ಜನ್ಮಾದಿ ಸೂತ್ರದಿಂದ ಕಂಠತಃ ಉಕ್ತವಾದ ಮತ್ತು ಸೂಚಿತವಾದ, ಲಕ್ಷಣಾನಿ= ಲಕ್ಷಣಗಳನ್ನು, ಏವಂ= ಈ ರೀತಿಯಾಗಿ, ಪ್ರಾಕ್ ಪ್ರಸ್ತಾವ್ಯ= ಮೊದಲು ಪ್ರಸ್ತಾಪಿಸಿ, ಪುನಃ= ಮತ್ತೆ, ಏವಂ= ಈ ರೀತಿಯಲ್ಲಿ, ವಿಚಾರ್ಯ= ವಿಚಾರ ಮಾಡಿ, ಉಪರತಾ ಕಿಲ= ಸಮಾಪ್ತವಾಯಿತಷ್ಟೇ.

**ಅನುವಾದ– ಶ್ರುತಿಯು ಈ ರೀತಿಯಲ್ಲಿ ಸೂತ್ರದಿಂದ ಉಕ್ತವಾದ ಜನ್ಮಾದಿ ಕರ್ತೃತ್ವವನ್ನೂ ಸೂಚಿತವಾದ ಸರ್ವಜ್ಞತ್ವ ಮತ್ತು ಗುಣಾನಂತತ್ವಗಳನ್ನೂ ಮೊದಲು ಪ್ರಸ್ತಾಪಿಸಿ ಪುನಃ ಅವುಗಳನ್ನು ವಿಚಾರ ಮಾಡಿ ಸಮಾಪ್ತವಾಯಿತಷ್ಟೇ?**

**ಭಾವವಿಲಾಸಿನೀ– ಶ್ರುತ್ಯರ್ಥಕಥನಮುಪಸಂಹರತಿ – ಸೂತ್ರೋಕ್ತೇತಿ ॥** ಸೂತ್ರೋಕ್ತಾನಿ ಜನ್ಮಕಾರಣತ್ವಾದೀನಿ ಸೂಚಿತಾನಿ ಸರ್ವಜ್ಞತ್ವಗುಣಪೂರ್ಣತ್ವಾದೀನಿ ಸೂತ್ರೋಕ್ತಸೂಚಿತಾನಿ । ಏವಮುಕ್ತಪ್ರಕಾರೇಣ । ಪ್ರಾಕ್ ಮಂತ್ರವರ್ಣೇ । ಪುನಃ ಉಪರಿ ಷಟ್‌ಪ್ರಕರಣ್ಯಾಮಿತ್ಯರ್ಥಃ ॥ ೫೮ ॥

**ವಿವರಣೆ–** ಹಿಂದೆ ಹೇಳಿದಂತೆ ಸೃಷ್ಟಿಕರ್ತೃತ್ವಾದಿಗಳು ಕಂಠತಃ ಉಕ್ತವಾದ ಲಕ್ಷಣ. ಸರ್ವಜ್ಞತ್ವ ಅನಂತಗುಣತ್ವಗಳು ಸೂಚಿತವಾದ ಲಕ್ಷಣ. ಶ್ರುತಿಯು ಮಂತ್ರವರ್ಣದಿಂದ ಪ್ರಸ್ತಾಪವನ್ನು ಮಾಡಿ ಆರು ಪ್ರಕರಣಗಳಿಂದ ಅದನ್ನು ವಿಸ್ತಾರ ಮಾಡಿ ಉಪರತವಾಯಿತು ಎಂದು ಅಭಿಪ್ರಾಯ.

**ಪ್ರಾಕ್ ಸರ್ವಕರ್ತೃತಾಂ ಪಶ್ಚಾತ್ ತತ್ಸಿದ್ಧ್ಯೈ ಸರ್ವವೇತೃತಾಂ ।**
**ಸುಖಶಕ್ತಿಕೃಪಾದ್ಯಾಪ್ತ್ಯೈ ಸಾಂತತೋಽನಂತತಾಂ ಜಗೌ ॥ ೫೯ ॥**

**ಅರ್ಥ–** ಪ್ರಾಕ್= ಮೊದಲು, ಸರ್ವಕರ್ತೃತಾಂ= ಸರ್ವಕರ್ತೃತ್ವವನ್ನೂ, ತತ್ಸಿದ್ಧ್ಯೈ= ಅದರ ಸಿದ್ಧಿಗಾಗಿ, ಪಶ್ಚಾತ್= ತದನಂತರ, ಸರ್ವವೇತೃತಾಂ= ಸರ್ವಜ್ಞತ್ವವನ್ನೂ, ಸುಖಶಕ್ತಿಕೃಪಾದ್ಯಾಪ್ತ್ಯೈ= ಸುಖ, ಶಕ್ತಿ ಮತ್ತು ದಯಾ ಮೊದಲಾದ ಗುಣಗಳ ಪ್ರಾಪ್ತಿಗಾಗಿ, ಅಂತತಃ= ಕೊನೆಯಲ್ಲಿ, ಅನಂತತಾಂ= ಅನಂತತ್ವವನ್ನೂ, ಸಾ= ಆ ಶ್ರುತಿಯು, ಜಗೌ= ಹೇಳಿತು.

**ಅನುವಾದ– ಮೊದಲು ಸತ್ಯಪದದಿಂದ ಸರ್ವಕರ್ತೃತ್ವವನ್ನೂ, ಅನಂತರ ಸರ್ವಕರ್ತೃತ್ವದ ಸಿದ್ಧಿಗಾಗಿ ಜ್ಞಾನಪದದಿಂದ ಸರ್ವಜ್ಞತ್ವವನ್ನೂ ಮತ್ತು ಕೊನೆಯಲ್ಲಿ ಸುಖ, ಶಕ್ತಿ ಮತ್ತು ದಯೆ ಮೊದಲಾದ ಗುಣಗಳ ಸಿದ್ಧಿಗಾಗಿ ಅನಂತತ್ವವನ್ನೂ ಶ್ರುತಿಯು ಹೇಳಿತು.**

**ಭಾವವಿಲಾಸಿನೀ–** ಉಕ್ತಮೇವ ವಿಶದಯನ್ ಶ್ರುತ್ಯುಕ್ತಲಕ್ಷಣಕ್ರಮಸ್ಯ ದ್ವೇಧಾಕಾರಣಮಾಹ – **ಪ್ರಾಕ್ ಸರ್ವಕರ್ತೃತಾಮಿತಿ** ॥ ತತ್ ಸಿದ್ಧ್ಯೈ ಸರ್ವಕರ್ತೃತ್ವಸಿದ್ಧ್ಯೈ । ಸುಖಶಕ್ತಿಕೃಪಾದ್ಯಾಪ್ತ್ಯೈ ಸರ್ವಕರ್ತೃತ್ವೋಪಯುಕ್ತಸುಖಶಕ್ತಿಕೃಪಾದಿ ಗುಣಪೂರ್ಣತಾಯೈ । ಅಂತತಃ ಅಂತೇ । ಸಾದ್ಯಂ ಜಗತ್‌ಕರ್ತೃತ್ವಂ ಪ್ರಾಕ್ತತ್ರಿಜ್ಞಾಯ ಕರ್ತೃತ್ವೋಪಯುಕ್ತಜ್ಞಾನೇಚ್ಛಾಪ್ರಯತ್ನಾದಿಷು ಜ್ಞಾನಸ್ಯಾದಿಮತ್ತ್ವಾತ್ ಮಧ್ಯೇ ತತ್ ಪ್ರಸ್ತಾವ್ಯಾಂತೇಽಂತಿಮಮುದಾಜಹಾರೇತಿ ಭಾವಃ । ಮುಖತ ಇತ್ಯುತ್ತರಶ್ಲೋಕೇ ಚ ಸಾಕ್ಷಾದುಕ್ತಸ್ಯ ಪ್ರಾಕ್ ಕೀರ್ತನಮ್ । ಸೂಚಿತಯೋಃ ಪಶ್ಚಾತ್ ಕೀರ್ತನಮಿತಿ ಪ್ರಕಾರಾಂತರೇಣ ಕ್ರಮೋವರ್ಣಿತಃ । ಅತ ಏವ ವಾಶಬ್ದಃ । ದ್ವೇ ಸರ್ವಜ್ಞತ್ವಾನಂತತ್ವೇ । ಸಾ ಶ್ರುತಿಃ ॥ ೫೯- ೬೦ ॥

**ವಿವರಣೆ–** ಶ್ರುತಿಯು ಕರ್ತೃತ್ವವನ್ನು ಮೊದಲು ಹೇಳಿ, ಕರ್ತೃತ್ವಕ್ಕೆ ಉಪಯುಕ್ತವಾದ ಗುಣಗಳನ್ನೇ ಅನಂತರ ಹೇಳಿ, ಕೊನೆಯಲ್ಲಿ ಉಪಸಂಹಾರ ಮಾಡುತ್ತದೆ ಎಂದು ಇಲ್ಲಿ ತಿಳಿಸುತ್ತಾರೆ.

> ಮುಖತಃ ಸೂತ್ರಕಾರೋಕ್ತಂ ಪ್ರಾಗುಕ್ತಂ ಬ್ರಹ್ಮಲಕ್ಷಣಂ ।
> ಪಶ್ಚಾತ್ ತತ್ಸೂಚಿತೇ ವಾ ದ್ವೇ ಲಕ್ಷಣೇ ಸಾಽನ್ವಶಿಕ್ಷತ ॥ ೬೦ ॥

**ಅರ್ಥ–** ಸಾ= ಆ ಶ್ರುತಿಯು, ಮುಖತಃ= ಕಂಠದಿಂದ, ಸೂತ್ರಕಾರೋಕ್ತಂ= ಸೂತ್ರಕಾರರು ಹೇಳಿದ, ಪ್ರಾಗುಕ್ತಂ= ಶ್ರುತಿಯಲ್ಲಿ ಮೊದಲು ಹೇಳಲ್ಪಟ್ಟ, ಬ್ರಹ್ಮಲಕ್ಷಣಂ= ಸೃಷ್ಟ್ಯಾದಿಕರ್ತೃತ್ವ ರೂಪವಾದ ಬ್ರಹ್ಮಲಕ್ಷಣವನ್ನೂ, ಪಶ್ಚಾತ್= ಅನಂತರ, ತತ್ಸೂಚಿತೇ ವಾ= ಬ್ರಹ್ಮಸೂತ್ರದಿಂದ ಸೂಚಿತವಾದಂತಹ, ದ್ವೇ ಲಕ್ಷಣೇ= ಎರಡು ಲಕ್ಷಣಗಳನ್ನೂ, ಅನ್ವಶಿಕ್ಷತ= ಉಪದೇಶಿಸಿತು.

**ಅನುವಾದ–** ಶ್ರುತಿಯು ಸೂತ್ರಕಾರರು ಕಂಠತಃ ಹೇಳಿದ ಜನ್ಮಾದಿಕರ್ತೃತ್ವರೂಪವಾದ ಬ್ರಹ್ಮಲಕ್ಷಣವನ್ನು ಸತ್ಯ ಪದದಿಂದ ಮೊದಲು ಹೇಳಿ, ಅನಂತರ ಸರ್ವಕರ್ತೃತ್ವದಿಂದ ಸೂಚಿತವಾದ ಸರ್ವಜ್ಞತ್ವ ಮತ್ತು ಆನಂದಾಗ್ಯನತಗುಣಪೂರ್ಣತ್ವರೂಪವಾದ ಎರಡು ಲಕ್ಷಣಗಳನ್ನು ಉಪದೇಶಿಸಿತು.

**ವಿವರಣೆ–** ಜನ್ಮಾದ್ಯಸ್ಯ ಯತಃ ಎಂದು ಸೂತ್ರವಿದೆ. ಇಲ್ಲಿ ಕಂಠತಃ ಹೇಳಿರುವುದು ಜನ್ಮಕರ್ತೃತ್ವ. ಅದನ್ನು ಶ್ರುತಿಯು ಸತ್ಯ ಪದದಿಂದ ಹೇಳಿದೆ. ಜನ್ಮಾದಿಕರ್ತೃತ್ವವಿರಬೇಕಾದರೆ ಸರ್ವಜ್ಞತ್ವವೂ, ಆನಂದಗುಣಪೂರ್ಣತ್ವವೂ ಇರಬೇಕು. ಅದನ್ನು ಜ್ಞಾನ ಮತ್ತು ಅನಂತ ಪದಗಳಿಂದ ಹೇಳಿ ಆರು ಪ್ರಕರಣಗಳಲ್ಲಿ ಅವುಗಳನ್ನು ವಿಚಾರ ಮಾಡಿ, ಶ್ರುತಿಯು ಉಪದೇಶ ಮಾಡಿದೆ ಎಂದು ಅಭಿಪ್ರಾಯ.

> ಇಮಾಂ ಹಿ ಶಾಸ್ತ್ರಮರ್ಯಾದಾಮಾಚಾರ್ಯಸ್ತತ್ವವಾದಿನಾಮ್ ।
> ವೇದ ತಸ್ಮಾತ್ ತದುದಿತಂ ತತ್ವಂ ನಾನ್ಯದಿತಿ ಸ್ಥಿತಂ ॥ ೬೧ ॥

**ಅರ್ಥ–** ಇಮಾಂ= ಈ, ಶಾಸ್ತ್ರಮರ್ಯದಾಂ= ಶಾಸ್ತ್ರಮರ್ಯಾದೆಯನ್ನು, ತತ್ವವಾದಿನಾಂ= ತತ್ವವಾದಿಗಳ, ಆಚಾರ್ಯಃ= ಗುರುಗಳಾದ ಮಧ್ವಾಚಾರ್ಯರು, ವೇದ= ತಿಳಿದಿದ್ದಾರೆ, ತಸ್ಮಾತ್= ಆದ್ದರಿಂದ, ತದುದಿತಂ= ಅವರು ಹೇಳಿದುದೇ, ತತ್ವಂ= ಯಥಾರ್ಥ-ವಾದುದು, ಅನ್ಯತ್= ಬೇರೆ ಅರ್ಥವು, ನ= ಯಥಾರ್ಥವಲ್ಲ, ಇತಿ= ಎಂದು, ಸ್ಥಿತಂ= ಸಿದ್ಧವಾಯಿತು.

**ಅನುವಾದ–** ಈ ಶಾಸ್ತ್ರಮರ್ಯಾದೆಯನ್ನು ತತ್ವವಾದಿಗಳ ಆಚಾರ್ಯರಾದ ಶ್ರೀಮಧ್ವಾಚಾರ್ಯರು ಒಬ್ಬರೇ ತಿಳಿದಿದ್ದಾರೆ. ಆದ್ದರಿಂದ ಅವರು ಹೇಳಿದುದೇ ತತ್ವ. ಬೇರೆಯವರು ಹೇಳುವ ಅರ್ಥವು ತತ್ವವಲ್ಲವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ– ಅಧುನಾಸ್ವಾಚಾರ್ಯಂ ಸ್ತೌತಿ ॥ ಇಮಾಮಿತಿ ॥ ೬೧ ॥**

**ಇತೋಽಪ್ಯನಂತಶಬ್ದಾರ್ಥೋ ನ ಪರೋದೀರಿತೋ ಭವೇತ್ ।**
**ಅನಂತಮಿತಿ ಚೈಕತ್ರ ಶ್ರುತಿರಾಹ ಸ್ಥಲಾಂತರೇ ॥ ೬೨ ॥**

**ಆನಂದಮಿತಿ ತತ್ಸ್ಥಾನೇ ಪ್ರಾಹ ತೇನಾತ್ರ ಯೋಗ್ಯತಾ ।**
**ಗುಣಸ್ಯೈವಾಸ್ತಿ ತತ್ತ್ಯಾಗೇ ದೋಷಃ ಸ್ಯಾದಿತಿ ತರ್ಕಯೇ ॥ ೬೩ ॥**

**ಅರ್ಥ–** ಇತೋಽಪಿ= ಈ ಶ್ಲೋಕದಲ್ಲಿ ಹೇಳುವ ಕಾರಣದಿಂದಲೂ ಕೂಡ, ಪರೋದೀರಿತಃ= ಮಾಯಾವಾದಿಗಳಿಂದ ಹೇಳಲ್ಪಟ್ಟದ್ದು, ಅನಂತಶಬ್ದಾರ್ಥಃ= ಅನಂತಶಬ್ದಾರ್ಥವಾಗಿ, ನ ಭವೇತ್= ಆಗುವುದಿಲ್ಲ, ಏಕತ್ರ= ಒಂದು ಕಡೆಯಲ್ಲಿ, ಶ್ರುತಿಃ= ವೇದವು, ಅನಂತಮಿತಿ= ಅನಂತ ಎಂದು, ಪ್ರಾಹ= ಹೇಳಿದೆ, ಸ್ಥಲಾಂತರೇ= ಇನ್ನೊಂದು ಸ್ಥಳದಲ್ಲಿ, ತತ್ಸ್ಥಾನೇ= ಅನಂತ ಪದದ ಸ್ಥಾನದಲ್ಲಿ, ಆನಂದಮಿತಿ= ಆನಂದ ಎಂದು, ಪ್ರಾಹ= ಹೇಳಿದೆ, ತೇನ= ಆ ಕಾರಣದಿಂದ, ಅತ್ರ= ಅನಂತ ಎಂದು ಹೇಳಿದ ತೈತ್ತರೀಯ ಶ್ರುತಿಯಲ್ಲಿ, ಗುಣಸ್ಯೈವ= ಗುಣಕ್ಕೇ, ಯೋಗ್ಯತಾ ಅಸ್ತಿ= ಅನ್ವಯಯೋಗ್ಯತೆಯೂ ಇದೆ, ತತ್ತ್ಯಾಗೇ= ಗುಣವನ್ನು ತ್ಯಾಗ ಮಾಡಿದರೆ, ದೋಷಃ ಸ್ಯಾತ್= ದೋಷವು ಉಂಟಾಗುವುದು, ಇತಿ= ಎಂದು, ತರ್ಕಯೇ= ಊಹಿಸುತ್ತೇನೆ.

**ಅನುವಾದ– ಈ ಶ್ಲೋಕದಲ್ಲಿ ಹೇಳುವ ಯುಕ್ತಿಯಿಂದಲೂ ಸಹ ಮಾಯಾವಾದಿಗಳು ಹೇಳುವ ಅರ್ಥವು ಅನಂತಶಬ್ದಾರ್ಥವಾಗುವುದಿಲ್ಲ. ಶ್ರುತಿಯು ಒಂದು ಸ್ಥಳದಲ್ಲಿ ಅನಂತಂ ಎಂದು ಹೇಳಿದೆ. ಅದೇ ಶ್ರುತಿಯು ಸ್ಥಲಾಂತರದಲ್ಲಿ ಅನಂತ ಎಂಬ ಪದದ ಸ್ಥಾನದಲ್ಲಿ ಆನಂದ ಎಂದು ಹೇಳಿದೆ. ಆದ್ದರಿಂದ ಅನಂತ ಎಂಬ ಶ್ರುತಿಯಲ್ಲಿ ಗುಣಗಳನ್ನು ತೆಗೆದುಕೊಂಡು ಆನಂತ್ಯವನ್ನು ಹೇಳುವುದಕ್ಕೆ ಯೋಗ್ಯತೆ ಇದೆ. ಗುಣವನ್ನು ತೆಗೆದುಕೊಳ್ಳದಿದ್ದರೆ ದೋಷ ಉಂಟಾಗುವುದು ಎಂದು ನನ್ನ ಭಾವನೆ.**

**ಭಾವವಿಲಾಸಿನೀ–** ಶ್ರುತ್ಯಂತರಸಮಾಖ್ಯಯಾಪಿ ಅಸ್ಮದುಕ್ತ ಏವಾನಂತಶಬ್ದಾರ್ಥೋ ನ ಪರೋದೀರಿತ ಇತ್ಯಾಹ – ಇತ ಇತಿ ॥ ಇತಃ ವಕ್ಷ್ಯಮಾಣನಿಮಿತ್ತಾತ್ । ಏಕತ್ರ ತೈತ್ತಿರೀಯ-ಶಾಖಾಯಾಮ್ । ಸ್ಥಲಾಂತರೇ ಸತ್ಯಂ ಜ್ಞಾನಮಾನಂದಂ ಬ್ರಹ್ಮೇತಿ ಶಾಖಾಂತರವಾಕ್ಯೇ । ತತ್ ಸ್ಥಾನೇ ಅನಂತತ್ವಸ್ಥಾನೇ ಆನಂದಮಿತಿ ಯತಃ ಪ್ರಾಹೇತಿ ಯೋಜನಾ । ತೇನ ಅನಂತತ್ವಸ್ಥಾನೇ ಆನಂದಾಖ್ಯ ಗುಣಕಥನೇನ । ಅತ್ರಾಪ್ಯನಂತಪದೋದಿತ ತೃತೀಯಲಕ್ಷಣೇ । ಗುಣಸ್ಯೈವ ಆನಂದಾದಿಗುಣಸ್ಯೈವ ಯೋಗ್ಯತಾಸ್ತಿ । ತತ್ತ್ಯಾಗೇ ಗುಣತ್ಯಾಗೇ । ಅನಂತಪದಸ್ಯ ಆನಂದಾದಿ-ಗುಣಪೂರ್ಣತ್ವಾರ್ಥತ್ಯಾಗ ಇತ್ಯರ್ಥಃ । ದೋಷಃ ಸಮಾಖ್ಯೋಲ್ಲಂಘನಾಖ್ಯದೋಷಃ । ಗುಣತ್ಯಾಗೇ ದೋಷಃ ಸ್ಯಾದಿತಿ ಲೌಕಿಕಮರ್ಯಾದಯಾ ಧ್ವನಿಶ್ಚ ॥ ೬೨, ೬೩ ॥

**ವಿವರಣೆ–** ಶ್ರುತ್ಯಂತರ ಸಮಾಖ್ಯಾ ಬಲದಿಂದಲೂ ಅನಂತಶಬ್ದಕ್ಕೆ ನಮ್ಮ ಅರ್ಥವನ್ನೇ ಮಾಡಬೇಕೇ ಹೊರತು ಪರವಾದಿಗಳು ಹೇಳುವ ಅರ್ಥವನ್ನಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ತೈತ್ತರೀಯ ಶ್ರುತಿಯಲ್ಲಿ ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬಲ್ಲಿ ಅನಂತ ಶಬ್ದವಿದೆ. ಅದೇ ಯಜುರ್ವೇದದ ಶಾಖಾಂತರದಲ್ಲಿ ಸತ್ಯಂ ಜ್ಞಾನಮಾನಂದಂ ಬ್ರಹ್ಮ ಎಂಬ ವಾಕ್ಯವಿದೆ. ಈ ಎರಡನೆಯ ಶ್ರುತಿಯಲ್ಲಿ ಅನಂತ ಶಬ್ದಕ್ಕೆ ಬದಲಾಗಿ ಆನಂದ ಶಬ್ದವಿದೆ. ಆದ್ದರಿಂದ ಮೊದಲನೆಯ ಶ್ರುತಿಯಲ್ಲಿಯೂ ಕೂಡ ಎರಡನೇ ಶ್ರುತಿಗೆ ಅನುಗುಣವಾಗಿ ಆನಂದಾದಿ ಗುಣಗಳಿಂದಲೇ ಆನಂತ್ಯವನ್ನು ಸ್ವೀಕರಿಸಬೇಕು. ಗುಣಗಳನ್ನು ಸ್ವೀಕರಿಸದೇ ವಸ್ತುಗಳಿಂದ ಅನಂತ ಎಂದು ಹೇಳಿದರೆ, ಗುಣಗಳನ್ನು ತ್ಯಾಗ ಮಾಡಿದುದರಿಂದ ದೋಷ ಉಂಟಾಗುತ್ತದೆ. ಏಕೆಂದರೆ ಶಾಖಾಂತರದ ಆನಂದ ಶಬ್ದವು ಆಗ ಅಸಂಗತವಾಗಿ ಶ್ರುತಿಗಳಿಗೆ ಏಕವಾಕ್ಯತ್ವವು ಬರುವುದಿಲ್ಲ. ಗುಣವನ್ನು ಪರಿತ್ಯಾಗ ಮಾಡಿದರೆ ದೋಷವು ಬರುವುದೆಂದು ಲೋಕಪ್ರಸಿದ್ಧಿ ಇದೆಯಷ್ಟೇ. ಆದ್ದರಿಂದ ಯೋಗ್ಯತೆ ಇರುವುದರಿಂದ ಆನಂತ್ಯಪ್ರತಿಯೋಗಿಯಾಗಿ ಗುಣಗಳನ್ನೇ ಸ್ವೀಕರಿಸಬೇಕು.

**ಯತೋಽಸ್ಯೈಕಪದಸ್ಯಾನ್ಯೇಷ್ವಜಹತ್ಸ್ವಾರ್ಥಲಕ್ಷಣಾ ।**
**ಆನಂದಾದಿಗುಣೈಸ್ತಸ್ಮಾದಾನಂತ್ಯಂ ಸ್ಯಾದಿದಂ ಪ್ರಭೋಃ ॥ ೬೪ ॥**

**ಶ್ರುತ್ಯೋರೇಕಾರ್ಥತೈವಂ ಸ್ಯಾದನ್ಯಥಾ ಭಿನ್ನವಾಕ್ಯತಾ ॥ ೬೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಏಕಪದಸ್ಯ= ಒಂದು ಪದಕ್ಕೆ, ಅನ್ಯೇಷ್ವಪಿ= ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥದಲ್ಲಿಯೂ, ಅಜಹತ್ ಸ್ವಾರ್ಥಲಕ್ಷಣಾ= ಅಜಹತ್ ಸ್ವಾರ್ಥಾ ಎಂಬ ಲಕ್ಷಣಾವೃತ್ತಿ ಇದೆಯೋ, ತಸ್ಮಾದ್= ಆ ಕಾರಣದಿಂದ, ಪ್ರಭೋಃ= ಪ್ರಭುವಾದ ನಾರಾಯಣನಿಗೆ, ಇದಂ ಆನಂತ್ಯಂ= ತೈತ್ತರೀಯ ಶ್ರುತಿಯಲ್ಲಿ ಹೇಳಿದ ಈ ಆನಂತ್ಯವು, ಆನಂದಾದಿಗುಣೈಃ ಸ್ಯಾತ್= ಆನಂದಾದಿ ಗುಣಗಳಿಂದಲೇ ಉಪಪನ್ನವಾಗುತ್ತದೆ,

ಏವಂ= ಹೀಗೆ ಮಾಡಿದರೆ ಮಾತ್ರ, ಶ್ರುತ್ಯೋಃ= ಎರಡು ಶ್ರುತಿಗಳಿಗೆ, ಏಕಾರ್ಥತಾ= ಏಕಾರ್ಥಪ್ರತಿಪಾದಕತ್ವರೂಪವಾದ ಏಕವಾಕ್ಯತ್ವವು, ಸ್ಯಾತ್= ಉಂಟಾಗುತ್ತದೆ, ಅನ್ಯಥಾ= ಇಲ್ಲದಿದ್ದರೆ, ಭಿನ್ನವಾಕ್ಯತಾ= ವಾಕ್ಯಭೇದವು ಉಂಟಾಗುತ್ತದೆ.

**ಅನುವಾದ–** ಯಾವ ಕಾರಣದಿಂದ ಪದಗಳಿಗೆ ಅಜಹತ್ ಸ್ವಾರ್ಥಲಕ್ಷಣಾ ಎಂಬುದು ಇದೆಯೋ, ಆ ಕಾರಣದಿಂದ ಪ್ರಭುವಿಗೆ ತೈತ್ತರೀಯ ಶ್ರುತಿಯಲ್ಲಿ ಹೇಳಿದ ಆನಂತ್ಯವು ಆನಂದಾದಿ ಗುಣಗಳಿಂದಲೇ ಉಪಪನ್ನವಾಗುತ್ತವೆ. ಹೀಗೆ ಹೇಳಿದರೆ ಮಾತ್ರ ಶ್ರುತಿಗಳಿಗೆ ಏಕವಾಕ್ಯತ್ವವು ಬರುತ್ತದೆ. ಇಲ್ಲದಿದ್ದರೆ ವಾಕ್ಯಭೇದವೆಂಬ ದೋಷವು ಉಂಟಾಗುವುದು.

**ಭಾವವಿಲಾಸಿನೀ–** ನನು ಶಾಖಾಂತರೇ ಆನಂದ ಏವ ಶ್ರೂಯತೇ ನ ಗುಣಾನಂತ್ಯಮ್ । ಅತಃ ಕಥಂ ಸಮಾಖ್ಯಯೇತ್ಯತ ಆಹ – **ಯತ ಇತಿ** ॥ ಏಕಪದಸ್ಯ ಕಾಕೇಭ್ಯೋದಧಿರಕ್ಷ್ಯತಾಮಿತ್ಯತ್ರ ಕಾಕಪದಸ್ಯ । ಅನ್ಯೇಷು ದಧ್ಯುಪಘಾತಕಮಾರ್ಜಾಲಾದಿಷು ಅಜಹತ್‌ಸ್ವಾರ್ಥಲಕ್ಷಣಾ ಸ್ವಮುಖ್ಯಾರ್ಥಮಪರಿತ್ಯಜ್ಯಾನ್ಯಾರ್ಥೇಷು ಲಕ್ಷಣಾಸ್ತಿ ಲೋಕೇ। ತಸ್ಮಾದಜಹತ್‌ಸ್ವಾರ್ಥಲಕ್ಷಣಾಯಾಃ ಲೋಕಸಿದ್ಧತ್ವಾತ್ । ಇದಮಾನಂದಪದಬೋಧ್ಯಂ ಆನಂದಾದಿ ಗುಣೈರಾನಂತ್ಯಂ ಸ್ಯಾದಿತಿ ಸಂಬಂಧಃ । ಆನಂದಪದಸ್ಯಾಜಹತ್‌ಸ್ವಾರ್ಥಲಕ್ಷಣಯಾ ಗುಣಾಂತರೋಪಲಕ್ಷಕತ್ವಾತ್ ಗುಣಾನಂತ್ಯಮಪ್ಯರ್ಥೋ ಭವತ್ಯೇವೇತಿ ಭಾವಃ ॥ ೬೪ ॥

ಲಕ್ಷಣಾಶ್ರಯಣೇ ಕಿಂ ಬೀಜಮಿತ್ಯತ ಆಹ – **ಶ್ರುತ್ಯೋರಿತಿ** ॥ ಏವಂ ಲಕ್ಷಣಯಾತ್ರಾಪಿ ಗುಣಾನಂತ್ಯಕಥನೇ ಸತ್ಯೇವ। ಅನ್ಯಥಾ ಲಕ್ಷಣಾನಾಶ್ರಯಣೇ। ಶಾಖಾಂತರೇ ಗುಣಕೀರ್ತನಾತ್ ತತ್‌ಸಮಾಖ್ಯಯಾತ್ರ ಗುಣಸ್ಯೈವ ಪ್ರಾಪ್ತಿಃ ನ ವಸ್ತುತೋಽನಂತತ್ವಸ್ಯ । ಏತತ್ ಸಮಾಖ್ಯಯಾ ಚ ಶಾಖಾಂತರೇ ಲಕ್ಷಣಯಾ ಗುಣಾನಂತ್ಯಪ್ರಾಪ್ತಿರಿತಿ ಸಮಾಖ್ಯಯೋಃ ಪರಸ್ಪರೋಪಕಾರಿತ್ವಮಿತಿ ಭಾವಃ । ಯುಕ್ತಿವೈಭವಪ್ರದರ್ಶನಾಯೇದಮುದಿತಮ್ । ವಸ್ತುತಸ್ತು ಶಾಖಾಂತರೇ ಗುಣಸ್ಯೋಕ್ತತ್ವಾದತ್ರಾಪಿ ಗುಣಕಥನಮೇವೋಚಿತಂ ನಾನ್ಯದಿತ್ಯೇತಾವತೈವ ಪರಮುಖಸ್ಯ ಮುದ್ರಿತತ್ವಾದಿತ್ಯಪಿ ದ್ರಷ್ಟವ್ಯಮ್ ॥ ೬೫ ॥

**ವಿವರಣೆ–** ಯದ್ಯಪಿ ಸತ್ಯಂ ಜ್ಞಾನಮಾನಂದಂ ಬ್ರಹ್ಮ ಎಂಬ ವಾಕ್ಯದಲ್ಲಿ ಆನಂದ ಎಂಬ ಒಂದೇ ಗುಣವನ್ನು ಹೇಳಿದೆ. ಆದ್ದರಿಂದ ಅನೇಕ ಗುಣಗಳಿಂದ ಆನಂತ್ಯ ಎಂದು ಹೇಗೆ ಸಿದ್ಧವಾಗುತ್ತದೆ ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಹೀಗೆ ಸಮಾಧಾನ. ಆನಂದ ಪದವು ಆನಂದ ಎಂಬ ಒಂದೇ ಗುಣವನ್ನು ಹೇಳುವುದಿಲ್ಲ. ಎಲ್ಲ ಗುಣವನ್ನೂ ಹೇಳುತ್ತವೆ. 'ಕಾಕೇಭ್ಯೋ ದಧಿರಕ್ಷ್ಯತಾಂ' ಕಾಗೆಗಳು ಹಾಳುಮಾಡದಂತೆ ಮೊಸರನ್ನು ರಕ್ಷಿಸಿ, ಎಂಬಲ್ಲಿ ಕಾಕಶಬ್ದಕ್ಕೆ ವಾಚ್ಯವಾದ ಕಾಕ ಒಂದೇ ಅಲ್ಲದೇ, ಮೊಸರನ್ನು ಹಾಳುಮಾಡುವ ಮಾರ್ಜಾಲ ಮೊದಲಾದವುಗಳೂ ಹೇಗೆ ಅರ್ಥವೋ, ಹಾಗೆಯೇ ಇಲ್ಲಿ ಆನಂದ ಶಬ್ದಕ್ಕೆ ಆನಂದ, ಸರ್ವಜ್ಞತ್ವ ಮೊದಲಾದ ಎಲ್ಲ ಗುಣಗಳೂ ಅರ್ಥ. ಹೀಗೆ

ಅರ್ಥಮಾಡುವುದಕ್ಕೆ ಶಾಸ್ತ್ರದಲ್ಲಿ ಅಜಹತ್ ಸ್ವಾರ್ಥಲಕ್ಷಣಾ ಎಂದು ಹೇಳುತ್ತಾರೆ. ಅಜಹತ್ ಸ್ವಾರ್ಥ ಲಕ್ಷಣಾ ಎಂದರೆ ಪದವು ತನ್ನ ವಾಚ್ಯವಾದ ಅರ್ಥವನ್ನು ಬಿಡದೇ ಅದರ ಜೊತೆಯಲ್ಲಿ ಬೇರೆ ಅರ್ಥವನ್ನೂ ಹೇಳುತ್ತದೆ ಎಂದು ಅರ್ಥ. ಆದ್ದರಿಂದ ಆನಂದ ಪದಕ್ಕೆ ಆನಂದ ಎಂದು ಇಷ್ಟೇ ಅರ್ಥವಲ್ಲ. ಆನಂದಾದಿ ಸಮಸ್ತಗುಣಗಳು ಎಂದು ಅರ್ಥ. ತೈತ್ತರೀಯಶ್ರುತಿಯಲ್ಲಿ ಹೇಳಿದ ಅನಂತ ಶಬ್ದಕ್ಕೆ ಯಾವುದರಿಂದ ಅನಂತ ಎಂಬ ಆಕಾಂಕ್ಷೆಯಿದೆ. ಅದಕ್ಕಾಗಿ ಶಾಖಾಂತರದಲ್ಲಿ ಹೇಳಿದ ಆನಂದಾದಿಸಮಸ್ತಗುಣಗಳಿಂದ ಆನಂತ್ಯ ಎಂದು ಅರ್ಥವನ್ನು ಮಾಡಬೇಕು. ಹಾಗೆ ಮಾಡಿದರೆ ಮಾತ್ರ ತೈತ್ತಿರೀಯ ವಾಕ್ಯಕ್ಕೂ, ಶಾಖಾಂತರವಾಕ್ಯಕ್ಕೂ ಏಕವಾಕ್ಯತ್ವವು ಬರುತ್ತದೆ. ಅದಲ್ಲದೇ, ತೈತ್ತರೀಯ ಶ್ರುತಿಯಲ್ಲಿ ವಸ್ತುತಃ ಅಪರಿಚ್ಛೇದವನ್ನು ಹೇಳಿ, ಶಾಖಾಂತರದಲ್ಲಿ ಆನಂದವನ್ನು ಹೇಳಿದರೆ ಅವುಗಳಿಗೆ ಪರಸ್ಪರ ಸಂಬಂಧವಿಲ್ಲದಿರುವುದರಿಂದ, ತೈತ್ತರೀಯ ವಾಕ್ಯವೇ ಬೇರೆ, ಶಾಖಾಂತರ ವಾಕ್ಯವೇ ಬೇರೆ ಎಂದು ಸಿದ್ಧವಾಗುವುದರಿಂದ ವಾಕ್ಯಭೇದವು ಬರುತ್ತದೆ. ವೇದವಾಕ್ಯಗಳಿಗೆ ಏಕವಾಕ್ಯತ್ವವನ್ನೇ ಉಪಪಾದನೆ ಮಾಡಬೇಕು. ಅದು ಗುಣ. ಏಕವಾಕ್ಯತ್ವವನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲದಿದ್ದಾಗ ಮಾತ್ರ ವಾಕ್ಯಭೇದವನ್ನು ಅಂಗೀಕರಿಸಬೇಕು. ಇಲ್ಲಿ ಏಕವಾಕ್ಯತ್ವವನ್ನು ಉಪಪಾದನೆ ಮಾಡಲು ಬರುವುದರಿಂದ, ನಾವು ಹೇಳಿದ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಿದರೆ, ವಾಕ್ಯಭೇದವು ಬಂದೇ ಬರುತ್ತದೆ, ಅದು ದೋಷವಾಗುತ್ತದೆ ಎಂದು ಅಭಿಪ್ರಾಯ.

**ನಾಲ್ಪೇ ಸುಖಮಿತಿ ಶ್ರುತ್ಯಾ ಪೂರ್ಣತ್ವಂ ಸುಖಕಾರಣಂ ।**
**ಯದುಚ್ಯತೇ ತತೋ ದೇಶಕಾಲಸದ್ಗುಣಪೂರ್ಣತಾ ॥ ೬೬ ॥**

**ಆನಂದತ್ವಸ್ಯ ಸಿದ್ಧ್ಯರ್ಥಂ ಹೇತುತ್ವೇನೇಹ ಕೀರ್ತ್ಯತೇ ।**
**ಇತಿ ವಾ ಸಂಗತಿರ್ವಾಚ್ಯಾ ಸಮಾಖ್ಯಾವಾಕ್ಯಯೋಸ್ತಯೋಃ ॥ ೬೭ ॥**

**ಅರ್ಥ–** ಯತ್= ಯಾವ ಕಾರಣದಿಂದ, ನಾಲ್ಪೇ ಸುಖಂ= ಅಲ್ಪನಲ್ಲಿ ಸುಖವಿಲ್ಲ, ಇತಿ ಶ್ರುತ್ಯಾ= ಎಂಬ ಶ್ರುತಿಯಿಂದ, ಪೂರ್ಣತ್ವಂ= ಪೂರ್ಣತ್ವವು, ಸುಖಕಾರಣಂ ಉಚ್ಯತೇ= ಸುಖಕಾರಣವೆಂದು ಹೇಳಲ್ಪಡುತ್ತದೆಯೋ, ತತಃ= ಆ ಕಾರಣದಿಂದ, ಆನಂದತ್ವಸ್ಯ ಸಿದ್ಧ್ಯರ್ಥಂ= ಆನಂದತ್ವದ ಸಿದ್ಧಿಗಾಗಿ (ಆನಂದದ ಸಿದ್ಧಿಗಾಗಿ), ಹೇತುತ್ವೇನ= ಹೇತು ರೂಪವಾಗಿ, ಇಹ= ಈ ತೈತ್ತಿರೀಯ ಶ್ರುತಿಯಲ್ಲಿ, ದೇಶಕಾಲಸದ್ಗುಣಪೂರ್ಣತಾ= ದೇಶಪೂರ್ಣತಾ, ಕಾಲಪೂರ್ಣತಾ ಮತ್ತು ಸದ್ಗುಣಪೂರ್ಣತ್ವವು, ಕೀರ್ತ್ಯತೇ= ಹೇಳಲ್ಪಡುತ್ತದೆ, ಇತಿ ವಾ= ಈ ರೀತಿಯಲ್ಲಾದರೂ, ತಯೋಃ ಸಮಾಖ್ಯಾ ವಾಕ್ಯಯೋಃ= ಆ ಎರಡು ಸಮಾಖ್ಯಾವಾಕ್ಯಗಳಿಗೆ, ಸಂಗತಿಃ= ಸಂಗತಿಯು, ವಾಚ್ಯಾ= ಹೇಳಲ್ಪಡಬೇಕು.

**ಅನುವಾದ–** 'ನಾಲ್ಪೇ ಸುಖಂ' ಅಲ್ಪನಲ್ಲಿ ಸುಖವಿಲ್ಲ ಎಂಬ ಶ್ರುತಿಯು ಪೂರ್ಣತ್ವಕ್ಕೆ ಸುಖಕಾರಣತ್ವವನ್ನು ಹೇಳುತ್ತದೆ. ಆದ್ದರಿಂದ ಶಾಖಾಂತರದಲ್ಲಿ ಹೇಳಿದ ಆನಂದತ್ವದ ಸಿದ್ಧಿಗಾಗಿ ತೈತ್ತಿರೀಯ ಶ್ರುತಿಯಲ್ಲಿ ಆನಂದಕ್ಕೆ ಕಾರಣವಾದ ದೇಶಪೂರ್ಣತ್ವ, ಕಾಲಪೂರ್ಣತ್ವ ಮತ್ತು ಸದ್ಗುಣಪೂರ್ಣತ್ವವು ಹೇಳಲ್ಪಡುತ್ತದೆ. ಈ ರೀತಿಯಲ್ಲಾದರೂ ಆ ಎರಡು ಸಮಾಖ್ಯಾವಾಕ್ಯಗಳಿಗೆ ಸಂಗತಿಯನ್ನು ಹೇಳಬೇಕು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಸಮಾಖ್ಯಾವಾಕ್ಯಯೋಃ ಸಂಗತಿಮಾಹ–ನಾಲ್ಪ ಇತಿ । ಯದ್ಯಸ್ಮಾತ್ । ನಾಲ್ಪೇಸುಖಮಿತಿ ಶ್ರುತ್ಯಾ ಅಲ್ಪೇ ಅಪೂರ್ಣೇ ಸುಖಂ ನೇತ್ಯಪೂರ್ಣೇ ಸುಖ-ನಿಷೇಧಾತ್ ಪೂರ್ಣತ್ವಂ ಸುಖಕಾರಣಮುಚ್ಯತೇ । ತತಸ್ತಸ್ಮಾತ್ । ಇಹ ತೈತ್ತಿರೀಯಶ್ರುತೌ । ಆನಂದತ್ವಸ್ಯ ಶಾಖಾಂತರೋಕ್ತಾನಂದರೂಪತ್ವಸ್ಯ ಹೇತುತ್ವೇನ ಪ್ರಯೋಜಕತ್ವೇನ ದೇಶಕಾಲ-ಸದ್ಗುಣಪೂರ್ಣತಾ ಕೀರ್ತ್ಯತ ಇತಿ ಯೋಜನಾ । ಸಂಗತಿ ರ್ಹೇತುಹೇತುಮದ್ಭಾವರೂಪಾ । ಏವಮಪಿ ವಾಕ್ಯಭೇದಃ ಪರಿಹರ್ತುಂ ಶಕ್ಯತ ಇತಿ ಭಾವಃ ॥ ೬೬-೬೭ ॥

**ವಿವರಣೆ–** 'ನಾಲ್ಪೇ ಸುಖಂ' ಎಂಬ ಛಾಂದೋಗ್ಯಶ್ರುತಿಯು ಅಲ್ಪನಲ್ಲಿ ಸುಖವಿಲ್ಲ ಎಂದು ಹೇಳುತ್ತದೆ. ಸತ್ಯಂ ಜ್ಞಾನಮಾನಂದಂ ಎಂಬ ಶಾಖಾಂತರ ಶ್ರುತಿಯು ಬ್ರಹ್ಮನಲ್ಲಿ ಸುಖ ಎಂದರೆ ಆನಂದ ಇದೆ ಎಂದು ಹೇಳುತ್ತದೆ. ಇವೆರಡೂ ಶ್ರುತಿಗಳ ಅರ್ಥವನ್ನು ಸಂಯೋಜಿಸಿದರೆ ಬ್ರಹ್ಮನು ಪೂರ್ಣನಾಗಿರಬೇಕು ಎಂದು ಸಿದ್ಧವಾಗುತ್ತದೆ. ಏಕೆಂದರೆ ಸುಖಕ್ಕೆ ಹೇತುವಾದುದು ಪೂರ್ಣತ್ವ. ಆ ಪೂರ್ಣತ್ವವನ್ನು ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ತೈತ್ತಿರೀಯ ಶ್ರುತಿಯು ಅನಂತ ಶಬ್ದದಿಂದ ಹೇಳುತ್ತದೆ. ಅನಂತ ಶಬ್ದಕ್ಕೆ ದೇಶದಿಂದ ಪೂರ್ಣ, ಕಾಲದಿಂದ ಪೂರ್ಣ ಮತ್ತು ಸದ್ಗುಣಗಳಿಂದ ಪೂರ್ಣ ಎಂದು ಅರ್ಥ. ಆದ್ದರಿಂದ ಈಗ ತೈತ್ತಿರೀಯ ಶ್ರುತಿ ಮತ್ತು ಶಾಖಾಂತರ ಶ್ರುತಿಗೆ ಉಪಪಾದ್ಯ ಉಪಪಾದಕಭಾವವಿರುವುದರಿಂದ ಹೇತು-ಹೇತುಮತ್ತ್ವರೂಪವಾದ ಸಂಗತಿ ಉಂಟಾಗುತ್ತದೆ. ಹೀಗಾದರೂ ಆ ಎರಡು ಶ್ರುತಿಗಳಿಗೆ ಸಂಗತಿಯನ್ನು ಹೇಳಬೇಕು.

ಸೌಂದರ್ಯೇಣ ಸಮಗ್ರೇಣ ಜ್ಞಾನೇನ ಚ ಬಲೇನ ಚ ।
ಪೂರ್ಣಸ್ಯ ಹ್ಯಾಪ್ತಕಾಮಸ್ಯ ವಿಭೋರ್ನಿತ್ಯಸ್ಯ ಚ ಪ್ರಭೋಃ ॥ ೬೮ ॥

ಸುಖಮೇವ ಭವೇತ್ ಪೂರ್ಣಂ ದುಃಖಸ್ಯಾವಸರೋಽಪಿ ನ ।
ತತ್ಪೂರ್ಣಸೌಖ್ಯಸಿದ್ಧ್ಯರ್ಥಮಾನಂತ್ಯೋಕ್ತಿಶ್ಚ ಶೋಭತೇ ॥ ೬೯ ॥

**ಅರ್ಥ–** ಸಮಗ್ರೇಣ ಸೌಂದರ್ಯೇಣ= ಸಮಗ್ರವಾದ ಸೌಂದರ್ಯದಿಂದ, ಜ್ಞಾನೇನ= ಸರ್ವ ವಿಷಯದ ಜ್ಞಾನದಿಂದ, ಬಲೇನ ಚ= ಮತ್ತು ಸಮಗ್ರವಾದ ಬಲದಿಂದ, ಪೂರ್ಣಸ್ಯ= ಪೂರ್ಣನಾದಂತಹ, ಆಪ್ತಕಾಮಸ್ಯ= ಎಲ್ಲ ಕಾಮಗಳನ್ನೂ ಹೊಂದಿದಂತಹ, ವಿಭೋಃ= ವ್ಯಾಪ್ತನಾದ, ನಿತ್ಯಸ್ಯ ಚ= ಮತ್ತು ನಿತ್ಯನಾದ, ಪ್ರಭೋಃ= ಸಮರ್ಥನಾದ ನಾರಾಯಣನಿಗೆ,

ಸುಖಮೇವ= ಸುಖವೇ, ಪೂರ್ಣಂ ಭವೇತ್= ಪೂರ್ಣವಾಗಿರುತ್ತದೆ, ದುಃಖಸ್ಯ= ದುಃಖದ, ಅವಸರೋಪಿ= ಅವಕಾಶವೂ ಸಹ, ನ= ಇಲ್ಲ, ತತ್= ಆದ್ದರಿಂದ, ಪೂರ್ಣಸೌಖ್ಯಸಿದ್ಧ್ಯರ್ಥಂ= ಪೂರ್ಣಸೌಖ್ಯದ ಸಿದ್ಧಿಗಾಗಿ, ಆನಂತೋಕ್ತಿಶ್ಚ= ಆನಂತ್ಯವನ್ನು ಹೇಳಿದುದೂ ಸಹ, ಶೋಭತೇ= ಶೋಭಿಸುತ್ತದೆ.

**ಅನುವಾದ–** ಸಮಗ್ರವಾದ ಸೌಂದರ್ಯದಿಂದಲೂ, ಸರ್ವವಿಷಯಕವಾದ ಜ್ಞಾನದಿಂದಲೂ, ಸಮಗ್ರವಾದ ಬಲದಿಂದಲೂ ಪೂರ್ಣನಾದಂತಹ, ಆಪ್ತಕಾಮನಾದಂತಹ, ವ್ಯಾಪ್ತನಾದಂತಹ ಮತ್ತು ನಿತ್ಯನಾದಂತಹ ಪ್ರಭುವಾದ ನಾರಾಯಣನಿಗೆ ಸುಖವೇ ಪೂರ್ಣವಾಗಿ ಆದೀತೇ ಹೊರತು ದುಃಖದ ಪ್ರಾಪ್ತಿಯ ಅವಕಾಶವೇ ಇಲ್ಲ. ಆದ್ದರಿಂದ ಪೂರ್ಣಸೌಖ್ಯದ ಸಿದ್ಧಿಗಾಗಿ ಆನಂತ್ಯವನ್ನು ಹೇಳಿದುದೂ ಸಹ ಶೋಭಿಸುತ್ತದೆ.

**ಭಾವವಿಲಾಸಿನೀ–** ಹೇತುಹೇತುಮದ್ಭಾವಮೇವ ಸ್ಫೋರಯತಿ – **ಸೌಂದರ್ಯೇಣೇತಿ** ॥ ವಿಭೋಃ ದೇಶವ್ಯಾಪ್ತಸ್ಯ । ಸಮಗ್ರೇಣೇತಿ ಯಥಾಯೋಗ್ಯಂ ಸಂಬಂಧಃ । ಅನ್ಯತ್ ಸ್ಪಷ್ಟಮ್ । ಸೌಂದರ್ಯಾದಿ ಗುಣಭರಿತಸ್ಯ ಸದಾಸುಖಮೇವ ಭವೇತ್ । ದುಃಖಸ್ಯಾವಸರೋಪಿ ನ । ಸ್ವಸ್ಮಾದಧಿಕಸೌಂದರ್ಯಾದಿ ಗುಣಭರಿತ ಪುರುಷದರ್ಶನೇ ಸತೀರ್ಷ್ಯಯಾ ಸ್ವಗುಣಹ್ರಾಸಾದಿನಾ ಜಾತಚಿಂತಯಾ ವಾ ಏಕಸ್ಮಿನ್‌ದೇಶೇ ಕಾಲೇ ಚ ಸತ್ತ್ವೇಽಪಿ ದೇಶಕಾಲಾಂತರೇಽಭಾವಚಿಂತಯಾ ವಾ ದುಃಖಂ ಸ್ಯಾತ್ । ಸಮಗ್ರ ಸೌಂದರ್ಯಾದಿಗುಣಭರಿತಸ್ಯ ತು ಕೇನ ನಿಮಿತ್ತೇನ ಕದಾ ದುಃಖಂ ಸ್ಯಾತ್ । ಕಿಂತು ಸರ್ವದಾ ಸುಖಮೇವ ಭವೇತ್ । ತತ್ತಸ್ಮಾತ್ । ಆನಂತ್ಯೋಕ್ತಿಃ ದೇಶಕಾಲ-ಗುಣಪೂರ್ಣತ್ವೋಕ್ತಿಃ ಶೋಭತೇ ಶಾಖಾಂತರೋಕ್ತಾನಂದರೂಪತ್ವಸಾಧಕತಯಾ ಸಂಗಚ್ಛತ ಇತಿ ಸಮುದಾಯಾರ್ಥಃ ॥ ೬೮- ೬೯ ॥

**ವಿವರಣೆ–** ತೈತ್ತಿರೀಯ ಶ್ರುತಿಯು ಹೇಳಿದ ಆನಂತ್ಯವು ಗುಣಗಳಿಂದಲೇ ಏಕಾಗಬೇಕು ದೋಷದಿಂದ ಆನಂತ್ಯವು ಏಕಾಗಬಾರದು ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾ, ಎರಡು ಸಮಾಖ್ಯಾಶ್ರುತಿಗಳಿಗೆ ಪ್ರಕಾರಾಂತರದಿಂದ ಸಂಗತಿಯನ್ನು ಹೇಳುತ್ತಾರೆ. ಶ್ರುತಿಗಳಿಂದ ನಾರಾಯಣನು ಸೌಂದರ್ಯದಿಂದಲೂ, ಜ್ಞಾನದಿಂದಲೂ, ಬಲದಿಂದಲೂ ಪೂರ್ಣನಾಗಿದ್ದಾನೆಂದು ತಿಳಿದುಬರುತ್ತದೆ. ಸೌಂದರ್ಯದಿಂದ ಪೂರ್ಣನಾಗಿರುವುದರಿಂದ ಇನ್ನೊಬ್ಬ ಸುಂದರನನ್ನು ನೋಡಿ ಅಸೂಯೆ ಪಡುವ ಸಾಧ್ಯತೆ ಇಲ್ಲ. ಬಲದಿಂದ ಪೂರ್ಣನಾಗಿರುವುದರಿಂದ ತನಗಿಂತ ಪ್ರಬಲವಾದವನ ಬಲಕ್ಕೆ ಹೆದರಿ ಚಿಂತಿಸುವ ಅಗತ್ಯವಿಲ್ಲ. ನಿತ್ಯನಾಗಿರುವುದರಿಂದ ಕಾಲದಿಂದ ನಾಶದ ಭಯವಿಲ್ಲ. ವ್ಯಾಪ್ತನಾಗಿರುವುದರಿಂದ ಒಂದು ದೇಶದಲ್ಲಿದ್ದೇನೆ, ಇನ್ನೊಂದು ದೇಶದಲ್ಲಿಲ್ಲ ಎಂಬ ಚಿಂತೆಯಿಲ್ಲ. ಹೀಗೆ ತನ್ನ ದೋಷಗಳನ್ನೆಲ್ಲವೂ ಅನಾದಿಕಾಲದಿಂದ ನಿರಸನ ಮಾಡಿ, ತನ್ನ ಗುಣಗಳೆಲ್ಲವನ್ನೂ ಸಂಪಾದಿಸಿಕೊಳ್ಳುವ ಶಕ್ತಿಯುಳ್ಳ ಮಹಾಪ್ರಭುವಿಗೆ ದೋಷವು ಎಲ್ಲಿಂದ

ಬಂದೀತು? ಆದ್ದರಿಂದ ದೋಷಪೂರ್ಣತೆಯು ಅನಂತಶಬ್ದಾರ್ಥವಲ್ಲ. ಗುಣ ಪೂರ್ಣತೆಯೇ ಅನಂತಶಬ್ದಾರ್ಥ. ಶಾಖಾಂತರವು ಹೇಳಿದ ಆನಂದವು ಪೂರ್ಣವಾದ ಆನಂದ ಎಂದು ಉಪಪಾದನೆ ಮಾಡುವುದಕ್ಕಾಗಿ ತೈತ್ತಿರೀಯ ಶ್ರುತಿಯು ಅನಂತ ಎಂದು ಶಬ್ದವನ್ನು ಹೇಳುತ್ತದೆ. ಹೀಗಾದರೂ ಎರಡು ಶ್ರುತಿಗಳಿಗೆ ಹೇತು-ಹೇತುಮದ್ಭಾವ ಸಂಗತಿಯನ್ನು ಹೇಳಬೇಕು.

**ಅತೋ ದೇಶಾಚ್ಚ ಕಾಲಾಚ್ಚ ಗುಣತಶ್ಚಾಂತಶೂನ್ಯತಾ ।**
**ಶ್ರುತ್ಯುಕ್ತಂ ತದನಂತತ್ವಂ ನಾನ್ಯತ್ತತ್ತ್ವಮಿತಿ ಸ್ಥಿತಂ ॥ ೭೦ ॥**

**ಅರ್ಥ–** ಅತಃ= ಆದ್ದರಿಂದ, ದೇಶಾಚ್ಚ= ದೇಶದಿಂದಲೂ, ಕಾಲಾಚ್ಚ= ಕಾಲದಿಂದಲೂ, ಗುಣತಶ್ಚ= ಗುಣಗಳಿಂದಲೂ, ಅಂತಶೂನ್ಯತಾ= ಅಂತಾಭಾವವು, ಶ್ರುತ್ಯುಕ್ತಂ= ಶ್ರುತಿಯಲ್ಲಿ ಹೇಳಲ್ಪಟ್ಟ, ತದನಂತತ್ವಂ= ಆ ಅನಂತತ್ವವು ಆಗಿದೆ, ಅನ್ಯತ್= ಬೇರೆ ಅರ್ಥವು, ನತತ್ತ್ವಂ= ತತ್ತ್ವವಲ್ಲ, ಇತಿ= ಎಂದು, ಸ್ಥಿತಂ= ಸಿದ್ಧವಾಯಿತು.

**ಅನುವಾದ–** ಆದ್ದರಿಂದ ದೇಶದಿಂದ ಅನಂತತ್ವ, ಕಾಲದಿಂದ ಅನಂತತ್ವ ಮತ್ತು ಗುಣಗಳಿಂದ ಅನಂತತ್ವವೇ ಅನಂತಶಬ್ದಾರ್ಥವೆಂದು ಸಿದ್ಧವಾಯಿತು. ಹೊರತಾಗಿ ಮಾಯಾವಾದಿಗಳು ಹೇಳುವ ಮೂರನೆಯ ಅರ್ಥವಾದ ವಸ್ತುತಃ ಅನಂತತ್ವವು ಶ್ರುತ್ಯರ್ಥವಲ್ಲ ಎಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಅತಃ ಪೂರ್ವೋಕ್ತಯುಕ್ತಿಭಿಃ । ತದನಂತತ್ವಮ್ । ತಸ್ಯ ಬ್ರಹ್ಮಣಃ ಅನಂತತ್ವಮ್ । ಅನ್ಯತ್ ಸಕಲವಸ್ತ್ವಾತ್ಮಕತ್ವಂ ತತ್ವಂ ನೇತಿ ಸ್ಥಿತಮಿತಿ ಸಂಬಂಧಃ ॥ ೭೦ ॥

**ಅನಂತಶ್ರುತಿತಶ್ಚೈವ ಹ್ಯನಂತಗುಣತಾ ಯತಃ ।**
**ಸಿದ್ಧಾ ತತಶ್ಚ ನೈರ್ಗುಣ್ಯವಾದೋ ಮೋದಾಯ ನೇಷ್ಯತೇ ॥ ೭೧ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಅನಂತಶ್ರುತಿತಃ= ಅನಂತ ಎಂಬ ಶ್ರುತಿಯಿಂದ, ಅನಂತಗುಣತಾ= ಅನಂತಗುಣತ್ವವೇ, ಸಿದ್ಧಾ= ಸಿದ್ಧವಾಯಿತೋ, ತತಶ್ಚ= ಆ ಕಾರಣದಿಂದಲೂ, ನೈರ್ಗುಣ್ಯವಾದಃ= ನೈರ್ಗುಣ್ಯವಾದವು, ಮೋದಾಯ= ಸಂತೋಷವನ್ನು ಕೊಡುವುದಾಗಿ, ನೇಷ್ಯತೇ= ಶ್ರುತಿಯಿಂದಾಗಲೀ, ಜ್ಞಾನಿಗಳಿಂದಾಗಲೀ ಸ್ವೀಕರಿಸಲ್ಪಡುವುದಿಲ್ಲ.

**ಅನುವಾದ–** ಯಾವ ಕಾರಣದಿಂದ, 'ಸತ್ಯಂ ಜ್ಞಾನಮನಂತಂ' ಎಂಬ ತೈತ್ತಿರೀಯ ಶ್ರುತಿಯು ಹೇಳಿದ ಅನಂತತ್ವವು ಗುಣಗಳಿಂದ ಅನಂತ ಎಂದೇ ಅರ್ಥವನ್ನು ಸಿದ್ಧ-ಮಾಡಿಕೊಡುತ್ತದೆಯೋ, ಆ ಕಾರಣದಿಂದ ಬ್ರಹ್ಮನು ನಿರ್ಗುಣ ಎಂಬ ವಾದವು ಶ್ರುತಿಗಾಗಲೀ ಅಥವಾ ಯಾವ ಸಜ್ಜನರಿಗಾಗಲೀ ಸಂತೋಷವನ್ನುಂಟು-ಮಾಡುವುದಿಲ್ಲ.

**ಭಾವವಿಲಾಸಿನೀ–** ಏವಂ ಪರೋದೀರಿತೈಕ್ಯಾರ್ಥಖಂಡನೇನ ಸ್ವಾಭಿಮತಾರ್ಥಕಥನೇ ಸತ್ಯಾನುಷಂಗಿಕತಯಾಽತೀತ ಸೌರಭದ್ವಯಾರ್ಥೋಽಪಿ ಸಿದ್ಧ ಇತ್ಯಾಹ – **ಅನಂತತೇತಿ** ॥ ಅನಂತಗುಣತ್ವಸಿದ್ಧ್ಯಾ ಗುಣಸೌರಭಸಂಗತಿಃ । ನೈರ್ಗುಣ್ಯಾಖ್ಯದೋಷದೂಷಣೇನ ಶುದ್ಧಿಸೌರಭಸಂಗತಿಶ್ಚ ದ್ರಷ್ಟವ್ಯಾ ॥ ೭೧ ॥

**ಕಿಂಚೋಕ್ತರೀತ್ಯಾ ದೇಶಾಚ್ಚ ಕಾಲಾಚ್ಚ ಗುಣತಸ್ತಥಾ ।**
**ನಾಂತ ಇತ್ಯುದಿತೇ ಸರ್ವದೇಶಕಾಲಗುಣೈಃ ಸದಾ ।**
**ಸಂಬಂಧ ಇತಿ ಶಬ್ದಸ್ಯ ಶಕ್ಯಾರ್ಥಸ್ತ್ವೇಕ ಏವ ಚ ॥ ೭೨ ॥**

**ಅರ್ಥ–** ಕಿಂಚ= ಮತ್ತು, ಉಕ್ತರೀತ್ಯಾ= ಹಿಂದೆ ಹೇಳಿದ ರೀತಿಯಲ್ಲಿ, ದೇಶಾಚ್ಚ= ದೇಶದಿಂದಲೂ, ಕಾಲಾಚ್ಚ= ಮತ್ತು ಕಾಲದಿಂದಲೂ, ತಥಾ ಗುಣತಃ= ಮತ್ತು ಗುಣದಿಂದಲೂ, ಅಂತೋ ನ= ಅಂತವಿಲ್ಲವೆಂದು ಹೇಳಿದರೆ, ಸರ್ವದೇಶಕಾಲಗುಣೈಃ= ಎಲ್ಲ ದೇಶಕಾಲ ಮತ್ತು ಗುಣಗಳಿಂದ, ಸದಾ= ಯಾವಾಗಲೂ, ಸಂಬಂಧಃ= ಸಂಬಂಧವು ಇದೆ, ಇತಿ= ಎಂದು, ಶಬ್ದಸ್ಯ= ಅನಂತ ಶಬ್ದದ, ಶಕ್ಯಾರ್ಥಃ ತು= ಶಕ್ಯಾರ್ಥವಾದರೂ, ಏಕ ಏವ ಚ= ಒಂದೇ ಆಗುತ್ತದೆ.

**ಅನುವಾದ–** ಮತ್ತು ನಾವು ಹಿಂದೆ ಹೇಳಿದಂತೆ, ದೇಶದಿಂದಲೂ, ಕಾಲದಿಂದಲೂ ಮತ್ತು ಗುಣಗಳಿಂದಲೂ ಅಂತವಿಲ್ಲವೆಂಬುದು ಅನಂತಶಬ್ದಾರ್ಥವೆಂದು ಹೇಳಿದರೆ, ಸರ್ವದೇಶ, ಕಾಲ, ಗುಣಗಳ ಸಂಬಂಧವನ್ನು ಉಳ್ಳದ್ದು ಎಂಬ ಅನಂತಶಬ್ದದ ಶಕ್ಯಾರ್ಥವು ಒಂದೇ ಆಗುತ್ತದೆ.

**ಭಾವವಿಲಾಸಿನೀ–** ಪೂರ್ವಂ ಬ್ರಹ್ಮಣಃ ಸಕಲದೇಶಕಾಲೇಷ್ವಾಶ್ರಿತತ್ವಂ ಸಕಲಸದ್ಗುಣಾಧಾರತ್ವಂ ಚಾನಂತಶಬ್ದಸ್ಯ ಪರ್ಯವಸಿತೋಽರ್ಥ ಇತ್ಯಂಗೀಕೃತ್ಯ ಸಕಲಗುಣಾಧಾರತ್ವವತ್ ಸಕಲವಸ್ತ್ವಾಧಾರತ್ವಮಪಿ ಕುತೋನೋಚ್ಯತ ಇತ್ಯಸ್ಯ ದ್ವೇಧಾಪರಿಹಾರ ಉಕ್ತಃ । ಅಧುನಾ ಸಕಲದೇಶಕಾಲಗುಣಸಂಬಂಧ ಏವಾನಂತಶಬ್ದಸ್ಯ ಪರ್ಯವಸಿತೋಽರ್ಥೋಽ ನತು ಕ್ವಚಿದಾಹಿತತ್ವಂ ಕಸ್ಯಚಿದಾಧಾರತ್ವಂ ಚೇತಿ ವದನ್ ವಸ್ತುತೋಽನಂತತ್ವಸ್ಯ ಪ್ರಕಾರಾಂತರೇಣಾಪಿ ದ್ವೇಧಾ ಗತಾರ್ಥತಾಂ ವಕ್ತುಮಾರಭತೇ – **ಕಿಂಚೇತ್ಯಾದಿನಾ** ॥ ಶಬ್ದಸ್ಯಾನಂತಶಬ್ದಸ್ಯ । ಶಕ್ಯಃ ಪರ್ಯವಸಿತಃ । ಅನ್ಯತ್ ಸ್ಪಷ್ಟಮ್ ॥ ೭೨ ॥

**ವಿವರಣೆ–** ಹಿಂದೆ ಬ್ರಹ್ಮನಿಗೆ ಸಕಲ ದೇಶಕಾಲಗಳಲ್ಲಿ ಆಶ್ರಿತತ್ವವು, ಸಕಲ ಸದ್ಗುಣಗಳನ್ನು ಕುರಿತು ಆಧಾರತ್ವವು ಅನಂತಶಬ್ದಾರ್ಥವೆಂದು ಹೇಳಿದಾಗ ಸಕಲ ಗುಣಾಧಾರತ್ವದಂತೆ ಸಕಲವಸ್ತ್ವಾಧಾರತ್ವವು ಏಕೆ ಅನಂತಶಬ್ದಾರ್ಥವಾಗಬಾರದು ಎಂಬ ಪ್ರಶ್ನೆಗೆ ಎರಡು ರೀತಿಯ ಪರಿಹಾರವನ್ನು ಹೇಳಿದರು. ಈಗ ಅನಂತಶಬ್ದಾರ್ಥವು ಒಂದೇ. ಅದು ಸಕಲ ದೇಶಕಾಲಗಳ ಸಂಬಂಧರೂಪವಾದುದು ಹೊರತು ಹಿಂದೆ ಹೇಳಿದಂತೆ ದೇಶಕಾಲಗಳಲ್ಲಿ ಆಧೇಯತ್ವರೂಪವಾದುದು ಮತ್ತು ಗುಣಗಳಲ್ಲಿ ಆಧಾರತ್ವ-

ರೂಪವಾದುದು ಅಲ್ಲ ಎಂದು ಹೇಳುತ್ತಾ, ವಸ್ತುತಃ ಅನಂತ ಎಂಬ ಅರ್ಥವನ್ನು ಹೇಳಿದರೆ ಅದಕ್ಕೆ ಗತಾರ್ಥತ್ವವು ಉಂಟಾಗುವುದೆಂದು ಎರಡು ರೀತಿಯಲ್ಲಿ ಪ್ರತಿಪಾದನೆ ಮಾಡಲು ಉಪಕ್ರಮಿಸುತ್ತಾರೆ. ಅನಂತಶಬ್ದಕ್ಕೆ ಸರ್ವದೇಶಾಶ್ರಿತ, ಸರ್ವಕಾಲಾಶ್ರಿತ, ಸರ್ವಗುಣಾಧಾರ ಎಂಬ ಹಿಂದಿನ ಅರ್ಥವನ್ನು ಬಿಟ್ಟು, ಸರ್ವದೇಶಕಾಲಗಳ ಸಂಬಂಧವನ್ನು ಉಳ್ಳವನು ಎಂಬ ಒಂದೇ ಅರ್ಥವನ್ನು ಮಾಡಿದಾಗ, ಪರ್ಯವಸಿತವಾದ ಅರ್ಥವು ಒಂದೇ ಆಗಿರುವುದು, ಈ ಕಲ್ಪದಲ್ಲಿ ಗುಣವಾಗಿರುತ್ತದೆ ಎಂದು ಅಭಿಪ್ರಾಯ.

**ಸ ಚ ಯೋಗ್ಯತಯಾ ಧರ್ಮೇ ಧರ್ಮಧರ್ಮಿತ್ವಮಿಷ್ಯತೇ ।**
**ಸಂಯೋಗೋ ದೇಶಕಾಲಾಭ್ಯಾಮಿತಿ ಸರ್ವಸ್ಯ ಸಂಮತಂ ॥ ೭೩ ॥**

**ಅರ್ಥ–** ಸ ಚ= ಆ ಸಂಬಂಧವಾದರೂ, ಧರ್ಮೇ= ಧರ್ಮದ ವಿಷಯದಲ್ಲಿ, ಯೋಗ್ಯತಯಾ= ಸ್ವಭಾವದಿಂದ, ಧರ್ಮಧರ್ಮಿತ್ವಂ= ಧರ್ಮಧರ್ಮಿಭಾವ ರೂಪವಾದುದಾಗಿ, ಇಷ್ಯತೇ= ಸ್ವೀಕರಿಸಲ್ಪಡುತ್ತದೆ, ದೇಶಕಾಲಾಭ್ಯಾಂ= ದೇಶಕಾಲಗಳ ಜೊತೆಯಲ್ಲಿ, ಸಂಯೋಗಃ= ಸಂಯೋಗರೂಪವಾದುದು, ಇತಿ= ಎಂದು, ಸರ್ವಸ್ಯ= ಎಲ್ಲರಿಗೂ, ಸಂಮತಂ= ಸಮ್ಮತವಾದುದು.

**ಅನುವಾದ–** ಆ ಸಂಬಂಧವು ಧರ್ಮದ ವಿಷಯದಲ್ಲಿ ಧರ್ಮಧರ್ಮಿಭಾವರೂಪವಾದುದಾಗಿ ಸ್ವೀಕರಿಸಲ್ಪಡುತ್ತದೆ. ದೇಶಕಾಲಗಳ ಜೊತೆಯಲ್ಲಿ ಸಂಯೋಗವೇ ಸಂಬಂಧವೆಂಬುದು ಎಲ್ಲರಿಗೂ ಸಮ್ಮತವಾದುದು.

**ಭಾವವಿಲಾಸಿನೀ–** ಸ ಚ ಸಂಬಂಧಃ । ಯೋಗ್ಯತಯಾ ಧರ್ಮಧರ್ಮಿಣೋರ್ಧರ್ಮಧರ್ಮಿಭಾವಸ್ಯ ದ್ರವ್ಯಯೋಃ ಸಂಯೋಗಸ್ಯೈವ ಸಂಭಾವಿತತ್ವೇನೇತ್ಯರ್ಥಃ ॥ ೭೩ ॥

**ವಿವರಣೆ–** ಅನಂತಶಬ್ದದ ಶಕ್ಯಾರ್ಥವು ಸಕಲ ದೇಶ, ಕಾಲ, ಗುಣಸಂಬಂಧವೆಂಬುದಷ್ಟೇ. ಆದರೆ ವಸ್ತುವಿನ ಸ್ವಭಾವವನ್ನುಸರಿಸಿ ಸಂಬಂಧವು ಬೇರೆ ಬೇರೆ ವಸ್ತುವಿನಲ್ಲಿ ಬೇರೆ ಬೇರೆ ರೂಪವಾಗುತ್ತದೆ. ದ್ರವ್ಯಗಳಿಗೆ ಮಾತ್ರ ಸಂಯೋಗ ಎಂಬ ತಾರ್ಕಿಕರ ನಿಯಮವನ್ನು ಅಂಗೀಕರಿಸಿದವರಿಗೆ, ದೇಶಕಾಲಗಳು ದ್ರವ್ಯಗಳಾದ್ದರಿಂದ, ದೇಶಕಾಲಗಳಿಗೂ ಮತ್ತು ಬ್ರಹ್ಮನಿಗೂ ಇರುವ ಸಂಬಂಧವು ಸಂಯೋಗರೂಪವಾದುದು ಎಂದು ಹೇಳುತ್ತೇವೆ. ಸರ್ವಜ್ಞತ್ವಾದಿ ಧರ್ಮಗಳು ಗುಣಗಳಾದ್ದರಿಂದ, ಗುಣಗಳಿಗೂ ಮತ್ತು ದ್ರವ್ಯಕ್ಕೂ ಸಂಯೋಗವನ್ನು ಒಪ್ಪದಿರುವುದರಿಂದ, ಅಲ್ಲಿ ಘಟ ಮತ್ತು ರೂಪಗಳಿಗೆ ಒಪ್ಪಿದಂತೆ ಧರ್ಮಧರ್ಮಿಭಾವವನ್ನೇ ಒಪ್ಪಬೇಕಾಗುತ್ತದೆ.

**ಏವಂ ಚ ವಸ್ತುತೋಽಪ್ಯಸ್ಯ ನಾಂತ ಇತ್ಯುದಿತೇ ಸತಿ ।**
**ಸರ್ವೈಶ್ಚ ವಸ್ತುಭಿಃ ಸಿದ್ಧ್ಯೇತ್ ಸದಾ ಸಂಬಂಧ ಏವ ಹಿ ॥ ೭೪ ॥**

**ಅರ್ಥ–** ಏವಂ ಚ= ಆದ್ದರಿಂದ, ಅಸ್ಯ= ಈ ಬ್ರಹ್ಮನಿಗೆ, ವಸ್ತುತೋಪಿ= ವಸ್ತುಗಳಿಂದಲೂ, ನ ಅಂತಃ= ಅಂತವಿಲ್ಲ, ಇತ್ಯುದಿತೇ ಸತಿ= ಹೀಗೆ ಹೇಳಲ್ಪಟ್ಟರೆ, ಸರ್ವೈಃ ವಸ್ತುಭಿಶ್ಚ= ಎಲ್ಲ ವಸ್ತುಗಳಿಂದಲೂ, ಸದಾ= ಯಾವಾಗಲೂ, ಸಂಬಂಧ ಏವ= ಸಂಬಂಧವೇ, ಸಿಧ್ಯೇತ್ ಹಿ= ಸಿದ್ಧವಾಗುವುದಷ್ಟೇ.

**ಅನುವಾದ–** ಆದ್ದರಿಂದ ವಸ್ತುತೋ ಅನಂತ ಎಂಬುದು ಅನಂತಶಬ್ದಾರ್ಥವೆಂದು ಹೇಳಿದರೂ, ಬ್ರಹ್ಮನಿಗೆ ಸರ್ವವಸ್ತುಗಳಿಂದ ಸದಾ ಸಂಬಂಧವು ಮಾತ್ರ ಸಿದ್ಧವಾಗುವುದಷ್ಟೇ?

**ಭಾವವಿಲಾಸಿನೀ–** ಏವಂಚ ದೇಶಕಾಲಗುಣಸಂಬಂಧಸ್ಯೈವಾನಂತ ಶಬ್ದಾರ್ಥತ್ವೇ । ಅಸ್ಯ ಬ್ರಹ್ಮಣಃ ॥ ೭೪ ॥

**ವಿವರಣೆ–** ಅನಂತಶಬ್ದದಿಂದ ಸರ್ವದೇಶ, ಸರ್ವಕಾಲಗಳ ಸಂಬಂಧ ಹೇಗೆ ಸಿದ್ಧವಾಗುತ್ತದೆಯೋ, ಹಾಗೆಯೇ ಸರ್ವವಸ್ತುಗಳ ಸಂಬಂಧವೂ ಸಿದ್ಧವಾಗುತ್ತದೆ, ಹೊರತಾಗಿ ವಸ್ತುಪ್ರತಿಯೋಗಿಕ ಭೇದದ ಅಭಾವವು ಸಿದ್ಧವಾಗುವುದಿಲ್ಲ.

**ಸ ಚ ಕುಂಡಪಟಾದೌ ಚೇತ್ ಸಂಯೋಗೋ ದೇಶಕಾಲವತ್ ॥ ೭೫ ॥**

**ತತ್ತದ್ಗುಣಕ್ರಿಯಾದ್ಯೈಶ್ಚೇತ್ ಕೇಷಾಂಚಿದ್ ವಾದಿನಾಂ ಮತೇ ।**
**ಸಂಯುಕ್ತಸಮವಾಯಾದಿಃ ಸ್ಯಾತ್ ಸಂಬಂಧೋಽಪರೋಪಿ ವಾ ॥ ೭೬ ॥**

**ಅರ್ಥ–** ಸ ಚ= ಆ ಸಂಬಂಧವು, ಕುಂಡಪಟಾದೌ ಚೇತ್= ಕುಂಡಪಟಗಳ ವಿಷಯದಲ್ಲಾದರೆ, ದೇಶಕಾಲವತ್= ದೇಶಕಾಲಗಳಂತೆ, ಸಂಯೋಗಃ= ಸಂಯೋಗವೇ ಆಗುತ್ತವೆ, ತತ್ತದ್ಗುಣಕ್ರಿಯಾದ್ಯೈಶ್ಚೇತ್= ಆಯಾ ಗುಣಕ್ರಿಯಗಳಿಂದಾದರೆ, ಸಂಬಂಧಃ= ಆ ಸಂಬಂಧವು, ಕೇಷಾಂಚಿದ್ವಾದಿನಾಂ ಮತೇ= ಕೆಲವು ವಾದಿಗಳ ಮತದಲ್ಲಿ, ಸಂಯುಕ್ತ ಸಮವಾಯಾದಿಃ= ಸಂಯುಕ್ತಸಮವಾಯ ಮೊದಲಾದ ರೂಪವಾದುದು, ವಾ= ಅಥವಾ, ಅಪರೋಪಿ ಸ್ಯಾತ್= ಬೇರೆ ರೂಪವಾದುದೂ ಆಗುತ್ತದೆ.

**ಅನುವಾದ–** ಆ ಸರ್ವವಸ್ತು ಸಂಬಂಧವು ಘಟಪಟಾದಿ ವಿಷಯಗಳಲ್ಲಾದರೆ, ದೇಶಕಾಲಗಳಂತೆ ಸಂಯೋಗರೂಪವೇ ಆಗುತ್ತದೆ. ಘಟಪಟಾದಿಗಳಲ್ಲಿರುವ ರೂಪ, ಕ್ರಿಯಾ ಮೊದಲಾದವುಗಳಿಂದಾದರೆ ಕೆಲವು ವಾದಿಗಳ ಮತದಲ್ಲಿ ಅದು ಸಂಯುಕ್ತ ಸಮವಾಯ ರೂಪವಾದುದಾಗುತ್ತದೆ. ಅಥವಾ ಬೇರೆ ಸಂಬಂಧವೂ ಆಗಬಹುದು.

**ಭಾವವಿಲಾಸಿನೀ–** ಸಃ ವಸ್ತುಸಂಬಂಧಃ ॥ ೭೫ ॥

**ತತ್ತದ್ಗುಣಕ್ರಿಯಾದ್ಯೈಃ ತೇಷಾಂ ತೇಷಾಂ ಘಟಪಟಾದೀನಾಂ ಗುಣಾಕ್ರಿಯಾದ್ಯೈರಪರಃ ಸಂಯೋಗೋ ವಾ ॥ ೭೬ ॥**

**ವಿವರಣೆ–** ಸರ್ವವಸ್ತು ಸಂಬಂಧ ಎಂದರೆ ಸರ್ವ ಘಟಪಟಾದಿ ವಸ್ತುಗಳ ಸಂಬಂಧ ಅಥವಾ ಘಟಪಟಾದಿ ವಸ್ತುಗಳಲ್ಲಿರುವ ಗುಣಕ್ರಿಯಾದಿಗಳ ಸಂಬಂಧ ಅಥವಾ ಅಲ್ಲಲ್ಲಿರುವ ಅಭಾವದ ಸಂಬಂಧ ಎಂದು ಆಗಬೇಕು. ಭಾವಾಭಾವಗಳನ್ನು ಬಿಟ್ಟು ಬೇರೆ ಯಾವ ವಸ್ತುಗಳಿಲ್ಲವಷ್ಟೇ? ದ್ರವ್ಯಗಳಿಗೇ ಸಂಯೋಗವಿರುವುದರಿಂದ ದೇಶಕಾಲಗಳ ಜೊತೆಯಲ್ಲಿ ಬ್ರಹ್ಮನಿಗೆ ಹೇಗೆ ಸಂಯೋಗವಿದೆಯೋ, ಹಾಗೆಯೇ ಘಟಪಟಾದಿ ವಸ್ತುಗಳ ಜೊತೆಯಲ್ಲಿ ಸಂಯೋಗವು ಸಿದ್ಧಿಸುತ್ತದೆ. ಘಟಪಟಾದಿಗಳಲ್ಲಿರುವ ಗುಣಕ್ರಿಯೆಗಳಲ್ಲಿ ತಾರ್ಕಿಕ ಮತದಂತೆ ಸಂಯುಕ್ತ ಸಮವಾಯರೂಪವಾದ ಸಂಬಂಧವಿದೆ. ಬ್ರಹ್ಮನಿಂದ ಘಟವು ಸಂಯುಕ್ತವಾಗಿದೆ. ಘಟದಲ್ಲಿ ಸಮವಾಯ ಸಂಬಂಧದಿಂದ ಗುಣಕ್ರಿಯಾದಿಗಳಿವೆ ಎಂದು ಅಭಿಪ್ರಾಯ. ಅಭಾವದಿಂದ ಆಗುವುದಾದರೆ ಸ್ವರೂಪಸಂಬಂಧ ಎಂಬ ಇನ್ನೊಂದು ಸಂಬಂಧವನ್ನು ಹೇಳುತ್ತಾರೆ. ಆದ್ದರಿಂದ ಎಲ್ಲ ವಸ್ತುಗಳ ಸಂಬಂಧವು ಈ ರೀತಿಯಲ್ಲಿ ಪರ್ಯವಸಾನವನ್ನು ಹೊಂದುತ್ತದೆ.

**ಅಯಂ ಚ ದೇಶವ್ಯಾಪ್ತ್ಯುಕ್ತ್ಯಾ ಗತಾರ್ಥತ್ವಾನ್ನ ಸಾರ್ಥಕಃ ॥ ೭೭ ॥**

**ಅರ್ಥ–** ಅಯಂ ಚ= ಈ ಅರ್ಥವಾದರೂ, ದೇಶವ್ಯಾಪ್ತ್ಯುಕ್ತ್ಯಾ= ಸರ್ವದೇಶ ವ್ಯಾಪ್ತಿಯನ್ನು ಹೇಳಿರುವುದರಿಂದ, ಗತಾರ್ಥತ್ವಾತ್= ಗತಾರ್ಥವಾಗುವುದರಿಂದ, ನ ಸಾರ್ಥಕಃ= ಸಾರ್ಥಕವಾಗುವುದಿಲ್ಲ.

**ಅನುವಾದ–** ಇಂತಹ ಸಂಬಂಧವು ಸರ್ವದೇಶಸಂಬಂಧವನ್ನು ಹೇಳಿರುವುದರಿಂದ ಗತಾರ್ಥವಾಗುವುದರಿಂದ, ಸಾರ್ಥಕವಾಗುವುದಿಲ್ಲ.

**ಭಾವವಿಲಾಸಿನೀ–** ಅಯಂ ಚ ದ್ವಿವಿಧವಸ್ತುಸಂಬಂಧಶ್ಚ ದೇಶವ್ಯಾಪ್ತ್ಯುಕ್ತ್ಯಾ ಸಕಲದೇಶಸಂಬಂಧೋಕ್ತ್ಯಾ ಗತಾರ್ಥತ್ವಾತ್ ಸಾರ್ಥಕೋನ । ಸಕಲದೇಶಸಂಬಂಧಕಥನೇ ತದಂತರ್ಗತ ಘಟಪಟಾದಿಸಂಬಂಧೋಪ್ಯುಕ್ತಪ್ರಾಯೋ ವ್ಯರ್ಥಶ್ಚೇತಿ ನ ಪೃಥಗ್‌ವಾಚ್ಯ ಇತಿ ಭಾವಃ ॥ ೭೭ ॥

**ವಿವರಣೆ–** ಸರ್ವದೇಶ ಸಂಬಂಧವನ್ನು ಹೇಳಿದರೆ ಸರ್ವದೇಶದಲ್ಲಿರುವ ದ್ರವ್ಯಗಳ ಅಥವಾ ಗುಣಕ್ರಿಯಾದಿ ಭಾವಪದಾರ್ಥಗಳ ಅಥವಾ ಅಭಾವ ಪದಾರ್ಥಗಳ ಸಂಬಂಧವು ಸ್ವತ ಏವ ಸಿದ್ಧವಾಗುತ್ತವೆ. ಅದನ್ನು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ಆದ್ದರಿಂದ ಅನಂತಶಬ್ದವು ಇಂತಹ ವಸ್ತುತಃ ಆನಂತ್ಯವನ್ನು ಹೇಳುವುದಿಲ್ಲ.

**ಯದಿ ಸ್ವನಿಷ್ಠಸದ್ಧರ್ಮೈಃ ಸಂಬಂಧಃ ಶುಭವಸ್ತುಭಿಃ ।**
**ತದಾ ಸ್ಯಾದ್ ಧರ್ಮಧರ್ಮಿತ್ವಂ ತಚ್ಚಾನಂತ್ಯಂ ಗುಣೇನ ಹಿ ।**
**ಅತಸ್ತನ್ನ ಪೃಥಕ್ ಪ್ರೋಚುಸ್ತತ್ವಜ್ಞಾಸ್ತತ್ವವಾದಿನಃ ॥ ೭೮ ॥**

**ಅರ್ಥ–** ಯದಿ= ಒಂದು ಪಕ್ಷ, ಸ್ವನಿಷ್ಠಸದ್ಧರ್ಮೈಃ= ತನ್ನಲ್ಲಿರುವ ಸದ್ಧರ್ಮಗಳ ರೂಪವಾದ, ಶುಭವಸ್ತುಭಿಃ= ಶುಭವಸ್ತುಗಳಿಂದ, ಸಂಬಂಧಃ= ಸಂಬಂಧ ಎಂದು ಅರ್ಥವಾದರೆ, ತದಾ= ಆಗ, ಧರ್ಮಧರ್ಮಿತ್ವಂ= ಧರ್ಮಧರ್ಮಿಭಾವವೇ, ಸ್ಯಾತ್= ಆಗುತ್ತದೆ, ತಚ್ಚಾನಂತ್ಯಂ= ಅಂತಹ ಶುಭವಸ್ತುಗಳಿಂದ ಆನಂತ್ಯವು, ಗುಣೇನ ಹಿ= ಗುಣದಿಂದಲೇ ಆಗುವುದಷ್ಟೇ, ಅತಃ= ಆ ಕಾರಣದಿಂದ, ತತ್ವಜ್ಞಾಃ= ತತ್ವಜ್ಞಾನಿಗಳಾದ, ತತ್ವವಾದಿನಃ= ತತ್ವವಾದಿಗಳು, ತತ್= ವಸ್ತುತೋ ಅನಂತತ್ವವನ್ನು, ಪೃಥಕ್= ಬೇರೆಯಾಗಿ, ನ ಪ್ರೋಚುಃ= ಹೇಳಲಿಲ್ಲ.

**ಅನುವಾದ–** ಒಂದು ಪಕ್ಷ ವಸ್ತುತೋ ಅನಂತ ಎಂದರೆ ತನ್ನಲ್ಲಿರುವ ಸದ್ಧರ್ಮ-ರೂಪವಾದ ಶುಭವಸ್ತುಗಳಿಂದ ಅನಂತ ಎಂದು ಅರ್ಥಮಾಡುವುದಾದರೆ ಆಗ ಧರ್ಮಧರ್ಮಿ ಭಾವರೂಪವಾದ ಸಂಬಂಧವೇ ಸಿದ್ಧವಾಗುತ್ತದೆ. ಅಂತಹ ವಸ್ತುತಃ ಅನಂತ್ಯವು ಗುಣಗಳಿಂದ ಆನಂತ್ಯವೇ ಆಗುತ್ತದೆಯಷ್ಟೇ? ಆದ್ದರಿಂದ ತತ್ತ್ವಜ್ಞಾನಿ-ಗಳಾದ ತತ್ವವಾದಿಗಳು ಅಂತಹ ವಸ್ತುತಃ ಆನಂತ್ಯವನ್ನು ಬೇರೆಯಾಗಿ ಹೇಳಲಿಲ್ಲ.

**ಭಾವವಿಲಾಸಿನೀ–** ಅಥಯದಿ ವಸ್ತುಶಬ್ದೇನ ಸಾರ್ವಜ್ಞಾದಿಭಗವದ್ಗುಣಾ ಏವೋಚ್ಯಂತೇ ತದಾ-ಪ್ಯುತ್ತರಮಾಹ – **ಯದೀತಿ** ॥ ಶುಭವಸ್ತುಭಿಃ ಸ್ವನಿಷ್ಠಸದ್ಧರ್ಮೈಃ ಸಂಬಂಧ ಇತಿ ಯೋಜನಾ । ತದಾ ಧರ್ಮಧರ್ಮಿತ್ವಂ ಧರ್ಮಧರ್ಮಿಭಾವ ಏವ ಸಂಬಂಧಃ ಸ್ಯಾತ್ । ಭಗವನ್ನಿಷ್ಠ-ಸಾರ್ವಜ್ಞಾದಿ ಶುಭಗುಣರೂಪವಸ್ತುಭಿರ್ಭಗವತಶ್ಚ ಧರ್ಮಧರ್ಮಿಭಾವ ಏವ ಸಂಬಂಧೋ ವಕ್ತುಮುಚಿತೋ ನ ಸಂಯೋಗಾದಿಃ । ಸ ಚ ಘಟಾದಿವಸ್ತುಸಂಬಂಧವನ್ನಗತಾರ್ಥೋ ನಾಪಿ ವ್ಯರ್ಥಃ । ದೇಶಕಾಲಸಂಯೋಗವತ್ ಸಂಬಂಧಮಾತ್ರಲಾಭೇಪಿ ಭಗವತಾ ಸಹ ಧರ್ಮ-ಧರ್ಮಿಭಾವಾಖ್ಯಸಂಬಂಧಸ್ಯ ಪ್ರಾಗನುಕ್ತತ್ವೇನ ಗತಾರ್ಥತ್ವಾಭಾವಾತ್ । ಶೋಭನಗುಣ-ಸಂಬಂಧರೂಪತಯಾ ಭಗವತೋ ಮಹಿಮಾಪಾದಕತ್ವೇನ ಸಾರ್ಥಕತ್ವಾಚ್ಚ । ತಚ್ಚ ಗುಣೈಃ ಸಹ ಧರ್ಮಧರ್ಮಿತ್ವಂ ನಾಮ ಗುಣೇನಾನಂತ್ಯಂ ಗುಣಾನಂತ್ಯಮೇವ ಹಿ । ಅತಃ ಈದೃಶ-ವಸ್ತುತೋಽನಂತತ್ವಸ್ಯ ಗುಣಾನಂತ್ಯರೂಪತ್ವಾತ್ । ತದ್ವಸ್ತುತೋಽನಂತತ್ವಮ್ । ಇದಂ ಚ ದೇಶ-ಕಾಲವ್ಯಾಪ್ತತ್ವಾಭ್ಯಾಂ ನ ಗತಾರ್ಥಮ್ । ತಾದೃಶದೇಶಕಾಲಯೋರೇವಾಭಾವಾತ್ । ಏವಂ ದೇಶತೋಽನಂತಸ್ಯ ವಿಭೋರಪಿ ಕ್ಷಣಸ್ಯಾನಿತ್ಯತಯಾ ಕಾಲತೋಽನಂತತ್ವಾಭಾವಾತ್ । ನಿತ್ಯತಯಾ ಕಾಲತೋಽನಂತಸ್ಯಾಪಿ ಪರಮಾಣೋರ್ದೇಶತೋಽನಂತತ್ವಾಭಾವಾಚ್ಚ ನ ಮಿಥೋ ಗತಾರ್ಥತಾ । ಅತಃ ಸುಷ್ಠೂಕ್ತಂ ದೇಶತಃ ಕಾಲತೋ ಗುಣತಶ್ಚಾಂತಶೂನ್ಯತ್ವ-ಮನಂತತ್ವಮಿತಿ ॥ ೭೮ ॥

**ತತ್ತದ್ಗುಣಕ್ರಿಯಾದ್ಯೈಃ ತೇಷಾಂ ತೇಷಾಂ ಘಟಪಟಾದೀನಾಂ ಗುಣಾಕ್ರಿಯಾದ್ಯೈರಪರಃ ಸಂಯೋಗೋ ವಾ ॥ ೭೬ ॥**

**ವಿವರಣೆ–** ಸರ್ವವಸ್ತು ಸಂಬಂಧ ಎಂದರೆ ಸರ್ವ ಘಟಪಟಾದಿ ವಸ್ತುಗಳ ಸಂಬಂಧ ಅಥವಾ ಘಟಪಟಾದಿ ವಸ್ತುಗಳಲ್ಲಿರುವ ಗುಣಕ್ರಿಯಾದಿಗಳ ಸಂಬಂಧ ಅಥವಾ ಅಲ್ಲಲ್ಲಿರುವ ಅಭಾವದ ಸಂಬಂಧ ಎಂದು ಆಗಬೇಕು. ಭಾವಾಭಾವಗಳನ್ನು ಬಿಟ್ಟು ಬೇರೆ ಯಾವ ವಸ್ತುಗಳಿಲ್ಲವಷ್ಟೇ? ದ್ರವ್ಯಗಳಿಗೇ ಸಂಯೋಗವಿರುವುದರಿಂದ ದೇಶಕಾಲಗಳ ಜೊತೆಯಲ್ಲಿ ಬ್ರಹ್ಮನಿಗೆ ಹೇಗೆ ಸಂಯೋಗವಿದೆಯೋ, ಹಾಗೆಯೇ ಘಟಪಟಾದಿ ವಸ್ತುಗಳ ಜೊತೆಯಲ್ಲಿ ಸಂಯೋಗವು ಸಿದ್ಧಿಸುತ್ತದೆ. ಘಟಪಟಾದಿಗಳಲ್ಲಿರುವ ಗುಣಕ್ರಿಯೆಗಳಲ್ಲಿ ತಾರ್ಕಿಕ ಮತದಂತೆ ಸಂಯುಕ್ತ ಸಮವಾಯರೂಪವಾದ ಸಂಬಂಧವಿದೆ. ಬ್ರಹ್ಮನಿಂದ ಘಟವು ಸಂಯುಕ್ತವಾಗಿದೆ. ಘಟದಲ್ಲಿ ಸಮವಾಯ ಸಂಬಂಧದಿಂದ ಗುಣಕ್ರಿಯಾದಿಗಳಿವೆ ಎಂದು ಅಭಿಪ್ರಾಯ. ಅಭಾವದಿಂದ ಆಗುವುದಾದರೆ ಸ್ವರೂಪಸಂಬಂಧ ಎಂಬ ಇನ್ನೊಂದು ಸಂಬಂಧವನ್ನು ಹೇಳುತ್ತಾರೆ. ಆದ್ದರಿಂದ ಎಲ್ಲ ವಸ್ತುಗಳ ಸಂಬಂಧವು ಈ ರೀತಿಯಲ್ಲಿ ಪರ್ಯವಸಾನವನ್ನು ಹೊಂದುತ್ತದೆ.

**ಅಯಂ ಚ ದೇಶವ್ಯಾಪ್ತ್ಯುಕ್ತ್ಯಾ ಗತಾರ್ಥತ್ವಾನ್ನ ಸಾರ್ಥಕಃ ॥ ೭೭ ॥**

**ಅರ್ಥ–** ಅಯಂ ಚ= ಈ ಅರ್ಥವಾದರೂ, ದೇಶವ್ಯಾಪ್ತ್ಯುಕ್ತ್ಯಾ= ಸರ್ವದೇಶ ವ್ಯಾಪ್ತಿಯನ್ನು ಹೇಳಿರುವುದರಿಂದ, ಗತಾರ್ಥತ್ವಾತ್= ಗತಾರ್ಥವಾಗುವುದರಿಂದ, ನ ಸಾರ್ಥಕಃ= ಸಾರ್ಥಕವಾಗುವುದಿಲ್ಲ.

**ಅನುವಾದ–** ಇಂತಹ ಸಂಬಂಧವು ಸರ್ವದೇಶಸಂಬಂಧವನ್ನು ಹೇಳಿರುವುದರಿಂದ ಗತಾರ್ಥವಾಗುವುದರಿಂದ, ಸಾರ್ಥಕವಾಗುವುದಿಲ್ಲ.

**ಭಾವವಿಲಾಸಿನೀ–** ಅಯಂ ಚ ದ್ವಿವಿಧವಸ್ತುಸಂಬಂಧಶ್ಚ ದೇಶವ್ಯಾಪ್ತ್ಯುಕ್ತ್ಯಾ ಸಕಲದೇಶಸಂಬಂಧೋಕ್ತ್ಯಾ ಗತಾರ್ಥತ್ವಾತ್ ಸಾರ್ಥಕೋನ । ಸಕಲದೇಶಸಂಬಂಧಕಥನೇ ತದಂತರ್ಗತ ಘಟಪಟಾದಿಸಂಬಂಧೋಪ್ಯುಕ್ತಪ್ರಾಯೋ ವ್ಯರ್ಥಶ್ಚೇತಿ ನ ಪೃಥಗ್‌ವಾಚ್ಯ ಇತಿ ಭಾವಃ ॥ ೭೭ ॥

**ವಿವರಣೆ–** ಸರ್ವದೇಶ ಸಂಬಂಧವನ್ನು ಹೇಳಿದರೆ ಸರ್ವದೇಶದಲ್ಲಿರುವ ದ್ರವ್ಯಗಳ ಅಥವಾ ಗುಣಕ್ರಿಯಾದಿ ಭಾವಪದಾರ್ಥಗಳ ಅಥವಾ ಅಭಾವ ಪದಾರ್ಥಗಳ ಸಂಬಂಧವು ಸ್ವತ ಏವ ಸಿದ್ಧವಾಗುತ್ತವೆ. ಅದನ್ನು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ಆದ್ದರಿಂದ ಅನಂತಶಬ್ದವು ಇಂತಹ ವಸ್ತುತಃ ಆನಂತ್ಯವನ್ನು ಹೇಳುವುದಿಲ್ಲ.

ಯದಿ ಸ್ವನಿಷ್ಠಸದ್ಧರ್ಮೈಃ ಸಂಬಂಧಃ ಶುಭವಸ್ತುಭಿಃ ।
ತದಾ ಸ್ಯಾದ್ ಧರ್ಮಧರ್ಮಿತ್ವಂ ತಚ್ಚಾನಂತ್ಯಂ ಗುಣೇನ ಹಿ ।
ಅತಸ್ತನ್ನ ಪೃಥಕ್ ಪ್ರೋಚುಸ್ತತ್ವಜ್ಞಾಸ್ತತ್ವವಾದಿನಃ ॥ ೭೮ ॥

**ಅರ್ಥ–** ಯದಿ= ಒಂದು ಪಕ್ಷ, ಸ್ವನಿಷ್ಠಸದ್ಧರ್ಮೈಃ= ತನ್ನಲ್ಲಿರುವ ಸದ್ಧರ್ಮಗಳ ರೂಪವಾದ, ಶುಭವಸ್ತುಭಿಃ= ಶುಭವಸ್ತುಗಳಿಂದ, ಸಂಬಂಧಃ= ಸಂಬಂಧ ಎಂದು ಅರ್ಥವಾದರೆ, ತದಾ= ಆಗ, ಧರ್ಮಧರ್ಮಿತ್ವಂ= ಧರ್ಮಧರ್ಮಿಭಾವವೇ, ಸ್ಯಾತ್= ಆಗುತ್ತದೆ, ತಚ್ಚಾನಂತ್ಯಂ= ಅಂತಹ ಶುಭವಸ್ತುಗಳಿಂದ ಆನಂತ್ಯವು, ಗುಣೇನ ಹಿ= ಗುಣದಿಂದಲೇ ಆಗುವುದಷ್ಟೇ, ಅತಃ= ಆ ಕಾರಣದಿಂದ, ತತ್ವಜ್ಞಾಃ= ತತ್ವಜ್ಞಾನಿಗಳಾದ, ತತ್ವವಾದಿನಃ= ತತ್ವವಾದಿಗಳು, ತತ್= ವಸ್ತುತೋ ಅನಂತತ್ವವನ್ನು, ಪೃಥಕ್= ಬೇರೆಯಾಗಿ, ನ ಪ್ರೋಚುಃ= ಹೇಳಲಿಲ್ಲ.

**ಅನುವಾದ–** ಒಂದು ಪಕ್ಷ ವಸ್ತುತೋ ಅನಂತ ಎಂದರೆ ತನ್ನಲ್ಲಿರುವ ಸದ್ಧರ್ಮ-ರೂಪವಾದ ಶುಭವಸ್ತುಗಳಿಂದ ಅನಂತ ಎಂದು ಅರ್ಥಮಾಡುವುದಾದರೆ ಆಗ ಧರ್ಮಧರ್ಮಿ ಭಾವರೂಪವಾದ ಸಂಬಂಧವೇ ಸಿದ್ಧವಾಗುತ್ತದೆ. ಅಂತಹ ವಸ್ತುತಃ ಅನಂತ್ಯವು ಗುಣಗಳಿಂದ ಆನಂತ್ಯವೇ ಆಗುತ್ತದೆಯಷ್ಟೇ? ಆದ್ದರಿಂದ ತತ್ತ್ವಜ್ಞಾನಿ-ಗಳಾದ ತತ್ವವಾದಿಗಳು ಅಂತಹ ವಸ್ತುತಃ ಆನಂತ್ಯವನ್ನು ಬೇರೆಯಾಗಿ ಹೇಳಲಿಲ್ಲ.

**ಭಾವವಿಲಾಸಿನೀ–** ಅಥಯದಿ ವಸ್ತುಶಬ್ದೇನ ಸಾರ್ವಜ್ಞಾದಿಭಗವದ್ಗುಣಾ ಏವೋಚ್ಯಂತೇ ತದಾ-ಪ್ಯುತ್ತರಮಾಹ – ಯದೀತಿ ॥ ಶುಭವಸ್ತುಭಿಃ ಸ್ವನಿಷ್ಠಸದ್ಧರ್ಮೈಃ ಸಂಬಂಧ ಇತಿ ಯೋಜನಾ । ತದಾ ಧರ್ಮಧರ್ಮಿತ್ವಂ ಧರ್ಮಧರ್ಮಿಭಾವ ಏವ ಸಂಬಂಧಃ ಸ್ಯಾತ್ । ಭಗವನ್ನಿಷ್ಠ-ಸಾರ್ವಜ್ಞಾದಿ ಶುಭಗುಣರೂಪವಸ್ತುಭಿರ್ಭಗವತಶ್ಚ ಧರ್ಮಧರ್ಮಿಭಾವ ಏವ ಸಂಬಂಧೋ ವಕ್ತುಮುಚಿತೋ ನ ಸಂಯೋಗಾದಿಃ । ಸ ಚ ಘಟಾದಿವಸ್ತುಸಂಬಂಧವನ್ನಗತಾರ್ಥೋ ನಾಪಿ ವ್ಯರ್ಥಃ । ದೇಶಕಾಲಸಂಯೋಗವತ್ ಸಂಬಂಧಮಾತ್ರಲಾಭೇಪಿ ಭಗವತಾ ಸಹ ಧರ್ಮ-ಧರ್ಮಿಭಾವಾಖ್ಯಸಂಬಂಧಸ್ಯ ಪ್ರಾಗನುಕ್ತತ್ವೇನ ಗತಾರ್ಥತ್ವಾಭಾವಾತ್ । ಶೋಭನಗುಣ-ಸಂಬಂಧರೂಪತಯಾ ಭಗವತೋ ಮಹಿಮಾಪಾದಕತ್ವೇನ ಸಾರ್ಥಕತ್ವಾಚ್ಚ । ತಚ್ಚ ಗುಣೈಃ ಸಹ ಧರ್ಮಧರ್ಮಿತ್ವಂ ನಾಮ ಗುಣೇನಾನಂತ್ಯಂ ಗುಣಾನಂತ್ಯಮೇವ ಹಿ । ಅತಃ ಈದೃಶ-ವಸ್ತುತೋಽನಂತತ್ವಸ್ಯ ಗುಣಾನಂತ್ಯರೂಪತ್ವಾತ್ । ತದ್ವಸ್ತುತೋಽನಂತತ್ವಮ್ । ಇದಂ ಚ ದೇಶ-ಕಾಲವ್ಯಾಪ್ತತ್ವಾಭ್ಯಾಂ ನ ಗತಾರ್ಥಮ್ । ತಾದೃಶದೇಶಕಾಲಯೋರೇವಾಭಾವಾತ್ । ಏವಂ ದೇಶತೋಽನಂತಸ್ಯ ವಿಭೋರಪಿ ಕ್ಷಣಸ್ಯಾನಿತ್ಯತಯಾ ಕಾಲತೋಽನಂತತ್ವಾಭಾವಾತ್ । ನಿತ್ಯತಯಾ ಕಾಲತೋಽನಂತಸ್ಯಾಪಿ ಪರಮಾಣೋರ್ದೇಶತೋಽನಂತತ್ವಾಭಾವಾಚ್ಚ ನ ಮಿಥೋ ಗತಾರ್ಥತಾ । ಅತಃ ಸುಷ್ಠೂಕ್ತಂ ದೇಶತಃ ಕಾಲತೋ ಗುಣತಶ್ಚಾಂತಶೂನ್ಯತ್ವ-ಮನಂತತ್ವಮಿತಿ ॥ ೭೮ ॥

**ವಿವರಣೆ–** ವಸ್ತುಶಬ್ದದಿಂದ ಎಲ್ಲಾ ವಸ್ತುಗಳನ್ನೂ ತೆಗೆದುಕೊಳ್ಳುವುದನ್ನು ಬಿಟ್ಟು ಬ್ರಹ್ಮನಲ್ಲಿರುವ ಶುಭಧರ್ಮರೂಪವಾದ ವಸ್ತುವನ್ನೇ ತೆಗೆದುಕೊಂಡರೆ, ಆ ಪಕ್ಷದಲ್ಲಿ ಈ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾರೆ. ಹಾಗೆ ಧರ್ಮರೂಪವಾದ ಶುಭವಸ್ತುವನ್ನೇ ತೆಗೆದುಕೊಂಡರೆ ಆ ಸರ್ವಜ್ಞತ್ವಾದಿ ವಸ್ತುಗಳು ಬ್ರಹ್ಮನ ಧರ್ಮವೇ ಆಗಿರುವುದರಿಂದ ಧರ್ಮಕ್ಕೂ ಮತ್ತು ಧರ್ಮಿಗೂ ಧರ್ಮಧರ್ಮಿಭಾವವೇ ಇರುವುದರಿಂದ ಆ ಸಂಬಂಧವು ಧರ್ಮಧರ್ಮಿಭಾವರೂಪವಾಗುತ್ತದೆ. ಆದ್ದರಿಂದ ಅಂತಹ ಶುಭವಸ್ತುಗಳಿಂದ ಅನಂತ ಎಂದರೆ ಗುಣದಿಂದ ಅನಂತ ಎಂದೇ ಸಿದ್ಧವಾಗುತ್ತದೆ. ಆ ಕಾರಣದಿಂದ ತತ್ವಜ್ಞಾನಿಗಳಾದ ತತ್ತ್ವವಾದಿಗಳು ಅದನ್ನು ಬೇರೆಯಾಗಿ ಹೇಳಲಿಲ್ಲ. ಸರ್ವಜ್ಞತ್ವಾದಿ ಶುಭಗುಣರೂಪವಾದ ವಸ್ತುಗಳಿಗೂ ಮತ್ತು ಬ್ರಹ್ಮನಿಗೂ ಧರ್ಮಧರ್ಮಿ ಭಾವಸಂಬಂಧವನ್ನು ಹೇಳಬೇಕೇ ಹೊರತು ಸಂಯೋಗಾದಿಗಳನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಈ ಸಂಬಂಧವು ದೇಶವ್ಯಾಪ್ತಿಯಿಂದ ಸಿದ್ಧವಾದ ಘಟಾದಿ ಸಂಬಂಧಗಳಂತಲ್ಲ. ಆದ್ದರಿಂದ ದೇಶವ್ಯಾಪ್ತಿಯಿಂದ ಗತಾರ್ಥವಾಗುವುದಿಲ್ಲ. ಶೋಭನ ಗುಣಗಳನ್ನು ಹೇಳಿ ಭಗವಂತನ ಮಹಿಮೆಯನ್ನು ಪ್ರತಿಪಾದನೆ ಮಾಡುವುದರಿಂದ ಸಾರ್ಥಕವಾಗುತ್ತದೆ. ಆದ್ದರಿಂದ ಇಂತಹ ಶುಭವಸ್ತುವಿನಿಂದ ಅನಂತತ್ವವೆಂದರೆ ಗುಣಗಳಿಂದ ಅನಂತ ಎಂದೇ ಅರ್ಥವಾಗುತ್ತದೆ. ಇದು ದೇಶಕಾಲಾನಂತತ್ವದಿಂದ ಗತಾರ್ಥವಾಗುವುದಿಲ್ಲ. ಪರಮಾಣುವು ಕಾಲದಿಂದ ಅನಂತವಾದರೂ ದೇಶದಿಂದ ಪರಿಚ್ಛಿನ್ನವಾಗಿದೆ. ಕ್ಷಣವು ಎಲ್ಲಾ ದೇಶದಲ್ಲಿದ್ದು, ದೇಶದಿಂದ ಅನಂತವಾದರೂ ಕಾಲದಿಂದ ಪರಿಚ್ಛಿನ್ನವಾಗಿದೆ. ಆದ್ದರಿಂದ ದೇಶದ ಅನಂತತ್ವ, ಕಾಲದ ಅನಂತತ್ವವನ್ನು ಬಿಟ್ಟು ಇನ್ನೊಂದು ರೀತಿಯ ಅನಂತತ್ವವನ್ನು ಹೇಳಬೇಕಾದ ಅವಶ್ಯಕತೆ ಇದೆ. ಬ್ರಹ್ಮನಲ್ಲಿ ದೇಶದಿಂದ ಅನಂತತ್ವವೂ, ಕಾಲದಿಂದ ಅನಂತತ್ವವೂ, ಶುಭಗುಣಗಳಿಂದ ಅನಂತತ್ವವೂ ಇದೆ ಎಂಬುದು ಅನಂತಶಬ್ದಾರ್ಥ ಎಂದು ಹೇಳಿದುದು ಸಮಂಜಸವಾಗಿದೆ.

**ಧನೈಃ ಪೂರ್ಣಸ್ತದೈವ ಸ್ಯಾದ್ ಧನಂ ಚ ಬಹುಲಂ ಯದಿ ।**
**ತದ್ಗುಣೈಃ ಪೂರ್ಣತಾವಾಚಾ ಗುಣಾನಾಂ ಪೂರ್ಣತಾಪ್ಯಭೂತ್ ॥ ೭೯ ॥**

**ಅರ್ಥ–** ಧನೈಃ= ಧನಗಳಿಂದ, ಪೂರ್ಣತ= ಪೂರ್ಣತ್ವವು, ಯದಿ= ಒಂದು ಪಕ್ಷ, ಧನಂ ಚ= ಧನವೂ, ಬಹುಲಂ= ಅಪಾರವಾಗಿದ್ದರೆ ಮಾತ್ರ, ತದೈವ= ಆಗ ಮಾತ್ರ, ಸ್ಯಾತ್= ಆಗುತ್ತದೆ, ತತ್= ಆದ್ದರಿಂದ, ಗುಣೈಃ ಪೂರ್ಣತಾ ವಾಚಾ= ಗುಣಗಳಿಂದ ಪೂರ್ಣ ಎಂಬ ಮಾತಿನಿಂದ, ಗುಣಾನಾಂ ಪೂರ್ಣತಾಪಿ= ಗುಣಗಳ ಪೂರ್ಣತ್ವವೂ, ಅಭೂತ್= ಸಿದ್ಧವಾಯಿತು.

**ಅನುವಾದ–** ಧನವು ಅಪಾರವಾಗಿದ್ದರೆ ಮಾತ್ರ ಧನಗಳಿಂದ ಪೂರ್ಣತೆಯು ಉಂಟಾಗುತ್ತದೆ. ಹಾಗೆಯೇ ಗುಣಗಳಿಂದ ಪೂರ್ಣ ಎಂದು ಹೇಳಿದ ಮಾತೇ ಗುಣಗಳೂ ಪೂರ್ಣ ಎಂದು ಸಿದ್ಧಮಾಡಿಕೊಡುತ್ತದೆ.

**ಭಾವವಿಲಾಸಿನೀ–** ಇದಾನೀಂ ಗುಣಾನಾಂ ಪ್ರತ್ಯೇಕಮಾನಂತ್ಯಂ ಯುಕ್ತಿತಸ್ಸಾಧಯತಿ-ಧನ್ಯೈರಿತಿ। ಧನಂ ಚ ಯದಿ ಬಹುಲಂ ಸ್ಯಾತ್ ತದೈವಧನ್ಯೈಃ ಪೂರ್ಣಃಸ್ಯಾದಿತಿ ಯತ್ತತ್ತಸ್ಮಾದ್ದೇಶಕಾ ವ್ಯಾಪ್ತ-ಭಗವನ್ಮೂರ್ತೇರೇಕಾಂಶೇಪ್ಯೇಕೈಕಗುಣಸ್ಯಾಭಾವೇ ತತ್ರೈವಗುಣಾನಾಂತ್ಯಾ ಭಾವಪ್ರಸಂಗಾತ್ ವ್ಯಾಪಕರೂಪರಸಾದಿಗುಣಾನಾಂ ವ್ಯಾಪ್ಯವೃತ್ತಿತ್ವಾವಶ್ಯಂ ಭಾವಾಚ್ಚ ಪ್ರತ್ಯೇಕಂ ಗುಣಾನಂತ್ಯಮಪಿ ಕಥಂ ನ ಯುಕ್ತಿಃ ಸಾಧಯೇತ್ । ವಕ್ಷ್ಯತಿ ಚೈತತ್‌ಗ್ರಂಥಕಾರಃ ಸ್ವಯಮೇವ ॥ ೭೯ ॥

**ವಿವರಣೆ–** ಈಗ ಒಂದೊಂದು ಗುಣವೂ ಪ್ರತ್ಯೇಕವಾಗಿ ಅನಂತ ಎಂಬ ಪ್ರಮೇಯವನ್ನು ಯುಕ್ತಿಯಿಂದ ಸಾಧಿಸುತ್ತಾರೆ. ಧನವು ಪೂರ್ಣವಾಗಿದ್ದರೆ ಮಾತ್ರ, ಧನದಿಂದ ಪೂರ್ಣ ಎಂದು ಹೇಳುತ್ತಾರೆ. ವ್ಯಾಪ್ತನಾಗಿರುವ ಭಗವಂತನಲ್ಲಿ ಗುಣಗಳು ವ್ಯಾಪ್ತವಾಗಿಲ್ಲದಿದ್ದರೆ ಒಂದೊಂದು ದೇಶದಲ್ಲಿರುವ ಭಗವಂತನ ಮೂರ್ತಿಯಲ್ಲಿ ಎಲ್ಲಾ ಗುಣಗಳೂ ಬರುವುದಿಲ್ಲವಾದ್ದರಿಂದ ಗುಣಾನಂತ್ಯಕ್ಕೆ ಭಂಗ ಬರುತ್ತದೆ. ಆದ್ದರಿಂದ ಗುಣಗಳಿಗೂ ವ್ಯಾಪ್ತತ್ವ, ಪೂರ್ಣತ್ವವನ್ನು ಹೇಳಬೇಕು. ರೂಪರಸಾದಿ ಗುಣಗಳು ಧರ್ಮಿಯಲ್ಲಿ ವ್ಯಾಪ್ತವೃತ್ತಿಯಾಗಿಯೇ ಕಂಡಿವೆ. ಹೊರತಾಗಿ ಒಂದು ದೇಶದಲ್ಲಿ ಇದೆ, ಒಂದು ದೇಶದಲ್ಲಿ ಇಲ್ಲ ಎಂದು ಎಲ್ಲಿಯೂ ಕಾಣುವುದಿಲ್ಲ. ಅದರಂತೆ ಸರ್ವಜ್ಞತ್ವಾದಿ-ಗುಣಗಳು ವ್ಯಾಪ್ತವೃತ್ತಿಯೇ ಆಗಿರಬೇಕು ಎಂಬ ಈ ಎರಡು ಯುಕ್ತಿಗಳಿಂದ ಒಂದೊಂದು ಗುಣವೂ ಪ್ರತ್ಯೇಕವಾಗಿ ಅನಂತವೆಂದು ಸಾಧಿಸುತ್ತಾರೆ.

**ಅನಂತಗುಣ ಇತ್ಯುಕ್ತ್ವಾ ಪ್ರಾಗಸಂಖ್ಯಾನ್ ಗುಣಾನ್ ಸ್ಮೃತಿಃ ।**
**ಗುಣಾಂಶ್ಚ ಪೂರ್ಣಾನ್ ಸೈವಾಹ ಹ್ಯನಂತೋಽಗುಣತಸ್ತ್ವಿತಿ ॥ ೮೦ ॥**

**ಅರ್ಥ–** ಸ್ಮೃತಿಃ= ಭಾಗವತ ಸ್ಮೃತಿಯು, ಪ್ರಾಕ್= ಮೊದಲು, ಅನಂತಗುಣೇ= ಅನಂತ ಗುಣನಾದ ನನ್ನಲ್ಲಿ, ಇತಿ= ಎಂದು, ಅಸಂಖ್ಯಾನ್= ಸಂಖ್ಯಾಶೂನ್ಯವಾದ, ಗುಣಾನ್= ಗುಣಗಳನ್ನು, ಉಕ್ತ್ವಾ= ಹೇಳಿ, ಸೈವ= ಅದೇ ಶ್ರುತಿಯೇ, ಗುಣತಃ ಅನಂತಃ= ಗುಣಗಳಿಂದಲೂ ಅನಂತ, ಇತಿ= ಎಂದು ವಿಶೇಷವಾಗಿ, ಗುಣಾಂಶ್ಚ= ಗುಣಗಳನ್ನೂ ಪೂರ್ಣಾನ್= ಪೂರ್ಣವಾದವುಗಳೆಂದು, ಆಹ= ಹೇಳಿದೆ.

**ಅನುವಾದ–** ಸ್ಮೃತಿವಾಕ್ಯವು ಮೊದಲು ಅನಂತಗುಣೇ ಎಂದು ಗುಣಗಳಲ್ಲಿ ಸಂಖ್ಯಾರಾಹಿತ್ಯವನ್ನು ಹೇಳಿ, ಪುನಃ ಅದೇ ಸ್ಮೃತಿಯೇ ಗುಣತಃ ಅನಂತಃ= ಗುಣಗಳಿಂದಲೂ ಅನಂತ ಎಂದು ವಿಶೇಷವಾಗಿ ಪ್ರತ್ಯೇಕವಾಗಿ ಒಂದೊಂದು ಗುಣಕ್ಕೂ ಅನಂತತ್ವವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಇದಾನೀಂ ಯುಕ್ತ್ಯುಪೋದ್ಬಲಕಂ ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹ ಇತಿ ಭಾಗವತವಚನಮರ್ಥತೋಽಗೃಹೀತ್ವಾ ವ್ಯಾಖ್ಯಾತಿ – **ಅನಂತಗುಣ ಇತಿ** ॥ ಅನಂತಗುಣೇ ಗುಣತೋಽನಂತೇ ಅನಂತವಿಗ್ರಹೇ ಮಯಿ ಇತಿ ಪದಯೋಜನಾ । ತತ್ರ

**ಪ್ರಾಕ್ ಪ್ರಥಮಂ ಸ್ಮೃತಿಃ ಅನಂತಗುಣೇ ಇತಿ ವಿಶೇಷಣೇನ ಗುಣಾನಾಮವಧಿಶೂನ್ಯತ್ವಸ್ಯಾ-ಸಂಖ್ಯಾತತ್ವೇ ಪರ್ಯವಸಾನಾದಸಂಖ್ಯಾನಂತಗುಣಾನುಕ್ತ್ವಾ ಪುನಃ ಸ್ವೈವಗುಣತೋನಂತ ಇತಿ ಗುಣಾಂಶ್ಚ ಪೂರ್ಣಾನಾಹ । ತುಶಬ್ದೇನಾನ್ಯಥಾ ಪೌನರುಕ್ತ್ಯಾತ್ ಏವಂ ವಿಶೇಷೋಽವಶ್ಯ-ಮಂಗೀಕಾರ್ಯ ಇತಿ ಸೂಚಯತಿ ಗ್ರಂಥಕಾರಃ । ಗುಣತಃ ಗುಣೈಃ ಪ್ರತ್ಯೇಕಮನಂತ ಇತಿ ಶಬ್ದಾರ್ಥಃ । ಏವಮರ್ಥಾಕಥನೇ ಪೂರ್ವವಿಶೇಷಣೇನೈವ ಗತಾರ್ಥಮಿದಂ ವಿಶೇಷಣಂ ಸ್ಯಾತ್। ತಸ್ಮಾದ್ಗುಣಾನಾಂ ಪ್ರತ್ಯೇಕಮಾನಂತ್ಯಮೇವೋತ್ತರವಿಶೇಷಣಾಲ್ಲಬ್ಧಮಿತಿ ಭಾವಃ ॥ ೮೦ ॥**

**ವಿವರಣೆ–** 'ಮಯಿ ಅನಂತಗುಣೇಽನಂತೇ ಗುಣತೋಽನಂತವಿಗ್ರಹೇ' ಎಂಬುದು ಭಾಗವತ ಚತುರ್ಥಸ್ಕಂಧದಲ್ಲಿರುವ ದೇವರ ವಾಕ್ಯ. ಅಲ್ಲಿ ಮೂರು ಬಾರಿ ಅನಂತಶಬ್ದದ ಪ್ರಯೋಗವಿದೆ. ಅನಂತಗುಣೇ, ಅನಂತೇ, ಗುಣತಃ ಅನಂತೇ ಎಂದು ಆ ಮೂರು ಪ್ರಯೋಗಗಳು. ಅದರಲ್ಲಿ ಅನಂತಗುಣೇ ಎಂಬ ಶಬ್ದವು ದೇವರಲ್ಲಿರುವ ಸರ್ವಜ್ಞತ್ವ ಸೌಂದರ್ಯಾದಿ ಗುಣಗಳನ್ನು ಎಣಿಸಲು ಸಾಧ್ಯವಿಲ್ಲ ಎಂದು ಗುಣಗಳಲ್ಲಿ ಸಂಖ್ಯಾಶೂನ್ಯತ್ವವನ್ನು ಹೇಳುತ್ತದೆ. ಗುಣತಃ ಅನಂತೇ ಎಂಬಲ್ಲಿಯೂ ಅದೇ ಅರ್ಥವನ್ನು ಹೇಳಿದರೆ ಆಗ ಪುನರುಕ್ತಿ ದೋಷವು ಬರುತ್ತದೆ. ಆದ್ದರಿಂದ ಗುಣತಃ ಅನಂತೇ ಎಂದರೆ ಒಂದೊಂದು ಗುಣವೂ ಅನಂತವಾದುದು, ಅಪರಿಚ್ಛಿನ್ನವಾದುದು ಎಂದೇ ಅರ್ಥವನ್ನು ಮಾಡಬೇಕು. ಅನಂತೇ ಎಂಬ ಇನ್ನೊಂದು ಶಬ್ದಕ್ಕೆ ಅನಂತರೂಪವುಳ್ಳವನು ಎಂದು ಇಷ್ಟೇ ಅರ್ಥ. ಅದು ಈ ಯುಕ್ತಿಗೆ ಸಂಬಂಧಿಸುವುದಿಲ್ಲ.

**ಮಹದ್ಗುಣತ್ವಾದಿತಿ ಚ ಮಹತ್ತ್ವಾಮಾಹ ತಾಂ ಗುಣೇ ।**
**ಮಹತ್ತ್ವಂ ತ್ವಪರಿಚ್ಛಿತ್ತಿರಿತಿ ಸರ್ವೇ ವಿದುರ್ಬುಧಾಃ ॥ ೮೧ ॥**

**ಅರ್ಥ–** ಮಹದ್ಗುಣತ್ವಾತ್ ಇತಿ= ಮಹದ್ಗುಣತ್ವಾತ್ ಎಂದು, ಗುಣೇ= ಗುಣದಲ್ಲಿ, ತಾಂ ಮಹತ್ತ್ವಾಂ ಚ= ಅಂತಹ ಅಪರಿಚ್ಛೇದವನ್ನೂ ಸಹ, ಆಹ= ಹೇಳಿತು, ಮಹತ್ತ್ವಂ ತು= ಮಹತ್ತ್ವವೆಂದರೆ, ಅಪರಿಚ್ಛಿತ್ತಿಃ= ಪರಿಚ್ಛೇದರಾಹಿತ್ಯವಾದುದು, ಇತಿ= ಎಂದು, ಸರ್ವೇ ಬುಧಾಃ= ಎಲ್ಲಾ ಜ್ಞಾನಿಗಳೂ, ವಿದುಃ= ತಿಳಿದಿದ್ದಾರೆ.

**ಅನುವಾದ–** ಮಹದ್ಗುಣತ್ವಾತ್ ಎಂದು ಹೇಳಿ ಆ ಸ್ಮೃತಿಯು ಬ್ರಹ್ಮನ ಗುಣಗಳಲ್ಲಿ ಮಹತ್ವವನ್ನು ಹೇಳಿದೆ. ಮಹತ್ತ್ವವೆಂದರೆ ಪರಿಚ್ಛೇದರಾಹಿತ್ಯವೆಂದು ಎಲ್ಲ ಜ್ಞಾನಿಗಳೂ ತಿಳಿದಿದ್ದಾರೆ.

**ಭಾವವಿಲಾಸಿನೀ– ಉಕ್ತಾರ್ಥೇ ವಾಕ್ಯಾಂತರಂ ಚ ಪ್ರಮಾಣಯತಿ – ಮಹದ್ಗುಣತ್ವಾದಿತಿ ॥ ಮಹದ್ಗುಣತ್ವಾದ್ಯಮನಂತಮಾಹುರಿತಿ ಚ ಭಾಗವತವಾಕ್ ಗುಣೇ ಗುಣಸಮುದಾಯೇ ಮಹತ್ತ್ವಾಮಾಹ । ಮಹತ್ತ್ವಂ ತ್ವಪರಿಚ್ಛಿತ್ತಿಃ ತಸ್ಮಾದ್ಗುಣಾನಾಂ ಪ್ರತ್ಯೇಕಮಪ್ಯಪರಿಚ್ಛಿನ್ನತ್ವ ರೂಪಪೂರ್ಣತ್ವಸಿದ್ಧಿರಿತಿ ಭಾವಃ ॥ ೮೧ ॥**

**ವಿವರಣೆ–** ಮೊದಲು ಹೇಳಿದ ಅರ್ಥವನ್ನು ಭಾಗವತದ ಇನ್ನೊಂದು ವಾಕ್ಯದಿಂದ ಇಲ್ಲಿ ಸಮರ್ಥನೆ ಮಾಡುತ್ತಾರೆ. 'ಮಹದ್ಗುಣತ್ವಾತ್ ಯಮನಂತಮಾಹುಃ' ಎಂಬುದು ಭಾಗವತ ಪ್ರಥಮಸ್ಕಂದದಲ್ಲಿ ಸೂತರ ವಾಕ್ಯ. ಆ ವಾಕ್ಯದಲ್ಲಿ ಅವನ ಗುಣಗಳಿಗೆ ಮಹತ್ವವಿರುವುದರಿಂದ ದೇವರಿಗೆ ಅನಂತ ಎಂದು ಹೆಸರು ಎಂದು ಹೇಳಿದೆ. ಇದರಿಂದ ಎರಡು ಅಂಶಗಳು ಸಿದ್ಧವಾಗುತ್ತವೆ. ಅನಂತಶಬ್ದಕ್ಕೆ ವಸ್ತುತಃ ಪರಿಚ್ಛೇದರಾಹಿತ್ಯ ಎಂದು ಅರ್ಥವನ್ನು ಮಾಡಬಾರದು ಎಂದು ಮೊದಲನೆಯದು. ಎರಡನೆಯದು ಮಹತ್ತ್ವವೆಂದರೆ ಅಪರಿಚ್ಛೇದ, ಗುಣಗಳಲ್ಲಿ ಮಹತ್ತ್ವವಿದೆ ಎಂದರೆ ಒಂದೊಂದು ಗುಣವೂ ಅಪರಿಚ್ಛಿನ್ನವಾದುದು ಎಂದು ಅರ್ಥ. ಆದ್ದರಿಂದ ಭಗವಂತನಲ್ಲಿರುವ ಗುಣಗಳಿಗೂ ಸಂಖ್ಯೆಯಿಲ್ಲ ಮತ್ತು ಒಂದೊಂದು ಗುಣಕ್ಕೂ ದೇಶದಿಂದಾಗಲೀ, ಕಾಲದಿಂದಾಗಲೀ ಮಿತಿಯಿಲ್ಲ, ಪರಿಚ್ಛೇದವಿಲ್ಲ ಎಂದು ಅರ್ಥವಾಗುತ್ತದೆ.

**ಯಥಾಸ್ತಿ ದೇಶಾದಾನಂತ್ಯೇ ದೇಶಸ್ಯಾಪ್ಯಂತಶೂನ್ಯತಾ ।**
**ತಥಾ ಗುಣೇನಾನಂತ್ಯೇಽಪಿ ಗುಣಸ್ಯಾಪ್ಯಂತಶೂನ್ಯತಾ ॥ ೮೨ ॥**

**ವಾಚ್ಯಾಽವಶ್ಯಂ ನ ಚೇತ್ ತಸ್ಯ ಗುಣತೋಽನಂತತೈವ ನ ।**
**ನ ಚಾಲ್ಪಬಲವಾನ್ ಮರ್ತ್ಯೋ ಬಲೇನಾನಂತ ಉಚ್ಯತೇ ॥ ೮೩ ॥**

**ಅರ್ಥ–** ಯಥಾ= ಹೇಗೆ, ದೇಶಾದಾನಂತ್ಯೇ= ದೇಶತಃ ಅನಂತನೆಂದು ಹೇಳಿದರೆ, ದೇಶಸ್ಯಾಪಿ= ದೇಶಕ್ಕೂ ಕೂಡ, ಅಂತಶೂನ್ಯತಾ= ಅಂತರಾಹಿತ್ಯವು, ಅಸ್ತಿ= ಇದೆಯೋ, ತಥಾ= ಹಾಗೆ, ಗುಣೇನಾನಂತ್ಯೇಽಪಿ= ಗುಣದಿಂದ ಆನಂತ್ಯವೆಂದು ಹೇಳಿದರೂ, ಗುಣಸ್ಯಾಪಿ= ಗುಣಕ್ಕೂ ಸಹ, ಅಂತಶೂನ್ಯತಾ= ಅಂತಶೂನ್ಯತ್ವವು, ಅವಶ್ಯಂ ವಾಚ್ಯಾ= ಅವಶ್ಯವಾಗಿ ಹೇಳಲ್ಪಡಬೇಕು, ನ ಚೇತ್= ಇಲ್ಲದಿದ್ದರೆ, ತಸ್ಯ= ಅವನಿಗೆ, ಗುಣತಃ ಅನಂತತೈವ= ಗುಣತಃ ಅನಂತತ್ವವೇ, ನ= ಸಿದ್ಧವಾಗುವುದಿಲ್ಲ, ಅಲ್ಪಬಲವಾನ್= ಅಲ್ಪ ಬಲವುಳ್ಳ, ಮರ್ತ್ಯಃ= ಮನುಷ್ಯನು, ಬಲೇನ ಅನಂತಃ= ಬಲದಿಂದ ಅನಂತನೆಂದು, ನ ಉಚ್ಯತೇ ಹಿ= ಹೇಳಲ್ಪಡುವುದಿಲ್ಲವಷ್ಟೇ?

**ಅನುವಾದ–** ಹೇಗೆ ಬ್ರಹ್ಮನು ದೇಶದಿಂದ ಅನಂತ ಎಂದರೆ ದೇಶಕ್ಕೂ ಅನಂತತ್ವವು ಸಿದ್ಧವಾಗುವುದೋ, ಹಾಗೆಯೇ ಬ್ರಹ್ಮನು ಗುಣದಿಂದ ಅನಂತ ಹೇಳಿದರೆ, ಪ್ರತಿಯೊಂದು ಗುಣವೂ ಅನಂತ ಎಂಬ ಅರ್ಥವನ್ನು ಅವಶ್ಯವಾಗಿ ಹೇಳಬೇಕು. ಇಲ್ಲದಿದ್ದರೆ ಗುಣದಿಂದ ಅನಂತತ್ವವೇ ಕೂಡುವುದಿಲ್ಲ. ಅಲ್ಪ ಬಲವುಳ್ಳ ಮನುಷ್ಯನನ್ನು ಬಲದಿಂದ ಅನಂತನೆಂದು ಹೇಳುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಉಕ್ತಾರ್ಥೇಽಂತರಂಗಯುಕ್ತಿಂ ಚಾಹ – **ಯಥಾಸ್ತೀತಿ** ॥ ಯಥಾ ದೇಶಾದಾನಂತ್ಯೇ ದೇಶಸ್ಯಾಪ್ಯಂತಶೂನ್ಯತಾಸ್ತಿ ತಥೇತ್ಯುತ್ತರೇಣಾನ್ವಯಃ । ಅವಶ್ಯಂ ವಾಚ್ಯೇತಿ

**ಪದಸಂಬಂಧಃ । ವಿಪಕ್ಷೇ ಬಾಧಕಮಾಹ – ನಚೇದಿತಿ ॥ ನಚೇದ್ಗುಣಾನಾಂ ಪ್ರತ್ಯೇಕಮಾನಂತ್ಯಂ ನಚೇತ್ । ತಸ್ಯ ಭಗವತಃ ನ ಸಿದ್ಧ್ಯೇದಿತಿ ಶೇಷಃ । ತತ್ರ ದೃಷ್ಟಾಂತಮಾಹ – ನಹೀತಿ ॥೮೨-೮೩॥**

**ವಿವರಣೆ–** ದೇಶದಿಂದ ಅನಂತ ಎಂದರೆ ದೇಶವು ಅವಶ್ಯವಾಗಿ ಅನಂತವಾಗಿರಲೇಬೇಕು. ಹಾಗೆಯೇ ಕಾಲದಿಂದ ಅನಂತ ಎಂದರೆ ಕಾಲವೂ ಅನಂತವಾಗಿರಬೇಕು. ದೇಶವೇ ಪರಿಮಿತವಾಗಿದ್ದರೆ, ಕಾಲವೇ ಪರಿಮಿತವಾಗಿದ್ದರೆ, ದೇಶದಿಂದ ಅನಂತ ಎಂದಾಗಲೀ, ಕಾಲದಿಂದ ಅನಂತ ಎಂಬುದಕ್ಕಾಗಲೀ ಯಾವ ಅರ್ಥವೂ ಇರುವುದಿಲ್ಲ. ಅದರಂತೆ ಗುಣದಿಂದ ಅನಂತ ಎಂದು ಹೇಳಿದರೆ, ಒಂದೊಂದು ಗುಣವೂ ಅನಂತವಾಗಲೇ ಬೇಕು. ಇದನ್ನು ಲೋಕದ ಒಂದು ದೃಷ್ಟಾಂತದಿಂದ ಸಮರ್ಥನೆ ಮಾಡುತ್ತಾರೆ. ಈ ಮನುಷ್ಯನು ಬಲದಿಂದ ಅನಂತ ಎಂದು ಹೇಳಿದರೆ, ಅವನಲ್ಲಿರುವ ಬಲವೂ ಅನಂತ ಎಂದು ಸಿದ್ಧವಾಗುತ್ತದೆ. ಅಲ್ಪಬಲವುಳ್ಳವನನ್ನು ನೋಡಿ ಅವನನ್ನು ಯಾರೂ ಬಲದಿಂದ ಅನಂತ ಎಂದು ಕರೆಯುವುದಿಲ್ಲ. ಆದ್ದರಿಂದ ಮಹದ್ಗುಣತ್ವಾತ್ ಎಂಬ ಭಾಗವತ ವಾಕ್ಯವು ಅವನ ಗುಣದಲ್ಲಿ ಮಹತ್ತ್ವವನ್ನು ಎಂದರೆ ಆನಂತ್ಯವನ್ನೇ ಹೇಳುತ್ತದೆ.

**ಗುಣಸಂಖ್ಯಾವಧಿರ್ನೇತಿ ಯೋಽನಂತಗುಣ ಈರಿತಃ ।**
**ಸ ಏವ ಗುಣತೋಽನಂತಃ ಪ್ರತ್ಯೇಕಂ ಗುಣಪೂರ್ತಿತಃ ॥ ೮೪ ॥**

**ಅರ್ಥ–** ಯಃ= ಯಾವನು, ಗುಣಸಂಖ್ಯಾವಧಿಃ= ಗುಣಗಳ ಸಂಖ್ಯೆಗೆ ಅವಧಿಯು, ನ ಇತಿ= ಇಲ್ಲವೆಂದು, ಅನಂತಗುಣಃ= ಅನಂತಗುಣನೆಂದು, ಈರಿತಃ= ಹೇಳಲ್ಪಟ್ಟನೋ, ಸ ಏವ= ಅವನೇ, ಪ್ರತ್ಯೇಕಂ= ಪ್ರತ್ಯೇಕವಾಗಿ, ಗುಣಪೂರ್ತಿತಃ= ಗುಣಪೂರ್ತಿ ಇರುವ ಕಾರಣದಿಂದ, ಗುಣತೋಽನಂತಃ= ಗುಣಗಳಿಂದಲೂ ಅನಂತನಾದವನು.

**ಅನುವಾದ– ಯಾವನು ಗುಣಗಳಲ್ಲಿ ಸಂಖ್ಯೆಯ ಅವಧಿಯು ಇಲ್ಲವೆಂಬ ಕಾರಣದಿಂದ ಅನಂತಗುಣನೆಂದು ಮೊದಲು ಹೇಳಲ್ಪಟ್ಟನೋ, ಅವನೇ ಒಂದೊಂದು ಗುಣವೂ ಪೂರ್ಣವಾಗಿರುವುದರಿಂದ (ಅವಧಿ ರಹಿತವಾಗಿರುವುದರಿಂದ) ಗುಣತಃ ಅನಂತಃ ಎಂದು ಕರೆಯಲ್ಪಡುತ್ತಾನೆ.**

**ವಿವರಣೆ–** ಎಂಭತ್ತನೆಯ ಶ್ಲೋಕದಲ್ಲಿ ಅನಂತೋ ಗುಣತಃಸ್ತ್ವಿತಿ ಎಂಬಲ್ಲಿ ತು ಶಬ್ದದಿಂದ ಹೇಳಿದ ವಿಶೇಷವನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ. ಅನಂತಗುಣ ಎಂಬ ಶಬ್ದದಿಂದ ಗುಣಗಳಲ್ಲಿ ಸಂಖ್ಯೆ ಇಲ್ಲವೆಂದೂ, ಗುಣತೋ ಅನಂತಃ ಎಂಬ ಶಬ್ದದಿಂದ ಒಂದೊಂದು ಗುಣವೂ ಅನಂತವೆಂದೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಇತ್ಯೇವ ವಾಚ್ಯಃ ಸ್ಮೃತ್ಯರ್ಥೋ ನ ಚೇತ್ ಸ್ಯಾತ್ಪುನರುಕ್ತತಾ ।**
**ತತ್ ಸಿದ್ಧಾಃ ಸ್ಮೃತಿಯುಕ್ತಿಭ್ಯಾಂ ಗುಣಾಃ ಪೂರ್ಣಾಃ ಪೃಥಕ್‌ಪೃಥಕ್ ॥ ೮೫ ॥**

**ಅರ್ಥ–** ಸ್ಮೃತ್ಯರ್ಥಃ= ಸ್ಮೃತಿಯ ಅರ್ಥವು, ಇತ್ಯೇವ= ಇದೇ ರೀತಿಯಲ್ಲಿಯೇ, ವಾಚ್ಯಃ= ಹೇಳಲ್ಪಡಬೇಕು, ನ ಚೇತ್= ಇಲ್ಲದಿದ್ದರೆ, ಪುನರುಕ್ತತಾ= ಪುನರುಕ್ತಿಯು, ಸ್ಯಾತ್= ಉಂಟಾಗುತ್ತದೆ, ತತ್= ಆದ್ದರಿಂದ, ಸ್ಮೃತಿಯುಕ್ತಿಭ್ಯಾಂ= ಸ್ಮೃತಿ ಮತ್ತು ಯುಕ್ತಿಗಳಿಂದ, ಗುಣಾಃ= ಗುಣಗಳು, ಪೃಥಕ್ ಪೃಥಕ್= ಪ್ರತ್ಯೇಕ ಪ್ರತ್ಯೇಕವಾಗಿ, ಪೂರ್ಣಾಃ ಸಿದ್ಧಾಃ= ಪೂರ್ಣವೆಂದು ಸಿದ್ಧವಾಗುತ್ತವೆ.

**ಅನುವಾದ–** ಸ್ಮೃತ್ಯರ್ಥವನ್ನು ಹೀಗೆಯೇ ಹೇಳಬೇಕು. ಇಲ್ಲದಿದ್ದರೆ ಅನಂತ ಗುಣ ಎಂಬ ಶಬ್ದಕ್ಕೂ ಮತ್ತು ಗುಣತೋ ಅನಂತ ಎಂಬ ಶಬ್ದಕ್ಕೂ ಪುನರುಕ್ತಿದೋಷವು ಉಂಟಾಗುತ್ತದೆ. ಆದ್ದರಿಂದ ಸ್ಮೃತಿ ಮತ್ತು ಯುಕ್ತಿಗಳ ಬಲದಿಂದ ಎಲ್ಲ ಗುಣಗಳೂ ಪ್ರತ್ಯೇಕವಾಗಿ ಪೂರ್ಣವಾದವು ಎಂದು ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ತುಶಬ್ದೇನ ಪ್ರಾಕ್ ಸೂಚಿತಾಂ ಪೌನರುಕ್ತ್ಯಾಖ್ಯಯುಕ್ತಿಂ ಸ್ಪಷ್ಟಮಾಹ – **ಗುಣೇತಿ** ॥ ಉಕ್ತಾರ್ಥಮಿದಂ ಪದ್ಯಮ್ । ತತ್ತಸ್ಮಾತ್ ಸ್ಮೃತಿಯುಕ್ತಿಭ್ಯಾಂ ಗುಣಾಃ ಪೃಥಕ್ಪೃಥಕ್ ಪೂರ್ಣಾಃ ಸಿದ್ಧಾ ಇತಿ ಫಲಿತಕಥನಮ್ ॥ ೮೪-೮೫ ॥

**ವಿವರಣೆ–** ಸ್ಮೃತಿ ಎಂದರೆ ಭಾಗವತದ ಸ್ಮೃತಿ. ಯುಕ್ತಿ ಎಂದರೆ ಅನ್ಯಥಾಪೌನರುಕ್ತ್ಯ ದೋಷವೆಂಬ ಯುಕ್ತಿ.

**ನ ಚೇತ್ ಸ ಕ್ವಚಿದಜ್ಞಃ ಸ್ಯಾತ್ ಕದಾಚಿದ್ವಾಽಜ್ಞತಾಽಽಪತೇತ್ ।**
**ತದ್ ದೇಶ ಕಾಲವ್ಯಾಪ್ತಸ್ಯ ಧರ್ಮವ್ಯಾಪ್ತಿರ್ಬಲಾದಪಿ (ಭೂತ್) ॥ ೮೬ ॥**

**ಅರ್ಥ–** ನ ಚೇತ್= ಹಾಗಿಲ್ಲದಿದ್ದರೆ, ಸಃ= ಬ್ರಹ್ಮನು, ಕ್ವಚಿತ್= ಯಾವುದೋ ಒಂದು ದೇಶದಲ್ಲಿ, ಅಜ್ಞಃ ಸ್ಯಾತ್= ಅಜ್ಞನಾಗಬೇಕಾದೀತು, ಕದಾಚಿದ್ವಾ= ಅಥವಾ ಯಾವುದೋ ಒಂದು ಕಾಲದಲ್ಲಿ, ಅಜ್ಞತಾ= ಅಜ್ಞತ್ವವು, ಆಪತೇತ್= ಉಂಟಾದೀತು, ತತ್= ಆದ್ದರಿಂದ, ದೇಶಕಾಲವ್ಯಾಪ್ತಸ್ಯ= ದೇಶಕಾಲದಲ್ಲಿ ವ್ಯಾಪ್ತನಾದ ಬ್ರಹ್ಮನಿಗೆ, ಬಲಾದಪಿ= ಯುಕ್ತಿ ಬಲದಿಂದಲೂ ಸಹ, ಧರ್ಮವ್ಯಾಪ್ತಿಃ= ಧರ್ಮಗಳ ವ್ಯಾಪ್ತಿಯು ಸಿದ್ಧವಾಗುತ್ತದೆ.

**ಅನುವಾದ–** ಧರ್ಮಗಳು ಪೂರ್ಣವೆಂದು ಅಂಗೀಕರಿಸದಿದ್ದರೆ, ಬ್ರಹ್ಮನು ಯಾವುದೋ ಒಂದು ದೇಶದಲ್ಲಿ ಅಥವಾ ಯಾವುದೋ ಒಂದು ಕಾಲದಲ್ಲಿ ಅಜ್ಞನಾಗುತ್ತಾನೆ ಎಂಬ ಆಪತ್ತಿಯು ಬರುವುದು. ಆದ್ದರಿಂದ ದೇಶಕಾಲವ್ಯಾಪ್ತನಾದ ಬ್ರಹ್ಮನ ಸರ್ವಜ್ಞತ್ವಾದಿ ಧರ್ಮಗಳೂ ಸಹ ಯುಕ್ತಿಬಲದಿಂದ ವ್ಯಾಪ್ತವಾದವು ಎಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ನ ಚೇದಿತಿ** ॥ ನಚೇತ್ ಜ್ಞಾನಾದಿಗುಣಾ ದೇಶಕಾಲವ್ಯಾಪ್ತಾ ನ ಭವಂತಿ ಚೇತ್ ಸಃ ದೇಶಕಾಲವ್ಯಾಪ್ತೋ ಭಗವಾನ್ ಕ್ವಚಿದ್ದೇಶೇಽಜ್ಞಃ

**ಸ್ಯಾತ್ । ಕದಾಚಿತ್ ಕಸ್ಮಿಂಶ್ಚಿತ್ ಕಾಲೇವಾಽಜ್ಞಃ ಸ್ಯಾತ್ । ತತ್ತಸ್ಮಾದ್ಬಲಾತ್ ಯುಕ್ತಿಬಲಾತ್ ದೇಶವ್ಯಾಪ್ತಸ್ಯ ಭಗವತೋ ಜ್ಞಾನಮಪಿ ದೇಶವ್ಯಾಪ್ತಂ ನ ಭವತಿ ಚೇದ್ಭಗವಾನಪಿ ಕ್ವಚಿದ್ದೇಶೇ ಜ್ಞಾನೀ ಕಸ್ಮಿಂಶ್ಚಿದ್ದೇಶೇ ಸರ್ವಥಾ ಜ್ಞಾನಾಭಾವಾತ್ ಜಡಶ್ಚ ಸ್ಯಾತ್ । ಇದಾನೀಂ ಜ್ಞಾನೀ ಕಾಲಾಂತರೇ ಸರ್ವಜ್ಞಾನಾಭಾವಾತ್ ಜಡಶ್ಚ ಸ್ಯಾತ್ । ಜಡತಾಪರಿಹಾರಾಯಾಲ್ಪಮಪಿ ಜ್ಞಾನಮಂಗೀಕ್ರಿಯತೇ ಚೇತ್ ಜ್ಞಾನಂ ಚ ವ್ಯಾಪ್ತಂ ಸ್ಯಾದಿತ್ಯುಭಯತಃ ಪಾಶಾರಜ್ಜುರಿತಿ ಭಾವಃ ॥೮೬॥**

**ವಿವರಣೆ–** ಭಗವಂತನ ಧರ್ಮಗಳು ಪೂರ್ಣ ಎಂಬ ವಿಷಯದಲ್ಲಿ ಇಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. ಸರ್ವಜ್ಞತ್ವವು ದೇಶತಃ ಪೂರ್ಣವಾಗದಿದ್ದರೆ ಎಂದರೆ ವ್ಯಾಪ್ತವಾಗದಿದ್ದರೆ ಒಂದು ದೇಶದಲ್ಲಿ ಇರುವ ಬ್ರಹ್ಮನಲ್ಲಿ ಸರ್ವಜ್ಞತ್ವವಿದೆ, ಇನ್ನೊಂದು ದೇಶದಲ್ಲಿ ಇರುವ ಬ್ರಹ್ಮನಲ್ಲಿ ಸರ್ವಜ್ಞತ್ವವಿಲ್ಲ ಎಂದಾಗುತ್ತದೆ. ಬ್ರಹ್ಮನಂತೂ ವ್ಯಾಪ್ತನಾಗಿದ್ದಾನಷ್ಟೇ? ಆದ್ದರಿಂದ ಯಾವ ದೇಶದಲ್ಲಿ ಬ್ರಹ್ಮನಿಗೆ ಸರ್ವಜ್ಞತ್ವವಿಲ್ಲವೋ ಅಲ್ಲಿ ಅವನು ಅಜ್ಞನಾಗಬೇಕಾಗುತ್ತದೆ. ಅದರಂತೆ ಸರ್ವಜ್ಞತ್ವವು ಕಾಲದಿಂದ ವ್ಯಾಪ್ತವಾಗದಿದ್ದರೆ, ಸರ್ವಕಾಲದಲ್ಲಿರುವ ಬ್ರಹ್ಮನಿಗೆ ಯಾವ ಕಾಲದಲ್ಲಿ ಸರ್ವಜ್ಞತ್ವವಿಲ್ಲವೋ ಆಗ ಅವನು ಅಜ್ಞನೆಂದು ಆಗಬೇಕಾಗುತ್ತದೆ. ಆದರೆ ಬ್ರಹ್ಮನು ಸರ್ವದೇಶಗಳಲ್ಲಿಯೂ, ಸರ್ವಕಾಲಗಳಲ್ಲಿಯೂ ಸರ್ವಜ್ಞನಾದವನು. ಆದ್ದರಿಂದ ಅವನ ಸರ್ವಜ್ಞತ್ವವನ್ನು ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲಗಳಲ್ಲಿಯೂ ಇರುವ ಧರ್ಮ ಎಂದು ಅಂಗೀಕರಿಸಬೇಕು. ಇದೇ ದೇಶದಿಂದ ವ್ಯಾಪ್ತತ್ವ ಮತ್ತು ಕಾಲದಿಂದ ವ್ಯಾಪ್ತತ್ವ. ಬ್ರಹ್ಮನು ಹೇಗೆ ದೇಶಕಾಲಗಳಿಂದ ವ್ಯಾಪ್ತನೋ, ಹಾಗೆಯೇ ಅವನ ಧರ್ಮಗಳು ದೇಶಕಾಲಗಳಿಂದ ವ್ಯಾಪ್ತವಾದವು. ಬ್ರಹ್ಮನು ಯಾವ ದೇಶದಲ್ಲಿ ಅಥವಾ ಯಾವ ಕಾಲದಲ್ಲಿ ಸರ್ವಜ್ಞತ್ವ ಶೂನ್ಯನಾಗುತ್ತಾನೆಯೋ, ಆಗ ಅಲ್ಲಿ ಅವನಿಗೆ ಜಡತ್ವ ಉಂಟಾಗುತ್ತದೆ. ಜಡತ್ವವನ್ನು ಪರಿಹಾರ ಮಾಡಲು ಅಲ್ಪವಾದ ಜ್ಞಾನವನ್ನಾದರೂ ಒಪ್ಪಿದರೆ ಆ ಜ್ಞಾನವೂ ವ್ಯಾಪ್ತ ಎಂದು ಸಿದ್ಧವಾಗುತ್ತದೆ. ಹೀಗೆ ಸರ್ವಜ್ಞತ್ವಕ್ಕೆ ವ್ಯಾಪ್ತಿಯನ್ನು ಒಪ್ಪದಿದ್ದರೆ ಅಜ್ಞತ್ವವು ಬರುತ್ತದೆ, ಅಜ್ಞತ್ವವನ್ನು ಪರಿಹಾರ ಮಾಡಲು ಅಲ್ಪಜ್ಞಾನವನ್ನು ಒಪ್ಪಿದರೂ ಅದು ಪೂರ್ಣತ್ವದಲ್ಲೇ ಪರ್ಯವಸಾನವನ್ನು ಹೊಂದುತ್ತದೆ ಎಂದು ಅಭಿಪ್ರಾಯ.

**ಕಿಂ ಸಂಯೋಗವದನ್ಯೇಽಪಿ ಗುಣಾ ರೂಪರಸಾದಯಃ ।**
**ಅವ್ಯಾಪ್ಯವೃತ್ತಯೋ ಧರ್ಮಿವ್ಯಾಪ್ತೌ ವ್ಯಾಪ್ತಾ ಗುಣಾಶ್ಚ ತತ್ ॥ ೮೭ ॥**

**ಅರ್ಥ–** ಸಂಯೋಗವತ್= ಸಂಯೋಗದಂತೆ, ಅನ್ಯೇ= ಇತರವಾದ, ರೂಪರಸಾದಯಃ= ರೂಪರಸ ಮೊದಲಾದ, ಗುಣಾ ಅಪಿ= ಗುಣಗಳೂ ಕೂಡ, ಅವ್ಯಾಪ್ಯವೃತ್ತಯಃ ಕಿಂ= ಅವ್ಯಾಪ್ಯವೃತ್ತಿಗಳೇನು? ತತ್= ಆದ್ದರಿಂದ, ಧರ್ಮಿವ್ಯಾಪ್ತೌ= ಧರ್ಮಿಯು ವ್ಯಾಪ್ತವಾಗಿರುವಾಗ, ಗುಣಾಶ್ಚ= ಗುಣಗಳೂ ಸಹ, ವ್ಯಾಪ್ತಾಃ= ವ್ಯಾಪ್ತವಾಗಿಯೇ ಇವೆ.

**ಅನುವಾದ–** ಸಂಯೋಗದಂತೆ ರೂಪರಸಾದಿ ಉಳಿದ ಗುಣಗಳೂ ಸಹ ಅವ್ಯಾಪ್ಯವೃತ್ತಿಗಳೇನು? ಆದ್ದರಿಂದ ಧರ್ಮಿಯು ವ್ಯಾಪ್ತ ಎಂದು ಅಂಗೀಕರಿಸಿದರೆ, ಅಲ್ಲಿನ ಧರ್ಮಗಳೂ ವ್ಯಾಪ್ತವೆಂದೇ ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಕಿಂಚ ಸಂಯೋಗಶಬ್ದವ್ಯತಿರಿಕ್ತಾರೂಪರಸಾದ್ಯಾಃ ಸರ್ವೇ ಗುಣಾ ವ್ಯಾಪ್ಯವೃತ್ತಯ ಇತಿ ಸರ್ವವಾದಿನೋ ವದಂತಿ। ಏವಂಚ ದೇಶಕಾಲವ್ಯಾಪ್ತಸ್ಯ ಭಗವತೋ ರೂಪರಸಾದ್ಯಾಃ ಕಥಂ ನ ದೇಶಕಾಲಾವ್ಯಾಪ್ತಾ ಇತ್ಯಾಹ – ಕಿಮಿತಿ ॥ ಅವ್ಯಾಪ್ಯವೃತ್ತಯಃ ಕಿಮಿತಿ ಸಂಬಂಧಃ। ತತ್ತಸ್ಮಾತ್ ಸಂಯೋಗವ್ಯತಿರಿಕ್ತ ಧರ್ಮಾಣಾಂ ಧರ್ಮಿಣಿ ವ್ಯಾಪ್ಯವೃತ್ತಿತ್ವಾತ್ ಧರ್ಮಿವ್ಯಾಪ್ತೌ ಗುಣಾಶ್ಚ ವ್ಯಾಪ್ತಾ ಇತಿ ಯೋಜನೀಯಮ್ ॥ ೮೭ ॥

**ವಿವರಣೆ–** ವ್ಯಾಪ್ಯವೃತ್ತಿ ಎಂದರೆ ಧರ್ಮಿಯನ್ನು ಪೂರ್ಣವಾಗಿ ಆವರಿಸಿಕೊಂಡಿರುವಂತಹ ಎಂದು ಅರ್ಥ. ಅವ್ಯಾಪ್ಯವೃತ್ತಿ ಎಂದರೆ ಧರ್ಮಿಯ ಒಂದು ಭಾಗದಲ್ಲಿ ಇದೆ, ಇನ್ನೊಂದು ಭಾಗದಲ್ಲಿ ಇಲ್ಲ ಎಂದು ಅರ್ಥ. ರೂಪರಸ ಮೊದಲಾದವುಗಳು ಧರ್ಮಿಯನ್ನು ವ್ಯಾಪಿಸಿಕೊಂಡಿರುತ್ತವೆ. ಸಂಯೋಗ ಮೊದಲಾದ ಧರ್ಮಗಳು ಧರ್ಮಿಯ ಒಂದು ಭಾಗದಲ್ಲಿ ಮಾತ್ರ ಇರುತ್ತವೆ. ಶಬ್ದವೂ ಸಹ ಆಕಾಶದ ಒಂದು ಭಾಗದಲ್ಲಿ ಇರುತ್ತದೆ. ಆದರೆ ಯಾವ ವಾದಿಗಳೂ ಶಬ್ದ ಮತ್ತು ಸಂಯೋಗ ಇವೆರಡನ್ನು ಬಿಟ್ಟು ಉಳಿದ ಯಾವ ಧರ್ಮಗಳೂ ಅವ್ಯಾಪ್ಯವೃತ್ತಿ ಎಂದು ಅಂಗೀಕರಿಸುವುದಿಲ್ಲ. ಬ್ರಹ್ಮನ ಸರ್ವಜ್ಞತ್ವಾದಿಗುಣಗಳೂ ಸಹ ಸಂಯೋಗಶಬ್ದಗಳಿಗಿಂತ ಭಿನ್ನವಾದುದರಿಂದ ಅವೂ ಸಹ ವ್ಯಾಪ್ಯವೃತ್ತಿಗಳೇ. ಆದ್ದರಿಂದ ಧರ್ಮಿಯಾದ ಬ್ರಹ್ಮನು ವ್ಯಾಪ್ತನಾಗಿರುವುದರಿಂದ ವ್ಯಾಪ್ಯವೃತ್ತಿಯಾದ ಅವನ ಸರ್ವಜ್ಞತ್ವಾದಿ ಗುಣಗಳೂ ಸಹ ವ್ಯಾಪ್ತವಾಗಿಯೇ ಇರುತ್ತವೆ ಎಂದು ಅಭಿಪ್ರಾಯ.

**ಸಂಕೋಚಾನೌಚಿತ್ಯತಶ್ಚ ಗುಣತೋಽನಂತತಾ ತ್ವಿಯಂ ।**
**ಬಹುತ್ವಾಚ್ಚ ಮಹತ್ತ್ವಾಚ್ಚ ಗುಣಾನಾಮಿತಿ ಗಮ್ಯತೇ ॥ ೮೮ ॥**

**ಅರ್ಥ–** ಸಂಕೋಚಾನೌಚಿತ್ಯತಃ= ಸಂಕೋಚ ಮಾಡಲು ಉಚಿತವಾದ ಕಾರಣವಿಲ್ಲವಾದ್ದರಿಂದ, ಗುಣಾನಾಂ= ಗುಣಗಳ, ಬಹುತ್ವಾಚ್ಚ= ಬಹುತ್ವದಿಂದಲೂ, ಮಹತ್ತ್ವಾಚ್ಚ= ಮಹತ್ವದಿಂದಲೂ, ಇಯಂ= ಈ, ಗುಣತೋ ಅನಂತತಾ= ಗುಣತಃ ಅನಂತತ್ವವು, ಗಮ್ಯತೇ= ತಿಳಿಯಲ್ಪಡುತ್ತದೆ.

**ಅನುವಾದ–** ಗುಣತಃ ಅನಂತ ಎಂಬ ಶ್ರುತಿಯಲ್ಲಿ ಅರ್ಥಸಂಕೋಚವನ್ನು ಮಾಡಲು ಕಾರಣವಿಲ್ಲದಿರುವುದರಿಂದ, ಗುಣಗಳು ಬಹುವಾಗಿರುವುದರಿಂದಲೂ ಮತ್ತು ವ್ಯಾಪ್ತವಾಗಿರುವುದರಿಂದಲೂ (ಪ್ರತ್ಯೇಕವಾಗಿ ಪೂರ್ಣವಾಗಿರುವುದರಿಂದಲೂ) ಈ ಗುಣತಃ ಅನಂತತ್ವವು ಉಪಪನ್ನವಾಗುವುದೆಂದು ತಿಳಿಯುತ್ತದೆ.

**ಭಾವವಿಲಾಸಿನೀ–** ಪೂರ್ವಮನಂತಗುಣೇ ಗುಣತೋನಂತೇ ಇತಿ ವಿಶೇಷಣದ್ವಯಸಾರ್ಥಕ್ಯಾ-ಯಾರ್ಥದ್ವಯಮುಕ್ತಮ್ । ವಸ್ತುತಸ್ತ್ವೇಕೇನೈವ ವಿಶೇಷಣೇನಾರ್ಥದ್ವಯಂ ಸಿದ್ಧ್ಯತೀತ್ಯಾಹ ॥ **ಸಂಕೋಚೇತಿ** ॥ ಇದಂ ಗುಣತೋನಂತತಾ ಸಂಕೋಚಾನೌಚಿತ್ಯತಃ ಸಂಕೋಚಸ್ಯಾನೌಚಿತ್ಯಾತ್ ಅನುಚಿತತ್ವಾತ್ । ಗುಣಾನಾಂ ಮಹತ್ತ್ವಾತ್ ದೇಶಕಾಲಾನವಚ್ಛಿನ್ನತ್ವಾತ್ ಬಹುತ್ವಾತ್ ಸಂಖ್ಯಾ-ವಿಚ್ಛೇದರಾಹಿತ್ಯಾಚ್ಚೇತಿ ಗಮ್ಯತೇ । ಅನಂತಾ ಗುಣಾ ಯಸ್ಯೇತಿ ವಿಗ್ರಹೇ ಗುಣಾನಾಮಂತಾ-ಭಾವೋ ಹಿ ಅನಂತಶಬ್ದಾರ್ಥಃ । ಅಂತಶ್ಚ ಸಂಕೋಚೇ ಕಾರಣಾಭಾವಾತ್ ಯೋಗ್ಯತಯಾ ದೇಶಾತ್ಕಾಲಾತ್ ಸಂಖ್ಯಾತಶ್ಚೇತಿ ಗುಣಾನಾಂ ದೇಶಾನಂತ್ಯಂ ಕಾಲಾನಂತ್ಯಂ ಸಂಖ್ಯಾನಂತ್ಯಂ ಚೈಕೇನೈವ ವಿಶೇಷಣೇನ ಸಿದ್ಧ್ಯತೀತಿ ಭಾವಃ ॥ ೮೮ ॥

**ವಿವರಣೆ–** ಹಿಂದೆ ಅನಂತಗುಣ ಎಂಬ ಶಬ್ದದಿಂದ ಗುಣದಲ್ಲಿ ಸಂಖ್ಯೆಯ ಪರಿಚ್ಛೇದವಿಲ್ಲವೆಂದೂ ಗುಣತೋ ಅನಂತಃ ಎಂಬ ಶಬ್ದದಿಂದ ಗುಣಗಳು ಪ್ರತ್ಯೇಕವಾಗಿ ಪೂರ್ಣವೆಂದೂ ಹೇಳಲ್ಪಟ್ಟಿತು. ಈಗ ಗುಣತೋ ಅನಂತ ಎಂಬ ಒಂದೇ ಶಬ್ದದಿಂದಲೇ ಸಂಖ್ಯಾಶೂನ್ಯತ್ವವೂ ಮತ್ತು ಪ್ರತ್ಯೇಕಪೂರ್ಣತ್ವವೂ ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ. ಅನಂತ ಎಂಬ ಶಬ್ದಕ್ಕೆ ದೇಶತಃ, ಕಾಲತಃ, ಗುಣತಃ ಅನಂತ ಎಂದು ಅರ್ಥ. ಇದರಲ್ಲಿ ಸಂಕೋಚ ಮಾಡಲು ಕಾರಣವಿಲ್ಲವಾದ್ದರಿಂದ ಗುಣಗಳಿಗೂ ಸಹ ದೇಶಾನಂತ್ಯವೂ ಮತ್ತು ಕಾಲಾನಂತ್ಯವೂ 'ಗುಣತೋ ಅನಂತೇ' ಎಂಬ ಒಂದೇ ಪದಸಮೂಹದಿಂದಲೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅಪರಿಚ್ಛಿನ್ನಧರ್ಮಾಣಾಂ ತತ್ ಸತ್ಯಾನಾಂ ಸ್ವಧರ್ಮಿವತ್ ।**
**ಪರಿಚ್ಛಿನ್ನತ್ವದಜ್ಞಾನಕಲ್ಪಿತತ್ವಕಥಾ ವೃಥಾ ॥ ೮೯ ॥**

**ಅರ್ಥ–** ಅಪರಿಚ್ಛಿನ್ನ ಧರ್ಮಾಣಾಂ= ಅಪರಿಚ್ಛಿನ್ನವಾದ ಬ್ರಹ್ಮನ ಧರ್ಮಗಳಿಗೆ, ತತ್= ಅಪರಿಚ್ಛಿನ್ನವಾದ ಕಾರಣದಿಂದಲೇ, ಸ್ವಧರ್ಮಿವತ್= ತಮಗೆ ಧರ್ಮಿಯಾದ ಬ್ರಹ್ಮನಂತೆ, ಸತ್ಯಾನಾಂ= ಸತ್ಯವಾದವುಗಳಿಗೆ, ಪರಿಚ್ಛಿನ್ನತ್ವದಜ್ಞಾನಕಲ್ಪಿತತ್ವಕಥಾ= ಪರಿಚ್ಛಿನ್ನವಾದ ಅಜ್ಞಾನದಿಂದ ಕಲ್ಪಿತವಾದವು ಎಂಬ ನಿನ್ನ ಕಥೆಯು, ವೃಥಾ= ವ್ಯರ್ಥವಾಗುತ್ತದೆ.

**ಅನುವಾದ–** ಬ್ರಹ್ಮನ ಧರ್ಮಗಳೂ ಅಪರಿಚ್ಛಿನ್ನವಾದ್ದರಿಂದ ಅಪರಿಚ್ಛಿನ್ನವಾದ ಕಾರಣದಿಂದಲೇ ತಮ್ಮ ಧರ್ಮಿಯಾದ ಬ್ರಹ್ಮನಂತೆ ಸತ್ಯವಾದುದರಿಂದ ನೀನು ಹೇಳುವ ಪರಿಚ್ಛಿನ್ನವಾದ ಅಜ್ಞಾನದಿಂದ ಕಲ್ಪಿತತ್ವ ಕಥೆಯು ವ್ಯರ್ಥವಾದುದು.

**ಭಾವವಿಲಾಸಿನೀ–** ಧರ್ಮಾಣಾಂ ವ್ಯಾಪ್ತಿಕಥನಾತ್ ಲಬ್ಧಂ ಫಲದ್ವಯಮಾಹ–**ಅಪರಿಚ್ಛಿನ್ನೇತಿ** ॥ ತತ್ತಸ್ಮಾತ್ ಧರ್ಮಿವದ್ಬ್ರಹ್ಮವದಪರಿಚ್ಛಿನ್ನಧರ್ಮಾಣಾಂ ಅಪರಿಚ್ಛಿನ್ನತ್ವಾತ್ತದ್ವದೇವ ಸತ್ಯಾನಾಂ ಚ ಪರಿಚ್ಛಿನ್ನೇನ ತ್ವದಭಿಮತಾಜ್ಞಾನೇನ ಕಲ್ಪಿತತ್ವ ಕಥಾವೃಥೇತಿ ಯೋಜನಾ । ಏವಂಚ ವ್ಯಾಪ್ಯ-ವೃತ್ತಯೋ ಭಗವದ್ಧರ್ಮಾ ವ್ಯಾಪ್ತಾ ಭವಿತುಮರ್ಹಂತಿ । ವ್ಯಾಪ್ತಧರ್ಮಿಕತ್ವೇ ಸತಿ ವ್ಯಾಪ್ಯ-

ವೃತ್ತಿತ್ವಾತ್ । ಗಗನಸ್ಥಮಹಾಪರಿಮಾಣವತ್ । ವಿಮತಾ ಭಗವದ್ಧರ್ಮಾಃ ಪಾರಮಾರ್ಥಿಕಾಃ ವ್ಯಾಪ್ತತ್ವಾತ್ ಬ್ರಹ್ಮವತ್ । ವಿಮತಾ ಭಗವದ್ಧರ್ಮಾ ಅಜ್ಞಾನಕಲ್ಪಿತಾ ನಭವಂತಿ ಅಪರಿಚ್ಛಿನ್ನತ್ವಾದ್ ಬ್ರಹ್ಮವದಿತಿ ಚಾನುಮಾನತ್ರಯಮನೇನೋಕ್ತಂ ಭವತಿ । ತತಶ್ಚ ಧರ್ಮಾಣಾಂ ವ್ಯಾಪ್ತತ್ವಪ್ರಸಾಧನೇನ ಬ್ರಹ್ಮವತ್ ಸತ್ಯತ್ವಮಜ್ಞಾನಾಕಲ್ಪಿತತ್ವಂ ಚೇತಿ ಫಲದ್ವಯಂ ಸಿದ್ಧಮಿತಿ ಭಾವಃ ॥ ೮೯ ॥

**ವಿವರಣೆ–** ಧರ್ಮಗಳಿಗೆ ಪೂರ್ಣತ್ವವನ್ನು ಹೇಳುವುದರಿಂದ ಉಂಟಾದ ಎರಡು ಫಲಗಳನ್ನು ಇಲ್ಲಿ ಹೇಳುತ್ತಾರೆ. ಧರ್ಮಗಳು ಅಪರಿಚ್ಛಿನ್ನವಾದ್ದರಿಂದ ಅವು ಸತ್ಯವಾದವು. ಏಕೆಂದರೆ ಮಿಥ್ಯಾತ್ವವನ್ನು ಸಾಧಿಸುವ ಅವರ ಯುಕ್ತಿಯು ಪರಿಚ್ಛಿನ್ನತ್ವ. ಅಪರಿಚ್ಛಿನ್ನತ್ವವಿರುವ ಧರ್ಮಗಳಲ್ಲಿ ಮಿಥ್ಯಾತ್ವವಿಲ್ಲ, ಆದ್ದರಿಂದ ಸತ್ಯತ್ವವಿದೆ ಎಂದು ಸಿದ್ಧವಾಯಿತು. ಸತ್ಯವಾದ್ದರಿಂದಲೇ ಅಜ್ಞಾನಕಲ್ಪಿತವಲ್ಲ ಎಂದೂ ಸಿದ್ಧವಾಯಿತು. ಈ ರೀತಿ ಅನುಮಾನಗಳು ವಿವಕ್ಷಿತವಾಗಿವೆ. ಸರ್ವಜ್ಞತ್ವಾದಿ ಭಗವದ್ಧರ್ಮಗಳು ವ್ಯಾಪ್ತವಾಗಿವೆ, ವ್ಯಾಪ್ತಧರ್ಮಿಕವಾಗಿ ವ್ಯಾಪ್ತವೃತ್ತಿಗಳಾಗಿರುವುದರಿಂದ ಆಕಾಶದಲ್ಲಿರುವ ಮಹಾಪರಿಮಾಣದಂತೆ, ಎಂಬುದು ಮೊದಲನೆಯ ಅನುಮಾನ. ವಿಮತವಾದ ಭಗವದ್ಧರ್ಮಗಳು ಪಾರಮಾರ್ಥಿಕವಾಗಿವೆ, ವ್ಯಾಪ್ತವಾದ್ದರಿಂದ, ಬ್ರಹ್ಮನಂತೆ, ಎಂಬುದು ಎರಡನೆಯ ಅನುಮಾನ. ವಿಮತವಾದ ಭಗವದ್ಧರ್ಮಗಳು ಅಜ್ಞಾನಕಲ್ಪಿತವಲ್ಲ, ಅಪರಿಚ್ಛಿನ್ನವಾದ ಕಾರಣದಿಂದ, ಬ್ರಹ್ಮನಂತೆ, ಎಂಬುದು ಮೂರನೆಯ ಅನುಮಾನ. ಆದ್ದರಿಂದ ಧರ್ಮಗಳಿಗೆ ವ್ಯಾಪ್ತತ್ವವನ್ನು ಸಾಧನೆ ಮಾಡುವುದರಿಂದ, ಬ್ರಹ್ಮನಂತೆ ಸತ್ಯತ್ವವೂ, ಅಜ್ಞಾನಕಲ್ಪಿತತ್ವಾಭಾವವೂ ಸಿದ್ಧವಾಗುವುದು ಎಂದು ಅಭಿಪ್ರಾಯ.

**ಅಮಾಯಿಕೋ ಹರಿಃ ಸಿದ್ಧಸ್ತದ್ಧರ್ಮಾ ಅಪ್ಯಮಾಯಿಕಾಃ ।**
**ಅಣುಭ್ಯೋಽಖಿಲಜೀವೇಭ್ಯೋ ವಿಭೇದಶ್ಚ ವಿಭೋರಭೂತ್ ॥ ೯೦ ॥**

**ಅರ್ಥ–** ಹರಿಃ= ಹರಿಯು, ಅಮಾಯಿಕಃ= ಮಾಯಾಕಲ್ಪಿತನಲ್ಲವೆಂದು ಸಿದ್ಧವಾಯಿತು, ತದ್ಧರ್ಮಾ ಅಪಿ= ಅವನ ಸರ್ವಜ್ಞತ್ವಾದಿ ಧರ್ಮಗಳೂ, ಅಮಾಯಿಕಾಃ= ಮಾಯಾ ಕಲ್ಪಿತವಲ್ಲವೆಂದು, ಸಿದ್ಧಾಃ= ಸಿದ್ಧವಾಯಿತು, ವಿಭೋಃ= ವ್ಯಾಪ್ತನಾದ ಹರಿಗೆ, ಅಣುಭ್ಯಃ= ಅಣುಪರಿಮಾಣವುಳ್ಳ, ಅಖಿಲಜೀವೇಭ್ಯಃ= ಎಲ್ಲ ಜೀವರಿಂದಲೂ, ವಿಭೇದಶ್ಚ= ವಿಭೇದವೂ, ಅಭೂತ್= ಸಿದ್ಧವಾಯಿತು.

**ಅನುವಾದ–** ಹರಿಯು ಮಾಯಾಕಲ್ಪಿತನಲ್ಲವೆಂದು ಸಿದ್ಧವಾಯಿತು. ಅವನ ಸರ್ವಜ್ಞತ್ವಾದಿ ಧರ್ಮಗಳು ಮಾಯಾಕಲ್ಪಿತವಲ್ಲವೆಂದು ಸಿದ್ಧವಾಯಿತು. ವ್ಯಾಪ್ತನಾದ ಅವನಿಗೆ ಅಣುಗಳಾದ ಎಲ್ಲ ಜೀವರಿಂದಲೂ ಭೇದವೂ ಸಿದ್ಧವಾಯಿತು.

**ಭಾವವಿಲಾಸಿನೀ–** ಅಜ್ಞಾನಾಕಲ್ಪಿತತ್ವೇಪಿ ಮಾಯಯಾ ಕಲ್ಪಿತತ್ವಂ ಸ್ಯಾದಿತಿ ಮಾಯಾಜ್ಞಾನಯೋರ್ಭೇದವಾದಿನಶ್ಶಂಕಾಪ್ಯನೇನೈವ ನಿರಸ್ತೇತ್ಯಾಹ – **ಅಮಾಯಿಕ ಇತಿ** ॥ ಮಾಯಾಯಾಃ

**ಪರಿಚ್ಛಿನ್ನತ್ವಾದ್ಧರ್ಮಿಣೋ ಹರೇಸ್ತದ್ಧರ್ಮಾಣಾಂ ಚೋಕ್ತರೀತ್ಯಾಽಪರಿಚ್ಛಿನ್ನತ್ವಾತ್ ಕಥಂ ಮಾಯಿಕತ್ವಮಪೀತಿ ಭಾವಃ । ತತ್ತಸ್ಮಾದಪರಿಚ್ಛಿನ್ನತ್ವಾದಿತಿ ವಾ । ಅನೇನೈವ ಭೇದಸೌರಭಫಲಂ ಚ ಸಿದ್ಧಮಿತ್ಯಾಹ – ಅಣುಭ್ಯ ಇತಿ ॥ ವಿಭೋರ್ದೇಶಕಾಲವ್ಯಾಪ್ತಸ್ಯ ॥ ೯೦ ॥**

**ವಿವರಣೆ–** ಅದ್ವೈತಿಗಳು ಅಜ್ಞಾನ ಮತ್ತು ಮಾಯಾ ಎಂಬ ಎರಡು ಕಲ್ಪನೆಗಳನ್ನು ಹೊಂದಿದ್ದಾರೆ. ಸ್ವಾಶ್ರಯಕ್ಕೆ ವ್ಯಾಮೋಹವನ್ನು ಉಂಟುಮಾಡುವುದು ಅಜ್ಞಾನ, ಪರರಿಗೆ ವ್ಯಾಮೋಹವನ್ನು ಉಂಟುಮಾಡುವುದು ಮಾಯಾ ಎಂದು ಅವರ ಅಭಿಪ್ರಾಯ. ಜೀವನು ಅಜ್ಞಾನಾಶ್ರಯ. ಏಕೆಂದರೆ ಅಜ್ಞಾನವು ಜೀವನಿಗೆ ಭ್ರಾಂತಿಯನ್ನು ಉಂಟುಮಾಡುತ್ತದೆ. ಈಶ್ವರನು ಮಾಯಾಶ್ರಯ, ಏಕೆಂದರೆ ಮಾಯೆಯು ತನ್ನ ಆಶ್ರಯದಲ್ಲಿ ಭ್ರಾಂತಿಯನ್ನು ಉಂಟುಮಾಡುವುದಿಲ್ಲ, ಇನ್ನೊಬ್ಬರಿಗೆ ಭ್ರಾಂತಿಯನ್ನು ಉಂಟುಮಾಡುತ್ತದೆ. ಈಶ್ವರನ ಮಾಯೆಯು ಈಶ್ವರನಿಗೆ ಭ್ರಾಂತಿಯನ್ನು ಉಂಟುಮಾಡುವುದಿಲ್ಲ, ಜೀವನಿಗೆ ಭ್ರಾಂತಿಯನ್ನು ಉಂಟುಮಾಡುತ್ತದೆ, ಹೀಗೆಂದು ಅದ್ವೈತಿಗಳ ಕಲ್ಪನೆ. ಈಶ್ವರನ ಸರ್ವಜ್ಞತ್ವಾದಿ ಗುಣಗಳು ಹಿಂದೆ ಹೇಳಿದಂತೆ ಅಜ್ಞಾನಕಲ್ಪಿತವಾಗದಿದ್ದರೂ ಅಜ್ಞಾನಕ್ಕೂ ಮಾಯೆಗೂ ಭೇದವಿರುವುದರಿಂದ ಮಾಯಾಕಲ್ಪಿತವಾಗಲಿ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಅದಕ್ಕೆ ಉತ್ತರ ಮಾಯೆಯು ಅವರಿಗೆ ಪರಿಚ್ಛಿನ್ನವಾದುದು. ಈಶ್ವರನು ಅಪರಿಚ್ಛಿನ್ನ, ಅವನ ಧರ್ಮಗಳೂ ಅಪರಿಚ್ಛಿನ್ನ ಎಂದು ಸಾಧಿಸಿದ ಮೇಲೆ ಈಶ್ವರನಿಗಾಗಲೀ, ಅವನ ಧರ್ಮಗಳಿಗಾಗಲೀ ಮಾಯಾಕಲ್ಪಿತತ್ವವು ಬರುವುದಿಲ್ಲ. ಈಶ್ವರನು ದೇಶದಿಂದ ವ್ಯಾಪ್ತ, ಜೀವರು ಅಣುಗಳು. ಆದ್ದರಿಂದ ದೇಶದ ಆನಂತ್ಯವನ್ನು ಹೇಳಿದ ಮೇಲೆ ಜೀವರಿಂದ ಭೇದವೂ ಸಿದ್ಧವಾಯಿತು ಎಂದು ಅಭಿಪ್ರಾಯ.

ವಿರುದ್ಧ ಧರ್ಮಧ್ರೌವ್ಯೇಣ ಭೇದೋಽಪಿ ಧ್ರುವತಾಮಗಾತ್ ।
ಅತೋಽನಂತಶ್ರುತಿರ್ವಾದದ್ವಯಸ್ಯಾಪ್ಯುತ್ತರಂ ದದೌ ॥ ೯೧ ॥

**ಅರ್ಥ–** ವಿರುದ್ಧ ಧರ್ಮಧ್ರೌವ್ಯೇಣ= ವಿರುದ್ಧ ಧರ್ಮಗಳು ನಿತ್ಯವಾದುದರಿಂದ, ಭೇದೋಽಪಿ= ಭೇದವೂ ಸಹ, ಧ್ರುವತಾಂ= ನಿತ್ಯತ್ವವನ್ನು, ಅಗಾತ್= ಹೊಂದಿತು, ಅತಃ= ಆದ್ದರಿಂದ, ಅನಂತಶ್ರುತಿಃ= ಅನಂತ ಎಂಬ ವೇದದ ಒಂದು ಪದವು, ವಾದದ್ವಯಸ್ಯಾಪಿ= ನಿರ್ಗುಣತ್ವ ವಾದಕ್ಕೂ ಮತ್ತು ಜೀವೈಕ್ಯವಾದಕ್ಕೂ, ಉತ್ತರಂ= ಉತ್ತರವನ್ನು, ದದೌ= ಕೊಟ್ಟಿತು.

**ಅನುವಾದ– ಜೀವವಿರುದ್ಧಧರ್ಮಗಳಾದ ಈಶ್ವರನ ಸರ್ವಜ್ಞತ್ವಾದಿ ಧರ್ಮಗಳು ದೇಶದಿಂದ ವ್ಯಾಪ್ತವೂ ಮತ್ತು ಕಾಲದಿಂದ ನಿತ್ಯವೂ ಆದ್ದರಿಂದ ಜೀವೇಶ್ವರಭೇದವು ನಿತ್ಯತ್ವವನ್ನು ಹೊಂದಿತು. ಆದ್ದರಿಂದ ಶ್ರುತಿಯಲ್ಲಿರುವ ಅನಂತ ಎಂಬ ಒಂದು ಪದವು ನಿರ್ಗುಣತ್ವ ವಾದಕ್ಕೂ ಮತ್ತು ಐಕ್ಯವಾದಕ್ಕೂ ಉತ್ತರವನ್ನು ಕೊಟ್ಟಿತು.**

**ಭಾವವಿಲಾಸಿನೀ–** ವಿರುದ್ಧಧರ್ಮಾಣಾಮಭೇದವಿರೋಧಿಸಾರ್ವಜ್ಞ್ಯಾದಿಭಗವತ್ ಧರ್ಮಾಣಾಂ ಧ್ರೌವ್ಯೇಣ ದೇಶತಃ ಕಾಲತಶ್ಚ ಧ್ರುವತ್ವೇನ । ಅತಃ ಸರ್ವವಸ್ತ್ವಾತ್ಮಕತ್ವಾಖ್ಯ ಪರಾಭಿಲಷಿತಾರ್ಥಖಂಡನಾತ್ ಗುಣಸಿದ್ಧೇರ್ಗುಣಪೂರ್ಣತ್ವಾರ್ಥಸ್ಥಾಪನೇನ ಗುಣಾನಾಂ ಸಿದ್ಧತ್ವಾತ್ ತತ ಏವಾಂತೇ ಜೀವೇಶ್ವರಯೋಃ ಪಾರಮಾರ್ಥಿಕಭೇದಸ್ಯ ಚ ಸಿದ್ಧತ್ವಾದಿತ್ಯರ್ಥಃ । ವಾದದ್ವಯಸ್ಯೈಕ್ಯವಾದನೈರ್ಗುಣ್ಯವಾದಾಖ್ಯವಾದದ್ವಯಸ್ಯ ॥ ೯೧ ॥

**ವಿವರಣೆ–** ವಿರುದ್ಧವಾದ ಧರ್ಮಗಳು ಎಂದರೆ ಜೀವನಿಗೆ ವಿರುದ್ಧವಾದ ಸರ್ವಜ್ಞತ್ವಾದಿ ಧರ್ಮಗಳು. ಅವುಗಳಿಗೆ ಆನಂತ್ಯ ಎಂದರೆ ದೇಶದಿಂದ ವ್ಯಾಪ್ತತ್ವ ಮತ್ತು ಕಾಲದಿಂದ ನಿತ್ಯತ್ವ. ಈ ಗುಣಗಳು ನಿತ್ಯವಾದ್ದರಿಂದ ಎಂದೂ ಈಶ್ವರನನ್ನು ಬಿಟ್ಟು ಹೋಗುವುದಿಲ್ಲ. ವಿರುದ್ಧ ಧರ್ಮವು ಇರುವ ಕಡೆಯಲ್ಲಿ ಎಂದೂ ಐಕ್ಯವು ಬರುವುದಿಲ್ಲ. ಆದ್ದರಿಂದ ಪರವಾದಿಗೆ ಇಷ್ಟವಾದ ಸರ್ವವಸ್ತ್ವೈಕತ್ವದಲ್ಲಿ ಅಂತರ್ಗತನಾದ ಜೀವೈಕ್ಯವನ್ನು ಖಂಡನೆ ಮಾಡುವುದರಿಂದ ಮತ್ತು ಗುಣಗಳು ಅಪರಿಚ್ಛಿನ್ನವೆಂದು ಹೇಳಿ ಗುಣನಿತ್ಯತ್ವವನ್ನು ಸ್ಥಾಪನೆ ಮಾಡುವುದರಿಂದ ಪೂರ್ಣಗುಣಗಳೂ ಮತ್ತು ಪಾರಮಾರ್ಥಿಕ ಭೇದವೂ ಸಿದ್ಧವಾಗುತ್ತವೆ. ಅಪರಿಚ್ಛಿನ್ನವಾದ ಗುಣಗಳು ಪರಿಚ್ಛಿನ್ನವಾದ ಮಾಯಾಕಲ್ಪಿತವಲ್ಲವಾದ್ದರಿಂದ ಭೇದವು ಪಾರಮಾರ್ಥಿಕವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಅನಂತಪದವು ಐಕ್ಯವಾದಕ್ಕೂ ಮತ್ತು ನೈರ್ಗುಣ್ಯವಾದಕ್ಕೂ ಉತ್ತರವನ್ನು ನೀಡಿತು ಎಂದು ಅಭಿಪ್ರಾಯ.

**ತತ್ ತ್ರಿವರ್ಣಂ ಪದಮಿದಂ ತ್ರಿವಿಕ್ರಮಪದೋಪಮಂ ।**
**ಪರಾಜಯಾಯ ದೈತ್ಯಾನಾಂ ಜಯಾಯ ಚ ಸತಾಮಭೂತ್ ॥ ೯೨ ॥**

**ಅರ್ಥ–** ತತ್= ಆ ಕಾರಣದಿಂದ, ಇದಂ ತ್ರಿವರ್ಣಂ ಪದಂ= ಈ ಮೂರು ವರ್ಣಗಳುಳ್ಳ ಅನಂತ ಎಂಬ ಪದವು, ತ್ರಿವಿಕ್ರಮಪದೋಪಮಂ= ತ್ರಿವಿಕ್ರಮನ ಪಾದಕ್ಕೆ ಸದೃಶವಾಗಿದೆ, ಅದು, ದೈತ್ಯಾನಾಂ= ದೈತ್ಯರ, ಪರಾಜಯಾಯ= ಪರಾಜಯಕ್ಕೂ, ಚ= ಮತ್ತು, ಸತಾಮ್= ಸಜ್ಜನರ, ಜಯಾಯ= ವಿಜಯಕ್ಕೂ, ಅಭೂತ್= ಕಾರಣವಾಯಿತು.

**ಅನುವಾದ–** ಆದ್ದರಿಂದ ಅನಂತ ಎಂಬ ಮೂರು ವರ್ಣದ ಪದವು ತ್ರಿವಿಕ್ರಮನ ಪಾದವಿದ್ದಂತೆ. ದೈತ್ಯರ ಪರಾಜಯಕ್ಕೂ ಸಜ್ಜನರ ವಿಜಯಕ್ಕೂ ಕಾರಣವಾಯಿತು.

**ಭಾವವಿಲಾಸಿನೀ–** ಅನಂತಶ್ರುತ್ಯರ್ಥಕಥನಮುಪಸಂಹರತಿ – **ತತ್ ತ್ರಿವರ್ಣಮಿತಿ** ॥ ತತ್ತಸ್ಮಾತ್ ತ್ರಿವರ್ಣಮಿದಂ ಪದಮನಂತಾಖ್ಯಪದಂ ತ್ರಿವಿಕ್ರಮಪದೋಪಮಂ ತ್ರಿವಿಕ್ರಮಸ್ಯ ಹರೇಃ ಪಾದೋಪಮಮ್ । ತ್ರಿವಿಕ್ರಮತ್ವೇನ ತ್ರಿವರ್ಣತ್ವೇನ ಚೋಭಯೋರುಪಮಾ । ಅಥವಾ ಅನಂತಪದಸ್ಯಾಪ್ಯಕಾರನಕಾರತಕಾರಾಖ್ಯವರ್ಣತ್ರಯ ಸಹಿತತ್ವಮ್ । ಹರಿಪಾದಸ್ಯಾಪಿ ತಲನಖೋಪರಿಭಾಗೇಷು ರಕ್ತಶುಭ್ರನೀಲಾಖ್ಯ ವರ್ಣತ್ರಯಸಹಿತತ್ವಮಿತ್ಯುಭಯೋರುಪಮಾ ದ್ರಷ್ಟವ್ಯಾ ॥ ೯೨ ॥

**ವಿವರಣೆ–** ಅನಂತ ಎಂಬ ಪದದಲ್ಲಿ 'ಅ' 'ನ' 'ತ' ಎಂಬ ಮೂರು ವರ್ಣವಿದೆ. ಆದ್ದರಿಂದ ಇದು ತ್ರಿವರ್ಣಪದ. ಈ ಪದವು ಈಶ್ವರನ ಗುಣನಿತ್ಯತ್ವವನ್ನು ಮತ್ತು ಜೀವ ಭೇದವನ್ನು ಹೇಳುವುದರಿಂದ ದ್ವೈತ್ಯಸ್ಥಾನದಲ್ಲಿರುವ ಅದ್ವೈತಿಗಳ ಪರಾಭವ ಉಂಟಾಯಿತು. ಗುಣಗಳ ಸತ್ಯತ್ವವನ್ನು ಮತ್ತು ಜೀವೇಶ್ವರ ಭೇದವನ್ನು ಸಮರ್ಥನೆ ಮಾಡುವುದರಿಂದ ಸಜ್ಜನರ ವಿಜಯವೂ ಉಂಟಾಯಿತು ಅಥವಾ ತ್ರಿವರ್ಣ ಎಂದರೆ ಮೂರು ಬಣ್ಣಗಳಿಂದ ಕೂಡಿದ್ದು ಎಂದಾದರೂ ಅರ್ಥ. ತ್ರಿವಿಕ್ರಮ ದೇವರ ಪಾದವು ಪಾದತಳದಲ್ಲಿ ಕೆಂಪು, ನಖಗಳಲ್ಲಿ ಬಿಳಿ ಮತ್ತು ಪಾದದ ಮೇಲೆ ಎಂದರೆ ಮುಂಗಾಲಿನಲ್ಲಿ ನೀಲವರ್ಣದಿಂದ ಕೂಡಿದ್ದಾಗಿದೆ. ಈ ದೃಷ್ಟಿಯಿಂದಲೂ ಅನಂತಪದವನ್ನು ತ್ರಿವಿಕ್ರಮದೇವರ ಪಾದಕ್ಕೆ ಹೋಲಿಸಬಹುದು.

**ಸರ್ವೋಪನಿಷದಾಮರ್ಥಂ ನಿರ್ಣೇತುಂ ಬಾದರಾಯಣಃ ।**
**ನಿರ್ಮಮೇ ಬ್ರಹ್ಮಸೂತ್ರಾಣಿ ಸೂಚನಾತ್ ಸೂತ್ರಮುಚ್ಯತೇ ॥ ೯೩ ॥**

**ಅರ್ಥ–** ಬಾದರಾಯಣಃ= ವೇದವ್ಯಾಸರು, ಸರ್ವೋಪನಿಷದಾಂ= ಎಲ್ಲಾ ಉಪನಿಷತ್ತುಗಳ, ಅರ್ಥಂ= ಅರ್ಥವನ್ನು, ನಿರ್ಣೇತುಂ = ನಿರ್ಣಯಿಸಲು, ಬ್ರಹ್ಮ-ಸೂತ್ರಾಣಿ = ಬ್ರಹ್ಮಸೂತ್ರಗಳನ್ನು, ನಿರ್ಮಮೇ= ರಚಿಸಿದರು, ಸೂಚನಾತ್= ಸೂಚನೆ ಮಾಡುವ ಕಾರಣದಿಂದ, ಸೂತ್ರಂ= ಸೂತ್ರವೆಂದು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ವೇದವ್ಯಾಸರು ಎಲ್ಲಾ ವೇದಗಳ ಮತ್ತು ಉಪನಿಷತ್ತುಗಳ ಅರ್ಥವನ್ನು ನಿರ್ಣಯ ಮಾಡಲು ಬ್ರಹ್ಮಸೂತ್ರಗಳನ್ನು ರಚಿಸಿದರು. ಸೂತ್ರವೆಂದರೆ ಸೂಚನೆ ಮಾಡುವುದು ಎಂದು ಅರ್ಥ.

**ಭಾವವಿಲಾಸಿನೀ–**ಇದಾನೀಂ ಬ್ರಹ್ಮಸೂತ್ರಮರ್ಯಾದಯಾ ಜೀವೇಶ್ವರಭೇದಾದಿಕಂ ಸಪ್ರಪಂಚಂ ಸಾಧಯಿತುಮಾರಭತೇ ॥ **ಸರ್ವೋಪನಿಷದಾಮಿತಿ** ॥ ಅಸ್ಯಾರ್ಥಃ ಸ್ಪಷ್ಟ ಏವ ॥ ೯೩ ॥

**ವಿವರಣೆ–** ಇನ್ನು ಬ್ರಹ್ಮಸೂತ್ರಗಳ ಮರ್ಯಾದೆಯಿಂದಲೂ ಜೀವೇಶ್ವರಭೇದಾದಿಸಕಲ ಪ್ರಮೇಯವನ್ನು ಸಮರ್ಥಿಸಲು ಆರಂಭಿಸುತ್ತಾರೆ.

**ಅತಸ್ತತ್ಸೂಚಿತಂ ಗ್ರಾಹ್ಯಂ ಕಿಂ ಪುನಃ ಸಕೃದೀರಿತಂ ।**
**ತದಭ್ಯಸ್ತಂ ಸಮಸ್ತಂ ತು ಚೂಡಾರತ್ನಾಯತೇ ವಿದಾಂ ॥ ೯೪ ॥**

**ಅರ್ಥ–** ಅತಃ= ಆ ಕಾರಣದಿಂದ, ತತ್ಸೂಚಿತಂ= ಸೂತ್ರದಿಂದ ಸೂಚಿತವಾದುದು, ಗ್ರಾಹ್ಯಂ= ಸ್ವೀಕಾರಾರ್ಹವಾದುದು, ಸಕೃತ್= ಒಂದು ಬಾರಿ, ಈರಿತಂ= ಹೇಳಲ್ಪಟ್ಟಿದ್ದಂತೂ, ಕಿಂ ಪುನಃ= ಸ್ವೀಕಾರಾರ್ಹವೆಂದು ಪುನಃ ಹೇಳಬೇಕೇನು? ತದಭ್ಯಸ್ತಂ ಸಮಸ್ತಂ ತು= ಸೂತ್ರಗಳಲ್ಲಿ ಪುನಃ ಪುನಃ ಹೇಳಿದ ಎಲ್ಲವೂ ಸಹ, ವಿದಾಂ= ಜ್ಞಾನಿಗಳಿಗೆ, ಚೂಡಾರತ್ನಾಯತೇ = ಶಿರೋರತ್ನಗಳಂತೆ ಇರುತ್ತವೆ.

**ಅನುವಾದ–** ಆದ್ದರಿಂದ ಸೂತ್ರಸೂಚಿತವಾದುದನ್ನು ಸ್ವೀಕರಿಸಬೇಕು. ಇನ್ನು ಸೂತ್ರವು ಕಂಠತಃ ಹೇಳಿದುದನ್ನು ಸ್ವೀಕರಿಸಬೇಕೆಂದು ಪುನಃ ಹೇಳಬೇಕಾದ ಅವಶ್ಯಕತೆ ಇದೆಯೇ? ಇನ್ನು ಸೂತ್ರದಲ್ಲಿ ಪುನಃ ಪುನಃ ಹೇಳಿದ ವಿಷಯವಂತೂ ಜ್ಞಾನಿಗಳಿಗೆ ಶಿರೋರತ್ನದಂತೆ ಇರುತ್ತದೆ.

**ಭಾವವಿಲಾಸಿನೀ–** ಅತಃ ಸೂತ್ರಸ್ಯ ಸೂಚಕತ್ವಾತ್ । ತದಭ್ಯಸ್ತಂ ತೇನ ಸೂತ್ರೇಣಾಸಕೃದುಕ್ತಮ್ । ವಿದಾಂ ವಿದುಷಾಮ್ ॥ ೯೪ ॥

**ವಿವರಣೆ–** ಸೂಚನೆ ಮಾಡುವುದರಿಂದ ಸೂತ್ರ ಎಂದು ಹೇಳಿದ ಮೇಲೆ, ಸೂತ್ರ ಸೂಚಿತವಾದುದೂ ಗ್ರಾಹ್ಯ. ಹೀಗಿರುವಾಗ ಸೂತ್ರದಲ್ಲಿ ಕಂಠತಃ ಹೇಳಿರುವುದು ಮತ್ತು ಪುನಃ ಪುನಃ ಹೇಳಿರುವುದು ಅತ್ಯಂತ ಗ್ರಾಹ್ಯವೆಂದು ಸಿದ್ಧವಾಗುತ್ತದೆ.

**ನಿರ್ಣಾಯಕಾನುಸಾರೇಣ ನಿರ್ಣೇಯಸ್ಯ ಗತಿಂ ವಿದುಃ ।**
**ಅಧ್ವನೀನಸ್ಯ ಸ ಹ್ಯಧ್ವಾ ಯೋ ದೀಪೇನ ಪ್ರದರ್ಶಿತಃ ॥ ೯೫ ॥**

**ಅರ್ಥ–** ನಿರ್ಣಾಯಕಾನುಸಾರೇಣ= ನಿರ್ಣಾಯಕವಾದ ಬ್ರಹ್ಮಸೂತ್ರಕ್ಕೆ ಅನುಸಾರವಾಗಿ, ನಿರ್ಣೇಯಸ್ಯ= ನಿರ್ಣಯವಾದ ವೇದೋಪನಿಷತ್ತುಗಳ, ಗತಿಂ= ಮಾರ್ಗವನ್ನು (ಅರ್ಥವನ್ನು), ವಿದುಃ= ತಿಳಿಯುತ್ತಾರೆ, ಅಧ್ವನೀನಸ್ಯ= ದಾರಿಹೋಕನಿಗೆ, ಯಃ= ಯಾವುದು, ದೀಪೇನ ಪ್ರದರ್ಶಿತಃ= ದೀಪದಿಂದ ತೋರಿಸಲ್ಪಡುತ್ತದೆಯೋ, ಸಃ= ಅದೇ, ಅಧ್ವಾಹಿ= ಮಾರ್ಗವಷ್ಟೇ?

**ಅನುವಾದ–** ನಿರ್ಣಾಯಕವಾದ ಬ್ರಹ್ಮಸೂತ್ರಕ್ಕೆ ಅನುಸಾರವಾಗಿ ನಿರ್ಣೇಯವಾದ ಉಪನಿಷತ್ತುಗಳ ಅರ್ಥವನ್ನು ಜ್ಞಾನಿಗಳು ತಿಳಿಯುತ್ತಾರೆ. ಕತ್ತಲೆಯಲ್ಲಿ ದಾರಿಯಲ್ಲಿ ಹೋಗುವವನಿಗೆ ದೀಪವು ಯಾವುದನ್ನು ಮಾರ್ಗವೆಂದು ತೋರಿಸುತ್ತದೆಯೋ ಅದೇ ಮಾರ್ಗವಷ್ಟೇ?

**ಭಾವವಿಲಾಸಿನೀ–** ನಿರ್ಣಾಯಕಾನುಸಾರೇಣ ನಿರ್ಣಾಯಕ ಬ್ರಹ್ಮಸೂತ್ರಾನುಸಾರೇಣ । ನಿರ್ಣೇಯಸ್ಯೋಪನಿಷದಾದೇಃ । ತತ್ರ ದೃಷ್ಟಾಂತಃ-ಅಧ್ವನೀನಸ್ಯೇತಿ ॥ ಅಧ್ವನೀನಸ್ಯಪಾಂಥಸ್ಯ । ದೀಪೇನೇತ್ಯುಪಲಕ್ಷಣಮ್ । ಸೂರ್ಯೇಣ ವಾ ನಿಶಿ ಚೇದ್ದೀಪೇನ ದಿವಾಚೇತ್ ಸೂರ್ಯೇಣೇ-ತ್ಯರ್ಥಃ । ಉಭಯೋರಪ್ಯಂಧಕಾರನಿಮಿತ್ತ ಸಂಶಯವಿಪರ್ಯಯ ನಿರಾಸಕತ್ವಾತ್ । ಏವಂ ವಾದಿವಿವಾದಾದಿನಾ ಪ್ರಾಪ್ತಸಂಶಯಾದಿನಿರಾಸಕತ್ವೇನ ವ್ಯಾಸಾಖ್ಯಸೂರ್ಯಸ್ಯ ಪ್ರಭಾಸ್ಥಾನೀ-ಯೇನ ಸೂತ್ರೇಣೋಪನಿಷದಾದೇರಪ್ಯರ್ಥಾಖ್ಯಮಾರ್ಗೋ ನಿರ್ಣೇಯ ಇತಿ ಭಾವಃ ॥೯೫॥

**ವಿವರಣೆ–** ಕತ್ತಲೆಯಲ್ಲಿ ಹೋಗುವವನಿಗೆ ದೀಪವಾಗಲೀ, ಸೂರ್ಯನಾಗಲೀ ತೋರಿಸಿದುದೇ ಮಾರ್ಗವಾಗುತ್ತದೆ. ಏಕೆಂದರೆ ಅವೆರಡು ವಸ್ತುಗಳೂ ಅಂಧಕಾರವನ್ನು

ನಿವಾರಿಸಿ ಸರಿಯಾದ ಮಾರ್ಗವನ್ನು ತೋರಿಸುತ್ತವೆ. ಹಾಗೆಯೇ ವೇದೋಪನಿಷತ್ತುಗಳ ಅರ್ಥವನ್ನು ತಿಳಿದುಕೊಳ್ಳಲು ಹೊರಟವರು ಪರವಾದಿಗಳ ದುರ್ಮತಗಳೆಂಬ ಅಂಧಕಾರಕ್ಕೆ ಸಿಲುಕಿ ಸಂಶಯಗ್ರಸ್ತರಾದರೆ, ಅಥವಾ ವಿಪರೀತಜ್ಞಾನವನ್ನು ಹೊಂದಿದರೆ, ವೇದವ್ಯಾಸರೆಂಬ ಸೂರ್ಯನ ಪ್ರಭೆಯ ರೂಪದಲ್ಲಿರುವ ಬ್ರಹ್ಮಸೂತ್ರಗಳಿಂದ ಯಾವುದು ತೋರಿಸಲ್ಪಡುತ್ತದೆಯೋ ಅದೇ ಮಾರ್ಗ. ಆದ್ದರಿಂದ ಬ್ರಹ್ಮಸೂತ್ರಗಳಿಗೆ ಅನುಸಾರವಾಗಿ ವೇದಗಳನ್ನು ಅರ್ಥಮಾಡಬೇಕೆಂದು ಅಭಿಪ್ರಾಯ.

**ಚೋರಃ ಪ್ರದೀಪನಾಶಂ ಚ ಕಾಮಯೇತ್ ಕಾಮುಕೋಽಪಿ ವಾ ।**
**ರಾಜ್ಞ್ಯಾ ರಾಜಗೃಹಂ ರಾತ್ರೌ ಯಾಂತ್ಯಾ ಸೋಽರ್ಥ್ಯಃ ಪದೇ ಪದೇ ॥ ೯೬ ॥**

**ಅರ್ಥ–** ಚೋರಃ= ಕಳ್ಳನಾಗಲೀ, ಕಾಮುಕೋಽಪಿ ವಾ= ಅಥವಾ ಕಾಮುಕನಾಗಲೀ, ಪ್ರದೀಪ ನಾಶಂ ಚ= ಪ್ರದೀಪದ ನಾಶವನ್ನೂ ಸಹ, ಕಾಮಯೇತ್= ಬಯಸಬಹುದು, ರಾತ್ರೌ= ರಾತ್ರಿಯ ವೇಳೆಯಲ್ಲಿ, ರಾಜಗೃಹಂ= ರಾಜಗೃಹಕ್ಕೆ, ಯಾಂತ್ಯಾ= ಹೋಗುವ, ರಾಜ್ಞ್ಯಾ= ರಾಣಿಯಿಂದ ಮಾತ್ರ, ಸಃ= ಆ ಪ್ರದೀಪವು, ಪದೇ ಪದೇ= ಹೆಜ್ಜೆ ಹೆಜ್ಜೆಗೂ, ಅರ್ಥ್ಯಃ= ಅಪೇಕ್ಷಿಸಲ್ಪಡುತ್ತದೆ.

**ಅನುವಾದ–** ಕಳ್ಳನಾದವನು ಅಥವಾ ಕಾಮುಕನಾದವನು ತನ್ನ ಅಯೋಗ್ಯವಾದ ಕೆಲಸವನ್ನು ಯಾರೂ ನೋಡದೆ ಇರಲಿ ಎಂದು ದೀಪದ ನಾಶವನ್ನು ಬಯಸುತ್ತಾನೆ. ಆದರೆ ರಾತ್ರಿಯ ಅಂಧಕಾರದಲ್ಲಿ ರಾಜನನ್ನು ಸೇರಲು ರಾಜಗೃಹಕ್ಕೆ ಹೋಗುವ ರಾಣಿಯು ಮಾತ್ರ ಹೆಜ್ಜೆ ಹೆಜ್ಜೆಗೂ ದೀಪವನ್ನು ಬಯಸುತ್ತಾಳೆ.

**ಭಾವವಿಲಾಸಿನೀ–** ಸೂತ್ರಮುಲ್ಲಂಘ್ಯೋಪನಿಷದಾಮರ್ಥಕಥನಮನ್ಯಾಪದೇಶೇನ ನಿಂದಯನ್ ಸೂತ್ರಾನುಸಾರಿ ವ್ಯಾಖ್ಯಾಂ ಸ್ತೌತಿ – **ಚೋರ ಇತಿ** ॥ ಸಃ ದೀಪಃ । ಅನ್ಯತ್ ಸ್ಪಷ್ಟಮ್ । ಯಥಾಽಯೋಗ್ಯಾರ್ಥ- ಕಾಮುಕತ್ವಾತ್ತದರ್ಥಮಂಧಕಾರಾಪೇಕ್ಷೌ ಚೋರಕಾಮುಕೌ ಪ್ರದೀಪನಾಶಂ ಕಾಮಯತಃ । ತಥಾ ಪೂರ್ವೋತ್ತರವಿರುದ್ಧತಯೋಪನಿಷದಾಮಯೋಗ್ಯಸ್ವಕಪೋಲ-ಕಲ್ಪಿತಾರ್ಥಕಥಕಾಃ ಪರಂ ಸೂತ್ರಮುಲ್ಲಂಘಯಂತಿ । ಯಥಾ ಚ ಸ್ವಯೋಗ್ಯಂ ರಾಜಗೃಹಂ ರಾತ್ರೌ ಯಾಂತೀರಾಜ್ಞೀ ಪದೇಪದೇ ದೀಪಮರ್ಥಯತೇ । ತಥಾ ಪೂರ್ವೋತ್ತರಾವಿರುದ್ಧತಯಾ ಸ್ವಯೋಗ್ಯ ನಾರಾಯಣಾಖ್ಯಭರ್ತೃಗುಣಾನ್ ಪ್ರತಿಪಾದಯಂತೀ ಉಪನಿಷದಾದೀನಾಂ ವ್ಯಾಖ್ಯಾ ಚ ಪದೇಪದೇ ತತ್ತ್ವಮಿತ್ಯಾದಿ ಪದೇಪದೇ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವದಿತ್ಯಾದಿ ಸೂತ್ರಾಖ್ಯದೀಪಾನ್ ಕಾಮಯತ ಇತ್ಯುಭಯತ್ರಾಪಿ ಧ್ವನಿತೋಽಪ್ಯರ್ಥೋಽ ಗ್ರಾಹ್ಯಃ ॥ ೯೬ ॥

**ವಿವರಣೆ–** ಸೂತ್ರಗಳನ್ನು ತಿರಸ್ಕರಿಸಿ ಉಪನಿಷತ್ತುಗಳಿಗೆ ಅರ್ಥವನ್ನು ಹೇಳುವವರನ್ನು ಇಲ್ಲಿ ಅನ್ಯಾಪದೇಶದಿಂದ ನಿಂದಿಸುತ್ತಾರೆ. ಹೇಗೆ ಅಯೋಗ್ಯವಾದ ಅರ್ಥವನ್ನು

ಬಯಸುವುದರಿಂದ ಚೋರ ಮತ್ತು ಕಾಮುಕರು ದೀಪನಾಶವನ್ನು ಬಯಸುತ್ತಾರೆಯೋ ಹಾಗೆಯೇ ಉಪನಿಷತ್ತುಗಳಿಗೆ ಪೂರ್ವೋತ್ತರವಿರುದ್ಧವಾದ ಅಯೋಗ್ಯವಾದ, ಸ್ವಕಪೋಲಕಲ್ಪಿತವಾದ ಅರ್ಥವನ್ನು ಹೇಳುವ ಭಾಷ್ಯಕಾರರು ಸೂತ್ರಗಳನ್ನು ಉಲ್ಲಂಘಿಸುತ್ತಾರೆ. ಆದರೆ ಹೇಗೆ ರಾಣಿಯು ತನಗೆ ಯೋಗ್ಯವಾದ ರಾಜನ ಗೃಹಕ್ಕೆ ಹೋಗಲು ದೀಪವನ್ನು ಅಪೇಕ್ಷಿಸುತ್ತಾಳೆಯೋ ಅದರಂತೆ ಪೂರ್ವೋತ್ತರ ಅವಿರುದ್ಧವಾದ ತನಗೆ ಯೋಗ್ಯವಾದ ನಾರಾಯಣನೆಂಬ ಪತಿಯ ಗುಣಗಳನ್ನು ಪ್ರತಿಪಾದನೆ ಮಾಡುವ ಉಪನಿಷತ್ತುಗಳೂ, ಅವುಗಳ ವ್ಯಾಖ್ಯಾನವೂ ಸಹ ಪ್ರತಿಯೊಂದು ಪದದಲ್ಲಿಯೂ ಸಹ ಬ್ರಹ್ಮಸೂತ್ರಗಳನ್ನು ಅಪೇಕ್ಷಿಸುತ್ತವೆ. ತತ್ವಮಸಿ ಎಂಬಲ್ಲಿ ತದ್ಗುಣಸಾರತ್ವಾತ್ತುತ್ತದ್ವ್ಯಪದೇಶಃ ಎಂಬ ಸೂತ್ರವನ್ನೂ, ಇದೇ ರೀತಿಯಲ್ಲಿ ಬೇರೆ ಬೇರೆ ಪದಗಳಿಗೆ ಮತ್ತು ವಾಕ್ಯಗಳಿಗೆ ಅರ್ಥವನ್ನು ಮಾಡುವಾಗ, ಬೇರೆ ಬೇರೆ ಬ್ರಹ್ಮಸೂತ್ರಗಳನ್ನೂ ಅವಲಂಬಿಸುತ್ತದೆ ಎಂದು ಅರ್ಥ.

**ಅತಃ ಸೂತ್ರಂ ತಿರಸ್ಕೃತ್ಯ ಯಃ ಶ್ರುತ್ಯರ್ಥಮತತ್ವವಿತ್ ।**
**ವಕ್ತಿ ಸ ಶ್ರುತಿಸುಂದರ್ಯಾಃ ಕಂಠಾತ್ ಸೂತ್ರಂ ಜಿಹೀರ್ಷತಿ ॥ ೯೭ ॥**

**ಅರ್ಥ–** ಅತಃ= ಆದ್ದರಿಂದ, ಅತತ್ವವಿತ್= ತತ್ವಜ್ಞಾನಿಯಲ್ಲದ ಯಾವನು, ಸೂತ್ರಂ ತಿರಸ್ಕೃತ್ಯ= ಬ್ರಹ್ಮಸೂತ್ರವನ್ನು ತಿರಸ್ಕರಿಸಿ, ಶ್ರುತ್ಯರ್ಥಂ ವಕ್ತಿ= ಶ್ರುತ್ಯರ್ಥವನ್ನು ಹೇಳುತ್ತಾನೆಯೋ, ಸಃ= ಅವನು, ಶ್ರುತಿಸುಂದರ್ಯಾಃ= ಶ್ರುತಿಸುಂದರಿಯ, ಕಂಠಾತ್= ಕಂಠದಿಂದ, ಸೂತ್ರಂ= ಮಂಗಳಸೂತ್ರವನ್ನು, ಜಿಹೀರ್ಷತಿ= ಅಪಹರಿಸಲು ಬಯಸುತ್ತಾನೆ.

**ಅನುವಾದ–** ಆದ್ದರಿಂದ ತತ್ವಜ್ಞಾನಿಯಲ್ಲದ ಯಾವ ಭಾಷ್ಯಕಾರನು ಸೂತ್ರಗಳನ್ನು ಉಲ್ಲಂಘಿಸಿ ಶ್ರುತಿಯ ಅರ್ಥವನ್ನು ಹೇಳುತ್ತಾನೆಯೋ ಅವನು ಶ್ರುತಿಮಾತೆಯ ಕಂಠದಿಂದ ಮಂಗಳ ಸೂತ್ರವನ್ನು ಕಿತ್ತುಹಾಕಲು ಬಯಸುತ್ತಾನೆ.

**ಭಾವವಿಲಾಸಿನೀ–** ಅತಃ ಸೂತ್ರಾಣಾಮುಪನಿಷದರ್ಥ ನಿರ್ಣಾಯಕತ್ವಾತ್ । ಅತತ್ವವಿತ್ ಶ್ರುತಿತತ್ವಾರ್ಥಾಜ್ಞಾನೀ ಸಃ ಉತ್‌ಸೂತ್ರಯತ್ ಕಿಂಚಿದರ್ಥಕಥಕಃ ಕಂಠಾತ್ ಅರ್ಥಕಥಕತಯಾ ಕಂಠಸ್ಥಾನೀಯ ವಾಕ್ಯಾತ್ ಸೂತ್ರಂ ಬ್ರಹ್ಮಸೂತ್ರಂ ಜಿಹೀರ್ಷತಿ ದೂರೀಕರ್ತುಮಿಚ್ಛತಿ । ಅನ್ಯತ್ರ ಸೂತ್ರಂ ಕಂಠಸೂತ್ರಮ್ । ತಥಾಚೋತ್‌ಸೂತ್ರಭಾಷ್ಯಭಾಷಿತಃ ಉಪನಿಷದ್ವಾಕ್ಯಾರ್ಥೋಽಪಿ ಚಂಡಾಲಗೀತವದಶ್ರಾವ್ಯಃ । ಸೂತ್ರಾನುಸಾರಿಭಾಷ್ಯ-ಪ್ರತಿಪಾದಿತಸ್ತೂಪನಿಷದ್ವಾಕ್ಯಾರ್ಥಃ ಮಂಗಲಸ್ತ್ರೀಶೋಭನವಾಕ್ಯವತ್ ಸುಶ್ರಾವ್ಯ ಇತಿ ಭಾವಃ ॥ ೯೭ ॥

**ವಿವರಣೆ–** ಶ್ರುತಿಸುಂದರಿಯು ತನ್ನ ಕಂಠದಿಂದ ಸರಿಯಾದ ಅರ್ಥವನ್ನು ಹೇಳುತ್ತಾಳೆ. ಅದಕ್ಕೆ ಉಪಕಾರಿಯಾದುದು ಬ್ರಹ್ಮಸೂತ್ರಗಳು. ಅವು ಕಂಠದಲ್ಲಿರುವ ಮಂಗಳ ಸೂತ್ರದಂತೆ. ಯಾವನು ಸೂತ್ರವನ್ನು ತಿರಸ್ಕರಿಸುತ್ತಾನೋ, ಅವನು ಆ ಮಂಗಳ

ಸೂತ್ರವನ್ನು ಕಿತ್ತುಹಾಕುತ್ತಾನೆ. ಮಂಗಳಸೂತ್ರವನ್ನು ಕಿತ್ತುಹಾಕಿದ ಮೇಲೆ ಆ ಸುಂದರಿಯು ಸುಮಂಗಲಿಯಾಗಿರುವುದಿಲ್ಲ. ಅವುಗಳು ಹೇಳುವ ಅರ್ಥವಾಗಲೀ, ಗೀತೆಯಾಗಲೀ ಶ್ರವಣಕ್ಕೆ ಯೋಗ್ಯವಲ್ಲ. ಸೂತ್ರಾನುಸಾರಿಯಾದ ಭಾಷ್ಯಪ್ರತಿಪಾದಿತಾರ್ಥವು ಸುಮಂಗಲಿ ಸ್ತ್ರೀಯ ಮಂಗಳಗೀತೆಯಂತೆ ಕೇಳಲು ಸುಶ್ರಾವ್ಯವಾಗಿರುತ್ತದೆ ಎಂದು ಭಾವ.

ಉಪಕರ್ತರ್ಯಪ್ರಕೃತಿಃ ಕೃತಘ್ನಸ್ಯೈವ ಶೋಭತೇ ।
ಧರ್ಮವಕ್ತ್ರೀ ಕಥಂ ಜಹ್ಯಾತ್ ಸೂತ್ರಂ ಸ್ವಾರ್ಥಕೃತೇ ಕೃತಂ ॥ ೯೮ ॥

**ಅರ್ಥ–** ಉಪಕರ್ತರಿ= ಉಪಕಾರ ಮಾಡುವವನಿಗೆ, ಅಪಕೃತಿಃ= ಅಪಕಾರವನ್ನು ಮಾಡುವುದು, ಕೃತಘ್ನಸ್ಯೈವ= ಮಾಡಿದ ಉಪಕಾರವನ್ನು ಸ್ಮರಣೆ ಮಾಡದವನಿಗೇ, ಶೋಭತೇ= ಶೋಭಿಸುತ್ತದೆ, ಧರ್ಮವಕ್ತ್ರೀ= ಧರ್ಮಂ ಚರ ಎಂದು ಧರ್ಮವನ್ನು ಹೇಳುವ ಶ್ರುತಿಯು, ಸ್ವಾರ್ಥಕೃತೇ= ತನ್ನ ಅರ್ಥದ ಸಲುವಾಗಿ, ಕೃತಂ= ರಚಿಸಲ್ಪಟ್ಟ, ಸೂತ್ರಂ= ಬ್ರಹ್ಮಸೂತ್ರಗಳನ್ನು, ಕಥಂ ಜಹ್ಯಾತ್= ಹೇಗೆ ಪರಿತ್ಯಜಿಸೀತು?

**ಅನುವಾದ–** ಉಪಕಾರವನ್ನು ಮಾಡುವವರಿಗೆ ಅಪಕಾರವನ್ನು ಮಾಡುವುದು ಕೃತಘ್ನನಿಗೆ ಶೋಭಿಸುತ್ತದೆ. ಧರ್ಮಂ ಚರ ಎಂದು ಧರ್ಮವನ್ನು ಮಾಡಿ ಎಂದು ಹೇಳುವ ಶ್ರುತಿಯು, ತನ್ನ ಅರ್ಥದ ಸಲುವಾಗಿಯೇ ಎಂದರೆ ತನ್ನ ಉಪಕಾರಕ್ಕಾಗಿಯೇ ರಚಿಸಲ್ಪಟ್ಟ ಬ್ರಹ್ಮಸೂತ್ರಗಳನ್ನು ಹೇಗೆ ಪರಿತ್ಯಜಿಸುತ್ತದೆ?

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯುತ್ಸೂತ್ರಭಾಷ್ಯಕಾರಮಪಹಸತಿ- **ಉಪಕರ್ತರೀತಿ** ॥ ಉಪಕರ್ತರ್ಯುಪಕಾರಿಣಿ ಅಪಕೃತಿರಪಕಾರಃ ಕೃತಘ್ನಸ್ಯ । ಕೃತಂ ಪರೇಣ ಕೃತಮುಪಕಾರಂ ಹಂತೀತಿ ಕೃತಘ್ನಃ ತಸ್ಯ ಸ್ವೋಪಕಾರಿಸೂತ್ರಮುಲ್ಲಂಘ್ಯಯಂಸ್ತದ್ಭಾಷ್ಯಕಾರೋಪಿ ತಾದೃಶ ಇತಿ ಭಾವಃ । ಧರ್ಮವಕ್ತ್ರೀ ಧರ್ಮಂ ಚರೇತಿ ಪರಾನ್ ಪ್ರತ್ಯಪಿ ಧರ್ಮಂ ವದಂತೀ ಶ್ರುತಿಃ ಸ್ವಾರ್ಥಕೃತೇ ಸ್ವನಿರ್ಣಯಾರ್ಥಮ್ । ಶ್ರುತಿಸ್ತು ಧರ್ಮಜ್ಞಾ ಸ್ವೋಪಕಾರಿಸೂತ್ರಾನುಸಾರೇಣೈವಾರ್ಥಂ ಬ್ರೂಯಾದಿತಿ ಭಾವಃ ॥ ೯೮ ॥

**ವಿವರಣೆ–** ಮಾಡಿದ ಉಪಕಾರವನ್ನು ಸ್ಮರಿಸದೇ, ಉಪಕಾರವನ್ನು ಮಾಡಿದವನಿಗೆ ಅಪಕಾರವನ್ನು ಮಾಡುವುದು ಅಧರ್ಮ. ಧರ್ಮಂ ಚರ ಎಂಬ ಶ್ರುತಿಯು ಅಧರ್ಮವನ್ನು ತ್ಯಜಿಸಿ, ಧರ್ಮವನ್ನು ಮಾಡಿ ಎಂದು ಹೇಳುತ್ತದೆ. ಶ್ರುತಿಗೆ ಉಪಕಾರವನ್ನು ಮಾಡುವುದು ಬ್ರಹ್ಮಸೂತ್ರಗಳು. ಅಂತಹ ಬ್ರಹ್ಮಸೂತ್ರಗಳನ್ನು ಸ್ಮರಿಸದೆ, ಶ್ರುತಿಗೆ ಹಾಗೆಯೇ ಅರ್ಥವನ್ನು ಮಾಡಿದರೆ ಉಪಕಾರಿಗೆ ಅಪಕಾರವನ್ನು ಮಾಡಿದಂತೆ. ಆದ್ದರಿಂದ ಸೂತ್ರಗಳನ್ನು ಉಲ್ಲಂಘಿಸಿ ಶ್ರುತಿಗೆ ಅರ್ಥವನ್ನು ಮಾಡುವ ಪರಭಾಷ್ಯಕಾರರು ಕೃತಘ್ನರು ಎಂದು ಅಪಹಾಸ ಮಾಡುತ್ತಾರೆ.

**ಸತೀಮಪ್ಯಸತೀಂ ಕರ್ತುಂ ಚಕಮೇ ದಶಕಂಧರಃ ।**
**ಸಾ ವಾಯುತನಯಾದೇಶೈಸ್ತಪ್ತಾ ತನ್ಮಾರ್ಗಮನ್ವಗಾತ್ ॥ ೯೯ ॥**

**ಅರ್ಥ–** ಸತೀಮಪಿ= ಪತಿವ್ರತೆಯಾದ ಸೀತೆಯನ್ನೂ ಸಹ, ಅಸತೀಂ ಕರ್ತುಂ= ದುಷ್ಟಳನ್ನಾಗಿ ಮಾಡಲು, ದಶಕಂಧರಃ= ಹತ್ತು ಕಂಠಗಳನ್ನು ಹೊಂದಿದ್ದ ರಾವಣನು, ಚಕಮೇ= ಬಯಸಿದನು, ತಪ್ತಾ= ಸಂತಾಪಕ್ಕೆ ಒಳಗಾದ, ಸಾ= ಆ ಸೀತೆಯು, ವಾಯುತನಯಾದೇಶೈಃ= ವಾಯು ಅವತಾರವಾದ ಹನುಮಂತನ ಸಂದೇಶದಿಂದ, ತನ್ಮಾರ್ಗಂ= ಹನುಮಂತನ ಮಾರ್ಗವನ್ನೇ, ಅನ್ವಗಾತ್= ಅನುಸರಿಸಿದಳು.

**ಅನುವಾದ–** **ಪತಿವ್ರತೆಯಾದ ಸೀತೆಯನ್ನೂ ಸಹ ರಾವಣನು ದೂಷಿತಳನ್ನಾಗಿ ಮಾಡಲು ಬಯಸಿದನು. ಆದರೆ ಅವಳು ರಾವಣನ ಕಿರುಕುಳದಿಂದ ತಪ್ತಳಾಗಿದ್ದರೂ ಹನುಮಂತನ ಸಂದೇಶಗಳಿಂದ ಸನ್ಮಾರ್ಗದಲ್ಲಿಯೇ ನಡೆದಳು.**

**ಭಾವವಿಲಾಸಿನೀ–** ಇದಾನೀಂ ಪರಕೀಯಭಾಷ್ಯಕಾರಂ ಪ್ರಾಕಾರಾಂತರೇಣ ದೂಷಯನ್ನೇವ ಸ್ವಭಾಷ್ಯಕಾರಮನ್ಯಾಪದೇಶೇನ ಸ್ತೌತಿ ॥ **ಸತೀಮಿತಿ** ॥ ಸತೀಂ ಪತಿವ್ರತಾಂ ಸೀತಾಮ್ । ಏವಂ ನಿರ್ದುಷ್ಟಾರ್ಥವಕ್ತ್ರೀಂ ಶ್ರುತಿಂ ದುಷ್ಟಾರ್ಥೇ ನಯನ್ ಭಾಷ್ಯಕಾರೋಽಪಿ ತಾದೃಶ ಇತಿ ಧ್ವನಿತೋಽರ್ಥಃ । ರಾವಣೇನಬಲಾನ್ನೀತಾಪಿಸೀತಾ ವಾಯುತನಯಾದೇಶೈರ್ಹನೂಮದುಕ್ತಿಭಿಃ ತನ್ಮಾರ್ಗಂ ಹನೂಮದುಕ್ತರಾಮಮಾರ್ಗಮ್ । ಏವಂ ಪರೈರನ್ಯಾರ್ಥೇಬಲಾನ್ನೀತಾಪಿ ಶ್ರುತಿ- ರ್ವಾಯೋರವತಾರರೂಪಮಧ್ವಾಚಾರ್ಯ ಭಾಷ್ಯಾದ್ಯುಕ್ತಿಭಿಸ್ತದುಕ್ತಮಾರ್ಗೇಣ ಶ್ರೀನಾರಾಯಣಗುಣಾನೇವ ಪ್ರತಿಪಾದಯೇದಿತಿ ಭಾವಃ ॥ ೯೯ ॥

**ವಿವರಣೆ–** ಸಂತಪ್ತಳಾದ ಸೀತೆಯು ಹನುಮಂತನ ಮಾರ್ಗವನ್ನು ಅನುಸರಿಸಿದಳು. ನಿರ್ದುಷ್ಟವಾದ ವೇದವು ಪರಮಾತ್ಮನ ಗುಣಗಳನ್ನೇ ಹೇಳಲು ಬಯಸುತ್ತದೆ. ಆದರೆ ಪರಭಾಷ್ಯಕಾರರು ಬೇರೆ ಅರ್ಥವನ್ನು ಹೇಳಿ ಶ್ರುತಿಯ ನಿರ್ದುಷ್ಟವಾದ ಅರ್ಥಗಳಿಗೆ ದೋಷವನ್ನು ಉಂಟುಮಾಡಲು ಬಯಸುತ್ತಾರೆ. ಸೀತೆಯು ಹನುಮಂತನ ಮಾತನ್ನೇ ಅನುಸರಿಸಿದಂತೆ, ಶ್ರುತಿಯೂ ಸಹ ಪರಭಾಷ್ಯಕಾರರ ಮಾತುಗಳಿಂದ ತಪ್ತಳಾಗಿ, ವಾಯುದೇವರ ಅವತಾರವಾದ ಮಧ್ವಾಚಾರ್ಯರು ಹೇಳಿದ ಮಾರ್ಗದಲ್ಲಿಯೇ ನಡೆದು ಭಗವಂತನ ಗುಣರೂಪವಾದ ನಿರ್ದುಷ್ಟವಾದ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ, ಇಲ್ಲಿ ಪರಭಾಷ್ಯಕಾರರನ್ನು ದೂಷಿಸುತ್ತಾ ನಮ್ಮ ಭಾಷ್ಯಕಾರರನ್ನು ಸ್ತೋತ್ರ ಮಾಡುತ್ತಾರೆ.

**ಬ್ರಹ್ಮಶಬ್ದಬಲಾತ್ತುಚ್ಛಮೇವ ಬ್ರಹ್ಮೇತಿ ದುರ್ಧಿಯಃ ।**
**ಶ್ರುತಿಃ ಸೂತ್ರಾಧ್ವನಾಽಽನಂದಮಯಂ ಬ್ರಹ್ಮರ್ಚಿ ಶಂಸತಿ ॥ ೧೦೦ ॥**

**ಅರ್ಥ–** ದುರ್ಧಿಯಃ= ದುರ್ಬುದ್ಧಿಯುಳ್ಳವರು, ಬ್ರಹ್ಮಶಬ್ದಬಲಾತ್= ಬ್ರಹ್ಮಶಬ್ದದ ಬಲದಿಂದ, ಪುಚ್ಛಮೇವ ಬ್ರಹ್ಮ= ಪುಚ್ಛವೇ ಬ್ರಹ್ಮ, ಇತಿ= ಎಂದು ಹೇಳುತ್ತಾರೆ, ಶ್ರುತಿಃ= ಶ್ರುತಿಯಾದರೂ, ಸೂತ್ರಾಧ್ವನಾ= ಸೂತ್ರದ ಮಾರ್ಗದಿಂದ, ಋಚಿ= ಮಂತ್ರದಲ್ಲಿ, ಆನಂದಮಯಂ= ಆನಂದಮಯವನ್ನು, ಬ್ರಹ್ಮ= ಬ್ರಹ್ಮನೆಂದು, ಶಂಸತಿ= ಪ್ರಶಂಸಿಸುತ್ತದೆ.

**ಅನುವಾದ–** ಆನಂದಮಯ ಪ್ರಕರಣದಲ್ಲಿ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬಲ್ಲಿ ಪುಚ್ಛದಲ್ಲಿ ಬ್ರಹ್ಮಶಬ್ದವು ಇರುವುದರಿಂದ ಪುಚ್ಛವೇ ಬ್ರಹ್ಮ ಎಂದು ದುರ್ಬುದ್ಧಿಯುಳ್ಳವರು ಹೇಳುತ್ತಾರೆ. ಆದರೆ ಶ್ರುತಿಯು ಅಸ್ತಿಬ್ರಹ್ಮೇತಿಚೇತ್ ವೇದ ಎಂಬ ಮಂತ್ರದಲ್ಲಿ ಆನಂದಮಯನನ್ನೇ ಬ್ರಹ್ಮನೆಂದು ಸೂತ್ರವು ಪ್ರದರ್ಶಿಸಿದಂತೆ ಸ್ತೋತ್ರ ಮಾಡುತ್ತದೆ.

**ಭಾವವಿಲಾಸಿನೀ–** ಇದಾನೀಂ ಪರಕೀಯಭಾಷ್ಯಸ್ಯ ಬಲಾತ್ಕಾರಂ ಶ್ರುತಿಸೂತ್ರವಾಯು-ತನಯಾದೇಶರೂಪಮಧ್ವಭಾಷ್ಯಾಣಾಮೇಕಪ್ರಕಾರತಾಂ ಚಾಽಽನಂದಮಯಾಧಿಕರಣೇ ಶೃಂಗಗ್ರಾಹಿತಯಾ ಪ್ರದರ್ಶಯತಿ – **ಬ್ರಹ್ಮೇತಿ** ॥ ಬ್ರಹ್ಮಪುಚ್ಛಂಪ್ರತಿಷ್ಠೇತ್ಯತ್ರೋಕ್ತ ಬ್ರಹ್ಮಶಬ್ದಬಲಾತ್ ಪುಚ್ಛಂ ಪಾದಾಖ್ಯಾವಯವಃ । ಮಾಯಾವಾದಿನೋ ಹಿ ಸೂತ್ರಂ ಶ್ರುತಿಂ ಚೋಲ್ಲಂಘ್ಯಾನಂದಮಯಸ್ಯ ಕೋಶತಯಾಽಬ್ರಹ್ಮತಾಂ ವರ್ಣಯಂತಃ ತತ್ ಪುಚ್ಛಸ್ಯೈವ ಬ್ರಹ್ಮತಾಂ ವದಂತಿ । ಶ್ರುತಿಸ್ತು ತದಪ್ಯೇಷಶ್ಲೋಕೋ ಭವತೀತಿ ಸ್ವೋಕ್ತಾನಂದಮಯೇ ಪೂರ್ವಪ್ರಸ್ತಾವಿತಾನ್ನಮಯಾದಾವಿವ ಶ್ಲೋಕಂ ಪ್ರಮಾಣಯಂತೀ ಸೂತ್ರಾಧ್ವನಾನಂ ದಮಯೋಽಭ್ಯಾಸಾದಿತಿ ಶ್ರೌತಮರ್ಯಾದಯಾ ಋಚಿ ಅಸ್ತಿಬ್ರಹ್ಮೇತಿ ಚೇದ್ವೇದ ಸಂತಮೇನಂ ತತೋ ವಿದುರಿತಿ ಶ್ಲೋಕೇ ಆನಂದಮಯಮೇವ ಬ್ರಹ್ಮ ಶಂಸತಿ । ಅತಃ ಶ್ರುತಿಸೂತ್ರಯೋಃ ಸೂತ್ರಾನುಸಾರಿ ಭಾಷ್ಯಕಾರಸ್ಯ ಚೈಕೋಮಾರ್ಗಃ। ಉತ್ ಸೂತ್ರಭಾಷ್ಯಕಾರಸ್ಯ ತ್ವಪರೋಮಾರ್ಗ ಇತಿ ಪ್ರಾಗುಕ್ತಂ ಸರ್ವಂ ನ ಪ್ರತಿಜ್ಞಾಮಾತ್ರಮಿತಿ ಭಾವಃ ॥ ೧೦೦ ॥

**ವಿವರಣೆ–** ಈಗ ಶ್ರುತಿಗಳಿಗೆ ಪರಕೀಯರು ಮಾಡುವ ಬಲಾತ್ಕಾರವನ್ನೂ ವಾಯು-ತನಯಾದೇಶದಿಂದ ಶ್ರುತಿಯು ನಡೆಯುವ ಸನ್ಮಾರ್ಗವನ್ನೂ ಶೃಂಗಗ್ರಾಹಿಕತೆಯಿಂದ ಆನಂದಮಯಾಧಿಕರಣದ ದೃಷ್ಟಾಂತದಿಂದ ತೋರಿಸುತ್ತಾರೆ. ಆನಂದಮಯ ಪ್ರಕರಣದಲ್ಲಿ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂದು ಇದೆ. ಆದ್ದರಿಂದ ಆನಂದಮಯನ ಪುಚ್ಛವೇ ಬ್ರಹ್ಮ, ಆನಂದಮಯನು ಕೋಶ ಎಂದು ಅದ್ವೈತಿಗಳು ಹೇಳುತ್ತಾರೆ. ಆನಂದ-ಮಯೋಽಭ್ಯಾಸಾತ್ ಎಂಬ ಸೂತ್ರವು ಆನಂದಮಯವು ಬ್ರಹ್ಮನೇ ಎಂದು ಹೇಳುತ್ತದೆ. ಶ್ರುತಿಯು ಸಹ 'ತದಪ್ಯೇಷ ಶ್ಲೋಕೋ ಭವತಿ' ಎಂಬಲ್ಲಿ ಹಿಂದೆ ಅನ್ನಮಯಾದಿಗಳನ್ನು ಶ್ಲೋಕಗಳಿಂದ ಪ್ರಶಂಸೆ ಮಾಡಿದಂತೆ ಆನಂದಮಯನನ್ನೇ ಅಸ್ತಿಬ್ರಹ್ಮೇತಿಚೇದ್ವೇದ ಎಂಬ ಭಾಗದಲ್ಲಿ ಪ್ರಶಂಸೆ ಮಾಡುತ್ತದೆ. ಆದ್ದರಿಂದ ಶ್ರುತಿಸೂತ್ರಗಳಿಗೂ ಅದಕ್ಕೆ ಅನುಸಾರಿಯಾಗಿ ಭಾಷ್ಯೆಯನ್ನು ಬರೆಯುವ ಆಚಾರ್ಯರಿಗೂ ಒಂದು ಮಾರ್ಗ. ಸೂತ್ರಗಳನ್ನು ಉಲ್ಲಂಘಿಸಿ ಶ್ರುತಿಗೆ ಅರ್ಥವನ್ನು ಮಾಡುವ ಭಾಷ್ಯಕಾರರದ್ದು ಇನ್ನೊಂದು

ಮಾರ್ಗ. ಆದ್ದರಿಂದ ಹಿಂದಿನ ಶ್ಲೋಕಗಳಲ್ಲಿ ಪರಭಾಷ್ಯಕಾರರನ್ನು ನಿಂದಿಸಿದುದು ಕೇವಲ ಪ್ರತಿಜ್ಞೆಯಲ್ಲ. ಅದನ್ನು ಇಲ್ಲಿ ದೃಷ್ಟಾಂತಪೂರ್ವಕವಾಗಿ ತೋರಿಸುತ್ತಿದ್ದೇವೆ ಎಂದು ಅಭಿಪ್ರಾಯ.

ಪ್ರಾಕ್ ಪ್ರಸ್ತಾವ್ಯಾನಂದಮಯಂ ಶ್ಲೋಕೇ ತತ್ರೋದಿತೇ ಶ್ರುತಿಃ ।
ದ್ವಿರುಕ್ತಬ್ರಹ್ಮಶಬ್ದೇನ ಕಥಂ ಬ್ರಹ್ಮ ನ ತಂ ಜಗೌ । ।೧೦೧ ॥

**ಅರ್ಥ–** ಪ್ರಾಕ್= ಮೊದಲು, ಆನಂದಮಯಂ= ಆನಂದಮಯನನ್ನು, ಪ್ರಸ್ತಾವ್ಯ= ಪ್ರಸ್ತಾವಿಸಿ, ತತ್ರ= ಆ ಆನಂದಮಯನಲ್ಲಿ, ಉದಿತೇ= ಹೇಳಲ್ಪಟ್ಟ, ಶ್ಲೋಕೇ= ಶ್ಲೋಕದಲ್ಲಿ, ಶ್ರುತಿಃ= ಶ್ರುತಿಯು, ದ್ವಿರುಕ್ತಬ್ರಹ್ಮಶಬ್ದೇನ= ಎರಡು ಸಲ ಹೇಳಿದ ಬ್ರಹ್ಮಶಬ್ದದಿಂದ, ತಂ= ಆನಂದಮಯನನ್ನು, ಕಥಂ= ಹೇಗೆ, ಬ್ರಹ್ಮ ನ ಜಗೌ= ಬ್ರಹ್ಮನೆಂದು ಹೇಳಲಿಲ್ಲ?

**ಅನುವಾದ–** ಮೊದಲು ಆನಂದಮಯನನ್ನು ಪ್ರಸ್ತಾವಿಸಿ ಆ ಪ್ರಕರಣದ ಕೊನೆಯಲ್ಲಿ ಹೇಳಿದ ಶ್ಲೋಕದಲ್ಲಿ ಇರುವ ಎರಡು ಬ್ರಹ್ಮಶಬ್ದಗಳಿಂದ ಶ್ರುತಿಯು ಮೊದಲು ಪ್ರಸ್ತಾವಿಸಿದ ಆ ಆನಂದಮಯನನ್ನು ಬ್ರಹ್ಮನನ್ನು ಹೇಗೆ ಹೇಳದೇ ಇರುತ್ತದೆ?

**ಭಾವವಿಲಾಸಿನೀ–** ನನು ಶ್ಲೋಕೇಪಿ ಪುಚ್ಛಸ್ಯೈವ ಬ್ರಹ್ಮತೋಚ್ಯತೇ । ನತ್ವಾನಂದಮಯಸ್ಯೇತಿ ಶಂಕಾಂ ಮೂಲಗ್ರಂಥೇ ಪರಿಹೃತಾಮಪಿ ಸ್ವಗ್ರಂಥಸಾಫಲ್ಯಾಯ ಪುನರಪಿ ಯುಕ್ತಿಭಿರ್ನಿರಾಕರೋತಿ **–ಪ್ರಾಗಿತಿ** ॥ ತತ್ರ ಸ್ವಪ್ರಸ್ತಾವಿತಾನಂದಮಯೇ ದ್ವಿರುಕ್ತಬ್ರಹ್ಮಶಬ್ದೇನ ಅಸತ್ ಬ್ರಹ್ಮೇತಿ ಅಸ್ತಿ ಬ್ರಹ್ಮೇತಿ ದ್ವಿವಾರಮುಕ್ತಶಬ್ದೇನ । ತಂ ಆನಂದಮಯಮ್ ॥ ೧೦೧ ॥

**ವಿವರಣೆ–** ಆನಂದಮಯ ಪ್ರಕರಣದಲ್ಲಿ ಕೊನೆಯಲ್ಲಿ ಬರುವ ತದಪ್ಯೇಷ ಶ್ಲೋಕೋ ಭವತಿ ಎಂದು ಪ್ರಾರಂಭವಾಗುವ ಶ್ಲೋಕದಲ್ಲಿಯೂ ಪುಚ್ಛವೆ ಬ್ರಹ್ಮನೇ ಹೇಳಲ್ಪಡುತ್ತಾನೆ ಹೊರತಾಗಿ ಆನಂದಮಯನಲ್ಲ ಎಂಬ ಶಂಕೆಯನ್ನು ಯುಕ್ತಿಗಳಿಂದ ನಿರಾಕರಣೆ ಮಾಡುತ್ತಾರೆ. ಹಿಂದೆ ಪ್ರಸ್ತುತವಾಗಿರುವುದು ಆನಂದಮಯ ಪದಾರ್ಥ. ಕೊನೆಯ ಶ್ಲೋಕದಲ್ಲಿ ಅಸದ್ಬ್ರಹ್ಮೇತಿ ವೇದಚೇತ್ ಅಸ್ತಿ ಬ್ರಹ್ಮೇತಿಚೇತ್ ಎಂದು ಎರಡು ಬಾರಿ ಬ್ರಹ್ಮಶಬ್ದದ ಪ್ರಯೋಗವಿದೆ. ಆದ್ದರಿಂದ ಮೊದಲು ಪ್ರಸ್ತಾವಿಸಲ್ಪಟ್ಟ ಬ್ರಹ್ಮನು ಆನಂದ-ಮಯನೆಂದೇ ಶ್ಲೋಕವು ಸಹ ಹೇಳುತ್ತದೆ ಎಂದು ಅಭಿಪ್ರಾಯ.

ಶ್ಲೋಕಶ್ಲೋಕ್ಯೋ ಯತೋಽನ್ಯತ್ರ ಸರ್ವತ್ರಾಂಗೀಕೃತೋಽತ್ರ ಚ ।
ಶ್ಲೋಕ್ಯೋಂಗ್ಯೇವ ಯದಿ ಬ್ರಹ್ಮಶಬ್ದಶಕ್ತ್ಯಾಽಪಕೃಷ್ಯತೇ ॥ ೧೦೨ ॥

ತರ್ಹ್ಯೇಕಸ್ಯ ದ್ವಯೋಃ ಶಕ್ತ್ಯಾ ಸ್ಯಾದಂಗಿನ್ಯೇವ ಕರ್ಷಣಂ ।
ದ್ವಯೋರ್ಹಿ ಶಕ್ತಿರ್ಮಹತೀ ಚತುರ್ಭಿಃ ಸಂಗೃಹೀತಯೋಃ ॥ ೧೦೩ ॥

**ಅರ್ಥ–** ಯತಃ= ಯಾವ ಕಾರಣದಿಂದ, ಅನ್ಯತ್ರಸರ್ವತ್ರ= ಉಳಿದ ಅನ್ನಮಯಾದಿ ಎಲ್ಲಾ ಪ್ರಕರಣಗಳಲ್ಲಿಯೂ, ಶ್ಲೋಕಶ್ಲೋಕ್ಯಃ= ಶ್ಲೋಕದಿಂದ ಪ್ರಶಂಸಿಸಲ್ಪಡುವವನು, ಅಂಗ್ಯೇವ= ಅಂಗಿಯೆಂದೇ, ಅಂಗೀಕೃತಃ= ಅಂಗೀಕರಿಸಲ್ಪಟ್ಟಿದ್ದಾನೆಯೋ, ಆ ಕಾರಣದಿಂದ, ಅತ್ರ ಚ= ಈ ಆನಂದಮಯ ಪ್ರಕರಣದಲ್ಲಿಯೂ, ಶ್ಲೋಕಶ್ಲೋಕ್ಯಃ= ಶ್ಲೋಕದಿಂದ ಪ್ರಶಂಸಿಸಲ್ಪಡುವವನು, ಅಂಗ್ಯೇವ= ಅಂಗಿಯೇ ಆಗುತ್ತಾನೆ, ಯದಿ= ಒಂದು ಪಕ್ಷ, ಬ್ರಹ್ಮಶಬ್ದಶಕ್ತ್ಯಾ= ಪುಚ್ಛದಲ್ಲಿ ಶ್ರುತವಾದ ಬ್ರಹ್ಮಶಬ್ದದ ಶಕ್ತಿಯಿಂದ, ಅಪಕೃಷ್ಯತೇ= ಶ್ಲೋಕವನ್ನು ಪುಚ್ಛವಾಗಿ ಅಪಕರ್ಷ ಮಾಡುವುದಾದರೆ, ತರ್ಹಿ= ಆಗ, ದ್ವಯೋಃ ಶಕ್ತ್ಯಾ= ಶ್ಲೋಕದಲ್ಲಿರುವ ಎರಡು ಬ್ರಹ್ಮಪದಗಳ ಶಕ್ತಿಯಿಂದ, ಏಕಸ್ಯ= ಆ ಒಂದು ಶ್ಲೋಕಕ್ಕೆ, ಅಂಗಿನ್ಯೇವ= ಅಂಗಿಯಾದ ಆನಂದಮಯನಲ್ಲಿಯೇ, ಕರ್ಷಣಂ= ಆಕರ್ಷಣವು ಉಚಿತವಾದುದು. ಚತುರ್ಭಿಃ= ಅನ್ನಮಯಾದಿ ನಾಲ್ಕು ಪ್ರಕರಣಗಳಿಂದ, ಸಂಗೃಹೀತಯೋಃ= ಸಂಗ್ರಹಿಸಲ್ಪಟ್ಟ, ದ್ವಯೋಃ= ಎರಡು ಬ್ರಹ್ಮಶಬ್ದಗಳ ಶಕ್ತಿಃ= ಶಕ್ತಿಯು, ಮಹತೀ= ಪ್ರಬಲವಾದುದಷ್ಟೇ?

**ಅನುವಾದ–** ಯಾವ ಕಾರಣದಿಂದ ಅನ್ನಮಯಾದಿ ನಾಲ್ಕು ಪ್ರಕರಣದಲ್ಲಿಯೂ ಸ್ತೋತ್ರದಿಂದ ಸ್ತುತ್ಯನಾದವನು ಅಂಗಿಯೇ ಆಗಿದ್ದಾನೆಯೋ, ಆ ಕಾರಣದಿಂದ ಈ ಆನಂದಮಯ ಪ್ರಕರಣದಲ್ಲಿಯೂ ಶ್ಲೋಕದಿಂದ ಸ್ತುತ್ಯನಾದವನು ಅಂಗಿಯೇ ಆಗಬೇಕು. ಒಂದು ಪಕ್ಷ ಪುಚ್ಛನಲ್ಲಿ ಶ್ರುತನಾದ ಬ್ರಹ್ಮಶಬ್ದದಿಂದ ಶ್ಲೋಕವನ್ನು ಪುಚ್ಛಪರವಾಗಿ ಅಪಕರ್ಷ ಮಾಡುವುದಾದರೆ ಆಗ ಅದಕ್ಕಿಂತ ಎರಡು ಬ್ರಹ್ಮಶಬ್ದಗಳ ಶಕ್ತಿಯಿಂದ ಒಂದು ಶ್ಲೋಕವನ್ನೇ ಅಂಗಿಯಲ್ಲೇ ಉತ್ಕರ್ಷಣ ಮಾಡುವುದು ಒಳ್ಳೆಯದು. ಅನ್ನಮಯಾದಿ ನಾಲ್ಕು ಪ್ರಕರಣಗಳಿಂದ ಸಂಗೃಹೀತವಾದ ಎರಡು ಬ್ರಹ್ಮಪದಗಳ ಶಕ್ತಿಯು ಪ್ರಬಲವಾದುದಷ್ಟೇ?

**ಭಾವವಿಲಾಸಿನೀ–** ಯತಃ ಯಸ್ಮಾತ್ । ಅನ್ಯತ್ರಸರ್ವತ್ರಾನ್ನಮಯಾದಿಚತುಷ್ಕೇ । ಶ್ಲೋಕೇನ ಸ್ವೋಕ್ತಾರ್ಥೇನಿರೂಪಿತಮಂತ್ರೇ । ಶ್ಲೋಕ್ಯಃ ಸ್ತುತ್ಯಃ ಅಂಗೀ ಶಿರಃಪಾಣ್ಯಾದಿ ಪಂಚಾಂಗವತ್ತ್ವೇನ ನಿರೂಪಿತಃ ಅವಯವೀ ಅನ್ನಮಯಾದಿರೇವ । ನತು ತಸ್ಯೈಕದೇಶೋಂಗಮ್ । ಅನ್ನಾದ್ವೈಪ್ರಜಾಃ ಪ್ರಜಾಯಂತೇ ಇತ್ಯನ್ನಮಯಶ್ಲೋಕೇ ಪ್ರಾಣಂ ದೇವಾ ಅನುಪ್ರಾಣಂತೀತಿ ಪ್ರಾಣಮಯಶ್ಲೋಕೇ ಯತೋವಾಚೋ ನಿವರ್ತಂತ ಇತಿ ಮನೋಮಯಶ್ಲೋಕೇ ವಿಜ್ಞಾನಂ ಬ್ರಹ್ಮಚೇದ್ವೇದೇತಿ ವಿಜ್ಞಾನಮಯ ಶ್ಲೋಕೇಚ ಸ್ಪಷ್ಟಮನ್ನಮಯಾದ್ಯಂಗಿನಾಮೇವ ಶ್ರೂಯಮಾಣತ್ವಾತ್ ತತಸ್ತಸ್ಮಾತ್ ಅನ್ನಮಯಾದಿಚತುಷ್ಟಯೇಽಂಗಿನ ಏವಶ್ಲೋಕಶ್ಲೋಕ್ಯತ್ವಾತ್ ಅತ್ರಚಾನಂದಮಯ- ಪ್ರಕರಣೇಪಿ ಶ್ಲೋಕಶ್ಲೋಕ್ಯೋಂಗ್ಯೇವ । ನತ್ವವಯವಃ । ಪ್ರಾಯಪಾಠವಿರೋಧಾತ್ । ಸೋಯಮಂಗಿನ್ಯೇವನ್ಯಾಯಪ್ರಾಪ್ತೋಪಿ ಶ್ಲೋಕಃ ಯದಿ ಬ್ರಹ್ಮಶಬ್ದಶಕ್ತ್ಯಾ, ಪುಚ್ಛೇಶ್ರುತಬ್ರಹ್ಮ- ಶಬ್ದಶಕ್ತ್ಯಾಽಪಕೃಷ್ಯತೇ ಪುಚ್ಛವಿಷಯತಯಾಯೋಜ್ಯತೇ । ತರ್ಹ್ಯೇಕಸ್ಯ ಪುಚ್ಛೇಶ್ರೂಯ- ಮಾಣೈಕಬ್ರಹ್ಮಶಬ್ದಸ್ಯ ದ್ವಯೋರಂಗಿವಿಷಯಕಮಂತ್ರೇ

ಶ್ರೂಯಮಾಣಬ್ರಹ್ಮಶಬ್ದಯೋಃ ಅಂಗಿನಿ ಆನಂದಮಯೇ ಬ್ರಹ್ಮಣಃ ಆನಂದಮಯಸ್ಯ ಪುಚ್ಛಮಿತಿ ತತ್ಪುರುಷಸಮಾಸೇನ ಸೋಽಯಮಾನಂದಮಯೋ ಬ್ರಹ್ಮ ತಸ್ಯ ಪುಚ್ಛಮಿತಿ ವಾಪಕರ್ಷಃ ಅಪಕರ್ಷಣಮೇವಸ್ಯಾತ್ । ಕಿಂ ತತ್ಪುಚ್ಛಮಿತಿ ಶಂಕಾಯಾಸ್ತುಮೋದಪ್ರಮೋದ ಸಮಾನ-ಯೋಗಕ್ಷೇಮತಯಾ ಸುಖವಿಶೇಷವಾಚಕಮುತ್ಪದಮಧ್ಯಾಹೃತ್ಯ ಮುದೇವ ಪುಚ್ಛಮಿತ್ಯುತ್ತರಂ ದಾತವ್ಯಂ । ಅಸ್ಮದುಕ್ತಮೇವಾಪಕರ್ಷಣಂ ನ್ಯಾಯ್ಯಮಿತ್ಯಾಹ – **ದ್ವಯೋರಿತಿ** ॥ ಏಕಸ್ಮಾತ್ ದ್ವಯೋಃ ಶಕ್ತಿರ್ಮಹತೀಹಿ ಇತ್ಯೇಕೋನ್ಯಾಯಃ । ಚತುರ್ಭಿ ಉಕ್ತರೀತ್ಯಾ ಏಕಾಂಗೇ ಅಪಕರ್ಷಣ ರಹಿತೈಶ್ಚತುರ್ಭಿಃ ಶ್ಲೋಕೈಃ ಸಂಗೃಹೀತಯೋರೀತ್ಯಪರಾಯುಕ್ತಿಃ । ಪೂರ್ವೋಕ್ತಶ್ಲೋಕ-ಚತುಷ್ಟಯೇಽದೃಷ್ಟಃ ಸೋಽಯಮಪಕರ್ಷಃ ಕಥಮತ್ರೈವ ಕರ್ತವ್ಯ ಇತಿ ಭಾವಃ ॥೧೦೨-೧೦೩॥

**ವಿವರಣೆ–** ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಇವು ಐದು ಪ್ರಕರಣಗಳು. ಮೊದಲನೆಯ ನಾಲ್ಕು ಪ್ರಕರಣಗಳಲ್ಲಿ ಪ್ರಕರಣದ ಕೊನೆಯಲ್ಲಿ ಬರುವ ತದಪ್ಯೇಷ ಶ್ಲೋಕೋ ಭವತಿ ಎಂಬ ಶ್ಲೋಕದಿಂದ ಸ್ತುತ್ಯವಾದುದು ಅನ್ನಮಯಾದಿ ಅಂಗಿಗಳೇ ಎಂದು ಅದ್ವೈತಿಗಳಿಗೆ ಸಮ್ಮತ. ಅದ್ವೈತಿಗಳಿಗೆ ಅನ್ನಮಯಾದಿ ಐದೂ ಪದಾರ್ಥಗಳು ಕೋಶಗಳು. ನಮಗೆ ಮಾತ್ರ ಐದು ಪದಾರ್ಥವೂ ಪರಬ್ರಹ್ಮನೇ. ಮೊದಲಿನ ನಾಲ್ಕು ಪ್ರಕರಣಗಳಲ್ಲಿ ಶ್ಲೋಕದಿಂದ ಸ್ತುತ್ಯನಾದವನು ಅಂಗಿಯೇ ಆಗಿರುವುದರಿಂದ ಆನಂದಮಯ ಪ್ರಕರಣದಲ್ಲಿಯೂ ಸಹ ಶ್ಲೋಕಶ್ಲೋಕ್ಯನಾದವನು ಅಂಗಿಯೇ ಎಂದರೆ ಅವಯವಿಯೇ ಆಗಬೇಕು. ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂದು ಪುಚ್ಛದಲ್ಲಿ ಬ್ರಹ್ಮಪದವು ಶ್ರುತವಾಗಿರುವ ಕಾರಣ ಶ್ಲೋಕವನ್ನೇ ಪುಚ್ಛಪರ ಎಂದು ಹೇಳುವುದಾದರೆ ಅದಕ್ಕಿಂತ ಶ್ಲೋಕದಲ್ಲಿರುವ ಎರಡು ಬ್ರಹ್ಮಪದಗಳ ಶಕ್ತಿಯು ಪ್ರಬಲವಾದುದರಿಂದ, ಆ ಎರಡು ಬ್ರಹ್ಮಪದಗಳ ಶಕ್ತಿಯಿಂದ ಶ್ಲೋಕ ರೂಪವಾದ ಒಂದು ಪದಾರ್ಥವನ್ನೇ ಅವಯವಿಯ ಪರವಾಗಿ ಮೇಲಕ್ಕೆ ಎಳೆಯುವುದು ಒಳ್ಳೆಯದು. ಈ ಬ್ರಹ್ಮಶಬ್ದವು ಅವಯವಿಯನ್ನೇ ಹೇಳುತ್ತದೆ ಎಂಬುದು ಹಿಂದಿನ ನಾಲ್ಕು ಪ್ರಕರಣಗಳಿಂದ ಸಿದ್ಧವಾಗಿದೆ. ಆದ್ದರಿಂದ ಎರಡು ಬ್ರಹ್ಮಪದಗಳ ಶಕ್ತಿಯು ಪುಚ್ಛದಲ್ಲಿ ಶ್ರುತವಾದ ಒಂದು ಬ್ರಹ್ಮ ಪದದ ಶಕ್ತಿಗಿಂತ ಪ್ರಬಲವಾಗಿರುವುದರಿಂದ ಶ್ಲೋಕವನ್ನೇ ಆನಂದಮಯನ ಕಡೆಯಲ್ಲಿ ಎಳೆಯುವುದು ಒಳ್ಳೆಯದು ಹೊರತಾಗಿ ಶ್ಲೋಕವನ್ನು ಪುಚ್ಛದಲ್ಲಿ ಶ್ರುತವಾದ ಒಂದು ಬ್ರಹ್ಮಪದದ ಶಕ್ತಿಯಿಂದ ಪುಚ್ಛದ ಕಡೆಗೆ ಎಂದರೆ ಪುಚ್ಛದ ಪರವಾಗಿ ಅಪಕರ್ಷ ಮಾಡುವುದು ಒಳ್ಳೆಯದಲ್ಲ.

**ದೃಢಸೂತ್ರನಿಬದ್ಧಸ್ಯ ಕಥಂ ಚಾಸ್ಯಾಪಕರ್ಷಣಂ ।**
**ಉತ್ಕರ್ಷೋ ಹ್ಯಸ್ಮದರ್ಥೇ ಸ್ಯಾದಪಕರ್ಷಸ್ತ್ವಿಹೋಚ್ಯತೇ ॥ ೧೦೪ ॥**

**ಅರ್ಥ–** ದೃಢಸೂತ್ರನಿಬದ್ಧಸ್ಯ= ದೃಢವಾದ ಸೂತ್ರದಿಂದ ಕಟ್ಟಲ್ಪಟ್ಟ, ಅಸ್ಯ= ಈ ಬ್ರಹ್ಮಶಬ್ದಕ್ಕೆ, ಅಪಕರ್ಷಣಂ= ಪುಚ್ಛ ಪರವಾಗಿ ಅಪಕರ್ಷಣವು, ಕಥಂ= ಹೇಗೆ ಆದೀತು,

ಅಸ್ಮದರ್ಥೇ= ನಮ್ಮ ಅರ್ಥದಲ್ಲಾದರೋ, ಉತ್ಕರ್ಷೋ ಹಿ ಸ್ಯಾತ್= ಉತ್ಕರ್ಷ ಉಂಟಾಗುವುದಷ್ಟೇ, ನಿನ್ನಿಂದ ಮಾತ್ರ, ಇಹ= ಇಲ್ಲಿ, ಅಪಕರ್ಷಃ= ಅಪಕರ್ಷವು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಬ್ರಹ್ಮಸೂತ್ರದಲ್ಲಿ ಅಭ್ಯಾಸಾತ್ ಎಂದು ಹೇಳಿ ಬ್ರಹ್ಮಶಬ್ದವನ್ನು ಆನಂದಮಯನಲ್ಲಿಯೇ ನಿಬದ್ಧಗೊಳಿಸಿರುವುದರಿಂದ, ಬ್ರಹ್ಮಶಬ್ದಕ್ಕೆ ಅಪಕರ್ಷಣವು ಹೇಗೆ ಉಂಟಾಗುತ್ತದೆ? ನಾವು ಹೇಳಿದ ಅರ್ಥದಲ್ಲಿ ಉತ್ಕರ್ಷ ಉಂಟಾಗುವುದಷ್ಟೇ? ನೀನು ಮಾತ್ರ ಇಲ್ಲಿ ಅಪಕರ್ಷವನ್ನು ಹೇಳುತ್ತಿದ್ದೀಯೆ.

**ಭಾವವಿಲಾಸಿನೀ–** ದೃಢಂ ಸೂತ್ರೇ ಬ್ರಹ್ಮಸೂತ್ರೇನಿಬದ್ಧಸ್ಯ ಬ್ರಹ್ಮಶಬ್ದಾಭ್ಯಾಸಾದಿತಿ ಆನಂದಮಯೇ ನಿಬದ್ಧಸ್ಯಾಸ್ಯ ಶ್ಲೋಕಸ್ಯೇತ್ಯನ್ಯಾಯುಕ್ತಿಃ । ಪ್ರಕಾರಾಂತರೇಣಾಪಿ ಶ್ಲೋಕಸ್ಯ ಪುಚ್ಛೇಽಪಕರ್ಷಣ-ಮನುಚಿತಮಿತ್ಯಾಹ – **ಉತ್ಕರ್ಷ ಇತಿ** ॥ ಅಸ್ಮದರ್ಥೇ ಅಸ್ಮಾಭಿರುಚ್ಯಮಾನೇ ಪುಚ್ಛಸ್ಥಬ್ರಹ್ಮಶಬ್ದ-ಸ್ಯಾಂಗಿನ್ಯಾಕರ್ಷಣ ರೂಪಾರ್ಥೇ ಉತ್ಕರ್ಷಃಸ್ಯಾದ್ಧಿ । ಅಧೋಭಾಗೇಸ್ಥಿತ ಶಬ್ದಸ್ಯೋರ್ಧ್ವಭಾಗೇ ಆಕರ್ಷಣಸ್ಯ ಊರ್ಧ್ವಂ ಕರ್ಷಣಮಿತಿ ವಾ ಉಚ್ಚೈಶ್ರೇಷ್ಠೇಂಗಿನಿಕರ್ಷಣಮಿತಿ ವಾ ಉತ್ಕರ್ಷ-ರೂಪತ್ವಾದಿತಿ ಭಾವಃ । ತ್ವಯಾತ್ವಪಕರ್ಷಃ ಊರ್ಧ್ವಭಾಗೇ ಶ್ರೇಷ್ಠೇ ಚಾಂಗಿನಿ ಸ್ಥಿತಸ್ಯ ಶ್ಲೋಕಸ್ಯಾಧೋಭಾಗೇ ಪಾದೇ ಆಕರ್ಷಣಂ ಕ್ರಿಯತೇ । ಅತಸ್ತ್ವದುಕ್ತೇರ್ಥೇಽ-ಪಕರ್ಷೋಜಾಯತೇ । ಅಸ್ಮದರ್ಥೇತೂತ್ಕರ್ಷಃ । ಸ ಏವ ಶ್ಲಾಘ್ಯ ಇತಿ ಭಾವಃ ॥ ೧೦೪ ॥

**ವಿವರಣೆ–** ಆನಂದಮಯ ಪ್ರಕರಣದ ಶ್ಲೋಕವು ಅಭ್ಯಾಸಾತ್ ಎಂದು ಬ್ರಹ್ಮಶಬ್ದದ ಅಭ್ಯಾಸವನ್ನು ಹೇಳುವ ಸೂತ್ರದಿಂದ ಎಂದರೆ ಪಾಶದಿಂದ ಕಟ್ಟಲ್ಪಟ್ಟಿರುವುದರಿಂದ ಅದನ್ನು ಪುಚ್ಛ ಪರವಾಗಿ ಎಳೆಯಲು ಬರುವುದಿಲ್ಲ ಎಂಬುದು ಒಂದು ಯುಕ್ತಿ. ನಾವು ಹೇಳುವ ಅರ್ಥದಲ್ಲಿ ಪುಚ್ಛದಲ್ಲಿ ಶ್ರುತವಾದ ಬ್ರಹ್ಮಶಬ್ದವನ್ನು ಅವಯವಿಯಾದ ಆನಂದಮಯನಲ್ಲಿ ಆಕರ್ಷಣ ಮಾಡುವುದರಿಂದ ಎಂದರೆ ಮೇಲೆ ಎಳೆಯುವುದರಿಂದ ಉತ್ಕರ್ಷವು ಸಿದ್ಧವಾಗುತ್ತದೆ. ನಿನ್ನ ಅರ್ಥದಲ್ಲಿ ಮಾತ್ರ ಅವಯವಿಯಾದ ಆನಂದಮಯನಲ್ಲಿ ಶ್ರುತವಾದ ಬ್ರಹ್ಮಶಬ್ದಗಳನ್ನು ಪುಚ್ಛದಲ್ಲಿ ಕೆಳಗೆ ಎಳೆಯುವುದರಿಂದ ಅಪಕರ್ಷವೇ ಸಿದ್ಧವಾಗುತ್ತದೆ. ಉತ್ಕರ್ಷವನ್ನು ಪಡೆಯುವುದೇ ಶ್ಲಾಘ್ಯವಷ್ಟೇ ಎಂದು ಅಭಿಪ್ರಾಯ.

ಸರ್ವೋತ್ಕೃಷ್ಟಾ ಚ ವಿದ್ಯೇಯಮುತ್ಕರ್ಷಂ ಸಹತೇ ಪರಂ ।
ಅಪಕರ್ಷೇಽಪಿ ತೇ ಕೋಶಸ್ಯೈಕದೇಶಂ ವಿಶೇನ್ನ ಸಾ ॥ ೧೦೫ ॥

**ಅರ್ಥ–** ಚ= ಮತ್ತು, ಇಯಂ ವಿದ್ಯಾ= ಈ ಆನಂದಮಯ ವಿದ್ಯೆಯು, ಸರ್ವೋತ್ಕೃಷ್ಟಾ= ಸರ್ವೋತ್ತಮವಾದುದು, ಆದ್ದರಿಂದ, ಪರಂ= ಕೇವಲ, ಉತ್ಕರ್ಷಂ= ಉತ್ಕರ್ಷವನ್ನು, ಸಹತೇ= ಸಹಿಸುತ್ತದೆ, ಅಪಕರ್ಷೇಽಪಿ= ಅಪಕರ್ಷವನ್ನು ಮಾಡಿದರೂ,

ಸಾ= ಆ ವಿದ್ಯೆಯು, ತೇ= ನಿನಗೆ ಅಭಿಪ್ರೇತವಾದ, ಕೋಶಸ್ಯ= ಜಡವಾದ ಕೋಶದ, ಏಕದೇಶಂ= ಒಂದು ಅವಯವವನ್ನು, ನ ವಿಶೇತ್= ಪ್ರವೇಶಿಸುವುದಿಲ್ಲ.

**ಅನುವಾದ–** ಆನಂದಮಯ ವಿದ್ಯೆಯು ಸರ್ವೋತ್ಕೃಷ್ಟವಾದ ವಿದ್ಯೆ. ಆದ್ದರಿಂದ ಇದು ಉತ್ಕರ್ಷವನ್ನು ಸಹಿಸುತ್ತದೆಯೋ ಹೊರತು ಅಪಕರ್ಷವನ್ನು ಸಹಿಸುವುದಿಲ್ಲ. ಅಪಕರ್ಷವನ್ನು ಮಾಡಿದರೂ ಸಹ ನಿನಗೆ ಅಭಿಪ್ರೇತವಾದ ಜಡವಾದ ಕೋಶದ ಏಕದೇಶವಾದ ಪಾದವನ್ನು ಪ್ರವೇಶಿಸುವುದಿಲ್ಲ.

**ಭಾವವಿಲಾಸಿನೀ–** ಕಿಂಚ ಸರ್ವೋತ್ಕೃಷ್ಟೇಯಂ ವಿದ್ಯಾಽಽನಂದಮಯವಿದ್ಯಾಪರಂ ಕೇವಲ-ಮುತ್ಕರ್ಷಮೇವಸಹತೇ । ನಾಪಕರ್ಷಮ್ । ಅತೋವಿದ್ಯಾಸ್ವರೂಪ ಪರ್ಯಾಲೋಚನಯಾ ಚ ಯೋಗ್ಯಂ ಯೋಗ್ಯೇನ ಸಂಬಧ್ಯತ ಇತಿ ಉತ್ಕರ್ಷ ಏವ ಕಾರ್ಯ ಇತಿ ಭಾವಃ। ಪ್ರತಿಬಂದೀ-ಪ್ರದರ್ಶನಾಯೇದಮುದಿತಮ್ । ವಸ್ತುಗತ್ಯಾನಾಪಕರ್ಷೋನಾಪ್ಯುತ್ಕರ್ಷಃ ಪರಮಾತ್ಮನಿ ಲೋಮನಖಾದೀನಾಮಪಿ ಪರಬ್ರಹ್ಮತ್ವಾತ್ತಸ್ಯ ತಸ್ಯ ಬ್ರಹ್ಮತಾಪ್ರತಿಪಾದಕಂ ವಾಕ್ಯಂ ತತ್ರ ತತ್ರಯೋಜ್ಯಂ। ಪರಪಕ್ಷೇ ದೂಷಣಾಂತರಂ ಚಾಹ – **ಅಪಕರ್ಷ ಇತಿ** ॥ ಸಾ ಬ್ರಹ್ಮಶಬ್ದಸಹಿತಾ ಶ್ಲೋಕರೂಪಶ್ರುತಿಃ । ತೇ ಮತೇ ಕೋಶಸ್ಯ ಜಡಕೋಶರೂಪಸ್ಯಾನಂದಮಯಸ್ಯೈಕ-ದೇಶಮಂಶಭೂತಂ ಅತ ಏವ ಜಡಂ ಪಾದಂ ನ ವಿಶೇತ್ । ಕೋಶಸ್ಯ ಜಡತ್ವೇನ ತದೇಕದೇಶ-ಭೂತಪಾದಸ್ಯಾಪಿ ಜಡತ್ವಾವಶ್ಯಂಭಾವಾತ್ ತದ್ ಬ್ರಹ್ಮತ್ವಪ್ರತಿಪಾದಿಕಾ ನ ಸ್ಯಾದಿತಿ ಭಾವಃ। ಉಪಲಕ್ಷಣಂ ಚೈತತ್ । ಪುಚ್ಛೇ ಶ್ರೂಯಮಾಣೋಪಿ ಬ್ರಹ್ಮಶಬ್ದಃ ಕಥಂ ತತ್ರ ಯೋಜನೀಯ ಇತ್ಯಪಿ ದ್ರಷ್ಟವ್ಯಮ್ ॥ ೧೦೫ ॥

**ವಿವರಣೆ–** ವಿದ್ಯಾಸ್ವರೂಪಪರ್ಯಾಲೋಚನೆಯಿಂದಲೂ ಯೋಗ್ಯಂ ಯೋಗ್ಯೇನ ಸಂಬಂಧ್ಯತೇ, ಯೋಗ್ಯವಾದುದು ಯೋಗ್ಯದ ಜೊತೆಯಲ್ಲಿಯೇ ಸೇರುತ್ತದೆ ಎಂಬ ನ್ಯಾಯದಿಂದ ಯೋಗ್ಯವಾದ ಶ್ಲೋಕವು ಯೋಗ್ಯವಾದ ಆನಂದಮಯನ ಜೊತೆಯಲ್ಲಿಯೇ ಸೇರಿದರೆ ಉತ್ಕರ್ಷವು ಉಂಟಾಗುತ್ತದೆ. ವಸ್ತುತಃ ಭಗವಂತನ ಲೋಮನಖಾದಿಗಳು ಎಲ್ಲವೂ ಪರಬ್ರಹ್ಮನೇ ಆಗಿರುವುದರಿಂದ ಅರ್ಥದಲ್ಲಿ ಉತ್ಕರ್ಷವೂ ಇಲ್ಲ ಅಪಕರ್ಷವೂ ಇಲ್ಲ. ಆಯಾ ಅವಯವಿಗಳಿಗೆ ಬ್ರಹ್ಮತ್ವವನ್ನು ಹೇಳುವ ಬ್ರಹ್ಮಪದವನ್ನು ಅಲ್ಲಲ್ಲಿ ಜೋಡಿಸಿಕೊಳ್ಳಬೇಕು. ನೀನು ಹೇಳುವ ಅರ್ಥದಲ್ಲಿ ಮಾತ್ರ ಆನಂದಮಯವನ್ನು ಹೇಳುವ ಬ್ರಹ್ಮಶಬ್ದವನ್ನು ಪುಚ್ಛಪರವೆಂದು ಮಾಡಿದರೆ ಅಪಕರ್ಷ ಉಂಟಾಗುವುದು ಎಂಬುದು ಇಷ್ಟೇ ಅಲ್ಲ, ನಿನ್ನ ರೀತಿಯಲ್ಲಿ ಆನಂದಮಯನು ಜಡವಾದುದರಿಂದ ಅದರ ಪುಚ್ಛ ಎಂದರೆ ಪಾದವೂ ಜಡವಾದುದರಿಂದ ಬ್ರಹ್ಮಶಬ್ದವು ಅದನ್ನು ಪ್ರತಿಪಾದನೆ ಮಾಡಿದಂತಾಗುತ್ತದೆ. ಉತ್ಕೃಷ್ಟವಾದ ವಿದ್ಯೆಯಲ್ಲಿ ಇಂತಹ ಪ್ರತಿಪಾದನೆಯನ್ನು ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಅತಃ ಶ್ರುತೇಃ ಸೂತ್ರಕೃತಶ್ಚೈಕೋ ಮಾರ್ಗೋ ನಿರರ್ಗಲಃ ।**
**ಖಲಸ್ಯ ಸೂತ್ರಭಾಷ್ಯಾರ್ಥಂ ಪ್ರವೃತ್ತಸ್ಯಾಪರೋ ಭವೇತ್ ।**
**ನಿಮಿತ್ತಸಾಮ್ಯೇಪ್ಯೇಕತ್ರ ಪಕ್ಷಪಾತಾದ್ ದುರಾಗ್ರಹೀ ॥ ೧೦೬ ॥**

**ಅರ್ಥ–** ಅತಃ= ಆ ಕಾರಣದಿಂದ, ಶ್ರುತೇಃ= ಶ್ರುತಿಗೂ, ಸೂತ್ರಕೃತಶ್ಚ= ಮತ್ತು ಸೂತ್ರಕಾರರಿಗೂ, ನಿರರ್ಗಲಃ= ನಿರ್ಬಾಧವಾದ, ಏಕೋ ಮಾರ್ಗಃ= ಒಂದೇ ಮಾರ್ಗ, ಸೂತ್ರಭಾಷ್ಯಾರ್ಥಂ= ಸೂತ್ರಭಾಷ್ಯವನ್ನು ಮಾಡುವ ಸಲುವಾಗಿ, ಪ್ರವೃತ್ತಸ್ಯ= ಉದ್ಯುಕ್ತನಾದ, ಖಲಸ್ಯ= ಖಳನಿಗೆ, ಅಪರೋಭವೇತ್= ಇನ್ನೊಂದು ಮಾರ್ಗವು ಆಗುತ್ತದೆ, ನಿಮಿತ್ತಸಾಮ್ಯೇಪಿ= ಅನುಪಪತ್ತಿರೂಪವಾದ ನಿಮಿತ್ತವು ಸಮಾನವಾಗಿದ್ದರೂ, ಏಕತ್ರ= ಒಂದು ಕಡೆಯಲ್ಲಿ ಮಾತ್ರ, ಪಕ್ಷಪಾತಾತ್= ಪಕ್ಷಪಾತವನ್ನು ಮಾಡುವ ಕಾರಣದಿಂದ, ದುರಾಗ್ರಹೀ= ಅವನು ದುರಾಗ್ರಹ ಉಳ್ಳವನು.

**ಅನುವಾದ–** ಆದ್ದರಿಂದ ಆನಂದಮಯನಿಗೆ ಬ್ರಹ್ಮತ್ವವನ್ನು ಹೇಳುವ ಶ್ರುತಿಗೂ ಮತ್ತು ಸೂತ್ರಕಾರರಿಗೂ ನಿರಾತಂಕವಾದ ಒಂದೇ ಮಾರ್ಗ. ಸೂತ್ರಭಾಷ್ಯವನ್ನು ಮಾಡಲು ಹೊರಟ ಖಳನಿಗೆ ಮಾತ್ರ ಪುಚ್ಛವೇ ಬ್ರಹ್ಮನೆಂದು ಹೇಳುವ ಇನ್ನೊಂದು ಮಾರ್ಗ. ಅಂಗವು ಬ್ರಹ್ಮನಾದರೆ ಅಂಗಿಯು ಹೇಗೆ ಬ್ರಹ್ಮನಾಗುತ್ತದೆ ಅಥವಾ ಅಂಗಿಯು ಬ್ರಹ್ಮನಾದರೆ ಅಂಗವು ಹೇಗೆ ಬ್ರಹ್ಮವಾಗುತ್ತದೆ ಎಂಬ ಅನುಪಪತ್ತಿಯು ಎರಡು ಕಡೆಗಳಲ್ಲಿಯೂ ಸಮವಾಗಿದ್ದರೂ ಅಂಗವೇ ಬ್ರಹ್ಮ, ಅಂಗಿಯು ಬ್ರಹ್ಮನಲ್ಲ ಎಂದು ಒಂದು ಕಡೆಯಲ್ಲಿಯೇ ಪಕ್ಷಪಾತವನ್ನು ಮಾಡುವ ನೀನು ದುರಾಗ್ರಹ ಉಳ್ಳವನು.

**ಭಾವವಿಲಾಸಿನೀ–** ಅತಃ ಅಂಗಿನಿಶ್ರೂಯಮಾಣಶ್ಲೋಕಸ್ಯಾನ್ಯಪರತ್ವಾಯೋಗಾತ್ । ನಿರರ್ಗಲಃ ನಿರ್ಬಾಧಃ ಏಕಃ ಆನಂದಮಯಸ್ಯ ಬ್ರಹ್ಮತ್ವರೂಪಃ । ಅಪರಃ ಪುಚ್ಛಸ್ಯೈವ ಬ್ರಹ್ಮತಾರೂಪಃ । ಸೂತ್ರಭಾಷ್ಯಾರ್ಥಂ ಪ್ರವೃತ್ತಸ್ಯೇತಿ ಸಾಕ್ಷಾಚ್ಛ್ರುತಾರ್ಥದೂಷಕಃ ಕಥಂ ತದ್ಭಾಷ್ಯಕಾರ ಇತ್ಯಪಹಾಸಾರ್ಥಮುದಿತಮ್ । ಖಲತ್ವಮುಪಪಾದಯತಿ – **ನಿಮಿತ್ತೇತಿ** ॥ ನಿಮಿತ್ತ-ಸ್ಯಾನುಪಪತ್ತಿರೂಪನಿಮಿತ್ತಸ್ಯ ಸಾಮ್ಯೇಪಿ ಪಕ್ಷದ್ವಯ ಸಾಧಾರಣ್ಯೇಪಿ ಅಂಗಸ್ಯೈವ ಬ್ರಹ್ಮತೋಕ್ತೇಃ ಕಥಮಂಗಿನೋ ಬ್ರಹ್ಮತ್ವಮಿತಿವತ್ ಅಂಗಿನಃ ಅಬ್ರಹ್ಮತಾಯಾಂ ಕಥಂ ತದೇಕದೇಶಸ್ಯಾಂಗಸ್ಯ ಬ್ರಹ್ಮತ್ವಮಿತಿ ಪಕ್ಷದ್ವಯೇಪ್ಯನುಪಪತ್ತಿಸಾಮ್ಯೇಪೀತ್ಯರ್ಥಃ । ಏಕತ್ರ ಅಂಗಸ್ಯೈವ ಬ್ರಹ್ಮತಾಯಾಂ ಪಕ್ಷಪಾತಾದ್ದುರಾಗ್ರಹೀ । ದುರಾಗ್ರಹಗ್ರಸ್ತತ್ವಾತ್ ಖಲ ಇತಿ ಭಾವಃ ॥ ೧೦೬ ॥

**ವಿವರಣೆ–** ಅಂಗಿಯಲ್ಲಿ ಹೇಳಿದ ಶ್ಲೋಕವನ್ನು ಅಂಗದಲ್ಲಿ ತರಲು ಸಾಧ್ಯವಿಲ್ಲವಾದ್ದರಿಂದ ಅನುಪಪತ್ತಿಯು ಸಮಾನವಾಗಿದ್ದರೂ ಅಂಗದಲ್ಲಿಯೇ ತರಲು ಉದ್ಯುಕ್ತನಾದ ನಿನಗೆ ಶ್ರುತಿ ವಿರೋಧವೂ, ಸೂತ್ರವಿರೋಧವೂ ಬಂದರೂ, ಅದನ್ನು ಪರಿಗಣಿಸದೇ ಅಂಗವೇ ಬ್ರಹ್ಮನೆಂದು ಹೇಳುವ ನೀನು ದುರಾಗ್ರಹ ಉಳ್ಳವನು ಎಂದು ಅಭಿಪ್ರಾಯ.

**ಉಭಯೋರ್ಬ್ರಹ್ಮತಾऽಯೋಗಾದೇಕತ್ಯಾಗೋ ಯದೀಷ್ಯತೇ ।**
**ಸರ್ವಸ್ಯ ಬ್ರಹ್ಮತಾ ತರ್ಹಿ ಕೇನ ವಾ ಘೋಷಿತಾ ಭುವಿ ।**
**ಶಿಷ್ಯೋ ಬ್ರಹ್ಮ ಗುರುರ್ಬ್ರಹ್ಮ ಸರ್ವಂ ಬ್ರಹ್ಮ ಜಗತ್ ಕಿಲ ॥ ೧೦೭ ॥**

**ಅರ್ಥ–** ಯದಿ= ಒಂದು ಪಕ್ಷ, ಉಭಯೋಃ= ಅಂಗಾಂಗಿಗಳೆರಡಕ್ಕೂ, ಬ್ರಹ್ಮತಾऽಯೋಗಾತ್= ಬ್ರಹ್ಮತ್ವವು ಕೂಡುವುದಿಲ್ಲವಾದ್ದರಿಂದ, ಏಕತ್ಯಾಗಃ= ಒಂದನ್ನು ತ್ಯಾಗ ಮಾಡುತ್ತೇವೆ ಎಂದು, ಇಷ್ಯತೇ= ಹೇಳುವುದಾದರೆ, ತರ್ಹಿ= ಆಗ, ಸರ್ವಸ್ಯ= ಎಲ್ಲ ಪದಾರ್ಥಗಳಿಗೂ, ಬ್ರಹ್ಮತಾ= ಬ್ರಹ್ಮತ್ವವು, ಭುವಿ= ಭೂಮಿಯಲ್ಲಿ, ಕೇನ ವಾ= ಯಾವನಿಂದ ತಾನೇ, ಘೋಷಿತಾ= ಘೋಷಿಸಲ್ಪಟ್ಟಿತು? ಶಿಷ್ಯಃ= ಶಿಷ್ಯನು, ಬ್ರಹ್ಮ= ಬ್ರಹ್ಮನು, ಗುರುಃ= ಗುರುವು, ಬ್ರಹ್ಮ= ಬ್ರಹ್ಮನು, ಸರ್ವಂ ಜಗತ್= ಎಲ್ಲ ಜಗತ್ತೂ, ಬ್ರಹ್ಮ ಕಿಲ= ಬ್ರಹ್ಮನಷ್ಟೇ.

**ಅನುವಾದ–** ಅಂಗ ಮತ್ತು ಅಂಗಿ ಇವೆರಡಕ್ಕೂ ಬ್ರಹ್ಮತ್ವವು ಕೂಡುವುದಿಲ್ಲವಾದ ಕಾರಣ ಅಂಗಿಯ ಬ್ರಹ್ಮತ್ವವನ್ನು ಬಿಡುತ್ತೇವೆ ಎಂದು ಹೇಳಿದರೆ ಎಲ್ಲವೂ ಬ್ರಹ್ಮನೆಂದು ಭೂಮಿಯಲ್ಲಿ ಯಾರು ಘೋಷಿಸಿದರು? ನಿನ್ನ ಮತದಲ್ಲಿ ಶಿಷ್ಯನೂ ಬ್ರಹ್ಮ, ಗುರುವೂ ಬ್ರಹ್ಮ, ಸರ್ವಜಗತ್ತೂ ಬ್ರಹ್ಮನಷ್ಟೇ?

**ಭಾವವಿಲಾಸಿನೀ–** ಶಂಕಾಂತರಮನೂದ್ಯ ದೂಷಯತಿ **– ಉಭಯೋರಿತಿ** ॥ ಉಭಯೋ-ರಂಗಾಂಗಿನೋರ್ಬ್ರಹ್ಮತಾಯಾ ಅಯೋಗಾತ್ । ಏಕತ್ಯಾಗಃ ಅಂಗಿಬ್ರಹ್ಮತ್ವತ್ಯಾಗಃ । ಸರ್ವಸ್ಯ ಚೇತನಾ ಚೇತನಾತ್ಮಕಸಕಲಜಗತಃ ಬ್ರಹ್ಮತಾ ಕೇನ ನಿಮಿತ್ತೇನ । ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತ್ಯಾ ಸರ್ವಸ್ಯಾ ಬ್ರಹ್ಮತಾವಾಘೋಷಯನ್ ಕಸ್ಮಾದ್ದ್ವಯೋರ್ಬ್ರಹ್ಮತ್ವಾದ್ಬಿಭೇಷೀತಿ ಭಾವಃ । ತದೇವವಿಶದಯತಿ **– ಶಿಷ್ಯ ಇತಿ** ॥ ೧೦೭ ॥

**ವಿವರಣೆ–** ಅಂಗದಲ್ಲಿ ಬ್ರಹ್ಮಶಬ್ದವು ಶ್ರುತವಾದ್ದರಿಂದ ಅಂಗಿಯ ಪರವಾಗಿ ಅರ್ಥ ಮಾಡುವುದಿಲ್ಲ ಎಂಬ ವಾದವನ್ನು ಇಲ್ಲಿ ಪರಿಹಾಸ ಮಾಡುತ್ತಾರೆ. ಅದ್ವೈತಿಗಳಾದ ನೀವು ಸರ್ವಂ ಖಲ್ವಿದಂ ಬ್ರಹ್ಮ ಎಂದು ಎಲ್ಲದಕ್ಕೂ ಬ್ರಹ್ಮತ್ವವನ್ನು ಹೇಳುವವರು. ಹೀಗೆ ಎಲ್ಲದಕ್ಕೂ ಬ್ರಹ್ಮತ್ವವನ್ನು ಘೋಷಣೆ ಮಾಡುವ ನೀವು ಅಂಗ ಮತ್ತು ಅಂಗಿಗಳೆರಡೂ ಬ್ರಹ್ಮನಾದರೆ ಏತಕ್ಕೆ ಹೆದರುತ್ತೀರಿ? ನಿಮ್ಮ ಮತದಲ್ಲಿ, ಗುರು, ಶಿಷ್ಯ, ಸಕಲ ಜಗತ್ತೂ ಎಲ್ಲವೂ ಬ್ರಹ್ಮನಷ್ಟೇ? ಆದ್ದರಿಂದ ಅಂಗವೂ ಬ್ರಹ್ಮನಾಗಲಿ, ಅಂಗಿಯೂ ಬ್ರಹ್ಮನಾಗಲಿ ಎಂದು ಪರಿಹಾಸ ಪೂರ್ವಕವಾಗಿ ಸಮರ್ಥನೆಯನ್ನು ಮಾಡುತ್ತಾರೆ.

**ಮೋದಾನಂದಪ್ರಮೋದಾದಿ ನ ಬ್ರಹ್ಮ ಕಿಲ ಚಿನ್ಮಯೇ ।**
**ಬ್ರಹ್ಮಣಃ ಸುಖರೂಪತ್ವೇ ಸುಖಸ್ಯ ಬ್ರಹ್ಮತಾ ನ ಕಿಂ ॥ ೧೦೮ ॥**

**ಅರ್ಥ–** ಚಿನ್ಮಯೇ= ಚಿನ್ಮಯನಾದ ಬ್ರಹ್ಮನಲ್ಲಿ, ಮೋದಾನಂದಪ್ರಮೋದಾದಿ= ಮೋದ, ಆನಂದ, ಪ್ರಮೋದ ಮೊದಲಾದವುಗಳು, ನ ಬ್ರಹ್ಮ ಕಿಲ= ಬ್ರಹ್ಮನಲ್ಲವಷ್ಟೇ, ಬ್ರಹ್ಮಣಃ=

ಬ್ರಹ್ಮನಿಗೆ, ಸುಖರೂಪತ್ವೇ= ಸುಖರೂಪತ್ವವು ಇದ್ದರೆ, ಸುಖಸ್ಯ= ಸುಖಕ್ಕೆ, ಬ್ರಹ್ಮತಾ= ಬ್ರಹ್ಮತ್ವವು, ಕಿಂ ನ= ಇಲ್ಲವೇನು?

**ಅನುವಾದ–** ಚಿನ್ಮಯನಾದ ಆನಂದಮಯನಲ್ಲಿ ಶ್ರುತವಾದ ಮೋದ, ಆನಂದ, ಪ್ರಮೋದಗಳೆಲ್ಲವೂ ಬ್ರಹ್ಮನಷ್ಟೇ? ಬ್ರಹ್ಮನು ಸುಖರೂಪನಾದರೆ ಸುಖವು ಬ್ರಹ್ಮರೂಪವಾಗುವುದಿಲ್ಲವೇ?

**ಭಾವವಿಲಾಸಿನೀ–** ದುಃಖಿನೋ ಜೀವಸ್ಯ ಜಡಸ್ಯ ಘಟಾದೇಶ್ಚ ಬ್ರಹ್ಮತಾಽಸಂಭಾವಿತಾ । ಆನಂದಮಯಸ್ಯ ಸುಖರೂಪಬ್ರಹ್ಮತಾಯಾಂ ನ ಕಾಪ್ಯನುಪಪತ್ತಿರಿತಿ ಸೂಚನಾಯ ಮೋದೇತ್ಯಾದಿಕಮುಕ್ತಮ್ । ಚಿನ್ಮಯೇ ಜ್ಞಾನಮಯೇ । ಅನುಪಪತ್ತ್ಯಭಾವ-ಮೇವೋಪಪಾದಯತಿ – ಬ್ರಹ್ಮಣ ಇತಿ ॥ ಸುಖರೂಪಂ ಬ್ರಹ್ಮೇತಿ ತ್ವಯಾಪ್ಯುಚ್ಯತೇ ॥ ತರ್ಹಿಸುಖಸ್ಯ ಸುಖಾತ್ಮಕಾನಂದಮಯಸ್ಯ ॥ ೧೦೮ ॥

**ವಿವರಣೆ–** ದುಃಖಿಯಾದ ಜೀವನಿಗಾಗಲೀ, ಜಡಕ್ಕಾಗಲೀ ಬ್ರಹ್ಮರೂಪತ್ವವು ಇರುವುದು ಬೇಡ. ಆದರೆ ಆನಂದಮಯನಿಗೆ ಸುಖರೂಪವಾದ ಬ್ರಹ್ಮತ್ವ ಇರುವುದಕ್ಕೆ ಯಾವ ಅನುಪಪತ್ತಿಯೂ ಇಲ್ಲ ಎಂದು ಇಲ್ಲಿ ಉಪಪಾದನೆಯನ್ನು ಮಾಡುತ್ತಾರೆ. ಬ್ರಹ್ಮನು ಸುಖರೂಪನಾದರೆ ಸುಖವು ಬ್ರಹ್ಮರೂಪವಾಗುವುದಿಲ್ಲವೇ? ಆದ್ದರಿಂದ ಮೋದ, ಪ್ರಮೋದ, ಆನಂದ ಎಲ್ಲವೂ ಸುಖವಿಶೇಷಗಳು. ಅವೆಲ್ಲವೂ ಬ್ರಹ್ಮರೂಪವೇ.

**ಆನಂದಂ ಬ್ರಹ್ಮ ಕಂ ಬ್ರಹ್ಮೇತ್ಯಾದಿ ವೇದೋ ನ ಕಿಂ ಶ್ರುತಃ ॥ ೧೦೯ ॥**

**ಅರ್ಥ–** ಆನಂದಂ ಬ್ರಹ್ಮ= ಬ್ರಹ್ಮನು ಆನಂದನು, ಕಂ ಬ್ರಹ್ಮ= ಬ್ರಹ್ಮನು ಸುಖನು, ಇತ್ಯಾದಿ ವೇದಃ= ಇದೇ ಮೊದಲಾದ ವೇದವು, ನ ಶ್ರುತಃ ಕಿಂ= ಕೇಳಲ್ಪಟ್ಟಿಲ್ಲವೇನು?

**ಅನುವಾದ–** ಆನಂದಂ ಬ್ರಹ್ಮ, ಕಂ ಬ್ರಹ್ಮ ಎಂಬ ಶ್ರುತಿಗಳು ಬ್ರಹ್ಮನಿಗೆ ಆನಂದರೂಪತ್ವವನ್ನು ಹೇಳಿರುವುದನ್ನು ನೀನು ಕೇಳಿಲ್ಲವೇನು?

**ಭಾವವಿಲಾಸಿನೀ–** ಆನಂದಮಯಸ್ಯ ಬ್ರಹ್ಮತ್ವಂ ಸಾಕ್ಷಾಚ್ಛ್ರುತಂ ಚೇತ್ಯಾಹ – ಆನಂದಮಿತಿ ॥೧೦೯॥

**ವಿವರಣೆ–** ಆನಂದಂ ಬ್ರಹ್ಮ, ಕಂ ಬ್ರಹ್ಮ ಎಂಬ ವೇದವಾಕ್ಯಗಳು ಆನಂದಕ್ಕೆ ಸಾಕ್ಷಾತ್ತಾಗಿ ಬ್ರಹ್ಮತ್ವವನ್ನು ಹೇಳುತ್ತಿರುವುದರಿಂದ ನೀನು ಏಕೆ ಅದನ್ನು ನಿರಾಕರಿಸುತ್ತಿದ್ದೀಯೆ ಎಂದು ಅಭಿಪ್ರಾಯ.

**ವಿರುದ್ಧಜೀವಬ್ರಹ್ಮೈಕ್ಯೇ ಯಸ್ಯಾಶಾ ಭೂಯಸೀ ತವ ।**
**ಅಂಗಾಂಗಿನೋಃ ಕುತೋ ನೈಕ್ಯಮೇಕಜಾತೀಯಯೋರ್ವದ ॥ ೧೧೦ ॥**

**ಅರ್ಥ—** ಯಸ್ಯ ತವ= ಯಾವ ನಿನಗೆ, ವಿರುದ್ಧ ಜೀವಬ್ರಹ್ಮೈಕ್ಯೇ= ಸರ್ವಜ್ಞತ್ವ, ಅಲ್ಪಜ್ಞತ್ವ ರೂಪವಾದ ವಿರುದ್ಧ ಧರ್ಮಗಳು ಇರುವುದರಿಂದ ಅಸಂಭಾವಿತವಾದ ಜೀವಬ್ರಹ್ಮೈಕ್ಯದಲ್ಲಿ, ಭೂಯಸೀ ಆಶಾ= ಮಹದಾಸೆ ಇದೆಯೋ ಅಂತಹ ನಿನಗೆ, ಏಕ ಜಾತೀಯಯೋಃ= ಸುಖ ರೂಪವಾದ ಒಂದೇ ಜಾತಿಯ, ಅಂಗಾಂಗಿನೋಃ= ಅಂಗ ಮತ್ತು ಅಂಗಿಗಳಿಗೆ, ಐಕ್ಯಂ= ಐಕ್ಯವು, ಕುತೋ ನ= ಏಕೆ ಇಲ್ಲ ಎಂದು, ವದ= ಹೇಳು.

**ಅನುವಾದ—** ವಿರುದ್ಧವಾದ ಸರ್ವಜ್ಞತ್ವ, ಅಲ್ಪಜ್ಞತ್ವಾದಿ ಧರ್ಮಗಳಿದ್ದರೂ ಅದನ್ನು ಪರಿಗಣಿಸದೇ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವ ಮಹದಾಸೆಯನ್ನು ಹೊಂದಿರುವ ನೀನು ಅಂಗ ಮತ್ತು ಅಂಗಿ ಇವೆರಡೂ ಸುಖರೂಪವಾಗಿರುವಾಗ ಅವುಗಳಿಗೆ ಐಕ್ಯವನ್ನು ಹೇಳುವುದಕ್ಕೆ ಏಕೆ ಒಪ್ಪುವುದಿಲ್ಲ ಎಂದು ಹೇಳು.

**ಭಾವವಿಲಾಸಿನೀ—** ನನ್ವಂಗಸ್ಯ ಬ್ರಹ್ಮತಾಯಾಮಂಗಿಬ್ರಹ್ಮ ಅಧಿಕರಣಮೇವಸ್ಯಾತ್ । ನತು ಬ್ರಹ್ಮ(?) ಆಧಾರಾಧೇಯ ಭಾವಸ್ಯ ವಿರುದ್ಧತಯೈಕಸ್ಮಿನ್ನಯೋಗಾದಿತ್ಯತ ಆಹ – **ವಿರುದ್ಧೇತಿ** ॥ ಸರ್ವಜ್ಞತ್ವಾಲ್ಪಜ್ಞತ್ವಾದಿನಾತ್ಯಂತ ವಿರುದ್ಧಜೀವಬ್ರಹ್ಮೈಕ್ಯೇ । ಯಸ್ಯ ತವೇತಿ ಸಂಬಂಧಃ । ಏಕಜಾತೀಯಯೋಃ ಅವಯವಿನೋಃ ಜ್ಞಾನಾನಂದಮಯತ್ವೇ ತದವಯವಾನಾಮಪಿ ಜ್ಞಾನಾನಂದಮಯತ್ವಾವಶ್ಯಂಭಾವಾತ್ । ಏಕಪ್ರಕಾರಯೋರಿತ್ಯರ್ಥಃ । ಅತ್ಯಂತವಿರುದ್ಧಯೋರೈಕ್ಯಂ ವದತಾ ಉಕ್ತರೀತ್ಯಾ ಏಕಜಾತೀಯಯೋರಂಗಾಂಗಿನೋರೈಕ್ಯಂ ಕುತೋ ನ ಕಥ್ಯತೇ । ಆವಯೋರ್ಮತೇ ಉಪಾದಾನೋಪಾದೇಯತಯಾಽಭಿನ್ನಯೋರಪಿ ಮೃದ್ಘಟಯೋರೇವಾವಯವಾವಯವಿಭಾವದರ್ಶನಾತ್ ಅಂಗಾಂಗಿಭಾವೋಽಪಿ ನಾಭೇದವಿರೋಧೀತಿ ಭಾವಃ ॥ ೧೧೦ ॥

**ವಿವರಣೆ—** ಜೀವಬ್ರಹ್ಮರು ಸರ್ವಜ್ಞತ್ವ, ಅಲ್ಪಜ್ಞತ್ವಾದಿ ಧರ್ಮಗಳಿಂದ ಅತ್ಯಂತ ವಿರುದ್ಧರಾದವರು. ಅತ್ಯಂತ ವಿರುದ್ಧರಾದ ಜೀವಬ್ರಹ್ಮರಿಗೂ ನೀನು ಐಕ್ಯವನ್ನು ಹೇಳುತ್ತೀಯೆ. ಇಲ್ಲಿ ಆನಂದಮಯನೂ, ಆವನ ಪುಚ್ಛವೂ ಎಲ್ಲವೂ ಜ್ಞಾನಾನಂದಮಯ, ಒಂದೇ ರೀತಿಯಾಗಿರುವವು. ಅತ್ಯಂತ ವಿರುದ್ಧವಾಗಿ ವಿಜಾತೀಯವಾಗಿ ಇರುವ ವಸ್ತುಗಳಿಗೇ ಐಕ್ಯವನ್ನು ಹೇಳುವ ನೀನು ಅತ್ಯಂತ ಸಜಾತೀಯವಾದ ವಸ್ತುಗಳಿಗೆ ಏಕೆ ಐಕ್ಯವನ್ನು ಹೇಳುವುದಿಲ್ಲ? ನಮ್ಮಿಬ್ಬರ ಮತದಲ್ಲಿಯೂ ಸಹ ಅವಯವ, ಅವಯವಿಭಾವವನ್ನು ಹೊಂದಿರುವ ಮಣ್ಣು ಮತ್ತು ಘಟಗಳಿಗೆ ಅಭೇದವೇ ಇದೆ. ಹೀಗಿರುವಾಗ ಅವಯವಿಯಾದ ಆನಂದಮಯನಿಗೂ, ಅವಯವವಾದ ಪುಚ್ಛಕ್ಕೂ ಅಭೇದವನ್ನು ಹೇಳಿದರೆ ನಿನಗೆ ಏನು ತೊಂದರೆ ಎಂದು ಇಲ್ಲಿ ಪ್ರಶ್ನೆ ಮಾಡುತ್ತಾರೆ.

**ಕೇಶಸ್ಯ ಬ್ರಹ್ಮತಾ ದೃಷ್ಟಾ ಕೇಶವಸ್ಯಾಪಿ ಕಿಂ ನ ಸಾ ॥ ೧೧೧ ॥**

**ಅರ್ಥ—** ಕೇಶಸ್ಯ= ಪದ್ಮನಾಭಮೂಲರೂಪದ ಕೃಷ್ಣಕೇಶವಾದ ಕೃಷ್ಣನಿಗೆ, ಬ್ರಹ್ಮತಾ= ಬ್ರಹ್ಮತ್ವವು, ದೃಷ್ಟಾ= ನೋಡಲ್ಪಟ್ಟಿದೆ, ಕೇಶವಸ್ಯಾಪಿ= ಮೂಲರೂಪಿಯಾದ

ಅವಯವಿಯಾದ ಕೇಶವ (ಪದ್ಮನಾಭ)ನಿಗೂ ಸಹ, ಸಾ= ಆ ಬ್ರಹ್ಮತ್ವವು, ಕಿಂ ನ= ಇರುವುದಿಲ್ಲವೇ?

**ಅನುವಾದ–** ಪದ್ಮನಾಭ ನಾಮವುಳ್ಳ ಮೂಲರೂಪದ ಕೃಷ್ಣಕೇಶನಾದ ಕೃಷ್ಣಾವತಾರಕ್ಕೂ ಬ್ರಹ್ಮತ್ವವಿರುವುದು ದೃಷ್ಟವಾಗಿದೆ. ಮೂಲರೂಪವಾದ ಕೇಶವನಿಗೆ ಬ್ರಹ್ಮತ್ವವಿಲ್ಲವೇ?

**ಭಾವವಿಲಾಸಿನೀ– ಕಿಂ ಚಾಂಗಾಂಗಿಭಾವಾಪನ್ನಯೋರ್ಮೂಲರೂಪನಾರಾಯಣತತ್ ಕೇಶರೂಪಕೃಷ್ಣಾವತಾರಯೋರುಭಯೋರಪ್ಯೈಕ್ಯ ಬ್ರಹ್ಮತ್ವಾಧಾರಾಧೇಯಭಾವದರ್ಶನಾತ್ ಆನಂದಮಯೇಪ್ಯಂಗಾಂಗಿನೋರ್ದ್ವಯೋರಪಿ ಬ್ರಹ್ಮತ್ವಾದೌ ಕಾನುಪಪತ್ತಿರಿತ್ಯಾಹ – ಕೇಶಸ್ಯೇತಿ ॥ ೧೧೧ ॥**

**ವಿವರಣೆ–** ಆನಂದಮಯ ಮತ್ತು ಪುಚ್ಛರಿಗೆ ಅಂಗಾಂಗಿಭಾವವೂ, ಆಧಾರಾಧೇಯ ಭಾವವೂ ಇರುವುದರಿಂದ ಎರಡಕ್ಕೂ ಬ್ರಹ್ಮತ್ವವನ್ನು ಅಂಗೀಕರಿಸಲು ಬರುವುದಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಪದ್ಮನಾಭರೂಪದಿಂದ ಒಂದು ಬಿಳಿಯ ಕೂದಲನ್ನು, ಒಂದು ಕರಿಯ ಕೂದಲನ್ನು ಹೊರತೆಗೆದು, ಅದೇ ಬಲರಾಮ ಮತ್ತು ಕೃಷ್ಣರೂಪವಾದವು ಎಂಬ ಉಲ್ಲೇಖವು ಪುರಾಣದಲ್ಲಿ ಬರುತ್ತದೆ. ಇಲ್ಲಿ ಕೇಶಕ್ಕೂ ಮತ್ತು ದೇಹಕ್ಕೂ ಅವಯವ-ಅವಯವಿಭಾವವೂ ಮತ್ತು ಅಂಗಾಂಗಿಭಾವವೂ ಇದೆ. ಆದರೂ ಕೇಶವೂ ಪೂರ್ಣನಾಗಿ ಆದ್ದರಿಂದ ಬ್ರಹ್ಮನಾಗಿದೆ. ಅವಯವಿಯಾದ ಪದ್ಮನಾಭನೂ ಬ್ರಹ್ಮನಾಗಿದ್ದಾನೆ. ಅದರಂತೆ ಆನಂದಮಯ ಮತ್ತು ಪುಚ್ಛಗಳಿಗೆ ಅವಯವ-ಅವಯವಿಭಾವವಿದ್ದರೂ, ಆಧಾರಾಧೇಯಭಾವವಿದ್ದರೂ ಎರಡಕ್ಕೂ ಬ್ರಹ್ಮತ್ವವನ್ನು ಅಂಗೀಕರಿಸುವುದಕ್ಕೆ ಯಾವ ಅನುಪಪತ್ತಿ ಇದೆ ಎಂದು ಇಲ್ಲಿ ಪ್ರಶ್ನೆ ಮಾಡುತ್ತಾರೆ.

**ಪುಚ್ಛಸ್ಯ ಬ್ರಹ್ಮತಾಯಾಂ ತು ಮಧ್ಯಸ್ಯಾಬ್ರಹ್ಮತಾ ಕಥಂ ।**
**ಮೃತ್ಪುಚ್ಛಂ ಮೃನ್ಮಯಸ್ಯೋಕ್ಷ್ಣ ಇತ್ಯಜ್ಞಾಭಾಣಕಂ ಸ್ಮರ ॥ ೧೧೨ ॥**

**ಅರ್ಥ–** ಪುಚ್ಛಸ್ಯ= ಪುಚ್ಛಕ್ಕೆ, ಬ್ರಹ್ಮತಾಯಾಂ ತು= ಬ್ರಹ್ಮತ್ವವಿದ್ದರೆ, ಮಧ್ಯಸ್ಯ= ಮಧ್ಯಭಾಗಕ್ಕೆ, ಅಬ್ರಹ್ಮತಾ= ಬ್ರಹ್ಮತ್ವಾಭಾವವು, ಕಥಂ= ಹೇಗೆ ಉಂಟಾಗುತ್ತದೆ, ಅಜ್ಞ= ಎಲೈ ಮೂಢನೆ!, ಮೃನ್ಮಯಸ್ಯ= ಮಣ್ಣಿನಿಂದ ಮಾಡಿದ, ಉಕ್ಷ್ಣಃ= ಎತ್ತಿನ, ಪುಚ್ಛಂ= ಬಾಲವೂ, ಮೃತ್= ಮಣ್ಣು, ಇತಿ= ಎಂಬ, ಆಭಾಣಕಂ= ಗಾದೆಯನ್ನು, ಸ್ಮರ= ಸ್ಮರಿಸಿಕೋ.

**ಅನುವಾದ– ಪುಚ್ಛವು ಬ್ರಹ್ಮವಾದರೆ ಮಧ್ಯವು ಏಕೆ ಬ್ರಹ್ಮವಾಗಬಾರದು? ಮೂಢನೇ, ಮಣ್ಣಿನಿಂದ ಮಾಡಿದ ಎತ್ತಿನ ಬಾಲವೂ ಮಣ್ಣು ಎಂಬ ಗಾದೆಯನ್ನು ಸ್ಮರಿಸಿಕೋ.**

**ಭಾವವಿಲಾಸಿನೀ– ಯುಕ್ತ್ಯಂತರೇಣಾಪ್ಯಾನಂದಮಯಸ್ಯಾಬ್ರಹ್ಮತಾನೋಚಿತೇತ್ಯಾಹ – ಪುಚ್ಛಸ್ಯೇತಿ ॥ ಮಧ್ಯಸ್ಯಾನಾಂದಮಯಸ್ಯ । ಉಕ್ಷ್ಣಃ ವೃಷಭಸ್ಯ । ಆಭಾಣಕಂ ಕಿಂವದಂತೀ ।**

ಯಥಾಮೃಣ್ಮಯ ಪುಚ್ಛವೃಷಭಯೋರುಭಯೋರಪಿ ಮೃದಾತ್ಮಕತ್ವಂ ಲೋಕೇ ದೃಷ್ಟಮ್ । ತಥಾನಂದಮಯ ಪುಚ್ಛಯೋರುಭಯೋರಪಿ ಬ್ರಹ್ಮತೈವ ವಾಚ್ಯಾ । ನತ್ವೇಕಸ್ಯ ಬ್ರಹ್ಮತಾಽಪರಸ್ಯಾಬ್ರಹ್ಮತೇತಿ ಭಾವಃ ॥ ೧೧೨ ॥

**ವಿವರಣೆ–** ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬಲ್ಲಿ ಪುಚ್ಛವು ಬ್ರಹ್ಮವೆಂದು ಹೇಳಿದೆ. ಆದ್ದರಿಂದ ಆನಂದ ಆತ್ಮಾ ಎಂಬಲ್ಲಿ ಆತ್ಮಶಬ್ದದಿಂದ ಹೇಳಲ್ಪಡುವ ಮಧ್ಯದೇಹವು ಬ್ರಹ್ಮನಲ್ಲ ಎಂದು ಅದ್ವೈತಿಗಳ ವಾದ. ಆ ವಾದವನ್ನು ಇಲ್ಲಿ ನಿರಾಕರಿಸುತ್ತಾರೆ. ಬ್ರಹ್ಮ ಎಂದರೆ ಪೂರ್ಣ ಎಂದು ಅರ್ಥ. ಪುಚ್ಛವು ಪೂರ್ಣವಾಗಿದ್ದರೆ, ಮಧ್ಯವು ಏಕೆ ಪೂರ್ಣವಾಗಿರಬಾರದು. ಮಣ್ಣಿತ್ತಿನ ಬಾಲವು ಮಣ್ಣಾದರೆ ಅದರ ಮಧ್ಯದೇಹವು ಮಣ್ಣಾಗುವುದಿಲ್ಲವೇ. ಅದರಂತೆ ಪುಚ್ಛವೂ ಮಧ್ಯದೇಹವೂ ಎರಡೂ ಪೂರ್ಣವಾಗುವುದಕ್ಕೆ ಯಾವ ಅನುಪಪತ್ತಿಯೂ ಇಲ್ಲ ಎಂದು ಅಭಿಪ್ರಾಯ.

**ಕಿಂ ಚ ತ್ಯಜಸಿ ಚೇದೇಕಂ ಪೂರ್ವಂ ತ್ಯಜ ಭಜಾಪರಂ ।**
**ಸಾಕ್ಷಾತ್ ಸೂತ್ರವಿರುದ್ಧಾರ್ಥೇ ಮತಿರಾಸೀತ್ ಕಥಂ ತವ ।**
**ಉತ್ಸೂತ್ರಭಾಷ್ಯಂ ದುರ್ಭಾಷ್ಯಂ ಲಕ್ಷಣಜ್ಞಾನ್ ವಿಚಾರಯ ॥ ೧೧೩ ॥**

**ಅರ್ಥ–** ಕಿಂ ಚ= ಮತ್ತು, ಏಕಂ= ಒಂದನ್ನು, ತ್ಯಜಸಿ ಚೇತ್= ನೀನು ಪರಿತ್ಯಾಗ ಮಾಡುವುದಾದರೆ, ಪೂರ್ವಂ ತ್ಯಜ= ಮೊದಲು ಇರುವ ಪುಚ್ಛದ ಬ್ರಹ್ಮತ್ವವನ್ನು ಪರಿತ್ಯಾಗ ಮಾಡು, ಅಪರಂ= ಕೊನೆಯಲ್ಲಿ ಹೇಳಿದ ಆನಂದಮಯನ ಬ್ರಹ್ಮತ್ವವನ್ನು, ಭಜ= ಸ್ವೀಕರಿಸು, ಸಾಕ್ಷಾತ್= ನೇರವಾಗಿ, ಸೂತ್ರವಿರುದ್ಧಾರ್ಥೇ= ಸೂತ್ರಕ್ಕೆ ವಿರುದ್ಧವಾದ ಅರ್ಥದಲ್ಲಿ, ತವ= ನಿನಗೆ, ಮತಿಃ= ಬುದ್ಧಿಯು, ಕಥಂ ಆಸೀತ್= ಹೇಗೆ ಉಂಟಾಯಿತು? ಉತ್ಸೂತ್ರಭಾಷ್ಯಂ= ಸೂತ್ರಕ್ಕೆ ವಿರುದ್ಧವಾದ ಭಾಷ್ಯವು, ದುರ್ಭಾಷ್ಯಂ= ದುರ್ಭಾಷ್ಯವಾಗುತ್ತದೆ. ಲಕ್ಷಣಜ್ಞಾನ್= ಸೂತ್ರದ ಲಕ್ಷಣವನ್ನು ತಿಳಿದವರನ್ನು, ವಿಚಾರಯ= ವಿಚಾರಿಸು.

**ಅನುವಾದ–** ಎರಡರಲ್ಲಿ ಒಂದನ್ನು ಬಿಡುವುಧಾದರೆ ಮೊದಲಿರುವ ಪುಚ್ಛ ಬ್ರಹ್ಮತ್ವವನ್ನೇ ಬಿಡು, ಕೊನೆಯಲ್ಲಿರುವ ಆನಂದಮಯನ ಬ್ರಹ್ಮತ್ವವನ್ನು ಸ್ವೀಕರಿಸು. ಸೂತ್ರಕ್ಕೆ ಸಾಕ್ಷಾತ್ ವಿರುದ್ಧವಾದ ಅರ್ಥದಲ್ಲಿ ನಿನಗೆ ಹೇಗೆ ಬುದ್ಧಿ ಉಂಟಾಯಿತು? ಸೂತ್ರಕ್ಕೆ ವಿರುದ್ಧವಾದ ಭಾಷ್ಯವು ದುರ್ಭಾಷ್ಯವೆಂದು ಹೇಳಲ್ಪಡುತ್ತದೆ. ಸೂತ್ರದ ಲಕ್ಷಣವನ್ನು ತಿಳಿದವರನ್ನು ವಿಚಾರಿಸು.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಕಿಂಚೇತಿ** ॥ ಏಕಮುಭಯೋರ್ಬ್ರಹ್ಮತ್ವಾಯೋಗಾದೇಕಂ ತ್ಯಜಸಿಚೇದಿತ್ಯರ್ಥಃ । ಪೂರ್ವಂ ಪೂರ್ವೋಕ್ತಂ ಪುಚ್ಛಮ್ । ಅಪರಂ ಶ್ಲೋಕೋಕ್ತಮಾನಂದಮಯಂ ಭಜ ಬ್ರಹ್ಮತಯಾಽಂಗೀಕುರು । ಸೂತ್ರವಿರುದ್ಧಾರ್ಥೇ ಸೂತ್ರಸ್ಯ ವಿರುದ್ಧೇಽರ್ಥೇ ಪುಚ್ಛಬ್ರಹ್ಮತ್ವೇ । ಉತ್‌ಸೂತ್ರಭಾಷ್ಯಂ ಸೂತ್ರಾನನುಕೂಲಭಾಷ್ಯಮ್ ।

**ಲಕ್ಷಣಜ್ಞಾನ್ ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನು (ಕಾ)ಸಾರಿಭಿಃ । ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುರಿತಿ ಭಾಷ್ಯಲಕ್ಷಣಜ್ಞಾನ್ ॥ ೧೧೩ ॥**

**ವಿವರಣೆ–** ಬ್ರಹ್ಮ ಪುಚ್ಛಂ ಪ್ರತಿಷ್ಠಾ ಎಂಬ ವಾಕ್ಯವು ಮೊದಲಿದೆ. ಅಸದ್ಬ್ರಹ್ಮೇತಿ ವೇದಚೇತ್ ಎಂಬ ಆನಂದಮಯನಿಗೆ ಬ್ರಹ್ಮತ್ವವನ್ನು ಹೇಳುವ ಶ್ಲೋಕವು ಕೊನೆಯಲ್ಲಿದೆ. ಅಂಗ ಮತ್ತು ಅಂಗಿ ಎರಡಕ್ಕೂ ಬ್ರಹ್ಮತ್ವವನ್ನು ಅಂಗೀಕರಿಸಲು ಸಾಧ್ಯವಿಲ್ಲವಾದ್ದರಿಂದ ಒಂದನ್ನು ಪರಿತ್ಯಾಗ ಮಾಡುತ್ತೇನೆಂದು ಹೇಳಿದರೆ ಮೊದಲು ಹೇಳಿದ ಪುಚ್ಛದ ಬ್ರಹ್ಮತ್ವವನ್ನೇ ಪರಿತ್ಯಾಗ ಮಾಡು, ಆನಂದಮಯನಿಗೆ ಬ್ರಹ್ಮತ್ವವನ್ನು ಪರಿತ್ಯಾಗ ಮಾಡಿದರೆ, ಆನಂದಮಯೋಽಭ್ಯಾಸಾತ್ ಎಂಬ ಸೂತ್ರದ ವಿರೋಧವು ಬರುತ್ತದೆ. ಸೂತ್ರವಿರೋಧವು ಬಂದರೆ ದುರ್ಭಾಷ್ಯವೆನಿಸುತ್ತದೆ. ಏಕೆಂದರೆ 'ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಕಾ(ಸಾ)ರಿಭಿಃ ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂಭಾಷ್ಯವಿದೋವಿದುಃ' ಎಂಬುದು ಭಾಷ್ಯದ ಲಕ್ಷಣ. ಸೂತ್ರಾರ್ಥವನ್ನು ಸೂತ್ರಕ್ಕೆ ಅನುಗುಣವಾದ ಪದದಿಂದ ವರ್ಣನೆ ಮಾಡುವುದು ಮತ್ತು ತಮ್ಮ ಪದದಿಂದ ವರ್ಣನೆ ಮಾಡುವುದು ಭಾಷ್ಯದ ಲಕ್ಷಣ ಎಂದು ಹೇಳುತ್ತಾರೆ. ಸೂತ್ರಾರ್ಥಕ್ಕೆ ವಿರುದ್ಧವಾಗಿ ಅರ್ಥವನ್ನು ಹೇಳಿದರೆ ಸೂತ್ರವನ್ನು ನಿರಾಕರಣೆ ಮಾಡಿದಂತಾಗುತ್ತದೆಯೇ ಹೊರತು ಅದು ಸೂತ್ರದ ಭಾಷ್ಯವಾಗುವುದಿಲ್ಲ. ಸೂತ್ರದಲ್ಲಿ ಆನಂದಮಯನಿಗೇ ಬ್ರಹ್ಮತ್ವವನ್ನು ಹೇಳಿದೆ. ಆದ್ದರಿಂದ ಆನಂದಮಯನನ್ನು ಬ್ರಹ್ಮನೆಂದು ಅಂಗೀಕರಿಸು ಎಂದು ಅಭಿಪ್ರಾಯ.

**ಕ್ರೀಡತೇನಂತರೂಪೈರ್ಯಸ್ತಾಂಶ್ಚೈಕೀಕುರುತೇ ಪ್ರಭುಃ ।**
**ತದಾ ಮೂಲಂ ನ ಕಿಂ ಬ್ರಹ್ಮ ತಾನಿ ರೂಪಾಣಿ ವಾ ನ ಕಿಮ್ ॥ ೧೧೪ ॥**

**ಅರ್ಥ–** ಪ್ರಭುಃ= ಸಮರ್ಥನಾದ ಪದ್ಮನಾಭನು, ಅನಂತರೂಪೈಃ= ಮತ್ಸ್ಯಕೂರ್ಮಾದಿ ಅನಂತ ರೂಪಗಳಿಂದ, ಕ್ರೀಡತೇ= ವಿಹಾರ ಮಾಡುತ್ತಾನೆ, ತಾಂಶ್ಚ= ಆ ರೂಪಗಳನ್ನೂ ಸಹ, ಏಕೀ ಕುರುತೇ= ಪುನಃ ಪ್ರಳಯ ಕಾಲದಲ್ಲಿ ಪದ್ಮನಾಭ ರೂಪದಿಂದ ಏಕೀಕರಿಸುತ್ತಾನೆ, ತದಾ= ಆಗ, ಮೂಲಂ= ಮೂಲವಾದ ಪದ್ಮನಾಭ ರೂಪವು, ಬ್ರಹ್ಮ ಕಿಂ ನ= ಬ್ರಹ್ಮನಲ್ಲವೇ, ವಾ= ಅಥವಾ, ತಾನಿ ರೂಪಾಣಿ= ಆ ಅನಂತರೂಪಗಳು, ಬ್ರಹ್ಮ ಕಿಂ ನ= ಬ್ರಹ್ಮನಲ್ಲವೇ.

**ಅನುವಾದ–** ಬ್ರಹ್ಮಾಂಡದ ಒಳಗಿರುವ ಮೂಲರೂಪನಾದ ಪದ್ಮನಾಭನಿಂದ ಮತ್ಸ್ಯಕೂರ್ಮಾದಿ ಎಲ್ಲ ರೂಪಗಳೂ ಹೊರಬರುತ್ತವೆ ಮತ್ತು ಪುನಃ ಪದ್ಮನಾಭರೂಪದಲ್ಲಿ ಏಕೀಭಾವವನ್ನು ಹೊಂದುತ್ತವೆ. ಆಗ ಮೂಲರೂಪನಾದ ಪದ್ಮನಾಭನು ಬ್ರಹ್ಮನಲ್ಲವೇ ಅಥವಾ ಅವತಾರ ರೂಪಿಯಾದ ಮತ್ಸ್ಯಾದಿಗಳು ಬ್ರಹ್ಮನಲ್ಲವೇ?

**ಭಾವವಿಲಾಸಿನೀ–**ಯುಕ್ತ್ಯಂತರೇಣಾಪ್ಯುಭಯೋರ್ಬ್ರಹ್ಮತಾ ನ ವಿರುದ್ಧೇತ್ಯಾಹ–**ಕ್ರೀಡತ ಇತಿ** ॥ ಅನಂತರೂಪೈರ್ಮತ್ಸ್ಯಾದಿಭಿಃ । ತಾನನಂತಾವತಾರಾನ್ । ಏಕೀಕುರುತೇ । ಶ್ವೇತದ್ವೀಪಸ್ಥ-ಪದ್ಮನಾಭಮೂರ್ತ್ಯಾ ಸಹಾವತಾರಸಮಾಪ್ತ್ಯನಂತರಮೇಕೀಕುರುತೇ । ಮೂಲಂ ಮೂಲರೂಪಮ್ । ನ ಕಿಂ ಬ್ರಹ್ಮ ನ ಕಿಮ್ ॥ ೧೧೪ ॥

**ವಿವರಣೆ–** ಯುಕ್ತ್ಯಂತರದಿಂದ ಇಲ್ಲಿ ಅಂಗಾಂಗಿಗಳೆರಡಕ್ಕೂ ಬ್ರಹ್ಮತ್ವವನ್ನು ಉಪಪಾದನೆಯನ್ನು ಮಾಡುತ್ತಾರೆ. ಮತ್ಸ್ಯಾದಿಗಳೂ ಬ್ರಹ್ಮನೆಂದೂ, ಪದ್ಮನಾಭನೂ ಬ್ರಹ್ಮನೆಂದು ಸರ್ವಸಮ್ಮತ. ಅಲ್ಲಿ ಅಂಗಾಂಗಿಭಾವವಿದ್ದರೂ ಹೇಗೆ ಎರಡು ರೂಪಗಳಿಗೂ ಬ್ರಹ್ಮತ್ವವಿದೆಯೋ, ಅದರಂತೆ ಆನಂದಮಯ ಮತ್ತು ಪುಚ್ಛಗಳಿಗೆ ಎರಡಕ್ಕೂ ಅಂಗಾಂಗಿಭಾವವಿದ್ದರೂ ಬ್ರಹ್ಮತ್ವವಿರುತ್ತದೆ ಎಂದು ಅಭಿಪ್ರಾಯ.

**ಪಾದೌ ಬ್ರಹ್ಮ ಕರೌ ಬ್ರಹ್ಮ ಮಧ್ಯಂ ಬ್ರಹ್ಮ ಶಿರೋ ಹರೇಃ ।**
**ಬ್ರಹ್ಮೈವೇದಂ ಸರ್ವಮಿತಿ ಶ್ರುತ್ಯಾ ಹ್ಯೇಷೋಽರ್ಥ ಈರಿತಃ ॥ ೧೧೫ ॥**

**ಅರ್ಥ–** ಹರೇಃ= ಹರಿಯ, ಪಾದೌ= ಪಾದಗಳು, ಬ್ರಹ್ಮ= ಪೂರ್ಣವಾದವು, ಕರೌ= ಹಸ್ತಗಳು, ಬ್ರಹ್ಮ= ಪೂರ್ಣವಾದವು, ಮಧ್ಯಂ= ಮಧ್ಯದೇಹವು, ಬ್ರಹ್ಮ= ಪೂರ್ಣವಾದುದು, ಶಿರಃ= ಶಿರಸ್ಸು, ಬ್ರಹ್ಮ= ಪೂರ್ಣವಾದುದು, ಏಷೋ ಅರ್ಥಃ= ಈ ಅರ್ಥವು, ಬ್ರಹ್ಮೈವೇದಂ ಸರ್ವಮಿತಿ ಶ್ರುತ್ಯಾ= ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯಿಂದ ಹೇಳಲ್ಪಟ್ಟಿದೆ.

**ಅನುವಾದ–** ಹರಿಯ ಪಾದಗಳೂ ಪೂರ್ಣವಾದವು, ಹಸ್ತವೂ ಪೂರ್ಣವಾದವು, ಮಧ್ಯದೇಹವೂ ಪೂರ್ಣವಾದುದು, ಶಿರಸ್ಸೂ ಪೂರ್ಣವಾದುದು, ಸರ್ವಂಖಲ್ವಿದಂ ಬ್ರಹ್ಮ ಎಂಬ ಶ್ರುತಿಯು ಈ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಭಗವತಃ ಸರ್ವಾವಯವಾನಾಮಪಿ ಬ್ರಹ್ಮತೇ ಮೂಲೀಭೂತಂ ಪರೈಃ ಕವಲೀಕೃತಾಂ ಶ್ರುತಿಮುದ್ಧರತಿ – ಪಾದೌ ಬ್ರಹ್ಮೇತಿ ॥ ಹರೇರಿತಿ ಪ್ರತ್ಯೇಕಂ ಸಂಬಂಧಃ । ಬ್ರಹ್ಮೈವೇದಂ ಸರ್ವಮಿತಿ ಬ್ರಹ್ಮಪ್ರತಿಪಾದಿಕಾಯಾಂ ಶ್ರುತೌ ಬ್ರಹ್ಮಣಃ ಕರಚರಣಾದೀನಾಮೇವ ಸನ್ನಿಹಿತತ್ವೇನ ಪ್ರಸ್ತುತತ್ವಾತ್ ಪ್ರಸ್ತುತಪರಿತ್ಯಾಗೇ ಚ ಕಾರಣಾಭಾವಾತ್ ಇದಂ ಸರ್ವಮಿತ್ಯನೇನ ತಚ್ಚರಣಾದಿಕಮೇವ ಪರಾಮೃಶ್ಯತೇ । ಅಂತರಂಗತ್ವಾಚ್ಚ । ನ ತು ಬಹಿರಂಗಂ ಅಸನ್ನಿಹಿತಂ ಚ ಜಗದಿತಿ ಭಾವೇನೋಕ್ತಂ ಪಾದೌ ಬ್ರಹ್ಮೇತ್ಯಾದಿ । ಏಷಃ ಸರ್ವಸ್ಯ ಹರಿಪಾದಾದ್ಯವಯವಸ್ಯ ಬ್ರಹ್ಮತಾರೂಪೋಽರ್ಥಃ । ಇಮಾಂ ಶಾಸ್ತ್ರಮರ್ಯಾದಾಮಜಾನತಂ ಮಾಯಾವಾದಿನಾಂ ಮುಖಗ್ರಾಸೀಭೂತಾಯಾಃ ಶ್ರುತೇರುದ್ಧಾರಾಯೋಽಯಮಿತಿ ಜ್ಞಾತವ್ಯಮ್ ॥ ೧೧೫ ॥

**ವಿವರಣೆ–** ಹರಿಯ ಸರ್ವಾವಯವಗಳೂ ಪೂರ್ಣ ಎಲ್ಲವೂ ಬ್ರಹ್ಮವೇ ಎಂಬ ಪ್ರಮೇಯಕ್ಕೆ ಮೂಲಭೂತವಾದ, ಅದ್ವೈತಿಗಳು ಅರ್ಥಾಂತರವನ್ನು ಹೇಳಿ ಅಪಹಾರ ಮಾಡಿದ ಶ್ರುತಿಯನ್ನು ಉದ್ಧಾರ ಮಾಡುತ್ತಾರೆ. ಸರ್ವಂಖಲ್ವಿದಂ ಬ್ರಹ್ಮ ಎಂಬುದು ಶ್ರುತಿ.

ಇದಂ ಸರ್ವಂ ಎಂದರೆ ಸನ್ನಿಹಿತವಾದ ಸರ್ವವು ಎಂದು ಅರ್ಥ. ಭಗವಂತನನ್ನು ವಿಚಾರ ಮಾಡುವಾಗ ಸನ್ನಿಹಿತವಾದವು ಅವನ ಕರಚರಣಾದಿ ಅವಯವಗಳೇ ಆಗುತ್ತವೆ. ಬಾಹ್ಯವಾದ ಜಡವಾದ ಜಗತ್ತು ಸನ್ನಿಹಿತವಾಗುವುದಿಲ್ಲ. ಆದ್ದರಿಂದ ಇದಂ ಎಂಬ ಪದದಿಂದ ಅವನ ಕರಚರಣಾದಿ ಅವಯವಗಳನ್ನೇ ತಿಳಿದುಕೊಳ್ಳಬೇಕು. ಅವೆಲ್ಲವೂ ಪೂರ್ಣವಾದವುಗಳೆಂದೂ, ಆದ್ದರಿಂದ ಎಲ್ಲವೂ ಬ್ರಹ್ಮನೆಂದೂ ಈ ಶ್ರುತಿಯು ಹೇಳುತ್ತದೆ. ಹೀಗೆ ಹೇಳಿ ರಾಜರು ಅರ್ಥವನ್ನು ತಿಳಿಯದ ಮಾಯಾವಾದಿಗಳು ನುಂಗಿಹಾಕಿದ ಈ ಶ್ರುತಿಯನ್ನು ಪುನರುಜ್ಜೀವನಗೊಳಿಸುತ್ತಾರೆ.

**ಆಬ್ರಹ್ಮಾಂಡಂ ಹಿ ಪಾದೋಽಸ್ಯ ರೋಮ್ಣಿ ಬ್ರಹ್ಮಾಂಡರಾಶಯಃ ।**
**ಶಿಶೋರ್ಮುಖೇ ಜಗತ್ ಸರ್ವಂ ಕಿಂ ನ ಪೂರ್ಣಂ ಪರಾತ್ಮನಃ ॥ ೧೧೬ ॥**

**ಅರ್ಥ–** ಅಸ್ಯ= ಈ ಹರಿಯ, ಪಾದಃ= ಪಾದವು, ಆಬ್ರಹ್ಮಾಂಡಂ ಹಿ= ಬ್ರಹ್ಮಾಂಡದವರೆಗೂ ಇದೆಯಷ್ಟೇ, ಅಸ್ಯ= ಅವನ, ರೋಮ್ಣಿ= ರೋಮಕೂಪಗಳಲ್ಲಿ, ಬ್ರಹ್ಮಾಂಡರಾಶಯಃ= ಬ್ರಹ್ಮಾಂಡಗಳ ರಾಶಿಯೇ ತುಂಬುತ್ತವೆಯಷ್ಟೇ, ಶಿಶೋಃ= ಶಿಶುವಾದ ಕೃಷ್ಣನ, ಮುಖೇ= ಮುಖದಲ್ಲಿ, ಸರ್ವಂ ಜಗತ್= ಎಲ್ಲ ಜಗತ್ತೂ ಇದೆಯಷ್ಟೇ, ಪರಾತ್ಮನಃ= ಪರಮಾತ್ಮನಿಗೆ, ಕಿಂ= ಯಾವುದು, ನ ಪೂರ್ಣಂ= ಪೂರ್ಣವಾಗಿಲ್ಲ?

**ಅನುವಾದ–** ಹರಿಯ ಪಾದವೂ ಸಹ ಬ್ರಹ್ಮಾಂಡದವರೆಗೆ ವ್ಯಾಪಿಸಿದೆ. ಹರಿಯ ರೋಮಕೂಪಗಳಲ್ಲಿ ಅನೇಕ ಬ್ರಹ್ಮಾಂಡಗಳು ಹುದುಗುತ್ತವೆ. ಶಿಶುವಾದ ಕೃಷ್ಣನ ಮುಖದಲ್ಲಿ ಸರ್ವ ಜಗತ್ತೂ ಇದೆ. ಆ ಮಹಾನುಭಾವನಾದ ಪರಮಾತ್ಮನ ಯಾವ ಅವಯವವು ಅಪೂರ್ಣವಾಗಿದೆ?

**ಭಾವವಿಲಾಸಿನೀ–** ಹರೇಃ ಸರ್ವಾವಯವಾನಾಂ ಬ್ರಹ್ಮತ್ವೇ ಪ್ರತ್ಯಕ್ಷಂ ಚ ಪ್ರಮಾಣಯತಿ – ಆಬ್ರಹ್ಮಾಂಡಮಿತಿ ॥ ಆಬ್ರಹ್ಮಾಂಡಂ ಬ್ರಹ್ಮಾಂಡಖರ್ಪರಪರ್ಯಂತಮ್ । ಅಸ್ಯ ನಾರಾಯಣಸ್ಯ। ಅಯಂ ಚಾರ್ಥಃ ತ್ರಿವಿಕ್ರಮಾವತಾರೇ ಸರ್ವೈರ್ದೃಷ್ಟಃ । ರೋಮ್ಣಿ ಬ್ರಹ್ಮಾಂಡರಾಶಯ ಇತ್ಯೇತತ್ಕೋಟಿಬ್ರಹ್ಮಾಂಡವಿಗ್ರಹ ಇತಿ ವಾಸುದೇವಸಹಸ್ರನಾಮಮಧ್ಯಸ್ಥಭಗವನ್ನಾಮಾರ್ಥ-ದ್ರಷ್ಟೃಭಿಃ ಆಂಡಕೋಶೋಬಹಿರಯಂ ಪಂಚಾಶತ್ಕೋಟಿವಿಸ್ತೃತಃ । ದಶೋತ್ತರಾಧಿಕ್ಯೈರ್ಯತ್ರ ಪ್ರವಿಷ್ಟಃ ಪರಮಾಣುವತ್ ॥ ಇತಿ ಭಾಗವತವಾಕ್ಯಾರ್ಥದ್ರಷ್ಟೃಭಿಶ್ಚ ಬ್ರಹ್ಮರುದ್ರಾದಿಭಿ-ರ್ದೃಷ್ಟಮ್ । ಶಿಶೋಃ ಶಿಶುರೂಪಸ್ಯ ವಿಜೃಂಭಣಂ ಕುರ್ವತಃ ಕೃಷ್ಣಸ್ಯ । ಇದಂ ಚ ಯಶೋದಯಾ ದೃಷ್ಟಮ್ । ಪರಾತ್ಮನಃ ಪರಮಾತ್ಮನಃ । ಪಾದರೋಮಮುಖಾದಿಷು ಕಿಂ ಪೂರ್ಣಂ ನ । ಸರ್ವಮಪಿ ಪೂರ್ಣಮೇವ ಬ್ರಹ್ಮೈವೇತಿ ಯಾವತ್ । ಪುಚ್ಛಸ್ಯೈವ ಬ್ರಹ್ಮತಾವಾದಿನೋಽಪಿ ಶ್ರುತಿಬಲಾತ್ ಬೃಹಬೃಂಹವೃದ್ಧಾವಿತಿ ಧಾತೋರ್ವೃಹಾವೃದ್ಧಿರೂಪಪೂರ್ಣತ್ವಸ್ಯೈವ ಬ್ರಹ್ಮಶಬ್ದಾರ್ಥತ್ವಾತ್ ಕಿಂ ನ ಪೂರ್ಣಮಿತ್ಯುಕ್ತಮ್ ॥ ೧೧೬ ॥

**ವಿವರಣೆ–** ಹರಿಯ ಸರ್ವಾಯವಗಳೂ ಪೂರ್ಣವೆಂದೂ ಆದ್ದರಿಂದಲೇ ಬ್ರಹ್ಮಶಬ್ದವಾಚ್ಯವೆಂದೂ ಇಲ್ಲಿ ಪ್ರತಿಪಾದನೆ ಮಾಡುತ್ತಾರೆ. ತ್ರಿವಿಕ್ರಮನ ಅವತಾರದಲ್ಲಿ ಎತ್ತಿದ ಕಾಲು ಬ್ರಹ್ಮಾಂಡದ ಕಟಾಹದವರೆಗೂ ಹೋಯಿತು. ಆದ್ದರಿಂದ ಪಾದವು ಪೂರ್ಣವಾಗಿದೆ ಎಂದು ಸ್ವೀಕರಿಸಬೇಕು. ವಾಸುದೇವ ಸಹಸ್ರನಾಮದಲ್ಲಿ ಕೋಟಿಬ್ರಹ್ಮಾಂಡವಿಗ್ರಹ ಎಂಬ ಒಂದು ನಾಮವಿದೆ. ಕೋಟಿಬ್ರಹ್ಮಾಂಡಗಳು ಅವನ ಶರೀರದ ರೋಮಕೂಪಗಳಲ್ಲಿ ತುಂಬಿವೆ ಎಂದು ಅರ್ಥ. ಭಾಗವತದಲ್ಲಿ **'ಅಂಡಕೋಶೋ ಬಹಿರಯಂ ಮಹದಾದಿಭಿರಾವೃತಃ । ದಶೋತ್ತರಮಿತ್ಯೈತೇರ್ಯತ್ರ ಪ್ರವಿಷ್ಟಃ ಪರಮಾಣುವತ್'** ಎಂಬ ಶ್ಲೋಕದಲ್ಲಿ ಪರಮಾತ್ಮನ ರೋಮಕೂಪದಲ್ಲಿ ಹುದುಗಿರುವ ಒಂದು ಬ್ರಹ್ಮಾಂಡವು ಒಂದು ಪರಮಾಣುವಿನಂತಿದೆ ಎಂಬ ವರ್ಣನೆ ಇದೆ. ಆದ್ದರಿಂದ ರೋಮಕೂಪವೂ ಬೃಹತ್ತಾದುದು, ಪೂರ್ಣವಾದುದು, ಬ್ರಹ್ಮಶಬ್ದವಾಚ್ಯವಾದುದು. ಶಿಶುವಾದ ಕೃಷ್ಣನ ಮುಖದಲ್ಲಿ ಜಗತ್ತೇ ಆಶ್ರಯಿಸಿರುವುದರಿಂದ ಅವನ ಮುಖವೂ ಪೂರ್ಣವಾದುದು. ಇದನ್ನು ಯಶೋದೆಯು ನೋಡಿದ್ದಾಳೆ, ತ್ರಿವಿಕ್ರಮ ಅವತಾರದಲ್ಲಿ ಎಲ್ಲರೂ ನೋಡಿದ್ದಾರೆ. ಆದ್ದರಿಂದ ಪರಮಾತ್ಮನ ಎಲ್ಲಾ ಅವಯವಗಳೂ ಮಹಾವೃದ್ಧಿಯನ್ನು ಹೊಂದಿರುವವು. ಮಹಾವೃದ್ಧಿಯೇ ಬ್ರಹ್ಮಶಬ್ದಾರ್ಥವಾದ್ದರಿಂದ, ಎಲ್ಲವೂ ಬ್ರಹ್ಮಶಬ್ದವಾಚ್ಯವಾದುದು. ಆದ್ದರಿಂದ ಮಧ್ಯದೇಹವೂ ಪೂರ್ಣವಾಗಿದೆ, ಪುಚ್ಛಶಬ್ದದಿಂದ ಹೇಳಲ್ಪಡುವ ಪಾದವೂ ಪೂರ್ಣವಾಗಿದೆ. ಆದ್ದರಿಂದ ಆನಂದಮಯನ ಮಧ್ಯವೂ ಬ್ರಹ್ಮನಾಗಿರಲು ಮತ್ತು ಪುಚ್ಛವೂ ಬ್ರಹ್ಮನಾಗಿರಲು ಯಾವ ಅನುಪತ್ತಿಯೂ ಇಲ್ಲ ಎಂದು ಅಭಿಪ್ರಾಯ.

**ಆನಂದಮಯಮಧ್ಯಸ್ಯಾನಂದೋ ಬ್ರಹ್ಮೇತಿ ಕಿಂ ನ ಸಾ ।**
**ಸಹೇತುಕಂ ಬ್ರಹ್ಮಭಾವಮಾಹ ಸಂಶಯನುತ್ತಯೇ ॥ ೧೧೭ ॥**

**ಅರ್ಥ–** ಆನಂದಮಯಮಧ್ಯಸ್ಯ= ಆನಂದಮಯವಾದ ಮಧ್ಯಭಾಗಕ್ಕೆ, ಸಾ= ಆ ತೈತ್ತಿರೀಯ ಶ್ರುತಿಯೇ, ಸಹೇತುಕಂ= ಹೇತುಕಥನ ಪುರಸ್ಸರವಾಗಿ, ಆನಂದೋ ಬ್ರಹ್ಮೇತಿ= ಆನಂದವು ಬ್ರಹ್ಮ ಎಂದು, ಸಂಶಯನುತ್ತಯೇ= ಸಂಶಯವನ್ನು ಪರಿಹರಿಸುವುದಕ್ಕಾಗಿ, ಬ್ರಹ್ಮಭಾವಂ= ಬ್ರಹ್ಮತ್ವವನ್ನು, ಕಿಂ ನಾಹ= ಹೇಳಲಿಲ್ಲವೇ?

**ಅನುವಾದ–** ಆನಂದ ಆತ್ಮಾ ಎಂದು ಹೇಳಿದ ಆನಂದಮಯನ ಮಧ್ಯಭಾಗವನ್ನೇ ಅದೇ ತೈತ್ತಿರೀಯ ಶ್ರುತಿಯು ಭೃಗುವಲ್ಲಿಯಲ್ಲಿ ಆನಂದೋಬ್ರಹ್ಮೇತಿವ್ಯಜಾನಾತ್ ಎಂದು ಹೇಳಿ ಜಗತ್ಸೃಷ್ಟಿಕರ್ತೃತ್ವಾದಿ ಹೇತುಕಥನ ಪುರಸ್ಸರವಾಗಿ ಆನಂದಮಯನು ಬ್ರಹ್ಮನೋ, ಅಲ್ಲವೋ ಎಂಬ ಸಂಶಯವನ್ನು ಪರಿಹರಿಸುವುದಕ್ಕಾಗಿ ಬ್ರಹ್ಮತ್ವವನ್ನೇ ಹೇಳಲಿಲ್ಲವೇ?

**ಭಾವವಿಲಾಸಿನೀ**—ಪ್ರಬಲಶ್ರುತ್ಯಂತರವಿರೋಧಂ ಚಾಹ—ಆನಂದಮಯಮಧ್ಯಸ್ಯೇತಿ ॥ ಆನಂದ ಆತ್ಮೇತ್ಯುಕ್ತನಂದಾಖ್ಯ ಮಧ್ಯಸ್ಯೇತ್ಯರ್ಥಃ। ಸಾ ತೈತ್ತಿರೀಯಶ್ರುತಿರೇವ ಆನಂದೋಬ್ರಹ್ಮೇತಿ ವ್ಯಜಾನಾದಿತಿ ಭೃಗುವಲ್ಯಾಂ ಸಹೇತುಕಂ 'ಆನಂದಾದ್ಧ್ಯೇವಖಲ್ವಿಮಾನಿಭೂತಾನಿ ಜಾಯಂತೇ। ಆನಂದೇನಜಾತಾನಿ ಜೀವಂತಿ। ಆನಂದಂ ಪ್ರಯಂತ್ಯಭಿಸಂವಿಶಂತೀತಿ' ಬ್ರಹ್ಮಲಕ್ಷಣಾಖ್ಯಹೇತುಸಹಿತತಯಾ ಬ್ರಹ್ಮಭಾವಂ ಸಂಶಯನುತ್ತಯೇಽಽನಾಹ ಕಿಮ್। ಮಧ್ಯಸ್ಯೇತ್ಯಾಪಾತಾರ್ಥಮಾದಾಯೋಕ್ತಮ್। ವಸ್ತುಗತ್ಯಾ ಬ್ರಹ್ಮವಲ್ಲೀಸ್ಥಾನ್ನಮಯಾದಿ ಪ್ರಕರಣಪಂಚಕೋಕ್ತಾನ್ನಮಯಪ್ರಾಣಮಯ ಮನೋಮಯವಿಜ್ಞಾನಮಯಾನಂದ ಮಯಾನಾಮೇವಾಸ್ಯಾಂ ಭೃಗುವಲ್ಯಾಮಪಿ ತಸ್ಮಾ ಏತತ್ ಪ್ರೋವಾಚೇತಿ ಏತತ್ ಪದೇನಪರಾಮೃಶ್ಯಾನ್ನಾದಿ ಶಬ್ದೈರಾಖ್ಯಾನಾತ್ ಆನಂದಾದಿಪದೈರಪಿ ಸೂತ್ರೇ ಸ್ಪಷ್ಟೋಕ್ತಸೂಚಿತಾನಾಮಾನಂದಮಯಾದೀನಾಮೇವ ಸಹೇತುಕಂ ಬ್ರಹ್ಮತ್ವೋಪದೇಶ ಇತಿ ದ್ರಷ್ಟವ್ಯಮ್। ಅತೋ ನ ಕೇವಲಂ ಸೂತ್ರಪರಿತ್ಯಾಗೀ ಪರಕೀಯಭಾಷ್ಯಕಾರಃ। ಉಕ್ತವಿಧಯಾ ಪ್ರಬಲಬಹುತರಶ್ರುತಿತ್ಯಾಗೀ ಚೇತಿ ನ ವೈದಿಕಸಭಾಸು ಶ್ಲಾಘಾಯೋಗ್ಯಃ ॥ ೧೧೭ ॥

**ವಿವರಣೆ**— ಆನಂದ ಆತ್ಮಾ ಎಂಬುವುದು ಬ್ರಹ್ಮವಲ್ಲಿಯ ವಾಕ್ಯ. ಅದೇ ತೈತ್ತಿರೀಯ ಶ್ರುತಿಯಲ್ಲಿ ಭೃಗುವಲ್ಲಿಯಲ್ಲಿ ಆನಂದೋಬ್ರಹ್ಮೇತಿವ್ಯಜಾನಾತ್ ಎಂಬ ವಾಕ್ಯವು ಬರುತ್ತದೆ. ಹಿಂದೆ ಹೇಳಿದ ಆನಂದಮಯನನ್ನೇ ಇಲ್ಲಿ ಆನಂದಶಬ್ದದಿಂದ ಪರಾಮರ್ಶೆ ಮಾಡಿ ಅವನು ಬ್ರಹ್ಮ ಎಂದು ಹೇಳುತ್ತದೆ. ಅವನ ಬ್ರಹ್ಮತ್ವವನ್ನು ಉಪಪಾದನೆ ಮಾಡಲು ಆನಂದಾದ್ಧ್ಯೇವಖಲ್ವಿಮಾನಿ ಭೂತಾನಿ ಜಾಯಂತೇ ಎಂಬ ವಾಕ್ಯವಿಶೇಷವು ಆ ಆನಂದನಿಗೆ ಸೃಷ್ಟಿಕರ್ತೃತ್ವ, ಸ್ಥಿತಿಕರ್ತೃತ್ವ, ಸಂಹಾರಕರ್ತೃತ್ವ ಮೊದಲಾದ ಧರ್ಮಗಳು ಇವೆ ಎಂದು ಹೇಳಿ, ಆನಂದನು ಬ್ರಹ್ಮನೆಂದು ಸಮರ್ಥಿಸುತ್ತದೆ. ಆದ್ದರಿಂದ ಆನಂದಮಯನಿಗೆ ಬ್ರಹ್ಮತ್ವವು ಪ್ರಾಪ್ತವಾಗುವುದಿಲ್ಲವೇ? ವಸ್ತು ಸ್ಥಿತಿಯಲ್ಲಿ ಬ್ರಹ್ಮವಲ್ಲಿಯಲ್ಲಿ ಹೇಳಿದ ಅನ್ನಮಯಾದಿ ಪಂಚ ವಸ್ತುವನ್ನೂ ಭೃಗುವಲ್ಲಿಯಲ್ಲಿ ತಸ್ಮಾತ್ ಏತತ್ ಪ್ರೋವಾಚ ಎಂಬ ವಾಕ್ಯದಲ್ಲಿ ಏತತ್ ಪದದಿಂದ ಪರಾಮರ್ಶೆಯನ್ನು ಮಾಡಿ ಅನ್ನಾದಿಶಬ್ದಗಳಿಂದ ಅನ್ನಮಯಾದಿಗಳನ್ನು ಹೇಳುವುದರಿಂದ ಆನಂದಶಬ್ದದಿಂದ ಆನಂದಮಯನನ್ನೂ ಪರಾಮರ್ಶೆ ಮಾಡಿ, ಎಲ್ಲದಕ್ಕೂ ಬ್ರಹ್ಮತ್ವವನ್ನು ಹೇಳುತ್ತದೆ. ಆನಂದಮಯನ ಮಧ್ಯಕ್ಕೆ ಮಾತ್ರವಲ್ಲ. ಆದ್ದರಿಂದ ಪರಕೀಯ ಭಾಷ್ಯಕಾರನು ಕೇವಲ ಸೂತ್ರವನ್ನು ಪರಿತ್ಯಾಗ ಮಾಡಿರುವುದಲ್ಲ, ಅನೇಕ ಶ್ರುತಿಗಳನ್ನೂ ಪರಿತ್ಯಾಗ ಮಾಡಿದವನು ಎಂದು ಅಭಿಪ್ರಾಯ.

**ಅಂಗಸ್ಯ ಪೂರ್ಣತಾಯಾಂ ಹಿ ಕಿಂ ವಾಚ್ಯಾಂಗಿನಿ ಪೂರ್ಣತಾ ।**
**ಪದಸ್ಥೌಲ್ಯಾದತಿಸ್ಥೌಲ್ಯಂ ಕಿಂ ನಾಸ್ತೀಭಕಲೇವರೇ ॥ ೧೧೮ ॥**

**ಅರ್ಥ**— ಅಂಗಸ್ಯ= ಅಂಗಕ್ಕೆ, ಪೂರ್ಣತಾಯಾಂ ಹಿ= ಪೂರ್ಣತ್ವವಿದ್ದರೆ, ಅಂಗಿನಿ= ಅಂಗಿಯಲ್ಲಿ ಎಂದರೆ ಅವಯವಿಯಲ್ಲಿ, ಪೂರ್ಣತಾ= ಪೂರ್ಣತ್ವವು, ಕಿಂ ವಾಚ್ಯಂ= ಬೇರೆ

ಹೇಳಲ್ಪಡಬೇಕೇನು, ಇಭಕಲೇವರೇ= ಆನೆಯ ಶರೀರದಲ್ಲಿ, ಪದಸೌಢ್ಲ್ಯಾತ್= ಪಾದದ ಸ್ಥೌಲ್ಯದಿಂದ, ಅತಿ ಸೌಢ್ಲ್ಯಂ= ಬಹಳ ಸ್ಥೂಲತ್ವವು, ಕಿಂ ನಾಸ್ತಿ= ಇಲ್ಲವೇನು?

**ಅನುವಾದ–** ಅಂಗವು ಪೂರ್ಣವಾದ ಮೇಲೆ ಅಂಗಿಯಲ್ಲಿ ಪೂರ್ಣತೆಯನ್ನು ಮತ್ತೊಮ್ಮೆ ಹೇಳಬೇಕಾಗಿಲ್ಲ. ಆನೆಯ ಪಾದವು ಸ್ಥೂಲವಾಗಿದೆ ಎಂದು ಹೇಳಿದರೆ, ಆನೆಯ ಶರೀರವೂ ಸ್ಥೂಲವಾಗಿದೆ ಎಂದು ಸಹಜವಾಗಿ ತಿಳಿಯುತ್ತದೆ.

**ಭಾವವಿಲಾಸಿನೀ–** ಇದಾನೀಂ ಪರಪ್ರಕ್ರಿಯಾಮೂಲಯುಕ್ತಿಬಲಾದೇವಾನಂದಮಯಸ್ಯ ಬ್ರಹ್ಮತಾಂ ಸಾಧಯತಿ – **ಅಂಗಸ್ಯೇತಿ** ॥ ಅಂಗಸ್ಯ ಪುಚ್ಛಪದೋದಿತಪಾದರೂಪಾಂಗಸ್ಯ । ಅಂಗಿನಿ ತಾದೃಶ- ಪಂಚಾಂಗಭರಿತಾನಂದಮಯೇ । ತತ್ರ ದೃಷ್ಟಾಂತಮಾಹ – **ಪದಸೌಢ್ಲ್ಯಾದಿತಿ** ॥ ೧೧೮ ॥

**ವಿವರಣೆ–** ಈಗ ಪರಪ್ರಕ್ರಿಯಾಮೂಲವಾದ ಯುಕ್ತಿಯಿಂದಲೇ ಆನಂದಮಯನಿಗೆ ಬ್ರಹ್ಮತ್ವವನ್ನು ಸಾಧಿಸುತ್ತಾರೆ. ಪುಚ್ಛವು ಆನಂದಮಯನ ಅಂಗ. ಅದೇ ಬ್ರಹ್ಮ ಎಂದರೆ ಪೂರ್ಣವಾಗಿದ್ದ ಮೇಲೆ ಅವಯವಿಯಾದ ಆನಂದಮಯನು ಪೂರ್ಣನಾಗಿರಲೇಬೇಕು, ಎಂದರೆ ಅವನೂ ಬ್ರಹ್ಮನೇ ಆಗಿರಬೇಕು ಎಂದು ಅಭಿಪ್ರಾಯ. ಇದನ್ನು ಗಜದ ಪಾದ ಮತ್ತು ದೇಹದ ಸ್ಥೌಲ್ಯದ ದೃಷ್ಟಾಂತದಿಂದ ಉಪಪಾದನೆ ಮಾಡಿದ್ದಾರೆ.

**ಪುಚ್ಛೇ ಬ್ರಹ್ಮಪದಾದನ್ಯನ್ನ ಬ್ರಹ್ಮ ಯದಿ ತೇ ಮತೇ ।**
**ತರ್ಹ್ಯನಾನಂದತಾ ಪುಚ್ಛೇ ಮಧ್ಯಸ್ಯಾನಂದತಾಶ್ರುತೇಃ ॥ ೧೧೯ ॥**

**ಕ್ರಯವಿಕ್ರಯಪಕ್ಷೇ ಸ್ಯಾದುಭಯೋಶ್ಚ ದ್ವಿರೂಪತಾ ।**
**ತದುತ್ಸೂತ್ರಸ್ವಭಾವತ್ವಾದೇವ ಸೂತ್ರವಿಸರ್ಜನಂ ॥ ೧೨೦ ॥**

**ಅರ್ಥ–** ಪುಚ್ಛೇ= ಪುಚ್ಛದಲ್ಲಿ, ಬ್ರಹ್ಮಪದಾತ್= ಬ್ರಹ್ಮಪದ ಶ್ರವಣವಿರುವುದರಿಂದ, ತೇ ಮತೇ= ನಿನ್ನ ಮತದಲ್ಲಿ, ಅನ್ಯತ್= ಬೇರೆಯಾದ ಮಧ್ಯಭಾಗವು, ಯದಿ= ಒಂದು ಪಕ್ಷ, ಬ್ರಹ್ಮ ನ= ಬ್ರಹ್ಮನಾಗದಿದ್ದರೆ, ತರ್ಹಿ= ಆಗ, ಮಧ್ಯಸ್ಯ= ಆತ್ಮಶಬ್ದದಿಂದ ಹೇಳಿದ ಮಧ್ಯಭಾಗಕ್ಕೆ, ಆನಂದತಾ ಶ್ರುತೇಃ= ಆನಂದ ಪದದ ಶ್ರವಣವಿರುವುದರಿಂದ, ಪುಚ್ಛೇ= ಪುಚ್ಛಕ್ಕೆ, ಅನಾನಂದತ್ವಂ= ಆನಂದತ್ವಾಭಾವವು, (ಸ್ಯಾತ್= ಉಂಟಾಗುತ್ತದೆ).

ಕ್ರಯವಿಕ್ರಯಪಕ್ಷೇ= ಎರಡನ್ನೂ ಎರಡು ಕಡೆಯೂ ವಿನಿಮಯ ಮಾಡಿಕೊಂಡರೆ, ಉಭಯಸ್ಯ= ಎರಡಕ್ಕೂ, ದ್ವಿರೂಪತಾ= ದ್ವಿರೂಪತ್ವವು, ಸ್ಯಾತ್= ಉಂಟಾಗುತ್ತದೆ, ತತ್= ಆದ್ದರಿಂದ, ಉತ್ಸೂತ್ರಸ್ವಭಾವತ್ವಾದೇವ= ಸೂತ್ರವಿರುದ್ಧವಾಗಿ ಭಾಷ್ಯವನ್ನು ಬರೆಯುವ ಸ್ವಭಾವದಿಂದಲೇ, ಸೂತ್ರವಿಸರ್ಜನಂ= ಸೂತ್ರದ ಪರಿತ್ಯಾಗವನ್ನು (ಮಾಡಿದ್ದೀಯೆ).

**ಅನುವಾದ–** ಪುಚ್ಛದಲ್ಲಿ ಬ್ರಹ್ಮಪದದ ಶ್ರವಣವಿರುವುದರಿಂದ ಅನ್ಯವು ಎಂದರೆ ಮಧ್ಯಭಾಗವು ಬ್ರಹ್ಮನಲ್ಲ ಎಂದು ಹೇಳುವುದಾದರೆ ಆಗ ಮಧ್ಯಭಾಗದಲ್ಲಿ

ಆನಂದಪದ ಶ್ರವಣವಿರುವುದರಿಂದ ಪುಚ್ಛವು ಆನಂದರೂಪವಲ್ಲ ಎಂದು ಆಗಬೇಕಾಗುತ್ತದೆ. ಮಧ್ಯಭಾಗದಲ್ಲಿ ಹೇಳಿದ ಆನಂದಪದವನ್ನು ಪುಚ್ಛದಲ್ಲಿಯೂ ತಂದು ಪುಚ್ಛವು ಆನಂದರೂಪ ಎಂದು ಹೇಳುವುದಾದರೆ, ಪುಚ್ಛದಲ್ಲಿ ಶ್ರುತವಾದ ಬ್ರಹ್ಮಶಬ್ದವನ್ನು ಆತ್ಮಶಬ್ದದಿಂದ ಹೇಳಲ್ಪಟ್ಟ ಮಧ್ಯಭಾಗದಲ್ಲಿಯೂ ತಂದು ಮಧ್ಯಭಾಗವನ್ನೂ ಬ್ರಹ್ಮನೆಂದು ಹೇಳು. ಪುಚ್ಛಕ್ಕೂ ಮತ್ತು ಮಧ್ಯಭಾಗಕ್ಕೂ ಬ್ರಹ್ಮತ್ವವೂ ಮತ್ತು ಆನಂದತ್ವವೂ ಇರಲಿ. ಅದನ್ನು ಬಿಟ್ಟು ಸೂತ್ರವನ್ನು ಪರಿತ್ಯಾಗ ಮಾಡಿ ಸೂತ್ರಕ್ಕೆ ವಿರುದ್ಧವಾದ ಅರ್ಥವನ್ನು ಹೇಳುವುದು ಸೂತ್ರವನ್ನು ಮೀರುವ ಸ್ವಭಾವದಿಂದಲೇ ನಿನಗೆ ಇರುತ್ತದೆ.

**ಭಾವವಿಲಾಸಿನೀ–** ಕಿಂಚ ಪುಚ್ಛೇ ಬ್ರಹ್ಮಪದಶ್ರವಣಾತ್ ಮಧ್ಯಸ್ಯಾಬ್ರಹ್ಮತಾಯಾಂ ಮಧ್ಯೇ ಆನಂದಪದಶ್ರವಣಾತ್ ಪುಚ್ಛಸ್ಯಾನಾನಂದತ್ವಂ ಸ್ಯಾತ್ । ಅನ್ಯೋನ್ಯವಿನಿಮಯೇ ತಯೋ-ರಪ್ಯುಭಯರೂಪತಾ ಸಿದ್ಧೇತ್ಯಾಹ – **ಪುಚ್ಛ** ಇತಿ ॥ ಅನ್ಯತ್ ಮಧ್ಯಮ್ । ತತ್ತಸ್ಮಾತ್ ಯುಕ್ತಿಶ್ರುತಿಬಾಧಿತತ್ವಾತ್ । ಉತ್ ಸೂತ್ರಸ್ವಭಾವತ್ವಾತ್ ಉದ್ಗತಂ ಸೂತ್ರಂ ಯಜ್ಞೋಪವೀತಂ ತತ್ ಸ್ವಭಾವತ್ವಾತ್ । ಸೂತ್ರರಹಿತಸಂನ್ಯಾಸವೇಷಧಾರಿತ್ವಾದಿತ್ಯರ್ಥಃ । ಸೂತ್ರವಿಸರ್ಜನಂ ಬ್ರಹ್ಮಸೂತ್ರ ವಿಸರ್ಜನಮ್ ॥ ೧೧೯-೧೨೦ ॥

**ವಿವರಣೆ–** ಬ್ರಹ್ಮ ಪುಚ್ಛಂ ಪ್ರತಿಷ್ಠಾ ಎಂದು ಪುಚ್ಛದಲ್ಲಿ ಬ್ರಹ್ಮಪದಶ್ರವಣವಿದೆ. ಆನಂದ ಆತ್ಮಾ ಎಂದು ಆತ್ಮನಲ್ಲಿ ಎಂದರೆ ಮಧ್ಯಭಾಗದಲ್ಲಿ ಆನಂದಪದಶ್ರವಣವಿದೆ. ಆತ್ಮನಲ್ಲಿ ಬ್ರಹ್ಮಪದ ಶ್ರವಣವಿಲ್ಲದೇ ಇರುವುದರಿಂದ, ಆತ್ಮನು ಬ್ರಹ್ಮನಾಗದಿದ್ದರೆ ಪುಚ್ಛದಲ್ಲಿ ಆನಂದಶ್ರುತಿ ಇಲ್ಲದಿರುವುದರಿಂದ ಪುಚ್ಛವು ಆನಂದವಲ್ಲ ಎಂದು ಹೇಳಬೇಕಾಗುತ್ತದೆ. ಆತ್ಮನಲ್ಲಿ ಹೇಳಿದ ಆನಂದಪದವನ್ನು ಪುಚ್ಛಕ್ಕೂ ತಂದು ಅನ್ವಯಿಸಿ, ಪುಚ್ಛವೂ ಆನಂದರೂಪ ಎಂದು ಹೇಳುವುದಾದರೆ, ಪುಚ್ಛದಲ್ಲಿ ಶ್ರುತವಾದ ಬ್ರಹ್ಮಶಬ್ದವನ್ನು ಆತ್ಮನಲ್ಲಿಯೂ ತಂದು ಆತ್ಮವೂ ಬ್ರಹ್ಮನೆಂದು ಹೇಳಬೇಕು. ಅದನ್ನು ಬಿಟ್ಟು ಆತ್ಮನು ಬ್ರಹ್ಮನಲ್ಲ ಪುಚ್ಛನೇ ಬ್ರಹ್ಮನೆಂದು ಹೇಳುವುದು ಸೂತ್ರಕ್ಕೆ ವಿರುದ್ಧವಾದುದು. ಹೀಗೆ ಬ್ರಹ್ಮಸೂತ್ರವನ್ನು ಪರಿತ್ಯಾಗ ಮಾಡುವುದು ಯಜ್ಞೋಪವೀತವನ್ನೂ ಪರಿತ್ಯಾಗಮಾಡಿ ಸಂನ್ಯಾಸಿವೇಷ ಧರಿಸಿದ ನಿನ್ನ ಸ್ವಭಾವ ಎಂದು ಇಲ್ಲಿ ಅಭಿಪ್ರಾಯಪಡುತ್ತಾರೆ.

**ಯಸ್ತ್ವಂ ಸಮನ್ವಯಾಧ್ಯಾಯಾತ್ ಪಾದಮೇಕಂ ವ್ಯಯೋಜಯಃ ।**
**ತಸ್ಯಾನಂದಮಯಾತ್ ಪುಚ್ಛವಿಚ್ಛೇದೇ ಕಿಂ ಭಯಂ ಚ ತತ್ (ತವ)॥ ೧೨೧ ॥**

**ಅರ್ಥ–** ಯಸ್ತ್ವಂ= ಯಾವ ನೀನು, ಸಮನ್ವಯಾಧ್ಯಾಯಾತ್= ಸಮನ್ವಯಾಧ್ಯಾಯದಿಂದ, ಏಕಂ ಪಾದಂ= ಒಂದು ಪಾದವನ್ನೇ, ವ್ಯಯೋಜಯಃ= ವಿಯೋಗವನ್ನು ಮಾಡಿದೆಯೋ, ತಸ್ಯ= ಅಂತಹ ನಿನಗೆ, ಆನಂದಮಯಾತ್=

ಆನಂದಮಯನಿಂದ, ಪುಚ್ಛವಿಚ್ಛೇದೇ= ಪುಚ್ಛವನ್ನು ಬೇರ್ಪಡಿಸಲು, ಕಿಂ ತತ್ ಭಯಂ= ಯಾವ ಭಯವಿದೆ?

**ಅನುವಾದ–** ಸಮನ್ವಯಾಧ್ಯಾಯದಿಂದ ಚತುರ್ಥಪಾದವನ್ನೇ ವಿಚ್ಛೇದ ಮಾಡಿದ ನಿನಗೆ ಆನಂದಮಯನಿಂದ ಪುಚ್ಛವನ್ನು ವಿಚ್ಛೇದಗೊಳಿಸಲು ಯಾವ ಭಯವಿದೆ?

**ಭಾವವಿಲಾಸಿನೀ–** ಬಹುಸೂತ್ರವಿರುದ್ಧಭಾಷಿಣಃ ಏಕಸೂತ್ರವಿರುದ್ಧಭಾಷಿತ್ವಂ ಕಿಮಪೂರ್ವಮಿತ್ಯಾಹ – **ಯಸ್ತ್ವಮಿತಿ** ॥ ಸಮನ್ವಯಾಧ್ಯಾಯಾತ್ ತತ್ತುಸಮನ್ವಯಾದಿತಿ ಪ್ರತಿಜ್ಞಾತಸಮನ್ವಯಪ್ರತಿಪಾದಕಪ್ರಥಮಾಧ್ಯಾಯಾತ್ ಏಕಂ ಪಾದಂ ಚತುರ್ಥಪಾದಮ್ । ವ್ಯಯೋಜಯಃ ಸಾಂಖ್ಯಮತನಿರಾಕರಣಪರತಯಾ ಭಿನ್ನಾರ್ಥಮಕರೋಃ । ಪುಚ್ಛವಿಚ್ಛೇದೇ ಪುಚ್ಛಸ್ಯ ವಿಜಾತೀಯತ್ವಕರಣೇ ಆನಂದಮಯಸೂತ್ರವಿರುದ್ಧಭಾಷಿತ್ವ ಇತಿ ಯಾವತ್ । ಅಥವಾ ಪಾದವಿಚ್ಛೇದಕಾರಿತ್ವಂ ಪರಸ್ಯ ಸ್ವಭಾವ ಇತಿ ಶ್ಲೋಕೇನಾನೇನೋಕ್ತಮ್ ॥ ೧೨೧ ॥

**ವಿವರಣೆ–** ಅನೇಕ ಸೂತ್ರಗಳಿಗೆ ವಿರುದ್ಧವಾಗಿ ಮಾತನಾಡುವ ಸ್ವಭಾವವುಳ್ಳ ನಿನಗೆ ಒಂದು ಸೂತ್ರಕ್ಕೆ ವಿರುದ್ಧವಾಗಿ ಮಾತನಾಡುವುದು ಯಾವ ಆಶ್ಚರ್ಯ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಸಮನ್ವಯಾಧ್ಯಾಯದಲ್ಲಿ ನಾಲ್ಕು ಪಾದಗಳಿವೆ. ಆದರೆ ಮಾಯಾವಾದಿಗಳ ಪ್ರಕಾರ ನಾಲ್ಕು ಪಾದಗಳೂ ಸಮನ್ವಯವನ್ನು ಹೇಳುವುದಿಲ್ಲ. ಮೊದಲನೆಯ ಅಧ್ಯಾಯದ ನಾಲ್ಕನೆಯ ಪಾದವು ಸಾಂಖ್ಯರು ಅಂಗೀಕರಿಸುವ ಪ್ರಧಾನಕ್ಕೆ ಕಾರಣತ್ವವನ್ನು ನಿರಾಕರಣೆ ಮಾಡುತ್ತದೆ ಎಂದು ಹೇಳಿ ಅವರು, ಸಮನ್ವಯಾಧ್ಯಾಯದಿಂದ ನಾಲ್ಕನೆಯ ಪಾದವನ್ನೇ ವಿಚ್ಛೇದಿಸುತ್ತಾರೆ. ಅಂತಹವರಿಗೆ ಆನಂದಮಯನಿಂದ ಪುಚ್ಛವನ್ನು ಬೇರ್ಪಡಿಸಿ ಪುಚ್ಛವೇ ಬ್ರಹ್ಮ, ಆನಂದಮಯನು ಬ್ರಹ್ಮನಲ್ಲ ಎಂದು ಹೇಳುವುದಕ್ಕೆ ಯಾವ ಭಯವೂ ಇಲ್ಲವೆಂದು ಅಭಿಪ್ರಾಯ.

**ಪ್ರಾಚೀನಚುಂಬನೇ ಮಂದ ದಂತಭಂಗಸ್ತವೋಚಿತಃ ।**
**ನ ವ್ಯಾಸಸ್ಯ ಖಲಶ್ರೇಣೀದಂತಭಂಗಕೃತೋ ಹರೇಃ ॥ ೧೨೨ ॥**

**ಅರ್ಥ–** ಮಂದ= ಎಲೈ ಅಜ್ಞನೇ, ಪ್ರಾಚೀನಚುಂಬನೇ= ಪ್ರಥಮ ಚುಂಬನದಲ್ಲಿ, ತವ= ನಿನಗೆ, ದಂತಭಂಗಃ= ದಂತಭಂಗವು, ಉಚಿತಃ= ಯೋಗ್ಯವಾದುದು, ಖಲಶ್ರೇಣೀದಂತ ಭಂಗಕೃತಃ= ದುರ್ಜನರ ಸಮೂಹದ ದಂತಭಂಗವನ್ನು ಮಾಡುವ, ವ್ಯಾಸಸ್ಯ ಹರೇಃ= ವ್ಯಾಸರೂಪನಾದ ಹರಿಗೆ, ನ= ಯೋಗ್ಯವಾದುದಲ್ಲ.

**ಅನುವಾದ–** ಎಲೈ ಮಂದನೇ! ಪ್ರಥಮಚುಂಬನೇ ದಂತಭಂಗಃ ಎಂಬ ಗಾದೆಯು ನಿನಗೇ ಯೋಗ್ಯವಾಗಿದೆ. ಎಲ್ಲ ದುಷ್ಟರ ಹಲ್ಲುಗಳನ್ನು ಮುರಿಯುವ ವ್ಯಾಸರೂಪನಾದ ಹರಿಗೆ ಅದು ಎಂದೂ ಉಚಿತವಲ್ಲ.

**ಭಾವವಿಲಾಸಿನೀ–** ಕಿಂಚ ಯುಷ್ಮದಸ್ಮತ್‌ಪ್ರತ್ಯಯಗೋಚರಯೋರಿತ್ಯಾರಂಭಭಾಷ್ಯ ಏವ ಸ್ವಾಭಿಮತಮಂಗಲಪರಿತ್ಯಾಗಾತ್ ಪ್ರಥಮತ ಏವಾಬದ್ಧಕಥನಂ ತವೈವೋಚಿತಮ್ । ಸರ್ವಜ್ಞಸ್ಯ ತು ವ್ಯಾಸಸ್ಯ ಪ್ರಾಥಮಿಕೇ ಸಮನ್ವಯಾರಂಭ ಸೂತ್ರೇ ಕಥಮಬದ್ಧಕಥನಂ ಯುಕ್ತಮಿತ್ಯನ್ಯಾಪದೇಶೇನಾಹ–**ಪ್ರಾಚೀನೇತಿ** ॥ ಪ್ರಥಮಚುಂಬನ ಇತ್ಯರ್ಥಃ ॥ ತವೈವೋಚಿತ ಇತ್ಯನೇನ ಸಂನ್ಯಾಸಿತಯಾಽನಭಿಮತನಾರೀಮುಖಚುಂಬನೇ ಮಾನುಷತ್ವಾತ್ ಯಸ್ತ್ವಾದ್ಯತೇ ದಯಿತಯಾ ಪ್ರಣಯಾಪರಾಧಾದಿತ್ಯಮರುಕೇ ತ್ವಯ್ಯೈವೋಕ್ತತ್ವಾಚ್ಚ ದಂತಭಂಗಃ ಸಂಭಾವಿತ ಇತಿ ಸೂಚಯತಿ । ವ್ಯಾಸಸ್ಯತ್ವಚ್ಛೇದ್ಯಾಭೇದ್ಯ ಹರಿರೂಪತ್ವಾತ್ ಖಲಶ್ರೇಣೀದಂತಭಂಗಕಾರಿತ್ವಾಚ್ಚ ಜಗದ್ಗ್ರಾಸೇಪಿ ನ ದಂತಭಂಗೋ ನ್ಯಾಯ್ಯ ಇತ್ಯಾಪಾತಪ್ರತೀಯಮಾನದಂತಭಂಗ ಶಬ್ದಾರ್ಥಸ್ಯಾ-ಯಮಪಿ ಭಾವಃ । ಧ್ವನಿತೋಽರ್ಥಸ್ತುಸಂಗತಿಕಥನಕಾಲ ಏವೋಕ್ತೋ ದ್ರಷ್ಟವ್ಯಃ ॥ ೧೨೨ ॥

**ವಿವರಣೆ–** ಭಾಷ್ಯವನ್ನು ಬರೆಯಲು ಹೊರಟ ನೀನು ಯಾವ ಮಂಗಳಾಚರಣೆಯೂ ಇಲ್ಲದೆ, 'ಯುಷ್ಮದಸ್ಮತ್‌ಪ್ರತ್ಯಯಗೋಚರಯೋಃ' ಎಂದು ಭಾಷ್ಯವನ್ನು ಬರೆಯಲು ಹೊರಟಿದ್ದು ಮೊದಲನೆಯ ಅಬದ್ಧಕಥನ. ಅದು ನಿನಗೇ ಉಚಿತವಾದುದು. ಸರ್ವಜ್ಞರಾದ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸುವಾಗ, ಬ್ರಹ್ಮಸೂತ್ರಗಳ ಮೊದಲನೆ ಅಧ್ಯಾಯವಾದ ಸಮನ್ವಯಾಧ್ಯಾಯದಲ್ಲಿ ಸಮನ್ವಯಕ್ಕೆ ಸಂಬಂಧಿಸದ ಪ್ರಧಾನ ಕಾರಣತ್ವ ನಿರಾಕರಣ ಪರವಾದ ಸೂತ್ರಗಳನ್ನು ಎಂದೂ ನಿನ್ನಂತೆ ಅಬದ್ಧವಾಗಿ ಸೇರಿಸುವುದಿಲ್ಲ. ಏಕೆಂದರೆ ಅವು ಸಮನ್ವಯವನ್ನೇ ಪ್ರತಿಪಾದನೆ ಮಾಡುತ್ತವೆ ಹೊರತು ಪ್ರಧಾನಕಾರಣತ್ವವನ್ನು ನಿರಾಸೆ ಮಾಡುವುದಿಲ್ಲ. ಹಾಗೆಯೇ, ಸಮನ್ವಯವನ್ನು ಪ್ರತಿಜ್ಞೆಯನ್ನು ಮಾಡಿ, ಆನಂದಮಯಾಧಿಕರಣದಿಂದ ಪ್ರಾತಿಸ್ವಿಕವಾಗಿ ಸಮನ್ವಯವನ್ನು ಪ್ರತಿಪಾದಿಸಲು ಹೊರಟ ನೀನು ಆನಂದಮಯನು ಬ್ರಹ್ಮನಲ್ಲ ಎಂದು ಹೇಳುತ್ತಿದ್ದೀಯೆ. ಇದು ಪ್ರಥಮಚುಂಬನದಲ್ಲಿ ಉಂಟಾದ ದಂತಭಂಗ. ವ್ಯಾಸರು ಆನಂದಮಯಾಧಿ-ಕರಣದಿಂದ ಹಿಡಿದು, ಅಧ್ಯಾಯದ ಕೊನೆಯವರೆಗೆ ಪ್ರಾಯಶಃ ಸಮನ್ವಯವನ್ನೇ ಪ್ರತಿಪಾದನೆ ಮಾಡುತ್ತಾ, ಆನಂದಮಯನು ಬ್ರಹ್ಮನೇ ಎಂದು ಹೇಳುತ್ತಾರೆ. ಆದ್ದರಿಂದ ಅಬದ್ಧ ಭಾಷಣವು ನಿನಗೆ ಮಾತ್ರ ಯೋಗ್ಯವಾದುದು. ಅವರಿಗೆ ಯೋಗ್ಯವಾದುದಲ್ಲ ಎಂದು ಅಭಿಪ್ರಾಯ.

**ಯದ್ಯಾನಂದಮಯಃ ಕೋಶಸ್ತತ್ಪುಚ್ಛೇ ಬ್ರಹ್ಮತಾ ಕಥಂ ।**
**ಸಾಕಾರಸ್ಯ ಜಡಸ್ಯಾಸ್ಯ ಬ್ರಹ್ಮತಾ ನ ಹಿ ತೇ ಮತೇ ॥ ೧೨೩ ॥**

**ಅರ್ಥ–** ಯದಿ= ಒಂದು ಪಕ್ಷ, ಆನಂದಮಯಃ= ಆನಂದಮಯವಸ್ತುವು, ಕೋಶಃ= ಜಡವಾದ ಕೋಶವಾದರೆ, ತತ್ಪುಚ್ಛೇ= ಆನಂದಮಯನ ಪುಚ್ಛದಲ್ಲಿ, ಬ್ರಹ್ಮತಾ= ಬ್ರಹ್ಮತ್ವವು, ಕಥಂ= ಹೇಗೆ ಕೂಡುತ್ತದೆ, ತೇ ಮತೇ= ನಿನ್ನ ಮತದಲ್ಲಿ, ಸಾಕಾರಸ್ಯ= ಆಕಾರ ವಿಶಿಷ್ಟವಾದ, ಅಸ್ಯ ಜಡಸ್ಯ= ಈ ಜಡಪದಾರ್ಥಕ್ಕೆ, ಬ್ರಹ್ಮತಾ ನ ಹಿ= ಬ್ರಹ್ಮತ್ವವು ಇಲ್ಲವಷ್ಟೇ.

**ಅನುವಾದ–** ಆನಂದಮಯಪದಾರ್ಥವು ಜಡವಾದ ಕೋಶ ಎಂದು ಅಂಗೀಕರಿಸಿದರೆ, ಅದರ ಪುಚ್ಛವು ಬ್ರಹ್ಮವಾಗುವುದು ಹೇಗೆ? ನಿನ್ನ ಮತದಲ್ಲಿಯೂ ಸಹ ಸಾಕಾರವಾದ ಜಡವಾದ ಈ ಪುಚ್ಛಕ್ಕೆ ಬ್ರಹ್ಮತ್ವವು ಇಲ್ಲವಷ್ಟೇ?

**ಭಾವವಿಲಾಸಿನೀ–** ಅಧುನಾ ಪರಮುಖೇನೈವ ಸ್ವಾಭಿಮತ ಶ್ರುತೇರತತ್ತ್ವಾವೇದಕತ್ವಂ ವಾಚಯತಿ - **ಯದ್ಯಾನಂದಮಯ ಇತಿ** ॥ ತತ್ಪುಚ್ಛೇ ಕೋಶಸ್ಯೈಕದೇಶಪುಚ್ಛೇ । ತತ್ರ ಹೇತುಮಾಹ – **ಸಾಕಾರಸ್ಯೇತಿ** ॥ ಪಾದತಯಾಸಾಕಾರತ್ವಾತ್ । ಅತ ಏವ ಜಡತ್ವಾಚ್ಚೇತಿ ಹೇತುಗರ್ಭಂ ವಿಶೇಷಣದ್ವಯಂ । ನಚ ಸಾಕಾರತ್ವಮಸಿದ್ಧಮ್ । ಪುರುಷವಿಧಶ್ರುತ್ಯರ್ಥಪರ್ಯಾಲೋಚನಯಾ ಪುಚ್ಛಪದೇನ ಸಾಕಾರಪಾದಾಖ್ಯಾವಯವಸ್ಯಾವಶ್ಯಂಭಾವಾತ್ । ತಥಾ ಚಾಬ್ರಹ್ಮಣಿ ಬ್ರಹ್ಮತ್ವ ಪ್ರತಿಪಾದಕತ್ವಾಚ್ಛ್ರುತಿರತತ್ತ್ವಾವೇದಿಕೇತಿ ಭಾವಃ ॥ ೧೨೩ ॥

**ವಿವರಣೆ–** ಈಗ ಪರಮುಖದಿಂದಲೇ ಅವರಿಗೆ ಅಭಿಮತವಾದ ಶ್ರುತಿಗೆ ಅತತ್ತ್ವಾವೇದಕತ್ವವನ್ನು ಹೇಳಿಸುತ್ತಾರೆ. ಪುಚ್ಛಕ್ಕೆ ಬ್ರಹ್ಮತ್ವವನ್ನು ಹೇಳುವ ವಾಕ್ಯವು ಅತತ್ತ್ವಾವೇದಕವಾಗುತ್ತದೆ. ಏಕೆಂದರೆ ಪುಚ್ಛವೆಂದರೆ ಪಾದ. ಈ ಪಾದಕ್ಕೆ ಒಂದು ಆಕಾರವಿದೆ ಮತ್ತು ಅದು ಜಡ. ಜಡವಾದುದರಿಂದಲೇ ಅದಕ್ಕೆ ಬ್ರಹ್ಮತ್ವವು ಕೂಡುವುದಿಲ್ಲ ಮತ್ತು ಸವಾ ಏಷ ಪುರುಷ ವಿಧ ಏವ ಎಂದು ಪುರುಷಾಕಾರವನ್ನು ಹೇಳಿದುದರಿಂದಲೇ ಪಾದದ ಆಕಾರವು ಸಿದ್ಧವಾಗುತ್ತದೆ. ಆದ್ದರಿಂದ ಜಡವಾದ ಪಾದದಲ್ಲಿ ಅಸಂಭಾವಿತವಾದ ಬ್ರಹ್ಮತ್ವವನ್ನು ಹೇಳುವುದರಿಂದ ಶ್ರುತಿಯು ಅತತ್ತ್ವಾವೇದಕವಾಗುತ್ತದೆ. ಅದರ ಬಲದಿಂದ ಆನಂದಮಯನನ್ನು ಬ್ರಹ್ಮನಲ್ಲ ಎಂದು ಹೇಳುವುದು ಹೇಗೆ ಎಂದು ಅಭಿಪ್ರಾಯ.

**ಅಧಿಷ್ಠಾನತಯಾ ಬ್ರಹ್ಮತ್ವೋಕ್ತಾವನ್ಯತ್ರ ಕಿಂ ನ ಸಾ ॥ ೧೨೪ ॥**

**ಅರ್ಥ–** ಅಧಿಷ್ಠಾನತಯಾ= ಅಧಿಷ್ಠಾನವಾದ ಕಾರಣದಿಂದ, ಬ್ರಹ್ಮತ್ವೋಕ್ತೌ= ಬ್ರಹ್ಮತ್ವವನ್ನು ಹೇಳಿದರೆ, ಅನ್ಯತ್ರ= ಬೇರೆ ಕಡೆಯಲ್ಲಿ, ಕಿಂ ನ ಸಾ= ಆ ಬ್ರಹ್ಮತ್ವವು ಇಲ್ಲವೇನು?

**ಅನುವಾದ–** ಪುಚ್ಛದ ಆರೋಪಕ್ಕೆ ಅಧಿಷ್ಠಾನವಾದ ಕಾರಣದಿಂದ ಪುಚ್ಛವು ಬ್ರಹ್ಮ ಎಂದು ಹೇಳುವುದಾದರೆ, ಮಧ್ಯದೇಹ, ಶಿರಸ್ಸು ಈ ಎಲ್ಲಾ ಆರೋಪಗಳಿಗೂ ಅಧಿಷ್ಠಾನವಾದ ಕಾರಣದಿಂದ ಅವುಗಳನ್ನೂ ಬ್ರಹ್ಮನೆಂದು ಹೇಳಬೇಕಾದೀತು.

**ಭಾವವಿಲಾಸಿನೀ–** ಅಧಿಷ್ಠಾನತಯಾ ಪಾದಾರೋಪಾಧಿಷ್ಠಾನತಯಾ ಬ್ರಹ್ಮತ್ವೋಕ್ತೌ ಪಾದೇ ಬ್ರಹ್ಮತ್ವೋಕ್ತೌ । ಅನ್ಯತ್ರಾವಯವಾಂತರೇಷು । ಸಾ ಏತಾದೃಶೀ । ಆರೋಪಾಧಿಷ್ಠಾನತ್ವಸ್ಯ ತತ್ರಾಪಿ ವಿದ್ಯಮಾನತ್ವಾತ್ । ಅಸ್ಮಿನ್ನಪಿ ಪಕ್ಷೇ ಶ್ರುತಿರತತ್ವವೇದಿಕಾ । ಅವಯವಾಂತರೇಷು ತ್ವದಭಿಲಷಿತತತ್ವಸ್ಯಾಕಥನಾತ್ । ಕಾರಣಂ ವಿನಾಮುಖ್ಯಾರ್ಥಭೂತಬ್ರಹ್ಮತ್ವರೂಪತತ್ವಸ್ಯ ತ್ಯಾಗಾತ್ । ಪುಚ್ಛಸ್ಯೈವಮಮುಖ್ಯಬ್ರಹ್ಮತ್ವೇ ಶ್ರುತೇಃ ಸೂತ್ರಕಾರಾಭಿಮತಾನಂದಮಯ

ಮುಖ್ಯಬ್ರಹ್ಮತ್ವಾವಿರೋಧಿತ್ವೇನ ತದಬ್ರಹ್ಮತ್ವಾಖ್ಯತ್ವದಭಿಲಷಿತ ತತ್ತ್ವಸ್ಯಾಸಾಧಕತಯಾತ್ತತ್ತ್ವ-ವೇದಕತ್ವಾಭಾವಾತ್ । ಅವಮುಖ್ಯವೃತ್ತ್ಯಾ ಬ್ರಹ್ಮಶಬ್ದಬೋಧ್ಯಸ್ಯಾಸ್ಯ ಪುಚ್ಛಸ್ಯ ಮಿಥ್ಯಾತ್ವಾವಶ್ಯಂಭಾವೇನ ಸ್ಪಷ್ಟಮತತ್ತ್ವಾವೇದಕತ್ವಾಚ್ಚ ॥ ೧೨೪ ॥

**ವಿವರಣೆ–** ಜಡಕ್ಕೂ ಮತ್ತು ಬ್ರಹ್ಮನಿಗೂ ಅಭೇದವು ಕೂಡುವುದಿಲ್ಲ. ಜಡಾರೋಪಕ್ಕೆ ಅಧಿಷ್ಠಾನತ್ವೇನ ಪುಚ್ಛದಲ್ಲಿ ಬ್ರಹ್ಮಶಬ್ದವಿದೆ ಎಂದು ಹೇಳುವುದಾದರೆ, ಶಿರಸ್ಸು ಮಧ್ಯಭಾಗ, ಬಾಹುಗಳು ಇವೆಲ್ಲಾ ಆರೋಪಕ್ಕೂ ಬ್ರಹ್ಮನೇ ಅಧಿಷ್ಠಾನವಾದುದರಿಂದ, ಅಲ್ಲಿಯೂ ಬ್ರಹ್ಮತ್ವವನ್ನು ಅಂಗೀಕಾರ ಮಾಡಿ ಶ್ರುತಿಯು ಬ್ರಹ್ಮತ್ವವನ್ನು ಹೇಳಬೇಕಾಗಿದ್ದಿತು. ಅಲ್ಲೆಲ್ಲಿಯೂ ಹೇಳದಿರುವುದರಿಂದ ಆರೋಪಾಧಿಷ್ಠಾನವಾದ್ದರಿಂದ ಬ್ರಹ್ಮಪದಪ್ರಯೋಗ ಎಂಬುದು ಅಯುಕ್ತವಾದುದು.

ಯದ್ಯಾನಂದಮಯೋ ಬ್ರಹ್ಮ ಪುಚ್ಛಸ್ಯ ಬ್ರಹ್ಮತಾ ಕಥಂ ।
ಉಭಯೋರ್ಬ್ರಹ್ಮತಾऽಯೋಗೇ ಮಹಾನ್ ಕಿಲ ತವಾಗ್ರಹಃ ॥ ೧೨೫ ॥

**ಅರ್ಥ–** ಯದಿ= ಒಂದು ಪಕ್ಷ, ಆನಂದಮಯಃ= ಆನಂದಮಯನು, ಬ್ರಹ್ಮ= ಬ್ರಹ್ಮನಾದರೆ, ಪುಚ್ಛಸ್ಯ= ಪುಚ್ಛಕ್ಕೆ, ಬ್ರಹ್ಮತಾ= ಬ್ರಹ್ಮತ್ವವು, ಕಥಂ= ಹೇಗೆ ಉಂಟಾಗುತ್ತದೆ, ಉಭಯೋಃ= ಅಂಗ ಮತ್ತು ಅಂಗಿ ಇವೆರಡಕ್ಕೂ, ಬ್ರಹ್ಮತಾ ಅಯೋಗೇ= ಬ್ರಹ್ಮತ್ವವು ಕೂಡುವುದಿಲ್ಲ ಎಂಬ ವಿಷಯದಲ್ಲಿ, ತವ= ನಿನಗೆ, ಮಹಾನ್ ಆಗ್ರಹಃ ಕಿಲ= ದೊಡ್ಡ ದುರಾಗ್ರಹವಿದೆಯಷ್ಟೇ.

**ಅನುವಾದ–** ಒಂದು ಪಕ್ಷ ಆನಂದಮಯನು ಬ್ರಹ್ಮನೆಂದು ಒಪ್ಪಿದರೆ ಪುಚ್ಛವು ಹೇಗೆ ಬ್ರಹ್ಮವಾಗುತ್ತದೆ. ಅಂಗಾಂಗಿಗಳೆರಡೂ ಬ್ರಹ್ಮಪದಾರ್ಥವಾಗುವುದಿಲ್ಲ ಎಂಬ ವಿಷಯದಲ್ಲಿ ನಿನಗೆ ಮಹಾದುರಾಗ್ರಹವಿದೆಯಷ್ಟೇ?

**ಭಾವವಿಲಾಸಿನೀ–** ಯದಿ ಚ ಕೋಶತ್ವಪಕ್ಷೋಕ್ತದೋಷಪರಿಹಾರಾಯಾನಂದಮಯೋ ಬ್ರಹ್ಮ ನತು ಕೋಶ ಇತ್ಯಂಗೀಕ್ರಿಯತೇ ತದಾಪಿ ಪುಚ್ಛಂ ಬ್ರಹ್ಮೇತಿ ಶ್ರುತಿರತತ್ತ್ವಾವೇದಿನೀತ್ಯಾಹ – **ಪುಚ್ಛಸ್ಯೇತಿ** ॥ ಪುಚ್ಛಸ್ಯಾಬ್ರಹ್ಮತ್ವೇ ಹೇತುಮಾಹ – **ಉಭಯೋರಿತಿ** ॥ ತ್ವದುಕ್ತನ್ಯಾಯೇನೈವಾ-ನಂದಮಯಸ್ಯ ಬ್ರಹ್ಮತ್ವೇ ಪುಚ್ಛಸ್ಯ ಬ್ರಹ್ಮತಾ ಗತೇತಿ ಭಾವಃ ॥ ೧೨೫ ॥

**ವಿವರಣೆ–** ಆನಂದಮಯವು ಕೋಶವಾದರೆ, ಪುಚ್ಛವೂ ಕೋಶವಾಗಬೇಕು. ಪುಚ್ಛವು ಬ್ರಹ್ಮನಾಗಲು ಸಾಧ್ಯವಿಲ್ಲ. ಈ ದೋಷವನ್ನು ಪರಿಹರಿಸಲು ಆನಂದಮಯನು ಬ್ರಹ್ಮನೆಂದು ಅಂಗೀಕರಿಸಿದರೆ, ನಿನ್ನ ಯುಕ್ತಿಯೇ ಎಂದರೆ ಪುಚ್ಛವು ಬ್ರಹ್ಮನಾದರೆ, ಆನಂದಮಯನು ಬ್ರಹ್ಮನಾಗಲಾರನು ಎಂಬ ಯುಕ್ತಿಯೇ ನಿನ್ನನ್ನು ಬಾಧಿಸುತ್ತದೆ ಎಂದು ಅಭಿಪ್ರಾಯ.

**ಅತೋಽತತ್ತ್ವಾವೇದಿಕೇಯಂ ಶ್ರುತಿರಾಸೀತ್ ತವೈವ ಹಿ ।**
**ಸೂತ್ರಕಲ್ಪದ್ರುಮಚ್ಛೇದೇ ಕುಠಾರಃ ಕ್ವಾಸ್ತಿ ತೇ ವದ ॥ ೧೨೬ ॥**

**ಅರ್ಥ–** ಅತಃ= ಆ ಕಾರಣದಿಂದ, ಇಯಂ ಶ್ರುತಿಃ= ಈ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ಶ್ರುತಿಯು, ತವೈವ= ನಿನಗೇ, ಅತತ್ತ್ವಾವೇದಿಕಾ ಆಸೀತ್ ಹಿ= ಅತತ್ವವೇದಕವಾಯಿತು, ಸೂತ್ರಕಲ್ಪದ್ರುಮಚ್ಛೇದೇ= ಸೂತ್ರವೆಂಬ ಕಲ್ಪವೃಕ್ಷವನ್ನು ಕಡಿಯಲು, ತೇ= ನಿನಗೆ, ಕ್ವಾಸ್ತಿ ಕುಠಾರಃ= ಕೊಡಲಿಯು ಎಲ್ಲಿದೆ, ವದ= ಹೇಳು.

**ಅನುವಾದ– ನಿನ್ನ ರೀತಿಯಿಂದಲೂ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ಶ್ರುತಿಯು ಅತತ್ತ್ವಾವೇದಕವಾಯಿತು. ಹೀಗಿರುವಾಗ ಸೂತ್ರವೆಂಬ ಕಲ್ಪವೃಕ್ಷವನ್ನು ಛೇದಿಸಲು ನಿನ್ನ ಬಳಿ ಯಾವ ಕುಠಾರವಿದೆ ಎಂದು ಹೇಳು.**

**ಭಾವವಿಲಾಸಿನೀ–ಅತಃ ಪಕ್ಷದ್ವಯೇಽಪಿ ತವ ಶ್ರುತಿರಿಯಮತತ್ತ್ವಾವೇದಿಕೈವಾಸೀದಿತಿ ಯೋಜನಾ । ಅಸ್ತ್ವೇವಮತತ್ತ್ವಾವೇದಿಕಾ ಶ್ರುತಿಃ ಪ್ರಕೃತೇಕಿಮಾಯಾತಮಿತ್ಯತ ಆಹ–ಸೂತ್ರೇತಿ । ಶ್ರುತಿಬಲಾದ್ಧಿಸೂತ್ರಮನ್ಯಥೀಕ್ರಿಯತೇ । ಶ್ರುತೇರೇವಂ ತ್ವತ್ ಪ್ರಕ್ರಿಯಯೈವಾತತ್ತ್ವಾವೇದಕತ್ವೇನ ಗತತ್ವಾತ್ ಸೂತ್ರೋಕ್ತಾರ್ಥಪರಿತ್ಯಾಗೇ ನ ಕಿಂಚಿತ್ ಕಾರಣಮಿತಿ ಭಾವಃ ॥ ೧೨೬ ॥**

**ವಿವರಣೆ–** ಸೂತ್ರವು ಆನಂದಮಯೋಽಭ್ಯಾಸಾತ್ ಎಂದು ಆನಂದಮಯನಿಗೆ ಬ್ರಹ್ಮತ್ವವನ್ನು ಹೇಳುತ್ತದೆ. ನೀನು ಆ ಅರ್ಥವನ್ನು ಅಂಗೀಕರಿಸದೆ ಪುಚ್ಛನಲ್ಲಿ ಬ್ರಹ್ಮಪದವಿರುವುದರಿಂದ, ಆನಂದಮಯ ಪುಚ್ಛವು ಮಾತ್ರ ಬ್ರಹ್ಮನೆಂದು ಹೇಳುತ್ತೀಯೆ. ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ಶ್ರುತಿಯು ತತ್ತ್ವಾವೇದಕವಾದರೆ ಅದರಿಂದ ನೀನು ಹೀಗೆ ಹೇಳಲು ಪ್ರಯತ್ನಿಸಬಹುದು. ಆದರೆ ನಾವು ಹಿಂದೆ ಉಪಪಾದನೆ ಮಾಡಿದಂತೆ ಆ ಶ್ರುತಿಯು ನಿನಗೇ ಅತತ್ತ್ವಾವೇದಕವಾಗುತ್ತದೆ. ಅತತ್ತ್ವಾವೇದಕವಾದ ಶ್ರುತಿಯಿಂದ ಸೂತ್ರವನ್ನು ವಿರೋಧಿಸುವುದು ಹೇಗೆ ಸಾಧ್ಯ? ಗುಣೇ ತ್ವನ್ಯಾಯಕಲ್ಪನಾ ಎಂಬುದು ನಿನ್ನ ನ್ಯಾಯ. ಪ್ರಧಾನ ಮತ್ತು ಅಪ್ರಧಾನಗಳಲ್ಲಿ ವಿರೋಧವು ಬಂದಾಗ ಅಪ್ರಧಾನಕ್ಕೆ ಅರ್ಥಾಂತರವನ್ನು ಮಾಡಬೇಕು ಎಂದು ಹೇಳಿ ಶ್ರುತಿಸೂತ್ರಗಳಲ್ಲಿ ಶ್ರುತಿಯು ಪ್ರಧಾನವಾದುದರಿಂದ ಶ್ರುತಿಗೆ ಅನುಸಾರವಾಗಿ ಸೂತ್ರಕ್ಕೆ ಅನ್ಯಾರ್ಥವನ್ನು ಮಾಡಬೇಕು ಎಂಬುದು ನಿನ್ನ ನ್ಯಾಯ. ಆದರೆ ಸೂತ್ರಕ್ಕೆ ವಿರೋಧವನ್ನು ಮಾಡಲು ಹೊರಟ ಶ್ರುತಿಯು ನಿನ್ನ ರೀತಿಯಲ್ಲಿಯೇ ಅತತ್ತ್ವಾವೇದಕವಾದುದರಿಂದ ಅದು ಯಾವುದಕ್ಕೂ ವಿರೋಧ ಮಾಡಲಾರದು. ಇನ್ನು ಸೂತ್ರಕ್ಕೆ ಅನ್ಯಾರ್ಥವನ್ನು ಕಲ್ಪನೆಯನ್ನು ಮಾಡುವುದು ಹೇಗೆ ಎಂದು ಅಭಿಪ್ರಾಯ.

**ಶ್ರುತೌ ಮಹಾನಾದರಸ್ತೇ ಸರ್ವೇ ಜಾನಂತಿ ಪಂಡಿತಾಃ ।**
**ಬ್ರಹ್ಮಣ್ಯಾಮ್ರೇಡಿತಶ್ರುತ್ಯಾ ತಟಸ್ಥಂ ಯಸ್ಯ ಲಕ್ಷಣಂ ॥ ೧೨೭ ॥**

**ಅರ್ಥ–** ತೇ= ನಿನಗೆ, ಶ್ರುತೌ= ವೇದದಲ್ಲಿ, ಮಹಾನಾದರಃ= ಬಹಳ ಗೌರವವಿದೆ! ಸರ್ವೇ ಪಂಡಿತಾಃ= ಎಲ್ಲ ವಿದ್ವಾಂಸರೂ, ಜಾನಂತಿ= ಇದನ್ನು ತಿಳಿದಿದ್ದಾರೆ, ಬ್ರಹ್ಮಣಿ= ಬ್ರಹ್ಮನಲ್ಲಿ, ಆಮ್ರೇಡಿತಶ್ರುತ್ಯಾ= ಪುನಃ ಪುನಃ ಹೇಳಲ್ಪಟ್ಟ ಕರ್ತೃತ್ವ ಶ್ರುತಿಯಿಂದ, ಯಸ್ಯ= ಯಾವ, ಲಕ್ಷಣಂ= ಲಕ್ಷಣವು, ತಟಸ್ಥಂ= ತಟಸ್ಥವೆಂದು ಹೇಳಿದೆಯೋ (ಅಂತಹ ನಿನ್ನ ಆದರವನ್ನು ಎಲ್ಲರೂ ತಿಳಿದಿದ್ದಾರೆ).

**ಅನುವಾದ–** ಮತ್ತೆ ಮತ್ತೆ ಬ್ರಹ್ಮನಲ್ಲಿ ಹೇಳಿದ ಜಗತ್ಕಾರಣತ್ವವನ್ನು ಬ್ರಹ್ಮನ ತಟಸ್ಥಲಕ್ಷಣ ಎಂದು ಹೇಳಿದ ನಿನಗೆ ಶ್ರುತಿಯಲ್ಲಿ ಬಹಳ ಆದರವಿದೆ! ಇದನ್ನು ಎಲ್ಲ ವಿದ್ವಾಂಸರೂ ತಿಳಿದಿದ್ದಾರೆ.

**ಭಾವವಿಲಾಸಿನೀ–** ಶ್ರುತಾವಾದರಾಭಿಮಾನೇನ ಸೂತ್ರಂ ದೂಷಯಂತಂ ಪರಂ ಪರಿಹಸತಿ – **ಶ್ರುತಾವಿತಿ** ॥ ಯಸ್ಯ ಪ್ರತಿವಾದಿನೋ ಮತೇ ಆಮ್ರೇಡಿತಂ ಬಹುಧಾಕಥಿತಂ ಯತೋ ವಾ ಇಮಾನಿ ಭೂತಾನಿ ಜಾಯಂತೇ ಅನ್ನಂ ಬ್ರಹ್ಮೇತಿ ವ್ಯಜಾನಾತ್ ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತ ಇತ್ಯಾದಿನಾ ಷೋಢಾ ಬ್ರಹ್ಮಣ್ಯಾಮ್ರೇಡಿತಮಿತಿ ಭಾವಃ । ಲಕ್ಷಣಂ ಬ್ರಹ್ಮಲಕ್ಷಣಮ್ । ತಟಸ್ಥಮವಿದ್ಯಾನಿಷ್ಠಮ್ । ತಸ್ಯ ತವೇತಿ ಪೂರ್ವೇಣಾನ್ವಯಃ ॥ ೧೨೭ ॥

**ವಿವರಣೆ–** ಯತೋವಾ ಇಮಾನಿ ಭೂತಾನಿ ಜಾಯಂತೇ ಎಂಬುದು ಬ್ರಹ್ಮನ ಸೃಷ್ಟಿಕರ್ತೃತ್ವವನ್ನು ಹೇಳುವ ವಾಕ್ಯ. ಇದೇ ಅರ್ಥವು ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ಮನಸೋಹ್ಯೇವ, ವಿಜ್ಞಾನಾದ್ಧ್ಯೇವ, ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ಎಂದು ಪುನಃ ಪುನಃ ಹೇಳಲ್ಪಟ್ಟಿದ್ದರೂ, ಆ ಜನ್ಮಾದಿಕರ್ತೃತ್ವವನ್ನು ತಿರಸ್ಕರಿಸಿ ಅದು ಪ್ರಕೃತಿಯ ಲಕ್ಷಣ, ಬ್ರಹ್ಮನ ಸ್ವರೂಪಲಕ್ಷಣವಲ್ಲ ಆದ್ದರಿಂದ ಅದು ಬ್ರಹ್ಮನಿಗೆ ತಟಸ್ಥಲಕ್ಷಣ ಎಂದು ಹೇಳುವ ನೀನು ಮಾಡುವ ವೇದದ್ರೋಹವನ್ನು ಎಲ್ಲ ಪಂಡಿತರೂ ತಿಳಿದಿದ್ದಾರೆ. ಯಾವ ಬ್ರಹ್ಮನಿಗೆ ಜಗಜ್ಜನ್ಮಾದಿಕರ್ತೃತ್ವವನ್ನು ವೇದಗಳು ಹೇಳುತ್ತವೆಯೋ, ಅವನನ್ನು ಶುದ್ಧನಾದ ಬ್ರಹ್ಮನಲ್ಲ ಎಂದು ಹೇಳಿ ವೇದಕ್ಕೆ ವಿರುದ್ಧವಾಗಿ ನಿರ್ಗುಣಬ್ರಹ್ಮನನ್ನು ಕಲ್ಪಿಸುವ ನಿನ್ನ ವೇದದ ನಿಷ್ಠೆಯನ್ನೂ ಸಹ ಪಂಡಿತರು ತಿಳಿದಿದ್ದಾರೆ!

**ಕಿಂಚ ಶ್ರುತಾವಾದರಶ್ಚೇತ್ ಪುಚ್ಛಸ್ಯ ಬ್ರಹ್ಮತಾಸ್ತು ತೇ ।**
**ಅನ್ಯಸ್ಯಾಬ್ರಹ್ಮತಾ ಕಸ್ಮಾತ್ ಸ್ವೀಕೃತಾ ನ ಹಿ ಸಾ ಶ್ರುತಾ ॥ ೧೨೮ ॥**

**ಅರ್ಥ–** ಕಿಂಚ= ಮತ್ತು, ಶ್ರುತೌ= ಶ್ರುತಿಯಲ್ಲಿ, ಆದರಶ್ಚೇತ್= ಆದರವಿದ್ದರೆ, ತೇ= ನಿನಗೆ, ಪುಚ್ಛಸ್ಯ= ಪುಚ್ಛಕ್ಕೆ, ಬ್ರಹ್ಮತಾ= ಬ್ರಹ್ಮತ್ವವು, ಅಸ್ತು= ಇರಲಿ, ಅನ್ಯಸ್ಯ= ಭಿನ್ನವಾದ ಮಧ್ಯಭಾಗಕ್ಕೆ, ಅಬ್ರಹ್ಮತಾ= ಬ್ರಹ್ಮತ್ವವಿಲ್ಲವೆಂದು, ಕಸ್ಮಾತ್= ಯಾವ ಕಾರಣದಿಂದ, ಸ್ವೀಕೃತಾ= ಸ್ವೀಕರಿಸಲ್ಪಟ್ಟಿತು, ಸಾ= ಅಬ್ರಹ್ಮತ್ವವು, ಶ್ರುತಾ ನ ಹಿ= ಶ್ರುತವಾಗಿಲ್ಲವಷ್ಟೇ?

**ಅನುವಾದ–** ನಿನಗೆ ಶ್ರುತಿಯಲ್ಲಿ ಆದರವಿರುವುದಾದರೆ, ಪುಚ್ಛದಲ್ಲಿ ಬ್ರಹ್ಮಪದ ಶ್ರವಣವಿರುವುದರಿಂದ ಪುಚ್ಛಕ್ಕೆ ಬ್ರಹ್ಮತ್ವವಿರಲಿ. ಆದರೆ ಆತ್ಮಕ್ಕೆ ಅಬ್ರಹ್ಮತ್ವವು ಏಕೆ ಸ್ವೀಕರಿಸಲ್ಪಡುತ್ತದೆ? ಆತ್ಮವು ಅಬ್ರಹ್ಮ ಎಂದು ಶ್ರುತಿಯಲ್ಲಿ ಹೇಳಿಲ್ಲವಷ್ಟೇ?

**ಭಾವವಿಲಾಸಿನೀ–** ಅಪಿ ಚ ಶ್ರುತಾವಾದರವತಾ ಸಾಕ್ಷತ್ ಶ್ರುತಂ ಪುಚ್ಛಸ್ಯ ಬ್ರಹ್ಮತ್ವಮಂಗೀಕ್ರಿಯತಾಮ್ । ಶ್ರುತಾವಶ್ರುತಮಾನಂದಯಸ್ಯಾಬ್ರಹ್ಮತ್ವಂ ಕುತಃ ಕಥ್ಯತ ಇತ್ಯಾಹ – **ಕಿಂಚೇತಿ** ॥ ಅನ್ಯಸ್ಯಾನಂದಮಯಸ್ಯ । ಸಾऽನ್ಯಸ್ಯಾಬ್ರಹ್ಮತಾ । ಅನ್ಯದಬ್ರಹ್ಮೇತಿ ಸಾಕ್ಷಾದುಕ್ತೇಃ ಪುಚ್ಛಮೇವ ಬ್ರಹ್ಮೇತಿ ಸಾವಧಾರಣತ್ವೋಕ್ತೇಶ್ಚಾಭಾವಾತ್ । ದಶಘಟೇಷು ಸತ್ಸ್ವಯಂ ಘಟ ಇತ್ಯೇಕತ್ರ ವ್ಯವಹಾರೇ ಅನ್ಯಘಟೇಷ್ವಘಟತ್ವಾದರ್ಶನಾಚ್ಚಾನ್ಯಸ್ಯಾಬ್ರಹ್ಮತ್ವಮಶ್ರೌತಮೇವೇತಿ ಭಾವಃ॥೧೨೮॥

**ವಿವರಣೆ–** ಶ್ರುತಿಯಲ್ಲಿ ಆದರವಿದ್ದರೆ ಶ್ರುತಿಯಲ್ಲಿ ಹೇಳಿದಂತೆ ಸ್ವೀಕರಿಸು. ಶ್ರುತಿಯು ಹೇಳದಿದ್ದ ಆತ್ಮನ ಅಬ್ರಹ್ಮತ್ವವನ್ನು ನೀನು ಏಕೆ ಹೇಳುತ್ತೀಯೆ? ಪುಚ್ಛವು ಬ್ರಹ್ಮನಲ್ಲ ಎಂದು ಹೇಳಿದರೆ ಆತ್ಮವು ಬ್ರಹ್ಮನಲ್ಲ ಎಂದು ಶ್ರುತಿಯು ಹೇಳುತ್ತಿದೆಯೇ? ಶ್ರುತಿಯು ಹೇಳದಿದ್ದ ಅರ್ಥವನ್ನು ನೀನು ಏಕೆ ಅಂಗೀಕರಿಸುತ್ತೀಯೆ ಎಂದು ಇಲ್ಲಿ ಪ್ರಶ್ನೆ ಮಾಡುತ್ತಾರೆ.

ವಿಶಿಷ್ಯೈಕತ್ರ ಯದ್ಯುಕ್ತಮರ್ಥಾನ್ನಾನ್ಯತ್ರ ತದ್ ಯದಿ ।
ತರ್ಹಿ ಯುಕ್ತಿಬಲಾದೇವ ಬ್ರಹ್ಮತಾ ನ ಶ್ರುತೇರ್ಬಲಾತ್ ॥ ೧೨೯ ॥

ಯುಕ್ತಿಸ್ತು ದುರ್ಬಲಾ ಸಾಕ್ಷಾತ್ ಸೂತ್ರಾದಾಪ್ತತಮೋದಿತಾತ್ ।
ಅತಸ್ತವೇಷುಸ್ತ್ವಾಂ ಹಂತಿ ಗುಣೇತ್ವನ್ಯಾಯಕಲ್ಪನಾ ॥ ೧೩೦ ॥

**ಅರ್ಥ–** ಏಕತ್ರ= ಒಂದು ಸ್ಥಳದಲ್ಲಿ, ವಿಶಿಷ್ಯ= ವಿಶೇಷವಾಗಿ, ಉಕ್ತಂ= ಹೇಳಲ್ಪಟ್ಟದ್ದು, ಯದಿ= ಒಂದು ಪಕ್ಷ, ಅನ್ಯತ್ರ= ಇನ್ನೊಂದು ಕಡೆ, ತದ್= ಆ ಅರ್ಥವು, ಯದಿ ನ= ಇಲ್ಲವೆಂದು, ಅರ್ಥಾತ್= ಆರ್ಥಿಕವಾಗಿ ಹೇಳುವುದಾದರೆ, ತರ್ಹಿ= ಆಗ, ಯುಕ್ತಿಬಲಾದೇವ= ಯುಕ್ತಿಬಲದಿಂದಲೇ, ಬ್ರಹ್ಮತಾ= ಬ್ರಹ್ಮತ್ವವು ಉಂಟಾಯಿತು, ಶ್ರುತೇರ್ಬಲಾತ್ ನ= ಶ್ರುತಿಯಬಲದಿಂದ ಅಲ್ಲ. ಸಾಕ್ಷಾತ್ ಆಪ್ತತಮೋದಿತಾತ್= ಸಾಕ್ಷಾತ್ ಆಪ್ತತಮರಾದ ವೇದವ್ಯಾಸರಿಂದ ಹೇಳಲ್ಪಟ್ಟ, ಸೂತ್ರಾತ್= ಸೂತ್ರಕ್ಕಿಂತಲೂ, ಯುಕ್ತಿಸ್ತು= ಯುಕ್ತಿಯಾದರೂ, ದುರ್ಬಲಾ= ದುರ್ಬಲವಾಗಿದೆ, ಅತಃ= ಆದ್ದರಿಂದ, ಗುಣೇ= ಅಪ್ರಧಾನವಾದುದರಲ್ಲಿ, ಅನ್ಯಾಯಕಲ್ಪನಾ= ಲಕ್ಷಣಾವನ್ನು ಮಾಡಬೇಕು ಎಂಬ, ತವೇಷುಃ= ನಿನ್ನ ಬಾಣವು,ತ್ವಾಂ= ನಿನ್ನನ್ನೇ, ಹಂತಿ= ಕೊಲ್ಲುತ್ತದೆ.

**ಅನುವಾದ–** ವಿಶಿಷ್ಯ ಒಂದು ಕಡೆ ಹೇಳಿದ್ದರಿಂದ, ಇನ್ನೊಂದು ಕಡೆ ಅರ್ಥಾತ್ ಅದು ಇಲ್ಲವೆಂದು ಸಿದ್ಧವಾಗುತ್ತದೆ ಎಂದು ಹೇಳಿದರೆ, ಆನಂದಮಯನಿಗೆ ಅಬ್ರಹ್ಮತ್ವವು ಯುಕ್ತಿಬಲದಿಂದ ಸಿದ್ಧವಾಯಿತೇ ಹೊರತಾಗಿ ಶ್ರುತಿಯಬಲದಿಂದ ಸಿದ್ಧವಾಗಲಿಲ್ಲ.

ಆದರೆ ಸೂತ್ರವು ಸಾಕ್ಷಾತ್ ಆಪ್ತತಮರಾದ ವೇದವ್ಯಾಸರಿಂದ ಹೇಳಲ್ಪಟ್ಟಿದೆ. ಅದಕ್ಕಿಂತ ಯುಕ್ತಿಯು ದುರ್ಬಲವಾದುದು. ಗುಣೇತ್ವನ್ಯಾಯಕಲ್ಪನಾ ಎಂಬುದು ನಿನ್ನ ನ್ಯಾಯ. ಅದರಂತೆ ಸೂತ್ರವಿರೋಧವು ಬರುವುದರಿಂದ ನಿನ್ನ ಯುಕ್ತಿಯೇ ಅಪ್ರಮಾಣವಾಗುತ್ತದೆ. ಹೀಗೆ ನಿನ್ನ ಬಾಣವು ನಿನ್ನನ್ನೇ ಕೊಲ್ಲುತ್ತದೆ.

**ಭಾವವಿಲಾಸಿನೀ–** ಶಂಕತೇ ॥ **ವಿಶಿಷ್ಯೇತಿ** ॥ ಯದ್ವಿಪ್ರಮೇಯಂ ವಿಶಿಷ್ಯೈಕತ್ರೋಕ್ತಂ ತದರ್ಥಾದನ್ಯತ್ರ ನ ಭವೇದಿತಿ ಯೋಜನಾ । ಇದಮಪಿ ಪ್ರಾಗುಕ್ತವ್ಯಭಿಚಾರೇಣ ದೂಷಿತ-ಮೇವ । ತಥಾಪಿ ಯುಕ್ತ್ಯಂತರೇಣ ಪುನರ್ದೂಷಯತಿ ॥ **ತರ್ಹೀತಿ** ॥ ಆರ್ಥಿಕಾರ್ಥಸ್ಯಾ-ಶ್ರೌತತ್ವಾದಿತಿ ಭಾವಃ ॥ ೧೨೯ ॥

ನನು ಯುಕ್ತಿಬಲಾದಾಗತಮಪಿ ಪ್ರಮೇಯಂ ಕುತೋನಾಂಗೀಕ್ರಿಯತ ಇತ್ಯತ ಆಹ– **ಯುಕ್ತಿಸ್ತ್ವಿತಿ** ॥ ಪ್ರಬಲಪ್ರಮಾಣವಿರೋಧೇನ ಯುಕ್ತಿರೇವಾಭಾಸೀಕರ್ತವ್ಯಾ । ಶ್ಲೋಕರೂಪ-ಶ್ರುತೌ ಶ್ರವಣಾದತ್ರೈಕಸ್ಯೈವ ಶ್ರವಣಮಿತಿ ವಕ್ತುಂ ಶಕ್ಯತ್ವಾದಿತಿ ಭಾವಃ । ಅತಃ ಯುಕ್ತೇ-ರ್ದುರ್ಬಲತ್ವಾತ್ । ಗುಣೇಽಪ್ರಧಾನೇ ಅನ್ಯಾಯಕಲ್ಪನಾ ಅಪ್ರಾಮಾಣ್ಯಕಲ್ಪನಾ ಇತಿ ತವೇಷುಸ್ತ್ವಾಂ ಹಂತೀತಿ ಸಂಬಂಧಃ । ಮಾಯಾವಾದೀ ಹಿ ಶ್ರುತೇಃ ಪ್ರಬಲತ್ವಾತ್ ಸೂತ್ರಸ್ಯ ಚ ಪುಂವಾಕ್ಯತಯಾ ದುರ್ಬಲತ್ವಾತ್ ಶ್ರುತಿವಿರೋಧೇ ಸೂತ್ರಮೇವ ಹೇಯಮಿತ್ಯತ್ರ ಗುಣೇತ್ವನ್ಯಾಯಕಲ್ಪನೇತಿ ನ್ಯಾಯಂ ಪ್ರಮಾಣೀಕೃತವಾನ್ । ಅಧುನಾ ದುರ್ಬಲಯುಕ್ತಿ-ಬಲಾದಾಪ್ತತಮವಾಕ್ಯತ್ವೇನಾತಿಪ್ರಬಲಸೂತ್ರ ದೂಷಣೇ ಪ್ರಯತಮಾನಸ್ಯ ಸ್ವಸ್ಯ ಸ್ವೋಕ್ತನ್ಯಾಯ ಏವ ಸ್ವಘಾತಕೋಭೂದಿತಿ ಭಾವಃ ॥ ೧೩೦ ॥

**ವಿವರಣೆ–** ಪುಚ್ಛದಲ್ಲಿ ಬ್ರಹ್ಮಶಬ್ದ ಪ್ರಯೋಗವಿರುವುದರಿಂದ ಅರ್ಥಾತ್ ಆತ್ಮವು ಬ್ರಹ್ಮನಲ್ಲವೆಂದು ಹೇಳುವುದಾದರೆ, ಇದು ಯುಕ್ತಿ. ಯುಕ್ತಿಯು ಆಪ್ತವಾಕ್ಯಕ್ಕಿಂತ ದುರ್ಬಲವಾದುದು. ಯುಕ್ತಿ ಮತ್ತು ಆಪ್ತವಾಕ್ಯಗಳಿಗೆ ವಿರೋಧ ಬಂದಾಗ ಯುಕ್ತಿಯು ದುರ್ಬಲವಾಗುತ್ತದೆ. ಆದ್ದರಿಂದ ಆಪ್ತವಾಕ್ಯದಂತೆ ಆನಂದಮಯನು ಬ್ರಹ್ಮನೇ ಎಂದು ನಿರ್ಧರಿಸಬೇಕು ಎಂದು ಅಭಿಪ್ರಾಯ.

**ಯದೇಕತ್ರ ವಿನಿರ್ಣೀತಃ ಶಾಸ್ತ್ರಾರ್ಥೋ ಹ್ಯಪರತ್ರ ಚ ।**
**ಇತ್ಯಾಹುರಾರ್ಯಾಸ್ತತ್ ತೇಽರ್ಥಃ ಸ್ವಾರ್ಥಂ ವ್ಯಭಿಚರೇದಪಿ ॥ ೧೩೧ ॥**

**ಅರ್ಥ–** ಯತ್= ಯಾವ ಕಾರಣದಿಂದ, ಏಕತ್ರ= ಒಂದು ಕಡೆಯಲ್ಲಿ, ವಿನಿರ್ಣೀತಃ= ನಿರ್ಣಯಿಸಲ್ಪಟ್ಟ, ಶಾಸ್ತ್ರಾರ್ಥಃ= ಶಾಸ್ತ್ರಾರ್ಥವು, ಅಪರತ್ರ ಹಿ= ಇನ್ನೊಂದು ಕಡೆಯಲ್ಲಿಯೂ ಅನ್ವಯವಾಗುತ್ತದೆ, ಇತಿ= ಎಂದು, ಆರ್ಯಾಃ= ಜ್ಞಾನಿಗಳು, ಆಹುಃ= ಹೇಳುತ್ತಾರೆಯೋ, ತತ್= ಆದ್ದರಿಂದ, ತೇ ಅರ್ಥಃ= ನೀನು ಹೇಳುವ ಅರ್ಥವು, ಸ್ವಾರ್ಥಂ= ನಿನ್ನ ಯುಕ್ತಿಯನ್ನೂ ಸಹ, ವ್ಯಭಿಚರೇದಪಿ= ವ್ಯಭಿಚರಿಸುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – ಯದಿತಿ ॥ ಯದ್ಯಸ್ಮಾತ್ ಏಕತ್ರನಿರ್ಣೀತಃ ಶಾಸ್ತ್ರಾರ್ಥೋಽಪರತ್ರಾಪೀತಿ ನ್ಯಾಯಬಲೇನೈಕತ್ರ ವಿಶಿಷ್ಯೋಕ್ತಶಾಸ್ತ್ರಾರ್ಥಸ್ಯೈವಾನ್ಯತ್ರಾಪಿ ಸಂಗ್ರಾಹ್ಯತ್ವಾದಿತಿ ಭಾವಃ । ಅಸ್ಯೈವ ನ್ಯಾಯಸ್ಯೋದಾಹರಣತಯಾ ಪ್ರಾಗಸ್ಮಾಭಿರಪಿ ವ್ಯಭಿಚಾರೋ ದರ್ಶಿತಃ ॥ ೧೩೧ ॥

**ವಿವರಣೆ–** ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಎಂಬ ನ್ಯಾಯದಿಂದ ಒಂದು ಸ್ಥಳದಲ್ಲಿ ವಿಶೇಷವಾಗಿ ಹೇಳಿದುದನ್ನೇ ಇನ್ನೊಂದು ಸ್ಥಳದಲ್ಲಿಯೂ ತೆಗೆದುಕೊಳ್ಳಬೇಕು ಅದಕ್ಕೆ ವಿರುದ್ಧವಾದುದನ್ನು ತೆಗೆದುಕೊಳ್ಳಬಾರದು ಎಂದು ಸಿದ್ಧವಾಗುತ್ತದೆ. ಆದ್ದರಿಂದ ಪುಚ್ಛದಲ್ಲಿ ನಿರ್ಣಯಿಸಲ್ಪಟ್ಟ ಬ್ರಹ್ಮತ್ವವನ್ನೇ ಮಧ್ಯಭಾಗದಲ್ಲೂ ಆನಂದಮಯನಲ್ಲೂ ಸ್ವೀಕರಿಸು ಎಂದು ಅಭಿಪ್ರಾಯ.

**ಪಾದಸ್ಯ ಬ್ರಹ್ಮತೋಕ್ತೌ ಹಿ ಸರ್ವಸ್ಯ ಬ್ರಹ್ಮತಾ ಬಲಾತ್ ।**
**ಯತೋ ಭವೇತ್ ತತಸ್ತೇಽರ್ಥಃ ಪ್ರಬಲಾರ್ಥಹತೋ ಭವೇತ್ ॥ ೧೩೨ ॥**

**ಅರ್ಥ–** ಪಾದಸ್ಯ= ಪಾದಕ್ಕೆ, ಬ್ರಹ್ಮತೋಕ್ತೌ ಹಿ= ಬ್ರಹ್ಮತ್ವವನ್ನು ಹೇಳಿದರೆ, ಯತಃ= ಯಾವ ಕಾರಣದಿಂದ, ಬಲಾತ್= ಯುಕ್ತಿ ಬಲದಿಂದ, ಸರ್ವಸ್ಯ= ಎಲ್ಲ ಶರೀರಕ್ಕೂ, ಬ್ರಹ್ಮತಾ ಭವೇತ್= ಬ್ರಹ್ಮತ್ವವು ಉಂಟಾಗುವುದೋ, ತತಃ= ಆ ಕಾರಣದಿಂದ, ತೇ ಅರ್ಥಃ= ನೀನು ಹೇಳಿದ ಅರ್ಥವು, ಪ್ರಬಲಾರ್ಥಹತಃ= ಪ್ರಬಲವಾದ ಅರ್ಥದಿಂದ ಬಾಧಿತವಾಗಿ, ಭವೇತ್= ಆಗುತ್ತದೆ.

**ಅನುವಾದ–** ಪಾದಕ್ಕೆ ಬ್ರಹ್ಮತ್ವವನ್ನು ಹೇಳಿದರೆ ಯುಕ್ತಿಬಲದಿಂದ ಸರ್ವಕ್ಕೂ ಬ್ರಹ್ಮತ್ವವು ಸಿದ್ಧವಾಗುವುದರಿಂದ ನೀನು ಹೇಳಿದ ಯುಕ್ತಿಯಿಂದ ಸಿದ್ಧವಾದ ಅರ್ಥವು ಇಂತಹ ಪ್ರಬಲವಾದ ಯುಕ್ತಿಯಿಂದ ಸಿದ್ಧವಾದ ಅರ್ಥದಿಂದ ಬಾಧಿಸಲ್ಪಡುತ್ತದೆ.

**ಭಾವವಿಲಾಸಿನೀ–** ನ್ಯಾಯಸಂಚಾರಾರ್ಥಮಿದಮುದಿತಮ್ । ಪ್ರಕೃತಪ್ರಮೇಯಂ ತು ಯುಕ್ತಿಬಲಾದೇವ ಸಿಧ್ಯತಿ । ಅತ ಏಕತ್ರ ವಿಶಿಷ್ಯೋಕ್ತಿರನ್ಯಥಾಸಿದ್ಧೇತ್ಯಾಶಯವಾನ್ ಮೃತ್‌ಪುಚ್ಛಂ ಮೃಣ್ಮಯಸ್ಯೋಕ್ಷ್ಣ ಇತ್ಯತ್ರೋಕ್ತಯುಕ್ತಿಮೇವಸ್ಮಾರಯತಿ – **ಪಾದಸ್ಯೇತಿ** ॥ ಬಲಾತ್ ಅಂಗಾಂಗಿನೋರೇಕಪ್ರಕಾರತ್ವಯುಕ್ತಿಬಲಾತ್ । ತೇಽರ್ಥಃ ಏಕತ್ರೋಕ್ತಾವನ್ಯತ್ರಾ ಭಾವ-ರೂಪೋಽರ್ಥಃ ಪ್ರಬಲಾರ್ಥಹತಃ ಪ್ರಬಲಯುಕ್ತೇರರ್ಥೇನ ಸಾಧ್ಯೇನ ಹತ ಇತ್ಯರ್ಥಃ ॥೧೩೨॥

**ವಿವರಣೆ–** ಪಾದವೇ ಪೂರ್ಣವಾದರೆ ಸರ್ವಶರೀರವು ಪೂರ್ಣ ಎಂಬ ಯುಕ್ತಿಯನ್ನು ಹಿಂದೆ ಮೃತ್ತಿಕಾವೃಷಭ ದೃಷ್ಟಾಂತದಿಂದ ಹೇಳಿದ್ದೇವೆ. ಈ ಯುಕ್ತಿಯು ಪ್ರಬಲವಾದುದು. ಪಾದದಲ್ಲಿ ಬ್ರಹ್ಮಪದ ಶ್ರವಣವಿರುವುದರಿಂದ, ಅನ್ಯತ್ ಬ್ರಹ್ಮನಲ್ಲ ಎಂಬ ಯುಕ್ತಿಯು ದುರ್ಬಲವಾದುದು. ನಮ್ಮ ಯುಕ್ತಿಯಿಂದ ನಿನ್ನ ಯುಕ್ತಿಯು ಬಾಧಿತವಾಗುತ್ತದೆ ಎಂದು ಅಭಿಪ್ರಾಯ.

**ಏವಂ ಚ ಯುಕ್ತಿಶ್ರೈಷ್ಠ್ಯೇಪಿ ಯದಗ್ರೇ ಸೂತ್ರಖಂಡನಂ ।**
**ಅರ್ಥಾದುತ್ಸೂತ್ರಭಾಷ್ಯತ್ವಮುತ್ತರತ್ರಾಪಿ ತದ್ ವದೇತ್ ॥ ೧೩೩ ॥**

**ಅರ್ಥ–** ಏವಂ ಚ= ಈ ರೀತಿಯಲ್ಲಿ, ಯುಕ್ತಿಶ್ರೈಷ್ಠ್ಯೇಪಿ= ಯುಕ್ತಿಗಳ ಪ್ರಾಬಲ್ಯವಿದ್ದರೂ, ಅಗ್ರೇ= ಮೊದಲಿನಲ್ಲಿಯೇ, ಯತ್ ಸೂತ್ರಖಂಡನಂ= ನಿನ್ನ ಯಾವ ಸೂತ್ರ ನಿರಾಕರಣೆ ಇದೆಯೋ, ತತ್= ಅದು, ಉತ್ತರತ್ರಾಪಿ= ಮುಂದಿನ ಸೂತ್ರಗಳಲ್ಲಿಯೂ ಸಹ, ಉತ್ಸೂತ್ರಭಾಷ್ಯತ್ವಂ= ಸೂತ್ರವಿರುದ್ಧವಾದ ಭಾಷ್ಯಕಾರಿತ್ವವನ್ನು, ಅರ್ಥಾತ್= ಆರ್ಥಿಕವಾಗಿಯೇ, ವದೇತ್= ಹೇಳುತ್ತದೆ.

**ಅನುವಾದ–** ಹೀಗೆ ಆನಂದಮಯನಿಗೆ ಬ್ರಹ್ಮತ್ವವನ್ನು ಉಪಪಾದನೆ ಮಾಡುವುದಕ್ಕೆ ಯುಕ್ತಿಗಳು ಪ್ರಬಲವಾಗಿದ್ದರೂ, ಸೂತ್ರಕ್ಕೆ ವಿರುದ್ಧವಾಗಿ ಆನಂದಮಯನು ಬ್ರಹ್ಮನಲ್ಲ ಎಂದು ನೀನು ಹೇಳಿರುವುದು ಅರ್ಥಾತ್ ಮುಂದಿನ ಸೂತ್ರಗಳಲ್ಲಿಯೂ ಸಹ ನೀನು ಸೂತ್ರಕ್ಕೆ ವಿರುದ್ಧವಾಗಿ ಮಾತನಾಡುತ್ತೀಯೆ ಎಂಬುದನ್ನು ಸಾಧಿಸಿಕೊಡುತ್ತದೆ.

**ಭಾವವಿಲಾಸಿನೀ–** ಕಿಂಚಾರ್ಥಾದನರ್ಥಪ್ರಾಪ್ತಿರ್ನ ಸೂತ್ರಕಾರಸ್ಯಾಪಿ ತು ತವೈವೇತ್ಯಾಹ – **ಏವಂಚೇತಿ** ॥ ಯುಕ್ತಿಶ್ರೈಷ್ಠ್ಯೇ ಯುಕ್ತಿಸೌಂದರ್ಯೇ । ಅಗ್ರೇ ಪ್ರಥಮತಃ ಯತ್ಸೂತ್ರಮತಃ ಯತ್ಸೂತ್ರಖಂಡನಂ ಸೂತ್ರಸ್ಯ ದೂಷಣಂ ತತ್ಕೇವಲಂ ದ್ವೇಷಾದೇವೈಕತ್ರ ಸೂತ್ರದೂಷಣಂ ಅರ್ಥಾದೇಕತ್ರಹೃದ್ಗತದ್ವೇಷಸ್ಯ ಪ್ರದರ್ಶಿತತ್ವೇನಾನ್ಯತ್ರಾಪಿ ತದನುಮಾನಾದುತ್ತರತ್ರಾಪಿ ತ್ವದ್ಭಾಷ್ಯಸ್ಯೋತ್ಸೂತ್ರಭಾಷ್ಯತ್ವಂ ವದೇತ್ ಜ್ಞಾಪಯೇದಿತಿ ಯೋಜನಾ ॥ ೧೩೩ ॥

**ವಿವರಣೆ–** ಆನಂದಮಯೋಽಭ್ಯಾಸಾತ್ ಎನ್ನುವುದು ಸಮನ್ವಯವನ್ನು ಪ್ರತಿಪಾದಿಸುವ ಮೊದಲನೆಯ ಅಧಿಕರಣ. ಮೊದಲನೆಯ ಅಧಿಕರಣದಲ್ಲಿಯೇ ನೀನು ಸೂತ್ರಕ್ಕೆ ವಿರುದ್ಧವಾಗಿ ಆನಂದಮಯನು ಬ್ರಹ್ಮನಲ್ಲ ಎಂದು ಹೇಳಿರುವುದರಿಂದ, ಮುಂದಿನ ಸೂತ್ರಗಳಲ್ಲಿಯೂ ಸೂತ್ರಕ್ಕೆ ವಿರುದ್ಧವಾಗಿ ಸಾಕಷ್ಟು ಮಾತನಾಡುತ್ತೀಯೆ ಎಂದು ಅರ್ಥಾತ್ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಕಿಂಚ ನಿರ್ವಿಕೃತೇರೇವ ನಿಮಿತ್ತತ್ವಂ ಪರಾತ್ಮನಃ ।**
**ಕುಲಾಲವದ್ ಯತೋ ಯುಕ್ತಾ ತದಯುಕ್ತಾ ತಟಸ್ಥತಾ ॥ ೧೩೪ ॥**

**ಅರ್ಥ–** ಕಿಂಚ= ಮತ್ತು, ಯತಃ= ಯಾವ ಕಾರಣದಿಂದ, ನಿರ್ವಿಕೃತೇರೇವ= ವಿಕಾರರಹಿತನಾದ, ಪರಾತ್ಮನಃ= ಪರಮಾತ್ಮನಿಗೆ, ಕುಲಾಲವತ್= ಕುಲಾಲನಂತೆ, ನಿಮಿತ್ತತ್ವಂ= ನಿಮಿತ್ತ ಕಾರಣತ್ವವು, ಯುಕ್ತಾ= ಯುಕ್ತವಾಗುತ್ತದೆಯೋ, ತತ್= ಆ ಕಾರಣದಿಂದ, ತಟಸ್ಥತಾ= ತಟಸ್ಥತ್ವವು, ಅಯುಕ್ತಾ= ಅಯುಕ್ತವಾಗುತ್ತದೆ.

**ಅನುವಾದ–** ಮತ್ತು ನಿರ್ವಿಕಾರನಾದ ಪರಮಾತ್ಮನಿಗೆ ಕುಲಾಲನಂತೆ ನಿಮಿತ್ತತ್ವವೇ ಕೂಡುವುದರಿಂದ ಜನ್ಮಾದಿಕಾರಣತ್ವವನ್ನು ತಟಸ್ಥಲಕ್ಷಣ ಎಂದು ಹೇಳುವುದು ಅಯುಕ್ತವಾಗುತ್ತದೆ.

**ಭಾವವಿಲಾಸಿನೀ–** ಅಧುನಾಽಸ್ಮಾದಪ್ಯಧಿಕರಣಾದಗ್ರೇ ಜನ್ಮಾದಿಸೂತ್ರ ಏವೋತ್ ಸೂತ್ರಭಾಷ್ಯತ್ವಂ ದರ್ಶಯತಿ **–ಕಿಂಚೇತಿ** ॥ ಯತಃ ಯಸ್ಮಾತ್ । ನಿರ್ವಿಕೃತೇರೇವ ನಿರ್ವಿಕಾರಸ್ಯೈವ ನಿಮಿತ್ತತ್ವಂ ಜಗನ್ನಿಮಿತ್ತಕಾರಣತ್ವಮ್ । ತತ್ತಸ್ಮಾತ್ । ತಟಸ್ಥತಾ ಜಗಜ್ಜನ್ಮಾದಿಕಾರಣತ್ವಲಕ್ಷಣಸ್ಯಾಏದ್ಯಾನಿಷ್ಠತಾ । ಜನ್ಮಾದ್ಯಸ್ಯ ಯತ ಇತಿ ಸೂತ್ರೇ ಜಗದುಪಾದಾನತ್ವಂ ಯದ್ಯಭಿಪ್ರೇತಂ ತದಾನಿರ್ವಿಕಾರೇ ಬ್ರಹ್ಮಣ್ಯ- ಯೋಗಾತ್ ಸ್ಯಾತ್ ಕಥಂಚಿತ್ತಟಸ್ಥತಾ । ಕುಲಾಲವನ್ನಿಮಿತ್ತಕಾರಣತ್ವಸ್ಯೈವ ಸೂತ್ರಾರ್ಥತ್ವ- ಸಂಭವಾತ್ ವ್ಯರ್ಥಂ ತಟಸ್ಥತ್ವಕಥನಮ್ । ನಹಿ ಸೂತ್ರಕಾರಃ ಆದಿಸೂತ್ರೇ ಬ್ರಹ್ಮಪ್ರಸ್ತಾವ್ಯಾ- ವಿದ್ಯಾಯಾ ಲಕ್ಷಣಂ ಬ್ರೂಯಾತ್ । ಅತೋಽಪ್ಯುತ್ ಸೂತ್ರಭಾಷ್ಯಂ ಪರಕೀಯಭಾಷ್ಯಮಿತಿ ಭಾವಃ ॥ ೧೩೪ ॥

**ವಿವರಣೆ–** ಈಗ ಆನಂದಮಯಾಧಿಕರಣಕ್ಕಿಂತಲೂ ಮೊದಲು ಜನ್ಮಾಧಿಕರಣದಲ್ಲಿಯೇ ಪರಭಾಷ್ಯವು ಉತ್ಸೂತ್ರಭಾಷ್ಯ ಎಂದು ಪ್ರತಿಪಾದಿಸುತ್ತಾರೆ. ಪರಮಾತ್ಮನು ನಿರ್ವಿಕಾರನಾದವನು. ಆದ್ದರಿಂದ ಉಪಾದಾನತ್ವವು ಕೂಡುವುದಿಲ್ಲ. ಕುಂಬಾರನಿಗೆ ಹೇಗೋ ಹಾಗೆ ನಿಮಿತ್ತತ್ವವು ಕೂಡುತ್ತದೆ. ಜನ್ಮಾದಿಸೂತ್ರದಲ್ಲಿ ಉಪಾದಾನತ್ವವು ಅಭಿಪ್ರೇತವಾಗಿದ್ದರೆ ಆಗ ಲಕ್ಷಣಕ್ಕೆ ತಟಸ್ಥತ್ವವನ್ನು ಹೇಳುವ ಅವಕಾಶವಿರುತ್ತಿದ್ದಿತೋ ಏನೋ. ಆದರೆ ಕುಲಾಲನಂತೆ ನಿಮಿತ್ತತ್ವವನ್ನು ಹೇಳಿರುವುದರಿಂದ ಆ ನಿಮಿತ್ತತ್ವವು ಬ್ರಹ್ಮನಲ್ಲಿ ಕೂಡುವುದರಿಂದ ತಟಸ್ಥತ್ವವು ಅಯುಕ್ತವಾಗುವುದು. ಸೂತ್ರಕಾರರು ಮೊದಲನೆಯ ಸೂತ್ರದಲ್ಲಿ ಬ್ರಹ್ಮನನ್ನು ಪ್ರಸ್ತಾವಿಸಿ, ಎರಡನೆಯ ಸೂತ್ರದಲ್ಲಿ ಅವಿದ್ಯೆಯ ಲಕ್ಷಣವನ್ನು ಹೇಳುವುದಿಲ್ಲ. ಆದ್ದರಿಂದ ಜನ್ಮಾದಿಕರಣದಲ್ಲಿಯೇ ಪರಭಾಷ್ಯವು ಉತ್ಸೂತ್ರಭಾಷ್ಯ ಎಂದು ಅಭಿಪ್ರಾಯ.

**ಪಂಚಮೀ ಚ ನಿಮಿತ್ತೇಽಸ್ತು ಯದಿ ಪಾಣಿನಿಶಿಕ್ಷಯಾ ।**
**ಉಪಾದಾನೇ ಪಂಚಮೀಯಂ ತಸ್ಯ ಶಿಕ್ಷಾಂತರಂ ಸ್ಮರ ॥ ೧೩೫ ॥**

**ಅರ್ಥ–** ಪಂಚಮೀ ಚ= ಮತ್ತು ಯತಃ ಎಂಬಲ್ಲಿರುವ ಪಂಚಮಿಯಾದರೂ, ನಿಮಿತ್ತೇ= ನಿಮಿತ್ತ ಎಂಬುವ ಅರ್ಥದಲ್ಲಿ, ಅಸ್ತು= ಇರಲಿ, ಯದಿ= ಒಂದು ಪಕ್ಷ, ಪಾಣಿನಿಶಿಕ್ಷಯಾ= ಪಾಣಿನಿಯ ಇನ್ನೊಂದು ಸೂತ್ರದಿಂದ, ಇಯಂ ಪಂಚಮೀ= ಯತಃ ಎಂಬಲ್ಲಿರುವ ಪಂಚಮಿಯು, ಉಪಾದಾನೇ= ಉಪಾದಾನ ಎಂಬ ಅರ್ಥದಲ್ಲಿ ಇದೆ ಎಂದು ಹೇಳುವುದಾದರೆ, ತಸ್ಯ= ಆ ಪಾಣಿನಿಯ, ಶಿಕ್ಷಾಂತರಂ= ಇನ್ನೊಂದು ಸೂತ್ರವನ್ನು, ಸ್ಮರ= ಸ್ಮರಿಸು.

**ಅನುವಾದ–** ಯತೋವಾ ಇಮಾನಿ ಭೂತಾನಿ ಎಂಬ ವಾಕ್ಯದಲ್ಲಿ ಯತಃ ಎಂಬಲ್ಲಿರುವ ಪಂಚಮೀ ವಿಭಕ್ತಿಯು ನಿಮಿತ್ತಾರ್ಥವಾಗಲಿ. ಜನಿಕರ್ತುಃಪ್ರಕೃತಿಃ ಎಂಬ ಪಾಣಿನಿ ಸೂತ್ರದ ಬಲದಿಂದ ಇಲ್ಲಿ ಜಾಯತೇ ಎಂಬ ಜನಿ ಧಾತುವಿನ ಪ್ರಯೋಗವಿರುವುದರಿಂದ, ಈ ಪಂಚಮಿಯು ಉಪಾದಾನ ಪಂಚಮೀ ಎಂದು ಹೇಳುವುದಾದರೆ ಪಾಣಿನಿಯ ಸಾರ್ವವಿಭಕ್ತಿಕೇ ತಸಿಃ ಎಂಬ ಇನ್ನೊಂದು ಆದೇಶವನ್ನು ಸ್ಮರಿಸು.

**ಭಾವವಿಲಾಸಿನೀ–** ಪಂಚಮೀ ಯತ ಇತಿ ಪಂಚಮೀ। ನನು ಜನಿಕರ್ತುಃ ಪ್ರಕೃತಿರಿತಿ ಸೂತ್ರಾಜ್ಜನಿ-ಧಾತು ಸಮಾಯೋಗೇ ಪಂಚಮ್ಯಾ ಉಪಾದಾನಪಂಚಮೀತ್ವ- ನಿಯಮಾತ್ ಪ್ರಕೃತೇ ಚ ಯತೋವಾ ಇಮಾನಿ ಭೂತಾನಿ ಜಾಯಂತೇ ಇತಿ ಜನಿಧಾತುಶ್ರವಣಾತ್ಕಥಂ ನಿಮಿತ್ತ-ಪಂಚಮೀತ್ವಮಿತಿ ಶಂಕಾಂನಿರಾಕರೋತಿ ॥ **ಯದೀತಿ** ॥ ಇಯಂ ಛಂದಸಿ ವಿದ್ಯಮಾನಾ। ತಸ್ಯ ಪಾಣಿನೇಃ ॥ ೧೩೫ ॥

**ವಿವರಣೆ–** ಯತಃ ಎಂಬಲ್ಲಿ ತಸಿಲ್ ಪ್ರತ್ಯಯವಿದೆ. ತಸಿಲ್ ಪ್ರತ್ಯಯಕ್ಕೆ ನಿಮಿತ್ತ ಎಂದು ಅರ್ಥ. ಆದ್ದರಿಂದ ಈ ಪಂಚಮಿ ನಿಮಿತ್ತಾರ್ಥವಾಗುತ್ತದೆ. ಆದರೆ ಅದನ್ನು ಬಿಟ್ಟು ಇಲ್ಲಿ ಜನಿ ಧಾತುವಿನ ಪ್ರಯೋಗವಿರುವುದರಿಂದ ಜನಿಧಾತುವಿನ ಪ್ರಯೋಗವಿದ್ದಾಗ ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರದಿಂದ ಯತಃ ಎಂಬಲ್ಲಿ ಪಂಚಮಿಯು ಬಂದಿದೆ. ಆದ್ದರಿಂದ ಇಲ್ಲಿ ಉಪಾದಾನ ಪಂಚಮಿಯನ್ನು ಅಂಗೀಕರಿಸಬೇಕು ಎಂದು ಹೇಳುವುದಾದರೆ, ಸಾರ್ವವಿಭಕ್ತಿಕಃ ತಸಿಃ ಎಂದು ಪಾಣಿನಿಯ ಇನ್ನೊಂದು ಆದೇಶವಿದೆ. ಇಲ್ಲಿ ತಸಿಲ್ ಪ್ರತ್ಯಯವಲ್ಲ, ತಸಿಃ ಪ್ರತ್ಯಯವಿದೆ. ತಸಿಃ ಪ್ರತ್ಯಯಕ್ಕೆ ಎಲ್ಲ ವಿಭಕ್ತಿಯ ಅರ್ಥಗಳೂ ಇವೆ. ಆದ್ದರಿಂದ ಯತಃ ಎಂಬಲ್ಲಿ ತಸಿಃ ಪ್ರತ್ಯಯವನ್ನು ಅನುಸಂಧಾನವನ್ನು ಮಾಡಿ, ತೃತೀಯಾ ವಿಭಕ್ತಿಯ ಅರ್ಥವಾದ ಕರ್ತೃತ್ವವನ್ನು ಹೇಳು ಎಂದು ಅಭಿಪ್ರಾಯ.

ಯತಃಪದಂ ಯತಃ ಪ್ರೋಕ್ತಂ ತೇನ ಸಾರ್ವವಿಭಕ್ತಿಕಂ ।
ತದಪೋಽಸೃಜತೇತ್ಯಾದ್ಯಾ ಪ್ರಥಮಾ ಚ ಸಹಸ್ರಶಃ ॥ ೧೩೬ ॥

ಅತೋ ವಿಭಕ್ತಿವ್ಯತ್ಯಾಸೋಽಪ್ಯತ್ರ ಸರ್ವತ್ರ ಶೋಭತೇ ।
ಸೋಽಪಿ ಛಂದಸಿ ತೇನೋಕ್ತಸ್ತತಃ ಕಾಽನುಪಪನ್ನತಾ ॥ ೧೩೭ ॥

**ಅರ್ಥ–** ಯತಃ= ಯಾವ ಕಾರಣದಿಂದ, ಯತಃ ಪದಂ= ಯತಃ ಎಂಬ ಪದವು, ತೇನ= ಆ ಪಾಣಿನಿಯಿಂದ, ಸಾರ್ವವಿಭಕ್ತಿಕಂ= ಸಾರ್ವವಿಭಕ್ತಿಕವಾದ ಪ್ರತ್ಯಯಾಂತವಾಗಿ, ಪ್ರೋಕ್ತಂ= ಹೇಳಲ್ಪಟ್ಟಿದೆಯೋ, ಚ= ಮತ್ತು, ತದಪೋಽಸೃಜತೇತ್ಯಾದ್ಯಾಃ= ತದಪೋ ಸೃಜತ ಮೊದಲಾದ, ಪ್ರಥಮಾ ಚ= ಪ್ರಥಮಾ ವಿಭಕ್ತಿಯು, ಸಹಸ್ರಶಃ= ಸಹಸ್ರಸಂಖ್ಯೆಯಲ್ಲಿ

ಇದೆಯೋ, ಅತಃ= ಆ ಕಾರಣದಿಂದ, ಅತ್ರ ಸರ್ವತ್ರ= ಈ ಎಲ್ಲಾ ಸ್ಥಳಗಳಲ್ಲಿಯೂ, ವಿಭಕ್ತಿವ್ಯತ್ಯಾಸೋಽಪಿ= ವಿಭಕ್ತಿ ವ್ಯತ್ಯಾಸವೂ ಕೂಡ, ಶೋಭತೇ= ಶೋಭಿಸುತ್ತದೆ, ಛಂದಸಿ= ವೇದದಲ್ಲಿ, ಸೋಽಪಿ= ಆ ವಿಭಕ್ತಿ ವ್ಯತ್ಯಾಸವೂ ಕೂಡ, ತೇನೋಕ್ತಃ= ಆ ಪಾಣಿನಿಯಿಂದ ಹೇಳಲ್ಪಟ್ಟಿದೆ, ತತಃ= ಆ ಕಾರಣದಿಂದ, ಕಾನುಪಪನ್ನತಾ= ಯಾವ ಅನುಪಪತ್ತಿ ಇದೆ?

**ಅನುವಾದ–** ಯತಃ ಎಂಬ ಪದವು ಸಾರ್ವವಿಭಕ್ತಿಕವಾದುದೆಂದು ಪಾಣಿನಿಯೇ ಹೇಳಿದ್ದಾನೆ ಮತ್ತು ತದಪೋ ಸೃಜತ ಮೊದಲಾದ ಪ್ರಥಮಾಂತವಾದ ತತ್ಪದವನ್ನು ಒಳಗೊಂಡ ವಾಕ್ಯಗಳೂ ಸಹಸ್ರಸಂಖ್ಯೆಯಲ್ಲಿ ಇವೆ. ಆದ್ದರಿಂದ ಈ ಎಲ್ಲ ಕಡೆಗಳಲ್ಲಿಯೂ ವಿಭಕ್ತಿಯ ವ್ಯತ್ಯಾಸವೇ ಶೋಭಿಸುತ್ತದೆ. ಪಾಣಿನಿಯೂ ಸಹ ವೇದದಲ್ಲಿ ವಿಭಕ್ತಿಯ ವ್ಯತ್ಯಾಸವನ್ನು ಹೇಳಿದ್ದಾನೆ. ಆದ್ದರಿಂದ ಯಾವ ಅನುಪಪತ್ತಿ ಇದೆ?

**ಭಾವವಿಲಾಸಿನೀ–** ಯತಃ ಯಸ್ಮಾತ್ । ತೇನ ಪಾಣಿನಿನಾ । ಯತಃ ಪದಂ ಯತ ಇತಿ ತಸಿಪ್ರತ್ಯಯಾಂತಪದಮ್ । ಸಾರ್ವವಿಭಕ್ತಿಕಂ ಸರ್ವವಿಭಕ್ತಿಷು ವರ್ತಮಾನಮ್ । ಯತಶ್ಚ ತದಪೋಽಸೃಜತೇತ್ಯಾದ್ಯಾ ಪ್ರಥಮಾ ಕರ್ತ್ರರ್ಥಕಪ್ರಥಮಾ ವಿಭಕ್ತಿಃ ಸಹಸ್ರಶೋಽಸ್ತಿ । ಆದಿಪದೇನ ತತ್ತೇಜೋಽಸೃಜತೇತ್ಯಾದೇರ್ಗ್ರಹಣಮ್ । ಅತಃ ಕಾರಣಾತ್ । ಅತ್ರ ಯತಃಪದಘಟಿತವಾಕ್ಯೇಷು ಸರ್ವತ್ರ ತತ್ರ ತತ್ರ ವಿದ್ಯಮಾನೇಷು ಸರ್ವೇಷ್ವಿತ್ಯರ್ಥಃ । ವಿಭಕ್ತಿವ್ಯತ್ಯಾಸಃ ಏಕವಿಭಕ್ತೇ ವಿಭಕ್ತ್ಯಂತರಾತ್ಮಕತ್ವಮ್ । ಪಾಣಿನಿನಾ ತಸಿಲ್‌ಪ್ರತ್ಯಯಾಂತಸ್ಯ ಸಾರ್ವವಿಭಕ್ತಿಕತ್ವ ಕಥನಾತ್ ಯತೋವಾ ಇಮಾನಿ ಭೂತಾನಿ ಜಾಯಂತ ಇತ್ಯತ್ರಾಪಿ ಯತ ಇತಿ ಪದಂ ಯೇನೇತಿ ಕರ್ತ್ರರ್ಥಕ ತೃತೀಯಾಂತಪದಮಪಿ ಸ್ಯಾತ್ । ಕರ್ತೃಕರಣಯೋಸ್ತೃತೀಯೇತಿ ಕರ್ತರಿ ತೃತೀಯಾಯಾ ಅನುಶಾಸನಾತ್ । ಅತ ಏವ ಪ್ರಾಕ್ಕುಲಾಲವನ್ನಿಮಿತ್ತತ್ವಮಿತಿ ಕರ್ತೃತ್ವಮೇವ ಪ್ರಸ್ತಾವಿತಮ್ । ತದಪೋಽಸೃಜತೇತಿ ಶ್ರುತ್ಯಂತರೇ ಬ್ರಹ್ಮಣಃ ಸ್ಪಷ್ಟಂ ಕರ್ತೃತ್ವೋಕ್ತ್ಯಾ ಚಾತ್ರ ಕರ್ತ್ರರ್ಥಕತೃತೀಯಾ-ವಿಭಕ್ತೇರೇವ ನ್ಯಾಯ್ಯತ್ವಾತ್ । ಉಪಲಕ್ಷಣಂ ಚೈತತ್ । ಅಸ್ಯಾಮೇವ ಶ್ರುತೌ ಯೇನೇತಿ ಸ್ಥಿತಿಪ್ರಕರಣೇ ಕರ್ತೃತ್ವಸ್ಯೋಕ್ತತ್ವಾತ್ । ನಹಿ ತತ್ರ ಕರ್ತುರತ್ರೋಪಾದಾನತ್ವಮುಚಿತಮಿತ್ಯಪಿ ಗ್ರಾಹ್ಯಮ್ । ಸೋಽಪಿ ವಿಭಕ್ತಿವ್ಯತ್ಯಾಸೋಽಪಿ । ತೇನ ಪಾಣಿನಿನಾ । ಛಂದಸ್ಯುಭಯಥಾ, ವ್ಯತ್ಯಯೋ ಬಹುಲಂ, ಸುಪಾಂಸುಲುಗಿತ್ಯಾದಿ ತದ್ವಚನಾಚ್ಛಂದಸಿ ವಿಭಕ್ತಿವ್ಯತ್ಯಾಸೋಽಪಿ ನ್ಯಾಯ್ಯ ಇತಿ ಭಾವಃ । ತತಸ್ತಸ್ಮಾತ್ ಪೂರ್ವೋಕ್ತನಿಮಿತ್ತಚತುಷ್ಟಯಾತ್ ॥ ೧೩೬-೧೩೭ ॥

**ವಿವರಣೆ–** ಯತಃ ಎಂಬ ಪದವು ತಸಿಲ್ ಪ್ರತ್ಯಯಾಂತವೂ ಆಗಬಹುದು. ತಸಿ ಪ್ರತ್ಯಯವೂ ಆಗಬಹುದು. ಪಾಣಿನಿಯು ತಸಿಪ್ರತ್ಯಯಾಂತವಾದ ಯತಃ ಶಬ್ದವನ್ನು ಅಂಗೀಕರಿಸಿದ್ದಾನೆ. ಅದನ್ನು ಇಲ್ಲಿ ಸ್ವೀಕರಿಸು. ತಸಿಪ್ರತ್ಯಯಕ್ಕೆ ಎಲ್ಲಾ ವಿಭಕ್ತಿಗಳ ಅರ್ಥವೂ ಇದೆ. ಆದ್ದರಿಂದ ತೃತೀಯಾ ವಿಭಕ್ತಿಯ ಕರ್ತೃತ್ವರೂಪವಾದ ಅರ್ಥವೂ ಇದೆ. ಆದ್ದರಿಂದ ಯತಃ ಎಂಬಲ್ಲಿರುವ ತಸಿಃ ಪ್ರತ್ಯಯವು ಕರ್ತೃತ್ವವನ್ನೇ ಹೇಳುತ್ತದೆ. ಒಂದು ಪಕ್ಷ ತಸಿಲ್

ಪ್ರತ್ಯಯ ಎಂದು ಒಪ್ಪಿದರೂ, ಪಂಚಮೀವಿಭಕ್ತಿಗೆ ವಿಭಕ್ತಿ ವ್ಯತ್ಯಾಸವನ್ನು ಮಾಡಿ ತೃತೀಯಾ ವಿಭಕ್ತಿಯ ಅರ್ಥವನ್ನು ಹೇಳಿ, ಕರ್ತೃತ್ವ ಎಂದು ಅರ್ಥವನ್ನು ಹೇಳಬೇಕು. ಏಕೆಂದರೆ ಪಾಣಿನಿಯೂ ಸಹ ಛಂದಸ್ಯುಭಯಥಾ, ವ್ಯತ್ಯಯೋಬಹುಲಂ, ಸುಪಾಂಸುಲುಕ್ ಇತ್ಯಾದಿ ಸೂತ್ರಗಳಲ್ಲಿ ವಿಭಕ್ತಿ ವ್ಯತ್ಯಾಸವನ್ನು ಅಂಗೀಕರಿಸಿದ್ದಾನೆ. ವಿಭಕ್ತಿವ್ಯತ್ಯಾಸವನ್ನು ಅಂಗೀಕರಿಸು ಎಂದು ಹೇಳಿದ್ದು ಇದು ಉಪಲಕ್ಷಣ. ಮುಂದೆ 'ಯೇನ ಜಾತಾನಿ ಜೀವಂತಿ' ಎಂಬ ಇದೇ ವಾಕ್ಯದ ಖಂಡದಲ್ಲಿ ಸ್ಥಿತಿಕರ್ತೃತ್ವವನ್ನು ಬ್ರಹ್ಮನಿಗೆ ಹೇಳಲಾಗಿದೆ. ಸ್ಥಿತಿಯನ್ನು ಕುರಿತು ಉಪಾದಾನ ಎಂಬ ಯಾವ ಅರ್ಥವೂ ಇಲ್ಲ. ಯೇನ ಎಂಬ ಯತ್ಪದದಿಂದ ಯಾವನು ಹೇಳಲ್ಪಟ್ಟಿದ್ದಾನೆಯೋ, ಅವನೇ ಯತಃ ಎಂಬಲ್ಲಿ ಯತ್ಪದದಿಂದ ಹೇಳಲ್ಪಡಬೇಕು. ಆದ್ದರಿಂದ ಸ್ಥಿತಿಕರ್ತೃವಾದ ಬ್ರಹ್ಮನು ಯೇನ ಎಂಬಲ್ಲಿ ಹೇಳಲ್ಪಟ್ಟರೆ, ಬ್ರಹ್ಮನಲ್ಲಿ ಕರ್ತೃತ್ವವಿದೆ ಆದಕಾರಣದಿಂದ ಸೃಷ್ಟಿಯನ್ನು ಕುರಿತು ಕುಲಾಲನಂತೆ ಕರ್ತೃತ್ವವು ಯತಃ ಎಂಬ ಪದದಿಂದ ಹೇಳಲ್ಪಡಬೇಕು ಎಂದು ಅಭಿಪ್ರಾಯ.

ಸ್ವಮೂಲಸೂತ್ರಮುತ್ಸೃಜ್ಯ ಶ್ರುತೌ ಕೃತರತೇಸ್ತವ ।
ಪರಸೂತ್ರಂ ಪರಿತ್ಯಜ್ಯ ಕುತೋ ನಾಸೀತ್ ಶ್ರುತೌ ರತಿಃ ॥ ೧೩೮ ॥

**ಅರ್ಥ**– ಸ್ವಮೂಲಸೂತ್ರಂ= ನಿನ್ನ ಭಾಷ್ಯಕ್ಕೆ ಮೂಲವಾದ ಬ್ರಹ್ಮಸೂತ್ರವನ್ನು, ಉತ್ಸೃಜ್ಯ= ಪರಿತ್ಯಾಗವನ್ನು ಮಾಡಿ, ಶ್ರುತೌ= ಶ್ರುತಿಯಲ್ಲಿ, ಕೃತರತೇಃ= ಆದರವನ್ನು ತೋರಿಸಿದ, ತವ= ನಿನಗೆ, ಪರಸೂತ್ರಂ= ಪರಕೀಯವಾದ ವ್ಯಾಕರಣ ಸೂತ್ರವನ್ನು, ಪರಿತ್ಯಜ್ಯ= ಪರಿತ್ಯಾಗವನ್ನು ಮಾಡಿ, ಶ್ರುತೌ= ಶ್ರುತಿಯಲ್ಲಿ, ರತಿಃ= ಆದರವು, ಕುತೋ ನಾಸೀತ್= ಏಕೆ ಉಂಟಾಗಲಿಲ್ಲ.

**ಅನುವಾದ**– ನಿನ್ನ ಭಾಷ್ಯಕ್ಕೆ ಮೂಲವಾದ ಬ್ರಹ್ಮಸೂತ್ರವನ್ನು ಪರಿತ್ಯಾಗವನ್ನು ಮಾಡಿ, ಶ್ರುತಿಯಲ್ಲಿ ಆದರವನ್ನು ತೋರಿಸಿದ ನೀನು ಪರಕೀಯವಾದ ಪಾಣಿನಿಯ ಸೂತ್ರವನ್ನು ಪರಿತ್ಯಾಗವನ್ನು ಮಾಡಿ ಏಕೆ ಶ್ರುತಿಯಲ್ಲಿ ಆದರವನ್ನು ತೋರಿಸಲಿಲ್ಲ?

**ಭಾವವಿಲಾಸಿನೀ**– ಪಾಣಿನಿ ಸೂತ್ರಭಯಾತ್ ಜನ್ಮಾಧಿಕರಣೇ ಶ್ರುತಿಮುಪೇಕ್ಷಮಾಣಸ್ಯ ಪರಸ್ಯಾನಂದಮಯಾಧಿಕರಣೋಕ್ತಸ್ವನ್ಯಾಯೇನೈವ ವಿರೋಧ ಇತ್ಯಾಹ – ಸ್ವಮೂಲೇತಿ ॥ ಸ್ವಮೂಲಸೂತ್ರಂ ಆನಂದಮಯೋಽಭ್ಯಾಸಾದಿತಿ ಸ್ವಮೂಲಸೂತ್ರಮುತ್ಸೃಜ್ಯ ಗುಣೇತ್ವನ್ಯಾಯ-ಕಲ್ಪನೇತಿ ನ್ಯಾಯೇನ ತ್ಯಕ್ತ್ವಾ । ಶ್ರುತೌ ಬ್ರಹ್ಮಪುಚ್ಛಮಿತಿ ಶ್ರುತೌ। ಪರಸೂತ್ರಂ ಜನಿಕರ್ತುಃ ಪ್ರಕೃತಿರಿತಿ ಪಾಣಿನಿ ಸೂತ್ರಂ ಪರಿತ್ಯಜ್ಯ ತ್ವದುಕ್ತನ್ಯಾಯೇನೈವ ಪರಿತ್ಯಜ್ಯ ಶ್ರುತೌ ಯತೋವಾ ಇಮಾನಿ ಭೂತಾನಿ ಜಾಯಂತ ಇತ್ಯಾದಿ ಬಹುತರಶ್ರುತೌ । ಅತಃ ಪೂರ್ವೋತ್ತರವಿರುದ್ಧಭಾಷಿತ್ವಾದು-ಪೇಕ್ಷಣೀಯಂ ಪರಕೀಯಭಾಷ್ಯಮಿತಿ ಭಾವಃ ॥ ೧೩೮ ॥

**ವಿವರಣೆ**– ಆನಂದಮಯಾಧಿಕರಣದಲ್ಲಿ ಸೂತ್ರವು ಆನಂದಮಯೋಽಭ್ಯಾಸಾತ್ ಎಂದು ಆನಂದಮಯನಿಗೆ ಬ್ರಹ್ಮತ್ವವನ್ನು ಹೇಳಿದರೂ, ಆ ಬ್ರಹ್ಮಸೂತ್ರವು

ಭಾಷ್ಯಕಾರನಾದ ನಿನಗೆ ಮೂಲವಾಗಿದ್ದರೂ ಅದನ್ನು ಪರಿತ್ಯಾಗ ಮಾಡಿ ಬ್ರಹ್ಮಪುಚ್ಛಂ ಎಂದು ಶ್ರುತಿಯಲ್ಲಿ ಪುಚ್ಛದಲ್ಲಿಯೇ ಬ್ರಹ್ಮಪದಶ್ರವಣವಿರುವುದರಿಂದ ಪುಚ್ಛವೇ ಬ್ರಹ್ಮ ಎಂದು ನೀನು ಹೇಳುತ್ತೀಯೆ. ಜನಿಕರ್ತುಃ ಪ್ರಕೃತಿಃ ಎಂಬುದು ಪಾಣಿನಿಯ ಸೂತ್ರ. ನಿನ್ನ ಮೂಲವಾದ ಸೂತ್ರವನ್ನೇ ಪರಿತ್ಯಾಗ ಮಾಡಿದ ನಿನಗೆ ಪಾಣಿನಿಯ ಸೂತ್ರವನ್ನು ಪರಿತ್ಯಾಗ ಮಾಡಲು ಏನು ಭಯ? ಅದನ್ನು ಪರಿತ್ಯಾಗ ಮಾಡಿ ಯತಃ ಎಂಬಲ್ಲಿ ಬ್ರಹ್ಮಪದವಿರುವುದರಿಂದ ಇದು ನಿಮಿತ್ತಪಂಚಮಿ ಎಂದೇ ಹೇಳು. ಜನ್ಮಾದ್ಯಧಿಕರಣದಲ್ಲಿ ಶ್ರುತಿಯನ್ನು ತ್ಯಾಗಮಾಡುವುದು, ಆನಂದಮಯಾದಿಕರಣದಲ್ಲಿ ಸೂತ್ರವನ್ನು ತ್ಯಾಗಮಾಡುವುದು, ಹೀಗೆ ಮಾಡಿದರೆ ನಿನ್ನ ಭಾಷ್ಯವು ಪೂರ್ವೋತ್ತರವಿರುದ್ಧವಾಗುತ್ತದೆ ಎಂದು ಅಭಿಪ್ರಾಯ.

ಛಂದಸ್ಯುಭಯಥಾಪ್ಯಸ್ತಿ ಕಾರ್ಯೇ ನಾಸ್ತಿ ದ್ವಯೀ ಗತಿಃ ।
ಲಕ್ಷಣಸ್ಯ ತಟಸ್ಥತ್ವೇ ಸರ್ವಂ ಕಾರ್ಯಮಕರ್ತೃಕಂ ॥ ೧೩೯ ॥

**ಅರ್ಥ–** ಛಂದಸಿ= ವೇದದಲ್ಲಿ, ಉಭಯಥಾ= ಲೌಕಿಕ ಮರ್ಯಾದೆಯ ಅನುಸರಣೆಯು ಮತ್ತು ಅನನುಸರಣೆಯು, ಅಸ್ತಿ= ಇದೆ, ಕಾರ್ಯೇ= ಕಾರ್ಯದಲ್ಲಿ, ದ್ವಯೀ ಗತಿಃ= ಕರ್ತೃ ಸಹಿತತ್ವ ಮತ್ತು ಕರ್ತೃರಹಿತತ್ವ ಎಂಬ ಎರಡು ಪ್ರಕಾರಗಳು, ನಾಸ್ತಿ= ಇಲ್ಲ, ಲಕ್ಷಣಸ್ಯ ತಟಸ್ಥತ್ವೇ= ಜಗಜ್ಜನ್ಮಾದಿಕರ್ತೃತ್ವವು ತಟಸ್ಥಲಕ್ಷಣವಾದರೆ, ಸರ್ವಂ ಕಾರ್ಯಂ= ಎಲ್ಲ ಕಾರ್ಯವೂ, ಅಕರ್ತೃಕಂ= ಅಕರ್ತೃಕವೇ ಆಗಬೇಕಾಗುತ್ತದೆ.

**ಅನುವಾದ–** ವೇದದಲ್ಲಿ ಲೌಕಿಕ ಮರ್ಯಾದೆಯನ್ನು ಅನುಸರಿಸುವುದು, ಅನುಸರಿಸದೇ ಇರುವುದು ಇವೆರಡೂ ಇವೆ. ಆದರೆ ಕಾರ್ಯದಲ್ಲಿ ಕರ್ತೃರಹಿತತ್ವ ಮತ್ತು ಕರ್ತೃಸಹಿತತ್ವ ಎಂದು ಎರಡು ಪ್ರಕಾರಗಳಿಲ್ಲ. ಜನ್ಮಾದಿಕರ್ತೃತ್ವ ಲಕ್ಷಣವು ತಟಸ್ಥ ಎಂದಾದರೆ ಬ್ರಹ್ಮನಲ್ಲಿಲ್ಲ ಮಾಯೆಯಲ್ಲಿದೆ ಎಂದು ಅರ್ಥ. ಮಾಯೆಯು ಅಚೇತನವಾದ್ದರಿಂದ ಅದರಲ್ಲಿ ಎಂದೂ ಕರ್ತೃತ್ವವು ಬರುವುದಿಲ್ಲ. ಏಕೆಂದರೆ ಕರ್ತೃತ್ವವು ಚೇತನ ಧರ್ಮ. ಆಗ ಎಲ್ಲ ಕಾರ್ಯಗಳು ಅಕರ್ತೃಕವಾಗಬೇಕಾದ ಪ್ರಸಂಗವು ಬರುತ್ತದೆ. ಆದ್ದರಿಂದ ಜಗಜ್ಜನ್ಮಾದಿ ಕರ್ತೃತ್ವವು ತಟಸ್ಥ ಲಕ್ಷಣ ಎಂದು ಅಂಗೀಕಾರ ಮಾಡಬಾರದು. ಉಪಾದಾನತ್ವವು ತಟಸ್ಥ ಎಂದು ಅಂಗೀಕಾರ ಮಾಡಿದರೆ, ಆಗ ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕಾರ ಮಾಡಬೇಕಾಗುತ್ತದೆ. ಆಗ ಜಗತ್ಕರ್ತೃತ್ವವೇ ಬ್ರಹ್ಮನ ಲಕ್ಷಣವಾಗಲಿ. ಮೇಲೆ ಹೇಳಿದಂತೆ ಕರ್ತ್ರರ್ಥದಲ್ಲಿಯೂ ಪಂಚಮೀ ವಿಭಕ್ತಿಯು ಉಪಪನ್ನವಾಗುತ್ತದೆ. ಸೂತ್ರೋಕ್ತವಾದ ಜಗತ್ಕಾರಣತ್ವ ಲಕ್ಷಣವನ್ನು ಬಲದಿಂದ ಮಾಯೆಯಲ್ಲಿ ಎಳೆದು ಅನಂತರ ಅದು ಬ್ರಹ್ಮನ ತಟಸ್ಥಲಕ್ಷಣ ಎಂದು ಹೇಳುವುದು 'ಅಬದ್ಧಂ ಪಠಿತ್ವಾ ಕುಚೋದ್ಯಂ ಕರೋತಿ' ಎಂಬ ಗಾದೆಯನ್ನು ಸ್ಮರಣೆಗೆ ತಂದುಕೊಡುತ್ತದೆ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ಲಕ್ಷಣಸ್ಯ ತಟಸ್ಥತಾಂ ದೂಷಯತಿ ॥ ಛಂದಸೀತಿ ॥ ಛಂದಸಿ ವೇದೇ । ಉಭಯಥಾ ಕ್ವಚಿಲ್ಲೌಕಿಕಮರ್ಯಾದಯಾ ಕ್ವಚಿದಲೌಕಿಕಮರ್ಯಾದಯಾ ಚಾಽಸ್ತಿ ಪ್ರವೃತ್ತಿಃ । ಸಭೂಮಿಂ ಸೇದುರಾಜೇತ್ಯಾದೇಶ್ಚ ಪ್ರಯೋಗಸ್ಯ ದರ್ಶನಾತ್ । ವೇದೇ ದ್ವೇಧೇತ್ಯನುಕ್ತ್ವಾ ಛಂದಸ್ಯುಭಯಥೇತಿ ವಚನಂ ಸ್ವೋಕ್ತಾರ್ಥೇ ಪಾಣಿನಿ ಸೂತ್ರಂ ಚ ಸ್ಮಾರಯಿತುಮ್ । ತಥಾ ಚ ಯಾ ಉಪಾದಾನಪಂಚಮೀತಿ ಲೋಕೇವಿಹಿತಾ ಸಾ ವೇದೇ ನಿಮಿತ್ತಪಂಚಮೀ ಚ ಭವತಿ । ಅತೋ ನ ಸೂತ್ರವಿರೋಧ ಇತಿ ಭಾವಃ । ಕಾರ್ಯೇ ಜಗಜ್ಜನ್ಮಾದಿಕಾರ್ಯೇ ದ್ವಯೀ ಕ್ವಚಿತ್ಕರ್ತೃಕಾರಣೇ ಸತಿ ಕಾರ್ಯಂ ಕ್ವಚಿತ್ಕರ್ತೃಕಾರಣಾಭಾವೇಽಪಿ ಕಾರ್ಯಮಿತಿ ದ್ವಿವಿಧಾ । ಲಕ್ಷಣಸ್ಯ ಜನ್ಮಾದಿಕಾರಣತ್ವಲಕ್ಷಣಸ್ಯ । ತಟಸ್ಥತ್ವೇ ಮಾಯಾನಿಷ್ಠತ್ವೇ । ಮಾಯಾಯಾ ಏವ ಜಗತ್ಕಾರಣತ್ವಂ ನ ಬ್ರಹ್ಮಣ ಇತ್ಯಂಗೀಕಾರ ಇತ್ಯರ್ಥಃ । ಸರ್ವಂ ಮಹೀಮಹೀಧರಾದಿಕಮ್ । ಅಕರ್ತೃಕಂ ಕರ್ತ್ರಾಖ್ಯಕಾರಣರಹಿತಂ ಸ್ಯಾದಿತಿ ಸಂಬಂಧಃ । ತ್ವನ್ಮತೇಽಪಿ ಮಾಯಾಯಾ ಏವೋಪಾದಾನತ್ವೇನ ಕರ್ತೃತ್ವಾನಂಗೀಕಾರಾತ್ ಬ್ರಹ್ಮವ್ಯತಿರಿಕ್ತ-ಚೇತನಾಂತರಸ್ಯ ಚ ಸೃಷ್ಟೇಃ ಪೂರ್ವಮಭಾವಾತ್ ಜಗದಕರ್ತೃಕಮೇವ ಸ್ಯಾತ್ । ಯದಿ ಚೋಪಾದಾನತ್ವಮೇವ ತಟಸ್ಥಮ್ । ಕರ್ತೃತ್ವಂ ತು ಬ್ರಹ್ಮಣೋಽಪ್ಯಂಗೀಕ್ರಿಯತೇ ತರ್ಹಿ ತದೇವ ಲಕ್ಷಣಮಸ್ತು । ಉಕ್ತರೀತ್ಯಾ ಕರ್ತರ್ಯಪಿ ಪಂಚಮೀಸಂಭವಾತ್ । ಸೂತ್ರೋಕ್ತಲಕ್ಷಣಂ ಬಲಾದುಪಾದಾನೇ ಸಮಾಕೃಷ್ಯಾಬದ್ಧಂ ಪರಿತ್ಯಾ ಕುಚೋದ್ಯಮಂಗೀಕರೋತೀತಿ ನ್ಯಾಯೇನ ಕಿಮರ್ಥಂ ಲಕ್ಷಣಸ್ಯ ತಾಟಸ್ಥ್ಯಕರಣಮಿತಿ ಭಾವಃ ॥ ೧೩೯ ॥

ಜಿಜ್ಞಾಸ್ಯೇ ಲಕ್ಷಣಂ ನಾಭೂದಜಿಜ್ಞಾಸ್ಯೇಽಸ್ತಿ ಯಂತಿ ಕಿಂ ।
ತದ್ ಬ್ರಹ್ಮೇತ್ಯುಪದೇಶ್ಯಂ ಕಿಂ ಜಿಜ್ಞಾಸಾ ಕಸ್ಯ ಕಥ್ಯತಾಂ ॥ ೧೪೦ ॥

**ಅರ್ಥ–** ಜಿಜ್ಞಾಸ್ಯೇ= ಜಿಜ್ಞಾಸ್ಯನಾದ ಬ್ರಹ್ಮನಲ್ಲಿ, ಲಕ್ಷಣಂ= ಜಗಜ್ಜನ್ಮಾದಿಕರ್ತೃತ್ವ ರೂಪವಾದ ಲಕ್ಷಣವು, ನಾ ಭೂತ್= ಬರಲಿಲ್ಲ, ಅಜಿಜ್ಞಾಸ್ಯೇ= ಜಿಜ್ಞಾಸ್ಯವಲ್ಲದ ಮಾಯೆಯಲ್ಲಿ, ಅಸ್ತಿ= ಇದೆ, ಕಿಂ ಯಂತಿ= ಮುಕ್ತರು ಏನನ್ನು ಹೊಂದುತ್ತಾರೆ, ತದ್ಬ್ರಹ್ಮ= ಅದು ಬ್ರಹ್ಮ ಇತಿ= ಎಂದು, ಉಪದೇಶ್ಯಂ= ಉಪದೇಶಿಸಲ್ಪಡುವುದು, ಕಿಂ= ಯಾವುದು, ಕಸ್ಯ= ಯಾರ, ಜಿಜ್ಞಾಸಾ= ವಿಚಾರ ಎಂದು, ಕಥ್ಯತಾಂ= ಹೇಳು.

**ಅನುವಾದ–** ಜಗಜ್ಜನ್ಮಾದಿಕಾರಣತ್ವವು ತಟಸ್ಥಲಕ್ಷಣ ಎಂದು ಹೇಳಿದರೆ ಅದು ಮೊದಲನೆಯ ಸೂತ್ರದ ಜಿಜ್ಞಾಸ್ಯನೆಂದು ಹೇಳಿದ ಬ್ರಹ್ಮನಲ್ಲಿ ಬರಲಿಲ್ಲ. ಜಿಜ್ಞಾಸ್ಯವಲ್ಲದ ಮಾಯೆಯಲ್ಲಿ ಬಂದಿತು. ಯತ್ ಪ್ರಯಂತಿ ಎಂದು ಹೇಳುವ ಮುಕ್ತ ಪ್ರಾಪ್ಯತ್ವವನ್ನು ಯಾರಿಗೆ ಹೇಳಬೇಕು? ತದ್ಬ್ರಹ್ಮ ಎಂದು ಕೊನೆಯಲ್ಲಿ ಉಪಸಂಹಾರ ಮಾಡಿ ಉಪದೇಶಿಸಲ್ಪಡುವ ಬ್ರಹ್ಮ ವಿಚಾರವು ಯಾವುದು? ಯಾರ ವಿಚಾರವು ವಿಧೇಯವಾಗಿದೆ ಎಂದು ಹೇಳು.

**ಭಾವವಿಲಾಸಿನೀ**— ದೂಷಣಾಂತರಂ ಚಾಹ – **ಜಿಜ್ಞಾಸ್ಯ ಇತಿ** ॥ ಲಕ್ಷಣಂ ತ್ವದಭಿತಮಲಕ್ಷಣಂ ಜಿಜ್ಞಾಸ್ಯೇ ಅಥಾತೋ ಬ್ರಹ್ಮಜಿಜ್ಞಾಸೇತಿ ಜಿಜ್ಞಾಸ್ಯತಯೋಕ್ತೇ ಬ್ರಹ್ಮಣಿ ನಾಭೂತ್ । ಕಿಂ ತ್ವಜಿಜ್ಞಾಸ್ಯೇ ಅಜ್ಞಾನ ಏವಾಸ್ತಿ । ಅತಃ ಪ್ರಕೃತಾನುಪಯೋಗಿತ್ವಾದಪಿ ತ್ವತ್ಕಲ್ಪನಮಸಂಗತಮಿತಿ ಭಾವಃ। ದೂಷಣಾಂತರಂ ಚಾಹ–**ಯಂತೀತಿ** ॥ ಯತೋ ವಾ ಇಮಾನಿ ಭೂತಾನಿ ಜಾಯಂತ ಇತಿ ವಾಕ್ಯಖಂಡೇಽಜ್ಞಾನಸ್ಯೈವ ಪ್ರತಿಪಾದ್ಯತ್ವೇ ಯತ್ ಪ್ರಯಂತೀತ್ಯತ್ರ ಕಿಂ ಯಂತಿ ಪ್ರಾಪ್ನುವಂತಿ । ನಹ್ಯಜ್ಞಾನಂ ತವಾಪಿ ಮತೇ ಮುಕ್ತಪ್ರಾಪ್ಯಮ್ । ತತ್ರ ಬ್ರಹ್ಮಣೋವಶ್ಯಂ ಪ್ರತಿಪಾದ್ಯತ್ವೇ ಪೂರ್ವವಾಕ್ಯೇಪಿ ತದೇವಪ್ರತಿಪಾದ್ಯಂ ಸ್ಯಾತ್ । ನತ್ವನ್ಯತ್ । ತಥಾ ಸತಿ ವಾಕ್ಯ ಯೋಜನಾಽಯೋಗಾದಿತಿ ಭಾವಃ। ದೂಷಣಾಂತರಂ ಚಾಹ – **ತದ್‌ಬ್ರಹ್ಮೇತಿ** ॥ ಯತ್ಪದೇನ ಪ್ರಾಗುಕ್ತಂ ವಸ್ತು ತದಿತಿ ಪರಾಮೃಶ್ಯ ಬ್ರಹ್ಮೇತ್ಯುಪದೇಶ್ಯಂ ಕಿಂ ನಹ್ಯಜ್ಞಾನಂ ಬ್ರಹ್ಮಪದೇನೋಪ-ದೇಶ್ಯಮಿತಿ ಭಾವಃ। ಯುಕ್ತ್ಯಂತರಂ ಚಾಹ – **ಜಿಜ್ಞಾಸೇತಿ** ॥ ಪೂರ್ವವತ್ತತ್ಪದೇನ ಪರಾಮೃಶ್ಯ ವಿಜಿಜ್ಞಾಸಸ್ವೇತಿ ಲೋಟಾ ವಿಹಿತಾಜಿಜ್ಞಾಸಾಕಸ್ಯ ನಹಿ ಬ್ರಹ್ಮಣೋನ್ಯಸ್ಯ ಜಿಜ್ಞಾಸ್ಯತೇತಿ ಭಾವಃ ॥ ೧೪೦ ॥

**ವಿವರಣೆ**— ಜನ್ಮಾದಿಕಾರಣತ್ವಕ್ಕೆ ತಟಸ್ಥಲಕ್ಷಣತ್ವವನ್ನು ಅಂಗೀಕಾರ ಮಾಡಿದರೆ ಇಲ್ಲಿ ದೋಷಾಂತರವನ್ನು ಹೇಳುತ್ತಾರೆ. ಲಕ್ಷಣವು ಲಕ್ಷ್ಯದಲ್ಲಿ ಬರಬೇಕು. ಲಕ್ಷ್ಯನಾದವನು ಜಿಜ್ಞಾಸ್ಯ ಬ್ರಹ್ಮ. ಈ ಲಕ್ಷಣವು ತಟಸ್ಥವಾದರೆ ಅದು ಬ್ರಹ್ಮನಲ್ಲಿ ಬರುವುದಿಲ್ಲ, ಮಾಯೆಯಲ್ಲಿ ಬರುತ್ತದೆ. ಜೊತೆಗೆ ಯತ್ಪ್ರಯಂತಿ ಎಂಬ ವಾಕ್ಯಶೇಷದಲ್ಲಿ ಆ ಜಗತ್ಕಾರಣವಾದ ವಸ್ತುವಿಗೆ ಮುಕ್ತಪ್ರಾಪ್ಯತ್ವವನ್ನು ಹೇಳಿದ್ದಾರೆ. ಜಗತ್ಕಾರಣತ್ವವು ಮಾಯೆಯಲ್ಲಿಯೇ ಇದ್ದರೆ ಅದು ಮುಕ್ತಪ್ರಾಪ್ತವಾಗುತ್ತದೆಯೇ? ಮೋಕ್ಷಾವಸ್ಥೆಯಲ್ಲಿ ಮಾಯೆ ಇಲ್ಲವಷ್ಟೇ? ಯಾವುದು ಜಗಜ್ಜನ್ಮಾದಿಕಾರಣವೋ ಅದನ್ನು ಉಪದೇಶ ಮಾಡಬೇಕು. ಜಗಜ್ಜನ್ಮಾದಿಕಾರಣವು ಮಾಯೆಯೇ ಆದರೆ ಬ್ರಹ್ಮ ಎಂದು ಉಪದೇಶ ಮಾಡುವುದು ಏನನ್ನು? ಮೊದಲನೆ ಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯು ಪ್ರಸ್ತುತವಾಗಿದೆ. ಇಲ್ಲಿ ಮಾಯೆಯಲ್ಲಿರುವ ಲಕ್ಷಣವನ್ನು ಹೇಳಿದರೆ, ಇದು ಬ್ರಹ್ಮನ ಜಿಜ್ಞಾಸೆಯೋ ಅಥವಾ ಮಾಯೆಯ ಜಿಜ್ಞಾಸ್ಯೆಯೋ ಎಂದು ಹೇಳು. ಆದ್ದರಿಂದ ನಿನ್ನ ಭಾಷ್ಯದ ರೀತಿಯಲ್ಲಿ ಎಲ್ಲವೂ ಅಸಂಗತವಾಗುತ್ತದೆ ಎಂದು ಅಭಿಪ್ರಾಯ.

**ಯದಿ ಶ್ರುತ್ಯಾ ಪುಚ್ಛಮೇವ ಬ್ರಹ್ಮಲಕ್ಷಣವತ್ ತದಾ ।**
**ಶ್ರುತೇರ್ಬಲಾದ್ ಬ್ರಹ್ಮ ಭವೇದನನ್ಯಾರ್ಥಾ ಯತಸ್ತ್ವಿಯಂ ॥ ೧೪೧ ॥**

**ಅರ್ಥ**— ಯದಿ= ಒಂದು ಪಕ್ಷ, ಶ್ರುತ್ಯಾ= ಶ್ರುತಿಯ ಬಲದಿಂದ, ಪುಚ್ಛಮೇವ= ಪುಚ್ಛವೇ, ಬ್ರಹ್ಮ= ಬ್ರಹ್ಮನೆಂದಾದರೆ, ತದಾ= ಆಗ, ಶ್ರುತೇರ್ಬಲಾತ್= ಅದೇ ಶ್ರುತಿಯ ಬಲದಿಂದಲೇ, ಬ್ರಹ್ಮ= ಬ್ರಹ್ಮನು, ಲಕ್ಷಣವತ್= ಲಕ್ಷಣವುಳ್ಳವನಾಗಿ, ಭವೇತ್= ಆಗುತ್ತಾನೆ, ಯತಃ= ಏಕೆಂದರೆ, ಇಯಂ= ಈ ಯತೋವಾ ಇಮಾನಿ ಭೂತಾನಿ ಎಂಬ ಶ್ರುತಿಯು, ಅನನ್ಯಾರ್ಥಾ= ಬೇರೆ ಅರ್ಥವನ್ನು ಹೇಳುವುದಿಲ್ಲ.

**ಅನುವಾದ–** ಬ್ರಹ್ಮಪುಚ್ಛಂ ಎಂಬಲ್ಲಿ ಶ್ರುತಿಯ ಬಲದಿಂದ ಪುಚ್ಛವೇ ಬ್ರಹ್ಮನೆಂದು ಹೇಳುವುದಾದರೆ, ಯತೋ ವಾ ಇಮಾನಿ ಭೂತಾನಿ ಜಾಯಂತೇ ತದ್ಬ್ರಹ್ಮ ಎಂಬ ಶ್ರುತಿಯಲ್ಲಿ ಅದೇ ಬ್ರಹ್ಮಶಬ್ದದ ಬಲದಿಂದ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮಲಕ್ಷಣವೆಂದು ಹೇಳು. ಏಕೆಂದರೆ ಯತೋವಾ ಇಮಾನಿ ಭೂತಾನಿ ಎಂಬ ಶ್ರುತಿಗೆ ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಶ್ರೌತಬ್ರಹ್ಮಪದಪ್ರಯೋಗಾತ್ಪುಚ್ಛಸ್ಯ ಬ್ರಹ್ಮತ್ವವತ್ ತತ್ರಾಪಿ ಬ್ರಹ್ಮಪದ-ಪ್ರಯೋಗಾದೇವ ಜಗತ್ಕಾರಣಸ್ಯ ಬ್ರಹ್ಮತ್ವಮಿತ್ಯಾಹ – **ಯದೀತಿ** ॥ ತದಾ ಲಕ್ಷಣವದಿತ್ಯಾದಿ ಯೋಜನಾ । ಯತಃ ಯಸ್ಮಾತ್ । ಇಯಂ ಶ್ರುತಿರನನ್ಯಾರ್ಥಾ । ಉಕ್ತರೀತ್ಯಾಽನ್ಯಾರ್ಥ-ಶೂನ್ಯಾ ॥ ೧೪೧ ॥

**ವಿವರಣೆ–** ಪುಚ್ಛನಿಗೆ ಬ್ರಹ್ಮತ್ವವನ್ನು ಹೇಳಬೇಕಾದರೆ ಶ್ರುತಿಯಲ್ಲಿರುವ ಬ್ರಹ್ಮಶಬ್ದವೇ ನಿರ್ಣಾಯಕವಾಗಬೇಕಾದರೆ ಜನ್ಮಾದಿಕಾರಣತ್ವವನ್ನು ಹೇಳುವ ಶ್ರುತಿಯಲ್ಲಿಯೂ ಅಂತಹ ನಿರ್ಣಾಯಕವಾದ ಬ್ರಹ್ಮಶಬ್ದವು ಇರುವುದರಿಂದ, ಬ್ರಹ್ಮನಿಗೆ ಜನ್ಮಾದಿಕಾರಣತ್ವವನ್ನು ಹೇಳು. ಏಕೆಂದರೆ ಈ ಶ್ರುತಿಗೆ ಬೇರೆ ಅರ್ಥವನ್ನು ಹೇಳಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಅಂತಃಸೂತ್ರಮಿವೋಕ್ತಂ ಚ ಬಹಿಃಸೂತ್ರಂ ವಿಸೃಜ್ಯತಾಂ ॥ ೧೪೨ ॥**

**ಅರ್ಥ–** ಅಂತಃ ಸೂತ್ರಮಿವ= ಅಂತರಂಗದ ಸೂತ್ರದಂತೆ, ಉಕ್ತಂ= ನೀನು ಹೇಳಿದ, ಬಹಿಃ ಸೂತ್ರಂ= ಬಾಹ್ಯವಾದ ಸೂತ್ರವು, ವಿಸೃಜ್ಯತಾಂ= ವಿಸರ್ಜಿಸಲ್ಪಡಲಿ.

**ಅನುವಾದ–** ಅಂತಃ ಸೂತ್ರವಾದ ಬ್ರಹ್ಮಸೂತ್ರವನ್ನು ಪರಿತ್ಯಾಗ ಮಾಡಿದಂತೆ, ಬಾಹ್ಯಸೂತ್ರವಾದ ಪಾಣಿನಿಯ ಸೂತ್ರವನ್ನೂ ಪರಿತ್ಯಜಿಸು.

**ಭಾವವಿಲಾಸಿನೀ–** ಪ್ರಾಕ್‌ಪಾಣಿನಿಸೂತ್ರವಿರೋಧೇ ಆಶಂಕಿತೇ ತಸ್ಯೈವ ಸೂತ್ರಾಂತರಾತ್ ಸಮಾಧಾನಂ ಕೃತಮ್ । ಅಧುನಾಗೌತಮಸೂತ್ರವತ್ ಶ್ರುತಿಪ್ರತಿಕೂಲಾರ್ಥ ಕಥಕಂ ತತ್ಸೂತ್ರ-ಮೇವೋಪೇಕ್ಷ್ಯಮಿತ್ಯಾಹ – **ಅಂತರಿತಿ** ॥ ಅಂತಃ ಸ್ವಸೂತ್ರಂ ಬ್ರಹ್ಮಸೂತ್ರಮ್ । ಉಕ್ತಂ ಸೂತ್ರಂ ಪಾಣಿನಿಸೂತ್ರಮ್ ॥ ೧೪೨ ॥

**ವಿವರಣೆ–** ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆಯಲು ಹೊರಟಿರುವುದರಿಂದ, ನಿನ್ನ ಭಾಷ್ಯಕ್ಕೆ ಮೂಲವಾದ ಬ್ರಹ್ಮಸೂತ್ರವು ಅಂತರಂಗಸೂತ್ರ. ಪಾಣಿನಿಯ ಸೂತ್ರವು ಮೂಲವಲ್ಲವಾದ್ದರಿಂದ ಅದು ಬಹಿರಂಗ ಸೂತ್ರ. ಪುಚ್ಛಬ್ರಹ್ಮತ್ವವನ್ನು ಹೇಳಿ ಆನಂದ-ಮಯೋಽಭ್ಯಾಸಾತ್ ಎಂಬ ಸೂತ್ರವನ್ನೇ ಪರಿತ್ಯಾಗ ಮಾಡಿದ ನೀನು ಜನಿಕರ್ತುಃ ಪ್ರಕೃತಿಃ ಎಂಬ ಪಾಣಿನಿ ಸೂತ್ರವನ್ನು ಪರಿತ್ಯಾಗ ಮಾಡಿ, ಬ್ರಹ್ಮನಿಗೇ ಜಗತ್ಕರ್ತೃತ್ವವನ್ನು ಹೇಳು ಎಂದು ಅಭಿಪ್ರಾಯ.

**ಯದಿ ತೇ ಪಾಣಿನೇಃ ಸೂತ್ರೇ ಭರಾಚ್ಛ್ರುತಿತಿರಸ್ಕೃತಿಃ ।**
**ಲಕ್ಷಣಸ್ಯ ತಟಸ್ಥತ್ವಂ ತರ್ಹಿ ವ್ಯಾಸಾನುಶಾಸನಾತ್ ।**
**ಬ್ರಹ್ಮಾನಂದಮಯಂ ಭೂಯಾತ್ ಪುಚ್ಛಂ ಸ್ಯಾತ್ ತವ ಪೃಷ್ಠತಃ ॥ ೧೪೩ ॥**

**ಅರ್ಥ–** ಯದಿ= ಒಂದು ಪಕ್ಷ, ತೇ= ನಿನಗೆ, ಪಾಣಿನೇಃ ಸೂತ್ರೇ= ಪಾಣಿನಿ ಸೂತ್ರದಲ್ಲಿ, ಭರಾತ್= ಆದರದಿಂದ, ಶ್ರುತಿತಿರಸ್ಕೃತಿಃ= ಶ್ರುತಿಯ ತಿರಸ್ಕಾರವು ಉಂಟಾಗಿ, ಲಕ್ಷಣಸ್ಯ ತಟಸ್ಥತ್ವಂ= ಲಕ್ಷಣವು ತಟಸ್ಥ ಎಂದಾದರೆ, ತರ್ಹಿ= ಆಗ, ವ್ಯಾಸಾನುಶಾಸನಾತ್= ವ್ಯಾಸರ ಸೂತ್ರದ ಬಲದಿಂದ, ಆನಂದಮಯಂ= ಆನಂದಮಯನು, ಬ್ರಹ್ಮ ಭೂಯಾತ್= ಬ್ರಹ್ಮನಾಗಲಿ, ಪುಚ್ಛಂ= ಪಾದವು (ಬಾಲವು), ತವ ಪೃಷ್ಠತಃ= ನಿನ್ನ ಹಿಂದೆ (ಬೆನ್ನಿನ ಹಿಂದೆ), ಸ್ಯಾತ್= ಇರಲಿ.

**ಅನುವಾದ–** ಜನಿಕರ್ತುಃ ಪ್ರಕೃತಿಃ ಎಂಬ ಪಾಣಿನಿ ಸೂತ್ರದ ಆದರದಿಂದ ಯತೋವಾ ಇಮಾನಿ ಶ್ರುತಿಯಲ್ಲಿ ಹೇಳಿದ ಬ್ರಹ್ಮನ ಕರ್ತೃತ್ವವನ್ನು ನಿರಾಕರಿಸಿ ಕರ್ತೃತ್ವ ಲಕ್ಷಣವು ತಟಸ್ಥ ಎಂದು ಹೇಳುವುದಾದರೆ ಆನಂದಮಯೋಭ್ಯಾಸಾತ್ ಎಂಬ ವೇದವ್ಯಾಸರ ಸೂತ್ರದ ಬಲದಿಂದ ಆನಂದಮಯನೇ ಬ್ರಹ್ಮನಾಗಲಿ. ಪುಚ್ಛವು ನಿನ್ನ ಹಿಂದೆ ಇರಲಿ.

**ಭಾವವಿಲಾಸಿನೀ–** ಶ್ರುತಿತಿರಸ್ಕೃತಿಃ ಯತೋ ವಾ ಇಮಾನೀತಿ ಶ್ರುತಿತಿರಸ್ಕಾರಃ। ವ್ಯಾಸಾನುಶಾಸನಾತ್ ಜನ್ಮಾದ್ಯಸ್ಯ ಯತ ಇತಿ ಆನಂದಮಯೋಽಭ್ಯಸಾದಿತಿ ಚ ವ್ಯಾಸಸೂತ್ರಾತ್ । ಲಕ್ಷಣಸ್ಯ ತಟಸ್ಥತ್ವಂ ಭೂಯಾದ್ಧಿ॑ಭರ್ೂಯಾತ್। ಆನಂದಮಯಂ ಬ್ರಹ್ಮಭೂಯಾತ್। ಪುಚ್ಛಂ ಕೋಶಪುಚ್ಛತ್ವೇನಾಭಿಮತಂ ಪುಚ್ಛಂ ತವಪೃಷ್ಠತಃ ಸ್ಯಾದಿತಿ ಯೋಜನಾ । ವ್ಯಾಸಸೂತ್ರವಿರೋಧಾತ್ ಆನಂದಮಯಸ್ಯ ಕೋಶತಾಮಂಗೀಕೃತ್ಯ ತತ್ಪುಚ್ಛಸ್ಯೈವ ಬ್ರಹ್ಮತಾವಾದಂ ಪೃಷ್ಠೇ ನಿಕ್ಷಿಪ। ಅಸ್ಮದಗ್ರೇ ನ ಪ್ರಪಂಚಯೇತಿ ಭಾವಃ । ವ್ಯಾಸಪದೇನ ವೇದವಿಸ್ತಾರಾರ್ಥಂ ಪ್ರವೃತ್ತತ್ವಾದ್ವ್ಯಾಸ ಏವವೇದಮರ್ಯಾದಾಂ ವೇದ । ನತು ಪಾಣಿನಿಃ । ಅತೋ ವೇದಾರ್ಥನಿರ್ಣಯೇ ವ್ಯಾಸಸೂತ್ರಮೇವಾನುಸರ್ತವ್ಯಮಿತಿ ಸೂಚಯತಿ । ಈದೃಶಂ ವ್ಯಾಸಸೂತ್ರಮುತ್ಸೃಜ್ಯ ತದ್ಭಾಷ್ಯಕಾರಿತ್ವಾಭಿಮಾನವಾನ್ ಪರಸೂತ್ರೇ ಕೃತರತಿಸ್ತ್ವಂ ಪಶುರೇವೇತಿ ಸೂಚಯಿತುಂ ಚ ಪುಚ್ಛಂ ತವ ಪೃಷ್ಠತಸ್ಸ್ಯಾದಿತ್ಯುಕ್ತಮ್ । ಅತ್ರ ಪುಚ್ಛಪದೇನ ಲಾಂಗೂಲಮೇವ ಗ್ರಾಹ್ಯಮ್ ॥ ೧೪೩ ॥

**ವಿವರಣೆ–** ಪಾಣಿನಿ ಸೂತ್ರಕ್ಕೇ ಪ್ರಾಧಾನ್ಯವನ್ನು ಕೊಟ್ಟು ವ್ಯಾಕರಣಸೂತ್ರದ ವಿರೋಧವು ಬರುವುದೆಂದು ಶ್ರುತಿಗೆ ಅರ್ಥಾಂತರವನ್ನು ಮಾಡಿ ಸಹಜವಾಗಿ ಪ್ರತೀತವಾದ ನಿರ್ಬಾಧವಾದ ಅರ್ಥವನ್ನು ಪರಿತ್ಯಾಗ ಮಾಡುವುದಾದರೆ ವೇದವ್ಯಾಸರು ರಚಿಸಿದ ಆನಂದಮಯೋಽಭ್ಯಾಸ್ಯಾತ್ ಸೂತ್ರಕ್ಕೂ ಸಹ ಅದೇ ಮರ್ಯಾದೆಯನ್ನು ಕೊಟ್ಟು, ಬ್ರಹ್ಮನು ಆನಂದಮಯ ಎಂದು ಹೇಳು. ಬ್ರಹ್ಮನು ಆನಂದಮಯನಾದರೆ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂದು ಹೇಳಿರುವುದನ್ನು ಏನು ಮಾಡಲಿ ಎಂಬ ಪ್ರಶ್ನೆ ಬೇಡ.

ನಿನ್ನ ಬ್ರಹ್ಮಪುಚ್ಛತ್ವವಾದವನ್ನು ಹಿಂದಕ್ಕೆ ತಳ್ಳು. ಅದಕ್ಕೆ ನಾವು ಹಿಂದೆಯೇ ಅನೇಕ ಸಮಾಧಾನವನ್ನು ಹೇಳಿದ್ದೇವೆ. ಅಥವಾ ಪುಚ್ಛ ಎಂದರೆ ಬಾಲ. ಆ ಬಾಲವನ್ನು ನಿನ್ನ ಬೆನ್ನ ಹಿಂದೆ ಸಿಕ್ಕಿಸಿಕೋ. ಎಂದರೆ ವ್ಯಾಸಸೂತ್ರವನ್ನು ತಿರಸ್ಕರಿಸಿ ಭಾಷ್ಯವನ್ನು ಬರೆಯುವ ನೀನು ಪಶು ಎಂಬ ಅಭಿಪ್ರಾಯವನ್ನು ಇಲ್ಲಿ ಸೂಚಿಸುತ್ತಾರೆ.

**ಅತಃ ಪುಚ್ಛಶ್ರುತಿಸ್ತೇಽಭೂತ್ ಹ್ರಸ್ವಕೌಪೀನಪುಚ್ಛವತ್ ।**
**ಏಕಂ ಸಂಧಿತ್ಸತೋ ವಾಕ್ಯಮಪರಂ ಚ್ಯವತೇ ಯತಃ ॥ ೧೪೪ ॥**

**ಅರ್ಥ–** ಅತಃ= ಆ ಕಾರಣದಿಂದ, ಪುಚ್ಛಶ್ರುತಿಃ= ಪುಚ್ಛಶ್ರುತಿಯು, ತೇ= ನಿನಗೆ, ಹ್ರಸ್ವಕೌಪೀನ ಪುಚ್ಛವತ್= ಚಿಕ್ಕದಾದ ಕೌಪೀನದ ತುದಿಯಂತೆ, ಅಭೂತ್= ಆಯಿತು, ಯತಃ= ಏಕೆಂದರೆ, ಏಕಂ= ಒಂದು ತುದಿಯನ್ನು, ಸಂಧಿತ್ಸತಃ= ಸಿಕ್ಕಿಸುವ ನಿನಗೆ, ಅಪರಂ ವಾಕ್ಯಂ= ಇನ್ನೊಂದು ವಾಕ್ಯವು, ಚ್ಯವತೇ= ಬಿಚ್ಚಿಹೋಗುತ್ತದೆ.

**ಅನುವಾದ–** ಆದ್ದರಿಂದ ಪುಚ್ಛಶ್ರುತಿಯು ನಿನಗೆ ಹ್ರಸ್ವಕೌಪೀನದ ಪುಚ್ಛದಂತೆ ಆಯಿತು. ಏಕೆಂದರೆ ಒಂದು ವಾಕ್ಯವನ್ನು ಕೂಡಿಸಲು ಹೋದರೆ ಇನ್ನೊಂದು ವಾಕ್ಯವು ಬಿಟ್ಟುಹೋಗುತ್ತದೆ.

**ಭಾವವಿಲಾಸಿನೀ–** ಅತಃ ಪೂರ್ವೋಕ್ತನಿಮಿತ್ತಾತ್ । ತೇ ಪುಚ್ಛಶ್ರುತಿಃ । ಯತಃ ಯಸ್ಮಾತ್ । ಏಕಂ ಸೂತ್ರಮುಲ್ಲಂಘ್ಯ ಶ್ರುತಿಬಲಾತ್ ಪುಚ್ಛಸ್ಯೈವ ಬ್ರಹ್ಮತ್ವಮ್ । ಅಪರಂ ಪಾಣಿನಿಸೂತ್ರಮಾಶ್ರಿತ್ಯ ಶ್ರುತಿಸೂತ್ರೋಕ್ತ ಲಕ್ಷಣಸ್ಯ ತಟಸ್ಥತ್ವ ಕರಣಮ್ । ಅತ ಇತಿ ಪೂರ್ವೇಣಾನ್ವಯಃ ॥ ೧೪೪ ॥

**ವಿವರಣೆ–** ಇದನ್ನು 'ವಟುಕೌಪೀನ ನ್ಯಾಯ' ಎಂದು ಹೇಳುತ್ತಾರೆ. ಒಬ್ಬ ಪುಟ್ಟ ಬ್ರಹ್ಮಚಾರಿಯ ಚಿಕ್ಕದಾದ ಕೌಪೀನವನ್ನು ತೆಗೆದುಕೊಂಡು ಅದನ್ನು ಹಾಕಿಕೊಳ್ಳಲು ಹೋಗುತ್ತಾನೆ. ಆ ಕೌಪೀನವು ಚಿಕ್ಕದಾಗಿರುವುದರಿಂದ ಮುಂದೆ ಸಿಕ್ಕಿಸಿದರೆ ಹಿಂದೆ ಬಿಚ್ಚಿ ಹೋಗುತ್ತದೆ. ಹಿಂದೆ ಸಿಕ್ಕಿಸಿದರೆ ಮುಂದೆ ಬಿಚ್ಚಿ ಹೋಗುತ್ತದೆ. ಅದರಂತೆ ಒಂದು ತುದಿ ಎಂದರೆ ಸೂತ್ರವನ್ನು ಮೀರಿ ಶ್ರುತಿಯ ಬಲದಿಂದ ಪುಚ್ಛಕ್ಕೆ ಬ್ರಹ್ಮತ್ವವನ್ನು ಹೇಳುವುದು. ಇನ್ನೊಂದು ತುದಿ ಎಂದರೆ ಪಾಣಿನಿ ಸೂತ್ರವನ್ನು ಆಶ್ರಯಿಸಿ ಸೂತ್ರೋಕ್ತ ಲಕ್ಷಣಕ್ಕೆ ತಟಸ್ಥತ್ವವನ್ನು ಹೇಳುವುದು. ಸೂತ್ರವನ್ನು ಉಲ್ಲಂಘನೆ ಮಾಡಿದರೆ ಎರಡು ಕಡೆಯಲ್ಲಿಯೂ ಉಲ್ಲಂಘನೆಯನ್ನು ಮಾಡಬೇಕು. ಅದನ್ನು ಬಿಟ್ಟು ಆನಂದಮಯಾಧಿಕರಣದಲ್ಲಿ ಸೂತ್ರವನ್ನು ಉಲ್ಲಂಘನೆ ಮಾಡಿ, ಜನ್ಮಾದ್ಯಧಿಕರಣದಲ್ಲಿ ಶ್ರುತಿಯನ್ನು ಉಲ್ಲಂಘನೆ ಮಾಡಿದರೆ ನಿನಗೆ ಈ 'ವಟುಕೌಪೀನ ನ್ಯಾಯ'ವು ಪ್ರಾಪ್ತವಾಗುತ್ತದೆ.

**ಯದಾ ಮೂಲಭ್ರಮಾದೇವ ಟೀಕಾಂ ತ್ಯಜಸಿ ಸಂಮತಾಂ ।**
**ತದಾ ಮೂಲಪ್ರಮಾರುದ್ಧಾಂ ಟೀಕಾಂ ಕಾಕೋಪಿ ನ ಸ್ಪೃಶೇತ್ ॥ ೧೪೫ ॥**

**ಅರ್ಥ–** ಯದಾ= ಯಾವಾಗ, ಮೂಲಭ್ರಮಾದೇವ= ಮೂಲದ ಅರ್ಥದ ಭ್ರಮೆಯಿಂದಲೇ, ಸಂಮತಾಂ= ವಿದ್ವಾಂಸರಿಗೆ ಸಮ್ಮತವಾದ, ಟೀಕಾಂ= ವ್ಯಾಖ್ಯಾನವನ್ನು, ತ್ಯಜಸಿ= ಪರಿತ್ಯಾಗ ಮಾಡುತ್ತೀಯೋ, ತದಾ= ಆಗ, ಮೂಲಪ್ರಮಾರುದ್ಧಾಂ= ಮೂಲಪ್ರಮೆಗೆ ವಿರುದ್ಧವಾದ, ಟೀಕಾಂ= ನಿನ್ನ ಭಾಷ್ಯರೂಪವಾದ ಟೀಕೆಯನ್ನು, ಕಾಕೋಪಿ= ಕಾಗೆಯೂ ಕೂಡ, ನ ಸ್ಪೃಶೇತ್= ಮುಟ್ಟುವುದಿಲ್ಲ.

**ಅನುವಾದ–** ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ಮೂಲದ ಅರ್ಥದ ಭ್ರಮೆಯಿಂದ ಆ ಶ್ರುತಿಗೆ ವ್ಯಾಖ್ಯಾನ ರೂಪವಾದ ಬ್ರಹ್ಮಸೂತ್ರವನ್ನೇ ನೀನು ತ್ಯಜಿಸಿದಾಗ, ಯತೋ ವಾ ಎಂಬ ಮೂಲ ಶ್ರುತಿಯು ಅನನ್ಯಾರ್ಥವಾದ್ದರಿಂದ ಭ್ರಾಂತಿಯೇ ಇಲ್ಲದಂತೆ ಮೂಲಶ್ರುತಿಯು ಅರ್ಥವನ್ನು ಹೇಳುತ್ತಿರುವಾಗ ಅದಕ್ಕೆ ವಿರುದ್ಧವಾದ ನಿನ್ನ ಜನ್ಮಾಧಿಕರಣದ ಭಾಷ್ಯವನ್ನು ಕಾಗೆಯೂ ಮುಟ್ಟುವುದಿಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ದೂಷಯತಿ – **ಯದೇತಿ** ॥ ಮೂಲಭ್ರಮಾತ್ ಸೂತ್ರಮೂಲೀಭೂತಪುಚ್ಛಶ್ರುತೇರರ್ಥಭ್ರಮಾತ್ । ಸಮ್ಮತಾಂ ತವಾಭಿಮತಾಂ ಟೀಕಾಮೇತಚ್ಛ್ರುತ್ಯರ್ಥನಿರ್ಣಯಾಯ ಕೃತಾಮಾನಂದಮಯೋಽಭ್ಯಾಸಾದಿತಿ-ಸೂತ್ರರೂಪಾಮ್ । ಮೂಲಟೀಕಾಪದಾಭ್ಯಾಂ ಟೀಕಾನುಸಾರೇಣೈವ ಮೂಲಾರ್ಥೋ ಜ್ಞೇಯಃ । ತದ್ವಿರುದ್ಧಾರ್ಥಂ ವದನ್ ಸ್ವಯಮೇವ ಭ್ರಾಂತ ಇತಿ ಸೂಚಯತಿ । ಅತ ಏವ ಮೂಲಭ್ರಮಾದಿತ್ಯುಕ್ತಮ್ । ಮೂಲಪ್ರಮಾರುದ್ಧಾಂ ಟೀಕಾತ್ವೇನಾಭಿಮತತ್ವದ್ಭಾಷ್ಯ-ಮೂಲತ್ವೇನಾಭಿಮತಬ್ರಹ್ಮಸೂತ್ರಾರ್ಥಪ್ರಮಯಾರುದ್ಧಾಂ ವಿರುದ್ಧಾಂ ಟೀಕಾಂ ತ್ವದ್ಭಾಷ್ಯ-ರೂಪಾಮ್ । ಯಸ್ತು ಮೂಲಭ್ರಾಂತಾರ್ಥವಿರೋಧೇನಾಪಿ ಟೀಕಾಂ ತ್ಯಜತಿ ತಸ್ಯ ಮೂಲ-ಪ್ರಮಿತಾರ್ಥವಿರುದ್ಧಾಂ ಟೀಕಾಂ ಕೋ ವಾ ನೇತ್ರದ್ವಯವಾನ್ ಸ್ಪೃಶೇತ್ । ಅಂತತಃ ಏಕನೇತ್ರವಾನ್ ಕಾಕೋಽಪಿ ನ ಸ್ಪೃಶೇದಿತಿ ಭಾವಃ ॥ ೧೪೫ ॥

**ವಿವರಣೆ–** ಪ್ರಕಾರಾಂತರದಿಂದ ಪರಭಾಷ್ಯವನ್ನು ದೂಷಣೆ ಮಾಡುತ್ತಾರೆ. ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ವಾಕ್ಯದ ಅರ್ಥವು ಸಂದಿಗ್ಧವಾಗಿದೆ. ನೀನು ಭ್ರಾಂತಿಯಿಂದ ಪುಚ್ಛವೇ ಬ್ರಹ್ಮ ಎಂದು ಅದರ ಅರ್ಥವನ್ನು ತಿಳಿದುಕೊಂಡು, ಅದಕ್ಕೆ ವಿರುದ್ಧವಾದ ಅರ್ಥವನ್ನು ಹೇಳುತ್ತಿದೆ ಎಂದು ಭಾವಿಸಿ, ಆನಂದಮಯೋಽಭ್ಯಾಸಾತ್ ಎಂಬ ಶ್ರುತಿವ್ಯಾಖ್ಯಾನರೂಪವಾದ ಸೂತ್ರರೂಪವಾದ ಟೀಕೆಯನ್ನು ಪರಿತ್ಯಜಿಸುತ್ತಿದ್ದೀಯೇ. ಹಾಗಿರುವಾಗ, ಯತೋ ವಾ ಇಮಾನಿ ಭೂತಾನಿ ಎಂಬ ವಾಕ್ಯವು ಯಾವ ಭ್ರಮೆಗೂ ಅವಕಾಶ ಬರದಂತೆ ಬ್ರಹ್ಮನಿಗೇ ಜಗತ್ಕರ್ತೃತ್ವವನ್ನು ಹೇಳುತ್ತಿದೆ. ಅದನ್ನು ತ್ಯಜಿಸಿ ಬ್ರಹ್ಮನಿಗೆ ಜಗತ್ಕರ್ತೃತ್ವವಿಲ್ಲ, ಅದು ಮಾಯೆಯಲ್ಲಿದೆ, ಅದು ಬ್ರಹ್ಮನ ತಟಸ್ಥ ಲಕ್ಷಣ ಎಂದು ಹೇಳಿದರೆ, ನಿನ್ನ ಭಾಷ್ಯವನ್ನು ಎರಡು ಕಣ್ಣಿರುವ ಯಾವ ಪುರುಷನೂ ನೋಡುವುದಿಲ್ಲ.

ಎರಡು ಕಣ್ಣಿರುವ ಪುರುಷನು ನೋಡುವುದು ಹಾಗಿರಲಿ, ಒಂದೇ ಕಣ್ಣಿರುವ ಕಾಗೆಯೂ ಸಹ ನೋಡುವುದಿಲ್ಲ ಎಂದು ಅಭಿಪ್ರಾಯ.

**ಪರಿಸ್ಪಂದಕ್ರಿಯಾಮಾತ್ರಂ ಮಾಸ್ತು ವಾ ವ್ಯಾಪ್ತವಸ್ತುನಃ ।**
**ಜಗಜ್ಜನ್ಮಾದಿಕರಣಕ್ರಿಯಾ ಹೇಯಾ ಕುತೋ ವದ ॥ ೧೪೬ ॥**

**ಅರ್ಥ–** ವ್ಯಾಪ್ತವಸ್ತುನಃ= ದೇಶತಃ ವ್ಯಾಪ್ತವಾದ ಬ್ರಹ್ಮರೂಪ ವಸ್ತುವಿಗೆ, ಪರಿಸ್ಪಂದಕ್ರಿಯಾಮಾತ್ರಂ= ಕೇವಲ ಪರಿಸ್ಪಂದರೂಪವಾದ ಕ್ರಿಯೆಯು, ಮಾಸ್ತು ವಾ= ಒಂದು ಪಕ್ಷ ಇಲ್ಲದೇ ಹೋಗಲಿ, ಜಗಜ್ಜನ್ಮಾದಿಕರಣಕ್ರಿಯಾ= ಜಗತ್ಸೃಷ್ಟ್ಯಾದಿಯನ್ನು ಮಾಡುವ ಕ್ರಿಯೆಯು, ಕುತಃ= ಏತಕ್ಕೆ, ಹೇಯಾ= ನಿಂದ್ಯವಾದುದು, ವದ= ಹೇಳು.

**ಅನುವಾದ–** ಬ್ರಹ್ಮನು ವ್ಯಾಪ್ತನಾದುದರಿಂದ ವ್ಯಾಪ್ತವಸ್ತುವಿನಲ್ಲಿ ಪರಿಸ್ಪಂದರೂಪವಾದ ಕ್ರಿಯೆಯನ್ನು ಒಪ್ಪದೇ ಇದ್ದರೆ ಬ್ರಹ್ಮನಿಗೆ ಪರಿಸ್ಪಂದರೂಪವಾದ ಕ್ರಿಯೆಯು ಬೇಡ. ಆದರೆ ಜಗತ್ತಿನ ಸೃಷ್ಟ್ಯಾದಿಗಳಿಗೆ ಅನುಕೂಲವಾದ ಕ್ರಿಯೆಯು ಏಕೆ ನಿಂದ್ಯವಾದುದು ಎಂದು ಹೇಳು.

**ಭಾವವಿಲಾಸಿನೀ–** ನನು ನಿಷ್ಕ್ರಿಯಶ್ರುತಿವಿರೋಧಾತ್ಕಥಂ ಬ್ರಹ್ಮಣಿ ಜಗತ್ಕಾರಣತ್ವ-ರೂಪಕ್ರಿಯಾವೇಶ ಇತ್ಯತ ಆಹ – **ಪರಿಸ್ಪಂದೇತಿ** ॥ ಶಂಕೈವೇಯಂ ತಾವದ್ವಿವೇಚನೀಯಾ । ಬ್ರಹ್ಮಜಗತ್ಕರೋತೀತ್ಯುಕ್ತೇಹಿ ಜಗತಃ ಕರಣೇ ಉತ್ಪತ್ತಿರೂಪಕ್ರಿಯಾಯಾಂ ಬ್ರಹ್ಮಣೋ ನಿಮಿತ್ತತ್ವೈವ ಲಭ್ಯತೇ । ಉತ್ಪತ್ತಿರೂಪಾ ಸಾ ಕ್ರಿಯಾ ತು ಜಗನ್ನಿಷ್ಠೈವ ನತು ಬ್ರಹ್ಮನಿಷ್ಠಾ । ಅತೋ ಜಗನ್ನಿಷ್ಠಜನ್ಮಮರಣಾದಿಕ್ರಿಯಾಭಾವಂ ಬ್ರಹ್ಮಣಿ ಪ್ರತಿಪಾದಯಂತ್ಯಾ ನಿಷ್ಕ್ರಿಯತ್ವಶ್ರುತ್ಯಾ ಕಿಂ ನಶ್ಛಿನ್ನಮ್ । ಜಗತ್ಕರ್ತೃತಾಯಾಂ ಚ ಜಗನ್ನಿಷ್ಠತತ್ತತ್ಕ್ರಿಯಾಕರಣಾದಿಕಾರಣ- ಜಾತಪ್ರಯೋಜಕತ್ವ-ರೂಪಸ್ವಾತಂತ್ರ್ಯಸ್ಯೈವ ಲಾಭಾತ್ಕಾ ನೋ ಹಾನಿಃ । ಪ್ರತ್ಯುತಸ್ವಾತಂತ್ರ್ಯಾಖ್ಯಮಹಾಮಹಿಮಲಾಭ ಏವ । ಸ್ವತಂತ್ರಃ ಕರ್ತೇತಿ ಸ್ಮರಣಾತ್ । ಅತಃ ಶ್ರುತೇರನುಕೂಲತಯಾ ಪ್ರತಿಕೂಲತ್ವಶಂಕೈವೇಯಂ ಸ್ವಾಜ್ಞಾನಮೂಲತ್ವಾತ್ ಪ್ರೇಕ್ಷಾವದ್ಭಿರುಪೇಕ್ಷಣೀಯಾ । ಅತೋಽಭ್ಯುಪಗಮವಾದೇನೈವ ನಿಷ್ಕ್ರಿಯಶ್ರುತೇರರ್ಥಾಂತರಾವಕಾಶದಾನಮುತ್ತರಂ ಚೇತಿ ಜ್ಞಾತವ್ಯಮ್ । ವ್ಯಾಪ್ತವಸ್ತುನಃ ಪರಿಸ್ಪಂದಕ್ರಿಯಾಮಾತ್ರಂ ಮಾಸ್ತುವೇತ್ಯನೇನಾಯಮಪ್ಯಂಗೀಕಾರವಾದ ಏವ । ನ ವಸ್ತು-ಸ್ಥಿತ್ಯಾ । ಅಚಿಂತ್ಯೈಶ್ವರ್ಯಶಕ್ತ್ಯಾಽಣಿಮಾದ್ಯಷ್ಟೈಶ್ವರ್ಯಶಕ್ತ್ಯಾ ಅಣೋರಣೀಯಾನ್ಮಹತೋ ಮಹೀಯಾನಿತಿ ಶ್ರುತ್ಯಾಚಾಣುಮೂರ್ತೀನಾಂ ಮಹಾಮೂರ್ತೇಶ್ಚ ಸತ್ತ್ವೇನ ಗಮನಾಗಮನಾದೇರಪಿ ಸಂಭವಾತ್ । ಜಗಜ್ಜನ್ಮಾದಿಕರಣಕ್ರಿಯಾ ಜಗಜ್ಜನ್ಮಾದಿಕರಣಾನುಕೂಲ-ಜ್ಞಾನೇಚ್ಛಾಪ್ರಯತ್ನಾದಿರೂಪೋ ವ್ಯಾಪಾರಃ ॥ ೧೪೬ ॥

**ವಿವರಣೆ–** ನಿಷ್ಕ್ರಿಯತ್ವ ಶ್ರುತಿ ಇರುವುದರಿಂದ ಬ್ರಹ್ಮನಲ್ಲಿ ಜಗತ್ಕಾರಣತ್ವವನ್ನು ಅಂಗೀಕರಿಸಲು ಬರುವುದಿಲ್ಲ, ಏಕೆಂದರೆ ಕಾರಣತ್ವವು ಒಂದು ಕ್ರಿಯಾರೂಪ ಎಂಬ

ಆಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಮೊದಲನೆಯದಾಗಿ ಈ ಶಂಕೆಯೇ ಸರಿಯಾದುದಲ್ಲ. ಬ್ರಹ್ಮನು ಜಗತ್ತನ್ನು ಸೃಷ್ಟಿಮಾಡುತ್ತಾನೆ ಎಂದು ಹೇಳಿದರೆ, ಜಗತ್ತಿನ ಉತ್ಪತ್ತಿ ರೂಪವಾದ ಕ್ರಿಯೆಯಲ್ಲಿ ಬ್ರಹ್ಮನು ನಿಮಿತ್ತ ಎಂದು ಇಷ್ಟೇ ಲಭ್ಯವಾಗುತ್ತದೆ. ಉತ್ಪತ್ತಿರೂಪವಾದ ಕ್ರಿಯೆಯು ಜಗತ್ತಿನಲ್ಲಿಯೇ ಇದೆ, ಬ್ರಹ್ಮನಲ್ಲಿ ಇಲ್ಲ. ಆದ್ದರಿಂದ ನಿಷ್ಕ್ರಿಯತ್ವ ಶ್ರುತಿಯು ಜಗತ್ತಿನಲ್ಲಿರುವ ಜನ್ಮ, ಮರಣಾದಿ ಕ್ರಿಯೆಗಳ ಅಭಾವವನ್ನು ಹೇಳುವುದರಿಂದ, ನಿಷ್ಕ್ರಿಯತ್ವ ಶ್ರುತಿಯಿಂದ ನಮಗೆ ಆಗುವ ಹಾನಿ ಏನು? ಮತ್ತು ಜಗತ್ಕರ್ತೃತ್ವವನ್ನು ಹೇಳಿದರೆ, ಜಗನ್ನಿಷ್ಠವಾದ ಸೃಷ್ಟಿರೂಪವಾದ ಕ್ರಿಯೆಯನ್ನು ಕುರಿತು ಸ್ವಾತಂತ್ರ್ಯವೇ ಲಭ್ಯವಾಗುತ್ತದೆ. ಪಾಣಿನಿಯೂ ಕೂಡ ಸ್ವತಂತ್ರನು ಕರ್ತನೆಂದು ಹೇಳುತ್ತಾನಷ್ಟೇ? ಆದ್ದರಿಂದ ನಿಷ್ಕ್ರಿಯತ್ವ ಶ್ರುತಿಯು ಯಾವ ರೀತಿಯಲ್ಲಿಯೂ ಪ್ರತಿಕೂಲವಾಗಿಲ್ಲ. ಆದರೂ ನಿಷ್ಕ್ರಿಯತ್ವ ಶ್ರುತಿಯು ಪ್ರತಿಕೂಲವಾಗಿದೆ ಎಂದು ಅಂಗೀಕರಿಸಿ ಉತ್ತರವನ್ನು ಹೇಳುತ್ತಾರೆ. ವ್ಯಾಪ್ತವಾದ ವಸ್ತುವಿನಲ್ಲಿ ಚಲನ ರೂಪವಾದ ಕ್ರಿಯೆಯು ಇರಲು ಸಾಧ್ಯವಿಲ್ಲ. ಆದರೆ ಜಗತ್ಕರ್ತೃತ್ವವು ಚಲನರೂಪವಾದ ಕ್ರಿಯೆಯಲ್ಲ. ಆದ್ದರಿಂದ ಅಂತಹ ಕರ್ತೃತ್ವ ಕ್ರಿಯೆಯನ್ನು ಬ್ರಹ್ಮನಲ್ಲಿ ಅಂಗೀಕಾರ ಮಾಡಿದರೆ, ಜಗತ್ತನ್ನು ಕುರಿತು ಸ್ವಾತಂತ್ರ್ಯವೇ ಲಭ್ಯವಾಗುವುದರಿಂದ ಮಹಾಮಹಿಮೆಯೇ ಸಿದ್ಧವಾಗುತ್ತದೆ. ವ್ಯಾಪ್ತವಾದ ವಸ್ತುವಿಗೂ ಸಹ ಅಣೋರಣೀಯಾನ್ ಮುಂತಾದ ಶ್ರುತಿಗಳಿಂದ ಅಣುರೂಪವನ್ನೂ ಅಂಗೀಕರಿಸಿರುವುದರಿಂದ ಚಲನಾದಿ ಕ್ರಿಯೆಯೂ ಉಪಪನ್ನವಾಗುತ್ತದೆ ಎಂಬುದು ಇನ್ನೊಂದು ವಿಷಯ.

**ನಿಮಿತ್ತಮಸ್ತು ತದ್ ಬ್ರಹ್ಮ ಜಗಜ್ಜಾಲಸ್ಯ ಕಾಲವತ್ ।**
**ಉಪಾದಾನತ್ವವಾರ್ತಾ ಚ ನಾತ್ರ ಶ್ರೌತಾಧ್ವಶೋಧನೇ ॥ ೧೪೭ ॥**

**ಅರ್ಥ–** ಜಗಜ್ಜಾಲಸ್ಯ= ಈ ಜಗತ್ತಿನ ಸಮೂಹಕ್ಕೆ, ಕಾಲವತ್= ಕಾಲದಂತೆ, ತದ್ಬ್ರಹ್ಮ= ಆ ಬ್ರಹ್ಮನು, ನಿಮಿತ್ತಮಸ್ತು= ನಿಮಿತ್ತಕಾರಣನಾಗಲಿ, ಶ್ರೌತಾಧ್ವಶೋಧನೇ= ಶ್ರುತಿಯ ಮಾರ್ಗವನ್ನು ಪರಿಶೀಲಿಸಿದರೆ, ಅತ್ರ= ಇಲ್ಲಿ, ಉಪಾದಾನತ್ವವಾರ್ತಾ ಚ ನ= ಉಪಾದಾನತ್ವದ ಸುದ್ದಿಯೇ ಇಲ್ಲ.

**ಅನುವಾದ–** ಕಾಲವು ವ್ಯಾಪ್ತವಾಗಿದ್ದು ಕ್ರಿಯಾಶೂನ್ಯವಾಗಿದ್ದರೂ ಅದಕ್ಕೆ ಎಲ್ಲಾ ಕಾರ್ಯವನ್ನು ಕುರಿತು ನಿಮಿತ್ತಕಾರಣತ್ವವು ಬರುವಂತೆ ಬ್ರಹ್ಮನಿಗೂ ನಿಮಿತ್ತಕಾರಣತ್ವವು ಉಂಟಾಗಲಿ. ಶ್ರುತಿಯ ಮಾರ್ಗವನ್ನು ವಿಚಾರ ಮಾಡಿದರೆ ಈ ಅಧಿಕರಣದಲ್ಲಿ ಉಪಾದಾನತ್ವವನ್ನು ಹೇಳುವ ಪ್ರಸಕ್ತಿಯೇ ಇಲ್ಲ.

**ಭಾವವಿಲಾಸಿನೀ–** ಕಾಲವತ್ ಯಥಾಕಾಲಸ್ಯ ವ್ಯಾಪ್ತತಯಾ ಕ್ರಿಯಾಶೂನ್ಯಸ್ಯಾಪಿ ನಿಮಿತ್ತತ್ವಂ ತಥೇತಿ ಭಾವಃ । ಅತ್ರಾಸ್ಮಿನ್ನಧಿಕರಣೇ ॥ ೧೪೭ ॥

**ಲಕ್ಷಣಸ್ಯ ತಟಸ್ಥತ್ವಕಥಾಪಿ ವ್ಯಾಹತಾ ತವ ।**
**ಯದ್ ವ್ಯಾಪ್ತಂ ಲಕ್ಷ್ಯಮಾತ್ರೇ ಸ್ಯಾದಲಕ್ಷ್ಯೇ ನೈವ ವೃತ್ತಿಮತ್ ॥ ೧೪೮ ॥**

**ತಲ್ಲಕ್ಷಣಂ ನಾಸ್ಯ ಸಾಧಾರಣಧರ್ಮೋಽಪಿ ತತ್ ಕಿಲ ।**
**ಕಥಮನ್ಯಗತೋ ಧರ್ಮೋ ಲಕ್ಷಣಂ ಸ್ಯಾತ್ ತದೀರ್ಯತಾಂ ॥ ೧೪೯ ॥**

**ಅರ್ಥ–** ತವ= ನಿನ್ನ, ಲಕ್ಷಣಸ್ಯ ತಟಸ್ಥತ್ವಕಥಾಪಿ= ಲಕ್ಷಣವು ತಟಸ್ಥ ಎಂಬ ವಚನವೂ ಸಹ, ವ್ಯಾಹತಾ= ವ್ಯಾಹತವಾದುದು, ಯತ್= ಯಾವ ಧರ್ಮವು, ಲಕ್ಷ್ಯಮಾತ್ರೇ= ಸಕಲ ಲಕ್ಷ್ಯಗಳಲ್ಲಿಯೂ, ವ್ಯಾಪ್ತಂ= ಇರುತ್ತದೆಯೋ, ಅಲಕ್ಷ್ಯೇ= ಲಕ್ಷ್ಯಭಿನ್ನದಲ್ಲಿ, ವೃತ್ತಿಮತ್= ಇರುವುದಾಗಿ, ನೈವಸ್ಯಾತ್= ಆಗುವುದಿಲ್ಲವೋ, ತತ್= ಅದು, ಲಕ್ಷ್ಯಂ= ಲಕ್ಷಣವಾಗುತ್ತದೆ, ತತ್= ಜಗತ್ಕಾರಣತ್ವವು, ಅಸ್ಯ= ಬ್ರಹ್ಮನ, ಸಾಧಾರಣಧರ್ಮೋಽಪಿ= ಸಾಧಾರಣಧರ್ಮವೂ ಕೂಡ, ನ ಕಿಲ= ಆಗಿಲ್ಲವಷ್ಟೇ. ಅನ್ಯಗತಃ ಧರ್ಮಃ= ಲಕ್ಷ್ಯವನ್ನು ಬಿಟ್ಟು ಬೇರೆ ಕಡೆ ಇರುವ ಧರ್ಮವು, ಕಥಂ= ಹೇಗೆ, ಲಕ್ಷಣಂ ಸ್ಯಾತ್= ಲಕ್ಷಣವಾಗುತ್ತದೆ, ತತ್= ಅದನ್ನು, ಈರ್ಯತಾಂ= ಹೇಳು.

**ಅನುವಾದ–** ನೀನು ಹೇಳುವ ಲಕ್ಷಣಕ್ಕೆ ತಟಸ್ಥತ್ವವಚನವೂ ಸಹ ವ್ಯಾಹತವಾದುದು. ಯಾವ ಧರ್ಮವು ಎಲ್ಲಾ ಲಕ್ಷ್ಯಗಳಲ್ಲಿಯೂ ಇರುತ್ತದೆಯೋ ಮತ್ತು ಅಲಕ್ಷ್ಯಗಳಲ್ಲಿ ಇರುವುದಿಲ್ಲವೋ ಅದು ಲಕ್ಷಣ. ಜಗತ್ಕಾರಣತ್ವವು (ನಿನ್ನ ರೀತಿಯಲ್ಲಿ) ಬ್ರಹ್ಮನ ಸಾಧಾರಣ ಧರ್ಮವೂ ಅಲ್ಲ. ಲಕ್ಷ್ಯವನ್ನು ಬಿಟ್ಟು ಬೇರೆ ಕಡೆಯಲ್ಲಿರುವ ಧರ್ಮವು ಹೇಗೆ ಲಕ್ಷಣವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಲಕ್ಷಣತಾಟಸ್ಥ್ಯಂ ದೂಷಯತಿ – **ಲಕ್ಷಣಸ್ಯೇತಿ** ॥ ತವ ತಟಸ್ಥತ್ವ ಕಥೇತಿ ಸಂಬಂಧಃ । ತಾಮೇವ ವ್ಯಾಹತಿಂ ದರ್ಶಯಿತುಂ ಲಕ್ಷಣಸ್ವರೂಪಂ ನಿರೂಪಯತಿ – **ಯದ್ವ್ಯಾಪ್ತಮಿತಿ** ॥ ಯದ್ವಸ್ತುಲಕ್ಷ್ಯಮಾತ್ರೇ ಸಕಲಲಕ್ಷ್ಯೇಷು । ಅಲಕ್ಷ್ಯೇ ಲಕ್ಷ್ಯಾದತಿರಿಕ್ತೇ । ವೃತ್ತಿಮದ್ವರ್ತಮಾನಮ್ । ತಲ್ಲಕ್ಷಣಂ ತದೇವಲಕ್ಷಣಮ್ । ಅಸ್ಯ ಘಟಾದೇರ್ಧರ್ಮಿಣಃ ಸಾಧಾರಣಃ ಇತರಸಾಧಾರಣಃ ದ್ರವ್ಯತ್ವಪೃಥಿವೀತ್ವಾದಿಃ । ತಲ್ಲಕ್ಷಣಂ ನ ಕಿಲೇತಿ ಸಂಬಂಧಃ । ಅತಿವ್ಯಾಪ್ತತ್ವಾದಿತಿ ಭಾವಃ । ಏವಮೇಕಶಫತ್ವಂ ರಕ್ತಘಟತ್ವಂ ವಾ ಅಸಂಭವಾದವ್ಯಾಪ್ತತ್ವಾಚ್ಚ ನ ಲಕ್ಷಣಮಿತ್ಯಪ್ಯನುಸಂಧೇಯಮ್ । ಅಸ್ತ್ವಿದಂ ಲಕ್ಷಣಂ ಪ್ರಕೃತೇ ಕಿಮಾಗತಮಿತ್ಯತ ಆಹ–**ಕಥಮಿತಿ** ॥ ಅನ್ಯಗತಃ ಬ್ರಹ್ಮಣೋನ್ಯಸ್ಮಿನ್ ಜಡೇಽಜ್ಞಾನೇ ಸ್ಥಿತಃ ಧರ್ಮಃ ಜಗದುಪಾದಾನತ್ವಮ್ । ಬ್ರಹ್ಮಣಿ ಸರ್ವಥಾಽಭಾವೇನಾಸಂಭವಾತ್ । ಅನ್ಯತ್ರ ಸತ್ತ್ವೇನಾತಿವ್ಯಾಪ್ತೇಶ್ಚ । ಅತೋ ಯದಲಕ್ಷಣಂ ತದೇವ ಲಕ್ಷಣಮಿತ್ಯುಕ್ತತ್ವಾದ್ವ್ಯಾಹತಿಃ । ಅನ್ಯಥಾ ಘಟಸ್ಯಾಪ್ಯಾತಾನವಿತಾನಾತ್ಮಕತ್ವಂ ಲಕ್ಷಣಂ ಸ್ಯಾದಿತಿ ಭಾವಃ ॥ ೧೪೮-೧೪೯ ॥

**ವಿವರಣೆ–** ರೀತ್ಯಂತರದಿಂದ ಲಕ್ಷಣವು ತಟಸ್ಥ ಎಂಬುದನ್ನು ನಿರಾಕರಿಸುತ್ತಾರೆ. ಯಾವ ಧರ್ಮವು ಸಕಲ ಲಕ್ಷ್ಯದಲ್ಲಿರುತ್ತದೆಯೋ ಮತ್ತು ಅಲಕ್ಷ್ಯದಲ್ಲಿರುವುದಿಲ್ಲವೋ ಅದು ಲಕ್ಷಣವಾಗುತ್ತದಷ್ಟೇ? ಲಕ್ಷ್ಯ, ಅಲಕ್ಷ್ಯದಲ್ಲಿ ಸಾಧಾರಣವಾಗಿರುವ ಧರ್ಮವು ಲಕ್ಷಣವಾಗಿರುವುದಿಲ್ಲ. ಆದ್ದರಿಂದ ಘಟಕ್ಕೆ ಪಟಾದಿಗಳಲ್ಲಿರುವ ದ್ರವ್ಯತ್ವ, ಪೃಥಿವೀತ್ವಗಳು ಲಕ್ಷಣವಾಗುವುದಿಲ್ಲ, ಅತಿವ್ಯಾಪ್ತಿ ದೋಷವು ಬರುತ್ತದೆ. ಹಾಗೆಯೇ ಏಕಶಫತ್ವ ಅಥವಾ ರಕ್ತಘಟತ್ವವು ಘಟದ ಲಕ್ಷಣವಾಗುವುದಿಲ್ಲ. ಏಕೆಂದರೆ ಕ್ರಮವಾಗಿ ಅಸಂಭವ ಮತ್ತು ಅವ್ಯಾಪ್ತಿಯು ಬರುತ್ತವೆ. ಪ್ರಕೃತದಲ್ಲಿ ಜಗತ್ಕಾರಣತ್ವ ಎಂದರೆ ನಿನಗೆ ಅಭಿಮತವಾದುದು ಜಗದುಪಾದಾನತ್ವ. ಆ ಜಗದುಪಾದಾನತ್ವವು ಮಾಯೆಯಲ್ಲಿ ಮಾತ್ರ ಇದೆ, ಬ್ರಹ್ಮನಲ್ಲಿ ಇಲ್ಲವೇ ಇಲ್ಲ. ಲಕ್ಷ್ಯಗತವಾದ ಅಸಾಧಾರಣಧರ್ಮವು ಲಕ್ಷಣವಾಗಬೇಕು. ಲಕ್ಷ್ಯದಲ್ಲಿ ಇಲ್ಲದಿರುವ ಅಲಕ್ಷ್ಯದಲ್ಲೇ ಇರುವ ಜಗದುಪಾದಾನತ್ವ ರೂಪವಾದ ಧರ್ಮವು ಹೇಗೆ ಬ್ರಹ್ಮಲಕ್ಷಣವಾಗುತ್ತದೆ? ಆದ್ದರಿಂದ ತಟಸ್ಥ ಮತ್ತು ಲಕ್ಷಣ ಎಂದು ಹೇಳುವ ನಿನ್ನ ವಚನವು ವ್ಯಾಹತವಾದುದು.

**ಕಾಕೋಽಪಿ ಹಿ ಗೃಹಸ್ಥಸ್ಯ ಗೃಹಸ್ಥೋ ಬೋಧಯೇದ್ ಗೃಹಮ್ ।**
**ಗತೇ ತಸ್ಮಿಂಸ್ತೇನ ಕೃತಮುತ್ತೃಣತ್ವಂ ಹಿ ಬೋಧಕಮ್ ॥ ೧೫೦ ॥**

**ಅರ್ಥ–** ಕಾಕೋಽಪಿ= ಕಾಕವೂ ಸಹ, ಗೃಹಸ್ಥಃ= ಗೃಹದಲ್ಲಿ ಇದ್ದೇ, ಗೃಹಸ್ಥಸ್ಯ ಗೃಹಂ= ಗೃಹಸ್ಥನಾದ ದೇವದತ್ತನ ಗೃಹವನ್ನು, ಬೋಧಯೇದ್ ಹಿ= ತಿಳಿಸಿಕೊಡುವುದಷ್ಟೇ, ತಸ್ಮಿನ್ ಗತೇ= ಆ ಕಾಕವು ಹೊರಟು ಹೋದ ಮೇಲೆ, ತೇನ ಕೃತಂ= ಅದರಿಂದ ಮಾಡಲ್ಪಟ್ಟ, ಉತ್ತೃಣತ್ವಂ= ಉತ್ತೃಣತ್ವವು, ಬೋಧಕಂ ಹಿ= ದೇವದತ್ತಗೃಹವನ್ನು ಬೋಧಿಸುವುದಷ್ಟೇ.

**ಅನುವಾದ–** ಕಾಕವೂ ಸಹ ದೇವದತ್ತನ ಗೃಹದಲ್ಲಿದ್ದೇ ಇದು ದೇವದತ್ತ ಗೃಹ ಎಂದು ಬೋಧಿಸಿಕೊಡುತ್ತದೆ. ಕಾಕವು ಹೊರಟು ಹೋದಮೇಲೆ ಅದರಿಂದ ಮಾಡಲ್ಪಟ್ಟ ಉತ್ತೃಣತ್ವವು ದೇವದತ್ತಗೃಹವನ್ನು ಬೋಧಿಸುತ್ತದೆ.

**ಭಾವವಿಲಾಸಿನೀ–** ನನು ಯಥಾ ಕಾಕವದ್ದೇವದತ್ತಗೃಹಮಿತ್ಯತ್ರಾನ್ಯಸಾಧಾರಣೋಽಪಿ ಕಾಕ ಉಪಲಕ್ಷಣಂ ತಥೇಹಾಪಿ ಸ್ಯಾದಿತ್ಯತ ಆಹ – **ಕಾಕೋಽಪೀತಿ** ॥ ಗೃಹಸ್ಥಸ್ಯ ಗೃಹಮೇಧಿನೋ ದೇವದತ್ತಸ್ಯ ಗೃಹಸ್ಥಃ ಗೃಹೇಸ್ಥಿತಃ । ಕಾಕೋಽಪಿ ಹಿ ದೇವದತ್ತಗೃಹೇ ಯದಾತಿಷ್ಠತಿ ತದೈವೋಪಲಕ್ಷಕೋ ನತು ಗೃಹಾಂತರಸ್ಥಿತಃ । ಸೋಽಪಿ ಗೋರ್ಗೋತ್ವಮಿವ ನಲಕ್ಷಣಂ ಕಿಂ ತೂಪಲಕ್ಷಣಮೇವ । ತಥಾಸತಿ ಕಾಕವದಿತಿ ಪದಪ್ರಯೋಗಸ್ಯೈವಾಯೋಗಾದಿತಿ ಭಾವಃ । ತಸ್ಮಿನ್ ಕಾಕೇ । ತೇನ ಗೃಹಾದ್ಗತೇನ ಕಾಕೇನ । ಉತ್ತೃಣತ್ವಂ ಊರ್ಧ್ವಂ ಗತಂ ತೃಣಂ ಯಸ್ಯ ತತ್ ತಸ್ಯ ಭಾವಃ ಉತ್ತೃಣತ್ವಮ್ । ಬೋಧಕಂ ದೇವದತ್ತಗೃಹಸ್ಯ ಜ್ಞಾಪಕಮ್ । ಯದಾ ಕಾಕೋದೇವದತ್ತಗೃಹೇ ತಿಷ್ಠತಿ ತದಾ ಗೃಹಾಂತರೇಚ ನ । ಏವಂ ಚಾಸಾಧಾರಣತ್ವಾತ್ ಸ ಏವ ತದಾಬೋಧಕಃ । ಗೃಹಾಂತರಂಗತಸ್ತು ಸ ಏವ ಕಾಕೋ ನ ಪುನರ್ಲಕ್ಷಕಃ । ತತ್ರ ತಸ್ಮಿನ್

ಗೃಹೇऽವರ್ತಮಾನತ್ವಮೇವ ನಿಮಿತ್ತಮ್ । ಕಿಂತು ತೇನ ತಸ್ಮಿನ್ನೇವ ಗೃಹೇ ಕೃತಂ ಯದುತ್ತೃಣತ್ವಂ ತದೇವ ಪುನಸ್ತದ್ಗೃಹೇ ಲಕ್ಷಣಮ್ । ತಸ್ಯ ತತ್ರೈವ ವಿದ್ಯಮಾನತ್ವಾತ್ । ಗೃಹಾಂತರೇऽ-ಭಾವಾಚ್ಚ । ತದಪಿ ಗೃಹಾಂತರೇ ತೇನೈವ ಕಾಕೇನ ಕೃತಂ ಚೇಲ್ಲಕ್ಷ್ಯಾದನ್ಯತ್ರ ಗಮನಾನ್ನ ಲಕ್ಷಣಮ್ । ಏವಂ ಚಾತ್ರಾಪಿ ತಸ್ಮಿನ್ನೇವ ಗೃಹೇ ವಿದ್ಯಮಾನೋ ಗೃಹಾಂತರೇಚಾವಿದ್ಯಮಾನ ಏವ ಧರ್ಮಸ್ತದ್ಗೃಹಬೋಧಕ ಇತ್ಯಾಯಾತಮ್ । ತ್ವದಭಿಲಷಿತಸ್ಯ ತು ಬ್ರಹ್ಮಣಿ ಸರ್ವಥಾऽವಿದ್ಯ-ಮಾನಸ್ಯಾಜ್ಞಾನ ಏವ ವಿದ್ಯಮಾನಸ್ಯ ಜಗದುಪಾದಾನತ್ವಸ್ಯ ಬ್ರಹ್ಮಲಕ್ಷಣತ್ವೇ ನ ಕಿಂಚಿನ್ನಿದರ್ಶನಮಿತಿ ಭಾವಃ ॥ ೧೫೦ ॥

**ವಿವರಣೆ–** ಕಾಕವದ್ದೇವದತ್ತಗೃಹಂ ಎಂಬಲ್ಲಿ ಕಾಕವು ಇತರಸಾಧಾರಣವಾದರೂ ಹೇಗೆ ದೇವದತ್ತನ ಗೃಹಕ್ಕೆ ಉಪಲಕ್ಷಣವಾಗುವುದೋ, ಹಾಗೆ ಜಗದುಪಾದಾನತ್ವವು ಮಾಯೆಯಲ್ಲಿದ್ದರೂ ಬ್ರಹ್ಮನಿಗೆ ಉಪಲಕ್ಷಣವಾಗಬಹುದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಕಾಕವೂ ಕೂಡ ದೇವದತ್ತನ ಗೃಹದಲ್ಲಿ ಇದ್ದರೆ ಮಾತ್ರ ದೇವದತ್ತನ ಗೃಹಕ್ಕೆ ಉಪಲಕ್ಷಣವಾಗುತ್ತದೆ. ಯಜ್ಞದತ್ತನ ಗೃಹದಲ್ಲಿದ್ದರೆ ಆಗ ದೇವದತ್ತನ ಗೃಹಕ್ಕೆ ಉಪಲಕ್ಷಣವಾಗುವುದಿಲ್ಲ. ಕಾಕವು ಗೋವಿಗೆ ಸಾಸ್ನಾದಿಮತ್ವದಂತೆ ದೇವದತ್ತನ ಗೃಹದ ಲಕ್ಷಣವಲ್ಲ, ಆದರೆ ಉಪಲಕ್ಷಣ. ದೇವದತ್ತನ ಗೃಹದಲ್ಲಿರುವಾಗ ಅದು ಅಸಾಧಾರಣವಾದ್ದರಿಂದ ದೇವದತ್ತನ ಗೃಹವನ್ನು ಬೋಧಿಸುತ್ತದೆ. ಅದೇ ಕಾಕವು ಯಜ್ಞದತ್ತನ ಗೃಹದ ಮೇಲೂ ಕುಳಿತುಕೊಳ್ಳುವುದಾದರೆ, ಆಗ ಅದು ಉಪಲಕ್ಷಣವಾಗುವುದಿಲ್ಲ. ಏಕೆಂದರೆ ಕಾಗೆಯು ಅಲ್ಲಿಂದ ಹೊರಟು ಹೋಗಿದೆ. ಆದರೆ ದೇವದತ್ತನ ಗೃಹದಲ್ಲಿ ಕಾಗೆಯು ಮಾಡಿದ ಉತ್ತೃಣತ್ವವು ಅಲ್ಲಿ ಇರುವುದರಿಂದ ಅದೇ ಬೋಧಕವಾಗುತ್ತದೆ. ಏಕೆಂದರೆ ಆ ಉತ್ತೃಣತ್ವವು ಇಲ್ಲಿ ಮಾತ್ರ ಇದೆ, ಗೃಹಾಂತರದಲ್ಲಿ ಇಲ್ಲ, ಉತ್ತೃಣತ್ವವು ಗೃಹಾಂತರದಲ್ಲೂ ಇದ್ದರೆ ಆಗ ಉತ್ತೃಣತ್ವವೂ ದೇವದತ್ತ-ಗೃಹಬೋಧಕವಾಗುವುದಿಲ್ಲ. ಆದ್ದರಿಂದ ದೇವದತ್ತನ ಗೃಹದಲ್ಲೇ ಇರುವ, ದೇವದತ್ತಭಿನ್ನ ಗೃಹದಲ್ಲಿ ಇಲ್ಲದಿರುವ ಕಾಕವೇ ಆ ಗೃಹವನ್ನು ಬೋಧಿಸುತ್ತದೆ ಎಂದು ನಿಷ್ಪನ್ನವಾಯಿತು. ಆದರೆ ಬ್ರಹ್ಮನಲ್ಲಿ ಸರ್ವಥಾ ಇಲ್ಲದಿರುವ, ಬ್ರಹ್ಮಬಿನ್ನದಲ್ಲೇ ಇರುವ ಜಗದುಪಾದಾನತ್ವವು ಬ್ರಹ್ಮನಿಗೆ ಲಕ್ಷಣವಾಗುವುದಾಗಲೀ, ಉಪಲಕ್ಷಣವಾಗುವುದಾಗಲೀ ಅಸಂಭಾವಿತ ಎಂದು ಅಭಿಪ್ರಾಯ.

**ಕದಾಚಿದ್ ಗುರುಸಂಬಂಧಃ ಕುರುಸಂಬಂಧ ಏವ ಚ ।**
**ಗುರೋಷ್ಟೀಕಾ ಕುರೋಃ ಕ್ಷೇತ್ರಮಿತ್ಯತ್ರಾಪಿ ಹಿ ವರ್ತತೇ ॥ ೧೫೧ ॥**

**ಅರ್ಥ–** ಗುರೋಃ ಟೀಕಾ= ಗುರುವಿನ ಟೀಕಾ, ಕುರೋಃ ಕ್ಷೇತ್ರ= ಕುರುವಿನ ಕ್ಷೇತ್ರ, ಇತ್ಯತ್ರಾಪಿ= ಎಂಬಲ್ಲಿಯೂ, ಕದಾಚಿತ್= ಒಂದು ಸಮಯದಲ್ಲಿ, ಗುರು ಸಂಬಂಧಃ= ಗುರುವಿನ ಸಂಬಂಧವು, ಕುರುಸಂಬಂಧ ಏವ ಚ= ಮತ್ತು ಕುರುವಿನ ಸಂಬಂಧವೂ ಸಹ, ವರ್ತತೇ ಹಿ= ಇದ್ದೇ ಇದೆಯಷ್ಟೇ.

**ಅನುವಾದ–** ಗುರೋಃ ಟೀಕಾ, ಕುರೋಃ ಕ್ಷೇತ್ರಂ ಎಂಬಲ್ಲಿಯೂ ಸಹ ಆ ಟೀಕೆಗೆ ಗುರುವಿನ ಸಂಬಂಧವೂ ಆ ಕ್ಷೇತ್ರಕ್ಕೆ ಕುರುವಿನ ಸಂಬಂಧವೂ ಒಂದು ಕಾಲದಲ್ಲಿ ಇದ್ದೇ ಇದೆಯಷ್ಟೇ?

**ಭಾವವಿಲಾಸಿನೀ–** ಇದಾನೀಮವಿದ್ಯಮಾನಸ್ಯಾಪಿ ಗುರ್ವಾದೇರ್ಯಥಾ ಟೀಕಾದಿವ್ಯಾವರ್ತಕತ್ವಂ ತಥಾಽತ್ರಾಪಿ ಸ್ಯಾದಿತಿ ಮಂದಾಶಂಕಾಂ ನಿರಾಕರೋತಿ **–ಕದಾಚಿದಿತಿ** ॥ ಕದಾಚಿತ್ ಗ್ರಂಥಸ್ಯ ಕರಣಸಮಯೇ ಕ್ಷೇತ್ರಸ್ಯ ಪಾಲನ ಸಮಯೇ ಚ । ಇದಮುಪ್ಯುಪಲಕ್ಷಣಮ್ । ಟೀಕಾಯಾಂ ಸರ್ವದಾ ವಿದ್ಯಮಾನಂ ಗುರುಕೃತತ್ವಂ ಕ್ಷೇತ್ರೇ ವಾದ್ಯಾಪಿ ವಿದ್ಯಮಾನಂ ಕುರುಪಾಲಿತತ್ವಂ ಚ ತತ್ರ ವಿದ್ಯಮಾನಮೇವ ತಸ್ಯ ತಸ್ಯ ವ್ಯಾವರ್ತಕಮ್ । ಉತ್ತೃಣತ್ವಂ ಗೃಹಸ್ಯೈವೇತ್ಯಪಿ ದ್ರಷ್ಟವ್ಯಮ್ (ಮುದ್ರಿತಪುಸ್ತಕೇ ಏತನ್ಮೂಲಮೇವ ನಾಸ್ತಿ) ॥ ೧೫೧ ॥

**ವಿವರಣೆ–** ಗುರೋಃ ಟೀಕಾ ಕುರೋಃ ಕ್ಷೇತ್ರಂ ಎಂಬಲ್ಲಿ ಒಂದು ಕಾಲದಲ್ಲಾದರೂ ಅಲ್ಲಿ ಗುರುವಿನ ಸಂಬಂಧವು ಮತ್ತು ಕುರುವಿನ ಸಂಬಂಧವು ಇದ್ದಿತು. ಆದ್ದರಿಂದ ಅಲ್ಲಿ ಗುರು ಮತ್ತು ಕುರುವನ್ನು ಉಪಲಕ್ಷಣ ಎಂದು ಹೇಳಬಹುದು. ಆದರೆ ಬ್ರಹ್ಮನಲ್ಲಿ ಜಗದುಪಾದಾನತ್ವವು ಯಾವ ಕಾಲದಲ್ಲಿಯೂ ಇರುವುದಿಲ್ಲವಾದ್ದರಿಂದ ಅದು ಉಪಲಕ್ಷಣವಾಗಲು ಸಾಧ್ಯವಿಲ್ಲ.

**ಸರ್ವಥಾ ತದಸಂಬದ್ಧಸ್ತತ್ರೋಪಕುರುತೇ ಕಥಮ್ ।**
**ಮಹಿಷ್ಯಾಃ ಕ್ಷೀರವತ್ತ್ವೇ ಸ್ಯಾದ್ ಗೋವೃಷಸ್ಯ ತು ಕಿಂ ಫಲಮ್ ।**
**ಕಾಕಸ್ಯ ಕಾರ್ಷ್ಣ್ಯಾದ್ ಧವಲಃ ಪ್ರಾಸಾದಃ ಸ್ಯಾನ್ನ ಚೇತ್ ತವ ॥ ೧೫೨ ॥**

**ಅರ್ಥ–** ಸರ್ವಥಾ= ಎಲ್ಲ ರೀತಿಯಲ್ಲಿಯೂ, ತದಸಂಬಂದ್ಧಂ= ಅದರ ಸಂಬಂಧವನ್ನು ಹೊಂದದೇ ಇರುವುದು, ತತ್ರ= ಆ ವಸ್ತುವಿಗೆ, ಕಥಂ= ಯಾವ ರೀತಿಯಲ್ಲಿ, ಉಪಕುರುತೇ= ಉಪಕಾರವನ್ನು ಮಾಡುತ್ತದೆ, ಮಹಿಷ್ಯಾಃ= ಎಮ್ಮೆಯು, ಕ್ಷೀರವತ್ತ್ವೇ= ಹಾಲನ್ನು ಹೊಂದಿದ್ದರೆ, ಗೋವೃಷಸ್ಯ= ಹಸುವಿನ ಗಂಡು ಕರುವಿಗೆ, ಕಿಂ ಫಲಂ ಸ್ಯಾತ್= ಯಾವ ಫಲ ಉಂಟಾಗುತ್ತದೆ, ನ ಚೇತ್= ಇಲ್ಲದಿದ್ದರೆ, ಕಾಕಸ್ಯ ಕಾರ್ಷ್ಣ್ಯಾತ್= ಕಾಗೆಯು ಕಪ್ಪಾಗಿರುವುದರಿಂದ, ತವ= ನಿನ್ನ, ಪ್ರಾಸಾದಃ= ಮನೆಯು, ಧವಲಃ ಸ್ಯಾತ್= ಬಿಳಿಯಾಗಲಿ.

**ಅನುವಾದ–** ಯಾವುದು ಯಾವ ವಸ್ತುವಿನ ಸಂಬಂಧವನ್ನು ಹೊಂದಿರುವುದಿಲ್ಲವೋ, ಅದು ಆ ವಸ್ತುವಿಗೆ ಯಾವ ಉಪಕಾರವನ್ನೂ ಮಾಡುವುದಿಲ್ಲ. ಎಮ್ಮೆಯ ಕೆಚ್ಚಲಿನಲ್ಲಿ ಹಾಲಿದ್ದರೆ, ಹಸುವಿನ ಹೋರಿ ಕರುವಿಗೆ ಅದರಿಂದ ಏನು ಪ್ರಯೋಜನ? ಸಂಬಂಧ ವಿಲ್ಲದಿರುವುದಕ್ಕೂ ಉಪಕಾರ್ಯ- ಉಪಕಾರಿ ಭಾವವಿದೆ ಎನ್ನುವುದಾದರೆ, ಕಾಗೆಯ ಕಪ್ಪು ಬಣ್ಣದಿಂದ ನಿನ್ನ ಮನೆಗೆ ಬಿಳಿಯ ಬಣ್ಣವುಂಟಾಗಲಿ.

ಗೃಹೇಽವರ್ತಮಾನತ್ವಮೇವ ನಿಮಿತ್ತಮ್ । ಕಿಂತು ತೇನ ತಸ್ಮಿನ್ನೇವ ಗೃಹೇ ಕೃತಂ ಯದುತ್ತೃಣತ್ವಂ ತದೇವ ಪುನಸ್ತದ್ಗೃಹೇ ಲಕ್ಷಣಮ್ । ತಸ್ಯ ತತ್ರೈವ ವಿದ್ಯಮಾನತ್ವಾತ್ । ಗೃಹಾಂತರೇಽ-ಭಾವಾಚ್ಚ । ತದಪಿ ಗೃಹಾಂತರೇ ತೇನೈವ ಕಾಕೇನ ಕೃತಂ ಚೇಲ್ಲಕ್ಷ್ಯಾದನ್ಯತ್ರ ಗಮನಾನ್ನ ಲಕ್ಷಣಮ್ । ಏವಂ ಚಾತ್ರಾಪಿ ತಸ್ಮಿನ್ನೇವ ಗೃಹೇ ವಿದ್ಯಮಾನೋ ಗೃಹಾಂತರೇಚಾವಿದ್ಯಮಾನ ಏವ ಧರ್ಮಸ್ತದ್ಗೃಹಬೋಧಕ ಇತ್ಯಾಯಾತಮ್ । ತ್ವದಭಿಲಷಿತಸ್ಯ ತು ಬ್ರಹ್ಮಣಿ ಸರ್ವಥಾಽವಿದ್ಯ-ಮಾನಸ್ಯಾಜ್ಞಾನ ಏವ ವಿದ್ಯಮಾನಸ್ಯ ಜಗದುಪಾದಾನತ್ವಸ್ಯ ಬ್ರಹ್ಮಲಕ್ಷಣತ್ವೇ ನ ಕಿಂಚಿನ್ನಿದರ್ಶನಮಿತಿ ಭಾವಃ ॥ ೧೫೦ ॥

**ವಿವರಣೆ–** ಕಾಕವದ್ದೇವದತ್ತಗೃಹಂ ಎಂಬಲ್ಲಿ ಕಾಕವು ಇತರಸಾಧಾರಣವಾದರೂ ಹೇಗೆ ದೇವದತ್ತನ ಗೃಹಕ್ಕೆ ಉಪಲಕ್ಷಣವಾಗುವುದೋ, ಹಾಗೆ ಜಗದುಪಾದಾನತ್ವವು ಮಾಯೆಯಲ್ಲಿದ್ದರೂ ಬ್ರಹ್ಮನಿಗೆ ಉಪಲಕ್ಷಣವಾಗಬಹುದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಕಾಕವೂ ಕೂಡ ದೇವದತ್ತನ ಗೃಹದಲ್ಲಿ ಇದ್ದರೆ ಮಾತ್ರ ದೇವದತ್ತನ ಗೃಹಕ್ಕೆ ಉಪಲಕ್ಷಣವಾಗುತ್ತದೆ. ಯಜ್ಞದತ್ತನ ಗೃಹದಲ್ಲಿದ್ದರೆ ಆಗ ದೇವದತ್ತನ ಗೃಹಕ್ಕೆ ಉಪಲಕ್ಷಣವಾಗುವುದಿಲ್ಲ. ಕಾಕವು ಗೋವಿಗೆ ಸಾಸ್ನಾದಿಮತ್ವದಂತೆ ದೇವದತ್ತನ ಗೃಹದ ಲಕ್ಷಣವಲ್ಲ, ಆದರೆ ಉಪಲಕ್ಷಣ. ದೇವದತ್ತನ ಗೃಹದಲ್ಲಿರುವಾಗ ಅದು ಅಸಾಧಾರಣವಾದ್ದರಿಂದ ದೇವದತ್ತನ ಗೃಹವನ್ನು ಬೋಧಿಸುತ್ತದೆ. ಅದೇ ಕಾಕವು ಯಜ್ಞದತ್ತನ ಗೃಹದ ಮೇಲೂ ಕುಳಿತುಕೊಳ್ಳುವುದಾದರೆ, ಆಗ ಅದು ಉಪಲಕ್ಷಣವಾಗುವುದಿಲ್ಲ. ಏಕೆಂದರೆ ಕಾಗೆಯು ಅಲ್ಲಿಂದ ಹೊರಟು ಹೋಗಿದೆ. ಆದರೆ ದೇವದತ್ತನ ಗೃಹದಲ್ಲಿ ಕಾಗೆಯು ಮಾಡಿದ ಉತ್ತೃಣತ್ವವು ಅಲ್ಲಿ ಇರುವುದರಿಂದ ಅದೇ ಬೋಧಕವಾಗುತ್ತದೆ. ಏಕೆಂದರೆ ಆ ಉತ್ತೃಣತ್ವವು ಇಲ್ಲಿ ಮಾತ್ರ ಇದೆ, ಗೃಹಾಂತರದಲ್ಲಿ ಇಲ್ಲ, ಉತ್ತೃಣತ್ವವು ಗೃಹಾಂತರದಲ್ಲೂ ಇದ್ದರೆ ಆಗ ಉತ್ತೃಣತ್ವವೂ ದೇವದತ್ತ-ಗೃಹಬೋಧಕವಾಗುವುದಿಲ್ಲ. ಆದ್ದರಿಂದ ದೇವದತ್ತನ ಗೃಹದಲ್ಲೇ ಇರುವ, ದೇವದತ್ತಭಿನ್ನ ಗೃಹದಲ್ಲಿ ಇಲ್ಲದಿರುವ ಕಾಕವೇ ಆ ಗೃಹವನ್ನು ಬೋಧಿಸುತ್ತದೆ ಎಂದು ನಿಷ್ಪನ್ನವಾಯಿತು. ಆದರೆ ಬ್ರಹ್ಮನಲ್ಲಿ ಸರ್ವಥಾ ಇಲ್ಲದಿರುವ, ಬ್ರಹ್ಮಭಿನ್ನದಲ್ಲೇ ಇರುವ ಜಗದುಪಾದಾನತ್ವವು ಬ್ರಹ್ಮನಿಗೆ ಲಕ್ಷಣವಾಗುವುದಾಗಲೀ, ಉಪಲಕ್ಷಣವಾಗುವುದಾಗಲೀ ಅಸಂಭಾವಿತ ಎಂದು ಅಭಿಪ್ರಾಯ.

**ಕದಾಚಿದ್ ಗುರುಸಂಬಂಧಃ ಕುರುಸಂಬಂಧ ಏವ ಚ ।**
**ಗುರೋಷ್ಟೀಕಾ ಕುರೋಃ ಕ್ಷೇತ್ರಮಿತ್ಯತ್ರಾಪಿ ಹಿ ವರ್ತತೇ ॥ ೧೫೧ ॥**

**ಅರ್ಥ–** ಗುರೋಃ ಟೀಕಾ= ಗುರುವಿನ ಟೀಕಾ, ಕುರೋಃ ಕ್ಷೇತ್ರ= ಕುರುವಿನ ಕ್ಷೇತ್ರ, ಇತ್ಯತ್ರಾಪಿ= ಎಂಬಲ್ಲಿಯೂ, ಕದಾಚಿತ್= ಒಂದು ಸಮಯದಲ್ಲಿ, ಗುರು ಸಂಬಂಧಃ= ಗುರುವಿನ ಸಂಬಂಧವು, ಕುರುಸಂಬಂಧ ಏವ ಚ= ಮತ್ತು ಕುರುವಿನ ಸಂಬಂಧವೂ ಸಹ, ವರ್ತತೇ ಹಿ= ಇದ್ದೇ ಇದೆಯಷ್ಟೇ.

**ಅನುವಾದ–** ಗುರೋಃ ಟೀಕಾ, ಕುರೋಃ ಕ್ಷೇತ್ರಂ ಎಂಬಲ್ಲಿಯೂ ಸಹ ಆ ಟೀಕೆಗೆ ಗುರುವಿನ ಸಂಬಂಧವೂ ಆ ಕ್ಷೇತ್ರಕ್ಕೆ ಕುರುವಿನ ಸಂಬಂಧವೂ ಒಂದು ಕಾಲದಲ್ಲಿ ಇದ್ದೇ ಇದೆಯಷ್ಟೇ?

**ಭಾವವಿಲಾಸಿನೀ–** ಇದಾನೀಮವಿದ್ಯಮಾನಸ್ಯಾಪಿ ಗುರ್ವಾದೇರ್ಯಥಾ ಟೀಕಾದಿವ್ಯಾವರ್ತಕತ್ವಂ ತಥಾಽತ್ರಾಪಿ ಸ್ಯಾದಿತಿ ಮಂದಾಶಂಕಾಂ ನಿರಾಕರೋತಿ **–ಕದಾಚಿದಿತಿ ॥ ಕದಾಚಿತ್** ಗ್ರಂಥಸ್ಯ ಕರಣಸಮಯೇ ಕ್ಷೇತ್ರಸ್ಯ ಪಾಲನ ಸಮಯೇ ಚ । ಇದಮಪ್ಯುಪಲಕ್ಷಣಮ್ । ಟೀಕಾಯಾಂ ಸರ್ವದಾ ವಿದ್ಯಮಾನಂ ಗುರುಕೃತತ್ವಂ ಕ್ಷೇತ್ರೇ ವಾದ್ಯಾಪಿ ವಿದ್ಯಮಾನಂ ಕುರುಪಾಲಿತತ್ವಂ ಚ ತತ್ರ ವಿದ್ಯಮಾನಮೇವ ತಸ್ಯ ತಸ್ಯ ವ್ಯಾವರ್ತಕಮ್ । ಉತ್ತೃಣತ್ವಂ ಗೃಹಸ್ಯೇವೇತ್ಯಪಿ ದ್ರಷ್ಟವ್ಯಮ್ (ಮುದ್ರಿತಪುಸ್ತಕೇ ಏತನ್ಮೂಲಮೇವ ನಾಸ್ತಿ) ॥ ೧೫೧ ॥

**ವಿವರಣೆ–** ಗುರೋಃ ಟೀಕಾ ಕುರೋಃ ಕ್ಷೇತ್ರಂ ಎಂಬಲ್ಲಿ ಒಂದು ಕಾಲದಲ್ಲಾದರೂ ಅಲ್ಲಿ ಗುರುವಿನ ಸಂಬಂಧವು ಮತ್ತು ಕುರುವಿನ ಸಂಬಂಧವು ಇದ್ದಿತು. ಆದ್ದರಿಂದ ಅಲ್ಲಿ ಗುರು ಮತ್ತು ಕುರುವನ್ನು ಉಪಲಕ್ಷಣ ಎಂದು ಹೇಳಬಹುದು. ಆದರೆ ಬ್ರಹ್ಮನಲ್ಲಿ ಜಗದುಪಾದಾನತ್ವವು ಯಾವ ಕಾಲದಲ್ಲಿಯೂ ಇರುವುದಿಲ್ಲವಾದ್ದರಿಂದ ಅದು ಉಪಲಕ್ಷಣವಾಗಲು ಸಾಧ್ಯವಿಲ್ಲ.

**ಸರ್ವಥಾ ತದಸಂಬದ್ಧಸ್ತತ್ರೋಪಕುರುತೇ ಕಥಮ್ ।**
**ಮಹಿಷ್ಯಾಃ ಕ್ಷೀರವತ್ವೇ ಸ್ಯಾದ್ ಗೋವೃಷಸ್ಯ ತು ಕಿಂ ಫಲಮ್ ।**
**ಕಾಕಸ್ಯ ಕಾರ್ಷ್ಣ್ಯಾದ್ ಧವಲಃ ಪ್ರಾಸಾದಃ ಸ್ಯಾನ್ನ ಚೇತ್ ತವ ॥ ೧೫೨ ॥**

**ಅರ್ಥ–** ಸರ್ವಥಾ= ಎಲ್ಲ ರೀತಿಯಲ್ಲಿಯೂ, ತದಸಂಬಂದ್ಧಂ= ಅದರ ಸಂಬಂಧವನ್ನು ಹೊಂದದೇ ಇರುವುದು, ತತ್ರ= ಆ ವಸ್ತುವಿಗೆ, ಕಥಂ= ಯಾವ ರೀತಿಯಲ್ಲಿ, ಉಪಕುರುತೇ= ಉಪಕಾರವನ್ನು ಮಾಡುತ್ತದೆ, ಮಹಿಷ್ಯಾಃ= ಎಮ್ಮೆಯು, ಕ್ಷೀರವತ್ವೇ= ಹಾಲನ್ನು ಹೊಂದಿದ್ದರೆ, ಗೋವೃಷಸ್ಯ= ಹಸುವಿನ ಗಂಡು ಕರುವಿಗೆ, ಕಿಂ ಫಲಂ ಸ್ಯಾತ್= ಯಾವ ಫಲ ಉಂಟಾಗುತ್ತದೆ, ನ ಚೇತ್= ಇಲ್ಲದಿದ್ದರೆ, ಕಾಕಸ್ಯ ಕಾರ್ಷ್ಣ್ಯಾತ್= ಕಾಗೆಯು ಕಪ್ಪಾಗಿರುವುದರಿಂದ, ತವ= ನಿನ್ನ, ಪ್ರಾಸಾದಃ= ಮನೆಯು, ಧವಲಃ ಸ್ಯಾತ್= ಬಿಳಿಯಾಗಲಿ.

**ಅನುವಾದ–** ಯಾವುದು ಯಾವ ವಸ್ತುವಿನ ಸಂಬಂಧವನ್ನು ಹೊಂದಿರುವುದಿಲ್ಲವೋ, ಅದು ಆ ವಸ್ತುವಿಗೆ ಯಾವ ಉಪಕಾರವನ್ನೂ ಮಾಡುವುದಿಲ್ಲ. ಎಮ್ಮೆಯ ಕೆಚ್ಚಲಿನಲ್ಲಿ ಹಾಲಿದ್ದರೆ, ಹಸುವಿನ ಹೋರಿ ಕರುವಿಗೆ ಅದರಿಂದ ಏನು ಪ್ರಯೋಜನ? ಸಂಬಂಧ ವಿಲ್ಲದಿರುವುದಕ್ಕೂ ಉಪಕಾರ್ಯ- ಉಪಕಾರಿ ಭಾವವಿದೆ ಎನ್ನುವುದಾದರೆ, ಕಾಗೆಯ ಕಪ್ಪು ಬಣ್ಣದಿಂದ ನಿನ್ನ ಮನೆಗೆ ಬಿಳಿಯ ಬಣ್ಣವುಂಟಾಗಲಿ.

**ಭಾವವಿಲಾಸಿನೀ–** ಸರ್ವಥಾ ತದಸಂಬದ್ಧಸ್ಯ ತತ್ರೋಪಕಾರಕತ್ವಾಭಾವೇ ಲೌಕಿಕಾಭಾಣಕಮಾಹ – **ಮಹಿಷ್ಯಾ ಇತಿ** ॥ ಸರ್ವಥಾ ಸಂಬಂಧಾಭಾವ ದರ್ಶನಾಯ ಮಹಿಷಸ್ಯೇತ್ಯನುಕ್ತ್ವಾ ಗೋವೃಷಸ್ಯೇತ್ಯುಕ್ತಮ್ । ಆಭಾಣಕಾಂತರಮಪ್ಯಾಹ – **ಕಾಕಸ್ಯೇತಿ** ॥ ತವ ಪ್ರಾಸಾದ ಇತಿ ಸಂಬಂಧಃ (ಮುದ್ರಿತ ಪುಸ್ತಕೇ ನೋಪಲಭ್ಯತೇ) ॥ ೧೫೨ ॥

**ವಿವರಣೆ–** ಲಕ್ಷಣದಿಂದ ಆಗಬೇಕಾದ ಕಾರ್ಯ ಇತರ ವ್ಯಾವೃತ್ತತಯಾ ಲಕ್ಷಣವನ್ನು ಬೋಧಿಸುವುದು. ಇದು ಲಕ್ಷ್ಯಕ್ಕೆ ಆಗಬೇಕಾದ ಉಪಕಾರ. ಆದರೆ ಲಕ್ಷ್ಯ ಮತ್ತು ಲಕ್ಷಣಗಳಿಗೆ ಸಂಬಂಧವೇ ಇಲ್ಲದಿದ್ದರೆ, ಇಂತಹ ಉಪಕಾರವು ಎಂದೂ ಆಗುವುದಿಲ್ಲವೆಂದು ದೃಷ್ಟಾಂತ ಮತ್ತು ಅತಿಪ್ರಸಂಗಗಳ ಮೂಲಕ ಇಲ್ಲಿ ತಿಳಿಸುತ್ತಾರೆ.

**ಕಿಂ ಚೋಪಲಕ್ಷಣಂ ಹ್ಯೇತಲ್ಲಕ್ಷಣಂ ತು ನ ತಾದೃಶಂ ।**
**ಘಟಸ್ಯ ಲಕ್ಷಣಂ ಪಶ್ಯ ಪಟಸ್ಯ ಬ್ರಾಹ್ಮಣಸ್ಯ ಚ ॥ ೧೫೩ ॥**

**ಅರ್ಥ–** ಕಿಂಚ= ಮತ್ತು, ಏತತ್= ಈ ಕಾಕವು, ಉಪಲಕ್ಷಣಂ= ಉಪಲಕ್ಷಣವಾಗಿದೆ, ಲಕ್ಷಣಂ ತು= ಲಕ್ಷಣವಾದರೂ, ನ ತಾದೃಶಂ= ಹಾಗಿರುವುದಿಲ್ಲ ಉಪಲಕ್ಷಣದಂತಿರುವುದಿಲ್ಲ, ಘಟಸ್ಯ= ಘಟದ, ಪಟಸ್ಯ= ಪಟದ, ಬ್ರಾಹ್ಮಣಸ್ಯ ಚ= ಮತ್ತು ಬ್ರಾಹ್ಮಣನ, ಲಕ್ಷಣಂ= ಲಕ್ಷಣವನ್ನು, ಪಶ್ಯ= ನೋಡು.

**ಅನುವಾದ–** ಕಾಕವು ಉಪಲಕ್ಷಣ. ಲಕ್ಷಣವು ಉಪಲಕ್ಷಣದಂತೆ ಇರುವುದಿಲ್ಲ. ಘಟದ ಲಕ್ಷಣವನ್ನೂ ಪಟದ ಲಕ್ಷಣವನ್ನೂ ಬ್ರಾಹ್ಮಣನ ಲಕ್ಷಣವನ್ನೂ ವಿಚಾರ ಮಾಡು.

**ಭಾವವಿಲಾಸಿನೀ–** ಯುಕ್ತಿರಸ್ತೀತಿ ಕೃತ್ವಾಸರ್ವಮಿದಂ ಚರ್ಚಿತಮ್ । ವಸ್ತುತಸ್ತು ಲಕ್ಷಣಗುಣದೋಷಚಿಂತಾಯಾಂ ನೇದಮುದಾಹರಣಮಿತ್ಯಾಹ – **ಕಿಂಚೇತಿ** ॥ ಏತತ್ ಕಾಕಾದಿಕಮ್ । ಲಕ್ಷಣಮಸಾಧಾರಣಧರ್ಮತ್ವೇನ ಸರ್ವೈರ್ವ್ಯವಹ್ರಿಯಮಾಣಮಿತ್ಯರ್ಥಃ । ತಾದೃಶಮುಪಲಕ್ಷಕ ಕಾಕಾದಿ ಸದೃಶಮ್ । ಘಟಸ್ಯ ಪೃಥುಬುಧ್ನೋದರಾಕಾರತ್ವಮ್ । ಪಟಸ್ಯಾತಾನವಿತಾನಾತ್ಮಕತ್ವಮ್ । ಬ್ರಾಹ್ಮಣಸ್ಯ ಷಟ್‌ಕರ್ಮಾರ್ಹತ್ವಂ ಚ ಲಕ್ಷಣಂ ಪಶ್ಯೇತ್ಯರ್ಥಃ॥ ನಹೀದಮೀದೃಗ್ವಾ ಸರ್ವಂ ಲಕ್ಷಣಂ ತತ್ರ ಸರ್ವಥಾಽವರ್ತಮಾನಮನ್ಯತ್ರೈವಚ ವರ್ತಮಾನಂ ದೃಷ್ಟಮ್ । ತಥಾ ಸತ್ಯೇಕಶಫತ್ವಂ ಗೋರ್ಲಕ್ಷಣಂ ಕಿಮಿತಿ ನಾವಕ್ಷ್ಯನ್ ॥ ೧೫೩ ॥

**ವಿವರಣೆ–** ಯುಕ್ತಿಯನ್ನು ಹೇಳುವ ಅವಕಾಶವಿದೆ ಎಂಬ ಕಾರಣಕ್ಕಾಗಿ ಮಾತ್ರ ಕಾಕವದ್ ದೇವದತ್ತ ಗೃಹಂ ಎಂಬ ವಾಕ್ಯವನ್ನು ವಿಚಾರ ಮಾಡಿದ್ದಾಯಿತು. ವಸ್ತುತಃ ಬ್ರಹ್ಮನ ಲಕ್ಷಣವನ್ನು ವಿಚಾರ ಮಾಡುವಾಗ ಈ ವಾಕ್ಯವನ್ನು ಉದಾಹರಿಸಬಾರದು. ಏಕೆಂದರೆ ಇದು ಉಪಲಕ್ಷಣದ ಪ್ರಕರಣ. ಲಕ್ಷಣವು ಲಕ್ಷ್ಯಗತವಾದ ಅಸಾಧಾರಣಧರ್ಮ. ಉಪಲಕ್ಷಣ್ಯವಾದ ಕಾಕವು ಹಾಗಲ್ಲ. ಘಟದ ಲಕ್ಷಣವು

ಪೃಥುಬುಧ್ನೋದರಾಕಾರ. ಪಟದ ಲಕ್ಷಣವು ಆತಾನವಿತಾನಾತ್ಮಕ ತಂತುರೂಪತ್ವ. ಬ್ರಾಹ್ಮಣನಿಗೆ ಷಟ್ಕರ್ಮಾರ್ಹತ್ವವು ಲಕ್ಷಣ. ಈ ಲಕ್ಷಣವು ಲಕ್ಷ್ಯದಲ್ಲಿಯೇ ಯಾವಾಗಲೂ ಇರುತ್ತವೆ. ಲಕ್ಷ್ಯದ ಸಂಬಂಧವಿಲ್ಲದುದೇ ಲಕ್ಷಣವಾದರೆ, ಏಕಶಫತ್ವ ಗೋವಿನ ಲಕ್ಷಣವಾಗಲಿ ಎಂಬ ಆಪತ್ತಿ ಬರುತ್ತದೆ.

ವ್ಯತಿರೇಕ್ಯನುಮಾನಂ ಹಿ ಲಕ್ಷಣಂ ಪಕ್ಷಧರ್ಮತಾ ।
ವ್ಯಾವೃತ್ತಿಶ್ಚ ವಿಪಕ್ಷೇಭ್ಯಸ್ತಸ್ಯ ಚಾವಶ್ಯಕೀ ನ ಕಿಂ ॥ ೧೫೪ ॥

**ಅರ್ಥ–** ಲಕ್ಷಣಂ= ಲಕ್ಷಣವು, ವ್ಯತಿರೇಕ್ಯನುಮಾನಂ ಹಿ= ವ್ಯತಿರೇಕ್ಯಾನುಮಾನವಷ್ಟೇ, ತಸ್ಯ= ಅದಕ್ಕೆ, ಪಕ್ಷಧರ್ಮತಾ= ಪಕ್ಷಧರ್ಮತ್ವವೂ, ವಿಪಕ್ಷೇಭ್ಯ ವ್ಯಾವೃತ್ತಿಶ್ಚ= ವಿಪಕ್ಷಗಳಿಂದ ವ್ಯಾವೃತ್ತಿಯೂ, ಅವಶ್ಯಕೀ ನ ಕಿಂ= ಅವಶ್ಯಕವಲ್ಲವೇನು?

**ಅನುವಾದ–** ಲಕ್ಷಣವು ಒಂದು ವ್ಯತಿರೇಕ್ಯನುಮಾನ. ಅದಕ್ಕೆ ಪಕ್ಷಧರ್ಮತ್ವವೂ ವಿಪಕ್ಷಗಳಿಂದ ವ್ಯಾವೃತ್ತಿಯೂ ಅವಶ್ಯಕವಲ್ಲವೇನು?

**ಭಾವವಿಲಾಸಿನೀ–** ನನು ಲಕ್ಷಣಸ್ಯಾವ್ಯಾಪ್ತ್ಯತಿವ್ಯಾಪ್ತ್ಯಸಂಭವಾವಿಧುರತ್ವೇ ಕಿಂ ಕಾರಣ-ಮಿತ್ಯತಸ್ತದ್ಬೀಜಂ ದರ್ಶಯತಿ-**ವ್ಯತಿರೇಕೀತಿ** ॥ ಹಿ ಯಸ್ಮಾಲ್ಲಕ್ಷಣಂ ವ್ಯತಿರೇಕ್ಯನುಮಾನಮ್ । ತಸ್ಯ ವ್ಯತಿರೇಕ್ಯನುಮಾನಸ್ಯ ಪಕ್ಷಧರ್ಮತಾ ಪಕ್ಷವ್ಯಾಪ್ತತಾ । ಭಾಗಾಸಿದ್ಧ್ಯನೈಕಾಂತಿಕತ್ವ ಸ್ವರೂಪಾ-ಸಿದ್ಧಿಪರಿಹಾರಾಯ ವ್ಯತಿರೇಕಿ ಹೇತುಭೂತಲಕ್ಷಣಸ್ಯೋಕ್ತದೋಷತ್ರಯ ವೈಧುರ್ಯ-ಮಾವಶ್ಯಕಮಿತಿ ಭಾವಃ ॥ ೧೫೪ ॥

**ವಿವರಣೆ–** ಅವ್ಯಾಪ್ತಿ ಅತಿವ್ಯಾಪ್ತಿ ಮತ್ತು ಅಸಂಭವರಹಿತವಾದ ಧರ್ಮಕ್ಕೆ ಲಕ್ಷಣತ್ವವನ್ನು ಹೇಳಬೇಕು ಎಂಬುದಕ್ಕೆ ಏನು ಕಾರಣವೆಂದು ಇಲ್ಲಿ ತಿಳಿಸುತ್ತಾರೆ. ಲಕ್ಷ್ಯದಲ್ಲಿ ಲಕ್ಷಣದಿಂದ ಇತರ ವ್ಯಾವೃತ್ತಿಯನ್ನು ಸಾಧನೆ ಮಾಡುವಾಗ ಲಕ್ಷಣವು ವ್ಯತಿರೇಕಿಯಾದ ಅನುಮಾನವಾಗುತ್ತದೆ. ಗೌಃ ಇತರ ಭಿನ್ನಾ ಸಾಸ್ನಾದಿಮತ್ವಾತ್, ವ್ಯತಿರೇಕೇಣ ಮಹಿಷವತ್ ಎಂಬುದು ಅದರ ಆಕಾರ. ಲಕ್ಷಣವು ಅನುಮಾನ ಎಂದರೆ ಹೇತುವಾದ ಮೇಲೆ, ಹೇತುವಿಗೆ ಪಕ್ಷಧರ್ಮತ್ವವು ಮತ್ತು ವಿಪಕ್ಷಗಳಿಂದ ವ್ಯಾವೃತ್ತಿಯು ಅವಶ್ಯಕವಾದುದು. ಯಾವ ಧರ್ಮಕ್ಕೆ ಅಸಂಭವವಿರುತ್ತದೋ ಆ ಧರ್ಮವನ್ನು ಲಕ್ಷಣವೆಂದರೆ ಅಲ್ಲಿ ಹೇತುವಿಗೆ ಪಕ್ಷಧರ್ಮತ್ವವೇ ಇರುವುದಿಲ್ಲ ಮತ್ತು ಸ್ವರೂಪಾಸಿದ್ಧಿದೋಷವೇ ಬರುತ್ತದೆ. ಆ ಧರ್ಮಕ್ಕೆ ವಿಪಕ್ಷವೃತ್ತಿತ್ವವಿದ್ದರೆ ಹೇತುವಿಗೆ ವ್ಯಭಿಚಾರ ಬರುತ್ತದೆ. ಆ ಲಕ್ಷಣಕ್ಕೆ ಅವ್ಯಾಪ್ತಿ ಇದ್ದರೆ ಹೇತುವಿಗೆ ಭಾಗಾಸಿದ್ಧಿ ದೋಷಬರುತ್ತದೆ. ಆದ್ದರಿಂದ ಅವ್ಯಾಪ್ತಿ ಮೊದಲಾದ ದೋಷತ್ರಯರಹಿತವಾದುದೇ ಲಕ್ಷಣವಾಗಬೇಕು ಎಂದು ಅಭಿಪ್ರಾಯ.

**ಕಥಂ ಸೂತ್ರಾಭಿಮತಯೋಃ ಯತ್ತದೋರ್ವೃತ್ತಿರುಚ್ಯತಾಂ ।**
**ಯದುಕ್ತಲಕ್ಷಣೋಪೇತಂ ತದ್ ಬ್ರಹ್ಮೇತಿ ಹಿ ಯೋಜನಾ ॥ ೧೫೫ ॥**

**ಅರ್ಥ–** ಸೂತ್ರಾಭಿಮತಯೋಃ= ಸೂತ್ರಕ್ಕೆ ಅಭಿಮತವಾದ, ಯತ್ತದೋಃ= ಯತ್ಪದ ಮತ್ತು ತತ್ಪದಗಳಿಗೆ, ಕಥಂ ವೃತ್ತಿಃ= ಹೇಗೆ ಯೋಜನೆ ಎಂದು, ಉಚ್ಯತಾಂ= ಹೇಳು (ಹೇಳಲ್ಪಡಲಿ), ಯದ್= ಯಾವುದು, ಉಕ್ತಲಕ್ಷಣೋಪೇತಂ= ಹೇಳಲ್ಪಟ್ಟ ಲಕ್ಷಣವನ್ನು ಹೊಂದಿದೆಯೋ, ತತ್= ಅದು, ಬ್ರಹ್ಮ ಇತಿ= ಬ್ರಹ್ಮನೆಂದು, ಯೋಜನಾ ಹಿ= ಯೋಜನೆಯಷ್ಟೇ?

**ಅನುವಾದ– ಸೂತ್ರಾಭಿಮತವಾದ ಯತ್ ತತ್ ಪದಗಳಿಗೆ ಹೇಗೆ ಯೋಜನೆಯನ್ನು ಮಾಡಬೇಕು ಎಂದು ಹೇಳು. ಯಾವುದು ಹೇಳಲ್ಪಟ್ಟ ಲಕ್ಷಣಗಳಿಂದ ಕೂಡಿದೆಯೋ ಅದು ಬ್ರಹ್ಮ ಎಂದೇ ಯೋಜನೆಯಷ್ಟೇ?**

**ಭಾವವಿಲಾಸಿನೀ–** ಸೂತ್ರಯೋಜನಾಽಯೋಗಾಚ್ಚ ನ ಲಕ್ಷಣಸ್ಯ ತಟಸ್ಥತ್ವಮಿತ್ಯಾಹ– **ಕಥಮಿತಿ** । ಸೂತ್ರಾಭಿಮತಯೋರ್ಜನ್ಮಾದಿಸೂತ್ರೇಽಭಿಮತಯೋ ಯತ್ತದೋರ್ಯಚ್ಛಬ್ದತಚ್ಛಬ್ದಯೋಃ । ತಚ್ಛಬ್ದಸ್ಯ ಸ್ಪಷ್ಟಮನುಕ್ತತ್ವಾದಭಿಮತಯೋರಿತ್ಯುಕ್ತಮ್ । ಯತ್ತದೋರ್ನಿತ್ಯಸಂಬಂಧ ಇತಿ ವಚನಾತ್ ಯಚ್ಛಬ್ದಂ ಪ್ರಯುಂಜತಸ್ತಚ್ಛಬ್ದೋಪ್ಯಭಿಮತೋ ಭವತ್ಯೇವ । ವೃತ್ತಿರ್ಯೋಜನಾ । ಕಾ ಇಹ ಕಥಂತೇತ್ಯತ ಆಹ – **ಯದುಕ್ತೇತಿ** ॥ ಅಸ್ಯ ಜನ್ಮಾದಿ ಯತೋಭವತಿ ತದ್ ಬ್ರಹ್ಮೇತಿ ಹಿ ಸೂತ್ರಯೋಜನಾ । ಇಯಂ ಚ ಲಕ್ಷಣಸ್ಯಾಜ್ಞಾನಗತತ್ವೇ ಕಥಂ ಘಟೇತೇತಿ ಭಾವಃ ॥ ೧೫೫ ॥

**ವಿವರಣೆ–** ಸೂತ್ರದ ಯೋಜನೆಯು ಸರಿಯಾಗುವುದಿಲ್ಲವಾದ್ದರಿಂದ ಲಕ್ಷಣವು ತಟಸ್ಥವಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಸೂತ್ರದಲ್ಲಿ ಯತ್ಪದವಿದೆ. ಯತ್ಪದದಿಂದ ನಿತ್ಯಸಂಬಂಧವುಳ್ಳ ತತ್ಪದವೂ ಸೂತ್ರಕಾರರಿಗೆ ಅಭಿಪ್ರೇತವಾದುದೇ. ಆದ್ದರಿಂದ ಈ ಜಗತ್ತಿನ ಜನ್ಮಾದಿಗಳು ಯಾವುದರಿಂದ ಉಂಟಾಗುತ್ತದೆಯೋ, ಅದು ಬ್ರಹ್ಮ ಎಂದು ಸೂತ್ರಯೋಜನೆಯನ್ನು ಮಾಡಬೇಕಷ್ಟೇ? ಲಕ್ಷಣವು ಅಜ್ಞಾನಗತವಾದರೆ ಹೀಗೆ ಸೂತ್ರಯೋಜನೆಯನ್ನು ಮಾಡುವುದು ಹೇಗೆ ಸಾಧ್ಯ?

**ತಲ್ಲಕ್ಷಣಸ್ಯ ತಾಟಸ್ಥ್ಯೇ ಜ್ಞೇಯತಾಪಿ ತಟೇ ತವ ॥ ೧೫೬ ॥**

**ಅರ್ಥ–** ತತ್= ಆದ್ದರಿಂದ, ಲಕ್ಷಣಸ್ಯ= ಲಕ್ಷಣಕ್ಕೆ, ತಾಟಸ್ಥ್ಯೇ= ತಟಸ್ಥತ್ವವು ಇದ್ದರೆ, ತವ= ನಿನಗೆ, ಜ್ಞೇಯತಾಪಿ= ಜ್ಞೇಯತ್ವವೂ ಕೂಡ, ತಟೇ= ತಟದಲ್ಲಿಯೇ ಉಂಟಾಗುತ್ತದೆ.

**ಅನುವಾದ– ಆದ್ದರಿಂದ ಲಕ್ಷಣವು ತಟಸ್ಥವೆಂದು ಹೇಳಿದರೆ, ಜ್ಞೇಯತ್ವವೂ ಕೂಡ ತಟದಲ್ಲಿಯೇ ಇರಬೇಕಾಗುತ್ತದೆ.**

**ಭಾವವಿಲಾಸಿನೀ–** ದೋಷಾಂತರಂ ಚಾಹ – ತದಿತಿ ॥ ತತ್ತಸ್ಮಾತ್ ಬ್ರಹ್ಮಣಿ ಯೋಜನಾಽಯೋಗಾತ್ । ಅಜ್ಞಾನಸ್ಯೈವ ಯೋಜನೀಯತ್ವಾಚ್ಚ । ತಟೇಽಜ್ಞಾನೇ । ಯತೋ ಜನ್ಮಾದಿ ತದಜ್ಞಾನಮಿತಿ ಸೂತ್ರವಾಕ್ಯಪರ್ಯವಸಿತಾರ್ಥೇ ಸತಿ ಪ್ರಾಚೀನಸೂತ್ರೋಕ್ತಜ್ಞೇಯತಾಪಿ ತಸ್ಯೈವಸ್ಯಾತ್ । ಅನ್ಯಥಾ ಸೂತ್ರಯೋರಸಂಗತೇರಿತಿ ಭಾವಃ ॥ ೧೫೬ ॥

**ವಿವರಣೆ–** ಲಕ್ಷಣವು ತಟಸ್ಥವೆಂದರೆ ಮುಖ್ಯವಾದ ಜಗದುಪಾದನತ್ವರೂಪವಾದ ಲಕ್ಷಣವು ಅಜ್ಞಾನದಲ್ಲಿದೆ ಎಂದಾಯಿತು. ಜಿಜ್ಞಾಸಾ ಸೂತ್ರದಲ್ಲಿ ಜ್ಞೇಯತ್ವವನ್ನು ಹೇಳಿರುವುದು ಬ್ರಹ್ಮನಿಗೆ, ಜನ್ಮಾದಿಸೂತ್ರದಲ್ಲಿ ಲಕ್ಷಣವನ್ನು ಹೇಳಿರುವುದು ಅಜ್ಞಾನಕ್ಕೆ ಎಂದರೆ ಸೂತ್ರಗಳು ಪರಸ್ಪರವಾಗಿ ಅಸಂಗತವಾಗುತ್ತವೆ. ಆದ್ದರಿಂದ ಜಗತ್ಕರ್ತೃತ್ವ-ರೂಪವಾದ ಲಕ್ಷಣವನ್ನು ಬ್ರಹ್ಮನಿಗೇ ಹೇಳಬೇಕು.

ಯದಿ ಲಕ್ಷಣವನ್ಮಾಯಾಭ್ರಾಂತ್ಯಧಿಷ್ಠಾನತೈವ ತೇ ।
ಬ್ರಹ್ಮಲಕ್ಷಣಮಾಶಾಸ್ಯಂ ತರ್ಹಿ ಸೂತ್ರಕೃತಃ ಪ್ರಭೋಃ ।
ಆರೋಪೋಸ್ಯಾ ಯತ ಇತಿ ವಚನೇ ಕಾ ದರಿದ್ರತಾ ॥ ೧೫೭ ॥

ಅಂತರಾ ಬ್ರಹ್ಮಸೂತ್ರಾಣಿ ಕಿಮಬ್ರಹ್ಮಾಪಿ ಸೂತ್ರಿತಂ ॥ ೧೫೮ ॥

**ಅರ್ಥ–** ಯದಿ= ಒಂದು ಪಕ್ಷ, ತೇ= ನಿನಗೆ, ಲಕ್ಷಣವನ್ಮಾಯಾ ಭ್ರಾಂತ್ಯಧಿಷ್ಠಾನತೈವ= ಲಕ್ಷಣಾಶ್ರಯವಾದ ಮಾಯಾರೋಪಧಿಷ್ಠಾನತ್ವವೇ, ಬ್ರಹ್ಮಲಕ್ಷಣಂ= ಬ್ರಹ್ಮಲಕ್ಷಣವೆಂದು, ಆಶಾಸ್ಯಂ= ಆಶಿಸಲ್ಪಡುವುದಾದರೆ, ತರ್ಹಿ= ಆಗ, ಪ್ರಭೋಃ= ಸಮರ್ಥರಾದ, ಸೂತ್ರಕೃತಃ= ಸೂತ್ರಕಾರರಿಗೆ, ಆರೋಪಾಸ್ಯಾ ಯತಃ ಇತಿ= ಆರೋಪಾಸ್ಯಾ ಯತಃ ಎಂದು, ವಚನೇ= ಹೇಳುವುದಕ್ಕೆ, ಕಾ ದರಿದ್ರತಾ= ಯಾವ ದಾರಿದ್ರ್ಯವಿದೆ, ಬ್ರಹ್ಮಸೂತ್ರಾನಿ ಅಂತರಾ= ಬ್ರಹ್ಮಸೂತ್ರಗಳ ಮಧ್ಯದಲ್ಲಿ, ಅಬ್ರಹ್ಮಾಪಿ= ಬ್ರಹ್ಮ ಭಿನ್ನವಾದವುಗಳೂ, ಸೂತ್ರಿತಂ ಕಿಂ= ಸೂತ್ರದಿಂದ ಹೇಳಲ್ಪಡುತ್ತದೆಯೇ?

**ಅನುವಾದ–** ಜಗದುಪಾದಾನವಾದ ಮಾಯಾರೋಪಾಧಿಷ್ಠಾನತ್ವವೇ ಬ್ರಹ್ಮನ ಲಕ್ಷಣವೆಂದು ನೀನು ಆಶಿಸುವುದಾದರೆ ಸಮರ್ಥರಾದ ಸೂತ್ರಕಾರರು ಆರೋಪೋಸ್ಯಾ ಯತಃ ಎಂದು ಹೇಳುವುದಕ್ಕೆ ಅವರಿಗೆ ಯಾವ ವಚನ ದಾರಿದ್ರ್ಯವಿದ್ದಿತು? ಬ್ರಹ್ಮಸೂತ್ರಗಳ ಮಧ್ಯದಲ್ಲಿ ಬ್ರಹ್ಮ ಭಿನ್ನವಾದುದನ್ನೂ ಸೂತ್ರಿಸಿದ್ದಾರೆಯೇ?

**ಭಾವವಿಲಾಸಿನೀ–** ನನು ಜಗದುಪಾದಾನತ್ವಮೇವ ನ ಲಕ್ಷಣಮುಚ್ಯತೇ । ಯೇನೋಕ್ತದೋಷಃ ಸರ್ವೋಽಪಿ ಸ್ಯಾತ್ । ಕಿಂತು ಜಗದುಪಾದಾನಮಾಯಾರೋಪಾಧಿಷ್ಠಾನತ್ವಮೇವ ಬ್ರಹ್ಮಲಕ್ಷಣಾ-ಮತ್ರಾಭಿಪ್ರೇತಮಿತಿ ಶಂಕಾಮನೂದ್ಯ ದೂಷಯತಿ ॥ ಯದೀತಿ ॥ ಲಕ್ಷಣವತ್ಯಾ ಮಾಯಾಯಾ

ಭ್ರಾಂತೇರಾರೋಪಸ್ಯಾಧಿಷ್ಠಾನತ್ವೈವ । ತರ್ಹಿ ಪ್ರಭೋಃ ಕರ್ತುಮನ್ಯಥಾಕರ್ತುಂ ಸಮರ್ಥಸ್ಯ ಸೂತ್ರಕೃತಃ ಆರೋಪೋಽಸ್ಯಾ ಯತ ಇತಿ ವಚನೇ ಸೂತ್ರಕರಣೇ ಕಾ ದರಿದ್ರತೇತಿಯೋಜನಾ । ಅಲ್ಪಾಕ್ಷರತ್ವಾದೇರುಭಯತ್ರ ಸಾಮ್ಯಾತ್ ಪೂರ್ವೋತ್ತರ ಸೂತ್ರಸಂಗತೇರತ್ರಾಧಿಕ್ಯಾಚ್ಚೇತಿ ಭಾವಃ । ದರಿದ್ರತೇತಿ ವದತಾ ಸ್ವಗೃಹೇ ಧನರಹಿತದರಿದ್ರಸ್ಯೈವ ಪರಗೃಹಧನಾಭ್ಯರ್ಥನಂ ದೃಷ್ಟಮ್ । ತ್ವದ್ರೀತ್ಯೈವೋಕ್ತಸ್ವನಿಷ್ಠ ಲಕ್ಷಣ ಸಂಭವಾತ್ ಬ್ರಹ್ಮ ಕುತಃ ಸ್ವವ್ಯಾವೃತ್ತ್ಯೈ ಅನ್ಯಲಕ್ಷಣ-ಮರ್ಥಯತ ಇತಿ ಕಲ್ಪನೇತಿ ಸೂಚಿತಮ್ । ದೋಷಾಂತರಂ ಚಾಹ – **ಅಂತರೇತಿ** ॥ ಅಂತರೇತಿ ಮಧ್ಯವಾಚಕಮವ್ಯಯಮಿದಮ್ । ಅಂತರಾಂತರೇಣ ಯುಕ್ತ ಇತಿ ವಚನಾತ್ ಬ್ರಹ್ಮಸೂತ್ರಾಣೀತಿ ದ್ವಿತೀಯಾಷಷ್ಠ್ಯರ್ಥೇ । ಬ್ರಹ್ಮಸೂತ್ರಾಣಾಂ ಮಧ್ಯ ಇತ್ಯರ್ಥಃ । ಅಬ್ರಹ್ಮ ಅಜ್ಞಾನಮ್ । ಏವಂ ಸತಿ ಅಸ್ಯ ಸೂತ್ರಸ್ಯಾಜ್ಞಾನಸೂತ್ರತ್ವೇನ ಬ್ರಹ್ಮಸೂತ್ರತ್ವಾಭಾವಾತ್ ಚಕಾರಬ್ರಹ್ಮಸೂತ್ರಾಣಿ ಯೇಷಾಂ ಸೂತ್ರತ್ವಮಂಜಸೇತಿ ಸ್ಮೃತಿವಿರೋಧಶ್ಚ ತ್ವದ್ವ್ಯಾಖ್ಯಾನಸ್ಯೇತಿ ಭಾವಃ ॥೧೫೭-೧೫೮॥

**ವಿವರಣೆ–** ಜಗದುಪಾದಾನತ್ವವು ಸೂತ್ರಾಭಿಪ್ರೇತವಾದ ಲಕ್ಷಣವಲ್ಲ. ಜಗದುಪಾದಾನ ಮಾಯಾರೋಪಾಧಿಷ್ಠಾನತ್ವವೇ ಬ್ರಹ್ಮಸೂತ್ರದಲ್ಲಿ ಅಭಿಮತವಾದ ಲಕ್ಷಣ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಹಾಗಾದರೆ ಸೂತ್ರವು ಆರೋಪೋಽಸ್ಯಾ ಯತಃ ಎಂದು ಇರಬೇಕಾಗಿದ್ದಿತು. ಆಗ ಈ ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾದುದು ಬ್ರಹ್ಮ ಎಂದು ತಿಳಿಯುತ್ತಿದ್ದಿತು. ಸೂತ್ರಕಾರರು ಪ್ರಭುಗಳು ಎಂದರೆ ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಸಮರ್ಥರು ಎಂದು ಅರ್ಥ. ಹೀಗಿರುವಾಗ ಹಾಗೆ ಹೇಳುವುದಕ್ಕೆ ಅವರಿಗೆ ಯಾವ ದಾರಿದ್ರ್ಯವಿದ್ದಿತು? ತನ್ನ ಮನೆಯಲ್ಲಿ ಧನವಿಲ್ಲದ ದರಿದ್ರನು ಇನ್ನೊಬ್ಬರ ಮನೆಯ ಧನವನ್ನು ಪ್ರಾರ್ಥಿಸಬೇಕು. ನಿನ್ನ ರೀತಿಯಿಂದಲೇ ಜಗದಾರೋಪಾಧಿಷ್ಠಾನತ್ವರೂಪವಾದ ಲಕ್ಷಣವು ಬ್ರಹ್ಮನಲ್ಲಿಯೇ ಕೂಡುವುದರಿಂದ ಅದನ್ನು ಬಿಟ್ಟು ಬ್ರಹ್ಮನು ತನ್ನ ವ್ಯಾವೃತ್ತಿಯ ಸಂಪಾದನೆಗಾಗಿ ಮಾಯೆಯಲ್ಲಿ (ಅಜ್ಞಾನದಲ್ಲಿರುವ) ಜಗದುಪಾದಾನತ್ವ ಲಕ್ಷಣವನ್ನು ಏಕೆ ನೋಡಬೇಕು ಎಂದು ಅರ್ಥ. ಜೊತೆಗೆ ಬ್ರಹ್ಮಜಿಜ್ಞಾಸಾ ಸೂತ್ರದಲ್ಲಿ ಬ್ರಹ್ಮನ ವಿಚಾರವನ್ನು ಪ್ರತಿಜ್ಞೆ ಮಾಡಿ ಎರಡನೆಯ ಸೂತ್ರದಲ್ಲಿ ಜಗದುಪಾದಾನತ್ವರೂಪವಾದ ಲಕ್ಷಣವನ್ನು ಹೇಳಿದರೆ ಅದು ಜಡವಾದ ಅಜ್ಞಾನದ ಲಕ್ಷಣವಾಯಿತು. ಆದ್ದರಿಂದ ಬ್ರಹ್ಮಸೂತ್ರವನ್ನು ರಚಿಸಲು ಹೊರಟ ವೇದವ್ಯಾಸರು, ಬ್ರಹ್ಮಸೂತ್ರಗಳ ಮಧ್ಯದಲ್ಲಿ ಬ್ರಹ್ಮನಲ್ಲದ ವಸ್ತುಗಳನ್ನೂ ಸೂತ್ರಿಸಿದ್ದಾರೆಯೇ ಎಂದು ಅಪಹಾಸವನ್ನು ಮಾಡುತ್ತಾರೆ.

**ಶ್ರುತೇರನುಸೃತೌ ಚ ಸ್ಯಾತ್ ತಟಸ್ಥಂ ನೈವ ಲಕ್ಷಣಂ ।**
**ಯತ್ತದೋದಿತಮೇವಾರ್ಥಂ ತತ್ತದೇನ ಹಿ ಸಾ ಜಗೌ ॥ ೧೫೯ ॥**

**ಅರ್ಥ–** ಶ್ರುತೇರನುಸೃತೌ ಚ= ಶ್ರುತಿಯನ್ನು ಅನುಸರಿಸಿದರಂತೂ, ಲಕ್ಷಣಂ= ಲಕ್ಷಣವು, ನೈವ ತಟಸ್ಥಂ ಸ್ಯಾತ್= ತಟಸ್ಥವಾಗುವುದೇ ಇಲ್ಲ, ಸಾ= ಆ ಶ್ರುತಿಯು, ಯತ್ತದೋದಿತ

ಮೇವಾರ್ಥಂ= ಯತ್ಪದದಿಂದ ಹೇಳಿದ ಅರ್ಥವನ್ನೇ, ತತ್ಪದೇನ= ತತ್ ಎಂಬ ಪದದಿಂದ, ಜಗೌ ಹಿ= ಹೇಳಿತಷ್ಟೇ?

**ಅನುವಾದ–** ಶ್ರುತಿಯನ್ನು ಅನುಸರಿಸಿದರಂತೂ ಲಕ್ಷಣವು ತಟಸ್ಥವೆಂದು ಸಿದ್ಧವಾಗುವುದೇ ಇಲ್ಲ. ಏಕೆಂದರೆ ಯತ್ಪದದಿಂದ ಹೇಳಿದ ಅರ್ಥವನ್ನೇ ಅದು ತತ್ಪದದಿಂದ ಪರಾಮರ್ಶೆ ಮಾಡಿದೆಯಷ್ಟೇ?

**ಭಾವವಿಲಾಸಿನೀ–** ಜನ್ಮಾದಿಕಾರಣತ್ವಂ ತಟಸ್ಥಮಿತಿ ವದತಃ ಶ್ರುತಿವಿರೋಧಮಪ್ಯಾಹ – **ಶ್ರುತೇರಿತಿ** ॥ ಯತೋವಾ ಇಮಾನಿ ಭೂತಾನಿ ಜಾಯಂತ ಇತಿ ಶ್ರುತೇಃ । ಸಾ ಶ್ರುತಿಃ । ಯತ ಇತಿ ಪ್ರಾಕ್‌ಜಗತ್ಕಾರಣತ್ವೇನ ಯತ್ಪದೋದಿತಂ ವಸ್ತು ತದ್ ಬ್ರಹ್ಮೇತಿ ಬ್ರಹ್ಮಾರ್ಥಕತತ್ಪದೇನ । ಶ್ರುತಿರ್ಹಿಯತ್ಪದೇನ ಜಗತ್ಕಾರಣಂ ಪ್ರಸ್ತಾವ್ಯ ತತ್ಪದೇನ ತಸ್ಯೈವ ಬ್ರಹ್ಮತಾಮಬ್ರವೀತ್ । ಅತಃ ಪ್ರಾಕ್‌ಪ್ರಸ್ತುತಂ ಜಗತ್ಕಾರಣಮಪಿ ಬ್ರಹ್ಮೈವ ಶ್ರುತೇರಭಿಪ್ರೇತಮ್ । ತತ್ತ್ಯಾಗೇ ಶ್ರುತ್ಯನನುಸಾರಿತ್ವಂ ಚ ಪರಸ್ಯ ಸ್ಯಾದಿತಿ ಭಾವಃ ॥ ೧೫೯ ॥

**ವಿವರಣೆ–** ಜನ್ಮಾದಿಕಾರಣತ್ವವು ತಟಸ್ಥಲಕ್ಷಣವೆಂದು ಹೇಳುವವರಿಗೆ ಶ್ರುತಿವಿರೋಧ ಬರುವುದೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಸೂತ್ರದಲ್ಲಿ ಯತ್ಪದ ಮಾತ್ರವೇ ಇದೆ, ತತ್ಪದವನ್ನು ಸಾಮರ್ಥ್ಯದಿಂದ ತೆಗೆದುಕೊಳ್ಳಬೇಕು. ಶ್ರುತಿಯಲ್ಲಿ ಹಾಗಲ್ಲ ಯತೋವಾ ಇಮಾನಿ ಭೂತಾನಿ ಜಾಯಂತೇ ತದ್ಬ್ರಹ್ಮ ಎಂದು ಯತ್ ಮತ್ತು ತತ್ ಎರಡೂ ಪದಗಳು ಪ್ರಯೋಗಿಸಲ್ಪಟ್ಟಿವೆ. ತತ್ ಪದದಿಂದ ಹೇಳಲ್ಪಟ್ಟಿದ್ದು ಬ್ರಹ್ಮ ಎಂಬ ವಿಷಯದಲ್ಲಿ ವಿವಾದವಿಲ್ಲ. ಯತ್ ಪದದಿಂದ ಬ್ರಹ್ಮನನ್ನು ಹೇಳದಿದ್ದರೆ ಅದನ್ನು ತತ್ಪದದಿಂದ ಪರಾಮರ್ಶೆಯನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಯತ್ಪದದಿಂದಲೂ ಬ್ರಹ್ಮನನ್ನು ಹೇಳಲೇಬೇಕು. ಯತ್ಪದದಿಂದ ಬ್ರಹ್ಮನನ್ನು ಹೇಳಿದರೆ ಜಗತ್ಕಾರಣತ್ವವು ಬ್ರಹ್ಮನಲ್ಲಿಯೇ ಇದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಆ ಲಕ್ಷಣವು ತಟಸ್ಥ ಎಂದು ಹೇಳಿದರೆ, ಶ್ರುತಿಯ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ಏವಂ ಚ ನಿರ್ಗುಣತ್ವೋಕ್ತ್ಯಾ ತಟಸ್ಥಂ ಲಕ್ಷಣಂ ನ ತೇ ।**
**ಆರೋಪಾಧಿಷ್ಠಾನತಾಖ್ಯಧರ್ಮಸ್ಯಾವಶ್ಯಕತ್ವತಃ ।**
**ತಟಸ್ಥಮಾಯಾಯೋಗಸ್ಯ ಬೋಧ್ಯತ್ವಾದೇರವರ್ಜನಾತ್ ॥ ೧೬೦ ॥**

**ಅರ್ಥ–** ಏವಂ ಚ= ಉಕ್ತರೀತಿಯಲ್ಲಿ, ನಿರ್ಗುಣತ್ವೋಕ್ತ್ಯಾ= ನೀನು ಬ್ರಹ್ಮನು ನಿರ್ಗುಣ ಎಂದು ಹೇಳುವುದರಿಂದ, ತೇ= ನಿನಗೆ, ಲಕ್ಷಣಂ= ಲಕ್ಷಣವು, ತಟಸ್ಥಂ ನ= ತಟಸ್ಥವಲ್ಲ, ಏಕೆಂದರೆ, ಆರೋಪಾಧಿಷ್ಠಾನತಾಖ್ಯಧರ್ಮಸ್ಯ= ಆರೋಪಾಧಿಷ್ಠಾನತ್ವರೂಪವಾದ ಧರ್ಮವು, ಆವಶ್ಯಕತ್ವತಃ= ಅವಶ್ಯಕವಾದುದರಿಂದ, ತಟಸ್ಥಮಾಯಾಯೋಗಸ್ಯ= ತಟಸ್ಥಮಾಯಾ ಸಂಬಂಧವನ್ನೂ, ಬೋಧ್ಯತ್ವಾದೇಃ= ಬೋಧ್ಯತ್ವಾದಿಗಳನ್ನೂ ಸಹ, ಅವರ್ಜನಾತ್= ಪರಿಹರಿಸಲು ಸಾಧ್ಯವಿಲ್ಲವಾದುದರಿಂದ.

**ಭ್ರಾಂತೇರಾರೋಪಸ್ಯಾಧಿಷ್ಠಾನತ್ವೈವ । ತರ್ಹಿ ಪ್ರಭೋಃ ಕರ್ತುಮನ್ಯಥಾಕರ್ತುಂ ಸಮರ್ಥಸ್ಯ ಸೂತ್ರಕೃತಃ ಆರೋಪೋಽಸ್ಯ ಯತ ಇತಿ ವಚನೇ ಸೂತ್ರಕರಣೇ ಕಾ ದರಿದ್ರತೇತಿಯೋಜನಾ । ಅಲ್ಪಾಕ್ಷರತ್ವಾದೇರುಭಯತ್ರ ಸಾಮ್ಯಾತ್ ಪೂರ್ವೋತ್ತರ ಸೂತ್ರಸಂಗತೇರತ್ರಾಧಿಕ್ಯಾಚ್ಚೇತಿ ಭಾವಃ । ದರಿದ್ರತೇತಿ ವದತಾ ಸ್ವಗೃಹೇ ಧನರಹಿತದರಿದ್ರಸ್ಯೈವ ಪರಗೃಹಧನಾಭ್ಯರ್ಥನಂ ದೃಷ್ಟಮ್ । ತ್ವದ್ರೀತ್ಯೈವೋಕ್ತಸ್ವನಿಷ್ಠ ಲಕ್ಷಣ ಸಂಭವಾತ್ ಬ್ರಹ್ಮ ಕುತಃ ಸ್ವವ್ಯಾವೃತ್ತ್ಯೈ ಅನ್ಯಲಕ್ಷಣ-ಮರ್ಥಯತ ಇತಿ ಕಲ್ಪನೇತಿ ಸೂಚಿತಮ್ । ದೋಷಾಂತರಂ ಚಾಹ – ಅಂತರೇತಿ ॥ ಅಂತರೇತಿ ಮಧ್ಯವಾಚಕಮವ್ಯಯಮಿದಮ್ । ಅಂತರಾಂತರೇಣ ಯುಕ್ತ ಇತಿ ವಚನಾತ್ ಬ್ರಹ್ಮಸೂತ್ರಾಣೀತಿ ದ್ವಿತೀಯಾಷಷ್ಠ್ಯರ್ಥೇ । ಬ್ರಹ್ಮಸೂತ್ರಾಣಾಂ ಮಧ್ಯ ಇತ್ಯರ್ಥಃ । ಅಬ್ರಹ್ಮ ಅಜ್ಞಾನಮ್ । ಏವಂ ಸತಿ ಅಸ್ಯ ಸೂತ್ರಸ್ಯಾಜ್ಞಾನಸೂತ್ರತ್ವೇನ ಬ್ರಹ್ಮಸೂತ್ರತ್ವಾಭಾವಾತ್ ಚಕಾರಬ್ರಹ್ಮಸೂತ್ರಾಣಿ ಯೇಷಾಂ ಸೂತ್ರತ್ವಮಂಜಸೇತಿ ಸ್ಮೃತಿವಿರೋಧಶ್ಚ ತ್ವದ್ವ್ಯಾಖ್ಯಾನಸ್ಯೇತಿ ಭಾವಃ ॥೧೫೭-೧೫೮॥**

**ವಿವರಣೆ–** ಜಗದುಪಾದಾನತ್ವವು ಸೂತ್ರಾಭಿಪ್ರೇತವಾದ ಲಕ್ಷಣವಲ್ಲ. ಜಗದುಪಾದಾನ ಮಾಯಾರೋಪಾಧಿಷ್ಠಾನತ್ವವೇ ಬ್ರಹ್ಮಸೂತ್ರದಲ್ಲಿ ಅಭಿಮತವಾದ ಲಕ್ಷಣ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಹಾಗಾದರೆ ಸೂತ್ರವು ಆರೋಪೋಽಸ್ಯ ಯತಃ ಎಂದು ಇರಬೇಕಾಗಿದ್ದಿತು. ಆಗ ಈ ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾದುದು ಬ್ರಹ್ಮ ಎಂದು ತಿಳಿಯುತ್ತಿದ್ದಿತು. ಸೂತ್ರಕಾರರು ಪ್ರಭುಗಳು ಎಂದರೆ ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಸಮರ್ಥರು ಎಂದು ಅರ್ಥ. ಹೀಗಿರುವಾಗ ಹಾಗೆ ಹೇಳುವುದಕ್ಕೆ ಅವರಿಗೆ ಯಾವ ದಾರಿದ್ರ್ಯವಿದ್ದಿತು? ತನ್ನ ಮನೆಯಲ್ಲಿ ಧನವಿಲ್ಲದ ದರಿದ್ರನು ಇನ್ನೊಬ್ಬರ ಮನೆಯ ಧನವನ್ನು ಪ್ರಾರ್ಥಿಸಬೇಕು. ನಿನ್ನ ರೀತಿಯಿಂದಲೇ ಜಗದಾರೋಪಾಧಿಷ್ಠಾನತ್ವರೂಪವಾದ ಲಕ್ಷಣವು ಬ್ರಹ್ಮನಲ್ಲಿಯೇ ಕೂಡುವುದರಿಂದ ಅದನ್ನು ಬಿಟ್ಟು ಬ್ರಹ್ಮನು ತನ್ನ ವ್ಯಾವೃತ್ತಿಯ ಸಂಪಾದನೆಗಾಗಿ ಮಾಯೆಯಲ್ಲಿ (ಅಜ್ಞಾನದಲ್ಲಿರುವ) ಜಗದುಪಾದಾನತ್ವ ಲಕ್ಷಣವನ್ನು ಏಕೆ ನೋಡಬೇಕು ಎಂದು ಅರ್ಥ. ಜೊತೆಗೆ ಬ್ರಹ್ಮಜಿಜ್ಞಾಸಾ ಸೂತ್ರದಲ್ಲಿ ಬ್ರಹ್ಮನ ವಿಚಾರವನ್ನು ಪ್ರತಿಜ್ಞೆ ಮಾಡಿ ಎರಡನೆಯ ಸೂತ್ರದಲ್ಲಿ ಜಗದುಪಾದಾನತ್ವರೂಪವಾದ ಲಕ್ಷಣವನ್ನು ಹೇಳಿದರೆ ಅದು ಜಡವಾದ ಅಜ್ಞಾನದ ಲಕ್ಷಣವಾಯಿತು. ಆದ್ದರಿಂದ ಬ್ರಹ್ಮಸೂತ್ರವನ್ನು ರಚಿಸಲು ಹೊರಟ ವೇದವ್ಯಾಸರು, ಬ್ರಹ್ಮಸೂತ್ರಗಳ ಮಧ್ಯದಲ್ಲಿ ಬ್ರಹ್ಮನಲ್ಲದ ವಸ್ತುಗಳನ್ನೂ ಸೂತ್ರಿಸಿದ್ದಾರೆಯೇ ಎಂದು ಅಪಹಾಸವನ್ನು ಮಾಡುತ್ತಾರೆ.

**ಶ್ರುತೇರನುಸ್ಮೃತೌ ಚ ಸ್ಯಾತ್ ತಟಸ್ಥಂ ನೈವ ಲಕ್ಷಣಂ ।**
**ಯತ್ತದೋದಿತಮೇವಾರ್ಥಂ ತತ್ತದೇನ ಹಿ ಸಾ ಜಗೌ ॥ ೧೫೯ ॥**

**ಅರ್ಥ–** ಶ್ರುತೇರನುಸ್ಮೃತೌ ಚ= ಶ್ರುತಿಯನ್ನು ಅನುಸರಿಸಿದರಂತೂ, ಲಕ್ಷಣಂ= ಲಕ್ಷಣವು, ನೈವ ತಟಸ್ಥಂ ಸ್ಯಾತ್= ತಟಸ್ಥವಾಗುವುದೇ ಇಲ್ಲ, ಸಾ= ಆ ಶ್ರುತಿಯು, ಯತ್ತದೋದಿತ

ಮೇವಾರ್ಥಂ= ಯತ್ಪದದಿಂದ ಹೇಳಿದ ಅರ್ಥವನ್ನೇ, ತತ್ಪದೇನ= ತತ್ ಎಂಬ ಪದದಿಂದ, ಜಗೌ ಹಿ= ಹೇಳಿತಷ್ಟೇ?

**ಅನುವಾದ–** ಶ್ರುತಿಯನ್ನು ಅನುಸರಿಸಿದರಂತೂ ಲಕ್ಷಣವು ತಟಸ್ಥವೆಂದು ಸಿದ್ಧವಾಗುವುದೇ ಇಲ್ಲ. ಏಕೆಂದರೆ ಯತ್ಪದದಿಂದ ಹೇಳಿದ ಅರ್ಥವನ್ನೇ ಅದು ತತ್ಪದದಿಂದ ಪರಾಮರ್ಶೆ ಮಾಡಿದೆಯಷ್ಟೇ?

**ಭಾವವಿಲಾಸಿನೀ–** ಜನ್ಮಾದಿಕಾರಣತ್ವಂ ತಟಸ್ಥಮಿತಿ ವದತಃ ಶ್ರುತಿವಿರೋಧಮಪ್ಯಾಹ – **ಶ್ರುತೇರಿತಿ** ॥ ಯತೋವಾ ಇಮಾನಿ ಭೂತಾನಿ ಜಾಯಂತ ಇತಿ ಶ್ರುತೇಃ । ಸಾ ಶ್ರುತಿಃ । ಯತ ಇತಿ ಪ್ರಾಕ್‌ಜಗತ್ಕಾರಣತ್ವೇನ ಯತ್ಪದೋದಿತಂ ವಸ್ತು ತದ್ ಬ್ರಹ್ಮೇತಿ ಬ್ರಹ್ಮಾರ್ಥಕತತ್ಪದೇನ । ಶ್ರುತಿರ್ಹಿಯತ್ಪದೇನ ಜಗತ್ಕಾರಣಂ ಪ್ರಸ್ತಾವ್ಯ ತತ್ಪದೇನ ತಸ್ಯೈವ ಬ್ರಹ್ಮತಾಮಬ್ರವೀತ್ । ಅತಃ ಪ್ರಾಕ್‌ಪ್ರಸ್ತುತಂ ಜಗತ್ಕಾರಣಮಪಿ ಬ್ರಹ್ಮೈವ ಶ್ರುತೇರಭಿಪ್ರೇತಮ್ । ತತ್ತ್ಯಾಗೇ ಶ್ರುತ್ಯನನುಸಾರಿತ್ವಂ ಚ ಪರಸ್ಯ ಸ್ಯಾದಿತಿ ಭಾವಃ ॥ ೧೫೯ ॥

**ವಿವರಣೆ–** ಜನ್ಮಾದಿಕಾರಣತ್ವವು ತಟಸ್ಥಲಕ್ಷಣವೆಂದು ಹೇಳುವವರಿಗೆ ಶ್ರುತಿವಿರೋಧ ಬರುವುದೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಸೂತ್ರದಲ್ಲಿ ಯತ್ಪದ ಮಾತ್ರವೇ ಇದೆ, ತತ್ಪದವನ್ನು ಸಾಮರ್ಥ್ಯದಿಂದ ತೆಗೆದುಕೊಳ್ಳಬೇಕು. ಶ್ರುತಿಯಲ್ಲಿ ಹಾಗಲ್ಲ ಯತೋವಾ ಇಮಾನಿ ಭೂತಾನಿ ಜಾಯಂತೇ ತದ್ಬ್ರಹ್ಮ ಎಂದು ಯತ್ ಮತ್ತು ತತ್ ಎರಡೂ ಪದಗಳು ಪ್ರಯೋಗಿಸಲ್ಪಟ್ಟಿವೆ. ತತ್ ಪದದಿಂದ ಹೇಳಲ್ಪಟ್ಟಿದ್ದು ಬ್ರಹ್ಮ ಎಂಬ ವಿಷಯದಲ್ಲಿ ವಿವಾದವಿಲ್ಲ. ಯತ್ ಪದದಿಂದ ಬ್ರಹ್ಮನನ್ನು ಹೇಳದಿದ್ದರೆ ಅದನ್ನು ತತ್ಪದದಿಂದ ಪರಾಮರ್ಶೆಯನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಯತ್ಪದದಿಂದಲೂ ಬ್ರಹ್ಮನನ್ನು ಹೇಳಲೇಬೇಕು. ಯತ್ಪದದಿಂದ ಬ್ರಹ್ಮನನ್ನು ಹೇಳಿದರೆ ಜಗತ್ಕಾರಣತ್ವವು ಬ್ರಹ್ಮನಲ್ಲಿಯೇ ಇದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಆ ಲಕ್ಷಣವು ತಟಸ್ಥ ಎಂದು ಹೇಳಿದರೆ, ಶ್ರುತಿಯ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ಏವಂ ಚ ನಿರ್ಗುಣತ್ವೋಕ್ತ್ಯಾ ತಟಸ್ಥಂ ಲಕ್ಷಣಂ ನ ತೇ ।**
**ಆರೋಪಾಧಿಷ್ಠಾನತಾಖ್ಯಧರ್ಮಸ್ಯಾವಶ್ಯಕತ್ವತಃ ।**
**ತಟಸ್ಥಮಾಯಾಯೋಗಸ್ಯ ಬೋಧ್ಯತ್ವಾದೇರವರ್ಜನಾತ್ ॥ ೧೬೦ ॥**

**ಅರ್ಥ–** ಏವಂ ಚ= ಉಕ್ತರೀತಿಯಲ್ಲಿ, ನಿರ್ಗುಣತ್ವೋಕ್ತ್ಯಾ= ನೀನು ಬ್ರಹ್ಮನು ನಿರ್ಗುಣ ಎಂದು ಹೇಳುವುದರಿಂದ, ತೇ= ನಿನಗೆ, ಲಕ್ಷಣಂ= ಲಕ್ಷಣವು, ತಟಸ್ಥಂ ನ= ತಟಸ್ಥವಲ್ಲ, ಏಕೆಂದರೆ, ಆರೋಪಾಧಿಷ್ಠಾನತಾಖ್ಯಧರ್ಮಸ್ಯ= ಆರೋಪಾಧಿಷ್ಠಾನತ್ವರೂಪವಾದ ಧರ್ಮವು, ಆವಶ್ಯಕತ್ವತಃ= ಅವಶ್ಯಕವಾದುದರಿಂದ, ತಟಸ್ಥಮಾಯಾಯೋಗಸ್ಯ= ತಟಸ್ಥಮಾಯಾ ಸಂಬಂಧವನ್ನೂ, ಬೋಧ್ಯತ್ವಾದೇಃ= ಬೋಧ್ಯತ್ವಾದಿಗಳನ್ನೂ ಸಹ, ಅವರ್ಜನಾತ್= ಪರಿಹರಿಸಲು ಸಾಧ್ಯವಿಲ್ಲವಾದುದರಿಂದ.

**ಅನುವಾದ–** ಹಿಂದೆ ಹೇಳಿದಂತೆ ನೀನು ಬ್ರಹ್ಮನು ನಿರ್ಗುಣನೆಂದು ಹೇಳಿದುದರಿಂದ ಲಕ್ಷಣವು ತಟಸ್ಥ ಎಂದು ಹೇಳಲು ಸಾಧ್ಯವಿಲ್ಲ. ಲಕ್ಷಣವು ತಟಸ್ಥವಾದರೆ ಬ್ರಹ್ಮನಲ್ಲಿ ಜಗದಾರೋಪಾಧಿಷ್ಠಾನತ್ವರೂಪವಾದ ಗುಣವನ್ನು (ಧರ್ಮವನ್ನು) ಅವಶ್ಯಕವಾಗಿ ಅಂಗೀಕರಿಸಬೇಕಾಗುತ್ತದೆ. ತಟಸ್ಥಮಾಯಾಸಂಬಂಧವನ್ನೂ ಮತ್ತು ಬೋಧ್ಯತ್ವಾದಿಗಳನ್ನೂ ಪರಿಹರಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ನನು ನಿರ್ಗುಣತ್ವೇನ ಬ್ರಹ್ಮಣಿ ಲಕ್ಷಣಾಯೋಗಾತ್ತಟಸ್ಥಲಕ್ಷಣಾನುಸರಣಮಿತ್ಯತ ಆಹ – **ಏವಂಚೇತಿ** ॥ ಏವಂ ಚೋಕ್ತತ್ವದ್ರೀತ್ಯೈವ ತೇ ಮತೇ ನಿರ್ಗುಣತ್ವೋಕ್ತ್ಯಾ ಲಕ್ಷಣಂ ತಟಸ್ಥಮಿತ್ಯಪಿ ನೇತಿ ಯೋಜನಾ । ಏವಂ ಚೇತ್ಯುಕ್ತಾಂ ತದ್ರೀತಿಮೇವ ದರ್ಶಯತಿ – **ಆರೋಪೇತಿ** ॥ ಸೂತ್ರೋಕ್ತಜಗದುಪಾದಾನಮಾಯಾರೋಪಾಧಿಷ್ಠಾನತ್ವಾಖ್ಯಧರ್ಮಸ್ಯಾವಶ್ಯಕತ್ವತಃ। ತಟಸ್ಥಲಕ್ಷಣಂ ವದತಾಪಿ ಅಂತೇಽವಶ್ಯಮಂಗೀಕೃತತ್ವಾತ್ । ಅನ್ಯಥಾ ಲಕ್ಷಣಕಥನಸ್ಯ ಪ್ರಕೃತೋಪಯೋಗಾಭಾವಾದಿತಿ ಭಾವಃ । ಆವಶ್ಯಕತ್ವತ ಇತಿ ವದತಾ ಆರೋಪಾಧಿಷ್ಠಾನತ್ವಾಖ್ಯಧರ್ಮಸ್ಯಾಪಿ ಬ್ರಹ್ಮಣ್ಯಭಾವೇ ನಿರಧಿಷ್ಠಾನಭ್ರಾಂತೇಸ್ತ್ವಯಾಪ್ಯನಂಗೀಕಾರಾತ್ ಭವದಭಿಮತಜಗದಾರೋಪೋಪಿನಸ್ಯಾತ್ । ಅತೋಽಪ್ಯಯಂ ಧರ್ಮಸ್ತ್ವಯೈವಾಂಗೀಕಾರ್ಯ ಇತಿ ಯುಕ್ತಿಃ ಸೂಚಿತಾ । ಅಂತತಃ ಸೋಽಪಿನಾಂಗೀಕ್ರಿಯತ ಇತಿ ಚೇತ್ । ಸತ್ಯಮ್ । ಇದಮಪ್ಯಂತತೋ ನಾಂಗೀಕ್ರಿಯತಾಮ್ । ಆರೋಪರೂಪಕಾರ್ಯನಿರ್ವಾಹಾಯ ವ್ಯಾವಹಾರಿಕಾಧಿಷ್ಠಾನತ್ವಾಖ್ಯ ಧರ್ಮಾಂಗೀಕಾರವತ್ ಜಗದಾಖ್ಯಕಾರ್ಯನಿರ್ವಾಹಾಯ ವ್ಯಾವಹಾರಿಕ ಏವ ತತ್ಕರ್ತೃತ್ವಾಖ್ಯ ಧರ್ಮೋಽಪಿ ಬ್ರಹ್ಮಣ್ಯಂಗೀಕ್ರಿಯತಾಮ್ । ತಟಸ್ಥಮಪಿ ಲಕ್ಷಣಂ ತೇ ಮತೇ ವ್ಯವಹಾರಿಕಮೇವ ನ ಪಾರಮಾರ್ಥಿಕಮ್ । ಪರಮಾರ್ಥತೋಽಪಿ ಧರ್ಮಾಭಾವಪರೈವಾಸ್ತು ನಿರ್ಗುಣಶ್ರುತಿಃ । ತ್ವಂ ತು ಯಥಾವಸ್ಥಿತಸೂತ್ರಾರ್ಥಕಥನೇನ ಬ್ರಹ್ಮಜ್ಞಾನಾಯ ಬ್ರಹ್ಮಣ್ಯೇವ ಲಕ್ಷಣಕಥನೇನ ಚೇಷದ್ವಾದೋಷಜ್ಞಸಭಾಯೋಗ್ಯೋ ಭವೇತಿ ಭಾವಃ । ಧರ್ಮಾಂತರಮಪ್ಯಾವಶ್ಯಕಮಿತ್ಯಾಹ – **ತಟಸ್ಥಮಾಯಾಯೋಗಸ್ಯೇತಿ** ॥ ತವಮತೇ ಮಾಯಾಯಾಶ್ಚಿನ್ಮಾತ್ರಾಶ್ರಿತಾತ್ವತ್ತತ್ ಸಂಬಂಧಾಖ್ಯಧರ್ಮಸ್ಯ ಚರಮಾಪರೋಕ್ಷಜ್ಞಾನೇ ಬ್ರಹ್ಮಣೋ ಬೋಧ್ಯತ್ವಾಖ್ಯ ಧರ್ಮಸ್ಯ ಚಾವರ್ಜನಾತ್ ತಟಸ್ಥಂ ಲಕ್ಷಣಂ ನೇತಿ ಪೂರ್ವೇಣಾನ್ವಯಃ ॥ ೧೬೦ ॥

**ವಿವರಣೆ–** ಬ್ರಹ್ಮನು ನಿರ್ಗುಣನಾದುದರಿಂದ, ಅವನಲ್ಲಿ ಲಕ್ಷಣವು ಇರಲು ಸಾಧ್ಯವಿಲ್ಲವಾದುದರಿಂದ ತಟಸ್ಥಲಕ್ಷಣವನ್ನೇ ಆಶ್ರಯಿಸಬೇಕು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಬ್ರಹ್ಮನು ನಿರ್ಗುಣ ಎಂದು ಹೇಳಿದರೆ ಬ್ರಹ್ಮನಲ್ಲಿ ಜಗತ್ಕಾರಣತ್ವವು ಇಲ್ಲ, ಜಗತ್ಕಾರಣಮಾಯಾರೋಪಾಧಿಷ್ಠಾನತ್ವವು ಇದೆ ಎಂದು ಸಿದ್ಧವಾಗುತ್ತದೆ. ನಿರ್ಗುಣತ್ವವನ್ನು ಹೇಳುವವರು ಇಂತಹ ಅಧಿಷ್ಠಾನತ್ವರೂಪವಾದ ಧರ್ಮವನ್ನು ಒಪ್ಪುವುದಾದರೂ ಹೇಗೆ? ಅದರಂತೆ ಮಾಯಾಸಂಬಂಧವನ್ನು ಒಪ್ಪಬೇಕಾಗುತ್ತದೆ ಮತ್ತು ಬೋಧ್ಯತ್ವವನ್ನು ಒಪ್ಪಬೇಕಾಗುತ್ತದೆ. ಮಾಯಾಸಂಬಂಧ,

ಬೋಧ್ಯತ್ವ ಇವೂ ಸಹ ನಿರ್ಗುಣತ್ವಕ್ಕೆ ವಿರುದ್ಧವಾದವುಗಳು. ಆದ್ದರಿಂದ ಯಾವ ನಿರ್ಗುಣತ್ವೋಕ್ತಿಯ ಬಲದಿಂದ ಲಕ್ಷಣವನ್ನು ಅಂಗೀಕರಿಸಲಿಲ್ಲವೋ, ಅದೇ ನಿರ್ಗುಣತ್ವೋಕ್ತಿಯ ಬಲದಿಂದ ತಟಸ್ಥಲಕ್ಷಣವನ್ನೂ ಅಂಗೀಕರಿಸಬಾರದು. ಆರೋಪಾಧಿಷ್ಠಾನತ್ವವನ್ನು ವ್ಯಾವಹಾರಿಕವಾಗಿ ಒಪ್ಪಿದರೂ ಪರ್ಯವಸಾನದಲ್ಲಿ ಅದನ್ನೂ ನಿರಾಕರಿಸುತ್ತೇವೆ ಎಂದು ಹೇಳಿದರೆ. ಸರಿ. ಜಗತ್ಕಾರಣತ್ವವನ್ನು ಅಂಗೀಕಾರ ಮಾಡು, ಅದನ್ನೂ ವ್ಯಾವಹಾರಿಕವೆಂದು ಹೇಳು, ಕೊನೆಯಲ್ಲಿ ಅದನ್ನೂ ನಿರಾಕರಿಸು. ಅಜ್ಞಾನದಲ್ಲಾದರೂ ನಿನಗೆ ಇರುವ ಜಗತ್ಕಾರಣತ್ವವು ವ್ಯಾವಹಾರಿಕವಾದುದೇ. ಅದನ್ನು ಬ್ರಹ್ಮನಲ್ಲಿಯೇ ಒಪ್ಪು. ಪಾರಮಾರ್ಥಿಕವಾಗಿ ಇಲ್ಲವೆಂದು ಹೇಳು. ಅದನ್ನು ಬಿಟ್ಟು ವ್ಯಾವಹಾರಿಕವಾದ ಜಗತ್ಕಾರಣತ್ವವನ್ನು ಅಜ್ಞಾನದಲ್ಲಿ ಒಪ್ಪಿ, ಅದನ್ನು ಉಪಲಕ್ಷಣ ಎಂದು ಹೇಳುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಬ್ರಹ್ಮನಲ್ಲಿ ಬೋಧ್ಯತ್ವ ಇಲ್ಲದಿದ್ದರೆ ಜಿಜ್ಞಾಸೆಯೇ ಕೂಡುವುದಿಲ್ಲ. ಬ್ರಹ್ಮನಲ್ಲಿ ಮಾಯಾಸಂಬಂಧ ಇಲ್ಲದಿದ್ದರೆ ಮಾಯಾರೋಪಾಧಿಷ್ಠಾನತ್ವವೇ ಕೂಡುವುದಿಲ್ಲ. ಹೀಗೆ ಏನು ಹೇಳಿದರೂ ಬ್ರಹ್ಮನಲ್ಲಿ ಗುಣವನ್ನು ಅಂಗೀಕಾರ ಮಾಡಬೇಕಾಗಿ ಬರುವುದರಿಂದ, ನಿರ್ಗುಣತ್ವೋಕ್ತಿಯ ವಿರೋಧ ಬಂದೇ ಬರುತ್ತದೆ. ಆದ್ದರಿಂದ ಲಕ್ಷಣವನ್ನು ಏಕೆ ನಿರಾಕರಣೆ ಮಾಡುತ್ತೀಯೆ ಎಂದು ಅಭಿಪ್ರಾಯ.

**ಕಿಂಚ ನಿರ್ಗುಣತಾಧ್ರೌವ್ಯೇ ಲಕ್ಷಣಸ್ಯ ತಟಸ್ಥತಾ ।**
**ಲಕ್ಷಣಸ್ಯ ಚ ತಾಟಸ್ಥ್ಯೇ ನಿರ್ಗುಣತ್ವಂ ಧ್ರುವಂ ಭವೇತ್ ।**
**ಅತೋನ್ಯೋನ್ಯಾಶ್ರಯಃ ಸ್ಯಾನ್ನ ಪರಾತ್ಮಪದಾಶ್ರಯಃ ॥ ೧೬೧ ॥**

**ಅರ್ಥ–** ಕಿಂಚ= ಮತ್ತು, ನಿರ್ಗುಣತಾ ಧ್ರೌವ್ಯೇ= ನಿರ್ಗುಣತ್ವವು ಸಿದ್ಧವಾದರೆ, ಲಕ್ಷಣಸ್ಯ= ಜಗಜ್ಜನ್ಮಾದಿ ಕಾರಣತ್ವ ಲಕ್ಷಣಕ್ಕೆ, ತಟಸ್ಥತಾ= ತಟಸ್ಥತ್ವವು ಸಿದ್ಧವಾಗುತ್ತದೆ, ಲಕ್ಷಣಸ್ಯ= ಲಕ್ಷಣಕ್ಕೆ, ತಾಟಸ್ಥ್ಯೇ ಚ= ತಟಸ್ಥತ್ವವು ಸಿದ್ಧವಾದರೆ ಮಾತ್ರ, ನಿರ್ಗುಣತ್ವಂ= ನಿರ್ಗುಣತ್ವವು, ಧ್ರುವಂ ಭವೇತ್= ನಿಶ್ಚಿತವಾಗಿ ಸಿದ್ಧವಾಗುತ್ತದೆ, ಅತಃ= ಆದ್ದರಿಂದ, ಅನ್ಯೋನ್ಯಾಶ್ರಯಃ= ಅನ್ಯೋನ್ಯಾಶ್ರಯದೋಷವು, ಸ್ಯಾತ್= ಉಂಟಾಗುತ್ತದೆ, ಪರಾತ್ಮಪದಾಶ್ರಯಃ= ಪರಮಾತ್ಮನ ಪಾದಾವಲಂಬನೆಯು, ನ ಸ್ಯಾತ್= ಉಂಟಾಗುವುದಿಲ್ಲ.

**ಅನುವಾದ–** ಮತ್ತು ನಿರ್ಗುಣತ್ವವು ಸಿದ್ಧವಾದರೆ ಲಕ್ಷಣವು ತಟಸ್ಥವೆಂದು ಸಿದ್ಧವಾಗುತ್ತದೆ. ಲಕ್ಷಣವು ತಟಸ್ಥವೆಂದು ಸಿದ್ಧವಾದರೆ, ನಿರ್ಗುಣತ್ವ ಶ್ರುತಿಗೆ ಯಾವ ವಿರೋಧವೂ ಇಲ್ಲವಾದ್ದರಿಂದ ಅದರ ಮುಖ್ಯಾರ್ಥವಾದ ನಿರ್ಗುಣತ್ವವು ಸಿದ್ಧವಾಗುತ್ತದೆ. ಆದ್ದರಿಂದ ಈ ಅನ್ಯೋನ್ಯಾಶ್ರಯ ದೋಷವು ಉಂಟಾಗುವುದೇ ಹೊರತು ಪರಮಾತ್ಮನ ಪಾದಾಶ್ರಯರೂಪವಾದ ಗುಣವು ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ನಿರ್ಗುಣತ್ವಬಲಾತ್ ಲಕ್ಷಣತಾಟಸ್ಥ್ಯಂ ವದತೋಽನ್ಯೋನ್ಯಾಶ್ರಯೋಽಪಿ ಸ್ಯಾದಿತ್ಯಾಹ – **ಕಿಂಚೇತಿ** ॥ ನಿರ್ಗುಣತಾಧ್ರೌವ್ಯೇ ನಿರ್ಗುಣಶ್ರುತ್ಯುಕ್ತನೈರ್ಗುಣ್ಯಸ್ಯ ಶ್ರುತಿಮುಖ್ಯಾರ್ಥತಯಾಧ್ರುವತ್ವೇ । ಗುಣರೂಪಲಕ್ಷಣಸ್ಯ ತತ್ರ ವಕ್ತುಮಶಕ್ಯತ್ವಾದಿತಿ ಭಾವಃ । ಲಕ್ಷಣಸ್ಯ ಯತೋವಾ ಇಮಾನಿ ಭೂತಾನಿ ಜಾಯಂತ ಇತಿ ಶ್ರುತ್ಯುಕ್ತಲಕ್ಷಣಸ್ಯ । ನಿರ್ಗುಣತ್ವ-ಶ್ರುತ್ಯಾ ಏತತ್ ಶ್ರುತಿಬಾಧೇ ಸತಿ ಲಕ್ಷಣರೂಪಧರ್ಮಸ್ಯಾನ್ಯನಿಷ್ಠತಾ । ಅನ್ಯಥಾ ಶ್ರುತ್ಯುಕ್ತತ್ವಾ-ವಿಶೇಷಾಲ್ಲಕ್ಷಣಮಪಿ ಬ್ರಹ್ಮಣ್ಯೇವ ಧ್ರುವಂ ಸ್ಯಾತ್ । ಲಕ್ಷಣಸ್ಯಾಧ್ರುವತ್ವೇ ಸಿದ್ಧೇ ಏತಚ್ಛ್ರುತೇ-ರತತ್ತ್ವಾವೇದಕತಯಾ ನಿರ್ಗುಣಶ್ರುತ್ಯಬಾಧಃ । ಅನ್ಯಥಾತವಾಪ್ಯಪೇಕ್ಷಿತ ಲಕ್ಷಣಪ್ರತಿಪಾದಕತಯಾ ಪ್ರಬಲ್ಯೈತಚ್ಛ್ರುತೇರೇವ ನಿರ್ಗುಣತ್ವಶ್ರುತಿಬಾಧಕತಯಾ ನ ತದುಕ್ತನೈರ್ಗುಣ್ಯಧ್ರೌವ್ಯ-ಮಿತ್ಯನ್ಯೋನ್ಯಾಶ್ರಯಃ । ಏವಂಚ ವೃಥಾ ಬ್ರಹ್ಮನಿಂದಾಂ ಕುರ್ವತಸ್ತವ ಗೃಹಾಂಧಕೂಪಾ-ದುದ್ಧಾರಕಾಭಾವೇನ ಭಾರ್ಯಾಶ್ರಯಸ್ತವ ತ್ವದಾಶ್ರಯಸ್ತಸ್ಯಾ ಇತ್ಯನ್ಯೋನ್ಯಾಶ್ರಯ ಏವಾಭೂತ್ । ನ ಪರಮಾತ್ಮಪದಾಶ್ರಯ ಇತಿ ಧ್ವನಿತಾರ್ಥಮಾದಾಯ ಪರಿಹಾಸಃ ॥೧೬೧॥

**ವಿವರಣೆ–** ಶ್ರುತಿಯು ನಿರ್ಗುಣತ್ವವನ್ನು ಹೇಳುವ ಬಲದಿಂದ ಲಕ್ಷಣವನ್ನು ತಟಸ್ಥ ಎಂದು ಹೇಳುತ್ತೇವೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಕೇವಲೋ ನಿರ್ಗುಣಶ್ಚ ಎಂಬ ಶ್ರುತಿಯು ತನ್ನ ಮುಖ್ಯಾರ್ಥವಾದ ಗುಣಾಭಾವರೂಪವಾದ ಅರ್ಥವನ್ನು ಹೇಳಿದರೆ ಲಕ್ಷಣವು ಗುಣರೂಪವಾದುದರಿಂದ ಬ್ರಹ್ಮನಲ್ಲಿ ಅದನ್ನು ಅಂಗೀಕಾರ ಮಾಡಲು ಸಾಧ್ಯವಿಲ್ಲ ಎಂಬ ಕಾರಣದಿಂದ ಲಕ್ಷಣವನ್ನು ತಟಸ್ಥ ಎಂದು ಹೇಳಬೇಕು. ಆಗ ನಿರ್ಗುಣಶ್ರುತಿಯಿಂದ ಯತೋವಾ ಇಮಾನಿ ಎಂಬ ಶ್ರುತಿಯು ಬಾಧಿತವಾಗಿ ಲಕ್ಷಣವು ಅನ್ಯನಿಷ್ಠವೆಂದು ಸಿದ್ಧವಾಗುವುದಷ್ಟೇ? ಇಲ್ಲದಿದ್ದರೆ ನಿರ್ಗುಣತ್ವವು ಮತ್ತು ಜಗಜ್ಜನ್ಮಾದಿಕಾರಣತ್ವವು ಇವೆರಡೂ ಶ್ರುತ್ಯುಕ್ತವಾದುದರಿಂದ ಜಗಜ್ಜನ್ಮಾದಿಕಾರಣತ್ವ ರೂಪವಾದ ಲಕ್ಷಣವೇ ಬ್ರಹ್ಮನಲ್ಲಿ ಸಿದ್ಧವಾದೀತು. ಲಕ್ಷಣವು ತಟಸ್ಥ ಎಂದು ಸಿದ್ಧವಾದರೆ ಮಾತ್ರ ನಿರ್ಗುಣತ್ವ ಶ್ರುತಿಗೆ ಯಾವ ವಿರೋಧವೂ ಇಲ್ಲದಿರುವುದರಿಂದ ಅದು ತನ್ನ ಮುಖ್ಯಾರ್ಥವಾದ ಗುಣಾಭಾವವನ್ನು ಹೇಳುತ್ತದೆ ಎಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ವ್ಯರ್ಥವಾಗಿ ಬ್ರಹ್ಮನ ಲಕ್ಷಣವನ್ನು ನಿರಾಕರಣೆ ಮಾಡಿ, ಬ್ರಹ್ಮನನ್ನು ನಿಂದಿಸುವ ನಿನಗೆ ಭಾರ್ಯೆಯೇ ಆಶ್ರಯಳಾಗುತ್ತಾಳೆ, ಆ ಭಾರ್ಯೆಗೆ ನೀನೇ ಆಶ್ರಯನಾಗುತ್ತೀಯೆ. ಇಂತಹ ದೋಷವು ಬರುವುದೇ ಹೊರತು, ಪರಮಾತ್ಮ ಪಾದಾಶ್ರಯರೂಪವಾದ ಗುಣವು ನಿನಗೆ ಬರುವುದಿಲ್ಲ ಎಂದು ಇಲ್ಲಿ ಪರಿಹಾಸವನ್ನು ಮಾಡುತ್ತಾರೆ.

**ಶ್ರುತಿಮಾತ್ರಬಲೋಽಸಿ ತ್ವಂ ಶ್ರುತಿಸೂತ್ರಬಲಾ ವಯಂ ॥ ೧೬೨ ॥**

**ಅರ್ಥ–** ತ್ವಂ= ನೀನು, ಶ್ರುತಿಮಾತ್ರ ಬಲಃ= ಕೇವಲ ಶ್ರುತಿಯ ಬಲವನ್ನು ಹೊಂದಿದವನಾಗಿದ್ದೀಯೆ, ವಯಂ= ನಾವು, ಶ್ರುತಿಸೂತ್ರಬಲಾ= ಶ್ರುತಿ ಮತ್ತು ಸೂತ್ರ ಈ ಎರಡರ ಬಲವುಳ್ಳವರಾಗಿದ್ದೇವೆ.

**ಅನುವಾದ–** ನಿನಗೆ ಕೇವಲ ಶ್ರುತಿಯ ಬಲವಿದೆ. ನಾವು ಶ್ರುತಿ ಮತ್ತು ಸೂತ್ರ ಇವೆರಡರ ಬಲವುಳ್ಳವರಾಗಿದ್ದೇವೆ.

**ಭಾವವಿಲಾಸಿನೀ–** ಕಿಂ ಚಾಸ್ಮಚ್ಛ್ರುತ್ಯಾತ್ವಚ್ಛ್ರುತಿಬಾಧ ಏವ ಯುಕ್ತ ಇತಿ ಭಾವೇನಾಹ – **ಶ್ರುತಿಮಾತ್ರೇತಿ** ॥ ೧೬೨ ॥

**ವಿವರಣೆ–** ಜಗತ್ಕಾರಣತ್ವ ಲಕ್ಷಣಕ್ಕೆ ತಟಸ್ಥತ್ವನ್ನು ಹೇಳುವ ನೀನು ಕೇವಲೋ ನಿರ್ಗುಣಶ್ಚ ಎಂಬ ಶ್ರುತಿಯ ಬಲವನ್ನು ಮಾತ್ರ ಅವಲಂಬಿಸಿ ಹೇಳುತ್ತಿದ್ದೀಯೆ. ಅದಕ್ಕೆ ಬ್ರಹ್ಮನ ಮುಖ್ಯಲಕ್ಷಣತ್ವವನ್ನೇ ಹೇಳುವ ನಾವು ಯತೋವಾ ಇಮಾನಿ ಎಂಬ ಶ್ರುತಿಯನ್ನೂ, ಜನ್ಮಾದ್ಯಸ್ಯ ಯತಃ ಎಂಬ ಸೂತ್ರವನ್ನೂ ಅವಲಂಬಿಸಿದ್ದೇವೆ. ಆದ್ದರಿಂದ ನಮ್ಮ ಅರ್ಥವೇ ಪ್ರಬಲವಾದುದು ಎಂದು ಅಭಿಪ್ರಾಯ.

**ಅಥೋಪಾದಾನತಾ ಪ್ರಾಪ್ತಾ ಪಾಣಿನೇರನುಶಾಸನಾತ್ ।**
**ಸಾ ಚಾಯುಕ್ತಾ ಬ್ರಹ್ಮಣೀತಿ ತಟಸ್ಥಂ ಲಕ್ಷಣಂ ಯದಿ ।**
**ಇದಂ ಚ ತರ್ಹಿ ಯುಕ್ತಂ ನೇತ್ಯುತ್ಪ್ರೇಕ್ಷಾ ಜಾಯತೇ ಮಮ ॥ ೧೬೩ ॥**

**ಅರ್ಥ–** ಅಥ= ಇನ್ನು, ಪಾಣಿನೇರನುಶಾಸನಾತ್= ಪಾಣಿನಿಯ ಅನುಶಾಸನದಿಂದ, ಉಪಾದಾನತಾ= ಉಪಾದಾನತ್ವರೂಪವಾದ ಕಾರಣತ್ವವು, ಪ್ರಾಪ್ತಾ= ಪ್ರಾಪ್ತವಾಗುತ್ತದೆ, ಸಾ ಚ= ಆ ಉಪಾದಾನತ್ವವೂ ಕೂಡ, ಬ್ರಹ್ಮಣೀ= ಬ್ರಹ್ಮನಲ್ಲಿ, ಅಯುಕ್ತಾ= ಕೂಡುವುದಿಲ್ಲ, ಇತಿ= ಎಂಬ ಕಾರಣದಿಂದ, ಯದಿ= ಒಂದು ಪಕ್ಷ, ಲಕ್ಷಣಂ= ಲಕ್ಷಣವು, ತಟಸ್ಥಂ= ತಟಸ್ಥವಾಗಿದೆ ಎಂದು ಹೇಳುವುದಾದರೆ, ತರ್ಹಿ ಆಗ, ಇದಂ ಚ= ಇದೂ ಸಹ, ಯುಕ್ತಂ ನ= ಯುಕ್ತವಲ್ಲ, ಇತಿ= ಎಂದು, ಮಮ= ನನಗೆ, ಉತ್ಪ್ರೇಕ್ಷಾ= ಕಲ್ಪನೆಯು, ಜಾಯತೇ= ಉಂಟಾಗುತ್ತದೆ.

**ಅನುವಾದ–** ಪಾಣಿನಿಯ ಸೂತ್ರದ ಬಲದಿಂದ ಉಪಾದಾನತ್ವವು ಪ್ರಾಪ್ತವಾಗುತ್ತದೆ. ಆದರೆ ಬ್ರಹ್ಮನು ನಿರ್ವಿಕಾರನಾದುದರಿಂದ ಉಪಾದಾನತ್ವವು ಕೂಡುವುದಿಲ್ಲ. ಆ ಕಾರಣದಿಂದ ಜಗತ್ಕಾರಣತ್ವ ಲಕ್ಷಣವು ತಟಸ್ಥ ಎಂದು ಹೇಳುವುದಾದರೆ ಇದೂ ಸಹ ಸರಿಯಲ್ಲ ಎಂದು ನನ್ನ ಬುದ್ಧಿಯು ಉಂಟಾಗುತ್ತದೆ.

**ಭಾವವಿಲಾಸಿನೀ–** ಶಂಕಾಂತರಮನೂದ್ಯ ದೂಷಯತಿ ॥ **ಅಥೇತಿ** ॥ ಅಸ್ಮದುಕ್ತಬಹಿರಂಗತ್ವ ಯುಕ್ತ್ಯಾನಿರಾಕೃತತ್ವಾದ್ವಾತಾಹತಮ್ । ತೇನೈವಚ್ಛಂದಸಿ ವಿಧಾಂತರಾನುಶಾಸನಾದಪ್ರಾಪ್ತಂ ಯತ್ಪಾಣಿನೇರನುಶಾಸನಂ ತಸ್ಮಾದಿತ್ಯಾಕ್ರೋಶ ಪ್ರದರ್ಶನಾಯ ಷಷ್ಠ್ಯಾ ಅಲುಕ್-ಸಮಾಸೋಯಮ್ । ಪ್ರಾಪ್ತಾ ಶ್ರುತೌ ಪ್ರಾಪ್ತಾ । ಸಾ ಉಪಾದಾನತ್ವಾಖ್ಯ ಲಕ್ಷಣಪ್ರತಿ-

ಪಾದಿಕಾಶ್ರುತಿಃ ಬ್ರಹ್ಮಣ್ಯಯುಕ್ತೇತಿ ಲಕ್ಷಣಂ ತಟಸ್ಥಮಿತಿ ಯೋಜನಾ । ಪಾಣಿನಿ ಸೂತ್ರಬಲಾತ್ ಭವತಾಂ ಶ್ರುತಿರಪಿ ದುರ್ಬಲೇತಿ ಭಾವಃ । ಪೂರ್ವೋಕ್ತಯುಕ್ತ್ಯಾಬಾಧಿತತ್ವಾತ್ ಮಂದಾ- ಶಂಕೇಯಮಿತಿ ಜ್ಞಾಪನಾಯಾಽಽಕ್ರೋಶಬಲಲಬ್ಧಂ ವಿಶೇಷಣದ್ವಯಮ್ । ಇದಂ ತ್ವದುಕ್ತಂ ಪ್ರಮೇಯಮ್ ॥ ೧೬೩ ॥

**ವಿವರಣೆ–** ನಿರ್ಗುಣತ್ವ ಶ್ರುತಿಯ ಬಲದಿಂದ ಲಕ್ಷಣಕ್ಕೆ ತಟಸ್ಥತ್ವವನ್ನು ಹೇಳುವುದಿಲ್ಲ. ಪಾಣಿನಿಯ ಸೂತ್ರದ ಬಲದಿಂದ ಲಕ್ಷಣಕ್ಕೆ ತಟಸ್ಥತ್ವವನ್ನು ಹೇಳುತ್ತೇವೆ ಎಂಬ ಶಂಕೆಯನ್ನು ಇಲ್ಲಿ ನಿರಾಕರಿಸುತ್ತಾರೆ. ಯತೋವಾ ಎಂಬ ಶ್ರುತಿಯಲ್ಲಿ ಜಾಯತೇ ಎಂದು ಜನಿ ಧಾತುವಿನ ಪ್ರಯೋಗವಿರುವುದರಿಂದ ಜನಿಕರ್ತುಃ ಪ್ರಕೃತಿಃ ಎಂಬ ಪಾಣಿನಿ ಸೂತ್ರದಿಂದ ಉಪಾದಾನತ್ವವು ಪ್ರಾಪ್ತವಾಗುತ್ತದೆ. ಬ್ರಹ್ಮನು ನಿರ್ವಿಕಾರನಾದುದರಿಂದ ಅವನಿಗೆ ಉಪಾದಾನತ್ವವು ಕೂಡುವುದಿಲ್ಲ. ಆದ್ದರಿಂದ ಉಪಾದಾನತ್ವವು ಅನ್ಯನಿಷ್ಠನೆಂದು ಹೇಳಿ, ಆ ಲಕ್ಷಣವು ಬ್ರಹ್ಮನಿಗೆ ತಟಸ್ಥಲಕ್ಷಣ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರವಿದ್ದಂತೆ ಛಂದಸಿ ಉಭಯಥಾ ಎಂಬ ಪಾಣಿನಿ ಸೂತ್ರವೂ ಇದೆ. ಅದರಂತೆ ಉಪಾದಾನತ್ವವನ್ನು ಬಿಟ್ಟು ಕರ್ತೃತ್ವವೂ ಸಹ ಧ್ರುವಮಪಾಯೇ ಅಪಾದಾನಂ ಎಂಬ ಸೂತ್ರದಿಂದಲೇ ಬರಬಹುದು. ಇನ್ನು ಉಪಾದಾನತ್ವವನ್ನು ಶ್ರುತಿಯು ಎಂದೂ ಹೇಳುವುದಿಲ್ಲ. ಅದು ನಿನ್ನ ಕಲ್ಪನೆ. ಈ ಎರಡು ಅಂಶಗಳನ್ನು ಪಾಣಿನೇರನುಶಾಸನಾತ್ ಎಂಬ ಸಮಾಸದಲ್ಲಿ ಷಷ್ಠೀ ವಿಭಕ್ತಿಗೆ ಲೋಪವನ್ನು ಮಾಡದೆ ಆಕ್ರೋಶವನ್ನು ವ್ಯಕ್ತಪಡಿಸಿ ರಾಜರು ಸೂಚಿಸಿದ್ದಾರೆ. ಹೀಗೆ ನಿನಗೆ ಅಭಿಪ್ರೇತವಾದ ಪಾಣಿನಿ ಸೂತ್ರದ ಬಲದಿಂದ ಶ್ರುತಿಗೆ ಅನ್ಯಾರ್ಥವನ್ನು ಕಲ್ಪಿಸುವುದಾದರೆ, ಪಾಣಿನಿ ಸೂತ್ರಕ್ಕಿಂತಲೂ ನಿನ್ನ ಶ್ರುತಿಯು ದುರ್ಬಲ ಎಂದಂತಾಯಿತು. ಆದ್ದರಿಂದ ಇದು ಅತ್ಯಂತ ದುರ್ಬಲವಾದ ಶಂಕೆ. ಈ ಶಂಕೆಯೇ ಸರಿಯಲ್ಲ ಎಂದು ತಿಳಿಸುವುದಕ್ಕೋಸ್ಕರವಾಗಿ ಷಷ್ಠಿಯ ಲೋಪವನ್ನು ಮಾಡದೆ ಪಾಣಿನೇರನುಶಾಸನಾತ್ ಎಂಬ ಸಮಸ್ತಪದವನ್ನು ಪ್ರಯೋಗಿಸಿ ರಾಜರು ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

ವ್ಯಾಸಸ್ಯ ಶಾಸನಂ ಜ್ಯಾಯಃ ಪಾಣಿನೇರನುಶಾಸನಾತ್ ।
ಅಮುಖ್ಯಮೇವ ಬಾಧ್ಯಂ ಸ್ಯಾನ್ನಾಮುಖ್ಯಾನ್ಮುಖ್ಯಬಾಧನಂ ॥ ೧೬೪ ॥

**ಅರ್ಥ–** ವ್ಯಾಸಸ್ಯ ಶಾಸನಂ= ವ್ಯಾಸರ ಸೂತ್ರರೂಪವಾದ ಶಾಸನವು, ಪಾಣಿನೇರನುಶಾಸನಾತ್= ಪಾಣಿನಿಯ ಸೂತ್ರಕ್ಕಿಂತಲೂ, ಜ್ಯಾಯಃ= ಶ್ರೇಷ್ಠವಾದುದು, ಅಮುಖ್ಯಮೇವ= ಅಮುಖ್ಯವಾದುದೇ, ಬಾಧ್ಯಂ ಸ್ಯಾತ್= ಬಾಧಿಸಲ್ಪಡುತ್ತದೆ, ಅಮುಖ್ಯಾತ್= ಅಮುಖ್ಯದಿಂದ, ಮುಖ್ಯಬಾಧನಂ= ಮುಖ್ಯಬಾಧನೆಯು, ನ= ಎಂದೂ ಇರುವುದಿಲ್ಲ.

**ಅನುವಾದ–** ವ್ಯಾಸರ ಸೂತ್ರವು ಪಾಣಿನಿಯ ಸೂತ್ರಕ್ಕಿಂತ ಪ್ರಬಲವಾದ ಕಾರಣದಿಂದ ಶ್ರೇಷ್ಠವಾದುದು. ಅಮುಖ್ಯವೇ ಬಾಧಿಸಲ್ಪಡಬೇಕೇ ಹೊರತು ಅಮುಖ್ಯದಿಂದ ಮುಖ್ಯವು ಎಂದೂ ಬಾಧಿಸಲ್ಪಡುವುದಿಲ್ಲ.

**ಭಾವವಿಲಾಸಿನೀ–** ಕಥಂ ಯುಕ್ತಂ ನೇತ್ಯತ ಆಹ – **ವ್ಯಾಸಸ್ಯೇತಿ** ॥ ವ್ಯಾಸಸ್ಯ ನಾರಾಯಣಾವತಾರತಯಾ ಸರ್ವಜ್ಞತ್ವಾದಿತಿ ಭಾವಃ । ಅಮುಖ್ಯಾತ್ ಪಾಣಿನ್ಯನುಶಾಸನಾನ್ಮುಖ್ಯಸ್ಯ ವ್ಯಾಸಾನುಶಾಸನಸ್ಯ ಬಾಧನಂ ಮುಖ್ಯಬಾಧನಮ್ ॥ ೧೬೪ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಅಯುಕ್ತ ಎಂದು ಹೇಳಿದುದಕ್ಕೆ ಇಲ್ಲಿ ಕಾರಣವನ್ನು ಹೇಳುತ್ತಾರೆ. ವ್ಯಾಸರ ಸೂತ್ರವು ಮುಖ್ಯವಾದುದು. ಪಾಣಿನಿಯ ಸೂತ್ರವು ಅಮುಖ್ಯವಾದುದು. ಅಮುಖ್ಯವಾದ ಪಾಣಿನಿ ಸೂತ್ರದಿಂದ ಮುಖ್ಯವಾದ ವ್ಯಾಸಸೂತ್ರಕ್ಕೆ ಬಾಧವನ್ನು ಹೇಳಬಾರದು. ವ್ಯಾಸಸೂತ್ರದಲ್ಲಿ ಹೇಳಿದಂತೆ ಜಗತ್ಕಾರಣತ್ವವನ್ನು ಬ್ರಹ್ಮನಲ್ಲಿರುವ ಲಕ್ಷಣ ಎಂದೇ ಹೇಳಬೇಕು ಎಂದು ಅಭಿಪ್ರಾಯ.

**ಸ ಚ ಶ್ರೌತಮಿಮಂ ಧರ್ಮಂ ಬ್ರಹ್ಮಣ್ಯನುಶಶಾಸ ಹಿ ।**
**ಅತಃ ಪಾಣಿನಿಸೂತ್ರಂ ತದನ್ಯತ್ರ ಸ್ಯಾನ್ನ ಲಕ್ಷಣಂ ।**
**ಜಾರಾನುಸರಣಾಜ್ಜ್ಯಾಯಃ ಪತ್ಯುಃ ಪಾದೋಪಸರ್ಪಣಂ ॥ ೧೬೫ ॥**

**ಅರ್ಥ–** ಸ ಚ= ಆ ವ್ಯಾಸರಾದರೋ, ಶ್ರೌತಂ= ಶ್ರುತಿಸ್ತ್ಯಕ್ತವಾದ, ಇಮಂ ಧರ್ಮಂ= ಈ ಧರ್ಮವನ್ನು, ಬ್ರಹ್ಮಣಿ= ಬ್ರಹ್ಮನಲ್ಲಿ, ಅನುಶಶಾಸ ಹಿ= ಅನುಶಾಸನವನ್ನು ಮಾಡಿದರಷ್ಟೇ, ಅತಃ= ಆ ಕಾರಣದಿಂದ, ಪಾಣಿನಿಸೂತ್ರಂ= ಪಾಣಿನಿ ಸೂತ್ರವು, ಅನ್ಯತ್ರ= ಬೇರೆ ಸ್ಥಳದಲ್ಲಿ, ಸ್ಯಾತ್= ಅವಕಾಶವನ್ನು ಹೊಂದುತ್ತದೆ, ಲಕ್ಷಣಂ= ಜಗತ್ಕಾರಣತ್ವರೂಪವಾದ ಲಕ್ಷಣವು, ಅನ್ಯತ್ರ= ಬ್ರಹ್ಮನನ್ನು ಬಿಟ್ಟು ಬೇರೆ ಕಡೆಯಲ್ಲಿ, ನ ಸ್ಯಾತ್= ಇರುವುದಿಲ್ಲ, ಜಾರಾನುಸರಣಾತ್= ಜಾರನನ್ನು ಅನುಸರಿಸುವುದಕ್ಕಿಂತಲೂ, ಪತ್ಯುಃ ಪಾದೋಪಸರ್ಪಣಂ= ಪತಿಯ ಪಾದವನ್ನು ಅನುಸರಿಸುವುದು, ಜ್ಯಾಯಃ= ಶ್ರೇಷ್ಠವಷ್ಟೇ.

**ಅನುವಾದ–** ವ್ಯಾಸರಾದರೂ ಯತೋವಾ ಇಮಾನಿ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಈ ಧರ್ಮವು ಬ್ರಹ್ಮನಲ್ಲಿಯೇ ಇದೆ ಎಂದು ಜನ್ಮಾದಿಸೂತ್ರದಲ್ಲಿ ಹೇಳಿದ್ದಾರಷ್ಟೇ? ಆದ್ದರಿಂದ ಪಾಣಿನಿ ಸೂತ್ರಕ್ಕೆ ಈ ಸ್ಥಳವನ್ನು ಬಿಟ್ಟು ಬೇರೆ ಸ್ಥಳದಲ್ಲಿ ಅವಕಾಶವನ್ನು ಹೇಳಬೇಕು. ಜಗತ್ಕಾರಣತ್ವರೂಪವಾದ ಲಕ್ಷಣವು ಬ್ರಹ್ಮನನ್ನು ಬಿಟ್ಟು ಬೇರೆ ಕಡೆಗೆ ಹೋಗುವುದಿಲ್ಲ. ಜಾರನ ಪಾದವನ್ನು ಅನುಸರಿಸುವುದಕ್ಕಿಂತಲೂ ಪತಿಯ ಪಾದವನ್ನು ಅನುಸರಿಸುವುದು ಶ್ರೇಷ್ಠವಷ್ಟೇ?

**ಭಾವವಿಲಾಸಿನೀ–** ಸಃ ವ್ಯಾಸಃ । ಇಮಂ ಧರ್ಮಂ ಜಗತ್ಕಾರಣತ್ವರೂಪಧರ್ಮಮ್ । ಶ್ರೌತಂ ಶ್ರುತ್ಯಾಬ್ರಹ್ಮಣ್ಯಾಮ್ರೇಡಿತಮ್ । ಅತೋ ವ್ಯಾಸಾನುಶಾಸನಸ್ಯ ಪ್ರಾಬಲ್ಯಾತ್ ।

ತತ್‌ಪಾಣಿನಿಸೂತ್ರಮ್ । ಅನ್ಯತ್ರ ಗೋಮಯಾದ್ವೃಶ್ಚಿಕೋ ಜಾಯತ ಇತ್ಯಾದೌ ಲೌಕಿಕಪ್ರಯೋಗೇ । ಲಕ್ಷಣಂ ಬ್ರಹ್ಮಣೋನ್ಯತ್ರ ನಾಗಚ್ಛೇದಿತ್ಯರ್ಥಃ । ಏವಂ ಚೋತ್ತರೇ ವೈಚಿತ್ರ್ಯಾತ್ ಪುನರಾಶಂಕೇತಿ ಭಾವಃ । ವ್ಯಾಸಾನುಶಾಸನಮೇವ ಜ್ಯಾಯ ಇತ್ಯತ್ರ ಲೌಕಿಕ-ದೃಷ್ಟಾಂತಮಾಹ – **ಜಾರೇತಿ** ॥ ಬ್ರಹ್ಮಸೂತ್ರಕರ್ತುರ್ವ್ಯಾಸಸ್ಯ ವೇದಾಂತಮತ-ಮೂಲಾಚಾರ್ಯತ್ವಾದಿತಿ ಭಾವಃ ॥ ೧೬೫ ॥

**ವಿವರಣೆ–** ಜಗತ್ಕಾರಣತ್ವವು ಯತೋ ವಾ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಜನಿಕರ್ತುಃ ಪ್ರಕೃತಿಃ ಎಂಬ ಪಾಣಿನಿ ಸೂತ್ರವು ಉಪಾದಾನತ್ವವನ್ನು ಹೇಳುವುದಾದರೆ ಇಲ್ಲಿ ಅವಕಾಶವನ್ನು ಪಡೆಯುವುದಿಲ್ಲ. ಗೋಮಯಾದ್ ವೃಶ್ಚಿಕೋ ಜಾಯತೇ ಮುಂತಾದ ಸ್ಥಳಗಳಲ್ಲಿ ಅದಕ್ಕೆ ಸಾರ್ಥಕತೆಯನ್ನು ಹೇಳಬೇಕು. ಯತೋ ವಾ ಎಂಬ ಶ್ರುತಿಗೆ ಬ್ರಹ್ಮಸೂತ್ರವನ್ನು ಅನುಸರಿಸಿ ವ್ಯಾಖ್ಯಾನ ಮಾಡಬೇಕೋ ಅಥವಾ ಪಾಣಿನಿ ಸೂತ್ರವನ್ನು ಅನುಸರಿಸಿ ವ್ಯಾಖ್ಯಾನ ಮಾಡಬೇಕೋ ಎಂಬ ಸಂಶಯ ಬಂದರೆ, ವ್ಯಾಸಸೂತ್ರವನ್ನೇ ಅನುಸರಿಸಿ ವ್ಯಾಖ್ಯಾನ ಮಾಡಬೇಕು ಎಂದು ಅಭಿಪ್ರಾಯ. ಏಕೆಂದರೆ ವೇದಾಂತ ಮತದ ಮೂಲಾಚಾರ್ಯರಾದ ವ್ಯಾಸರು ಎಲ್ಲರಿಗೂ ಪತಿಯಷ್ಟೇ? ಒಂದೊಂದು ಸ್ಥಳದಲ್ಲಿ ಒಂದೊಂದು ಅರ್ಥವನ್ನು ಹೇಳುವ ಪಾಣಿನಿಯ ಸೂತ್ರವು ಜಾರನಿದ್ದಂತೆ. ಜಾರನನ್ನು ಅನುಸರಿಸುವುದಕ್ಕಿಂತ ಪತಿಯನ್ನು ಅನುಸರಿಸುವುದು ಶ್ರೇಷ್ಠವೆಂದು ಲೋಕದ ನ್ಯಾಯವಷ್ಟೇ?

ಅವಿಕಾರಿತ್ವತಸ್ತಸ್ಯ ನೈವೋಪಾದಾನತಾ ಮತಾ ।
ಅತಃ ಕರ್ತೈವ ಜಗತಃ ಶ್ರುತೌ ಸೂತ್ರೇ ಚ ಕಥ್ಯತೇ ॥ ೧೬೬ ॥

**ಅರ್ಥ–** ಅವಿಕಾರಿತ್ವತಃ= ವಿಕಾರಶೂನ್ಯನಾಗಿರುವ ಕಾರಣದಿಂದ, ತಸ್ಯ= ಆ ಬ್ರಹ್ಮನಿಗೆ, ಉಪಾದಾನತಾ= ಉಪಾದಾನತ್ವವು, ನೈವ ಮತಾ= ಎಂದೂ ಶ್ರುತಿಗೆ ಅಭಿಪ್ರೇತವಲ್ಲ, ಅತಃ= ಆ ಕಾರಣದಿಂದ, ಶ್ರುತೌ ಸೂತ್ರೇ ಚ= ಶ್ರುತಿಯಲ್ಲಿಯೂ ಮತ್ತು ಸೂತ್ರದಲ್ಲಿಯೂ, ಜಗತಃ ಕರ್ತೈವ= ಜಗತ್ತಿನ ಕರ್ತೃವೇ, ಕಥ್ಯತೇ= ಹೇಳಲ್ಪಡುತ್ತಾನೆ.

**ಅನುವಾದ–** ಬ್ರಹ್ಮನು ನಿರ್ವಿಕಾರನಾದುದರಿಂದ ಅವನಿಗೆ ಉಪಾದಾನತ್ವವು ಎಂದೂ ಕೂಡುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿಯೂ ಮತ್ತು ಸೂತ್ರಗಳಲ್ಲಿಯೂ ಬ್ರಹ್ಮನು ಜಗತ್ಕರ್ತೃವೆಂದೇ ಹೇಳಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** ನನೂಪಾದಾನತ್ವಮೇವ ಲಕ್ಷಣಂ ಭವತು ತಚ್ಚ ಬ್ರಹ್ಮಣ್ಯೇವಾಸ್ತು ಏವಂಚ ಸೂತ್ರದ್ವಯಮಪ್ಯನುಸೃತಂ ಸ್ಯಾದಿತಿ ತಟಸ್ಥಶಂಕಾಂ ನಿರಾಕರೋತಿ ॥ **ಅವಿಕಾರಿತ್ವತ ಇತಿ** ॥ ಅತಃ ಉಪಾದಾನತ್ವಾಯೋಗಾತ್ ॥ ೧೬೬ ॥

ನಿಷ್ಕ್ರಿಯತ್ವಶ್ರುತಿಶ್ಚಾಸ್ಯ ಕ್ರಿಯಯಾ ಶಾಸ್ತ್ಯಲೇಪನಂ ।
ಅಕರ್ತಾರಂ ಹಿ ತಂ ಪ್ರಾಹುರ್ಯಃ ಕೃತ್ವಾಪಿ ನ ಲಿಪ್ಯತೇ ।
ಶ್ರುತಿಸೂತ್ರೋಕ್ತಕರ್ತೃತ್ವಬಾಧಾಯ ಯತತೇ ನ ಸಾ ॥ ೧೬೭ ॥

**ಅರ್ಥ–** ನಿಷ್ಕ್ರಿಯತ್ವಶ್ರುತಿಶ್ಚ= ನಿಷ್ಕ್ರಿಯ ಎಂಬ ಶ್ರುತಿಯು, ಅಸ್ಯ= ಈ ಬ್ರಹ್ಮನಿಗೆ, ಕ್ರಿಯಯಾ= ಕ್ರಿಯೆಯಿಂದ, ಅಲೇಪನಂ= ಲೇಪಾಭಾವವನ್ನು, ಶಾಸ್ತಿ= ಹೇಳುತ್ತದೆ, ಯಃ= ಯಾವನು, ಕೃತ್ವಾಪಿ= ಕ್ರಿಯೆಯನ್ನು ಮಾಡಿದರೂ ಸಹ, ನ ಲಿಪ್ಯತೇ= ಅದರಿಂದ ಲಿಪ್ತನಾಗುವುದಿಲ್ಲವೋ, ತಂ= ಅವನನ್ನು, ಅಕರ್ತಾರಂ= ಕರ್ತೃವಲ್ಲವೆಂದು, ಪ್ರಾಹುಃ ಹಿ= ಹೇಳುತ್ತಾರಷ್ಟೇ, ಸಾ= ನಿಷ್ಕ್ರಿಯತ್ವಶ್ರುತಿಯು, ಶ್ರುತಿಸೂತ್ರೋಕ್ತ ಕರ್ತೃತ್ವಬಾಧಾಯ= ಶ್ರುತಿ ಮತ್ತು ಸೂತ್ರವು ಹೇಳಿದ ಕರ್ತೃತ್ವದ ಬಾಧೆಯನ್ನು ಮಾಡಲು, ನ ಯತತೇ= ಪ್ರಯತ್ನಿಸುವುದಿಲ್ಲ.

**ಅನುವಾದ–** ನಿಷ್ಕ್ರಿಯತ್ವಶ್ರುತಿಯಾದರೂ ಬ್ರಹ್ಮನಿಗೆ ಕ್ರಿಯೆಯಿಂದ ಲೇಪವಿಲ್ಲ ಎಂಬ ಅರ್ಥವನ್ನು ಹೇಳುತ್ತದೆ. ಯಾವನು ಕ್ರಿಯೆಯನ್ನು ಮಾಡಿದರೂ ಅದರ ಫಲದಿಂದ ಲೇಪವನ್ನು ಹೊಂದುವುದಿಲ್ಲವೋ ಅವನನ್ನು ಅಕರ್ತಾ ಎಂದು ಹೇಳುತ್ತಾರಷ್ಟೇ? ಆದ್ದರಿಂದ ಆ ನಿಷ್ಕ್ರಿಯತ್ವ ಶ್ರುತಿಯು ಶ್ರುತಿ ಮತ್ತು ಸೂತ್ರಗಳು ಹೇಳಿದ ಬ್ರಹ್ಮನ ಜಗತ್ಕರ್ತೃತ್ವವನ್ನು ಬಾಧಿಸುವುದಿಲ್ಲ.

**ಭಾವವಿಲಾಸಿನೀ–** ನಿಷ್ಕ್ರಿಯತ್ವಶ್ರುತೇರರ್ಥಾಂತರಮಾಹ – **ನಿಷ್ಕ್ರಿಯತ್ವಶ್ರುತಿರಿತಿ** ॥ ಅಸ್ಯ ಬ್ರಹ್ಮಣಃ ಕ್ರಿಯಯಾ ಜಗತ್ಸರ್ಜನ ಸಂಹಾರಾದಿಕ್ರಿಯಯಾ । ಅಲೇಪನಂ ಪುಣ್ಯಪಾಪಾದಿಲೇಪಾಭಾವಮ್ । ತತ್ರ ಯುಕ್ತಿಮಾಹ – **ಅಕರ್ತಾರಮಿತಿ** ॥ ಸಾ ನಿಷ್ಕ್ರಿಯತ್ವಶ್ರುತಿಃ ಶ್ರುತಿಸೂತ್ರೋಕ್ತಂ ಯತ್ ಕರ್ತೃತ್ವಂ ಬ್ರಹ್ಮಕರ್ತೃತ್ವಂ ತಸ್ಯ ಬಾಧಾಯನಯತತೇ । ಸೂತ್ರಸಹಿತ್ಯೈ ತಚ್ಛ್ರುತೇಃ ಪ್ರಬಲತ್ವಾತ್ ಕರ್ಮಲೇಪಾಭಾವಪರೈವ ಸಾಶ್ರುತಿಃ । ಕಾರ್ಯಕಾರಣಶಬ್ದಾಶ್ಚಾನ್ಯೋನ್ಯಂ ಸಂಕೀರ್ಯಂತ ಇತಿ ವಚನಾತ್ । ಕ್ರಿಯಾಶಬ್ದಸ್ಯ ಸ್ವಕಾರ್ಯಲೇಪಪರತ್ವಸಂಭವಾದಿತಿ ಭಾವಃ ॥ ೧೬೭ ॥

**ವಿವರಣೆ–** ನಿಷ್ಕ್ರಿಯತ್ವ ಶ್ರುತಿಗೆ ಇಲ್ಲಿ ಅರ್ಥಾಂತರವನ್ನು ಹೇಳುತ್ತಾರೆ. ಜಗತ್ತಿನ ಸೃಷ್ಟಿ ಸಂಹಾರಗಳನ್ನು ಮಾಡಿದರೂ ಬ್ರಹ್ಮನಿಗೆ ಪುಣ್ಯಪಾಪಗಳ ಲೇಪವಿಲ್ಲ ಎಂದು ಅದರ ಅರ್ಥ. ಅದನ್ನು ಸಮರ್ಥಿಸಲು ಕ್ರಿಯೆಯನ್ನು ಮಾಡಿದವನಿಗೂ ಕ್ರಿಯಾಫಲದ ಲೇಪವಿಲ್ಲದಿದ್ದರೆ ಅವನು ಅಕರ್ತನೆಂಬ ವ್ಯವಹಾರವಿದೆ ಎಂಬ ಯುಕ್ತಿಯನ್ನು ಸೂಚಿಸುತ್ತಾರೆ. ನಿಷ್ಕ್ರಿಯ ಎಂಬ ಶಬ್ದಕ್ಕೆ ಕ್ರಿಯೆ ಇಲ್ಲದವನು ಎಂದು ಅರ್ಥವಲ್ಲ. ಕ್ರಿಯಾಫಲವಿಲ್ಲದವನು ಎಂದು ಅರ್ಥ. ಶಾಸ್ತ್ರದಲ್ಲಿ ಕಾರ್ಯಕಾರಣಶಬ್ದಗಳನ್ನು ಪರಸ್ಪರ ಮಿಶ್ರಣದಿಂದ ಉಪಯೋಗಿಸುವುದರಿಂದ ನಿಷ್ಕ್ರಿಯಶಬ್ದದಲ್ಲಿರುವ ಕ್ರಿಯಾಶಬ್ದಕ್ಕೆ

ಕ್ರಿಯಾಫಲವೆಂದು ಅರ್ಥ. ಆದ್ದರಿಂದ ನಿಷ್ಕ್ರಿಯತ್ವ ಶ್ರುತಿಯು ಶ್ರುತಿಸೂತ್ರಗಳು ಹೇಳಿದ ಜಗತ್ಕರ್ತೃತ್ವವನ್ನು ಬಾಧಿಸುವುದಿಲ್ಲ ಎಂದು ಅಭಿಪ್ರಾಯ.

**ಮಣಿಃ ಪ್ರವರ್ತತೇ ಮಾಲಾಕಾರಸಂದರ್ಶಿತಾಧ್ವನಾ ।**
**ನ ಚೇದಾಕಾಶಶಬ್ದೋಕ್ತಂ ಪರಂ ಬ್ರಹ್ಮ ಕಥಂ ವದ ।**
**ಆಕಾಶಶ್ರುತಿಸಾಮರ್ಥ್ಯಾಜ್ಜಡಾಕಾಶಃ ಕಥಂ ನ ಸಃ ॥ ೧೬೮ ॥**

**ಅರ್ಥ–** ಮಾಲಾಕಾರಸಂದರ್ಶಿತಾಧ್ವನಾ= ಮಾಲೆಯನ್ನು ಮಾಡುವವನು ತೋರಿಸಿದ ಮಾರ್ಗದಲ್ಲಿ, ಮಣಿಃ= ಮಣಿಯು, ಪ್ರವರ್ತತೇ= ಪ್ರವೇಶಿಸುತ್ತದೆ, ನ ಚೇತ್= ಇಲ್ಲದಿದ್ದರೆ, ಪರಂ ಬ್ರಹ್ಮ= ಪರಬ್ರಹ್ಮನು, ಕಥಂ= ಹೇಗೆ, ಆಕಾಶಶಬ್ದೋಕ್ತಂ= ಆಕಾಶ ಶಬ್ದದಿಂದ ಹೇಳಲ್ಪಡುತ್ತಾನೆ ಎಂದು, ವದ= ಹೇಳು. ಆಕಾಶಶ್ರುತಿಸಾಮರ್ಥ್ಯಾತ್= ಆಕಾಶ ಶ್ರುತಿಯ ಬಲದಿಂದ, ಸಃ= ಆ ಆಕಾಶಶಬ್ದವು, ಕಥಂ= ಹೇಗೆ, ಜಡಾಕಾಶಃ ನ= ಜಡಾಕಾಶವಾಗುವುದಿಲ್ಲ?

**ಅನುವಾದ–** ಮಣಿಯು ಮಾಲೆಯನ್ನು ಕಟ್ಟುವವನು ತೋರಿಸಿದ ದಾರಿಯಲ್ಲಿ ಹೋಗುತ್ತದೆ. ಇಲ್ಲದಿದ್ದರೆ ಆಕಾಶಶಬ್ದೋಕ್ತನಾದವನು ಹೇಗೆ ಪರಬ್ರಹ್ಮನಾಗುತ್ತಾನೆ ಎಂದು ಹೇಳು. ಭೂತಾಕಾಶದಲ್ಲಿ ಪ್ರಸಿದ್ಧವಾದ ಆಕಾಶಶಬ್ದ ಶ್ರವಣವಿರುವುದರಿಂದ ಆಕಾಶಶಬ್ದವು ಏಕೆ ಜಡಾಕಾಶವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಶ್ರುತಿಃ ಸೂತ್ರಾನುಸಾರೇಣ ಪ್ರವರ್ತತ ಇತ್ಯತ್ರ ಲೌಕಿಕ ದೃಷ್ಟಾಂತಮಾಹ – ಮಣಿರಿತಿ ॥ ಪ್ರವರ್ತತೇ ಸೂತ್ರಂ ಪ್ರವಿಶತಿ । ಏವಂ ಶ್ರುತಿರಪಿ ಸ್ವೋದ್ಧಾರಕವ್ಯಾಸೋಕ್ತ-ಮಾರ್ಗೇಣೈವ ಪ್ರವರ್ತತ ಇತಿ ಭಾವಃ। ವಿಪಕ್ಷೇ ಬಾಧಕಮಾಹ – ನಚೇದಿತಿ ॥ ಅಸ್ಯ ಲೋಕಸ್ಯ ಕಾಗತಿರಿತ್ಯಾಕಾಶ ಇತಿ ಹೋವಾಚೇತಿ ಶ್ರುತಾವಾಕಾಶಶಬ್ದೋಕ್ತಂ ಪರಬ್ರಹ್ಮ ಕಥಮ್ । ರೂಢಿಪ್ರಾಪ್ತಲೋಕಪ್ರಸಿದ್ಧಜಡಾಕಾಶಪರಿತ್ಯಾಗೇ ಆಕಾಶಸ್ತಲ್ಲಿಂಗಾದಿತಿ ವ್ಯಾಸವಾಕ್ಯಮೇವಹಿ ಕಾರಣಮ್ । ಶ್ರುತೇರ್ವ್ಯಾಸವಾಕ್ಯಾನನುಸಾರಿತ್ವೇ ಇದಮಪಿ ನ ಸ್ಯಾದಿತಿ ಭಾವಃ। ವದೇತ್ಯನೇನ ತ್ವಯಾಪ್ಯಸ್ಮಿನ್ನಧಿಕರಣೇ ಏವಮೇವ ಭಾಷಿತಮಿತಿ ಸೂಚಯತಿ । ಸಃ ಆಕಾಶಃ । ಅತ್ರ ಹಿ ಸೂತ್ರಬಲಾದೇವ ಶ್ರುತೇಃ ಪ್ರಸಿದ್ಧಾರ್ಥಾದನ್ಯಥೀಕರಣಮಿತಿ ಭಾವಃ ॥ ೧೬೮ ॥

**ವಿವರಣೆ–** ಶ್ರುತಿಯು ಸೂತ್ರಕ್ಕೆ ಅನುಸಾರವಾಗಿ ಪ್ರವರ್ತಿಸುತ್ತದೆ ಎಂಬ ವಿಷಯದಲ್ಲಿ ಒಂದು ಲೌಕಿಕ ದೃಷ್ಟಾಂತವನ್ನು ಹೇಳುತ್ತಾರೆ. ಶ್ರುತಿಯು ಮಣಿ ಇದ್ದಂತೆ. ಅದು ತನ್ನನ್ನು ಉದ್ಧಾರ ಮಾಡಿದ ವ್ಯಾಸರು ತೋರಿಸಿದ ಮಾರ್ಗದಲ್ಲಿಯೇ ನಡೆಯುತ್ತದೆ. ವ್ಯಾಸರು ಜನ್ಮಾದ್ಯಸ್ಯ ಯತಃ ಎಂದು ಜಗತ್ಕರ್ತೃತ್ವವನ್ನು ಹೇಳಿರುವುದರಿಂದ ಯತೋ ವಾ ಎಂಬ ಶ್ರುತಿಯು ಕರ್ತೃತ್ವವನ್ನೇ ಹೇಳುತ್ತದೆ. ಹಾಗೆ ಅಂಗೀಕರಿಸದಿದ್ದರೆ ಆಕಾಶಾಧಿಕರಣದಲ್ಲಿ ಅಸ್ಯಲೋಕಸ್ಯ ಕಾ ಗತಿಃ ಆಕಾಶ ಇತಿಹೋವಾಚ ಎಂಬ ವಾಕ್ಯದಲ್ಲಿ ಆಕಾಶ ಶಬ್ದದಿಂದ

ಭೂತಾಕಾಶವು ಏಕೆ ಹೇಳಲ್ಪಡುವುದಿಲ್ಲ? ಆಕಾಶಸ್ತಲ್ಲಿಂಗಾತ್ ಎಂದು ಸೂತ್ರಕಾರರು ಹೇಳಿರುವುದರಿಂದ, ಆಕಾಶಶಬ್ದವು ಬ್ರಹ್ಮನನ್ನೇ ಹೇಳುತ್ತದೆ ಎಂಬ ಅರ್ಥವನ್ನು ನೀನು ಅಂಗೀಕರಿಸಿದ್ದೀಯೆ. ಹೀಗಿರುವಾಗ ಅದೇ ಸೂತ್ರಕಾರರು ಜನ್ಮಾದ್ಯಸ್ಯ ಯತಃ ಎಂದು ಜಗತ್ಕರ್ತೃತ್ವವನ್ನೇ ಹೇಳುತ್ತಿರುವುದರಿಂದ ಅದನ್ನು ತಿರಸ್ಕರಿಸಿ ಜಗದುಪಾದಾನತ್ವವನ್ನು ಹೇಳಿ ಬ್ರಹ್ಮನ ಲಕ್ಷಣವನ್ನು ಏಕೆ ತಟಸ್ಥವನ್ನಾಗಿ ಮಾಡುತ್ತಿದ್ದೀಯೆ ಎಂದು ಅಭಿಪ್ರಾಯ.

**ತದಾನಂದಮಯಂ ಕೋಶಂ ಕರ್ತುಂ ಸ್ವೇನ ನಿರೂಪಿತಂ ।**
**ಗುಣೇ ತ್ವನ್ನ್ಯಾಯಕ್ಲ್ಪ್ತ್ಯಾಖ್ಯನ್ಯಾಯಂ ಸ್ವಯಮಹೋ ಜಹೌ ॥ ೧೬೯ ॥**

**ಅರ್ಥ–** ತತ್= ಆದ್ದರಿಂದ, ಆನಂದಮಯಂ= ಆನಂದಮಯನನ್ನು, ಕೋಶಂ ಕರ್ತುಂ= ಕೋಶವನ್ನಾಗಿ ಮಾಡಲು, ಸ್ವೇನ ನಿರೂಪಿತಂ= ತಾನೇ ನಿರೂಪಿಸಿದ, ಗುಣೇ ತ್ವನ್ನ್ಯಾಯ ಕ್ಲ್ಪ್ತ್ಯಾಖ್ಯನ್ಯಾಯಂ= ಗುಣೇ ತ್ವನ್ನ್ಯಾಯಕಲ್ಪನಾ ಎಂಬ ನ್ಯಾಯವನ್ನು, ಸ್ವಯಂ= ತಾನೇ, ಜಹೌ= ತ್ಯಜಿಸಿದನು, ಅಹೋ= ಆಶ್ಚರ್ಯವು!

**ಅನುವಾದ–** ಆದ್ದರಿಂದ ಆನಂದಮಯನನ್ನು ಕೋಶವನ್ನಾಗಿ ಮಾಡಲು ತಾನೇ ನಿರೂಪಿಸಿದ ಗುಣೇ ತ್ವನ್ನ್ಯಾಯಕಲ್ಪನಾ ಎಂಬ ನ್ಯಾಯವನ್ನು ತಾನೇ ಪರಿತ್ಯಜಿಸಿದ್ದಾನೆ. ಇದು ಆಶ್ಚರ್ಯ!

**ಭಾವವಿಲಾಸಿನೀ–**ತತ್ತಸ್ಮಾತ್ ಆಕಾಶಾಧಿಕರಣೇ ತ್ವಯ್ಯೆವ ಸೂತ್ರಬಲೇನ ಶ್ರುತೇರನ್ಯಥೀಕರಣಾತ್। ಆನಂದಮಯಾಧಿಕರಣೇ ಆನಂದಮಯಂ ಕೋಶಂ ಕರ್ತುಂ ಸ್ವೇನ ನಿರೂಪಿತಂ ಗುಣೇತ್ವನ್ನ್ಯಾಯಕ್ಲೃಪ್ತ್ಯಾಖ್ಯಂ ನ್ಯಾಯಮ್ । ಕ್ಲೃಪ್ತಿಃ ಕಲ್ಪನಾ ತದ್ರೂಪನ್ಯಾಯಂ ಸ್ವಯಮಾನಂದ-ಮಯಾಧಿಕರಣಭಾಷ್ಯಕಾರ ಏವ ಜಹೌ ಆಕಾಶಾಧಿಕರಣೇ ತ್ಯಕ್ತವಾನ್ । ಅಸ್ಮಿನ್ನಧಿಕರಣೇ ಗುಣತ್ವೇನಾಭಿಮತಸೂತ್ರಬಲೇನ ಪ್ರಧಾನತ್ವೇನಾಭಿಮತಶ್ರುತೇಃ ಸ್ವೇನೈವ ಬಾಧನಾತ್ । ಅತಃ ಪಾಣಿನಿಸೂತ್ರಬಲೇನ ಜನ್ಮಾದಿಶ್ರುತಿಬಾಧಂ ಕುರ್ವನ್ನುತ್ತರಾಧಿಕರಣೇ ಚ ವ್ಯಾಸಸೂತ್ರ-ಬಲೇನಾಕಾಶ ಶ್ರುತಿಬಾಧಂ ಕುರ್ವನ್ಮಧ್ಯೇ ಆನಂದಮಯಾಧಿಕರಣೇ ಶ್ರುತ್ಯೈವ ಸೂತ್ರಬಾಧಂ ಚ ಕುರ್ವನ್ ತತ್ರೈವ ಪ್ರಬಲತ್ವೇನಾಭಿಮತಾನಂದಮಯಶ್ಲೋಕರೂಪಶ್ರುತ್ಯುಪೇಕ್ಷಾಂ ಚ ಕುರ್ವನ್ ಪೂರ್ವೋತ್ತರಜ್ಞಾನಶೂನ್ಯಃ ಮಧ್ಯೇಪ್ಯರ್ಧಜರತೀಯಮಾಚರನ್ ಕಥಂ ನೋನ್ಮತ್ತ ಇತಿ ಭಾವಃ ॥ ೧೬೯ ॥

**ವಿವರಣೆ–** ಆನಂದಮಯಾಧಿಕರಣದಲ್ಲಿ ಶ್ರುತಿಸೂತ್ರಗಳಿಗೆ ವಿರೋಧಬಂದಾಗ ಪ್ರಧಾನವಾದುದನ್ನು ಅನುಸರಿಸಿ, ಅಪ್ರಧಾನವಾದುದಕ್ಕೆ ಬೇರೆ ಅರ್ಥವನ್ನು ಮಾಡಬೇಕು ಎಂಬ ನ್ಯಾಯವನ್ನು ನಿರೂಪಿಸಿ (ಇದಕ್ಕೆ ಗುಣೇತ್ವನ್ನ್ಯಾಯಕಲ್ಪನಾನ್ಯಾಯ ಎಂದು ಹೆಸರು) ಪ್ರಧಾನವಾದ ಶ್ರುತಿಯ ಬಲದಿಂದ ಆನಂದಮಯಸೂತ್ರಕ್ಕೇ ಕೋಶರೂಪ-ವಾದ ಅನ್ಯಾರ್ಥವನ್ನು ಮಾಡಿದ್ದಾನೆ. ಆದರೆ ಆಕಾಶಾಧಿಕರಣದಲ್ಲಿ ಸೂತ್ರಬಲದಿಂದಲೇ

ಶ್ರುತಿಗೆ ಪ್ರಸಿದ್ಧವಾದ ಭೂತಾಕಾಶ ರೂಪವಾದ ಅರ್ಥವನ್ನು ಪರಿತ್ಯಾಗ ಮಾಡಿ ಬ್ರಹ್ಮನೆಂಬ ಅರ್ಥವನ್ನು ಹೇಳಿದ್ದಾನೆ. ಆದ್ದರಿಂದ ತಾನು ಆನಂದಮಯಾಧಿಕರಣದಲ್ಲಿ ನಿರೂಪಿಸಿದ ನ್ಯಾಯವನ್ನು ಆಕಾಶಾಧಿಕರಣದಲ್ಲಿ ಬಿಟ್ಟಿದ್ದಾನೆ. ಇದು ಒಂದು ಆಶ್ಚರ್ಯ! ಅದರಂತೆ ಈ ಜನ್ಮಾದ್ಯಧಿಕರಣದಲ್ಲಿ ಅಪ್ರಧಾನವಾದ ಸೂತ್ರದ ಬಲದಿಂದ ಪ್ರಧಾನವಾದ ಶ್ರುತಿಗೇ ಅನ್ಯಾರ್ಥವನ್ನು ಕಲ್ಪಿಸುತ್ತಾನೆ. ಇದು ತನ್ನ ನ್ಯಾಯವನ್ನು ತಾನೇ ತ್ಯಜಿಸಿರುವುದಕ್ಕೆ ಇನ್ನೊಂದು ಉದಾಹರಣೆ. ಇನ್ನು ಪಾಣಿನಿ ಸೂತ್ರದ ಬಲದಿಂದ ಜನ್ಮಾದ್ಯಧಿಕರಣದಲ್ಲಿ ಶ್ರುತಿಬಾಧವನ್ನು ಹೇಳಿ ವ್ಯಾಸಸೂತ್ರದ ಬಲದಿಂದ ಉತ್ತರಾಧಿಕರಣದಲ್ಲಿ ಎಂದರೆ ಆಕಾಶಾಧಿಕರಣದಲ್ಲಿ ಶ್ರುತಿಬಾಧವನ್ನು ಹೇಳುವ ಮಾಯಾವಾದಿಯು ಮಧ್ಯೆ ಆನಂದಮಯಾಧಿಕರಣದಲ್ಲಿ ಶ್ರುತಿಯಿಂದಲೇ ಸೂತ್ರಬಾಧವನ್ನು ಹೇಳಿ, ಅಲ್ಲಿಯೇ ಇರುವ ಆನಂದಮಯ ಶ್ಲೋಕದ ಶ್ರುತಿಯನ್ನೂ ಬಾಧಿಸುತ್ತಾನೆ. ಹೀಗೆ ಪೂರ್ವೋತ್ತರ ವಿರುದ್ಧವಾಗಿ ವ್ಯಾಖ್ಯಾನ ಮಾಡುವ ಮಾಯಾವಾದಿಯು ಹೇಗೆ ಉನ್ಮತ್ತನಲ್ಲ ಎಂದು ಅಭಿಪ್ರಾಯ.

**ಪ್ರಧಾನೇ ಬ್ರಹ್ಮಸೂತ್ರೇಽಸ್ಮಿನ್ಯದನ್ಯಾಯಂ ಚಿಕೀರ್ಷತಿ ।**
**ಗುಣಭೂತಾನ್ಯಶಾಸ್ತ್ರಾರ್ಥೇ ಬಹುಮಾನಪುರಸ್ಕೃತಃ ॥ ೧೭೦ ॥**

**ಅರ್ಥ–** ಮಾಯಾವಾದಿ = ಮಾಯಾವಾದಿಯು, ಗುಣಭೂತಾನ್ಯಶಾಸ್ತ್ರಾರ್ಥೇ, ಗುಣಭೂತ = ಅಮುಖ್ಯವಾದ, ಅನ್ಯಶಾಸ್ತ್ರ = ಬೇರೆ ಶಾಸ್ತ್ರವಾದ ಪಾಣಿನಿಯ ಸೂತ್ರದ, ಅರ್ಥೇ = ಅರ್ಥದಲ್ಲಿ, ಬಹುಮಾನಪುರಸ್ಕೃತಃ = ಗೌರವವುಳ್ಳವನಾಗಿ, ಪ್ರಧಾನೇ = ಮುಖ್ಯವಾದ, ಅಸ್ಮಿನ್ = ಈ, ಬ್ರಹ್ಮಸೂತ್ರೇ = ಬ್ರಹ್ಮಸೂತ್ರದಲ್ಲಿ, ಯತ್ = ಯಾವಕಾರಣದಿಂದ, ಅನ್ಯಾಯಂ = ಅಗೌರವವನ್ನು, ಚಿಕೀರ್ಷತಿ = ಮಾಡಲು ಇಚ್ಛೆಯುಳ್ಳವನಾಗಿದ್ದಾನೋ, ತತ್ = ಆ ಕಾರಣದಿಂದ, ಅಸೌ = ಇವನು, ಸ್ವನ್ಯಾಯಂ= ಆನಂದಮಯಾಧಿಕರಣದಲ್ಲಿ ತಾನೇ ಹೇಳಿದ ಗುಣೇತ್ವನ್ಯಾಯ ಕಲ್ಪನಾ ಎಂಬ ನ್ಯಾಯವನ್ನು, ಸ್ವಯಂ = ತಾನೇ, ಜಹೌ = ಈ ಜನ್ಮಾದ್ಯಧಿಕರಣದಲ್ಲಿ ಬಿಟ್ಟಿದ್ದಾನೆ.

**ಅನುವಾದ–** ಅಪ್ರಧಾನವಾದ ಪಾಣಿನಿಯ ಸೂತ್ರದಲ್ಲಿ ಬಹುಮಾನವುಳ್ಳವನಾಗಿ ಪ್ರಧಾನವಾದ ಜನ್ಮಾದ್ಯಸ್ಯ ಯತಃ ಎಂಬ ಬ್ರಹ್ಮಸೂತ್ರದಲ್ಲಿ ಅರ್ಥತ್ಯಾಗರೂಪವಾದ ಅನ್ಯಾಯವನ್ನು ಮಾಡುವುದರಿಂದ ತನ್ನ ನ್ಯಾಯವನ್ನು ತಾನೇ ಬಿಟ್ಟಿದ್ದಾನೆ.

**ಭಾವವಿಲಾಸಿನೀ–** ಸ್ಥಲಾಂತರೇಽಪಿ ಸ್ವೋಕ್ತ ನ್ಯಾಯವಿಸ್ಮರಣಂ ದರ್ಶಯತಿ – ಪ್ರಧಾನ ಇತಿ ॥ ಯದ್ಯಸ್ಮಾತ್ । ಅಸ್ಮಿನ್ ಜನ್ಮಾದ್ಯಸ್ಯ ಯತ ಇತಿ ಸೂತ್ರೇ ಅನ್ಯಾಯಮರ್ಥಪರಿತ್ಯಾಗರೂಪಂ ಬಾಧಮ್ । ಅನ್ಯಃ ಪಾಣಿನಿಃ । ತಸ್ಮಾದತ್ರಾಪಿ ಸ್ವೋಕ್ತನ್ಯಾಯಂ ಸ್ವಯಮೇವ ಜಹಾವಿತಿ ಪೂರ್ವೇಣ ಸಂಬಂಧಃ ॥ ೧೭೦ ॥

**ವಿವರಣೆ–** ಹಿಂದಿನ ಶ್ಲೋಕಗಳಲ್ಲಿ ಅದ್ವೈತಿಗಳ ಕ್ರಮವನ್ನು ನಿರೂಪಿಸಿ ದೂಷಿಸಿದ್ದಾರೆ. ಆನಂದಮಯಾಧಿಕರಣದಲ್ಲಿ ಶ್ರುತಿಯು ಬ್ರಹ್ಮನನ್ನು ಆನಂದಮಯನ ಪುಚ್ಛ ಎಂದು ಹೇಳುವುದರಿಂದ ಸೂತ್ರವು ಆನಂದಮಯನು ಬ್ರಹ್ಮ ಎಂದು ಹೇಳಿದರೂ ಪ್ರಧಾನವಾದ ಶ್ರುತಿಗೆ ಅನುಸಾರವಾಗಿ ಸೂತ್ರಕ್ಕೆ ಬೇರೆ ಅರ್ಥವನ್ನು ಮಾಡಬೇಕು ಎಂದು ಹೇಳಿರುವ ಅದ್ವೈತಿಗಳು ಆಕಾಶಾಧಿಕರಣದಲ್ಲಿಯೇ ಈ ನ್ಯಾಯವನ್ನು ಬಿಟ್ಟಿದ್ದಾರೆ. ಈ ಅಧಿಕರಣದ ವಿಷಯವಾಕ್ಯದಲ್ಲಿರುವ ಆಕಾಶಶ್ರುತಿಯು ಭೂತಾಕಾಶವನ್ನು ಹೇಳುತ್ತದೆ. ಆದರೆ, 'ಆಕಾಶಸ್ತಲ್ಲಿಂಗಾತ್' ಎಂಬ ಬ್ರಹ್ಮಸೂತ್ರವು ಆಕಾಶವನ್ನು ಬ್ರಹ್ಮ ಎಂದು ಹೇಳುವುದರಿಂದ ಪ್ರಬಲವಾದ ಶ್ರುತಿಯನ್ನು ಬಾಧಿಸಿ ಅಪ್ರಧಾನವಾದ ಸೂತ್ರಕ್ಕೆ ಬೆಲೆಯನ್ನು ಕೊಟ್ಟು ಇಲ್ಲಿ ಆಕಾಶ ಶಬ್ದವಾಚ್ಯನಾದವನು ಬ್ರಹ್ಮನೇ ಎಂದು ನಿರ್ಣಯ ಮಾಡಿದ್ದಾರೆ. ಜನ್ಮಾದ್ಯಧಿಕರಣದಲ್ಲಿ ಪಾಣಿನಿಸೂತ್ರಕ್ಕೂ ಮತ್ತು ಬ್ರಹ್ಮಸೂತ್ರಕ್ಕೂ ವಿರೋಧವುಂಟಾದಾಗ, ಬ್ರಹ್ಮಸೂತ್ರವು ಪ್ರಧಾನವಾದರೂ ಸಹ, ಅಪ್ರಧಾನವಾದ ಪಾಣಿನಿಸೂತ್ರದಿಂದ ಅದಕ್ಕೆ ಬಾಧವನ್ನು ಹೇಳಿ ಅರ್ಥಾಪಹಾರವನ್ನು ಮಾಡಿ ಜನ್ಮಾದಿಕಾರಣತ್ವವು ಅವಿದ್ಯೆಯ ಲಕ್ಷಣ ಎಂದು ಹೇಳಿದ್ದಾರೆ. ಹೀಗೆ ಅದ್ವೈತಿಗಳು ಅಧಿಕರಣ ರಚನೆಯಲ್ಲಿ ಪೂರ್ವಾಪರಜ್ಞಾನಶೂನ್ಯರಾದುದರಿಂದ ಅವರು ಉನ್ಮತ್ತರು ಎಂದು ತಿಳಿಸಿದ್ದಾರೆ. ಪ್ರಕೃತದಲ್ಲಿ 'ಜನ್ಮಾದ್ಯಸ್ಯ ಯತಃ' ಎಂಬ ಬ್ರಹ್ಮಸೂತ್ರವು ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವವನ್ನು ಹೇಳುತ್ತದೆ. ಈ ಕಾರಣತ್ವವು ಕರ್ತೃತ್ವರೂಪವಾದುದು. ಆದರೆ, 'ಜನಿಕರ್ತುಃಪ್ರಕೃತಿಃ' ಎಂಬ ಪಾಣಿನಿಸೂತ್ರವು ಉಪಾದಾನವಾಚಕವಾದ ಶಬ್ದದ ಮೇಲೆ ಪಂಚಮೀ ವಿಭಕ್ತಿ ಬರುತ್ತದೆ ಎಂದು ಹೇಳಿರುವುದರಿಂದ ಇಲ್ಲಿ ಅವರು ಉಪಾದಾನತ್ವರೂಪವಾದ ಕಾರಣತ್ವವನ್ನು ಇಟ್ಟುಕೊಳ್ಳುತ್ತಾರೆ. ಅಪ್ರಧಾನವನ್ನು ಅನುಸರಿಸಿ ಪ್ರಧಾನವನ್ನು ಪರಿತ್ಯಾಗಮಾಡಿದ ಕಾರಣ ಆನಂದಮಯಾಧಿಕರಣದಲ್ಲಿ ಅವರೇ ವ್ಯುತ್ಪಾದನೆ ಮಾಡಿದ 'ಗುಣೇತ್ವನ್ಯಾಯಕಲ್ಪನಾ' ಎಂಬ ನ್ಯಾಯವನ್ನು ಅವರು ಜನ್ಮಾದ್ಯಧಿಕರಣದಲ್ಲಿಯೂ ಬಿಟ್ಟಿದ್ದಾರೆ.

**ಸ ಇದಂ ಸರ್ವಮಸೃಜತೇತಿ ಶ್ರುತಿಸಮಾಖ್ಯಯಾ ।**
**ಕರ್ತೃತ್ವಮಿಹ ಹೇತುತ್ವಂ ನೋಪಾದಾನತ್ವಮಿಷ್ಯತೇ ॥ ೧೭೧ ॥**

**ಅರ್ಥ–** ಸ ಇದಂ ಸರ್ವಮಸಜ್ರತೇತಿ ಶ್ರುತಿಸಮಾಖ್ಯಯಾ= ಸ ಇದಂ ಸರ್ವಮಸಜ್ರತ ಎಂಬ ಶ್ರುತಿಯ ಸಂವಾದ ಇರುವುದರಿಂದ, ಇಹ = ಜನ್ಮಾದಸ್ಯ ಯತಃ ಎಂಬ ಸೂತ್ರದಲ್ಲಿಯೂ ಕೂಡ, ಹೇತುತ್ವಂ = ಕಾರಣತ್ವವು, ಕರ್ತೃತ್ವಂ = ಬ್ರಹ್ಮನು ಜಗತ್ತಿಗೆ ಕರ್ತೃವಾಗಿದ್ದಾನೆಂಬುದಾಗಿ, ಇಷ್ಯತೇ = ಅಭಿಪ್ರೇತವಾಗಿದೆ. ಉಪಾದಾನತ್ವಂ = ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆಂಬುದು, ನ ಇಷ್ಯತೇ = ಅಭಿಪ್ರೇತವಾಗಿಲ್ಲ.

**ಅನುವಾದ–** 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಿದೆ. 'ಜನ್ಮಾದ್ಯಸ್ಯ ಯತಃ' ಎಂಬ ಬ್ರಹ್ಮಸೂತ್ರಕ್ಕೆ ಈ ಶ್ರುತಿಯು ಸಂವಾದಿಯಾಗಿರುವುದರಿಂದ ಶ್ರುತಿಯಲ್ಲಿ ಕರ್ತೃತ್ವವನ್ನೇ ಹೇಳುವುದರಿಂದ ಅದಕ್ಕೆ ಸಮಾನಾರ್ಥವಾದ ಯತೋವಾ ಎಂಬ ಶ್ರುತಿಯಲ್ಲಿಯೂ ಬ್ರಹ್ಮಸೂತ್ರದಲ್ಲಿಯೂ ಕರ್ತೃತ್ವವನ್ನೇ ಹೇಳಬೇಕು, ಉಪಾದಾನತ್ವವನ್ನು ಹೇಳಬಾರದು.

ವೇದೇ ವೇದಾನುಸರಣಂ ಪಾಣಿನೇಶ್ಚ ಸ್ಥಲೇ ಸ್ಥಲೇ ।
ಯತಶ್ಚ ಯತ ಇತ್ಯೇತತ್ಪದಂ ಸಾರ್ವವಿಭಕ್ತಿಕಂ ॥ ೧೭೨ ॥

**ಅರ್ಥ–** ವೇದೇ = ವೇದಗಳ ಅರ್ಥಗಳನ್ನು ವಿವರಣ ಮಾಡುವ ಸಂದರ್ಭದಲ್ಲಿ, ಪಾಣಿನೇಶ್ಚ = ಪಾಣಿನಿಗೆ ಸಂಬಂಧಿಸಿದಂತೆ ಕೂಡ, ಸ್ಥಲೇಸ್ಥಲೇ = ಪ್ರತಿಯೊಂದು ಸ್ಥಳದಲ್ಲಿ, ವೇದಾನುಸರಣಂ = ವೇದಗಳನ್ನು ಅನುಸರಿಸಿರುವುದು, ದೃಶ್ಯತೇ = ಕಂಡುಬರುತ್ತದೆ. ಚ = ಮತ್ತೂ ಕೂಡ, ಯತಃ = ಯಾವ ಕಾರಣದಿಂದ, ಯತ ಇತ್ಯೇತತ್ಪದಂ = ಯತಃ ಎಂಬ ಪದವು, ಸಾರ್ವವಿಭಕ್ತಿಕಂ = ಎಲ್ಲಾ ವಿಭಕ್ತಿಗಳ ಅರ್ಥಗಳನ್ನು ಹೇಳುತ್ತದೆಯೋ, ತತಃ = ಆ ಕಾರಣದಿಂದ, ಇಹ = ಜನ್ಮಾದ್ಯಸ್ಯ ಎಂಬ ಸೂತ್ರದಲ್ಲಿ ಮತ್ತು ಯತೋವಾ ಇಮಾನಿ ಎಂಬ ಶ್ರುತಿಯಲ್ಲಿ, ಹೇತುತ್ವಂ = ಕಾರಣತ್ವವು, ಕರ್ತೃತ್ವಂ = ಕರ್ತೃತ್ವ ಎಂಬುದಾಗಿ, ಇಷ್ಯತೇ = ಅಭಿಪ್ರೇತವಾಗಿದೆ.

**ಅನುವಾದ–** ಪಾಣಿನಿಯೂ ಸಹ ಪದೇ ಪದೇ ವೇದದ ವಿಷಯದಲ್ಲಿ ವೇದವನ್ನೇ ಅನುಸರಣೆಮಾಡುತ್ತಾನೆ ಮತ್ತು ಯತಃ ಎಂಬ ಪದದಲ್ಲಿ ಇರುವ 'ತಸಿ' ಪ್ರತ್ಯಯವು ಸಪ್ತವಿಭಕ್ತಿಗಳ ಅರ್ಥವನ್ನೂ ಹೊಂದಿದೆ (ಎಂದು ಹೇಳಿದ್ದಾರೆ).

**ಭಾವವಿಲಾಸಿನೀ–** ಪ್ರಾಗುಕ್ತದೂಷಣೇಷು ಕಿಂಚಿದ್ಬುದ್ಧಾವಾರೋಹಾಯ ಸಂಕಲಯ್ಯಾನುವದನ್ ದೂಷಣಾಂತರಂ ಚಾಹ – ಸ ಇತಿ ॥ ಅತ್ರ ಶ್ಲೋಕದ್ವಯಂ ಸ್ಪಷ್ಟಮ್ ॥ ೧೭೧-೧೭೨ ॥

**ವಿವರಣೆ–** ಹಿಂದೆ ವಿಸ್ತಾರವಾದ ರೀತಿಯಲ್ಲಿ ನಿರೂಪಣೆಮಾಡಿದ ದೋಷಗಳನ್ನು ಸ್ವಲ್ಪ ಸ್ವಲ್ಪ ಅಂಶದಿಂದ ಬುದ್ಧಿಯಲ್ಲಿ ನಿಲ್ಲಿಸುವುದಕ್ಕಾಗಿ ಎಲ್ಲವನ್ನೂ ಸಂಗ್ರಹಿಸಿ ಈ ಶ್ಲೋಕದಿಂದ ಪ್ರಾರಂಭಿಸಿ ಕೆಲವು ಶ್ಲೋಕಗಳವರೆಗೆ ಅನುವಾದ ಮಾಡುತ್ತಾರೆ.

ವೇದದ ಅರ್ಥವನ್ನು ಮಾಡುವಾಗ ವೇದದ ಮಾರ್ಗವನ್ನೇ ಅನುಸರಿಸಬೇಕು. ವೇದವು 'ಸ ಇದಂ ಸರ್ವಮಸೃಜತ' ಎಂದು ಬ್ರಹ್ಮನಿಗೆ ಜಗತ್‌ಕರ್ತೃತ್ವವನ್ನೇ ಹೇಳುತ್ತಿರುವಾಗ, ಉಪಾದಾನತ್ವವು ವಿರುದ್ಧವಾದುದರಿಂದ ಅದನ್ನು ಹೇಳಬಾರದು. ಯತಃ ಎಂಬಲ್ಲಿ ಇರುವ 'ತಸಿ' ಪ್ರತ್ಯಯವು ಏಳೂ ವಿಭಕ್ತಿಗಳ ಅರ್ಥವನ್ನೂ ಹೊಂದಿದೆ. ಆದ್ದರಿಂದ ಅದಕ್ಕೆ ತೃತೀಯಾ ವಿಭಕ್ತಿಯ ಕರ್ತೃತ್ವವನ್ನು ಅರ್ಥವೆಂದು ಹೇಳಿ ಬ್ರಹ್ಮನಿಗೆ

ಜಗತ್‌ಕರ್ತೃತ್ವವನ್ನೇ ಹೇಳುವುದು ಸಮಂಜಸವಾಗುತ್ತದೆ, ಹೊರತು ಉಪಾದಾನತ್ವವನ್ನು ಹೇಳುವುದು ಸಮಂಜಸವಾಗುವುದಿಲ್ಲ.

**ಯತೋಽರ್ಥಾನುಪಪತ್ತಿಶ್ಚ ಶಬ್ದಸ್ಯಾನುಪಪತ್ತಿತಃ ।**
**ಪ್ರಬಲಾ ಲಕ್ಷಣಾವೃತ್ತೇರ್ನ ಚೇದವಸರಃ ಕಥಂ ॥ ೧೭೩ ॥**

**ಅರ್ಥ–** ಚ = ಮತ್ತೂ ಕೂಡ, ಯತಃ = ಯಾವಕಾರಣದಿಂದ, ಶಬ್ದಾನುಪಪತ್ತಿತಃ = ಶಬ್ದವು ಹೊಂದಾಣಿಕೆ ಆಗದಿರುವುದಕ್ಕಿಂತ, ಅರ್ಥಾನುಪಪತ್ತಿಃ = ಅರ್ಥವು ಹೊಂದಾಣಿಕೆಯಾಗದಿರುವುದು, ಪ್ರಬಲಾ = ಪ್ರಬಲವಾಗಿದೆಯೋ, ತತ್ = ಆ ಕಾರಣದಿಂದ, ಇಹ = ಜನ್ಮಾದ್ಯಸ್ಯ ಎಂಬ ಸೂತ್ರದಲ್ಲಿ, ಹೇತುತ್ವಂ = ಕಾರಣತ್ವವು, ಕರ್ತೃತ್ವಂ = ಜಗತ್ತನ್ನು ಕುರಿತು ಕರ್ತೃತ್ವ ರೂಪವಾದುದು ಎಂಬುದಾಗಿ, ಇಷ್ಯತೇ = ಅಭಿಪ್ರೇತವಾಗಿದೆ. ನಚೇತ್ = ಇಲ್ಲದಿದ್ದರೆ, ಲಕ್ಷಣಾವೃತ್ತೇಃ = ಲಕ್ಷಣಾ ಎಂಬ ವೃತ್ತಿಗೆ, ಅವಸರಃ = ಅವಕಾಶವು, ಕಥಂ = ಹೇಗೆ, ಲಭ್ಯತೇ = ದೊರೆಯುತ್ತದೆ?

**ಅನುವಾದ–** ಶಬ್ದಾನುಪಪತ್ತಿಗಿಂತಲೂ, ಅರ್ಥಾನುಪಪತ್ತಿಯು ಪ್ರಬಲವಾದುದು. ಇಲ್ಲದಿದ್ದರೆ, ಲಕ್ಷಣಾವೃತ್ತಿಗೆ ಅವಕಾಶವೇ ದೊರೆಯುವುದಿಲ್ಲ.

**ಭಾವವಿಲಾಸಿನೀ–** ಯತಃ ಯಸ್ಮಾತ್ । ಶಬ್ದಸ್ಯಾನುಪಪತ್ತಿತಃ ಪಂಚಮ್ಯಂತಯತಃ ಶಬ್ದಸ್ಯಾನುಪಪತ್ತಿತಃ । ಅರ್ಥಾನುಪಪತ್ತಿಃ । ಜಾತ್ಯೇಕವಚನಮಿದಮ್ । ಬ್ರಹ್ಮರೂಪಾರ್ಥಾ-ಸಂಗ್ರಹೇ ಯಾ ಅನುಪಪತ್ತಯಃ ಪೂರ್ವೋಕ್ತಾಸ್ತಾ ಇತ್ಯರ್ಥಃ । ಪ್ರಬಲಾ ಅವಶ್ಯಂ ಪರಿಹಾರ್ಯೇತ್ಯರ್ಥಃ । ನಚೇತ್ ಅರ್ಥಾನುಪಪತ್ತೇಃ ಪ್ರಾಬಲ್ಯಂ ನಚೇತ್ । ಲಕ್ಷಣಾವೃತ್ತೇಃ ಪ್ರವಾಹಾದನ್ಯತ್ರಾನುಪಪನ್ನ ಗಂಗಾಪದೇನೈವ ಘೋಷಾವಾಸತ್ವರೂಪಾರ್ಥಘಟಕ-ತೀರರೂಪಾರ್ಥ ಪ್ರತಿಪಾದನ ರೂಪಲಕ್ಷಣಾವೃತ್ತೇರವಸರಃ ಕಥಂ ನ ಕಥಂಚಿತ್ । ಶಬ್ದಾನುಪಪತ್ತಿಂ ಸೋಢ್ವಾಪ್ಯರ್ಥಾನುಪಪತ್ತಿಪರಿಹಾರಾಯೈವ ಲಕ್ಷಣಾವೃತ್ತ್ಯಾಶ್ರಯಣಾತ್ ಅರ್ಥಾನುಪಪತ್ತಿರೇವ ಪ್ರಬಲೇತಿ ಭಾವಃ ॥ ೧೭೩ ॥

**ವಿವರಣೆ–** ಬ್ರಹ್ಮನಿಗೆ ವಿಕಾರವೇ ಇಲ್ಲವಾದ್ದರಿಂದ ಅವನಿಗೆ ಉಪಾದಾನತ್ವವನ್ನು ಹೇಳಿದರೆ, ಅರ್ಥವು ಅನುಪಪನ್ನವಾಗುತ್ತದೆ. 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಲ್ಲಿ 'ಜನಿ' ಧಾತು ಪ್ರಯೋಗವಿರುವುದರಿಂದ, 'ಜನಿ' ಧಾತು ಯೋಗವಿದ್ದಾಗ ತತ್‌ಸಹಪಠಿತವಾದುದಕ್ಕೆ, ಉಪಾದಾನತ್ವವನ್ನೇ ಹೇಳಬೇಕು. ಇಲ್ಲದಿದ್ದರೆ, ಶಬ್ದವು ಅನುಪಪನ್ನವಾಗುತ್ತದೆ. ಇದು ಶಬ್ದದ ಅನುಪಪತ್ತಿ. ಆದರೆ ಈ ಎರಡು ಅನುಪಪತ್ತಿಗಳಲ್ಲಿ ಅರ್ಥಾನುಪಪತ್ತಿ ಪ್ರಬಲವಾದುದು. ಆದ್ದರಿಂದ ಅರ್ಥಾನುಪಪತ್ತಿಯು ಬರದಂತೆ ಶಬ್ದಕ್ಕೆ ಅರ್ಥವನ್ನು ಮಾಡಬೇಕೇ ಹೊರತು, ಶಬ್ದಾನುಪಪತ್ತಿಯು ಬರದಂತೆ ಅರ್ಥವನ್ನೇ ವ್ಯತ್ಯಾಸ ಮಾಡಲು ಹೋಗಬಾರದು.

ಆದ್ದರಿಂದ ಇಲ್ಲಿ ಬ್ರಹ್ಮನಿಗೆ ಕರ್ತೃತ್ವವನ್ನೇ ಹೇಳಬೇಕು. ಉದಾಹರಣೆಗೆ, 'ಗಂಗಾಯಾಂ ಘೋಷಃ' ಎಂಬ ಪ್ರಯೋಗವಿದೆ. ಗಂಗಾ ಎಂಬ ಶಬ್ದಕ್ಕೆ ಪ್ರವಾಹವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಿದರೆ, ಶಬ್ದಾನುಪಪತ್ತಿಯು ಉಂಟಾಗುತ್ತದೆ. ಆದರೆ, ಘೋಷಕ್ಕೆ ಪ್ರವಾಹಾಧಾರತ್ವವನ್ನು ಹೇಳಿದರೆ, ಅದು ಅಸಂಭವವಿಯಾದುದರಿಂದ ಅರ್ಥಾನುಪಪತ್ತಿಯು ಉಂಟಾಗುತ್ತದೆ. ಆದ್ದರಿಂದ ಎಲ್ಲಾ ಶಾಸ್ತ್ರಜ್ಞರೂ ಅರ್ಥಾನುಪಪತ್ತಿರೂಪವಾದ ಪ್ರಬಲವಾದ ಕಾರಣದಿಂದ ಗಂಗಾ ಎಂಬ ಶಬ್ದಕ್ಕೆ ಪ್ರವಾಹವನ್ನು ಬಿಟ್ಟು ತೀರ ಎಂಬ ಅರ್ಥವನ್ನು ಮಾಡುತ್ತಾರೆಯೇ ಹೊರತಾಗಿ, ಘೋಷಕ್ಕೆ ಪ್ರವಾಹಾಧಾರತ್ವವನ್ನು ಹೇಳುವುದಿಲ್ಲ. ಹಾಗೆಯೇ ಪ್ರಕೃತಸ್ಥಳದಲ್ಲಿಯೂ ಸಹ 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರಕ್ಕೆ ಅರ್ಥಾಂತರವನ್ನು ಮಾಡಿ ಬ್ರಹ್ಮನಿಗೆ ಕರ್ತೃತ್ವವನ್ನು ಹೇಳಬೇಕೇ ಹೊರತು ಉಪಾದಾನತ್ವವನ್ನು ಹೇಳಬಾರದು.

ಬ್ರಹ್ಮಜಿಜ್ಞಾಸಯಾ ಪ್ರಾಪ್ತಂ ಸುತಂ ಪ್ರತಿ ಪಿತಾ ಕುತಃ ।
ಅನ್ಯಗಂ ಲಕ್ಷಣಂ ಬ್ರೂಯಾದ್ ಬೋಧ್ಯೇ ಬ್ರಹ್ಮಣ್ಯಸಂಭವಿ ॥ ೧೭೪ ॥

**ಅರ್ಥ–** ಬ್ರಹ್ಮಜಿಜ್ಞಾಸಯಾ= ಬ್ರಹ್ಮನ ಜ್ಞಾನಪ್ರಾಪ್ತಿಗಾಗಿ, ಪ್ರಾಪ್ತಂ = ತನ್ನ ಬಳಿಗೆ ಬಂದ, ಸುತಂಪ್ರತಿ = ಮಗನಾದ ಭೃಗುಋಷಿಯನ್ನು ಕುರಿತು, ಪಿತಾ = ತಂದೆಯಾದ ವರುಣನು, ಬೋಧ್ಯೇ = ಬೋಧಿಸಲ್ಪಡುವ, ಬ್ರಹ್ಮಣಿ= ಬ್ರಹ್ಮನಲ್ಲಿ, ಅಸಂಭವಿ = ಅಸಂಭವ ದೋಷವುಳ್ಳ, ಅನ್ಯಗಂ = ಬೇರೆ ಕಡೆಯಲ್ಲಿರುವಂತಹ, ಲಕ್ಷಣಂ = ಲಕ್ಷಣವನ್ನು, ಕುತಃ = ಯಾವ ಕಾರಣದಿಂದ, ಬ್ರೂಯತ್ = ಹೇಳುತ್ತಾನೆ?

**ಅನುವಾದ–** ಬ್ರಹ್ಮಜಿಜ್ಞಾಸೆಗಾಗಿ ಬಂದ ಪುತ್ರನನ್ನು ಕುರಿತು ತಂದೆಯಾದವನು ಬೋಧ್ಯನಾದ ಬ್ರಹ್ಮನಲ್ಲಿ ಇಲ್ಲದಿರುವಂತಹ, ಅನ್ಯತ್ರದಲ್ಲಿ ಇರುವಂತಹ ಲಕ್ಷಣವನ್ನು ಏಕೆ ಹೇಳುತ್ತಾನೆ?

**ಭಾವವಿಲಾಸಿನೀ–** ಉಪಕ್ರಮಾನನುಸಾರಿತ್ವಾಚ್ಚ ನಾಸ್ಯಾಃ ಶ್ರುತೇರುಪಾದಾನತ್ವಮರ್ಥ ಇತ್ಯಾಹ –ಬ್ರಹ್ಮೇತಿ ॥ ಅಧೀಹಿ ಭಗವೋ ಬ್ರಹ್ಮೇತಿ ಬ್ರಹ್ಮಜ್ಞಾನೇಚ್ಛಯಾ । ಸುತಂ ಭೃಗುಂ ಪ್ರತಿ । ಪಿತಾ ವರುಣಃ । ನಾತ್ರ ವಿಪ್ರಲಂಭಾವಸರ ಇತಿ ಸೂಚನಾಯ ಪಿತೇತ್ಯಾದಿಪದಮ್ । ಅತ ಏವ ಶ್ರುತಿರಪಿ ಯಥಾವಸ್ಥಿತತತ್ವಮೇವೋತ್ತರತ್ರ ಕಥ್ಯತ ಇತಿ ಸೂಚನಾಯ ಭೃಗುರ್ವೈವಾರುಣಿಃ । ವರುಣಂ ಪಿತರಮಿತ್ಯಾಹ । ವರುಣಸ್ಯಾಪತ್ಯಂ ಹಿ ವಾರುಣಿಃ । ಬೋಧ್ಯೇ ಬ್ರಹ್ಮಣ್ಯಸಂಭವಿ ಸರ್ವಥಾಽವರ್ತಮಾನಮ್ । ಅನ್ಯಗಮ್ ಅಜ್ಞಾನ ಏವ ವಿದ್ಯಮಾನಮ್ । ಲಕ್ಷಣಂ ಜಗದುಪಾದಾನತ್ವರೂಪಂ ಕುತಃ ಕಾರಣಾದ್ವದೇತ್ । ನ ಕುತೋಽಪಿ। ಭಗವ ಇತಿ ಸಂಬೋಧಿತತ್ವೇನ ವಿಪರೀತಾರ್ಥಕಥನಹೇತುಭೂತಾಜ್ಞಾನಕರಣಾಪಾಟವಾದಿದೋಷಾಭಾವಸ್ಯ ಸೂಚಿತತ್ವಾತ್। ಪಿತೃಪುತ್ರತ್ವೋಕ್ತ್ಯಾ, ಅಧೀಹೀತಿ ವೇದಾಧ್ಯಯನಸ್ಯೈವ ಪ್ರಾರ್ಥಿತತ್ವೇನ ಯತ್ಕಿಂಚಿಲ್ಲೋಕ-

ವಾರ್ತಾದಿಕಂ ನ ಕಥಯೇತಿ ಅಧ್ಯಾಪಯೇತಿ ವಕ್ತವ್ಯೇಽಧೀಹೀತಿ ಕಥನೇನ ತ್ವಯಾ ಯಥಾ ಗುರುಮುಖಾತ್ಪಠಿತಂ ತಥೈವ ಕಥಯೇತಿ ನಿಯತಾತ್ಮನೇಪದಿನಃ ಪರಸ್ಮೈಪದಿತ್ವಕರಣೇನ ಚ ಮಮ ಯಥಾಮೋಕ್ಷಾದಿ ಫಲಂ ಭವತಿ ತಥೈವ ಕಥಯೇತಿ ಸೂಚನಾಯಾವಿಪ್ರಲಿಪ್ಸಾಖ್ಯ ದೋಷಾಭಾವಸ್ಯೋಕ್ತತ್ವಾತ್ । ಬ್ರಹ್ಮಪದೇನ ಬ್ರಹ್ಮಣೋ ಗುಣಸಂಪೂರ್ಣತ್ವಕಥನೇನ ತನ್ನಿಷ್ಠಲಕ್ಷಣದಾರಿದ್ರ್ಯಾಭಾವಸ್ಯ ಚ ಸೂಚಿತತ್ವಾತ್ ಯಥಾವಸ್ಥಿತಬ್ರಹ್ಮಲಕ್ಷಣಮೇವಪೃಷ್ಟಮ್ । ತಸ್ಮಾ ಏತತ್ ಪ್ರೋವಾಚೇತ್ಯತ್ರ ಪ್ರೇತ್ಯುಪಸರ್ಗಬಲಾತ್ ಗುರುಣಾ ಚ ಕಥಿತಂ ನ ತ್ವತಿವ್ಯಾಪ್ತಮಸಂಭವಿಚ ಲಕ್ಷಣಂ ಪೃಷ್ಟಮುಕ್ತಂ ವೇತಿ ಭಾವಃ । ಲಕ್ಷಣದೋಷತ್ರಯಮಪಿ ಸೂಚಯಿತುಂ ಮೂಲೇಪ್ಯನ್ಯಗಮಸಂಭವೀತ್ಯುಕ್ತಂ । ಸಂಪದಸ್ಯ ಸಮ್ಯಕ್ ಭವನಂ ಚೇತಿ ಪ್ರತಿಯೋಗಿಪಕ್ಷಪಾತೇಽವ್ಯಾಪ್ತಿಬೋಧಕತ್ವಾತ್ । ಭವನಂ ಸಮ್ಯಕ್ ಸರ್ವಥಾ ನೇತ್ಯಭಾವ ಪಕ್ಷಪಾತೇಽಸಂಭವವಾಚಿತ್ವಾಚ್ಚ ॥ ೧೭೪ ॥

**ವಿವರಣೆ**— ಉಪಾದಾನತ್ವರೂಪವಾದ ಅರ್ಥವನ್ನು ಹೇಳಿದರೆ, ಅದು ಪ್ರಕರಣಕ್ಕೆ ಅನನುಗುಣವಾಗುವ ಕಾರಣದಿಂದಲೂ ಸಹ ಹಾಗೆ ಹೇಳಬಾರದು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ವರುಣನು ತಂದೆ, ಭೃಗುಋಷಿಗಳು ಪುತ್ರರು. 'ಅಧೀಹಿ ಭಗವೋ ಬ್ರಹ್ಮ' (ನನಗೆ ಬ್ರಹ್ಮನನ್ನು ಉಪದೇಶಮಾಡಿ) ಎಂದು ಭೃಗುಋಷಿಗಳು ವರುಣನನ್ನು ಸಮೀಪಿಸಿದ್ದಾರೆ. ಇಲ್ಲಿ ತಂದೆಯು ಮಗನಿಗೆ ಉಪದೇಶ ಮಾಡುತ್ತಿರುವುದರಿಂದ ವಿಪ್ರಲಂಭದೋಷವು ಇಲ್ಲವೆಂದು ತಿಳಿಯುತ್ತದೆ. ಅದನ್ನು ತಿಳಿಸುವುದಕ್ಕಾಗಿಯೇ ಶ್ರುತಿಯೇ 'ಭೃಗುರ್ವೈ ವಾರುಣಿಃ, ವರುಣಂ ಪಿತರಮುಪಸಸಾರ' ಎಂಬ ಪೀಠಿಕೆಯನ್ನು ಹೇಳಿದೆ. ವರುಣನನ್ನು ಕುರಿತು ಭೃಗುವು 'ಅಧೀಹಿ ಭಗವೋ ಬ್ರಹ್ಮ' ಎಂದು ಪ್ರಾರ್ಥನೆ ಮಾಡುತ್ತಾನೆ. ವರುಣನನ್ನು ಭಗವಃ ಎಂದು ಸಂಬೋಧನೆ ಮಾಡಿದ್ದರಿಂದ ಅವನಿಗೆ ವಿಪರೀತಜ್ಞಾನವಿಲ್ಲವೆಂದೂ, ಕರಣದೋಷಗಳು ಇಲ್ಲವೆಂದೂ, ಉಪದೇಶ ಮಾಡಲು ಬೇಕಾದ ತತ್ತ್ವಜ್ಞಾನವಿದೆಯೆಂದೂ ತಿಳಿಯುತ್ತದೆ. ಅಧ್ಯಾಪಯ ಎಂದು ಹೇಳಬೇಕಾಗಿದ್ದ ಸ್ಥಳದಲ್ಲಿ ಅಧೀಹಿ ಎಂದು ಹೇಳಿದುದರಿಂದ ನೀನು ಗುರುಮುಖದಿಂದ ಹೇಗೆ ಕೇಳಿದ್ದೀಯೋ ಹಾಗೆಯೇ ತಿಳಿಸು ಎಂಬ ಅರ್ಥವು ದೊರೆತು ವರುಣನು ಹೇಳುವ ವಿಷಯಗಳು ಅನೇಕ ಜ್ಞಾನಿಗಳ ಉಪದೇಶಕ್ಕೆ ಸಂವಾದಿಯಾಗಿದೆಯೆಂದು ತಿಳಿಯುತ್ತದೆ. ಅಧೀಹಿ ಎಂಬ ಪದವು ಆತ್ಮನೇ ಪದದಲ್ಲಿ ಪ್ರಯೋಗವನ್ನು ಹೊಂದಬೇಕಾಗಿದ್ದಿತು, ಅದನ್ನು ಬಿಟ್ಟು ಪರಸ್ಮೈ ಪದದಲ್ಲಿ ಪ್ರಯೋಗಿಸಿದ್ದಾರೆ. ಅಧ್ಯಯನದ ಫಲವು ಪರಗಾಮಿಯಾದರೆ, ಆಗ ಪರಸ್ಮೈ ಪದದ ಪ್ರಯೋಗ. ಹಾಗೆ ಇಲ್ಲಿ ವರುಣನ ಉಪದೇಶದ ಫಲವು ಭೃಗುವಿನ ಮೋಕ್ಷರೂಪ ಫಲಕ್ಕಾಗಿ ಇದೆಯೆಂದು ಸೂಚನೆ ದೊರೆಯುವುದರಿಂದ ಮೋಕ್ಷಕ್ಕಾಗಿ ಮಾಡುವ ಉಪದೇಶವು ಯಥಾರ್ಥವಾಗಿಯೇ ಇರುತ್ತದೆ ಎಂದು ತಿಳಿದುಬರುತ್ತದೆ. ಇಂತಹ ಸನ್ನಿವೇಶದಲ್ಲಿ ಜಗಜ್ಜನ್ಮಾದಿಕಾರಣತ್ವವನ್ನು ಲಕ್ಷಣ ಎಂದು ಹೇಳಿ ಅದ್ವೈತಿಗಳು

ಅಂಗೀಕರಿಸುವಂತೆ ಅದು ಬ್ರಹ್ಮನಲ್ಲಿ ಇಲ್ಲ, ಅಜ್ಞಾನದಲ್ಲಿ ಇದೆ ಎಂದು ಅಂಗೀಕರಿಸಿದರೆ, ಲಕ್ಷಣಕ್ಕೆ ಅತಿವ್ಯಾಪ್ತಿ, ಅವ್ಯಾಪ್ತಿ ಮತ್ತು ಅಸಂಭವದೋಷಗಳು ಬರುತ್ತದೆ. ಬ್ರಹ್ಮನನ್ನು ತಿಳಿಯಲು ಬಂದ ಮಗನನ್ನು ಕುರಿತು ಇಂತಹ ದುಷ್ಟವಾದ ಲಕ್ಷಣವನ್ನು ವರುಣನು ಹೇಗೆ ಹೇಳುತ್ತಾನೆ? ಅಸಂಭವಿ ಎಂಬ ಪದಕ್ಕೆ ಅವ್ಯಾಪ್ತಿದೋಷವುಳ್ಳದ್ದು ಮತ್ತು ಅಸಂಭವದೋಷವುಳ್ಳದ್ದು ಎಂದು ಎರಡೂ ಅರ್ಥಗಳು ದೊರೆಯುತ್ತವೆ. ಸಂ ಎಂಬ ಉಪಸರ್ಗದ ಬಲದಿಂದ ಲಕ್ಷ್ಯದಲ್ಲಿ ಚೆನ್ನಾಗಿ ಇಲ್ಲ ಎಂದು ಅರ್ಥವನ್ನು ಮಾಡಿದರೆ ಅವ್ಯಾಪ್ತಿದೋಷವೂ, ಲಕ್ಷ್ಯದಲ್ಲಿ ಸರ್ವಥಾ ಇಲ್ಲ ಎಂದು ಅರ್ಥವನ್ನು ಮಾಡಿದರೆ ಅಸಂಭವದೋಷವೂ ದೊರೆಯುತ್ತದೆ.

**ಸ್ವಗೃಹೇ ದೀಪಿಕಾಭಾವೇ ಪ್ರಾರ್ಥಯಂತೇಽನ್ಯದೀಪಿಕಾಂ ।**
**ಸತಿ ಬ್ರಹ್ಮಸ್ಥಕರ್ತೃತ್ವೇ ತಟಸ್ಥಂ ಸ ಕುತೋ ವದೇತ್ ॥ ೧೭೫ ॥**

**ಅರ್ಥ–** ಜನಾಃ = ಜನರು, ಸ್ವಗೃಹೇ = ತಮ್ಮ ಮನೆಯಲ್ಲಿ, ದೀಪಿಕಾಭಾವೇ = ದೀಪವಿಲ್ಲದಿದ್ದರೆ, ಅನ್ಯದೀಪಿಕಾಂ = ಬೇರೊಬ್ಬರ ಮನೆಯಲ್ಲಿರುವ ದೀಪವನ್ನು, ಪ್ರಾರ್ಥಯಂತೇ = ಯಾಚನೆ ಮಾಡಿ ತರುತ್ತಾರೆ. ಬ್ರಹ್ಮಸ್ಥ ಕರ್ತೃತ್ವೇ ಸತಿ = ಬ್ರಹ್ಮನಲ್ಲಿ ಜಗತ್ತನ್ನು ಕುರಿತು ಕರ್ತೃತ್ವರೂಪವಾದ ಕಾರಣತ್ವವು ಇರುವಾಗ, ಸಃ = ಆ ವರುಣನು, ತಟಸ್ಥಲಕ್ಷಣಂ = ಬ್ರಹ್ಮನಿಗೆ ತಟಸ್ಥವಾದ ಲಕ್ಷಣವನ್ನು, ಕುತಃ = ಯಾವ ಕಾರಣದಿಂದ, ವದೇತ್ = ಹೇಳುತ್ತಾನೆ?

**ಅನುವಾದ–** ತನ್ನ ಮನೆಯಲ್ಲಿ ದೀಪವಿಲ್ಲದಿದ್ದರೆ, ಇನ್ನೊಬ್ಬರ ಮನೆಯಿಂದ ದೀಪವನ್ನು ಬೇಡಿತರುತ್ತಾರೆ. ಬ್ರಹ್ಮನಲ್ಲೇ ಜಗಜ್ಜನ್ಮಾದಿಕರ್ತೃತ್ವವಿರುವಾಗ ತಟಸ್ಥವಾದ ಆ ಲಕ್ಷಣವನ್ನು ವರುಣನು ಏಕೆ ಹೇಳಬೇಕು?

**ಭಾವವಿಲಾಸಿನೀ–** ಸ್ವನಿಷ್ಠಲಕ್ಷಣಸದ್ಭಾವೇ ತಟಸ್ಥಲಕ್ಷಣಕರಣಮನ್ಯಾಯ್ಯಮಿತ್ಯೇ ತತ್ಸದೃಷ್ಟಾಂತಮಾಹ – **ಸ್ವಗೃಹ ಇತಿ** ॥ ೧೭೫ ॥

**ವಿವರಣೆ–** ಬ್ರಹ್ಮನಲ್ಲಿ ಜಗಜ್ಜನ್ಮಾದಿಕರ್ತೃತ್ವವಿದ್ದರೂ ಅದ್ವೈತಿಗಳು ಅದನ್ನು ಒಪ್ಪದೇ ಅದನ್ನು ತಟಸ್ಥಲಕ್ಷಣ ಎಂದು ಒಪ್ಪುತ್ತಾರೆ. ತಟಸ್ಥ ಎಂದರೆ ಬ್ರಹ್ಮನಲ್ಲಿ ಇಲ್ಲದೇ ಅಜ್ಞಾನದಲ್ಲಿ ಇರುವ ಆ ಧರ್ಮವನ್ನು ಬ್ರಹ್ಮನ ಲಕ್ಷಣ ಎಂದು ಹೇಳುವುದು. ಆದರೆ, ಇದು ಸರಿಯಲ್ಲ. ಬ್ರಹ್ಮನಲ್ಲಿ ಜಗತ್‌ಕರ್ತೃತ್ವವಿಲ್ಲವಿದ್ದರೆ, ಆಗ ಅಜ್ಞಾನದಿಂದ ಆ ಧರ್ಮವನ್ನು ಎರವಲಾಗಿ ಪಡೆದು ಬ್ರಹ್ಮನಲ್ಲಿ ಹೇಳುವ ಅವಕಾಶವಿದೆ. ಬ್ರಹ್ಮನಲ್ಲಿಯೇ ಆ ಧರ್ಮವಿರುವಾಗ, ಹಾಗೆ ಎರವಲಾಗಿ ಪಡೆಯುವ ಅವಶ್ಯಕತೆಯೇ ಇಲ್ಲ ಎನ್ನುವ ವಿಷಯದಲ್ಲಿ ದೀಪದ ಒಂದು ವ್ಯತಿರೇಕ ದೃಷ್ಟಾಂತವನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

**ಮೋಕ್ಷೋಪಯೋಗಿಜ್ಞಾನಾಯ ಸಾಕ್ಷಾನ್ಮೋಕ್ಷವಿರೋಧಿನಿ ।**
**ಅಜ್ಞಾನೇ ಸ್ಥಿತದುರ್ಧರ್ಮಂ ಕೋ ಜ್ಞಾನಪ್ರಸ್ತುತೋ ವದೇತ್ ॥ ೧೭೬ ॥**

**ಅರ್ಥ–** ಜ್ಞಾನಪ್ರಸ್ತುತಃ = ಇನ್ನೊಬ್ಬರಿಗೆ ಜ್ಞಾನವನ್ನು ಕೊಡುವುದಕ್ಕಾಗಿ ಹೊರಟಂತಹ, ಕಃ = ಯಾವ ಮನುಷ್ಯನು, ಮೋಕ್ಷೋಪಯೋಗಿ ಜ್ಞಾನಾಯ = ಮೋಕ್ಷಕ್ಕೆ ಉಪಯುಕ್ತವಾದ ತತ್ತ್ವಜ್ಞಾನಕ್ಕಾಗಿ, ಸಾಕ್ಷಾತ್ = ನೇರವಾಗಿ, ಮೋಕ್ಷವಿರೋಧಿನಿ = ಮೋಕ್ಷಪ್ರಾಪ್ತಿಗೆ ಪ್ರತಿಬಂಧಕವಾದ, ಅಜ್ಞಾನೇ = ಅಜ್ಞಾನದಲ್ಲಿ, ಸ್ಥಿತ ದುರ್ಧರ್ಮಂ = ಇರುವಂತಹ ಕೆಟ್ಟಧರ್ಮವನ್ನು, ವದೇತ್ = ಹೇಳುತ್ತಾನೆ?

**ಅನುವಾದ–** ಮೋಕ್ಷೋಪಯೋಗಿಯಾದ ಜ್ಞಾನವನ್ನು ಉಪದೇಶ ಮಾಡಲು ಹೊರಟ ವರುಣನು ಮೋಕ್ಷವಿರೋಧಿಯಾದ ಅಜ್ಞಾನದಲ್ಲಿರುವ ಒಂದು ದುರ್ಧರ್ಮವನ್ನು ಏಕೆ ಹೇಳುತ್ತಾನೆ?

**ಭಾವವಿಲಾಸಿನೀ– ನಿಮಿತ್ತಾಂತರಮಪ್ಯಾಹ – ಮೋಕ್ಷೋಪಯೋಗೀತಿ ॥ ೧೭೬ ॥**

**ವಿವರಣೆ–** ಈ ಶ್ಲೋಕದಲ್ಲಿ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಧರ್ಮವೇ ಎಂದು ಹೇಳುವುದಕ್ಕೆ ನಿಮಿತ್ತಾಂತರವನ್ನು ಹೇಳುತ್ತಾರೆ. ಪುತ್ರನ ಮೋಕ್ಷಕ್ಕಾಗಿ ವರುಣನು ಉಪದೇಶ ಮಾಡುತ್ತಿದ್ದಾನೆ. ಬ್ರಹ್ಮಜ್ಞಾನದಿಂದಲೇ ಮೋಕ್ಷ ಎಂಬುದು ಸರ್ವಸಮ್ಮತ. ಆದ್ದರಿಂದ ಬ್ರಹ್ಮನ ಲಕ್ಷಣವನ್ನು ಹೇಳಿ ಬ್ರಹ್ಮಜ್ಞಾನವನ್ನು ಉತ್ಪಾದನೆ ಮಾಡಬೇಕೇ ಹೊರತು ಅವಿದ್ಯೆಯ ಲಕ್ಷಣವನ್ನು ಹೇಳಿ ಮಾಡಬಾರದು. ತಂದೆಯಾದವನೂ ಮತ್ತು ತತ್ವಾಭಿಮಾನಿದೇವತೆಯಾಗಿ ಮಹಾಜ್ಞಾನಿಯಾದವನೂ ಆದ ವರುಣನು, ಮಗನ ಮೋಕ್ಷೋಪಯೋಗಿ ಜ್ಞಾನದ ವಿಷಯದಲ್ಲಿ ಪ್ರಸಕ್ತನಾಗಿ, ಅದಕ್ಕೆ ವಿರುದ್ಧವಾದುದನ್ನು ಹೇಗೆ ಹೇಳಲು ಸಾಧ್ಯ? ಜಗಜ್ಜನ್ಮಾದಿಕಾರಣತ್ವವು ಅವಿದ್ಯೆಯಲ್ಲಿದ್ದರೆ, ಅದು ದುರ್ಧರ್ಮವೇ ಆಗುತ್ತದೆ. ಏಕೆಂದರೆ ಅವಿದ್ಯೆಯು ಮಿಥ್ಯೆಯಾದ್ದರಿಂದ ಅವಿದ್ಯಾಧರ್ಮವೂ ಸಹ ಮಿಥ್ಯೆಯೇ ಆಗುತ್ತದೆ. ಆದ್ದರಿಂದ ಹಾಗೆ ಹೇಳಬಾರದು ಎಂದು ಅಭಿಪ್ರಾಯ.

**ಆನಂದಾದೇವ ವಿಜ್ಞಾನಾದೇವೇತಿ ಯಮಸೌ ಭೃಗುಃ ।**
**ಬ್ರಹ್ಮ ಪಶ್ಯನ್ನಿರಣಯತ್ ಕಥಂ ಸೋಽನ್ಯಂ ಗತೋ ವದ ॥ ೧೭೭ ॥**

**ಅರ್ಥ–** ಅಸೌ = ಈ, ಭೃಗುಃ = ಭೃಗುಋಷಿಯು, ಆನಂದಾದೇವ ವಿಜ್ಞಾನಾದೇವ ಇತಿ = ಈ ಶ್ರುತಿಗಳ ಮೂಲಕ, ಬ್ರಹ್ಮ = ಪರಬ್ರಹ್ಮನನ್ನು, ಪಶ್ಯನ್ = ನೋಡುತ್ತಾ, ಯಂ ಧರ್ಮಮ್ = ಯಾವ ಜಗತ್ಕಾರಣತ್ವರೂಪ ಧರ್ಮವನ್ನು, ನಿರಣಯತ್= ನಿರ್ಧಾರ ಮಾಡಿದನೋ, ಸಃ = ಆ, ಧರ್ಮಃ = ಜಗತ್ಕಾರಣತ್ವ ಎಂಬ ಧರ್ಮವು, ಅನ್ಯಂ= ಬ್ರಹ್ಮ

ಅಂಗೀಕರಿಸುವಂತೆ ಅದು ಬ್ರಹ್ಮನಲ್ಲಿ ಇಲ್ಲ, ಅಜ್ಞಾನದಲ್ಲಿ ಇದೆ ಎಂದು ಅಂಗೀಕರಿಸಿದರೆ, ಲಕ್ಷಣಕ್ಕೆ ಅತಿವ್ಯಾಪ್ತಿ, ಅವ್ಯಾಪ್ತಿ ಮತ್ತು ಅಸಂಭವದೋಷಗಳು ಬರುತ್ತದೆ. ಬ್ರಹ್ಮನನ್ನು ತಿಳಿಯಲು ಬಂದ ಮಗನನ್ನು ಕುರಿತು ಇಂತಹ ದುಷ್ಟವಾದ ಲಕ್ಷಣವನ್ನು ವರುಣನು ಹೇಗೆ ಹೇಳುತ್ತಾನೆ? ಅಸಂಭವಿ ಎಂಬ ಪದಕ್ಕೆ ಅವ್ಯಾಪ್ತಿದೋಷವುಳ್ಳದ್ದು ಮತ್ತು ಅಸಂಭವದೋಷವುಳ್ಳದ್ದು ಎಂದು ಎರಡೂ ಅರ್ಥಗಳು ದೊರೆಯುತ್ತವೆ. ಸಂ ಎಂಬ ಉಪಸರ್ಗದ ಬಲದಿಂದ ಲಕ್ಷ್ಯದಲ್ಲಿ ಚೆನ್ನಾಗಿ ಇಲ್ಲ ಎಂದು ಅರ್ಥವನ್ನು ಮಾಡಿದರೆ ಅವ್ಯಾಪ್ತಿದೋಷವೂ, ಲಕ್ಷ್ಯದಲ್ಲಿ ಸರ್ವಥಾ ಇಲ್ಲ ಎಂದು ಅರ್ಥವನ್ನು ಮಾಡಿದರೆ ಅಸಂಭವದೋಷವೂ ದೊರೆಯುತ್ತದೆ.

**ಸ್ವಗೃಹೇ ದೀಪಿಕಾಭಾವೇ ಪ್ರಾರ್ಥಯಂತೇಽನ್ಯದೀಪಿಕಾಂ ।**
**ಸತಿ ಬ್ರಹ್ಮಸ್ಥಕರ್ತೃತ್ವೇ ತಟಸ್ಥಂ ಸ ಕುತೋ ವದೇತ್ ॥ ೧೭೫ ॥**

**ಅರ್ಥ–** ಜನಾಃ = ಜನರು, ಸ್ವಗೃಹೇ = ತಮ್ಮ ಮನೆಯಲ್ಲಿ, ದೀಪಿಕಾಭಾವೇ = ದೀಪವಿಲ್ಲದಿದ್ದರೆ, ಅನ್ಯದೀಪಿಕಾಂ = ಬೇರೊಬ್ಬರ ಮನೆಯಲ್ಲಿರುವ ದೀಪವನ್ನು, ಪ್ರಾರ್ಥಯಂತೇ = ಯಾಚನೆ ಮಾಡಿ ತರುತ್ತಾರೆ. ಬ್ರಹ್ಮಸ್ಥ ಕರ್ತೃತ್ವೇ ಸತಿ = ಬ್ರಹ್ಮನಲ್ಲಿ ಜಗತ್ತನ್ನು ಕುರಿತು ಕರ್ತೃತ್ವರೂಪವಾದ ಕಾರಣತ್ವವು ಇರುವಾಗ, ಸಃ = ಆ ವರುಣನು, ತಟಸ್ಥಲಕ್ಷಣಂ = ಬ್ರಹ್ಮನಿಗೆ ತಟಸ್ಥವಾದ ಲಕ್ಷಣವನ್ನು, ಕುತಃ = ಯಾವ ಕಾರಣದಿಂದ, ವದೇತ್ = ಹೇಳುತ್ತಾನೆ?

**ಅನುವಾದ–** ತನ್ನ ಮನೆಯಲ್ಲಿ ದೀಪವಿಲ್ಲದಿದ್ದರೆ, ಇನ್ನೊಬ್ಬರ ಮನೆಯಿಂದ ದೀಪವನ್ನು ಬೇಡಿತರುತ್ತಾರೆ. ಬ್ರಹ್ಮನಲ್ಲೇ ಜಗಜ್ಜನ್ಮಾದಿಕರ್ತೃತ್ವವಿರುವಾಗ ತಟಸ್ಥವಾದ ಆ ಲಕ್ಷಣವನ್ನು ವರುಣನು ಏಕೆ ಹೇಳಬೇಕು?

**ಭಾವವಿಲಾಸಿನೀ–** ಸ್ವನಿಷ್ಠಲಕ್ಷಣಸದ್ಭಾವೇ ತಟಸ್ಥಲಕ್ಷಣಕರಣಮನ್ಯಾಯ್ಯಮಿತ್ಯೇತತ್ಸದೃಷ್ಟಾಂತಮಾಹ – **ಸ್ವಗೃಹ ಇತಿ** ॥ ೧೭೫ ॥

**ವಿವರಣೆ–** ಬ್ರಹ್ಮನಲ್ಲಿ ಜಗಜ್ಜನ್ಮಾದಿಕರ್ತೃತ್ವವಿದ್ದರೂ ಅದ್ವೈತಿಗಳು ಅದನ್ನು ಒಪ್ಪದೇ ಅದನ್ನು ತಟಸ್ಥಲಕ್ಷಣ ಎಂದು ಒಪ್ಪುತ್ತಾರೆ. ತಟಸ್ಥ ಎಂದರೆ ಬ್ರಹ್ಮನಲ್ಲಿ ಇಲ್ಲದೇ ಅಜ್ಞಾನದಲ್ಲಿ ಇರುವ ಆ ಧರ್ಮವನ್ನು ಬ್ರಹ್ಮನ ಲಕ್ಷಣ ಎಂದು ಹೇಳುವುದು. ಆದರೆ, ಇದು ಸರಿಯಲ್ಲ. ಬ್ರಹ್ಮನಲ್ಲಿ ಜಗತ್‌ಕರ್ತೃತ್ವವಿಲ್ಲವಿದ್ದರೆ, ಆಗ ಅಜ್ಞಾನದಿಂದ ಆ ಧರ್ಮವನ್ನು ಎರವಲಾಗಿ ಪಡೆದು ಬ್ರಹ್ಮನಲ್ಲಿ ಹೇಳುವ ಅವಕಾಶವಿದೆ. ಬ್ರಹ್ಮನಲ್ಲಿಯೇ ಆ ಧರ್ಮವಿರುವಾಗ, ಹಾಗೆ ಎರವಲಾಗಿ ಪಡೆಯುವ ಅವಶ್ಯಕತೆಯೇ ಇಲ್ಲ ಎನ್ನುವ ವಿಷಯದಲ್ಲಿ ದೀಪದ ಒಂದು ವ್ಯತಿರೇಕ ದೃಷ್ಟಾಂತವನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

**ಮೋಕ್ಷೋಪಯೋಗಿಜ್ಞಾನಾಯ ಸಾಕ್ಷಾನ್ಮೋಕ್ಷವಿರೋಧಿನಿ ।**
**ಅಜ್ಞಾನೇ ಸ್ಥಿತದುರ್ಧರ್ಮಂ ಕೋ ಜ್ಞಾನಪ್ರಸ್ತುತೋ ವದೇತ್ ॥ ೧೭೬ ॥**

**ಅರ್ಥ—** ಜ್ಞಾನಪ್ರಸ್ತುತಃ = ಇನ್ನೊಬ್ಬರಿಗೆ ಜ್ಞಾನವನ್ನು ಕೊಡುವುದಕ್ಕಾಗಿ ಹೊರಟಂತಹ, ಕಃ = ಯಾವ ಮನುಷ್ಯನು, ಮೋಕ್ಷೋಪಯೋಗಿ ಜ್ಞಾನಾಯ = ಮೋಕ್ಷಕ್ಕೆ ಉಪಯುಕ್ತವಾದ ತತ್ತ್ವಜ್ಞಾನಕ್ಕಾಗಿ, ಸಾಕ್ಷಾತ್ = ನೇರವಾಗಿ, ಮೋಕ್ಷವಿರೋಧಿನಿ = ಮೋಕ್ಷಪ್ರಾಪ್ತಿಗೆ ಪ್ರತಿಬಂಧಕವಾದ, ಅಜ್ಞಾನೇ = ಅಜ್ಞಾನದಲ್ಲಿ, ಸ್ಥಿತ ದುರ್ಧರ್ಮಂ = ಇರುವಂತಹ ಕೆಟ್ಟಧರ್ಮವನ್ನು, ವದೇತ್ = ಹೇಳುತ್ತಾನೆ?

**ಅನುವಾದ—** ಮೋಕ್ಷೋಪಯೋಗಿಯಾದ ಜ್ಞಾನವನ್ನು ಉಪದೇಶ ಮಾಡಲು ಹೊರಟ ವರುಣನು ಮೋಕ್ಷವಿರೋಧಿಯಾದ ಅಜ್ಞಾನದಲ್ಲಿರುವ ಒಂದು ದುರ್ಧರ್ಮವನ್ನು ಏಕೆ ಹೇಳುತ್ತಾನೆ?

**ಭಾವವಿಲಾಸಿನೀ—** ನಿಮಿತ್ತಾಂತರಮಪ್ಯಾಹ — **ಮೋಕ್ಷೋಪಯೋಗೀತಿ** ॥ ೧೭೬ ॥

**ವಿವರಣೆ—** ಈ ಶ್ಲೋಕದಲ್ಲಿ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಧರ್ಮವೇ ಎಂದು ಹೇಳುವುದಕ್ಕೆ ನಿಮಿತ್ತಾಂತರವನ್ನು ಹೇಳುತ್ತಾರೆ. ಪುತ್ರನ ಮೋಕ್ಷಕ್ಕಾಗಿ ವರುಣನು ಉಪದೇಶ ಮಾಡುತ್ತಿದ್ದಾನೆ. ಬ್ರಹ್ಮಜ್ಞಾನದಿಂದಲೇ ಮೋಕ್ಷ ಎಂಬುದು ಸರ್ವಸಮ್ಮತ. ಆದ್ದರಿಂದ ಬ್ರಹ್ಮನ ಲಕ್ಷಣವನ್ನು ಹೇಳಿ ಬ್ರಹ್ಮಜ್ಞಾನವನ್ನು ಉತ್ಪಾದನೆ ಮಾಡಬೇಕೇ ಹೊರತು ಅವಿದ್ಯೆಯ ಲಕ್ಷಣವನ್ನು ಹೇಳಿ ಮಾಡಬಾರದು. ತಂದೆಯಾದವನೂ ಮತ್ತು ತತ್ತ್ವಾಭಿಮಾನಿದೇವತೆಯಾಗಿ ಮಹಾಜ್ಞಾನಿಯಾದವನೂ ಆದ ವರುಣನು, ಮಗನ ಮೋಕ್ಷೋಪಯೋಗಿ ಜ್ಞಾನದ ವಿಷಯದಲ್ಲಿ ಪ್ರಸಕ್ತನಾಗಿ, ಅದಕ್ಕೆ ವಿರುದ್ಧವಾದುದನ್ನು ಹೇಗೆ ಹೇಳಲು ಸಾಧ್ಯ? ಜಗಜ್ಜನ್ಮಾದಿಕಾರಣತ್ವವು ಅವಿದ್ಯೆಯಲ್ಲಿದ್ದರೆ, ಅದು ದುರ್ಧರ್ಮವೇ ಆಗುತ್ತದೆ. ಏಕೆಂದರೆ ಅವಿದ್ಯೆಯು ಮಿಥ್ಯೆಯಾದ್ದರಿಂದ ಅವಿದ್ಯಾಧರ್ಮವೂ ಸಹ ಮಿಥ್ಯೆಯೇ ಆಗುತ್ತದೆ. ಆದ್ದರಿಂದ ಹಾಗೆ ಹೇಳಬಾರದು ಎಂದು ಅಭಿಪ್ರಾಯ.

**ಆನಂದಾದೇವ ವಿಜ್ಞಾನಾದೇವೇತಿ ಯಮಸೌ ಭೃಗುಃ ।**
**ಬ್ರಹ್ಮ ಪಶ್ಯನ್ನಿರಣಯತ್ ಕಥಂ ಸೋಽನ್ಯಂ ಗತೋ ವದ ॥ ೧೭೭ ॥**

**ಅರ್ಥ—** ಅಸೌ = ಈ, ಭೃಗುಃ = ಭೃಗುಋಷಿಯು, ಆನಂದಾದೇವ ವಿಜ್ಞಾನಾದೇವ ಇತಿ = ಈ ಶ್ರುತಿಗಳ ಮೂಲಕ, ಬ್ರಹ್ಮ = ಪರಬ್ರಹ್ಮನನ್ನು, ಪಶ್ಯನ್ = ನೋಡುತ್ತಾ, ಯಂ ಧರ್ಮಮ್ = ಯಾವ ಜಗತ್ಕಾರಣತ್ವರೂಪ ಧರ್ಮವನ್ನು, ನಿರಣಯತ್= ನಿರ್ಧಾರ ಮಾಡಿದನೋ, ಸಃ = ಆ, ಧರ್ಮಃ = ಜಗತ್ಕಾರಣತ್ವ ಎಂಬ ಧರ್ಮವು, ಅನ್ಯಂ= ಬ್ರಹ್ಮ

ಭಿನ್ನವಾದ ಅವಿದ್ಯೆಯನ್ನು ಕುರಿತು, ಕಥಂ = ಹೇಗೆ, ಗತಃ = ಹೋಯಿತು, ಇತಿ= ಎಂದು, ವದ= ಹೇಳು.

**ಅನುವಾದ–** ಭೃಗುವು ತಂದೆಯ ಉಪದೇಶದಂತೆ ಉಪಾಸನೆಯನ್ನು ಮಾಡಿ ಬ್ರಹ್ಮನನ್ನು ನೋಡುತ್ತಾ 'ಆನಂದಾದ್ಧ್ಯೇವ, ವಿಜ್ಞಾನಾದ್ಧ್ಯೇವ' ಎಂದು ಹೇಳಿ ಜಗಜ್ಜನ್ಮಾದಿ-ಕಾರಣತ್ವವು ಬ್ರಹ್ಮನಲ್ಲಿಯೇ ಇದೆ ಎಂದು ನಿರ್ಣಯ ಮಾಡಿದ್ದಾನೆ. ಅಂತಹ ಜಗಜ್ಜನ್ಮಾದಿಕಾರಣತ್ವವು ಅನ್ಯಗತವಾಗುವುದು ಹೇಗೆ ಎಂದು ಹೇಳು.

**ಭಾವವಿಲಾಸಿನೀ–** ಅಸ್ಮಿನ್ನರ್ಥೇ ಶ್ರೌತಪ್ರಬಲಯುಕ್ತ್ಯಂತರಂ ಚಾಹ–**ಆನಂದಾದೇವೇತಿ** ॥ ಯಂ ಧರ್ಮ ನಿರಣಯತ್ ಅನ್ಯಯೋಗವ್ಯವಚ್ಛೇದಪೂರ್ವಕಂ ಬ್ರಹ್ಮಣ್ಯೇವ ನಿರ್ಣೀತವಾನ್ । ಸಃ ಧರ್ಮಃ । ಅನ್ಯಂ ಪದಾರ್ಥಮ್ ॥ ೧೭೭ ॥

**ವಿವರಣೆ–** ವರುಣನ ಉಪದೇಶವನ್ನು ಪಡೆದ ಭೃಗುವು ಉಪದೇಶಕ್ಕೆ ಅನುಗುಣವಾಗಿ ಉಪಾಸನೆಯನ್ನು ಮಾಡಿ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡು 'ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ' ಎಂದು ಹೇಳಿ ಆನಂದರೂಪನಾದ ಹಾಗೆಯೇ ವಿಜ್ಞಾನರೂಪನಾದ ಬ್ರಹ್ಮನಿಂದಲೇ ಈ ಜಗತ್ತು ಉತ್ಪತ್ತಿಯನ್ನು ಪಡೆಯುತ್ತದೆ ಎಂದು ನಿರ್ಣಯಿಸಿದ್ದಾನೆ. ಹೀಗಿರುವಾಗ ಜಗಜ್ಜನ್ಮಾದಿಕಾರಣತ್ವವು ಹೇಗೆ ಅವಿದ್ಯೆಯಲ್ಲಿ ಇರಲು ಸಾಧ್ಯ ?

**ಅಪಾಯೇಽವಧಿಭೂತಂ ಯದ್ಧ್ರುವಂ ತತ್ರಾಸ್ತಿ ಪಂಚಮೀ ।**
**ಸ್ವೋದರಾಚ್ಚ ಪ್ರಧಾನಸ್ಯಾಪಾಯೇ ತಾದೃಕ್ ಸೃಜನ್ ಪ್ರಭುಃ ॥ ೧೭೮ ॥**

**ಅರ್ಥ–** ಅಪಾಯೇ = ಎರಡು ವಸ್ತುಗಳಿಗೆ ಬೇರ್ಪಡುವಿಕೆ ಉಂಟಾದಾಗ, ಧ್ರುವಂ = ನಿಶ್ಚಲವಾದ (ಅವಧಿಭೂತವಾದ) ಯತ್= ಯಾವ, ವಸ್ತು = ಪದಾರ್ಥವು ಇದೆಯೋ, ತತ್ರ = ಆ ವಸ್ತುವನ್ನು ಹೇಳುವ ಪದಕ್ಕೆ, ಪಂಚಮೀ = ಪಂಚಮಿವಿಭಕ್ತಿಯು, ಅಸ್ತಿ= (ಧ್ರುವಮ ಅಪಾದಾನಂ ಎಂಬ ಸೂತ್ರದ ಪ್ರಕಾರ) ಸ್ವೋದರಾತ್ = ತನ್ನ ಹೊಟ್ಟೆಯಿಂದ, ಪ್ರಧಾನಸ್ಯ = ಪ್ರಕೃತಿಗೆ, ಅಪಾಯೇ = ವಿಯೋಗವಾದಾಗ (ತನ್ನ ಹೊಟ್ಟೆಯಿಂದ ಪ್ರಕೃತಿಯನ್ನು ಹೊರತೆಗೆದು), ಜಗತ್ = ಈ ಪ್ರಪಂಚವನ್ನು, ಸೃಜನ್ = ಸೃಷ್ಟಿಮಾಡುವ, ಪ್ರಭುಃ ಚ = ಸರ್ವಶಕ್ತನಾದ ಭಗವಂತನೂ ಕೂಡ, ತಾದೃಕ್ = ಹಣ್ಣು ಮತ್ತು ವೃಕ್ಷಗಳ ನಡುವೆ ಬೇರ್ಪಡುವಿಕೆ ಉಂಟಾದಾಗ ನಿಶ್ಚಲವಾಗಿರುವ ವೃಕ್ಷದಂತೆ, ಧ್ರುವಂ = ಅವಧಿಭೂತನೇ ಆಗಿದ್ದಾನೆ.

**ಅನುವಾದ–** ಅಪಾಯದಲ್ಲಿ ಅವಧಿಭೂತವಾದ ಸ್ಥಿರವಾದ ವಸ್ತುವನ್ನು ಹೇಳುವ ಶಬ್ದದ ಮೇಲೆ ಪಂಚಮೀ ವಿಭಕ್ತಿಯು ಬರುತ್ತದೆ ಎಂದು ಸೂತ್ರವಿದೆಯಷ್ಟೇ? ಪ್ರಭುವಾದ

ಬ್ರಹ್ಮನು ತನ್ನ ಉದರದಲ್ಲಿದ್ದ ಪ್ರಕೃತಿಯನ್ನು ಅಲ್ಲಿಂದ ತೆಗೆದು ಜಗತ್ತನ್ನು ಸೃಷ್ಟಿ ಮಾಡಿದನು.

**ಭಾವವಿಲಾಸಿನೀ**— ಅಧುನಾಧ್ರುವಮಪಾಯೇಽಪಾದಾನಮಿತಿ ಸೂತ್ರೇಣೈವ ಸರ್ವತ್ರ ಪಂಚಮೀ ಸಂಭವಾತ್ ಜನಿಕರ್ತುಃ ಪ್ರಕೃತಿರಿತಿ ಸೂತ್ರಂ ವ್ಯರ್ಥಮೇವೇತ್ಯಾಹ—**ಅಪಾಯ ಇತಿ** । ಅಪಾಯೇ ಸ್ವಸ್ಮಾದನ್ಯತ್ರಾಪಗಮನೇ ಅವಧಿಭೂತಂ ಯದ್ಧ್ರುವಂ ಪೂರ್ವವತ್ ಸ್ಥಿರತಯಾ ವಿದ್ಯಮಾನಂ ತತ್ರ ತಸ್ಮಿನ್ ವೃಕ್ಷಾತ್ ಪರ್ಣಂ ಪತತೀತ್ಯತ್ರ ಪರ್ಣಪತನಾವಧಿಭೂತೇ ವೃಕ್ಷ ಇತ್ಯರ್ಥಃ । ಅಪಾಯೇ ಸೃಷ್ಟ್ಯರ್ಥಂ ಬಹಿಷ್ಕರಣೇ ತಾದೃಗ್ವೃಕ್ಷವದ್ಧ್ರುವಃ ॥ ೧೭೮ ॥

**ವಿವರಣೆ**— 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರದಿಂದ ಪಂಚಮೀ ವಿಭಕ್ತಿಯು ಬರುವುದಾದರೆ, ಅದು ಉಪಾದಾನದಲ್ಲಿ ಬರಬೇಕು ಎಂಬ ಕಾರಣದಿಂದ ಅದ್ವೈತಿಗಳು ಹೀಗೆ ವಾದಮಾಡುತ್ತಿದ್ದಾರೆ. ಆದರೆ ಇಲ್ಲಿ ಆ ಸೂತ್ರದಿಂದಲೇ ಪಂಚಮಿ ಬರಬೇಕಾಗಿಲ್ಲ. 'ಧ್ರುವಮಪಾಯೇ ಅಪಾದಾನಂ' ಎಂಬ ಸೂತ್ರದಿಂದಲೇ ಪಂಚಮೀ ವಿಭಕ್ತಿಯು ಬರುತ್ತದೆ. ಎರಡು ಪದಾರ್ಥಗಳಿಗೆ ವಿಶ್ಲೇಷವುಂಟಾದಾಗ ಅವೆರಡರಲ್ಲಿ ಯಾವುದು ಸ್ಥಿರವಾಗಿ ಉಳಿಯುತ್ತದೆಯೋ ಅದಕ್ಕೆ ಅಪಾದಾನ ಸಂಜ್ಞೆಯಿದೆ. ಅದನ್ನು ಹೇಳುವ ಶಬ್ದದ ಮೇಲೆ ಪಂಚಮೀ ವಿಭಕ್ತಿ ಬರುತ್ತದೆ. 'ವೃಕ್ಷಾತ್ ಪರ್ಣಂ ಪತತಿ' ಎಂಬುದು ಉದಾಹರಣೆ. ಮರದಿಂದ ಎಲೆಯು ಕೆಳಗೆ ಬೀಳುತ್ತದೆ ಎಂದು ಅರ್ಥ. ಇಲ್ಲಿ ವೃಕ್ಷಕ್ಕೂ ಮತ್ತು ಪರ್ಣಕ್ಕೂ ವಿಶ್ಲೇಷವುಂಟಾದಾಗ ವೃಕ್ಷವು ಸ್ಥಿರವಾಗಿ ಹಾಗೆಯೇ ಉಳಿಯುತ್ತದೆ, ಪರ್ಣವು ಮಾತ್ರ ಚಲನೆಯನ್ನು ಹೊಂದಿ ಕೆಳಗೆ ಬೀಳುತ್ತದೆ. ಆದ್ದರಿಂದ ಇಲ್ಲಿ ವೃಕ್ಷವು ಅಪಾದಾನ ಸಂಜ್ಞೆಯುಳ್ಳದ್ದಾಗಿದೆ. ಅದನ್ನು ಹೇಳುವ ವೃಕ್ಷ ಶಬ್ದದ ಮೇಲೆ ಪಂಚಮೀ ವಿಭಕ್ತಿ ಬರುತ್ತದೆ ಎಂದು ಸಿದ್ಧವಾಗುತ್ತದೆ. ಹಾಗೆಯೇ, ಬ್ರಹ್ಮನು ತನ್ನ ಉದರದಲ್ಲಿ ಇದ್ದ ಪ್ರಕೃತಿಯನ್ನು ಹೊರಕ್ಕೆ ತೆಗೆದು ಜಗತ್ತನ್ನು ಸೃಷ್ಟಿಸುತ್ತಾನೆ. ಬ್ರಹ್ಮನಿಗೂ ಮತ್ತು ಪ್ರಕೃತಿಗೂ ವಿಶ್ಲೇಷ ಉಂಟಾಗುತ್ತದೆ. ಈ ವಿಶ್ಲೇಷದಲ್ಲಿ ಬ್ರಹ್ಮನು ಸ್ಥಿರನಾದವನು. ಆದ್ದರಿಂದ ಅವನನ್ನು ಹೇಳುವ ಶಬ್ದದ ಮೇಲೆ ಪಂಚಮೀ ವಿಭಕ್ತಿಯು ಬರುತ್ತದೆ ಎಂದು ಅಭಿಪ್ರಾಯ. ಆದ್ದರಿಂದ 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರವನ್ನು ಬಿಟ್ಟು 'ಧ್ರುವಮಪಾಯೇ ಅಪಾದಾನಂ' ಎಂಬ ಸೂತ್ರದಿಂದಲೇ, ಪಂಚಮೀ ವಿಭಕ್ತಿಯನ್ನು ಉಪಪಾದನೆ ಮಾಡಲು ಬರುವಾಗ, ಬ್ರಹ್ಮನಿಗೆ ಉಪಾದಾನತ್ವವನ್ನು ಕಲ್ಪನೆಮಾಡುವ ಪ್ರಸಂಗವೇ ಇಲ್ಲ. ಆದ್ದರಿಂದ ಜಗಜ್ಜನ್ಮಾದಿಕರ್ತೃತ್ವವು ಅವಿದ್ಯೆಯಲ್ಲಿದೆ. ಅದು ಬ್ರಹ್ಮನಿಗೆ ತಟಸ್ಥಲಕ್ಷಣ ಎಂದು ಹೇಳುವ ಅವಶ್ಯಕತೆಯೂ ಇಲ್ಲ.

ಅತಸ್ತೇನೈವ ಸೂತ್ರೇಣ ಪಂಚಮೀ ಪರಮಾತ್ಮನಿ ।
ಜನಿಧಾತುಪ್ರವೇಶೇಪಿ ಯತೋ ನ ವಿಕೃತೋ ಹ್ಯಸೌ ॥ ೧೭೯ ॥

**ಅರ್ಥ–** ಯತಃ = ಯಾವ ಕಾರಣದಿಂದ, ಜನಿಧಾತು ಪ್ರವೇಶೇಽಪಿ = ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ಎಂಬಲ್ಲಿ ಜನಿಧಾತುವಿನ ಪ್ರಯೋಗವಿದ್ದರೂ ಕೂಡ, ಅಸೌ = ಈ ಪರಮಾತ್ಮನು, ನ ವಿಕೃತಃ = ಜಗತ್ತಿನ ರೂಪದಿಂದ ವಿಕಾರವನ್ನು ಹೊಂದಿಲ್ಲವೋ, ಅತಃ = ಆ ಕಾರಣದಿಂದ, ತೇನ ಸೂತ್ರೇಣ ಏವ = ಧ್ರುವಂ ಅಪಾಯೇ ಅಪಾದಾನಂ ಎಂಬ ಆ ಸೂತ್ರದಿಂದಲೇ, ಪರಮಾತ್ಮನಿ= ಪರಮಾತ್ಮನಲ್ಲಿ, ಪಂಚಮೀ= ಪಂಚಮೀವಿಭಕ್ತಿಯ ಪ್ರಯೋಗವು, ಅಸ್ತಿ = ಇರುತ್ತದೆ. (ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರದಿಂದ ಪಂಚಮೀವಿಭಕ್ತಿಯು ಬರುವುದಿಲ್ಲ)

**ಅನುವಾದ–** ಆದ್ದರಿಂದ 'ಧ್ರುವಮಪಾಯೇ ಅಪಾದಾನಂ' ಎಂಬ ಸೂತ್ರದಿಂದಲೇ ಇಲ್ಲಿ ಪಂಚಮೀ ವಿಭಕ್ತಿ ಬರುತ್ತದೆ. ಇಲ್ಲಿ ಜನಿ ಧಾತು ಇದ್ದರೂ ಸಹ ವಿಕಾರವಿಕಾರಿಭಾವವು ಇಲ್ಲದಿರುವುದರಿಂದ, ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರದಿಂದ ಪಂಚಮೀ ವಿಭಕ್ತಿಯು ಬರುವುದಿಲ್ಲ.

**ಭಾವವಿಲಾಸಿನೀ–** ಅತ ಏತತ್ಸೂತ್ರಾರ್ಥತ್ವಾತ್ । ತೇನೈವ ಸೂತ್ರೇಣ । ಧ್ರುವಮಪಾಯೇಽಪಾದಾನಮಿತಿ ಸೂತ್ರೇಣಜನಿಕರ್ತುಃ ಪ್ರಕೃತಿರಿತಿ ಸೂತ್ರಂ ಜನಿಧಾತುಸಮಾಯೋಗಃ ಪ್ರಕೃತಿಪದೋಕ್ತೋಪಾದಾನತ್ವಂ ಚ ಯತ್ರಾಸ್ತಿತತ್ರೈವ ಪ್ರವರ್ತತೇ । ಯತ್ರ ತು ಜನಿಧಾತುಸಮಾಯೋಗೇಽಪಿ ಪ್ರಕೃತಿಪದೋಕ್ತೋಪಾದಾನತ್ವಂ ನ ತತ್ರ ತತ್ ಸೂತ್ರಂ ನ ಪ್ರವರ್ತತೇ । ಉಕ್ತನಿಮಿತ್ತದ್ವಯಯೋರೇವ ನಿಮಿತ್ತಾಭಾವೇ ಸೂತ್ರಸ್ಯಾವಸರಾಭಾವಾತ್ । ಪರಮಾತ್ಮಾ ಚ ನ ಜಾಯಮಾನಸ್ಯ ಜಗತಃ ಪ್ರಕೃತಿರಾವಯೋರ್ಮತೇ ನಿರ್ವಿಕಾರಸ್ಯ ಬ್ರಹ್ಮಣಃ ಉಪದಾನತ್ವಾಭಾವಾತ್ । ಅತಃ ಪೂರ್ವಸೂತ್ರೇಣೈವಾತ್ರಪಂಚಮೀತಿ ಭಾವಃ । ಕಥಮನ್ಯಥಾ ಪ್ರಾದುರ್ಭಾವಾರ್ಥಕಜನಿಧಾತು ಸಮಾಯೋಗೇಪ್ಯಂಧಕಾರಸ್ಥೋ ಘಟೋ ದೀಪಾಜ್ಜಾಯತ ಇತ್ಯತ್ರ ನಿಮಿತ್ತೇ ಪಂಚಮೀತಿ ಭಾವಃ । ಏತದೇವ ವಿಶದಯತಿ ॥ ಜನಿಧಾತ್ವಿತಿ ॥ ಯತಃ ಯಸ್ಮಾತ್ । ಅಸೌಪರಮಾತ್ಮಾ ॥ ೧೭೯ ॥

**ವಿವರಣೆ–** ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರವು ಪಂಚಮೀಯನ್ನು ವಿಧಾನ ಮಾಡುತ್ತದೆ. ಆದರೆ, ಆ ಪಂಚಮಿಯು ಬರುವುದಾದರೆ, ಉಪಾದಾನವನ್ನು ಹೇಳುವ ಪದದ ಮೇಲೆ ಮಾತ್ರ ಬರಬೇಕು. ಬ್ರಹ್ಮನಿಗೆ ಉಪಾದಾನತ್ವವೇ ಇಲ್ಲ. ಆದ್ದರಿಂದ ಜನಿಕರ್ತುಃ ಪ್ರಕೃತಿಃ ಸೂತ್ರವು ಬ್ರಹ್ಮನ ವಿಷಯದಲ್ಲಿ ಪ್ರವೃತ್ತವಾಗುವುದೇ ಇಲ್ಲ. ಮತ್ತೇನೆಂದರೆ, 'ಧ್ರುವಮಪಾಯೇ ಅಪಾದಾನಂ' ಎಂಬ ಸೂತ್ರವೇ ಪ್ರವೃತ್ತವಾಗುತ್ತದೆ. ಆದರಿಂದ ಪಂಚಮಿಯನ್ನು ಉಪಪಾದನೆ ಮಾಡಿದಾಗ ಬ್ರಹ್ಮನಿಗೆ ಉಪಾದಾನತ್ವವನ್ನು ಹೇಳಬೇಕಾದ ಯಾವ ಅವಶ್ಯಕತೆಯೂ ಇಲ್ಲ. ಕರ್ತೃತ್ವವನ್ನು ನೇರವಾಗಿ ಹೇಳಬಹುದು.

ಜನಿಕರ್ತುಃ ಪ್ರಕೃತಿರಿತ್ಯತ್ರ ಪ್ರಕೃತಿಶಬ್ದತಃ ।
ಉಪಾದಾನಂ ತು ಸ ಬ್ರೂತೇ ತಸ್ಯ ಚಾವಸರೋತ್ರ ನ ॥ ೧೮೦ ॥

**ಅರ್ಥ–** ಜನಿಕರ್ತುಃ ಪ್ರಕೃತಿಃ ಇತಿ ಅತ್ರ = ಈ ಸೂತ್ರದಲ್ಲಿ, ಸಃ = ಪಾಣಿನಿಯು, ಪ್ರಕೃತಿ ಶಬ್ದತಃ = ಪ್ರಕೃತಿ ಎಂಬ ಶಬ್ದದಿಂದ, ಉಪಾದಾನಂ ತು = ಉಪಾದಾನ ಕಾರಣವನ್ನೇ, ಬ್ರೂತೇ = ಹೇಳುತ್ತಾನೆ. ಅತಃ = ಆದ್ದರಿಂದ, ತಸ್ಯ = ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರಕ್ಕೆ, ಅತ್ರ = ಜಗತ್ತನ್ನು ಕುರಿತು ಉಪಾದಾನಕಾರಣವಲ್ಲದ ಈ ಬ್ರಹ್ಮನಲ್ಲಿ, ಅವಸರಶ್ಚ = ಅವಕಾಶವಾದರೂ, ನ ಅಸ್ತಿ = ಇಲ್ಲ.

**ಅನುವಾದ–** ಜನಿಕರ್ತುಃ ಪ್ರಕೃತಿಃ ಎಂಬಲ್ಲಿ ಪ್ರಕೃತಿ ಶಬ್ದಕ್ಕೆ ಉಪಾದಾನ ಎಂದು ಪಾಣಿನಿಗೆ ಅಭಿಪ್ರೇತವಾದ ಅರ್ಥ. ಇಲ್ಲಿ ಉಪಾದಾನದ ಪ್ರಸಕ್ತಿಯಿಲ್ಲ. ಆದ್ದರಿಂದ ಆ ಸೂತ್ರವು ಇಲ್ಲಿ ಪ್ರವೃತ್ತವಾಗುವುದಿಲ್ಲ.

**ಭಾವವಿಲಾಸಿನೀ–** ಅತ್ರ ಸೂತ್ರೇ । ಪ್ರಕೃತಿಶಬ್ದತಃ ಪ್ರಕೃತಿಶಬ್ದೇನ । ಸಃ ಪಾಣಿನಿಃ ತಸ್ಯ ನಿಮಿತ್ತದ್ವಯಘಟಿತಸೂತ್ರಸ್ಯ । ಅತ್ರ ಬ್ರಹ್ಮಣಿ ॥ ೧೮೦ ॥

**ಕಾರ್ಯಾಕಾರೇಣ ವಿಕೃತೇ ನೋಪಾದಾನೇ ತು ಪಂಚಮೀ ।**
**ಮೃದ್ಘಟೋ ಜಾಯತೇ ಕ್ಷೀರಂ ದಧಿ ಜಾತಮಿತಿ ಕ್ಷಿತೌ ।**
**ಲೋಕಾ ವ್ಯವಹರಂತ್ಯಸ್ಮಾದಿದಂ ತ್ವಿತಿ ನ ಕಶ್ಚನ ॥ ೧೮೧ ॥**

**ಅರ್ಥ–** ಕಾರ್ಯಾಕಾರೇಣ = ಕಾರ್ಯದ ರೂಪದಿಂದ, ವಿಕೃತೇ = ವಿಕಾರವನ್ನು ಹೊಂದಿದ, ಉಪಾದಾನೇ = ಉಪಾದಾನಕಾರಣದಲ್ಲಿ, ಪಂಚಮೀ ತು = ಪಂಚಮೀ ವಿಭಕ್ತಿಯಾದರೂ, ನ = ಬರುವುದಿಲ್ಲ. ಲೋಕಾಃ = ಜಗತ್ತಿನ ಜನರು, ಮೃತ್ = ಮಣ್ಣು, ಘಟಃ = ಘಟವಾಗಿ, ಜಾಯತೇ = ಹುಟ್ಟುತ್ತದೆ, ಚ = ಮತ್ತು, ಕ್ಷೀರಂ = ಹಾಲು, ದಧಿ = ಮೊಸರಾಗಿ, ಜಾತಂ = ಆಯಿತು, ಇತಿ = ಎಂಬುದಾಗಿ, ಕ್ಷಿತೌ = ಈ ಲೋಕದಲ್ಲಿ, ವ್ಯವಹರಂತಿ= ವ್ಯವಹಾರ ಮಾಡುತ್ತಾರೆ. ಅಸ್ಮಾತ್= ಈ ಮಣ್ಣಿನಿಂದ, ಮತ್ತು ಹಾಲಿನಿಂದ, ಇದಂ ತು = ಈ ಗಡಿಗೆಯು ಮತ್ತು ಮೊಸರಾದರೂ, ಜಾತಂ = ಹುಟ್ಟಿತು, ಇತಿ = ಎಂಬುದಾಗಿ, ಕಶ್ಚನ = ಯಾರೂ ಕೂಡ, ನ ವ್ಯವಹರತಿ = ಹೇಳುವುದಿಲ್ಲ.

**ಅನುವಾದ–** ಕಾರ್ಯಕಾರಣಗಳಿಗೆ ಉಪಾದಾನ ಉಪಾದೇಯಭಾವವನ್ನು ಒಪ್ಪಿ ಕಾರಣವು ಕಾರ್ಯಾತ್ಮನಾ ವಿಕಾರವನ್ನು ಹೊಂದಿದ ಸಂದರ್ಭದಲ್ಲಿಯೂ ಕಾರಣ ಶಬ್ದದ ಮೇಲೆ ಪಂಚಮೀವಿಭಕ್ತಿಯು ಬರುವುದಿಲ್ಲ. ಲೋಕದಲ್ಲಿ ಮಣ್ಣೇ ಮಡಕೆಯಾಗುತ್ತದೆ, ಹಾಲೇ ಮೊಸರಾಗುತ್ತದೆ ಎಂದು ವ್ಯವಹಾರ ಮಾಡುತ್ತಾರೆಯೇ ಹೊರತು, ಮಣ್ಣಿನಿಂದ ಮಡಕೆಯಾಯಿತು ಎಂದಾಗಲೀ, ಹಾಲಿನಿಂದ ಮೊಸರಾಯಿತು ಎಂದಾಗಲೀ, ಯಾರೂ ವ್ಯವಹಾರವನ್ನು ಮಾಡುವುದಿಲ್ಲ.

**ಭಾವವಿಲಾಸಿನೀ–** ಉಪಾದಾನೇಽಪಿ ಪಂಚಮ್ಯಾ ಏವಾಭಾವಾತ್ ನಾಸ್ಯ ಸೂತ್ರಸ್ಯಾವಸರ ಇತ್ಯಾಹ – **ಕಾರ್ಯಾಕಾರೇಣೇತಿ** ॥ ಅಸ್ಮಾನ್ಮೃತ್ಪಿಂಡಾತ್ಕ್ಷೀರಾದ್ವಾ। ಇದಂ ಘಟಾದಿಕಂ ಕಶ್ಚನ ನ ವ್ಯವಹರತೀತಿ ಸಂಬಂಧಃ ॥ ೧೮೧ ॥

**ವಿವರಣೆ–** ಉಪಾದಾನದಲ್ಲಿ ಪಂಚಮೀವಿಭಕ್ತಿಯೇ ಪ್ರಸಕ್ತವಾಗದಿರುವುದರಿಂದ ಇಲ್ಲಿ ಜನಿಕರ್ತುಃ ಪ್ರಕೃತಿಃ ಸೂತ್ರಕ್ಕೆ ಅವಕಾಶವೇ ಇಲ್ಲ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಲೋಕದ ವ್ಯವಹಾರವು ಮಣ್ಣೇ ಮಡಕೆಯಾಯಿತು, ಹಾಲೇ ಮೊಸರಾಗುತ್ತದೆ ಎಂದಷ್ಟೇ ಇರುತ್ತದೆಯೇ ಹೊರತಾಗಿ, ಮಣ್ಣಿನಿಂದ ಮಡಕೆ, ಹಾಲಿನಿಂದ ಮೊಸರು ಎಂದಿರುವುದಿಲ್ಲ.

**ಶೃಂಗಸ್ಯಾಪ್ಯೇಕದೇಶಸ್ಯ ಶರಾಕಾರೇಣ ವಿಕ್ರಿಯಾ ।**
**ತತ್ರಾಪ್ಯವಿಕೃತೇ ಭಾಗೇ ಪಂಚಮೀ ವಿಕ್ರಿಯಾವಧೌ ॥ ೧೮೨ ॥**

**ಅರ್ಥ–** ಶೃಂಗಸ್ಯ ಅಪಿ = ಕೊಂಬಿಗೆ ಸಂಬಂಧಿಸಿದಂತೆ ಕೂಡ, ಏಕದೇಶಸ್ಯ ಏವ = ಕೊಂಬಿನ ಒಂದು ಭಾಗಕ್ಕೆ ಮಾತ್ರವೇ, ಶರಾಕಾರೇಣ = ಹುಲ್ಲಿನ ರೂಪದಿಂದ, ವಿಕ್ರಿಯಾ = ವಿಕಾರವು ಆಗುತ್ತದೆ. (ಹೊರತು, ಪೂರ್ಣಕೊಂಬು ಹುಲ್ಲಿನ ರೂಪದಲ್ಲಿ ಪರಿಣಾಮ ಹೊಂದುವುದಿಲ್ಲ) ತತ್ರಾಪಿ = ಅಲ್ಲಿಯೂ ಕೂಡ, ವಿಕ್ರಿಯಾವಧೌ = ಕೊಂಬು ಹುಲ್ಲಿನ ರೂಪದಲ್ಲಿ ವಿಕಾರವನ್ನು ಪಡೆದಾಗ, ಅವಧಿ= ಅಥವಾ ಧ್ರುವ ಎನಿಸಿದ, ಅವಿಕೃತೇ = ಹುಲ್ಲಿನ ರೂಪದಲ್ಲಿ ಪರಿಣಾಮ ಹೊಂದದ, ಭಾಗೇ = ಕೊಂಬಿನ ಭಾಗದಲ್ಲಿ, ಪಂಚಮೀ = ಪಂಚಮೀ ವಿಭಕ್ತಿಯು ಬರುತ್ತದೆ.

**ಅನುವಾದ–** ಶೃಂಗದಿಂದ ಶರ ಉಂಟಾಗುವಾಗಲೂ, ಶೃಂಗದ ವಿಕೃತ ಮತ್ತು ಅವಿಕೃತ ಭಾಗಗಳಲ್ಲಿ, ಯಾವುದು ವಿಕಾರವನ್ನು ಹೊಂದದೇ ಇರುವ ಭಾಗವಿದೆಯೋ, ಅದು ವಿಕಾರವನ್ನು ಹೊಂದುವ ಭಾಗಕ್ಕೆ ಅವಧಿಯಾಗಿದ್ದು ಪಂಚಮೀ ವಿಭಕ್ತಿಯನ್ನು ತೆಗೆದುಕೊಳ್ಳುತ್ತದೆ.

**ಭಾವವಿಲಾಸಿನೀ–** ಶೃಂಗಾಚ್ಛರೋಜಾಯತ ಇತ್ಯತ್ರ ವಿಕ್ರಿಯಮಾಣಶೃಂಗೈಕದೇಶೇ ಪಂಚಮೀಪ್ರಯೋಗಾಭಾವಾತ್ ನಾತ್ರ ಸೂತ್ರಸ್ಯಾವಕಾಶ ಇತ್ಯಾಹ – **ಶೃಂಗಸ್ಯೇತಿ** ॥ ತತ್ರ ವಿಕೃತಾವಿಕೃತಭಾಗಯೋರ್ಮಧ್ಯೇ । ವಿಕ್ರಿಯಮಾಣೇ ತು ಶೃಂಗಸ್ಯಾಂಶೇ ಪೂರ್ವವತ್ ಇದಮೇತದಾಕಾರೇಣ ಜಾಯತ ಇತಿ ಪ್ರಥಮೈವ ನ ಪಂಚಮೀತಿ ಭಾವಃ ॥ ೧೮೨ ॥

**ವಿವರಣೆ–** 'ಶೃಂಗಾತ್‌ಶರೋ ಜಾಯತೇ' ಎಂಬ ಪ್ರಯೋಗವಿದೆ. ಪ್ರಾಣಿಯ ಕೊಂಬಿನಿಂದ ಒಂದು ಬಗೆಯ ಹುಲ್ಲು ಹುಟ್ಟುತ್ತದೆ ಎಂದು ಅದರ ಅರ್ಥ. ಇಲ್ಲಿ ಪ್ರಾಣಿಯ ಕೊಂಬು ಉಪಾದಾನವಷ್ಟೇ? ಹೀಗಿರುವಾಗ ಉಪಾದಾನದ ಮೇಲೆ

ಪಂಚಮೀ ವಿಭಕ್ತಿಯು ಬರುವುದಿಲ್ಲವೆಂದಾದರೆ, ಶೃಂಗಾತ್ ಎಂಬಲ್ಲಿ ಪಂಚಮೀ ವಿಭಕ್ತಿಯು ಹೇಗೆ ಬಂದಿದೆ ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಈ ರೀತಿ ಸಮಾಧಾನ. ಶೃಂಗವೆಂದರೆ, ಪ್ರಾಣಿಯ ಕೊಂಬು. ಆ ಕೊಂಬು ಎಲ್ಲಿ ನೆಲದ ಮೇಲೆ ಬೀಳುತ್ತದೆಯೋ ಅಲ್ಲಿ ಹುಲ್ಲು ಹುಟ್ಟುತ್ತದೆ. ಶೃಂಗವು ಪರಿಣಾಮವನ್ನು ಹೊಂದುತ್ತದೆ. ಆದರೆ, ಸಮಗ್ರವಾದ ಶೃಂಗವು ಪರಿಣಾಮವನ್ನು ಹೊಂದುವುದಿಲ್ಲ. ಶೃಂಗದ ಒಂದು ಭಾಗವು ಮಾತ್ರ ಪರಿಣಾಮವನ್ನು ಹೊಂದುತ್ತದೆ. ಆ ಭಾಗವು ಹುಲ್ಲಿಗೆ ಉಪಾದಾನವೇ ಆಗುತ್ತದೆ. ಪರಿಣಾಮವನ್ನು ಹೊಂದದಿರುವ ಶೃಂಗದ ಭಾಗವು, ವಿಕಾರವನ್ನು ಹೊಂದುವ ಶೃಂಗದ ಭಾಗಕ್ಕೆ ಅವಧಿಯಾಗಿದ್ದು, 'ಧ್ರುವಮಪಾಯೇ ಅಪಾದಾನಂ' ಎಂಬ ಸೂತ್ರದಿಂದಲೇ ಪಂಚಮೀ ವಿಭಕ್ತಿಯನ್ನು ಪಡೆಯುತ್ತದೆ. ಆದ್ದರಿಂದ ಯಾವ ಭಾಗವು ವಿಕಾರವನ್ನು ಹೊಂದುತ್ತದೋ, ಆ ಶೃಂಗಭಾಗವನ್ನು ಹೇಳುವ ಪದದ ಮೇಲೆ ಪಂಚಮೀ ವಿಭಕ್ತಿ ಇರುವುದಿಲ್ಲ. ಎಲ್ಲಿ ಪಂಚಮೀ ವಿಭಕ್ತಿ ಬರುತ್ತದೆಯೋ ಆ ಶೃಂಗದ ಭಾಗವನ್ನು ಹೇಳುವ ಪದವು ವಿಕಾರವನ್ನು ಹೊಂದುವುದಿಲ್ಲ. ಆದ್ದರಿಂದ ಅವಧಿವಾಚಕವಾದ ಪದದ ಮೇಲೆಯೇ ಪಂಚಮೀ ಬರುತ್ತದೆ, ಉಪಾದಾನವಾಚಕವಾದ ಪದದ ಮೇಲೆ ಪಂಚಮಿಯು ಬರುವುದಿಲ್ಲ ಎಂಬ ನಿಯಮಕ್ಕೆ ಭಂಗವಿಲ್ಲ. ಇದು ಸಮಾಧಾನ.

**ಸಾ ಚ ತೇನೈವ ಸೂತ್ರೇಣ ತಸ್ಮಾತ್ ತ್ವಮಿವ ನಃ ಪ್ರಭೌ ।**
**ವಿರೋಧಾಚರಣಾತ್ ಸೂತ್ರಂ ಚಿತ್ರಂ ತದ್ಯತ್ರ ಕುತ್ರಚಿತ್ ॥ ೧೮೩ ॥**

**ಅವಕಾಶಂ ನ ಲಭತೇ ವ್ಯರ್ಥತಾಮರ್ಥತೋಽಗಮತ್ ।**
**ಜನಿಕರ್ತುಃ ಪ್ರಕೃತಿರಿತ್ಯುಕ್ತಿಸ್ತನ್ನ ಭಯಂಕರೀ ॥ ೧೮೪ ॥**

**ಅರ್ಥ–** ಸಾಚ = ವಿಕಾರವನ್ನು ಹೊಂದದ ಕೊಂಬಿನ ಅಂಶವನ್ನು ಹೇಳುವ ಪದಕ್ಕೆ ಬಂದ ಪಂಚಮೀ ವಿಭಕ್ತಿಯೂ ಕೂಡ, ತೇನೈವ ಸೂತ್ರೇಣ = ಧ್ರುವಮಪಾಯೇ ಅಪಾದಾನಂ ಎಂಬ ಸೂತ್ರದಿಂದಲೇ, ಭವತಿ = ಬರುತ್ತದೆ. ತಸ್ಮಾತ್ = ಆ ಕಾರಣದಿಂದ, ತತ್ ಸೂತ್ರಂ = ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರವು, ತ್ವಮಿವ= ನಿನ್ನಂತೆ, ನಃ = ನನ್ನ, ಪ್ರಭೌ = ಸ್ವಾಮಿಯಾದ ನಾರಾಯಣನಿಗೆ, ವಿರೋಧಾಚರಣಾತ್ = ಆತನ ಜಗಜ್ಜನ್ಮಾಧಿಕಾರಣತ್ವ ಎಂಬ ಲಕ್ಷಣವನ್ನು ಅಪಹಾರ ಮಾಡುವ ಮೂಲಕ ವಿರೋಧ ಮಾಡುವುದರಿಂದ, ಯತ್ರ ಕುತ್ರಚಿತ್ = ಎಲ್ಲಿಯೂ ಕೂಡ, ಅವಕಾಶಂ = ಅವಕಾಶವನ್ನು, ನ ಲಭತೇ = ಪಡೆಯುವುದಿಲ್ಲ, ಚ = ಮತ್ತೂ ಕೂಡ, ತತ್ = ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರವು, ಅರ್ಥತಃ = ಅದರ ಅರ್ಥವನ್ನು ವಿಚಾರ ಮಾಡಿದರೆ ಮತ್ತು ಪ್ರಯೋಜನದ ದೃಷ್ಟಿಯಿಂದ, ವ್ಯರ್ಥತಾಂ = ವ್ಯರ್ಥತ್ವವನ್ನು, ಅಗಮತ್ = ಪಡೆಯಿತು. ತತ್ = ಆ ಕಾರಣದಿಂದ ಜನಿಕರ್ತುಃ ಪ್ರಕೃತಿಃ ಇತಿ= ಎಂಬ, ಉಕ್ತಿಃ= ಉಕ್ತಿಯು, ನಃ = ನಮಗೆ, ನ ಭಯಂಕರೀ = ಯಾವುದೇ ಆತಂಕವನ್ನು ಒಡ್ಡುವುದಿಲ್ಲ, ಇದಂ = ಈ ವಿಷಯವು, ಚಿತ್ರಂ = ಅದ್ಭುತವಾಗಿದೆ.

**ಅನುವಾದ–** 'ಶೃಂಗಾಚ್ಛರೋ ಜಾಯತೇ' ಎಂಬಲ್ಲಿಯೂ ಕೂಡ ಅವಿಕೃತವಾದ ಶೃಂಗದ ಅಂಶವನ್ನು ಹೇಳುವ ಪದದ ಮೇಲೆ ಪಂಚಮೀ ವಿಭಕ್ತಿಯು 'ಧ್ರುವಮಪಾಯೇ' ಸೂತ್ರದಿಂದಲೇ ಬರುತ್ತದೆ. ಆದ್ದರಿಂದ ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರವು ನಿನ್ನಂತೆಯೇ ನಮ್ಮ ಪ್ರಭುವಿಗೆ ವಿರೋಧವನ್ನು ಮಾಡುವುದರಿಂದ ಎಲ್ಲಿಯೂ ಅವಕಾಶವನ್ನು ಪಡೆಯುವುದಿಲ್ಲ. ಆದ್ದರಿಂದ ಅದು ವ್ಯರ್ಥವಾಗುತ್ತದೆ. ಆ ಕಾರಣದಿಂದ ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರದಿಂದ ನಮಗೆ ಯಾವ ಭಯವೂ ಇಲ್ಲ.

**ಭಾವವಿಲಾಸಿನೀ–** ಸಾ ಅವಧಿಭೂತಶೃಂಗಾಂಶಪಂಚಮೀ । ತೇನ ಪೂರ್ವೇಣ । ವಿರೋಧಾಚರಣಾತ್ ಬ್ರಹ್ಮಲಕ್ಷಣಸ್ಯಾನ್ಯತ್ರಾಪಹಾರಾಖ್ಯ- ವಿರೋಧಾಚರಣಾತ್ । ತತ್ ಸೂತ್ರಮಿತಿ ಸಂಬಂಧಃ । ಅರ್ಥತಃ ಅರ್ಥಾತ್ । ಅರ್ಥವಿಚಾರೇಸತೀತ್ಯರ್ಥಃ । ಅರ್ಥತಃ ಪ್ರಯೋಜನಾದ್ವ್ಯರ್ಥತಾಂ ಶೂನ್ಯತಾಮಿತಿ ವಾ । ತತ್ತಸ್ಮಾತ್ ॥ ೧೮೩-೧೮೪ ॥

**ವಿವರಣೆ–** ಜನಿಕರ್ತುಃ ಪ್ರಕೃತಿಃ ಎಂಬ ಸೂತ್ರವು ಉಪಾದಾನತ್ವವನ್ನೇ ಹೇಳುವುದಾದರೆ, ಬ್ರಹ್ಮನ ಜಗಜ್ಜನ್ಮಾದಿಕಾರಣತ್ವ ರೂಪಲಕ್ಷಣವನ್ನು ಅದು ಬೇರೆ ಕಡೆಗೆ ತೆಗೆದುಕೊಂಡುಹೋಗುವುದರಿಂದ, ಎಂದರೆ ಅಜ್ಞಾನದಲ್ಲಿ ಸ್ಥಾಪಿಸುವುದರಿಂದ ನಿನ್ನಂತೆಯೇ ಅದೂ ವಿರೋಧವನ್ನು ಆಚರಿಸಿದಂತೆ ಆಗುತ್ತದೆ. ಪ್ರಭುವಿಗೆ ವಿರೋಧ ಮಾಡಿದವರಿಗೆ ಎಲ್ಲೂ ಅವಕಾಶವಿಲ್ಲ. ಆದ್ದರಿಂದ ಜನಿಕರ್ತುಃ ಎಂಬ ಸೂತ್ರವೇ ವ್ಯರ್ಥವಾಗುತ್ತದೆ. ಆದ್ದರಿಂದ ಈ ಸೂತ್ರವು ನಮಗೆ ಯಾವ ವಿರೋಧವನ್ನೂ ಉಂಟುಮಾಡುವುದಿಲ್ಲವಾದ್ದರಿಂದ ನಮಗೆ ಅದರ ಭಯವೇ ಇಲ್ಲ. ವ್ಯಾಕರಣ ಮಹಾಭಾಷ್ಯದಲ್ಲಿ ಈ ಸೂತ್ರವು ವ್ಯರ್ಥವೆಂದು ಹೇಳಿ ಅದನ್ನು ತೆಗೆದುಹಾಕಿರುವುದನ್ನು ಇಲ್ಲಿ ಸ್ಮರಿಸಬಹುದು.

**ಯಥೋಪಾದಾನತಾಮುಕ್ತ್ವಾ ಯಸ್ತಟಸ್ಥೀಕರೋತಿ ತಾಂ ।**
**ಅಬದ್ಧಂ ಸ ಪಠಿತ್ವಾಂತೇ ಕುಚೋದ್ಯಂ ಕುರುತೇಽಬುಧಃ ॥ ೧೮೫ ॥**

**ಅರ್ಥ–** ಯಥಾ = ಹೇಗೆ, ಅಬುಧಃ = ಮೂರ್ಖನು, ಅಬದ್ಧಂ = ಅಸಂಗತವಾಗಿದ್ದನ್ನು, ಪಠಿತ್ವಾ = ಹೇಳಿ, ಅಂತೇ = ಕೊನೆಗೆ, ಕುಚೋದ್ಯಂ = ಅಪಹಾಸ್ಯವನ್ನು, ಕರೋತಿ = ಮಾಡುತ್ತಾನೋ, ತಥಾ = ಹಾಗೇ, ಯಃ = ಯಾವ, ಅದ್ವೈತೀ = ಅದ್ವೈತಿಯು, ಬ್ರಹ್ಮಣಃ = ಪರಬ್ರಹ್ಮನಿಗೆ, ಉಪದಾನತಾಂ = ಜಗತ್ತನ್ನು ಕುರಿತು ಉಪಾದಾನಕಾರಣತ್ವವನ್ನು, ಉಕ್ತ್ವಾಽಪಿ = ಹೇಳಿಯೂ ಕೂಡ, ಅಂತೇ = ಕೊನೆಗೆ, ತಾಂ = ಆ ಉಪಾದಾನತ್ವವನ್ನು, ತಟಸ್ಥೀಕರೋತಿ = ತಟಸ್ಥಲಕ್ಷಣವೆಂದು ಹೇಳುತ್ತಾನೋ, ಸಃ = ಆ ಅದ್ವೈತಿಯು, ಅಬುಧ ಏವ = ಮೂರ್ಖನೇ ಆಗಿದ್ದಾನೆ.

**ಅನುವಾದ–** ಶ್ರುತಿಯಲ್ಲಿ ಹೇಳುವ ಕಾರಣತ್ವವು ಉಪಾದಾನತ್ವರೂಪವಾದುದು ಎಂದು ಹೇಳಿ ಬ್ರಹ್ಮನಿಗೆ ವಿಕಾರವಿಲ್ಲದಿರುವುದರಿಂದ ಅದು ಅವಿದ್ಯೆಯಲ್ಲಿ ಮಾತ್ರ ಇರುವ ಕಾರಣದಿಂದ ಬ್ರಹ್ಮನಿಗೆ ಅದು ತಟಸ್ಥಲಕ್ಷಣವಾಗುತ್ತದೆ ಎಂದು ಹೇಳುವವನು ಅಬದ್ಧವನ್ನು ಮಾತನಾಡಿ ಕುಚೋದ್ಯವನ್ನು ಮಾಡುವ ಅವಿವೇಕಿಗೆ ಸಮಾನನಾಗುತ್ತಾನೆ.

**ಭಾವವಿಲಾಸಿನೀ–**ಯೋ ಮಾಯಾವಾದೀ । ತಾಮುಪಾದಾನತಾಮ್ । ಸಃ ಅಬುಧಃ ॥೧೮೫॥

**ವಿವರಣೆ–** 'ಯತೋವಾ ಇಮಾನಿ' ಎಂಬ ಶ್ರುತಿಯಲ್ಲಿ ಹೇಳಿದ ಕಾರಣತ್ವವು ಕರ್ತೃತ್ವರೂಪವಾದುದೇ ಹೊರತು ಉಪಾದಾನತ್ವರೂಪವಾದುದಲ್ಲ. ಆದ್ದರಿಂದ ಅದು ಉಪಾದಾನತ್ವರೂಪವಾದುದು ಎಂದು ಹೇಳುವುದು ಮೊದಲನೆಯ ತಪ್ಪು. ಬ್ರಹ್ಮನಿಗೆ ಉಪಾದಾನತ್ವವೇ ಇಲ್ಲದಿರುವುದರಿಂದ ಅದು ಅವಿದ್ಯೆಯಲ್ಲಿದ್ದು ಬ್ರಹ್ಮನಿಗೆ ತಟಸ್ಥಲಕ್ಷಣವಾಗುತ್ತದೆ ಎಂದು ಹೇಳುವುದು ಮೊದಲನೆಯ ತಪ್ಪನ್ನು ಆಧರಿಸಿದ ಎರಡನೆಯ ತಪ್ಪು. ಆದ್ದರಿಂದ ಹೀಗೆ ಅಂಗೀಕರಿಸುವವನು 'ಅಬದ್ಧಂ ಪಠಿತ್ವಾ ಕುಚೋದ್ಯಂ ಕರೋತಿ' ಎಂಬ ಗಾದೆಗೆ ವಿಷಯನಾಗುತ್ತಾನೆ.

**ಕಿಂಚೋಪಾದಾನಮಾತ್ರೇಣ ಕಾರ್ಯಂ ಸ್ಯಾನ್ನಾವಯೋರ್ಮತೇ ।**
**ಅತಃ ಕರ್ತುರವಶ್ಯತ್ವೇ ನ ತದ್ ವಾಚ್ಯಂ ಕಥಂ ವದ ॥ ೧೮೬ ॥**

**ಅರ್ಥ–** ಕಿಂಚ = ಅದೂ ಅಲ್ಲದೇ, ಆವಯೋಃ = ನಮ್ಮಿಬ್ಬರ, ಮತೇ = ಸಿದ್ಧಾಂತದಲ್ಲಿ, ಉಪಾದಾನ ಮಾತ್ರೇಣ = ಕೇವಲ ಉಪಾದಾನ ಕಾರಣದಿಂದ, ಕಾರ್ಯಂ = ಯಾವುದೇ ಕಾರ್ಯವು, ನ ಸ್ಯಾತ್ = ಹುಟ್ಟಲಾರದು. ಅತಃ = ಆದ್ದರಿಂದ, ಕರ್ತುಃ= ಕರ್ತೃವಿನ, ಅವಶ್ಯತ್ವೇ = ಅವಶ್ಯಕತ್ವವು, ಸಿದ್ಧೇ ಸತಿ= ಸಿದ್ಧವಾಗುತ್ತಿರಲು, ತತ್ = ಬ್ರಹ್ಮನಿಗೆ ಜಗತ್ತನ್ನು ಕುರಿತು ಕರ್ತೃತ್ವವು, ಕಥಂ = ಹೇಗೆ, ನ ವಾಚ್ಯಂ = ಶ್ರುತಿಗಳಿಂದ ಮತ್ತು ಬ್ರಹ್ಮಸೂತ್ರಗಳಿಂದ ಹೇಳಲ್ಪಡುವುದಿಲ್ಲವೆಂದು, ತ್ವಂ = ನೀನು, ವದ= ಹೇಳು.

**ಅನುವಾದ–** ಅದೂ ಅಲ್ಲದೆ, ನಮ್ಮಿಬ್ಬರ ಮತದಲ್ಲಿಯೂ ಕೇವಲ ಉಪಾದಾನದಿಂದ ಕಾರ್ಯವು ಜನಿಸುವುದಿಲ್ಲ, ಕರ್ತೃವನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಆದ್ದರಿಂದ ಜಗತ್ತಿನ ಉತ್ಪತ್ತಿಯನ್ನು ಹೇಳುವಾಗ ಕರ್ತೃವನ್ನು ಹೇಳದೇ ಇರಲು ಹೇಗೆ ಸಾಧ್ಯ ಎಂದು ಹೇಳು.

**ಭಾವವಿಲಾಸಿನೀ–** ಅಪಿ ಚ ತಟಸ್ಥಲಕ್ಷಣಂ ವದತಾಪಿ ತ್ವಯಾ ತತೋ ಜಗತ್‌ಕರ್ತೃತ್ವಂ ಬ್ರಹ್ಮಣಿ ವಕ್ತವ್ಯಮ್ । ಅತ ಉಪಾದಾನತ್ವೇ ಭರಂ ಕುರ್ವತಾಪಿ ಲಕ್ಷಣಯಾ ತದುಕ್ತ್ಯಾಪಿ ಕರ್ತೃತ್ವ-ಮೇವೋಚ್ಯತಾಮ್ । ಲಾಘವಾದಿತ್ಯಾಹ – **ಕಿಂಚೇತಿ** ॥ ತತ್ ಕರ್ತೃತ್ವಮ್ ॥ ೧೮೬ ॥

**ವಿವರಣೆ–** ಜಗದುಪಾದಾನತ್ವವು ತಟಸ್ಥಲಕ್ಷಣ ಎಂದು ಹೇಳುವ ಅದ್ವೈತಿಯೂ ಕೂಡ ಆ ವಾಕ್ಯಕ್ಕೆ ಲಕ್ಷಣಾವೃತ್ತಿಯನ್ನು ಸ್ವೀಕರಿಸಿಯಾದರೂ, ಕರ್ತೃತ್ವವನ್ನೇ ಹೇಳಬೇಕು. ಅದರ ಬದಲು ನೇರವಾಗಿ ಶ್ರುತಿವಾಕ್ಯವು ಕರ್ತೃತ್ವವನ್ನೇ ಹೇಳುವುದು ಒಳ್ಳೆಯದು ಎಂದು ಈ ಶ್ಲೋಕದ ಅಭಿಪ್ರಾಯ.

**ತಸ್ಮಾತ್ ತ್ವಯಾಪಿ ವಕ್ತವ್ಯಃ ಕರ್ತೈವಾತ್ರ ನ ಚಾಪರಃ ।**
**ಈಕ್ಷಿತೃತ್ವಬಲಾನ್ನೋ ಚೇತ್ ಕಥಂ ಸಾಂಖ್ಯಂ ಜಿಗೀಷಸಿ ॥ ೧೮೭ ॥**

**ಅರ್ಥ–** ತಸ್ಮಾತ್ = ಆ ಕಾರಣದಿಂದ, ಅತ್ರ = ಜನ್ಮಾದಸ್ಯ ಯತಃ ಎಂಬ ಸೂತ್ರದಲ್ಲಿ, ತ್ವಯಾಪಿ = ಅದ್ವೈತಿಯಾದ ನಿನ್ನಿಂದಲೂ ಕೂಡ, ಕರ್ತೈವ = ಬ್ರಹ್ಮನು ಜಗತ್ತಿಗೆ ಕರ್ತೃವೆಂದೇ, ವಕ್ತವ್ಯಃ = ಹೇಳಲ್ಪಡಬೇಕು. ಅಪರಃ = ಬೇರೆ ಕಾರಣವು, ನ ಚ = ಹೇಳಲ್ಪಡಬಾರದು ಕೂಡ, ನಚೇತ್ = ಹೀಗಲ್ಲದಿದ್ದರೆ, ತ್ವಂ = ನೀನು, ಈಕ್ಷಿತೃತ್ವಬಲಾತ್ = ಈಕ್ಷಿತೃತ್ವದ ಕಾರಣದಿಂದ, ಸಾಂಖ್ಯಂ = ಸಾಂಖ್ಯಸಿದ್ಧಾಂತದವರನ್ನು, ಕಥಂ = ಹೇಗೆ, ಜಿಗೀಷಸಿ = ಗೆಲ್ಲಲು ಇಚ್ಛಿಸುತ್ತೀಯೆ?

**ಅನುವಾದ–** ಆದ್ದರಿಂದ ನೀನೂ ಸಹ ಇಲ್ಲಿ ಕರ್ತೃವನ್ನು ಹೇಳಬೇಕೇ ಹೊರತು, ಬೇರೆ ಕಾರಣವನ್ನು ಹೇಳಬಾರದು. ಇಲ್ಲದಿದ್ದರೆ, ಈಕ್ಷಿತೃತ್ವರೂಪವಾದ ಲಿಂಗದಿಂದ ನೀನು ಹೇಗೆ ಸಾಂಖ್ಯನನ್ನು ನಿರಾಕರಿಸುತ್ತೀಯೆ?

**ಭಾವವಿಲಾಸಿನೀ–** ಅತ್ರಾಸ್ಮಿನ್ ಜನ್ಮಾದಿಸೂತ್ರೇ ಶ್ರುತೌ ವಾ ವಕ್ತವ್ಯಃ। ಶಾಸ್ತ್ರಮರ್ಯಾದಾವಿದಾ ಮುಖ್ಯತ ಏವ ದುರಾಗ್ರಹಗ್ರಸ್ತೇನ ತು ಲಕ್ಷಣಯಾ ವಾ ವಾಚ್ಯ ಇತಿ ಭಾವಃ । ಅಪರಃ ಉಪಾದಾನಪದಾರ್ಥಃ । ಬ್ರಹ್ಮಣಿ ಕರ್ತೃತ್ವಾನಂಗೀಕಾರೇ ತದ್ರೀತ್ಯೈವ ಬಾಧಕಮಾಹ – **ಈಕ್ಷಿತೃತ್ವೇತಿ** ॥ ನೋಚೇತ್ ಬ್ರಹ್ಮಣಿ ಕರ್ತೃತ್ವಂ ನಚೇತ್ । ಜಿಗೀಷಸಿಜೇತುಮಿಚ್ಛಸಿ । ತದೈಕ್ಷತೇತಿಶ್ರುತೌ ಐಕ್ಷತೇತೀಕ್ಷಣಕರ್ತೃತ್ವಶ್ರವಣಾತ್ ಸಾಂಖ್ಯಾಭಿಮತಪ್ರಧಾನಂ ನಾತ್ರ ಪ್ರತಿಪಾದ್ಯಂ ಕಿಂತು ಬ್ರಹ್ಮೈವೇತಿ ಸಿದ್ಧಾಂತಿತಮೀಕ್ಷತ್ಯಧಿಕರಣೇ । ಬ್ರಹ್ಮಣಿ ಕರ್ತೃತ್ವಾಭಾವೇ ತನ್ನಸ್ಯಾತ್ । ನಹ್ಯಸಿದ್ಧೇನ ಹೇತುನಾ ಸಾಧ್ಯಸಿದ್ಧಿರಿತಿ ಭಾವಃ ॥ ೧೮೭ ॥

**ವಿವರಣೆ–** ಸಾಂಖ್ಯರು ಈಶ್ವರನನ್ನು ಒಪ್ಪುವುದಿಲ್ಲ. ಪ್ರಕೃತಿಯೇ ಜಗತ್ಕಾರಣವೆಂದು ಹೇಳುತ್ತಾರೆ. ಪ್ರಕೃತಿಯು ವಿಕಾರವನ್ನು ಹೊಂದಿ ಜಗದಾತ್ಮನಾ ಪರಿಣಾಮವನ್ನು ಹೊಂದುತ್ತದೆ ಎಂದು ಅವರ ವಾದ. ಆದರೆ ಅವರೂ ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತಾರೆ. ಆದ್ದರಿಂದ ಜಗತ್ಕಾರಣವನ್ನು ಹೇಳುವ ವಾಕ್ಯದಲ್ಲಿ 'ಸ ಐಕ್ಷತ' ಎಂದು ಈಕ್ಷಿತೃತ್ವವನ್ನು ಹೇಳಿದೆ. ಈ ಈಕ್ಷಿತೃತ್ವವು ಜಡಕ್ಕೆ ಕೂಡುವುದಿಲ್ಲವಾದ್ದರಿಂದ ಚೇತನವನ್ನು ಅಂಗೀಕಾರಮಾಡಬೇಕು ಎಂದು ನೀನು ಸಾಂಖ್ಯರನ್ನು ನಿರಾಕರಿಸುತ್ತೀಯೆ. ಆದ್ದರಿಂದ ಇಲ್ಲಿ ಕರ್ತೃವನ್ನೇ ಹೇಳಬೇಕು, ಹೊರತಾಗಿ ಉಪಾದಾನವನ್ನು ಹೇಳುವ ಪ್ರಸಕ್ತಿಯಿಲ್ಲ.

**ತವ ಯಃ ಶ್ವಾ ಕಥಂ ವ್ಯಾಘ್ರಃ ಸ ಪರಸ್ಯ ಭವಿಷ್ಯತಿ ।**
**ಅನಿಚ್ಛತಾಪಿ ಕರ್ತೃತ್ವಮತೋ ವಾಚ್ಯಂ ತ್ವಯಾಪಿ ಹಿ ॥ ೧೮೮ ॥**

**ಅರ್ಥ–** ತವ = ನಿನ್ನ, ಯಃ = ಯಾವ, ಶ್ವಾ = ನಾಯಿಯು, ಅಸ್ತಿ = ಇದೆಯೋ, ಸಃ = ಆ ನಾಯಿಯು, ಪರಸ್ಯ = ಮತ್ತೊಬ್ಬರಿಗೆ, ಕಥಂ = ಹೇಗೆ, ವ್ಯಾಘ್ರಃ = ಹುಲಿಯು, (ಹುಲಿಯಂತೆ ಭಯಂಕರವು) ಭವಿಷ್ಯತಿ = ಆಗುತ್ತದೆ. ಅತಃ = ಆದ್ದರಿಂದ, ಅನಿಚ್ಛತಾಪಿ = ಇಚ್ಛೆಯಿಲ್ಲದದಿದ್ದರೂ ಕೂಡ, ತ್ವಯಾಪಿ = ನಿನ್ನಿಂದಲೂ ಕೂಡ, ಕರ್ತೃತ್ವಮ್ = ಬ್ರಹ್ಮನಿಗೆ ಜಗತ್ತನ್ನು ಕುರಿತು ಕರ್ತೃತ್ವವು, ವಾಚ್ಯಂ ಹಿ = ಹೇಳಲ್ಪಡಬೇಕಷ್ಟೆ?

**ಅನುವಾದ–** ಯಾವುದು ನಿನಗೆ ನಾಯಿಯಾಗಿದೆಯೋ ಅದು ಇನ್ನೊಬ್ಬರಿಗೆ ಹೇಗೆ ಹುಲಿಯಾಗುತ್ತದೆ? ಆದ್ದರಿಂದ ನೀನು ಇಷ್ಟವಿಲ್ಲದಿದ್ದರೂ ಇಲ್ಲಿ ಕರ್ತೃವನ್ನೇ ಹೇಳಬೇಕು.

**ಭಾವವಿಲಾಸಿನೀ–** ಮನ್ಮತೇ ಕರ್ತೃತ್ವಾಭಾವೇಪಿ ಪರಂ ಪ್ರತಿ ತೇನೋತ್ತರಂ ದೀಯತ ಇತ್ಯಾಶಾಂ ದೂರೀಕರೋತಿ ॥ **ತವೇತಿ** ॥ ಯಃ ಗೃಹೇವಿದ್ಯಮಾನಶ್ಚತುಷ್ಪಾದರ್ಥಾತ್ತವ ಶ್ವಾ ಸಃ ಪರಸ್ಯ ಕಥಂ ವ್ಯಾಘ್ರೋ ಭವಿಷ್ಯತೀತಿ ಯೋಜನಾ । ಕರ್ತೃತ್ವಾನುಪಪತ್ತಿಃ ಬ್ರಹ್ಮಣಃ ಪ್ರತಿಪಾದ್ಯತಾಂ ನ ಹಂತಿಚೇತ್ ಪ್ರಧಾನಸ್ಯಾಪಿ ಪ್ರತಿಪಾದ್ಯತಾಂ ನ ಹನ್ಯಾದಿತಿ ಭಾವಃ । ಅತಃ ಪರನಿರಾಕರಣಾ ಹೇತುತ್ವಾತ್ ॥ ೧೮೮ ॥

**ವಿವರಣೆ–** ನನ್ನ ಮತದಲ್ಲಿ ಕರ್ತೃತ್ವವಿಲ್ಲದಿದ್ದರೂ ಸಾಂಖ್ಯರಿಗೆ ನಾವು ಹೀಗೆ ಉತ್ತರವನ್ನು ಕೊಡುತ್ತೇವೆ ಎಂಬ ಶಂಕೆಗೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ಕರ್ತೃತ್ವಾನುಪಪತ್ತಿಯಿದ್ದರೂ ಕಾರಣವಾಕ್ಯದಲ್ಲಿ ಬ್ರಹ್ಮನು ಪ್ರತಿಪಾದ್ಯನಾಗಬಹುದಾದರೆ, ಅದೇ ಕರ್ತೃತ್ವಾನುಪಪತ್ತಿಯನ್ನು ಹೊಂದಿದ ಪ್ರಧಾನವೂ ಸಹ ಕಾರಣವಾಕ್ಯದಲ್ಲಿ ಯಾಕೆ ಪ್ರತಿಪಾದ್ಯವಾಗಬಾರದು? ಕರ್ತೃತ್ವಾನುಪಪತ್ತಿಯು ನಿನಗೆ ನಾಯಿಯಂತೆ ಇದ್ದರೆ, ಅದು ಸಾಂಖ್ಯರಿಗೆ ವ್ಯಾಘ್ರದಂತೆ ಹೇಗೆ ಭಯವನ್ನುಂಟು ಮಾಡಲು ಸಾಧ್ಯ?

**ಜಡೇ ಚ ನೈವ ಕರ್ತೃತ್ವಮೀಶಾಸಿದ್ಧಿಪ್ರಸಂಗತಃ ।**
**ತಸ್ಮಾತ್ ತಟಸ್ಥತಾಸ್ಯ ಸ್ಯಾಲ್ಲಕ್ಷಣಸ್ಯ ಕಥಂ ವದ ॥ ೧೮೯ ॥**

**ಅರ್ಥ–** ಚ = ಮತ್ತೂ ಕೂಡ, ಈಶಾಸಿದ್ಧಿಪ್ರಸಂಗತಃ = ಜಗತ್ತಿಗೆ ಕರ್ತೃವಾದ ಈಶ್ವರನ ಅಸ್ತಿತ್ವವೇ ಸಿದ್ಧವಾಗದಿರುವ ಪ್ರಸಂಗವಿರುವುದರಿಂದ, ಜಡೇ = ಜಡದಲ್ಲಿ, ಕರ್ತೃತ್ವಮ್ = ಕರ್ತೃತ್ವವು, ನೈವ ಅಸ್ತಿ = ಇಲ್ಲವೇ ಇಲ್ಲ. ತಸ್ಮಾತ್ = ಆದ್ದರಿಂದ, ಅಸ್ಯಲಕ್ಷಣಸ್ಯ = ಬ್ರಹ್ಮನ ಜಗತ್‌ಕರ್ತೃತ್ವವೆಂಬ ಈ ಲಕ್ಷಣಕ್ಕೆ, ತಟಸ್ಥತಾ = ತಟಸ್ಥ ಲಕ್ಷಣತ್ವವು, ಕಥಂ = ಹೇಗೆ, ಸ್ಯಾತ್ = ಆಗುತ್ತದೆಂಬುದನ್ನು, ತ್ವಂ = ನೀನು, ವದ = ಹೇಳು.

**ಅನುವಾದ–** ಜಡದಲ್ಲಿ ಕರ್ತೃತ್ವವನ್ನು ಅಂಗೀಕಾರ ಮಾಡಿದರೆ, ಈಶ್ವರನೇ ಸಿದ್ಧಿಸುವುದಿಲ್ಲ. ಆದ್ದರಿಂದ ಈ ಲಕ್ಷಣವು ತಟಸ್ಥವಾಗುವುದು ಹೇಗೆ ಎಂದು ಹೇಳು.

**ಭಾವವಿಲಾಸಿನೀ–** ಜಡೇಽಜ್ಞಾನಾದೌ । ಈಶಾಸಿದ್ಧಿ ಪ್ರಸಂಗತಃ ಈಶ್ವರಾಸಿದ್ಧಿಪ್ರಸಂಗಾತ್ । ಜಡೇ ಕರ್ತೃತ್ವಾಂಗೀಕಾರೇ ಸಾಂಖ್ಯರೀತ್ಯಾ ಪ್ರಧಾನಸ್ಯೈವ ಜಗತ್ ಕರ್ತೃತ್ವಸಂಭವೇನೇಶ್ವರಾಸಿದ್ಧಿಃ ಸ್ಯಾತ್ । ಅತಃ ಸಾಂಖ್ಯಂ ಜೇತುಕಾಮೇನ ಸೇಶ್ವರವಾದಿನಾಜಡಸ್ಯ ಕರ್ತೃತಾನಾಂಗೀಕಾರ್ಯೇತಿ ಭಾವಃ । ಏತೇನೈವ ಕರ್ತೃತ್ವಭೋಕ್ತೃತ್ವಾದಿಕಮಪ್ಯಂತಃಕರಣಾಜ್ಞಾನ ಜಡನಿಷ್ಠಮೇವೇತಿ ಪರಪ್ರಕ್ರಿಯಾಪಿ ದೂಷಿತಾ ವೇದಿತವ್ಯಾ । ತಸ್ಮಾತ್ ಜಡಸ್ಯ ಕರ್ತೃತ್ವಾಯೋಗಾತ್ । ಅಸ್ಯ ಜಗತ್ಕರ್ತೃತ್ವಾಖ್ಯಸ್ಯ । ಜಗದುಪಾದಾನತ್ವಲಕ್ಷಣಸ್ಯ ತಟಸ್ಥತ್ವವತ್ ಜಗತ್ಕರ್ತೃತ್ವಲಕ್ಷಣಸ್ಯ ತಟಸ್ಥತಾ ತ್ವಯಾಪಿ ವಕ್ತುಂ ನ ಶಕ್ಯೇತಿ ಭಾವಃ ॥ ೧೮೯ ॥

**ವಿವರಣೆ–** ಜಡಕ್ಕೇ ಕರ್ತೃತ್ವವನ್ನು ಒಪ್ಪುವುದಾದರೆ, ಪ್ರಧಾನಕ್ಕೆ ಜಗತ್ಕರ್ತೃತ್ವವು ಕೂಡಬಹುದು. ಆಗ ಈಶ್ವರನೇ ಸಿದ್ಧಿಸುವುದಿಲ್ಲ. ಆದ್ದರಿಂದ ಸಾಂಖ್ಯನನ್ನು ಗೆಲ್ಲಲು ಹೊರಟು ಈಶ್ವರನನ್ನು ಸ್ಥಾಪಿಸುವ ನೀನು ಜಡಕ್ಕೆ ಕರ್ತೃತ್ವವನ್ನು ಅಂಗೀಕಾರ ಮಾಡಬಾರದು. ಬ್ರಹ್ಮನಿಗೇ ಕರ್ತೃತ್ವವನ್ನು ಅಂಗೀಕಾರ ಮಾಡಬೇಕು. ಆದ್ದರಿಂದ ಇದು ತಟಸ್ಥಲಕ್ಷಣವಾಗುವುದಿಲ್ಲ. ಈ ನ್ಯಾಯದಿಂದಲೇ, ಕರ್ತೃತ್ವಭೋಕ್ತೃತ್ವಾದಿಗಳು, ಅಜ್ಞಾನ ಅಥವಾ ಅಂತಃಕರಣನಿಷ್ಠ ಎಂಬ ಪರಪ್ರಕ್ರಿಯೆಯೂ ನಿರಾಕೃತವಾಗುತ್ತದೆ. ಏಕೆಂದರೆ, ಆ ಪಕ್ಷದಲ್ಲಿಯೂ ಈಶ್ವರನನ್ನು ಅಂಗೀಕಾರ ಮಾಡಬೇಕಾದ ಆವಶ್ಯಕತೆಯಿರುವುದಿಲ್ಲ. ಆದ್ದರಿಂದ ಜಗದುಪಾದಾನತ್ವರೂಪವಾದ ಲಕ್ಷಣಕ್ಕೆ ತಟಸ್ಥತ್ವವನ್ನು ಹೇಳಿದಂತೆ ಜಗತ್ಕರ್ತೃತ್ವರೂಪವಾದ ಲಕ್ಷಣಕ್ಕೆ ತಟಸ್ಥತ್ವವನ್ನು ಎಂದೂ ಹೇಳಲು ಬರುವುದಿಲ್ಲ. ಕಾರಣವಾಕ್ಯವು ಹೇಳುವುದು ಜಗತ್ಕರ್ತೃತ್ವರೂಪವಾದ ಕಾರಣತ್ವವನ್ನು ಮಾತ್ರ ಎಂದು ಅಭಿಪ್ರಾಯ.

**ಕ್ರಿಯಾವೇಶಪ್ರಸಂಗೇನ ಕರ್ತೃತ್ವಂ ನ ಚಿತೋ ಯದಿ ।**
**ಜಡಾವೇಶಪ್ರಸಂಗೇನ ತರ್ಹ್ಯಜ್ಞಾನಂ ಕಥಂ ಚಿತಿ ॥ ೧೯೦ ॥**

**ಅರ್ಥ–** ಚಿತಃ = ಬ್ರಹ್ಮನಿಗೆ, ಕ್ರಿಯಾವೇಶಪ್ರಸಂಗೇನ = ಕ್ರಿಯೆಯಸಂಗವು ಬರುವ ಪ್ರಸಂಗವಿರುವುದರಿಂದ, ಕರ್ತೃತ್ವಂ = ಜಗತ್ತನ್ನು ಕುರಿತು ಕರ್ತೃತ್ವವು, ಯದಿ = ಒಂದು ವೇಳೆ, ನ ಸ್ವೀಕ್ರಿಯತೇ = ಅದ್ವೈತಿಯಾದ ನಿನ್ನಿಂದ ಸ್ವೀಕರಿಸಲ್ಪಡದಿದ್ದರೆ, ತರ್ಹಿ = ಆ ಪಕ್ಷದಲ್ಲಿ, ಚಿತಿ = ಆ ಬ್ರಹ್ಮನಲ್ಲಿ, ಜಡಾವೇಶಪ್ರಸಂಗೇನ = ಜಡತ್ವದ ಸಂಗ ಬರುವ ಪ್ರಸಂಗವಿರುವುದರಿಂದ, ಅಜ್ಞಾನಂ ಚ = ಅಜ್ಞಾನವಾದರೂ, ಕಥಂ = ಹೇಗೆ, ತ್ವಯಾ = ನಿನ್ನಿಂದ, ಸ್ವೀಕ್ರಿಯತೇ = ಸ್ವೀಕರಿಸಲ್ಪಡುತ್ತದೆ?

**ಅನುವಾದ–** ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕಾರ ಮಾಡಿದರೆ, ಕ್ರಿಯಾವೇಶ ಉಂಟಾಗುವ ಕಾರಣದಿಂದ ಅಂಗೀಕಾರ ಮಾಡುವುದಿಲ್ಲ ಎಂದು ಹೇಳಿದರೆ, ಬ್ರಹ್ಮನಿಗೆ ಅಜ್ಞಾನವನ್ನು ಅಂಗೀಕಾರ ಮಾಡಿದರೆ, ಜಡಾವೇಶ ಪ್ರಸಂಗವು ಬರುವುದರಿಂದ ಅಜ್ಞಾನವನ್ನಾದರೂ ಹೇಗೆ ಅಂಗೀಕಾರ ಮಾಡುತ್ತೀಯೆ ಎಂದು ನಮ್ಮ ಪ್ರಶ್ನೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ನಿಷ್ಕ್ರಿಯತ್ವಶ್ರುತೇಃ ಪರಾಭಿಮತಾರ್ಥಂ ದೂಷಯತಿ ॥ **ಕ್ರಿಯಾವೇಶೇತಿ** ॥ ಚಿತ ಇತ್ಯುಭಯತ್ರಾಪಿ ಸಂಬಂಧ್ಯತೇ ॥ ೧೯೦ ॥

**ವಿವರಣೆ–** ಕರ್ತೃತ್ವವನ್ನು ಅಂಗೀಕಾರ ಮಾಡಿದರೆ, ಬ್ರಹ್ಮನಿಗೆ ಕ್ರಿಯೆಯನ್ನು ಅಂಗೀಕಾರ ಮಾಡಬೇಕಾಗುತ್ತದೆ. ಆದರೆ ಬ್ರಹ್ಮನು ನಿಷ್ಕ್ರಿಯ ಎಂಬ ಶ್ರುತಿಯಿದೆ. ಅದರ ವಿರೋಧ ಬರುವ ಕಾರಣದಿಂದ ಕರ್ತೃತ್ವವನ್ನು ಅಂಗೀಕಾರ ಮಾಡುವುದಿಲ್ಲ ಎಂದು ಹೇಳಿದರೆ, ಬ್ರಹ್ಮನಿಗೆ ಅಜ್ಞಾನವನ್ನು ಅಂಗೀಕಾರ ಮಾಡಿದರೆ ಅವನಿಗೆ ಜಡತ್ವವೇ ಬರುತ್ತದೆ. ಅದನ್ನು ಹೇಗೆ ಅಂಗೀಕಾರ ಮಾಡುತ್ತೀಯೆ ಎಂದು ನಾವು ಪ್ರಶ್ನೆಯನ್ನು ಕೇಳುತ್ತೇವೆ. ಅಜ್ಞಾನವನ್ನು ಒಪ್ಪಿದರೂ ಅದು ಬ್ರಹ್ಮನ ಜ್ಞಾನಸ್ವರೂಪಕ್ಕೆ ವಿರೋಧಿಯಲ್ಲ ಎಂದು ಹೇಳುವುದಾದರೆ, ಕ್ರಿಯೆಯನ್ನು ಅಂಗೀಕಾರ ಮಾಡಿದರೂ ಅದು ಬ್ರಹ್ಮನ ನಿರ್ವಿಕಾರತ್ವಕ್ಕೆ ವಿರೋಧಿಯಲ್ಲವಾದುದರಿಂದ ಅದನ್ನು ಅಂಗೀಕಾರ ಮಾಡು ಎಂದು ಅಭಿಪ್ರಾಯ.

**ಜಡಾಮಿಶ್ರಂ ಹಿ ತದ್‌ಬ್ರಹ್ಮ ಕೇವಲಶ್ರುತಿಚೋದನಾತ್ ।**
**ಸಮಃ ಸಮಾಧಿರ್ಮಿಥ್ಯಾತ್ವವಾರ್ತಯಾ ತೇ ದ್ವಯೋರಪಿ ॥ ೧೯೧ ॥**

**ಅರ್ಥ–** ಕೇವಲ ಶ್ರುತಿಚೋದನಾತ್ = ಕೇವಲೋ ನಿರ್ಗುಣಶ್ಚ ಎಂಬ ವೇದವಾಕ್ಯದ ಬಲದಿಂದ, ತತ್= ಆ, ಬ್ರಹ್ಮ= ಬ್ರಹ್ಮನು, ಜಡಾಮಿಶ್ರಂ= ಜಡತ್ವ ಸಂಗವಿಲ್ಲದವನಾಗಿ, ಹಿ= ಆಗಿರುವನಷ್ಟೆ. ತೇ= ಅದ್ವೈತಿಯಾದ ನಿನ್ನ, ಮಿಥ್ಯಾತ್ವವಾರ್ತಯಾ= ಪಾರಮಾರ್ಥಿಕವಾಗಿ ಬ್ರಹ್ಮನು ಯಾವ ಧರ್ಮಗಳೂ ಇಲ್ಲದವನಾದರೂ, ಅವನಲ್ಲಿ ಮಿಥ್ಯಾಭೂತ ಧರ್ಮಗಳು ಬರಬಹುದೆಂಬ ಕಲ್ಪನೆಯಿಂದ, ದ್ವಯೋರಪಿ = ಅಜ್ಞಾನ ಮತ್ತು ಕರ್ತೃತ್ವಗಳೆರಡಕ್ಕೂ ಕೂಡ, ಸಮಾಧಿಃ = ಸಮಾಧಾನವು, ಸಮಃ = ಸಮಾನವಾಗಿವೆ.

**ಅನುವಾದ–** 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ನಿರ್ಗುಣ ಶಬ್ದದಿಂದ ಜಡದ ಮಿಶ್ರಣಾಭಾವವನ್ನು ಹೇಳುತ್ತದೆ ಎಂದು ಹೇಳಿದರೆ, ಎರಡೂ ಪಕ್ಷಗಳಲ್ಲಿಯೂ ನಿನ್ನ ಮಿಥ್ಯಾತ್ವಕಲ್ಪನೆಯಿಂದಲೇ ಸಮಾಧಾನವು ದೊರೆಯುತ್ತದೆ.

**ಭಾವವಿಲಾಸಿನೀ–** ಹಿ ಯಸ್ಮಾತ್ ತದ್‌ಬ್ರಹ್ಮ ಕೇವಲಶ್ರುತಿಚೋದನಾತ್ ಕೇವಲೋ ನಿರ್ಗುಣಶ್ಚೇತ್ಯತ್ರ ಕೇವಲ ಇತಿ ಶ್ರುತ್ಯಾಜಡಾಮಿಶ್ರಿತತ್ವವಿಧಾನಾತ್ ಜಡಾಮಿಶ್ರಂ ತಸ್ಮಾದಿತಿ

ಪೂರ್ವೇಣಾನ್ವಯಃ । ನಿಷ್ಕ್ರಿಯತ್ವಶ್ರುತಿವಿರುದ್ಧಕ್ರಿಯಾವೇಶ ಪ್ರಸಂಗೇನ ಕರ್ತೃತ್ವಂ ನೋಚ್ಯತೇ ಚೇತ್ ಕೇವಲಶ್ರುತಿವಿರುದ್ಧ ಜಡಾವೇಶ- ಪ್ರಸಂಗೇನಾಜ್ಞಾನಮಪಿ ಬ್ರಹ್ಮಣಿ ನ ಸಿದ್ಧ್ಯೇದಿತಿ ಭಾವಃ । ತೇ ಮಿಥ್ಯಾತ್ವವಾರ್ತಯಾ ಸಮಾಧಿಃ ಪರಿಹಾರೋಽಪಿದ್ವಯೋಃ ಸಮಃ ॥ ಪಾರ-ಮಾರ್ಥಿಕಜಡಾಭಾವಪರಾ ಕೇವಲಶ್ರುತಿಃ ಮಿಥ್ಯಾಭೂತಜಡಾಂಗೀಕಾರೇ ನ ವಿರುಧ್ಯತೇ ಚೇತ್ ತರ್ಹಿತ್ವನ್ಮತೇ ಕರ್ತೃತ್ವಸ್ಯಾಪಿ ಮಿಥ್ಯಾತ್ವಾತ್ ಪಾರಮಾರ್ಥಿಕಕ್ರಿಯಾವೇಶಾಭಾವಪರಾ ನಿಷ್ಕ್ರಿಯತ್ವ ಶ್ರುತಿರಪಿ ನ ಕರ್ತೃತ್ವವಿರೋಧಿನೀಸ್ಯಾತ್ । ತಸ್ಮಾತ್ ಬ್ರಹ್ಮಣ್ಯಜ್ಞಾನವತ್ ಕರ್ತೃತ್ವ-ಮಂಗೀಕಾರಾರ್ಹಮಿತಿ ಭಾವಃ ॥ ೧೯೧ ॥

**ವಿವರಣೆ–** ನಿಷ್ಕ್ರಿಯತ್ವಶ್ರುತಿಯ ವಿರೋಧವಿರುವುದರಿಂದ ಕ್ರಿಯಾವೇಶವನ್ನು ಒಪ್ಪಿ ಬ್ರಹ್ಮನಿಗೆ ಕರ್ತೃತ್ವವನ್ನು ಅಂಗೀಕಾರಮಾಡಲು ಬರುವುದಿಲ್ಲ ಎಂದು ಅದ್ವೈತಿಯು ಹೇಳಿದರೆ, 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ಕೇವಲಶಬ್ದದಿಂದ ಜಡಾಮಿಶ್ರಿತತ್ವವನ್ನು ಹೇಳುವುದರಿಂದ, ಬ್ರಹ್ಮನಿಗೆ ಅಜ್ಞಾನವನ್ನೂ ಅಂಗೀಕಾರ ಮಾಡಲು ಬರುವುದಿಲ್ಲ. ಅಜ್ಞಾನವನ್ನು ಒಪ್ಪಿದರೆ, ಜಡಾವೇಶವು ಬರುವ ಕಾರಣ ಅಜ್ಞಾನವು ಸಿದ್ಧವಾಗದೇ ಹೋಗಲಿ ಎಂದು ನಮ್ಮ ಆಪತ್ತಿ.

'ಕೇವಲ' ಶ್ರುತಿಯು ಪಾರಮಾರ್ಥಿಕವಾದ ಜಡದ ಅಭಾವವನ್ನು ಹೇಳಿದರೂ, ಮಿಥ್ಯಾಭೂತವಾದ ಜಡವನ್ನು ಅಂಗೀಕಾರಮಾಡಲು ವಿರೋಧವಿಲ್ಲ ಎಂದು ಹೇಳಿ ಅಜ್ಞಾನವನ್ನು ಸಾಧಿಸುವುದಾದರೆ, ಕರ್ತೃತ್ವವನ್ನು ಒಪ್ಪಿದರೂ ಕರ್ತೃತ್ವಕ್ಕೆ ಉಪಯೋಗಿಯಾದ ಕ್ರಿಯೆಯು ಪಾರಮಾರ್ಥಿಕವಲ್ಲದ ಕಾರಣ ಮತ್ತು ನಿಷ್ಕ್ರಿಯತ್ವಶ್ರುತಿಯು ಪಾರಮಾರ್ಥಿಕ ಕ್ರಿಯೆಯ ಅಭಾವವನ್ನು ಹೇಳುವ ಕಾರಣ ಅಪಾರಮಾರ್ಥಿಕವಾದ ಕ್ರಿಯೆಯನ್ನು ಒಪ್ಪಿದರೆ ಯಾವ ವಿರೋಧವೂ ಇಲ್ಲವಾದ್ದರಿಂದ ಅಂತಹ ಕ್ರಿಯೆಯಿಂದ ಕರ್ತೃತ್ವವನ್ನೇ ಅಂಗೀಕಾರ ಮಾಡು ಎಂದು ಆಪತ್ತಿ. ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ಅಂಗೀಕಾರ ಮಾಡಿದಂತೆ ಸಮಾನಯೋಗಕ್ಷೇಮಾಪನ್ನವಾದ ಕರ್ತೃತ್ವವನ್ನೂ ಅಂಗೀಕಾರ ಮಾಡು ಎಂದು ಅಭಿಪ್ರಾಯ.

**ಮಮ ತು ಬ್ರಹ್ಮಗಾಜ್ಞಾನಂ ಮೃಷಾ ಶಾಸ್ತ್ರಾರ್ಥವತ್ತ್ವತಃ ।**
**ಕರ್ತಾ ಜೀವೋಽಪಿ ಹಿ ಯದಾ ಶಕ್ತಃ ಕಿಮು ತದಾ ಪ್ರಭುಃ ॥ ೧೯೨ ॥**

**ಅರ್ಥ–** ಮಮ= ನನ್ನ, ಸಿದ್ಧಾಂತೇತು= ಸಿದ್ಧಾಂತದಲ್ಲಿಯಾದರೂ, (ದ್ವೈತಸಿದ್ಧಾಂತದಲ್ಲಾದರೂ) ಬ್ರಹ್ಮಗಾಜ್ಞಾನಂ = ಬ್ರಹ್ಮನಲ್ಲಿರುವ ಅಜ್ಞಾನವು, ಮೃಷಾ = ಅಸತ್ಯವಾದುದೇ ಆಗಿದೆ. ಶಾಸ್ತ್ರಾರ್ಥವತ್ತ್ವತಃ = ಶಾಸ್ತ್ರಕ್ಕೆ ಮೋಕ್ಷರೂಪ ಪ್ರಯೋಜನವನ್ನು ಅಂಗೀಕಾರ ಮಾಡಬೇಕಾಗಿರುವುದರಿಂದ, ಅಸ್ವತಂತ್ರಃ = ಅಸ್ವತಂತ್ರನಾದ, ಜೀವೋಽಪಿ = ಜೀವನೂ ಕೂಡ, ಯದಾ = ಯಾವಾಗ, ಕರ್ತಾ = ಕರ್ತೃವು ಆಗಿದ್ದಾನೋ, ತದಾ = ಆಗ,

ಪ್ರಭುಃ = ಸರ್ವಸಮರ್ಥನಾದ ಭಗವಂತನು, ಶಕ್ತಃ = ಕರ್ತೃತ್ವಶಕ್ತಿಯುಳ್ಳವನು, ಇತಿ= ಎಂಬುದಾಗಿ, ಕಿಂವಕ್ತವ್ಯಮ್= ಬೇರೆ ಹೇಳಬೇಕೇನು?

**ಅನುವಾದ–** ನನಗಾದರೆ, ಬ್ರಹ್ಮಗತ ಅಜ್ಞಾನವು ಸರ್ವಥಾ ಮಿಥ್ಯಾಭೂತವಾದುದು. ಶಾಸ್ತ್ರಕ್ಕೆ ಮೋಕ್ಷರೂಪ ಪ್ರಯೋಜನವನ್ನು ಅವಶ್ಯವಾಗಿ ಅಂಗೀಕಾರ ಮಾಡಬೇಕಾಗುವುದರಿಂದ ಅಸ್ವತಂತ್ರನಾದ ಜೀವನೂ ಸಹ ಕರ್ತನೇ. ಇನ್ನು ಸರ್ವಸಮರ್ಥನಾದ ಪ್ರಭುವಿಗೆ ಕರ್ತೃತ್ವವಿರುವುದರಲ್ಲಿ ಯಾವ ಅನುಪಪತ್ತಿಯಿದೆ?

**ಭಾವವಿಲಾಸಿನೀ–** ಮಮ ತು ಮತೇ ಬ್ರಹ್ಮಗಾಜ್ಞಾನಂ ಮೃಷಾ ಮಿಥ್ಯಾ । ಬ್ರಹ್ಮನಿಷ್ಠಾಜ್ಞಾನ-ಮಿಥ್ಯಾತ್ವಂ ಮಯಾಪ್ಯಂಗೀಕ್ರಿಯತೇ । ಬ್ರಹ್ಮಣ್ಯಜ್ಞಾನಸ್ಯೈವಾಭಾವಾತ್ । ಕರ್ತೃತ್ವಂ ತು ಬ್ರಹ್ಮಗತಂ ನ ಮೃಷಾ ಇತ್ಯೇವ ವಿಶೇಷಃ। ತತ್ರ ಹೇತುಮಾಹ–**ಶಾಸ್ತ್ರಾರ್ಥವತ್ತ್ವತ** ಇತಿ ॥ ಶಾಸ್ತ್ರಾರ್ಥವತ್ತ್ವತಃ ಶಾಸ್ತ್ರಸ್ಯ ಮೋಕ್ಷಾಖ್ಯಪ್ರಯೋಜನವತ್ತ್ವಾವಶ್ಯಂಭಾವಾತ್ । ಜೀವಸ್ಯಕರ್ತೃತ್ವಾಭಾವೇಽಕೃತಾ-ಭ್ಯಾಗಮಪ್ರಸಂಗೇನ ಜೀವೋಽಪಿ ಯದಾಕರ್ತಾ ತದಾಶಕ್ತಃ ಸರ್ವಶಕ್ತಿಮಾನ್ ಪರಮಾತ್ಮಾ ಕರ್ತೇತಿ ಕಿಮುವಕ್ತವ್ಯಮಿತಿ ಯೋಜನಾ । ಅಸ್ವತಂತ್ರಸ್ಯ ಜೀವಸ್ಯ ಪ್ರಯೋಜನವಶಾತ್ ಕರ್ತೃತ್ವೇಽಂಗೀಕಾರ್ಯೇ ಸ್ವತಂತ್ರಸ್ಯ ಸರ್ವಶಕ್ತಸ್ಯ ಹರೇಃ ಕರ್ತೃತ್ವಂ ಶಿರಸಾ ಧಾರ್ಯಮಿತಿ ಭಾವಃ ॥ ೧೯೨ ॥

**ವಿವರಣೆ–** ಬ್ರಹ್ಮಗತ ಅಜ್ಞಾನವು ಮಿಥ್ಯಾ ಎಂದು ನಾನೂ ಅಂಗೀಕರಿಸುತ್ತೇನೆ. ಆದರೆ, ನಿನ್ನ ರೀತಿಯಲ್ಲಲ್ಲ. ನನ್ನ ರೀತಿಯಲ್ಲಿ ಬ್ರಹ್ಮನಲ್ಲಿ ಅಜ್ಞಾನವೇ ಇಲ್ಲವಾದ ಕಾರಣ ಅಜ್ಞಾನವು ಮಿಥ್ಯ. ಆದರೆ ಕರ್ತೃತ್ವವು ಮಾತ್ರ ನಿನ್ನಂತೆ ಅಜ್ಞಾನಕ್ಕೆ ಸಮಾನಯೋಗಕ್ಷೇಮವನ್ನು ಹೊಂದಿದುದಲ್ಲ. ಅದು ಸತ್ಯವಾಗಿಯೇ ಇದೆ. ಅದಕ್ಕೆ ಏನು ಕಾರಣವೆಂದರೆ ಅಸ್ವತಂತ್ರನಾದ ಜೀವನಿಗೂ ಸಹ ಕರ್ತೃತ್ವವಿದೆ. ಇಲ್ಲದಿದ್ದರೆ, ವಿಧಿ ನಿಷೇಧರೂಪವಾದ ಶಾಸ್ತ್ರವು ಪ್ರಯೋಜನಶೂನ್ಯವಾಗುತ್ತದೆ. ಅಲ್ಲದೆ, ಜೀವನಿಗೆ ಕರ್ತೃತ್ವವು ಇಲ್ಲದಿದ್ದರೆ, ಜೀವನು ಅನುಭವಿಸುವ ಸುಖದುಃಖಗಳು ನಿರ್ನಿಮಿತ್ತವಾಗುವುದರಿಂದ ಜೀವನಿಗೆ 'ಅಕೃತಾಭ್ಯಾಗಮ' ಪ್ರಸಂಗವು ಬರುತ್ತದೆ. ಆದ್ದರಿಂದ ಜೀವನೂ ಕರ್ತೃ ಎಂದು ಅಂಗೀಕರಿಸಬೇಕು. ಹೀಗಿರುವಾಗ ಸ್ವತಂತ್ರನಾದ ಹರಿಯ ಕರ್ತೃತ್ವವನ್ನು ಶಿರಸಾಧಾರಣೆ ಮಾಡಿ ಅಂಗೀಕರಿಸಬೇಕು ಎಂದು ಅಭಿಪ್ರಾಯ.

ನಿಷ್ಕ್ರಿಯತ್ವಶ್ರುತೇರ್ಭೀಶ್ಚೇತ್ ಕಥಂ ಸ್ಯಾತ್ ತೇ ಗತಾಗತಂ ।
ವ್ಯಾವಹಾರಿಕಮೇತಚ್ಚೇತ್ ಕ್ರಿಯೇಯಂ ಚಾಸ್ತು ತಾದೃಶೀ ।
ನ ಹಿ ನಿಷ್ಕ್ರಿಯವಾಗೇಕಾಂ ಕ್ರಿಯಾಮೇವ ನಿಷೇಧತಿ ॥ ೧೯೩ ॥

**ಅರ್ಥ–** ತೇ = ನಿನಗೆ, ನಿಷ್ಕ್ರಿಯತ್ವ ಶ್ರುತೇಃ = ಬ್ರಹ್ಮನನ್ನು ನಿಷ್ಕ್ರಿಯ ಎಂದು ಹೇಳುವ ವೇದವಾಕ್ಯದಿಂದ, ಭೀಃ = ಭಯವು, ಅಸ್ತಿಚೇತ್ = ಇರುವುದಾದರೆ, ತೇ =

ಸಂಸಾರದಲ್ಲಿರುವ ಬ್ರಹ್ಮಾಭಿನ್ನನಾದ ನಿನಗೆ, ಗತಾಗತಂ = ಗಮನ, ಆಗಮನ ಮೊದಲಾದ ಕ್ರಿಯೆಗಳು, ಕಥಂ = ಹೇಗೆ, ಸ್ಯಾತ್ = ಇರಲು ಸಾಧ್ಯ. ಏತತ್ = ಈ ಗಮನಾಗಮನ ಮೊದಲಾದ ಕ್ರಿಯೆಗಳ ಅಸ್ತಿತ್ವವು, ವ್ಯವಹಾರಿಕಂ ಚೇತ್ = ವ್ಯವಹಾರಿಕವೆಂದು ಹೇಳುವುದಾದರೆ, ಇಯಂ ಕ್ರಿಯಾಚ= ಬ್ರಹ್ಮನಲ್ಲಿರುವ ಜಗತ್‌ಕರ್ತೃತ್ವಕ್ಕೆ ಉಪಯೋಗಿಯಾದ ಈ ಕ್ರಿಯೆಯೂ ಕೂಡ, ತಾದೃಶೀ = ಹಾಗೇ ವ್ಯವಹಾರಿಕವೇ, ಅಸ್ತು = ಆಗಲಿ. ನಿಷ್ಕ್ರಿಯವಾಕ್ = ಬ್ರಹ್ಮನನ್ನು ನಿಷ್ಕ್ರಿಯನೆಂದು ಹೇಳುವ ವೇದವಾಕ್ಯವು, ಏಕಾಂ ಕ್ರಿಯಾಮೇವ = ಒಂದೇ ಒಂದು ಕ್ರಿಯೆಯನ್ನು, (ಬ್ರಹ್ಮನಲ್ಲಿ ಇರುವ ಕೇವಲ ಜಗತ್‌ಕರ್ತೃತ್ವಕ್ರಿಯೆಯನ್ನು ಮಾತ್ರ) ನಹಿ ನಿಷೇಧತಿ = ನಿಷೇಧ ಮಾಡುವುದಿಲ್ಲವಷ್ಟೆ?

**ಅನುವಾದ–** ನಿಷ್ಕ್ರಿಯತ್ವಶ್ರುತಿಯ ಭಯದಿಂದ ಬ್ರಹ್ಮನಲ್ಲಿ ಕ್ರಿಯೆಯನ್ನು ಒಪ್ಪದೇ ಇದ್ದರೆ, ನಿನಗೆ ಗಮನಾಗಮನಗಳು ಹೇಗೆ ಕೂಡುತ್ತವೆ? ಗಮನಾಗಮನಗಳು ವ್ಯಾವಹಾರಿಕವೆಂದು ಹೇಳುವುದಾದರೆ, ಜಗತ್ಕರ್ತೃತ್ವಕ್ಕೆ ಉಪಯೋಗಿಯಾದ ಕ್ರಿಯೆಯೂ ವ್ಯಾವಹಾರಿಕವೇ ಆಗಲಿ. ನಿಷ್ಕ್ರಿಯ ಎಂಬ ಪದವು ಒಂದೇ ಕ್ರಿಯೆಯನ್ನೇ ನಿಷೇಧಮಾಡುವುದಿಲ್ಲವಷ್ಟೇ?

**ಭಾವವಿಲಾಸಿನೀ–** ನಿಷ್ಕ್ರಿಯತ್ವಶ್ರುತೇಃ ಪರರೀತ್ಯಾಪ್ರತಿಬಂದ್ಯಂತರೇಣಾಪ್ಯುತ್ತರಮಾಹ – **ನಿಷ್ಕ್ರಿಯತ್ವೇತಿ** ॥ ತೇ ತವ ಗತಾಗತಂ ಗಮನಾಗಮನಮ್ । ಶ್ರುತಿಭಿಯಾ ಬ್ರಹ್ಮಣಿ ಕ್ರಿಯಾ-ಮನಂಗೀಕುರ್ವತಾ ಮಾಯಾವಾದಿನಾ ಜೀವೇಪಿ ಗತಾಗತಕ್ರಿಯಾ ನಾಂಗೀಕಾರ್ಯಾ । ಜೀವಸ್ಯಾಪಿ ಬ್ರಹ್ಮರೂಪತ್ವಾಂಗೀಕಾರಾದಿತಿ ಕ್ರಿಯಾಯಾಃ ಕ್ರಿಯೈವ ಪ್ರತಿಬಂದೀತಿ ಭಾವಃ । ಏತತ್ ಜೀವಕ್ರಿಯಾದಿಕಮ್ । ಇಯಂ ಬ್ರಹ್ಮನಿಷ್ಠಾ । ತಾದೃಶೀವ್ಯಾವಹಾರಿಕೀ । ಕ್ರಿಯಾಮಾತ್ರ-ನಿಷೇಧಕನಿಷ್ಕ್ರಿಯಶ್ರುತೇಃ ಕ್ರಿಯಾದ್ವಯೇಪಿ ಸಾಮ್ಯಮಿತ್ಯಾಹ – **ನಹೀತಿ** ॥ ಏಕಾಂ ಕ್ರಿಯಾಂ ಬ್ರಹ್ಮಗತಕ್ರಿಯಾಮ್ ॥ ೧೯೩ ॥

**ವಿವರಣೆ–** ಈ ಶ್ಲೋಕದಲ್ಲಿ ನಿಷ್ಕ್ರಿಯತ್ವಶ್ರುತಿಗೆ ಅದ್ವೈತಿಗಳ ರೀತಿಯಿಂದಲೇ ಇನ್ನೊಂದು ಪ್ರತಿಬಂದಿಯನ್ನು ನೀಡಿ ಉತ್ತರವನ್ನು ಹೇಳುತ್ತಾರೆ. ಜೀವನಿಗೆ ಸಂಸಾರಾವಸ್ಥೆಯಲ್ಲಿ ಗಮನಾಗಮನಗಳು ಇವೆ. ಜೀವನು ಬ್ರಹ್ಮಸ್ವರೂಪನೇ ಆಗಿದ್ದಾನೆ. ಆದ್ದರಿಂದ ಬ್ರಹ್ಮನಿಗೆ ಗಮನಾಗಮನಗಳು ಹೇಗೆ ಕೂಡುತ್ತವೆ ಎಂಬುದು ನಮ್ಮ ಪ್ರಶ್ನೆ. ಗಮನಾಗಮನಗಳು ವ್ಯಾವಹಾರಿಕವಾದ್ದರಿಂದ ನಿಷ್ಕ್ರಿಯತ್ವಶ್ರುತಿಯು ಪಾರಮಾರ್ಥಿಕ ಕ್ರಿಯೆಯನ್ನು ನಿಷೇಧಮಾಡುವುದರಿಂದ ವಿರೋಧವಿಲ್ಲ ಎಂದು ಹೇಳುವುದಾದರೆ, ಜಗತ್ಸೃಷ್ಟಿಗೆ ಉಪಯೋಗಿಯಾದ ಬ್ರಹ್ಮನ ಕ್ರಿಯೆಯನ್ನೂ ವ್ಯಾವಹಾರಿಕವೆಂದೇ ಹೇಳು. ಆಗ ಕರ್ತೃತ್ವಕ್ಕೆ ವಿರೋಧವಿರುವುದಿಲ್ಲ. ನಿಷ್ಕ್ರಿಯತ್ವಶ್ರುತಿಯು ಎರಡೂ ಕ್ರಿಯೆಗಳನ್ನೂ ನಿಷೇಧ ಮಾಡಬೇಕಷ್ಟೇ? ಆದ್ದರಿಂದ ಗಮನಾಗಮನ ಕ್ರಿಯೆಯಲ್ಲಿ ಯಾವ ಸಮರ್ಥನೆಯನ್ನು ಕಲ್ಪನೆ ಮಾಡುತ್ತೀಯೋ ಸೃಷ್ಟಿಕ್ರಿಯೆಯಲ್ಲಿಯೂ ಅದೇ ಸಮರ್ಥನೆಯನ್ನು ಅಂಗೀಕರಿಸು.

**ಚಿತ್ರಂ ಚಿತ್ರಕ್ರಿಯಾಗಾರಸಂಸಾರೇ ನ ತಟಸ್ಥತಾ ।**
**ಜಗಜ್ಜನ್ಮಾದಿಕರಣಕ್ರಿಯಾಮಾತ್ರೇ ತು ಸಾ ಕಿಲ ॥ ೧೯೪ ॥**

**ಅರ್ಥ–** ಚಿತ್ರಕ್ರಿಯಾಗಾರಸಂಸಾರೇ = ಚಿತ್ರ = ನಾನಾವಿಧಗಳಾದ, ಕ್ರಿಯಾ = ಕ್ರಿಯೆಗಳಿಗೆ, ಆಗಾರ = ಆಶ್ರಯವಾದ, ಸಂಸಾರೇ = ಸಂಸಾರದಲ್ಲಿ, (ಸಂಸಾರದಲ್ಲಿರುವ ಜೀವನಲ್ಲಿ ಇರುವ ಕ್ರಿಯೆಗಳಿಗೆ, ತಟಸ್ಥತಾ = ತಟಸ್ಥತ್ವವು, ನ = ಇಲ್ಲ. ಜಗಜ್ಜನ್ಮಾದಿಕರಣಕ್ರಿಯಾ ಮಾತ್ರೇ ತು = ಜಗತ್ತಿನ ಸೃಷ್ಟಿ ಮೊದಲಾದವುಗಳಿಗೆ ಕಾರಣವಾದ ಬ್ರಹ್ಮನಲ್ಲಿರುವ ಕ್ರಿಯೆಗೆ ಮಾತ್ರವೇ, ಸಾ = ಆ, ತಟಸ್ಥತಾ = ತಟಸ್ಥತತ್ವವು, ಕಿಲ = ಇದೆಯಷ್ಟೇ. ಇದಂ = ಇದು, ಚಿತ್ರಂ = ಬಹಳ ವಿಚಿತ್ರವಾಗಿದೆ.

**ಅನುವಾದ–** ವಿಚಿತ್ರಕ್ರಿಯೆಗಳ ಆಧಾರವಾದ ಸಂಸಾರದಲ್ಲಿ ಇರುವ ಗಮನಾಗಮನಾದಿ ಕ್ರಿಯೆಗಳಿಗೆ ತಟಸ್ಥತ್ವವಿಲ್ಲ. ಜಗತ್ಸೃಷ್ಟಿಕ್ರಿಯೆಯಲ್ಲಿ ಮಾತ್ರ ತಟಸ್ಥತ್ವವಿದೆ ಎಂದು ಹೇಳುವುದು ವಿಚಿತ್ರವಾಗಿ ತೋರುತ್ತದ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪ್ರತಿಬಂದೀಮಾಹ – **ಚಿತ್ರಮಿತಿ** ॥ ಸಾ ತಟಸ್ಥತಾ । ನಿಷ್ಕ್ರಿಯಶ್ರುತಿಸಾಮ್ಯೇತಿ ಜನನಮರಣಗಮನಾಗಮನೋತ್ಪತನಾಧಃ ಪತನಾದ್ಯನಂತಕ್ರಿಯಾ-ವಿಶಿಷ್ಟಸಂಸಾರಾಧಾರತ್ವಂ ಬ್ರಹ್ಮಣ್ಯೇವ ಕಿಲ । ಜಗತ್ ಜನ್ಮಾದಿಕ್ರಿಯಾ ನ ಬ್ರಹ್ಮಣಿ ಕಿಲ । ಇದಂ ಚೈಕಮಾಶ್ಚರ್ಯಮಿತಿ ಭಾವಃ ॥ ೧೯೪ ॥

**ವಿವರಣೆ–** ಈ ಶ್ಲೋಕದಲ್ಲಿ ಇನ್ನೊಂದು ರೀತಿಯಲ್ಲಿ ಪ್ರತಿಬಂದಿಯನ್ನು ಹೇಳುತ್ತಾರೆ. ಸಂಸಾರದಲ್ಲಿ ಜನನ, ಮರಣ, ಗಮನ, ಆಗಮನ, ಉತ್ಪತನ, ಅಧಃಪತನ, ಮೊದಲಾದ ಅನೇಕಾನೇಕ ಕ್ರಿಯೆಗಳಿವೆ. ಸಂಸಾರವು ಇಂತಹ ಕ್ರಿಯಾವಿಶಿಷ್ಟವಾದುದು. ಆ ಸಂಸಾರಕ್ಕೆ ಆಧಾರನಾದವನು ಬ್ರಹ್ಮನೇ ಎಂದು ಒಪ್ಪುವವರು ಸೃಷ್ಟಿಕ್ರಿಯೆಯು ಮಾತ್ರ ಬ್ರಹ್ಮನಲ್ಲಿಲ್ಲ ಎಂದು ಹೇಳುವುದು ಆಶ್ಚರ್ಯದ ಸಂಗತಿ ಎಂದು ಅಭಿಪ್ರಾಯ.

**ಮಮ ಸರ್ವಜ್ಞ ಇತ್ಯುಕ್ತವಿಜ್ಞಾನಕ್ರಿಯಯಾ ಸಹ ।**
**ಯೋನಿರಿತ್ಯುಕ್ತಕರ್ತೃತ್ವಕ್ರಿಯಾಽಸ್ತ್ಯೇವ ನ ವಿಕ್ರಿಯಾ ॥ ೧೯೫ ॥**

**ಅರ್ಥ–** ಮಮ = ನನ್ನ ಮತೇತು = ಮತದಲ್ಲಿಯಾದರೂ, ಸರ್ವಜ್ಞಇತ್ಯುಕ್ತ ವಿಜ್ಞಾನಕ್ರಿಯಯಾ ಸಹ = ಯಃ ಸರ್ವಜ್ಞಃ ಎಂಬ ಶ್ರುತಿಯು ಹೇಳಿದ ಜ್ಞಾನ ಎಂಬ ಕ್ರಿಯೆಯ ಜೊತೆಗೆ, ಯೋನಿರಿತ್ಯುಕ್ತಕರ್ತೃತ್ವಕ್ರಿಯಾ = ಏಷ ಯೋನಿಃ ಸರ್ವಸ್ಯ ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಕರ್ತೃತ್ವಕ್ರಿಯೆಯೂ, ಚ = ಕೂಡ, ಅಸ್ತಿ ಏವ = ಇದ್ದೇ ಇದೆ. ಕಿಂತು = ಆದರೆ, ತಸ್ಮಿನ್= ಆ ಬ್ರಹ್ಮನಲ್ಲಿ, ವಿಕ್ರಿಯಾ= ವಿಕಾರವು, ನ = ಇಲ್ಲ.

**ಅನುವಾದ–** ನನ್ನ ಮತದಲ್ಲಾದರೆ, 'ಯಃ ಸರ್ವಜ್ಞ' ಎಂಬ ಶ್ರುತಿಯು ಹೇಳಿದ ವಿಜ್ಞಾನಕ್ರಿಯೆಯು ಹೇಗೆ ಸತ್ಯವೋ 'ಯೋನಿಃ' ಎಂದು ಹೇಳಲ್ಪಟ್ಟ ಕರ್ತೃತ್ವಕ್ರಿಯೆಯೂ ಸಹ ಹಾಗೆಯೇ ಸತ್ಯವೇ ಆಗಿದೆ. ನಾವು ಬ್ರಹ್ಮನಿಗೆ ಕ್ರಿಯೆಯನ್ನು ಒಪ್ಪಿದರೂ ವಿಕಾರವನ್ನು ಒಪ್ಪುವುದಿಲ್ಲ.

**ಭಾವವಿಲಾಸಿನೀ–** ಪರಸ್ಯಾಪಿ ಪ್ರತಿಬಂದ್ಯಂತರಂ ಸೂಚಯನ್ ಸ್ವಮತೇ ನಿಷ್ಕ್ರಿಯ-ಶ್ರುತೇರರ್ಥಾಂತರಮಾಹ—ಮಮೇತಿ ॥ ಯೋನಿರಿತ್ಯುಕ್ತಕರ್ತೃತ್ವಕ್ರಿಯಾ ಏಷ ಯೋನಿಃ ಸರ್ವಸ್ಯಂ ಯದ್ಭೂತಯೋನಿಂ ಪರಿಪಶ್ಯಂತಿಧೀರಾಃ, ಮಮ ಯೋನಿಃ, ಯಥೈಕಾಯೋನಿರುಚ್ಯತ ಇತ್ಯಾದಿ ಶ್ರುತಿಸ್ಮೃತಿಷು ಯೋನಿರಿತ್ಯುಕ್ತಕರ್ತೃತ್ವಕ್ರಿಯೇತ್ಯರ್ಥಃ । ಯೋನಿಶಬ್ದ ಪ್ರಯೋಗಮಹಿಮ್ನಾ ಲೌಕಿಕಪಶ್ವಾದಿಯೋನಿರಿವ ಪುತ್ರೋತ್ಪತ್ತಾವುಪಚಯಾಪಚಯ- ತನ್ನಿಮಿತ್ತದುಃಖಾದಿಕ್ರಿಯಾ ಭಗವತ್ಯಪಿ ಪ್ರಾಪ್ತಾ । ತಾಂ ನಿಷೇದ್ಧುಂ ನಿಷ್ಕಲಂ ನಿಷ್ಕ್ರಿಯಂ ಶಾಂತಮಿತಿ ಶ್ರುತಿಃ ಪ್ರವೃತ್ತಾ । ವಿರುದ್ಧಾ ಕ್ರಿಯಾವಿಕ್ರಿಯೇತಿ ವ್ಯುತ್ಪತ್ತ್ಯೋಪಚಯಾಪಚಯಾದಿ ವಿಕ್ರಿಯಾಯಾ ಅಪಿ ಕ್ರಿಯಾತ್ವೇನ ನಿಷ್ಕ್ರಿಯಪದನಿಷೇಧ್ಯತ್ವ ಸಂಭವಾತ್ । ಪ್ರತ್ಯುತಕರ್ತೃತ್ವ ರೂಪಕ್ರಿಯಾಯಾ ಧಾತ್ವರ್ಥ-ರೂಪಕ್ರಿಯಾತ್ಮಕತಯಾಽಮುಖ್ಯತ್ವೇನೋಪಚಯಾಪಚಯೋರಸ್ತಾಡನಾದಿಕ್ರಿಯಾ-ಯಾಶ್ಚೋತ್ಕ್ಷೇಪಣಾಪಕ್ಷೇಪಣಾದಿರೂಪತಯಾ ಮುಖ್ಯಕ್ರಿಯಾತ್ವಾನ್ಮುಖ್ಯಾ ಮುಖ್ಯಯೋ-ರ್ಮುಖ್ಯಸ್ಯೈವ ಗ್ರಾಹ್ಯತ್ವೇನೋಕ್ತ ವಿಕ್ರಿಯಯಾ ಏವ ಕ್ರಿಯಾಶಬ್ದಬೋಧ್ಯತಯಾ ತನ್ನಿಷೇಧಸ್ಯೈವ ನ್ಯಾಯ್ಯತ್ವಾದಿತಿ ಭಾವಃ । ಅನೇನೈವ ನಿಷ್ಕ್ರಿಯಶ್ರುತಿವಿರೋಧೇನ ಬ್ರಹ್ಮಣಿ ಕರ್ತೃತ್ವ-ಕ್ರಿಯಾನಂಗೀಕಾರೇ ಸತ್ಯಂ ಜ್ಞಾನಮಿತ್ಯುಕ್ತಜ್ಞಾನಕ್ರಿಯಾಪಿ ನ ಸ್ಯಾದಿತಿ ಪ್ರತಿಬಂದ್ಯತರಂ ಚ ಸೂಚಿತಮ್ ॥ ೧೯೫ ॥

**ವಿವರಣೆ–** ಪರವಾದಿಗಳಿಗೆ ಇನ್ನೊಂದು ಪ್ರತಿಬಂದಿಯನ್ನು ಸೂಚಿಸುತ್ತಾ ನಮ್ಮ ಮತದಲ್ಲಿ ನಿಷ್ಕ್ರಿಯಶ್ರುತಿಗೆ ಅರ್ಥಾಂತರವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಕರ್ತೃತ್ವಕ್ರಿಯೆಯು ಅನೇಕ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಡುತ್ತದೆ. 'ಏಷ ಯೋನಿಃ ಸರ್ವಸ್ಯ, ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ, ಮಮ ಯೋನಿಃ ಅಪ್ಸು, ಯಥೈಕಾ ಯೋನಿರುಚ್ಯತೇ' ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಯೋನಿ ಶಬ್ದದಿಂದ ಬ್ರಹ್ಮನಿಗೆ ಕರ್ತೃತ್ವಕ್ರಿಯೆಯನ್ನು ಹೇಳುತ್ತಾರೆ. ಈ ಯೋನಿ ಶಬ್ದವನ್ನು ಪ್ರಯೋಗ ಮಾಡಿರುವುದರಿಂದ ಪಶ್ವಾದಿಯೋನಿಗಳು ಸ್ಮರಣೆಗೆ ಬಂದು ಅವುಗಳಿಗೆ ಹೇಗೆ ಪ್ರಸವಕಾಲದಲ್ಲಿ ಉಪಚಯ, ಅಪಚಯಗಳಿರುತ್ತವೆಯೋ ಮತ್ತು ತನ್ನಿಮಿತ್ತವಾದ ದುಃಖವು ಉಂಟಾಗುತ್ತವೆಯೋ ಹಾಗೆಯೇ, ಬ್ರಹ್ಮನಲ್ಲಿ ಉಪಚಯ ಅಪಚಯಗಳಾಗಲೀ, ತನ್ನಿಮಿತ್ತ ದುಃಖವಾಗಲೀ ಪ್ರಾಪ್ತವಾದರೆ, ಅದನ್ನು ನಿಷೇಧಮಾಡಲು 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಎಂಬ ಶ್ರುತಿಯು ಪ್ರವೃತ್ತವಾಗುತ್ತದೆ. ನಿಷ್ಕ್ರಿಯ ಎಂದು ಹೇಳಿದರೆ, ವಿರುದ್ಧಕ್ರಿಯೆಗಳು, ಎಂದರೆ ಉಪಚಯ ಅಪಚಯ

ಮೊದಲಾದ ನೈಚ್ಯ ಆಪಾದಕಕ್ರಿಯೆಗಳು ಇಲ್ಲ ಎಂದು ಇಷ್ಟೇ ಅರ್ಥ. ಅಂತಹ ಕ್ರಿಯೆಯನ್ನು ನಿಷೇಧ ಮಾಡುತ್ತದೆಯೇ ಹೊರತಾಗಿ ಸೃಷ್ಟಿಕ್ರಿಯೆಯನ್ನು ನಿಷೇಧಮಾಡುವುದಿಲ್ಲ. ಅದೂ ಅಲ್ಲದೇ ಕರ್ತೃತ್ವರೂಪಕ್ರಿಯೆಯು ಧಾತ್ವರ್ಥರೂಪವಾದುದರಿಂದ ಅಮುಖ್ಯವಾದುದು. ಉಪಚಯ, ಅಪಚಯ, ತಾಡನ ಮೊದಲಾದವುಗಳು ಉತ್‌ಕ್ಷೇಪಣ ಮತ್ತು ಅಪಕ್ಷೇಪಣ ರೂಪವನ್ನು ಹೊಂದಿರುವುದರಿಂದ ಮುಖ್ಯಕ್ರಿಯೆಗಳು. ಮುಖ್ಯಾಮುಖ್ಯಗಳ ನಡುವೆ ಯಾವಾಗಲೂ ಮುಖ್ಯವನ್ನೇ ಸ್ವೀಕರಿಸಬೇಕು. ಆದ್ದರಿಂದ ನಿಷ್ಕ್ರಿಯ ಎಂದು ಶ್ರುತಿಯು ಹೇಳುವಾಗ ಮುಖ್ಯವಾದ ಕ್ರಿಯೆಯನ್ನೇ ನಿಷೇಧಮಾಡಬೇಕು. ಅಮುಖ್ಯವಾದ ಕ್ರಿಯೆಯನ್ನು ನಿಷೇಧಮಾಡಬಾರದು. ಆದ್ದರಿಂದ ನಿಷ್ಕ್ರಿಯತ್ವಶ್ರುತಿಯು ಉಪಚಯ ಅಪಚಯಾದಿರೂಪವಾದ ಮುಖ್ಯಕ್ರಿಯೆಯನ್ನು ನಿಷೇಧಮಾಡುತ್ತದೆಯೇ ಹೊರತು, ಧಾತ್ವರ್ಥರೂಪವಾದ ಕರ್ತೃತ್ವರೂಪಕ್ರಿಯೆಯನ್ನು ನಿಷೇಧಮಾಡುವುದಿಲ್ಲ. ಬ್ರಹ್ಮನಲ್ಲಿ ಅಂತಹ ಕರ್ತೃತ್ವವನ್ನು ಅಂಗೀಕಾರ ಮಾಡದಿದ್ದರೆ, 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯವು ಬ್ರಹ್ಮನಲ್ಲಿ ಹೇಳುವ ಧಾತ್ವರ್ಥರೂಪವಾದ ಜ್ಞಾನ ಎಂಬ ಕ್ರಿಯೆಯು ಅಂಗೀಕಾರಾರ್ಹವಲ್ಲ ಎಂಬ ಪ್ರಸಂಗವು ಉಂಟಾಗುತ್ತದೆ.

**ನಿಷ್ಕ್ರಿಯತ್ವಶ್ರುತೇಃ ಸತ್ತ್ವಾತ್ ತಟಸ್ಥಂ ಲಕ್ಷಣಂ ಯದಿ ।**
**ತರ್ಹ್ಯಜ್ಞಾನಂ ತಟಸ್ಥಂ ಸ್ಯಾದದ್ವಿತೀಯಶ್ರುತೇರ್ಬಲಾತ್ ॥ ೧೯೬ ॥**

**ಅನಾದಿಬ್ರಹ್ಮಣೋಽಜ್ಞಾನಮನಾದ್ಯೇವ ಹಿ ತೇ ಮತೇ ।**
**ದ್ವಿತೀಯಂ ತತ್ಕೃತಂ ತಸ್ಮಾತ್ ತೃತೀಯಮಖಿಲಂ ಜಗತ್ ।**
**ತೇನಾವಿದ್ಯಾನಿಷೇಧ್ಯೈವ ವಾಗೇಷೇತಿ ಮತಿರ್ಮಮ ॥ ೧೯೭ ॥**

**ಅರ್ಥ–** ನಿಷ್ಕ್ರಿಯತ್ವಶ್ರುತೇಃ = ಬ್ರಹ್ಮನನ್ನು ನಿಷ್ಕ್ರಿಯ ಎಂದು ಬಣ್ಣಿಸುವ ಶ್ರುತಿಯ, ಸತ್ತ್ವಾತ್ = ಅಸ್ತಿತ್ವದ ಬಲದಿಂದ, ಯದಿ = ಒಂದು ಪಕ್ಷ, ಲಕ್ಷಣಂ = ಬ್ರಹ್ಮನ ಜಗತ್‌ಕರ್ತೃತ್ವ ಎಂಬ ಲಕ್ಷಣವು, ತಟಸ್ಥಂ = ತಟಸ್ಥವು, (ತಟಸ್ಥಲಕ್ಷಣವು) ಸ್ಯಾತ್ = ಆಗುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಅದ್ವಿತೀಯ ಶ್ರುತೇಃ = ಬ್ರಹ್ಮನನ್ನು ಅದ್ವಿತೀಯ ಎಂದು ಬಣ್ಣಿಸುವ ವೇದವಾಕ್ಯದ, ಬಲಾತ್ = ಆಧಾರದಿಂದ, ಅಜ್ಞಾನಂ = ಬ್ರಹ್ಮನಲ್ಲಿರುವ ಅಜ್ಞಾನವು, ತಟಸ್ಥಂ ಸ್ಯಾತ್ = ತಟಸ್ಥ ಆಗಬೇಕಾದೀತು.

ತೇ ಮತೇ= ನಿನ್ನ ಮತದಲ್ಲಿ, ಅನಾದಿಬ್ರಹ್ಮಣಃ= ಅನಾದಿಯಾದ ಬ್ರಹ್ಮನಿಗೆ, ಅಜ್ಞಾನಂ= ಅಜ್ಞಾನವು, ಅನಾದ್ಯೇವ= ಅನಾದಿಯಾದ, ದ್ವಿತೀಯಂ= ದ್ವಿತೀಯವಾಗಿದೆ, ತತ್ಕೃತಂ= ಆ ಅಜ್ಞಾನದ ಕಾರ್ಯವಾದ, ಅಖಿಲಂ ಜಗತ್= ಸಮಸ್ತ ಜಗತ್ತು, ತೃತೀಯಂ= ಮೂರನೆಯದಾಗಿದೆ, ತೇನ= ಆ ಕಾರಣದಿಂದ, ಏಷಾ ವಾಕ್= ಅದ್ವಿತೀಯಂ ಎಂಬ

ವಚನವು, ಅಜ್ಞಾನ ನಿಷೇಧ್ಯೈವ= ಅಜ್ಞಾನ ನಿಷೇಧಕವೆಂದೇ, ಮಮ ಮತಿಃ= ನನ್ನ ಅಭಿಪ್ರಾಯ.

**ಅನುವಾದ–** ನಿಷ್ಕ್ರಿಯತ್ವಶ್ರುತಿಯ ಬಲದಿಂದ ಜನ್ಮಾದಿಕಾರಣತ್ವವು ತಟಸ್ಥವಾಗುವುದಾದರೆ, ಅದ್ವಿತೀಯಶ್ರುತಿಯ ಬಲದಿಂದ ಅಜ್ಞಾನವನ್ನೇ ತಟಸ್ಥವೆಂದು ಅಂಗೀಕಾರ ಮಾಡು. ಬ್ರಹ್ಮ ಮತ್ತು ಅಜ್ಞಾನ ಎರಡೂ ಅನಾದಿ. ಅನಾದಿಕಾಲದಿಂದ ಇಬ್ಬರೂ ಜೊತೆಯಲ್ಲಿದ್ದಾರೆ. ಆದ್ದರಿಂದ ಬ್ರಹ್ಮನಿಂದ ಪರಿಗಣನೆ ಮಾಡಿದರೆ, ಅಜ್ಞಾನವು ಎರಡನೆಯ ವಸ್ತುವಾಗುತ್ತದೆ. ಜಗತ್ತು ಅಜ್ಞಾನದ ಕಾರ್ಯವಾದ್ದರಿಂದ ಮೂರನೆಯ ವಸ್ತು. ಆದ್ದರಿಂದ, ಅದ್ವಿತೀಯ ಎಂಬ ಶ್ರುತಿಯು ದ್ವಿತೀಯವಾದ ಅಜ್ಞಾನವನ್ನೇ ನಿಷೇಧಮಾಡುತ್ತದೆಯೇ ಹೊರತು ಅಜ್ಞಾನದ ಕಾರ್ಯವಾದ ಜಗತ್ತನ್ನು ನಿಷೇಧಮಾಡುವುದಿಲ್ಲ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯ ಜ್ಞಾನಪ್ರತಿಬಂದೀಂ ಗೃಹ್ಣಾತಿ । **ನಿಷ್ಕ್ರಿಯತ್ವೇತಿ । ಶ್ರುತೇಃ** ಸತ್ವಾತ್ ಬಲಾತ್ । ಲಕ್ಷಣಂ ಜಗತ್ಕರ್ತೃತ್ವಮ್ । ಅಜ್ಞಾನಂ ಬ್ರಹ್ಮನಿಷ್ಠತಯಾ ಪರೇಣೋಚ್ಯಮಾನಮಜ್ಞಾನಮ್ । ತಟಸ್ಥಂ ಬ್ರಹ್ಮಣೋನ್ಯತ್ರ ಗತಮ್ । ಅದ್ವಿತೀಯ ಶ್ರುತೇರೇಕಮೇವಾದ್ವಿತೀಯಮಿತಿ ಶ್ರುತೇಃ ॥ ೧೯೬ ॥

ಕುತ ಇತ್ಯತ ಆಹ – **ಅನಾದೀತಿ** ॥ ಹಿ ಯಸ್ಮಾತ್ತೇ ಮತೇಽನಾದಿ ಬ್ರಹ್ಮಣೋನಾದ್ಯಜ್ಞಾನಮೇವ ದ್ವಿತೀಯಮ್ । ಅನಾದಿಕಾಲಮಾರಭ್ಯೋಭಯೋರಪ್ಯನ್ಯೋನ್ಯಸಂಬಂಧಾತ್ । ತತ್ಕೃತಮ-ಜ್ಞಾನಕೃತಂ ಸರ್ವಂ ಜಗತ್ತಸ್ಮಾತ್ ಬ್ರಹ್ಮಣಸ್ತೃತೀಯಮ್ । ತೇನಾಜ್ಞಾನಸ್ಯೈವ ದ್ವಿತೀಯತ್ವೇನ । ಏಷಾ ವಾಗದ್ವಿತೀಯತ್ವವಾಕ್ । ಅವಿದ್ಯಾನಿಷೇಧ್ಯೇತಿ ಬಹುವ್ರೀಹಿಃ । ಅಜ್ಞಾನನಿಷೇಧ್ಯೈವ । ಅಜ್ಞಾನಸ್ಯೈವ ದ್ವಿತೀಯಪದಯೋಗ್ಯಾರ್ಥತಯಾ ನಞಾ ತದೇವನಿಷೇಧ್ಯಂ ಸ್ಯಾತ್ । ನತು ಜಗತ್ । ನಹಿ ಪುತ್ರಾದುತ್ಪನ್ನಸ್ಯ ಪೌತ್ರಸ್ಯ ಸ್ವಪುತ್ರತಾ ಕ್ವಾಪಿ ದೃಷ್ಟೇತಿ ಭಾವಃ । ವಸ್ತುತಸ್ತು ನಿಷ್ಕ್ರಿಯತ್ವಶ್ರುತಿಃ ತ್ವದ್ರೀತ್ಯೈವ ಕರ್ತೃತ್ವಾತಿರಿಕ್ತಕ್ರಿಯಾ ಸದ್ಭಾವಾತ್ ಸಾವಕಾಶಾ । ಇಯಂ ತು ಶ್ರುತಿಃ ತ್ವದ್ರೀತ್ಯೈವಾರ್ಥಾಂತರಶೂನ್ಯೇತಿ ದುರುತ್ತರಾ ಪ್ರತಿಬಂದೀ । ಜಗತೋಽಪ್ರತಿಷೇಧೇನ ಬ್ರಹ್ಮಣ್ಯೇವಾಜ್ಞಾನಪ್ರತಿಷೇಧೇನಾಸ್ಮದಭೀಷ್ಟ- ಸಿದ್ಧಿರಪೀತಿ ಜ್ಞಾತವ್ಯಮ್ ॥ ೧೯೭ ॥

**ವಿವರಣೆ–** ಬೇರೆ ರೀತಿಯಿಂದ ಈ ಶ್ಲೋಕದಲ್ಲಿ ಅಜ್ಞಾನದ ಪ್ರತಿಬಂದಿಯನ್ನು ನೀಡುತ್ತಾರೆ. ಬ್ರಹ್ಮನು ನಿಷ್ಕ್ರಿಯ ಎಂಬ ಶ್ರುತಿಯಿರುವುದರಿಂದ ಬ್ರಹ್ಮನಲ್ಲಿ ಕ್ರಿಯೆಯನ್ನು ಒಪ್ಪದೇ ಜಗತ್ಕಾರಣತ್ವವನ್ನು ಅನ್ಯನಿಷ್ಠ ಎಂದು ಹೇಳುವುದಾದರೆ, 'ಏಕಮೇವಾದ್ವಿತೀಯಂ' ಎಂಬ ಶ್ರುತಿಯು ಬ್ರಹ್ಮನನ್ನು ಅದ್ವಿತೀಯ ಎಂದು ಹೇಳುವುದರಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ಒಪ್ಪದೇ ಬೇರೆ ಕಡೆಯಲ್ಲಿ ಅಜ್ಞಾನವನ್ನು ಒಪ್ಪು ಎಂದು ಪ್ರತಿಬಂದಿಯನ್ನು ನೀಡುತ್ತಾರೆ. ಅನಾದಿಯಾದ ಬ್ರಹ್ಮ ಅನಾದಿಯಾದ

ಅಜ್ಞಾನದಿಂದಲೇ ಕೂಡಿದ್ದಾನೆ. ಬ್ರಹ್ಮನ ವಿವಕ್ಷೆಯಿಂದ ಅಜ್ಞಾನವು ದ್ವಿತೀಯವಾದುದು. ಜಗತ್ತು ಅಜ್ಞಾನದ ಕಾರ್ಯವಾದ್ದರಿಂದ ಅದು ತೃತೀಯವಾದುದು. ಆದುದರಿಂದ ಅದ್ವೈತಶ್ರುತಿಯು ದ್ವಿತೀಯವಾದ ಅಜ್ಞಾನವನ್ನೇ ನಿಷೇಧಮಾಡುತ್ತದೆಂದು ನನ್ನ ಅಭಿಪ್ರಾಯ ಎಂದು ಹಿಂದಿನ ಶ್ಲೋಕದಲ್ಲಿ ಮಾಡಿದ ಆಪಾದನೆಗೆ ಇಲ್ಲಿ ಕಾರಣವನ್ನು ತಿಳಿಸುತ್ತಾರೆ. ಏಕೆಂದರೆ, ದ್ವಿತೀಯಕಾರ್ಯವಾದ ಜಗತ್ತಿನಲ್ಲಿ ತೃತೀಯತ್ವವಿದೆಯೇ ಹೊರತು ದ್ವಿತೀಯತ್ವವು ಇಲ್ಲ. ಪುತ್ರನ ಮಗನಲ್ಲಿ ಪೌತ್ರತ್ವವಿರುತ್ತದೆಯೇ ಹೊರತು ಪುತ್ರತ್ವವು ಇರುವುದಿಲ್ಲ. ಆದ್ದರಿಂದ ಅಜ್ಞಾನವನ್ನೇ ನಿಷೇಧಮಾಡು ಎಂದು ಆಪಾದನೆ. ವಸ್ತುತಃ ನಿಷ್ಕ್ರಿಯತ್ವಶ್ರುತಿಯು ಸಾವಕಾಶವಾದುದು. ಅದ್ವಿತೀಯತ್ವಶ್ರುತಿಯು ನಿನ್ನ ರೀತಿಯಿಂದಲೇ ನಿರವಕಾಶವಾದುದು. ನೀನೇ ಬ್ರಹ್ಮನಿಗೆ ಕರ್ತೃತ್ವಾತಿರಿಕ್ತವಾದ ಗಮನಾಗಮನಾದಿ ಕ್ರಿಯೆಗಳನ್ನು ಅಂಗೀಕಾರಮಾಡುವುದರಿಂದ ನಿಷ್ಕ್ರಿಯತ್ವಶ್ರುತಿಯು ಸಾವಕಾಶವಾದುದು. ಅದ್ವಿತೀಯಶ್ರುತಿಯು ದ್ವಿತೀಯವಾದ ವಸ್ತುವೆಲ್ಲವನ್ನೂ ನಿಷೇಧಮಾಡುವುದರಿಂದ, ಅದಕ್ಕೆ ಬೇರೆ ಅರ್ಥದಲ್ಲಿ ಅವಕಾಶವೇ ಇಲ್ಲವಾದ್ದರಿಂದ ಅದು ನಿರವಕಾಶವಾದುದು. ಈ ನಿರವಕಾಶ ಶ್ರುತಿಗೆ ಅನುಗುಣವಾಗಿ ದ್ವಿತೀಯವಾದ ಅಜ್ಞಾನವನ್ನೇ ನಿಷೇಧಮಾಡಿದರೆ, ಜಗತ್ತನ್ನು ನಿಷೇಧಮಾಡಿದಂತಾಗುವುದಿಲ್ಲವಾದ್ದರಿಂದ ಜಗತ್ತಿನ ಸತ್ವವು ಸಿದ್ಧವಾಗಿ ನಮ್ಮ ಅಭೀಷ್ಟವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಕಿಂ ಚಾವಿಕಾರವಚನಾಜ್ಜಗದ್ರೂಪವಿಕಾರಕೃತ್ ।**
**ತಟಸ್ಥಮಸ್ತು ತೇಽಜ್ಞಾನಂ ಬ್ರಹ್ಮ ನಿರ್ಮಲವಸ್ತು ತತ್ ॥ ೧೯೮ ॥**

**ಅರ್ಥ**– ಕಿಂಚ = ಅದೂ ಅಲ್ಲದೇ, ಅವಿಕಾರವಚನಾತ್ = ಬ್ರಹ್ಮನನ್ನು ಅವಿಕಾರನೆಂದು ಹೇಳುವ ವೇದವಾಕ್ಯಗಳಿರುವುದರಿಂದ, ಜಗದ್ರೂಪವಿಕಾರಕೃತ್ = ತನಗೆ ಮತ್ತು ಬ್ರಹ್ಮನಿಗೆ ಜಗತ್ತಿನ ರೂಪದಲ್ಲಿ ಬರುವ ವಿಕಾರಕ್ಕೆ ಕಾರಣವಾದ, ತೇ = ನಿನ್ನ ಮತದಲ್ಲಿ ಅಂಗೀಕರಿಸಲ್ಪಟ್ಟಿರುವ, ಅಜ್ಞಾನಂ = ಅಜ್ಞಾನವು, ತಟಸ್ಥಂ = ತಟಸ್ಥವಾಗಿ, ಅಸ್ತು = ಉಳಿಯಲಿ, ತತ್ = ಆ ವೇದೋಕ್ತನಾದ, ಬ್ರಹ್ಮ = ಪರಬ್ರಹ್ಮನು, ನಿರ್ಮಲವಸ್ತು = ನಿರ್ಮಲವಸ್ತುವು, ಅಸ್ತು = ಆಗಿರಲಿ.

**ಅನುವಾದ**– ನಿರ್ವಿಕಾರಶ್ರುತಿಯು ಇರುವುದರಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ಅಂಗೀಕಾರಮಾಡಬೇಡ. ವಿಕಾರವನ್ನು ಹೊಂದಿರುವ ಅಜ್ಞಾನವು ತಟಸ್ಥವಾಗಿರಲಿ. ಬ್ರಹ್ಮನು ನಿರ್ಮಲವಾದ ವಸ್ತು. ಅವನಲ್ಲಿ ವಿಕಾರವನ್ನು ಹೊಂದುವ ಅಜ್ಞಾನವನ್ನು ಅಂಗೀಕರಿಸಬೇಡ.

**ಭಾವವಿಲಾಸಿನೀ**– ಅದ್ವಿತೀಯಶ್ರುತ್ಯಾ ಬ್ರಹ್ಮಣ್ಯಜ್ಞಾನಂ ನಿಷಿಧ್ಯಾವಿಕಾರಶ್ರುತ್ಯಾಪಿ ಬ್ರಹ್ಮಣ್ಯಜ್ಞಾನಮೇವ ನಿಷೇಧತಿ ॥ **ಕಿಂಚೇತಿ** ॥ ಅವಿಕಾರವಚನಾತ್ । ನಿರ್ವಿಕಾರತ್ವ-

ಶ್ರುತೇರಿತ್ಯರ್ಥಃ । ತೇಽಜ್ಞಾನಂ ಜಗದ್ರೂಪವಿಕಾರಕೃದ್ವಿಕಾರೋಪಾದಾನಮ್ । ಇದಂ ಚೋಪಲಕ್ಷಣಮ್ । ಅತದಾಕಾರತಯಾ ಸ್ವಸ್ಯಾಪಿ ವಿಕಾರತ್ವಾತ್ । ತೇ ಮತೇ । ಅಜ್ಞಾನಂ ಬ್ರಹ್ಮಾಜ್ಞಾನಮ್ । ನಿರ್ಮಲಂ ಅಜ್ಞಾನಾಖ್ಯವಿಕಾರರಹಿತತಯಾ ಶುದ್ಧಮ್ । ಪರವಾಕ್ಯೇನೈವ ಪರಾಭಿಮತಾರ್ಥ ಖಂಡನರೂಪತ್ವಾತ್ ಕೇವಲಶ್ರುತ್ಯಾಽದ್ವಿತೀಯಶ್ರುತ್ಯಾ ನಿರ್ವಿಕಾರಶ್ರುತ್ಯಾ ಚ ಪ್ರತಿಬಂದೀ ಗ್ರಹಣಂ ಪರಸ್ಯೈವ ಬಂದೀಗ್ರಹಣಮಿತ್ಯತಿ ಚಮತ್ಕಾರೋಽಯಂ ಗ್ರಂಥ-ಕಾರಸ್ಯ । ಏವಮನ್ಯತ್ರಾಪಿ ದ್ರಷ್ಟವ್ಯಮ್ ॥ ೧೯೮ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಅದ್ವಿತೀಯಶ್ರುತಿಯ ಬಲದಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ನಿಷೇಧಮಾಡಿ ಈ ಶ್ಲೋಕದಲ್ಲಿ ನಿರ್ವಿಕಾರಶ್ರುತಿಯ ಬಲದಿಂದಲೂ ಸಹ ಬ್ರಹ್ಮನಲ್ಲಿ ಅಜ್ಞಾನವನ್ನು ನಿರಾಕರಿಸುತ್ತಾರೆ. ಅಜ್ಞಾನವು ಜಗದಾಕಾರವಾಗಿ ವಿಕಾರವನ್ನು ಹೊಂದುತ್ತದೆ. ಆದ್ದರಿಂದ ಅಜ್ಞಾನವು ವಿಕಾರಿ. ಅಂತಹ ವಿಕಾರವುಳ್ಳ ವಸ್ತುವಿನ ಸಂಬಂಧವುಂಟಾದರೆ, ಬ್ರಹ್ಮನೂ ವಿಕಾರಿಯಾಗುತ್ತಾನೆ. ಆದರೆ, ಬ್ರಹ್ಮನು ನಿರ್ಮಲ ಎಂದು ವೇದಗಳು ಹೇಳುತ್ತವೆ. ಅಜ್ಞಾನರೂಪ ವಿಕಾರರಹಿತನಾಗಿ ಅವನು ಶುದ್ಧನಾಗಿದ್ದಾನಷ್ಟೇ? ಆದ್ದರಿಂದ ಅಜ್ಞಾನವನ್ನೇ ತಟಸ್ಥವೆಂದು ಅಂಗೀಕರಿಸು. ಹೀಗೆ 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯ ಕೇವಲ ಶಬ್ದದಿಂದಲೂ, ಅದ್ವಿತೀಯಶ್ರುತಿಯಲ್ಲಿನ ಅದ್ವಿತೀಯಶಬ್ದದಿಂದಲೂ, ನಿರ್ವಿಕಾರಶ್ರುತಿಯಲ್ಲಿರುವ ನಿರ್ವಿಕಾರ ಶಬ್ದದಿಂದಲೂ ಸಹ, ಪ್ರತಿಬಂದಿಯನ್ನು ಹೇಳುತ್ತಾ ಪರಾಭಿಮತವಾದ ಅರ್ಥವನ್ನು ಪರವಾಕ್ಯಗಳಿಂದಲೇ ನಿರಾಕರಿಸುವ ಗ್ರಂಥಕಾರರ ಕೌಶಲವು ಇಲ್ಲಿ ಚೆನ್ನಾಗಿ ಮೆರೆಯುತ್ತದೆ. ಹೀಗೆ ಎಲ್ಲಾ ಕಡೆಗಳಲ್ಲಿಯೂ ತಿಳಿಯಬೇಕು.

ಅತಃ ಪ್ರಥಮತಃ ಸೂತ್ರಕೃದುಕ್ತೇ ಬ್ರಹ್ಮಲಕ್ಷಣೇ ।
ಅಸಂಭವೋಽತಿವ್ಯಾಪ್ತಿಶ್ಚ ಸಿದ್ಧಾಂತೋ ಯಸ್ಯ ಧೀಮತಃ ।
ಸ ಭಾಷ್ಯಕೃತ್ ಕಿಲ ಗುರುಃ ಶ್ರೋತಾ ತತ್ರ ಚ ಕಶ್ಚನ ॥ ೧೯೯ ॥

ತಟಸ್ಥಃ ಕೋಪಿ ನ ಸ್ಯಾದಿತ್ಯಕರೋದ್‌ಬ್ರಹ್ಮಲಕ್ಷಣಂ ।
ಯತಃ ಶಿಕ್ಷಣಮೇವೇದಂ ಸೂತ್ರಾಣಾಂ ನಾರ್ಥರಕ್ಷಣಂ ॥ ೨೦೦ ॥

**ಅರ್ಥ–** ಅತಃ = ಆದ್ದರಿಂದ, ಪ್ರಥಮತಃ = ಮೊದಲು, ಸೂತ್ರಕೃದುಕ್ತೇ = ಬ್ರಹ್ಮಸೂತ್ರಕಾರರಿಂದ ಹೇಳಲ್ಪಟ್ಟ, ಬ್ರಹ್ಮಲಕ್ಷಣೇ = ಬ್ರಹ್ಮಲಕ್ಷಣದಲ್ಲಿ, ಯಸ್ಯ = ಯಾವ, ಧೀಮತಃ = ಬುದ್ಧಿವಂತನ, ಸಿದ್ಧಾಂತೇ = ಸಿದ್ಧಾಂತದಲ್ಲಿ, ಅಸಂಭವಃ = ಅಸಂಭವದೋಷವು, ಅತಿವ್ಯಾಪ್ತಿಶ್ಚ = ಅತಿವ್ಯಾಪ್ತಿದೋಷವೂ ಕೂಡ ಇದೆಯೋ, ಸಃ = ಆ, ಭಾಷ್ಯಕೃತ್ = ಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆದವನು, ಗುರುಃ = ಉಪದೇಶ ಮಾಡುವ ಗುರುವಾಗಿದ್ದಾನೆ, ತತ್ರ = ಆ ಉಪದೇಶವನ್ನು ಕೇಳಲು, ಕಶ್ಚನ = ಯಾರೋ ಒಬ್ಬನು, ಶ್ರೋತಾ ಚ =

ಶ್ರೋತೃವೂ ಕೂಡ, ಕಿಲ = ಇದ್ದಾನಷ್ಟೇ. ತಟಸ್ಥಃ = ತಟಸ್ಥನು, ಕಃ ಅಪಿ = ಯಾರೂ ಕೂಡ, ನ ಸ್ಯಾತ್ = ಇರಲಿಕ್ಕಿಲ್ಲವೆಂದು, ಬ್ರಹ್ಮಲಕ್ಷಣಂ = ಬ್ರಹ್ಮನ ಜಗತ್‌ಕರ್ತೃತ್ವವೆಂಬ ಲಕ್ಷಣವನ್ನು, ತಟಸ್ಥಂ ಅಕರೋತ್ = ತಟಸ್ಥವನ್ನಾಗಿ ಈ ಅದ್ವೈತಿಯು ಮಾಡಿದ್ದಾನೆ. ಯತಃ = ಯಾವ ಕಾರಣದಿಂದ, ಇದಂ = ಈ ರೀತಿ ಅರ್ಥಮಾಡುವಿಕೆಯು, ಸೂತ್ರಾಣಾಂ = ಸೂತ್ರಗಳಿಗೆ, ಶಿಕ್ಷಣಂ ಏವ = ಹಿಂಸೆಯೇ ಆಗಿದೆ, ಅರ್ಥರಕ್ಷಣಂ = ಸೂತ್ರಕಾರರಿಗೆ ಅಭಿಪ್ರೇತವಾದ ಅರ್ಥವನ್ನು ರಕ್ಷಣೆ ಮಾಡುವುದು, ನ = ಆಗಿಲ್ಲ.

**ಅನುವಾದ–** ಆದ್ದರಿಂದ ಆರಂಭದಲ್ಲಿ ಸೂತ್ರದಲ್ಲಿ ಹೇಳಿದ ಬ್ರಹ್ಮಲಕ್ಷಣಕ್ಕೆ ಯಾವ ಮೇಧಾವಿಯ ಸಿದ್ಧಾಂತದಲ್ಲಿ ಅಸಂಭವವೂ ಮತ್ತು ಅತಿವ್ಯಾಪ್ತಿಯೂ ಬರುತ್ತದೆಯೋ ಅಂತಹವನೊಬ್ಬನು ಗುರು, ಅವನ ಶಾಸ್ತ್ರವನ್ನು ಕೇಳಲು ಒಬ್ಬ ಶಿಷ್ಯನೂ ಇದ್ದಾನೆ ಆದರೆ, ತಟಸ್ಥನಾದವನು ಯಾರೂ ಇಲ್ಲ ಎಂಬ ಕಾರಣದಿಂದ ಬ್ರಹ್ಮನ ಲಕ್ಷಣವನ್ನೇ ತಟಸ್ಥವನ್ನಾಗಿ ಮಾಡಿದ್ದಾರೆ. ಇದು ಬ್ರಹ್ಮಸೂತ್ರಗಳಿಗೆ ಹಿಂಸೆಯನ್ನು ಕೊಡುವ ಕಾರ್ಯವೇ ಹೊರತು ಸೂತ್ರಗಳ ಅರ್ಥದ ರಕ್ಷಣೆಯನ್ನು ಮಾಡುವ ಕಾರ್ಯವಲ್ಲ.

**ಭಾವವಿಲಾಸಿನೀ–** ಪರಕೃತಸೂತ್ರವ್ಯಾಖ್ಯಾಪ್ರತ್ಯಾಖ್ಯಾನಂ ಸೋಪಹಾಸಮುಪಸಂಹರತಿ – **ಅತ ಇತಿ** ॥ ಅತಃ ಪೂರ್ವೋಕ್ತನ್ಯಾಯಾತ್ । ಧೀಮತ ಇತಿ ವಿಪರೀತಲಕ್ಷಣಯೋಕ್ತಿಃ । ಸಃ ಪ್ರಾಥಮಿಕಸೂತ್ರವ್ಯಾಖ್ಯಾನೇ ಸೂತ್ರೋಕ್ತಬ್ರಹ್ಮಲಕ್ಷಣಸ್ಯಾಸಂಭವಾತಿವ್ಯಾಪ್ತ್ಯಾದಿಕಮುಕ್ತ್ವಾ ಸೂತ್ರಮೇವ ದೂಷಯನ್ । ಗುರುಃ ಇದಮಪಿ ವಿಪರೀತಲಕ್ಷಣಯಾ । ಭಾಷ್ಯಕೃತ್ ಭಾಷ್ಯಕಾರಃ । ಕಿಲೇತ್ಯಸ್ವರಸಃ । ಪ್ರಥಮತ ಏವ ಸೂತ್ರದೂಷಕಭಾಷ್ಯಕಾರಸ್ಯ ಕ್ವಾಪ್ಯದರ್ಶನಾತ್ । ತತ್ರ ಭಾಷ್ಯೇ ಕಶ್ಚನ ಶ್ರೋತಾ ಕಿಲ । ಉತ್ ಸೂತ್ರಭಾಷ್ಯೇ ಶ್ರೋತೃತಾತ್ತೇಷ್ವಪ್ಯಸ್ವರಸಃ ॥ ೧೯೯ ॥

ತಟಸ್ಥಃ ಏತಾದೃಶ ಗುರುಶಿಷ್ಯಯೋಸ್ತಟೇಸ್ಥಿತ್ವಾ ಶೃಣ್ವನ್ನುಪಶ್ರೋತೇತ್ಯರ್ಥಃ । ಕೋಽಪಿ ಬುದ್ಧಿಮಾನ್ನ ಸ್ಯಾತ್ । ಸೂತ್ರಮೇವ ದೂಷಯತೋ ಭಾಷ್ಯಮುನ್ಮತ್ತಂ ಕಂಚಿತ್ಪುರುಷಂ ವಿನಾ ನಕೋಽಪಿ ಪ್ರೇಕ್ಷಾವಾನ್ವೀಕ್ಷೇತೇತಿ ಭಾವಃ । ಇತಿ ಮತ್ವಾ ಭಾಷ್ಯಕಾರಃ ಸ್ವಯಮೇವ ಮಮ ದುರದೃಷ್ಟವಶಾಚ್ಛಿಷ್ಯ ಏಕೋ ಲಬ್ಧಃ । ತಟಸ್ಥಸ್ತ್ವೇಕೋಽಪಿ ನಾಭೂದಿತಿ ಬ್ರಹ್ಮಲಕ್ಷಣಮೇವ ತಟಸ್ಥಮಕರೋದಿತಿ ಪರಿಹಾಸಃ । ತತೋಽತಿರಿಕ್ತ ತಟಸ್ಥಾಂತರಾಭಾವೇ ಹೇತುಮಾಹ – ಯತ ಇತಿ ॥ ತಸ್ಮಾತ್ತಟಸ್ಥಃ ಕೋಽಪಿ ನಾಭೂದಿತಿ ಪೂರ್ವೇಣಾನ್ವಯಃ ॥ ೨೦೦ ॥

**ವಿವರಣೆ–** ಈಗ ಅದ್ವೈತಿಗಳು ಮಾಡಿದ 'ಜನ್ಮಾದಿ' ಸೂತ್ರದ ವ್ಯಾಖ್ಯಾನದ ನಿರಾಕರಣೆಯನ್ನು ಹಾಸ್ಯಪೂರ್ವಕವಾಗಿ ಉಪಸಂಹಾರ ಮಾಡುತ್ತಾರೆ. ಬ್ರಹ್ಮನಿಗೆ ಹೇಳಿದ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನಲ್ಲಿ ಇಲ್ಲ, ಆದ್ದರಿಂದ ಅಸಂಭವಿ. ಅಜ್ಞಾನದಲ್ಲಿದೆ, ಆದ್ದರಿಂದ ಅತಿವ್ಯಾಪ್ತವಾಗಿದೆ. ಇಂತಹ ಉಪದೇಶವನ್ನು ಮಾಡುವವನು ಎಂದೂ ವಿವೇಕಿಯಾದವನಲ್ಲ. ಇಂತಹ ಸಂದರ್ಭದಲ್ಲಿ ಒಬ್ಬ ಗುರುವೂ ಒಬ್ಬ ಶಿಷ್ಯನು ಇದ್ದರೂ

ಸಹ, ನಿಷ್ಪಕ್ಷಪಾತಿಗಳಾದ ಮಧ್ಯಸ್ಥರು ಅವರ ಉಪದೇಶವನ್ನು ವಿಚಾರಮಾಡಿ ಅನಂತರ ಪ್ರವೇಶಿಸಿ ಅಂಗೀಕರಿಸಬೇಕು. ಆದರೆ, ಇಂತಹ ಕೆಟ್ಟ ಉಪದೇಶವನ್ನು ಮಾಡುವ ಸಂದರ್ಭದಲ್ಲಿ ಯಾವನೂ ಮಧ್ಯಸ್ಥನಾಗಿ ತಟಸ್ಥನಾಗಿ ಇರುವುದಿಲ್ಲ. ಆದ್ದರಿಂದ ತಮ್ಮ ಮತದಲ್ಲಿ ತಟಸ್ಥವಾದ ವಸ್ತುವು ಯಾವುದೂ ಇಲ್ಲ ಎಂಬ ಕೊರತೆಯನ್ನು ನೀಗಿಸಲು ಬ್ರಹ್ಮನ ಲಕ್ಷಣವನ್ನೇ ತಟಸ್ಥವನ್ನಾಗಿ ಮಾಡಿದರು. ಇಂತಹ ಭಾಷ್ಯವು ಸೂತ್ರಕ್ಕೆ ವಿರುದ್ಧವಾದುದು. ಸೂತ್ರದೂಷಕರಾದವರು ಎಂದೂ ಭಾಷ್ಯಕಾರರಾಗುವುದಿಲ್ಲ. ಸೂತ್ರದ ದೂಷಣೆಯನ್ನು ಮಾಡುವವರು ಸೂತ್ರವನ್ನು ಹಿಂಸೆ ಮಾಡುತ್ತಾರೆಯೋ ಹೊರತಾಗಿ ಸೂತ್ರದ ಅರ್ಥವನ್ನು ರಕ್ಷಣೆಮಾಡುವುದಿಲ್ಲ ಎಂದು ಅಭಿಪ್ರಾಯ.

**ಅತೋ ಲಕ್ಷಣಸೂತ್ರಸ್ಯ ಬಲಾಜ್ಜ್ಞಾನಬಲಾದಿಭಿಃ ।**
**ಗುಣೈರ್ಯುಕ್ತಮಭೂದ್ ಬ್ರಹ್ಮ ಲಕ್ಷಣೇನ ಗುಣೇನ ಚ ॥ ೨೦೦ ॥**

**ಅರ್ಥ–** ಅತಃ = ಆದ್ದರಿಂದ, ಲಕ್ಷಣಸೂತ್ರಸ್ಯ = ಬ್ರಹ್ಮನ ಲಕ್ಷಣವನ್ನು ಹೇಳುವ ಜನ್ಮಾದ್ಯಸ್ಯಯತಃ ಎಂಬ ಸೂತ್ರದ, ಬಲಾತ್ = ಸಾಮರ್ಥ್ಯದಿಂದ, ಬ್ರಹ್ಮ = ಪರಬ್ರಹ್ಮನು, ಜ್ಞಾನಬಲಾದಿಭಿಃ = ಜ್ಞಾನ, ಶಕ್ತಿ ಮೊದಲಾದ, ಗುಣೈಃ = ಗುಣಗಳಿಂದ, ಚ = ಮತ್ತು, ಲಕ್ಷಣೇನ = ಲಕ್ಷಣರೂಪವಾದ, ಗುಣೇನ = ಜಗತ್ಕರ್ತೃತ್ವರೂಪ ಗುಣದಿಂದ, ಯುಕ್ತಂ = ಉಪೇತನಾದವನು, ಅಭೂತ್ = ಆದನು.

**ಅನುವಾದ–** ಆದ್ದರಿಂದ 'ಜನ್ಮಾದ್ಯಸ್ಯ ಯತಃ' ಎಂಬ ಲಕ್ಷಣಸೂತ್ರದ ಸಾಮರ್ಥ್ಯದಿಂದಲೇ ಬ್ರಹ್ಮನು ಲಕ್ಷಣರೂಪವಾದ ಜಗತ್ಕರ್ತೃತ್ವ ಗುಣದಿಂದಲೂ ಮತ್ತು ಜ್ಞಾನಬಲಾದಿಗುಣಗಳಿಂದಲೂ ಯುಕ್ತನಾಗಿದ್ದಾನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಏವಮುಪವ್ಯಾಖ್ಯಾಂ ನಿರಾಕೃತ್ಯ ಸೂತ್ರಾಣಾಂ ಸ್ವೋಕ್ತಾರ್ಥ ಏವ ಪ್ರಾಮಾಣ್ಯಂ ಸ್ಥಿರೀಕೃತ್ಯಾಧುನಾತೇಭ್ಯಃ ಸೂತ್ರೇಭ್ಯಃ ಸಕಲಸ್ವಸಿದ್ಧಾಂತ ಸಿದ್ಧಿಪ್ರಕಾರಂ ಸವಿಸ್ತರಮಾಹ **– ಅತ ಇತಿ ॥** ಅತಃ ಲಕ್ಷಣತಾಟಸ್ಥ್ಯಾಭಾವಾತ್ । ಲಕ್ಷಣೇನ ಗುಣೇನ ಲಕ್ಷಣಾಖ್ಯಗುಣೇನ ಚೇತ್ಯರ್ಥಃ। ಬಹುತರಜಗತ್ ಸರ್ಜನಧಾರಣಪೋಷಣಾದೇರ್ಬೃಹತ್ತರಜ್ಞಾನೇಚ್ಛಾಪ್ರಯತ್ನಬಲ ಕೃಪಾದ್ಯನೇಕಗುಣ- ಸಾಪೇಕ್ಷತ್ವಾತ್ ಲಕ್ಷಣಸ್ಯಾಪಿ ಧರ್ಮರೂಪತಯಾ ಗುಣತ್ವಾಲ್ಲಕ್ಷಣಸೂತ್ರೇಣೈವ ಬ್ರಹ್ಮಣೋಗುಣಪೂರ್ಣತ್ವಮಪಿ ಸಿದ್ಧಮಿತಿ ಭಾವಃ ॥ ೨೦೦ ॥

**ವಿವರಣೆ–** ಹೀಗೆ ಹಿಂದಿನ ಶ್ಲೋಕಗಳಿಂದ ಅಪವ್ಯಾಖ್ಯಾನವನ್ನು ನಿರಾಕರಣೆ ಮಾಡಿ, ಸೂತ್ರಗಳಿಗೆ ನಾವು ಹೇಳಿದ ಅರ್ಥದಲ್ಲಿಯೇ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿ, ಈಗ ಆ ಸೂತ್ರಗಳಿಂದಲೇ ಸಕಲಸಿದ್ಧಾಂತ ಪ್ರಮೇಯಗಳು ಸಿದ್ಧವಾಗುವುವೆಂದು ವಿಸ್ತಾರವಾಗಿ ನಿರೂಪಿಸುತ್ತಾರೆ. ಲಕ್ಷಣವು ತಟಸ್ಥವಲ್ಲದೇ ಇದ್ದ ಪ್ರಯುಕ್ತ ಬ್ರಹ್ಮನು ಲಕ್ಷಣದಿಂದ ಕೂಡಿದ್ದಾನೆ. ಲಕ್ಷಣವೂ ಒಂದು ಬ್ರಹ್ಮನ ಗುಣ. ಮಹತ್ತಾದ ಜಗತ್ತಿನ

ಸೃಷ್ಟಿ, ಧಾರಣೆ, ಪೋಷಣೆ ಮೊದಲಾದವುಗಳನ್ನು ಮಾಡಲು ಬಹಳವಾದ ಜ್ಞಾನ, ಇಚ್ಛಾ, ಪ್ರಯತ್ನ, ಬಲ, ಕೃಪೆ ಮೊದಲಾದ ಅನೇಕ ಗುಣಗಳ ಅಪೇಕ್ಷೆಯಿರುವುದರಿಂದ ಲಕ್ಷಣಸೂತ್ರದಿಂದಲೇ ಆ ಎಲ್ಲಾ ಗುಣಗಳೂ ಸಿದ್ಧವಾಗುವುದರಿಂದ ಬ್ರಹ್ಮನ ಗುಣಪೂರ್ಣತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸಜಾತೀಯವಿಜಾತೀಯವ್ಯಾವೃತ್ತಿಶ್ಚ ಯತಃ ಫಲಂ ।**
**ಚೇತನಾಚೇತನಜಗದ್ ಭಿನ್ನಮಾಸೀತ್ ತತಃ ಸದಾ ॥ ೨೦೨ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಲಕ್ಷಣಸ್ಯ = ಲಕ್ಷಣಕ್ಕೆ, ಸಜಾತೀಯವಿಜಾತೀಯ ವ್ಯಾವೃತ್ತಿಃ = ಲಕ್ಷ್ಯವನ್ನು ಸಜಾತೀಯ ವಸ್ತುಗಳಿಂದ ಮತ್ತು ವಿಜಾತೀಯ ವಸ್ತುಗಳಿಂದ ವ್ಯಾವೃತ್ತವನ್ನಾಗಿ ಮಾಡುವುದು, ಫಲಂ = ಪ್ರಯೋಜನವಾಗಿದೆಯೋ, ತತಶ್ಚ = ಆ ಕಾರಣದಿಂದಲೂ, ಬ್ರಹ್ಮ = ಪರಬ್ರಹ್ಮನು, ಸದಾ = ಯಾವಾಗಲೂ, ಚೇತನಾಚೇತನಜಗದ್‌ಭಿನ್ನಂ = ಸಜಾತೀಯಗಳಾದ ಚೇತನಗಳಿಂದ ಮತ್ತು ವಿಜಾತೀಯಗಳಾದ ಅಚೇತನಗಳಿಂದ ಕೂಡಿದ ಜಗತ್ತಿಗಿಂತ ಭಿನ್ನನು, ಆಸೀತ್ = ಆದನು.

**ಅನುವಾದ–** ಸಜಾತೀಯ ವಿಜಾತೀಯ ವ್ಯಾವೃತ್ತಿಯು ಲಕ್ಷಣದ ಫಲ. ಆದ್ದರಿಂದ ಬ್ರಹ್ಮನು ಚೇತನಾಚೇತನಾತ್ಮಕವಾದ ಜಗತ್ತಿನಿಂದ ಯಾವಾಗಲೂ ಭಿನ್ನನಾದವನು ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಜೀವಜಡಾತ್ಮಕ ಪ್ರಪಂಚಾದತ್ಯಂತ ಭೇದೋಽಪಿ ಲಕ್ಷಣಸೂತ್ರಬಲಾದೇವ ಸಿದ್ಧ ಇತ್ಯಾಹ – **ಸಜಾತೀಯೇತಿ** ॥ ಫಲಂ ಲಕ್ಷಣಸ್ಯ ಸಜಾತೀಯ ವಿಜಾತೀಯ ವ್ಯಾವೃತ್ತಿಫಲಕತ್ವಾತ್ । ಬ್ರಹ್ಮಣಃ ಇತಿ ಚಾವೃತ್ತ್ಯಾ ಯೋಜನೀಯಮ್। ಚೇತನಸ್ಯ ಸಜಾತೀಯತ್ವಾತ್ ಅಚೇತನಸ್ಯ ವಿಜಾತೀಯತ್ವಾತ್ ತಾಭ್ಯಾಂ ವ್ಯಾವೃತ್ತೇಶ್ಚ ತದ್ಭೇದರೂಪತ್ವಾದಿತಿ ಭಾವಃ ॥ ೨೦೨ ॥

**ವಿವರಣೆ–** ಲಕ್ಷಣವು ಸಜಾತೀಯ, ವಿಜಾತೀಯ ವ್ಯಾವೃತ್ತಿಯನ್ನು ಸಾಧಿಸಿಕೊಡುತ್ತದೆ. ಜೀವರು ಚೇತನರಾದ ಕಾರಣದಿಂದ ಬ್ರಹ್ಮನಿಗೆ ಸಜಾತೀಯರು. ಜಡವು ಅಚೇತನವಾದ ಕಾರಣ ಬ್ರಹ್ಮನಿಗೆ ವಿಜಾತೀಯವಾದದ್ದು. ಜಗಜ್ಜನ್ಮಾದಿ-ಕರ್ತೃತ್ವರೂಪವಾದ ಲಕ್ಷಣವು ಬ್ರಹ್ಮನಿಗೆ ಎಲ್ಲ ಜೀವರಿಂದಲೂ ಮತ್ತು ಎಲ್ಲಾ ಜಡಗಳಿಂದಲೂ ವ್ಯಾವೃತ್ತಿಯನ್ನು ಎಂದರೆ ಭೇದವನ್ನು ಸಿದ್ಧಮಾಡಿಕೊಡುತ್ತದೆ.

**ಪಿತೃತ್ವಾಚ್ಚ ಪತಿತ್ವಾಚ್ಚ ತದಭೂದುತ್ತಮೋತ್ತಮಂ ।**
**ಪೂರ್ವಸೂತ್ರೇ ವಿಮುಕ್ತ್ಯರ್ಥಂ ಜ್ಞೇಯತ್ವೋಕ್ತೇರ್ನ ಮಾಯಿಕಮ್ ॥**
**॥ ೨೦೩ ॥**

**ಅರ್ಥ–** ಜಗತಃ = ಜಗತ್ತಿನ, ಪಿತೃತ್ವಾತ್ ಚ = ಜನಕನಾದ್ದರಿಂದಲೂ, ಪತಿತ್ವಾತ್ ಚ = ಪಾಲಕನಾದ್ದರಿಂದಲೂ, ತತ್ ಬ್ರಹ್ಮ = ಆ ಪರಬ್ರಹ್ಮನು, ಉತ್ತಮೋತ್ತಮಂ = ಎಲ್ಲಾ ಉತ್ತಮ ವಸ್ತುಗಳಿಗಿಂತ ಉತ್ತಮನು, ಅಭೂತ್ = ಆದನು. ಪೂರ್ವಸೂತ್ರೇ = ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಮೊದಲ ಸೂತ್ರದಲ್ಲಿ, ವಿಮುಕ್ತ್ಯರ್ಥಂ = ಜೀವನಿಗೆ ಮೋಕ್ಷವನ್ನು ದೊರಕಿಸುವುದಕ್ಕಾಗಿ, ಜ್ಞೇಯತ್ವೋಕ್ತೇಃ = ಪರಬ್ರಹ್ಮನು ಜೀವರಿಂದ ಜ್ಞೇಯನಾಗಿ ದ್ದಾನೆಂದು ಹೇಳಿದ್ದರಿಂದ, ಲಕ್ಷಣಂ = ಬ್ರಹ್ಮನ ಜಗತ್ ಕರ್ತೃತ್ವಾದಿ ಲಕ್ಷಣಗಳು ಮತ್ತು ಆತನಲ್ಲಿರುವ ಭೇದವು, ನ ಮಾಯಿಕಂ = ಮಾಯಾಮಯವಲ್ಲ.

**ಅನುವಾದ– ಜಗತ್ತಿಗೆ ತಂದೆಯಾದದ್ದರಿಂದಲೂ ಮತ್ತು ಪತಿಯಾದದ್ದರಿಂದಲೂ ಬ್ರಹ್ಮನು ಸರ್ವೋತ್ತಮನಾಗಿದ್ದಾನೆ. ಹಿಂದಿನ ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮನಿಗೆ ಮೋಕ್ಷದ ಸಲುವಾಗಿ ಜ್ಞೇಯತ್ವವನ್ನು ಹೇಳಿರುವುದರಿಂದ ಅವನ ಗುಣಗಳಾಗಲೀ, ಅವನಲ್ಲಿರುವ ಭೇದವಾಗಲೀ ಯಾವುದೂ ಮಾಯಿಕವಲ್ಲ.**

**ಭಾವವಿಲಾಸಿನೀ–** ಸರ್ವೋತ್ತಮತ್ವಮಪಿ ಲಕ್ಷಣಸೂತ್ರಾದೇವ ಸಿದ್ಧಮಿತ್ಯಾಹ – **ಪಿತೃತ್ವೇತಿ** ॥ ತದ್ಬ್ರಹ್ಮ ಸರ್ವಜಗತಃ ಸ್ರಷ್ಟೃತ್ವೇನೇತತ್ಪಿತೃತ್ವಾತ್ । ಪಾಲಕತ್ವೇನ ತತ್ಪತಿತ್ವಲಾಭಾತ್ । ಉಪಲಕ್ಷಣಂ ಚೈತತ್ । ಜ್ಞಾನಮೋಕ್ಷಾದಿದಾನೇನ ಜಗದ್ಗುರುತ್ವೇಷ್ಟದೈವತ್ವಾದೇರಪಿ ಲಾಭಾತ್ಪಿತ್ರಾದೇಶ್ಚ ಪುತ್ರಾದಿಭ್ಯ ಉತ್ತಮತ್ವಸ್ಯ ಲೋಕಸಿದ್ಧತ್ವೇನ ಬ್ರಹ್ಮಣಃ ಸರ್ವೋತ್ತಮತ್ವಮಪಿ ಸಿದ್ಧಮಿತಿ ಭಾವಃ । ಅತ್ರೋಕ್ತಗುಣಭೇದಾದೀನಾಂ ಪಾರಮಾರ್ಥಿಕಸತ್ಯತಾಪ್ಯಾದ್ಯಾಧಿ- ಕರಣಾರ್ಥ ಪರ್ಯಾಲೋಚನಯಾ ಸಿದ್ಧೇತ್ಯಾಹ – **ಪೂರ್ವೇತಿ** ॥ ಪೂರ್ವಸೂತ್ರೇ ಅಥಾತೋ ಬ್ರಹ್ಮಜಿಜ್ಞಾಸೇತಿ ಸೂತ್ರೇ ಮುಕ್ತ್ಯರ್ಥಂ ಜ್ಞೇಯತ್ವೋಕ್ತೇಃ ಜನ್ಮಾದಿಸೂತ್ರೇಷು ಕರಿಷ್ಯಮಾಣ- ಜಿಜ್ಞಾಸಾಖ್ಯವಿಚಾರಸ್ಯಾತೋಽಜ್ಞಾನಾಯೇತಿ ತತ್ತದಧಿಕರಣೋಕ್ತ ಗುಣಭೇದಾದಿ ಜ್ಞಾನಾರ್ಥಕತ್ವಸ್ಯ ಅತೋಮೋಕ್ಷಾಯೇತಿ ತಸ್ಯೈವ ಪದಸ್ಯಾವೃತ್ತ್ಯೌಕೃತಾಯಾಂ ಜ್ಞಾನದ್ವಾರಾ ಮೋಕ್ಷಾಖ್ಯ ಫಲಹೇತುತ್ವಸ್ಯ ಚೋಕ್ತೇರಿತ್ಯರ್ಥಃ । ತತ್ತತ್ಸೂತ್ರೋಕ್ತ ಗುಣಾದಿಕಂ ಮಾಯಿಕಂ ಮಿಥ್ಯಾಭೂತಂ ನೇತಿ ಸಂಬಂಧಃ ॥ **ಉಪಲಕ್ಷಣಂ ಚೈತತ್** । ಜಗತ್ಕರ್ತೃತ್ವಾಖ್ಯ ಬ್ರಹ್ಮಗುಣ- ಪಾರಮಾರ್ಥಿಕತ್ವಸಿದ್ಧಾವರ್ಥಾತ್ ಜಗತ್ಸತ್ಯತ್ವಸಿದ್ಧಿರಪೀತಿ ದ್ರಷ್ಟವ್ಯಮ್ ॥ ೨೦೩ ॥

**ವಿವರಣೆ–** ಲಕ್ಷಣಸೂತ್ರದಿಂದ ಸರ್ವೋತ್ತಮತ್ವವೂ ಸಿದ್ಧವಾಗುವುದೆಂದು ಇಲ್ಲಿ ಹೇಳುತ್ತಾರೆ. ಎಲ್ಲ ಜಗತ್ತನ್ನು ಸೃಷ್ಟಿಮಾಡುವುದರಿಂದ ಬ್ರಹ್ಮನು ಜಗತ್ತಿಗೆ ತಂದೆ. ಜಗತ್ತನ್ನು ಪಾಲನೆಮಾಡುವುದರಿಂದ ಅವನು ಪತಿ. ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಜ್ಞಾನವನ್ನೂ ಮತ್ತು ಮೋಕ್ಷವನ್ನೂ ಕೊಡುವುದರಿಂದ ಅವನು ಜಗದ್ಗುರು ಮತ್ತು ಇಷ್ಟದೇವತೆ. ಪಿತ್ರಾದಿಗಳು ಪುತ್ರಾದಿಗಳಿಗಿಂತ ಉತ್ತಮರು ಎಂಬುದು ಲೋಕವ್ಯವಹಾರದಿಂದ ಸಿದ್ಧವಾಗಿದೆ. ಆದ್ದರಿಂದ ಬ್ರಹ್ಮನ ಸರ್ವೋತ್ತಮತ್ವವು ಸಿದ್ಧವಾಗುತ್ತದೆ. ಹಿಂದಿನ ಸೂತ್ರ ಎಂದರೆ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರ.

ಅಲ್ಲಿ ಅತಃ ಎಂಬ ಶಬ್ದದಿಂದ ಜ್ಞಾನಕ್ಕಾಗಿ ಎಂಬ ಅರ್ಥವನ್ನೂ, ಅದನ್ನೇ ಇನ್ನೊಂದಾವರ್ತಿ ತೆಗೆದುಕೊಂಡು ಮೋಕ್ಷಕ್ಕಾಗಿ ಎಂಬ ಅರ್ಥವನ್ನೂ ಮಾಡಬೇಕು. ಸೂತ್ರದ ಅರ್ಥ ಜ್ಞಾನಕ್ಕಾಗಿ ಬ್ರಹ್ಮವಿಚಾರವನ್ನು ಮಾಡಬೇಕು, ಮೋಕ್ಷಕ್ಕಾಗಿ ಬ್ರಹ್ಮವಿಚಾರವನ್ನು ಮಾಡಬೇಕು ಎಂದಾಗುತ್ತದೆ. ಎಂದರೆ, ಜ್ಞಾನದ್ವಾರಾ ಮೋಕ್ಷಕ್ಕಾಗಿ ಬ್ರಹ್ಮವಿಚಾರವನ್ನು ಮಾಡಬೇಕು ಎಂದು ಅರ್ಥ. ದ್ವಿತೀಯ ಸೂತ್ರದಲ್ಲಿ ಹೇಳಿದ ಜಗಜ್ಜನ್ಮಾದಿಕಾರಣತ್ವರೂಪಲಕ್ಷಣವೂ ಕೂಡ ಬ್ರಹ್ಮವಿಚಾರವೇ. ಆದ್ದರಿಂದ ಇದು ಮೋಕ್ಷೋಪಯೋಗಿಯಾದ ಜ್ಞಾನದ ಸಲುವಾಗಿ ಇರುವುದರಿಂದ ಇದು ಅಜ್ಞಾನಕಾರ್ಯವಲ್ಲ. ಜಗಜ್ಜನ್ಮಾದಿಕಾರಣತ್ವವೂ ಮತ್ತು ಅದರಿಂದ ಸೂಚಿತವಾದ ಜ್ಞಾನೇಚ್ಛಾಪ್ರಯತ್ನಾದಿ ಸರ್ವಗುಣಗಳೂ ಸತ್ಯವೆಂದೇ ಸಿದ್ಧವಾಗುತ್ತವೆ. ಅಲ್ಲದೆ, ಜಗತ್ಕರ್ತೃತ್ವವು ಪಾರಮಾರ್ಥಿಕವೆಂದು ಸಿದ್ಧವಾದಾಗ, ಬ್ರಹ್ಮನಿಂದ ಸೃಷ್ಟವಾದ ಜಗತ್ತೂ ಸಹ ಪಾರಮಾರ್ಥಿಕವೆಂದೇ ಸಿದ್ಧವಾಗುತ್ತದೆ.

**ನೇಹ ನಾನೇತಿ ವಾಕ್ಯಾಚ್ಚ ಗುಣ್ಯಭಿನ್ನಗುಣಾಶ್ಚ ತೇ ॥ ೨೦೪ ॥**

**ಅರ್ಥ–** ನೇಹ ನಾನಾ ಇತಿ ವಾಕ್ಯಾಚ್ಚ = ನೇಹನಾನಾಸ್ತಿ ಕಿಂಚನ ಎಂಬ ವೇದವಾಕ್ಯದ ಆಧಾರದಿಂದಲೂ ಕೂಡ, ತೇ ಗುಣಾಃ ಚ = ಬ್ರಹ್ಮನ ಆ ಗುಣಗಳೂ ಕೂಡ, ಗುಣ್ಯಭಿನ್ನಾಃ = ಗುಣಗಳಿಗೆ ಆಶ್ರಯನಾದ ಪರಮಾತ್ಮನಿಂದ ಅಭಿನ್ನಗಳಾಗಿವೆ.

**ಅನುವಾದ–** 'ನೇಹ ನಾನಾ' ಎಂಬ ಶ್ರುತಿಯಿಂದಲೂ ಮತ್ತು ಸೂತ್ರದಿಂದಲೂ ಗುಣಗುಣಿಗಳಿಗೆ ಅಭೇದವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಬ್ರಹ್ಮಣಿ ಗುಣಗುಣ್ಯಭೇದೋಪಿ ಸೂತ್ರಸೂಚನಯಾ ಶ್ರುತ್ಯಾ ಚ ಸಿದ್ಧ ಇತ್ಯಾಹ – **ನೇಹ ನಾನೇತಿ** ॥ ತೇ ಗುಣಾಃ ಗುಣ್ಯಭಿನ್ನಾಃ ಗುಣಿನಾ ಬ್ರಹ್ಮಣಾऽಭಿನ್ನಾಃ । ವಾಕ್ಯಾದಿತ್ಯುಪಲಕ್ಷಣಮ್ । ಸೂತ್ರಸೂಚಿತತ್ವಾಚ್ಚೇತ್ಯಪಿ ದ್ರಷ್ಟವ್ಯಮ್ । ಜನ್ಮಾದಿಸೂತ್ರೇಷು ಕರಿಷ್ಯಮಾಣಗುಣಾದಿ ಜಿಜ್ಞಾಸಾಯಾ ಅಥಾದಿಸೂತ್ರೇ ಬ್ರಹ್ಮಜಿಜ್ಞಾಸಾಪದೇನೋಕ್ತ್ಯಾ ಗುಣಾನಾಮೇವ ಬ್ರಹ್ಮತ್ವಸ್ಯಾಪಿ ಸೂಚಿತತ್ವಾತ್ । ಶ್ರುತೌ ಚ ಇಹ ಬ್ರಹ್ಮಣಿ ನಾನಾಭೂತಂ ಕಿಂಚನ ನಾಸ್ತೀತಿ ಸಾಕ್ಷಾದ್ಗುಣಾದೀನಾಂ ಭೇದನಿಷೇಧಾತ್ ಗುಣ್ಯಭಿನ್ನಗುಣಸಿದ್ಧಿರಿತಿ ಭಾವಃ ॥೨೦೪॥

**ವಿವರಣೆ–** ಬ್ರಹ್ಮನಲ್ಲಿ ಗುಣಗುಣಿಗಳ ಅಭೇದವೂ ಸಹ ಸೂತ್ರಸೂಚನೆಯಿಂದಲೂ ಮತ್ತು ಶ್ರುತಿಯ ಬಲದಿಂದಲೂ ಸಿದ್ಧವಾಗುವುದೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ. 'ನೇಹ ನಾನಾ' ಎಂಬ ಶ್ರುತಿಯನ್ನು ಉಪಲಕ್ಷಣವಾಗಿ ಇಟ್ಟುಕೊಂಡು ಸೂತ್ರಸೂಚನೆಯನ್ನು ತೆಗೆದುಕೊಳ್ಳಬೇಕು. 'ಜನ್ಮಾದಿ' ಸೂತ್ರಗಳಲ್ಲಿ ಗುಣದ ಜಿಜ್ಞಾಸೆಯನ್ನು ಮಾಡುತ್ತಾರೆ. ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದೆ. ಆದ್ದರಿಂದ ಜಗತ್ಕರ್ತೃತ್ವಾದಿಗುಣಗಳಿಗೆ ಬ್ರಹ್ಮನಿಂದ

ಅಭೇದವಿಲ್ಲದಿದ್ದರೆ, ಪೂರ್ವೋತ್ತರ ಸೂತ್ರಗಳು ಅಸಂಗತವಾಗುತ್ತವೆ. ಗುಣವನ್ನು ಬ್ರಹ್ಮಸ್ವರೂಪವೆಂದು ಒಪ್ಪಿದರೆ ಮಾತ್ರ, ಗುಣದ ಜಿಜ್ಞಾಸೆಯೂ ಬ್ರಹ್ಮಜಿಜ್ಞಾಸೆಯೇ ಆಗುವುದರಿಂದ ಪೂರ್ವೋತ್ತರ ಸೂತ್ರಗಳ ವಿರೋಧವಿಲ್ಲ. 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯಂತೂ, ಬ್ರಹ್ಮನಲ್ಲಿರುವ ಗುಣಗಳಿಗೆ, ಬ್ರಹ್ಮನಿಂದ ಭೇದವನ್ನು ಕಂಠದಿಂದ ನಿಷೇಧಮಾಡುತ್ತದೆ.

**ಗುಣಗುಣ್ಯಾದಿಭಾವಾಚ್ಚ ಬೋಧ್ಯಬೋಧಕಭಾವತಃ ।**
**ತದ್ವಿಶೇಷಾಶ್ಚ ತೇ ಸೂತ್ರಕರ್ತೃಕರ್ಮವದೇವ ಹಿ ॥ ೨೦೫ ॥**

**ಅರ್ಥ–** ಗುಣಗುಣ್ಯಾಧಿಭಾವಾತ್= ಗುಣ ಮತ್ತು ಗುಣಾಶ್ರಯವೆಂಬ ಸಂಬಂಧವಿರುವುದರಿಂದ, ಚ = ಮತ್ತು, ಬೋಧ್ಯಬೋಧಕಭಾವತಃ = ಬೋಧ್ಯ ಮತ್ತು ಬೋಧಕ ಎಂಬ ಸಂಬಂಧವಿರುವುದರಿಂದ, ತೇ = ಆ ಬ್ರಹ್ಮನ ಗುಣಗಳು, ಸೂತ್ರಕರ್ತೃಕರ್ಮವತ್ ಏವ = ಸೂತ್ರಗಳನ್ನು ರಚನೆ ಮಾಡಿದ ರೂಪ, ಮತ್ತು ಸೂತ್ರಗಳಿಂದ ಪ್ರತಿಪಾದ್ಯವಾದ ರೂಪಗಳಂತೆಯೇ, ತದ್ವಿಶೇಷಾಃ ಚ = ಆ ಬ್ರಹ್ಮನ ವಿಶೇಷಗಳೇ, ಸಂತಿ ಹಿ = ಆಗಿವೆಯಷ್ಟೇ.

**ಅನುವಾದ–** ಗುಣಗುಣ್ಯಾದಿಭಾವದಿಂದಲೂ, ಬೋಧ್ಯಬೋಧಕಭಾವದಿಂದಲೂ ಗುಣಗಳು ಬ್ರಹ್ಮನ ವಿಶೇಷವೆಂದೇ ಸಿದ್ಧವಾಗುತ್ತವೆ. ಸೂತ್ರಕರ್ತೃವಾದ ವ್ಯಾಸರಿಗೂ ಸೂತ್ರಪ್ರತಿಪಾದ್ಯನಾದ ನಾರಾಯಣನಿಗೂ ಅಭೇದವಿದ್ದರೂ, ವಿಶೇಷಬಲದಿಂದ ಪ್ರತಿಪಾದಕತ್ವವನ್ನೂ ಮತ್ತು ಪ್ರತಿಪಾದ್ಯತ್ವವನ್ನೂ ಉಪಪಾದನೆ ಮಾಡಿದಂತೆ, ಇಲ್ಲಿ ಉಪಪಾದನೆ ಮಾಡಬೇಕು.

**ಭಾವವಿಲಾಸಿನೀ–** ಅಧುನಾ ವಿಶೇಷಸಿದ್ಧಿಪ್ರಕಾರಮಾಹ – **ಗುಣೇತಿ** ॥ ಆದಿಪದೇನಾವಯವಾವಯವಿಭಾವಾದೇರ್ಗ್ರಹಣಮ್ । ಬೋಧ್ಯಬೋಧಕಭಾವತಃ ಲಕ್ಷಣಾದಿಗುಣಾನಾಂ ವ್ಯಾವರ್ತಕತಯಾ ಬ್ರಹ್ಮಬೋಧಕತ್ವಾತ್ ಬ್ರಹ್ಮಣೋ ಬೋಧ್ಯತ್ವಾದಿತ್ಯರ್ಥಃ । ತೇ ಗುಣಾಃ । ತದ್ವಿಶೇಷಾಃ । ತಸ್ಯ ಬ್ರಹ್ಮಣೋವಿಶೇಷಾಃ । ಬ್ರಹ್ಮಣಾ ಸಹ ಸವಿಶೇಷಾಭಿನ್ನಾ ಇತ್ಯರ್ಥಃ । ಸೂತ್ರಮರ್ಯಾದಯೈವ ಗುಣಗುಣ್ಯಭೇದಸ್ಯ ಗುಣಗುಣಿಭಾವಾದೇಶ್ಚ ಸಿದ್ಧೇಸ್ತದ್ಘಟಕವಿಶೇಷಸ್ಯಾಪ್ಯರ್ಥಾತ್ ಸಿದ್ಧಿಃ । ಅನ್ಯಥಾ ಘಟಕರೀರಾದಿವತ್ಪರ್ಯಾಯ ಶಬ್ದವಾಚ್ಯತ್ವಪ್ರಸಂಗಾದಿತಿ ಭಾವಃ । ತತ್ರ ದೃಷ್ಟಾಂತಮಾಹ – **ಸೂತ್ರೇತಿ** ॥ ಕರ್ಮ ಪ್ರತಿಪಾದ್ಯೋನಾರಾಯಣ ಇತ್ಯರ್ಥಃ । ಯಥೈಕ್ಯೇಪಿ ವ್ಯಾಸಸ್ಯ ಸೂತ್ರಕರ್ತೃತ್ವಂ ನಾರಾಯಣಸ್ಯ ಸೂತ್ರಪ್ರತಿಪಾದ್ಯತ್ವಂ ವಿಶೇಷಬಲಾದುಚ್ಯತೇ ತಥೇತ್ಯರ್ಥಃ ॥ ೨೦೫ ॥

**ವಿವರಣೆ–** ಈ ಶ್ಲೋಕದಲ್ಲಿ ವಿಶೇಷಸಿದ್ಧಿಯ ಪ್ರಕಾರವನ್ನು ಹೇಳುತ್ತಾರೆ. ಬ್ರಹ್ಮನು ಗುಣಿ, ಜಗತ್ಕರ್ತೃತ್ವಾದಿಗಳು ಗುಣಗಳು. ಬ್ರಹ್ಮನು ಅವಯವಿ, ಶಿರಚರಣಾದಿಗಳು

ಅವಯವ. ಜಗತ್ಕರ್ತೃತ್ವಾದಿ ಲಕ್ಷಣಗಳು ಬ್ರಹ್ಮನನ್ನು ಇತರ ಸರ್ವವ್ಯಾವೃತ್ತತಯಾ ಬೋಧಿಸುತ್ತವೆ, ಬ್ರಹ್ಮನು ಬೋಧ್ಯನಾಗುತ್ತಾನೆ. ಆದ್ದರಿಂದ ಈ ಗುಣಗಳೆಲ್ಲವೂ ಬ್ರಹ್ಮನ ವಿಶೇಷಗಳೇ, ಎಂದರೆ, ಬ್ರಹ್ಮನಿಂದ ಸವಿಶೇಷಾಭಿನ್ನವಾಗಿವೆ ಎಂದು ಅರ್ಥ. ಸೂತ್ರಮರ್ಯಾದೆಯಿಂದಲೇ ಗುಣಗುಣಿಭಾವವೂ, ಗುಣಗುಣ್ಯಭೇದವೂ ಸಿದ್ಧವಾಗುವುದರಿಂದ ಅದನ್ನು ನಿರ್ವಾಹಮಾಡುವ ವಿಶೇಷವೂ ಸಹ ಸೂತ್ರಮಹಿಮೆಯಿಂದಲೇ ಸಿದ್ಧವಾಗುತ್ತದೆ. ಅಂತಹ ವಿಶೇಷವಿಲ್ಲದಿದ್ದರೆ ಘಟ, ಕಲಶ ಮೊದಲಾದ ಶಬ್ದಗಳು ಪರ್ಯಾಯ ಶಬ್ದಗಳಾಗುವಂತೆ, ಗುಣಗುಣ್ಯಾದಿ ಶಬ್ದಗಳೂ ಪರ್ಯಾಯ ಶಬ್ದಗಳಾಗಲಿ ಎಂಬ ಪ್ರಸಂಗವೂ ಬರುತ್ತದೆ. ಬ್ರಹ್ಮಸೂತ್ರಕರ್ತೃಗಳಾದವರು ವೇದವ್ಯಾಸರು. ಬ್ರಹ್ಮಸೂತ್ರಪ್ರತಿಪಾದ್ಯನಾದವನು ನಾರಾಯಣ. ಅವರಿಗೆ ಅಭೇದವೇ ಇದ್ದರೂ ವಿಶೇಷಬಲದಿಂದ ವ್ಯಾಸರನ್ನು ಕರ್ತೃವೆಂದೂ ನಾರಾಯಣನನ್ನು ಪ್ರತಿಪಾದ್ಯನೆಂದೂ ಹೇಳುವಂತೆ, ಗುಣಗುಣಿಗಳಿಗೆ ಅಭೇದವಿದ್ದರೂ ವಿಶೇಷಬಲದಿಂದ ಬ್ರಹ್ಮನನ್ನು ಗುಣೀ ಎಂದೂ, ಜಗತ್ಕರ್ತೃತ್ವಾದಿಗಳನ್ನು ಗುಣಗಳೆಂದೂ ವ್ಯವಹಾರವನ್ನು ಮಾಡಬಹುದು.

**ಆನಂದಮಯಸೂತ್ರೋಕ್ತರೀತ್ಯಾ ಸೋಽಪಿ ಸುಖಾಕೃತಿಃ ।**
**ನಿರಾಕಾರಃ ಕಥಂ ಕುರ್ಯಾದ್ ಧ್ವಸ್ತಹಸ್ತಕುಲಾಲವತ್ ॥ ೨೦೬ ॥**

**ಅರ್ಥ–** ಆನಂದಮಯಸೂತ್ರೋಕ್ತರೀತ್ಯಾ = ಆನಂದಮಯೋಽಭ್ಯಾಸಾತ್ ಎಂಬ ಸೂತ್ರವು ಹೇಳಿದ ರೀತಿಯಲ್ಲಿ, ಸಃ = ಆ ಬ್ರಹ್ಮನು, ಸುಖಾಕೃತಿಃ ಅಪಿ = ಸುಖಸ್ವರೂಪವಾದ ಆಕಾರವುಳ್ಳವನೂ ಕೂಡ ಆಗಿದ್ದಾನೆ. ಸಃ = ಆ ಬ್ರಹ್ಮನು ನಿರಾಕಾರಃ ಚೇತ್ = ಒಂದುವೇಳೆ ನಿರಾಕಾರನಾಗಿದ್ದರೆ, ಧ್ವಸ್ತಹಸ್ತಕುಲಾಲವತ್ = ಕೈಮುರಿದ ಕುಲಾಲನಂತೆ, ಜಗತ್ = ಈ ಪ್ರಪಂಚವನ್ನು, ಕಥಂ = ಹೇಗೆ, ಕುರ್ಯಾತ್ = ಸೃಷ್ಟಿಮಾಡಿಯಾನು?

**ಅನುವಾದ–** ಆನಂದಮಯಸೂತ್ರವು ಹೇಳಿದ ರೀತಿಯಲ್ಲಿ ಬ್ರಹ್ಮನು ಸುಖಮಯವಾದ ಶರೀರವುಳ್ಳವನು. ಅವನಿಗೆ ಅಂತಹ ಆಕೃತಿಯಿಲ್ಲದಿದ್ದರೆ, ಕೈ ಮುರಿದ ಕುಂಬಾರನಂತೆ ಅವನು ಹೇಗೆ ಜಗತ್ತನ್ನು ಸೃಷ್ಟಿಮಾಡುತ್ತಾನೆ?

**ಭಾವವಿಲಾಸಿನೀ–** ಇದಾನೀಂ ಸಾಕಾರತ್ವಸಿದ್ಧಿಪ್ರಕಾರಮಾಹ – **ಆನಂದಮಯೇತಿ** ॥ ಆನಂದಮಯಸೂತ್ರೋಕ್ತರೀತ್ಯಾ ಆನಂದಮಯ ಇತಿ ಸೂತ್ರೇಣೋಕ್ತಾ ಸೂಚಿತಾ ಯಾ ತಸ್ಯ ಪ್ರಿಯಮೇವ ಶಿರ ಇತ್ಯಾದಿಕಾ ಶ್ರುತಿಃ ತದ್ರೀತ್ಯೇತ್ಯರ್ಥಃ । ಸಃ ಪರಮಾತ್ಮಾ ಸುಖಾಕೃತಿಃ ಸುಖಮಯಶಿರಃಪಾಣ್ಯಾದ್ಯಾಕಾರವಾನ್ । ಜನ್ಮಾದಿಸೂತ್ರಸೂಚನಯಾಪಿ ತತ್ಸಿದ್ಧಿ ಪ್ರಕಾರಮಾಹ – **ನಿರಾಕಾರ ಇತಿ** ॥ ನಿರಾಕಾರಃ ಹಸ್ತಪಾದಾದ್ಯಾಕಾರಶೂನ್ಯಃ । ಕುರ್ಯಾಜ್ಜಗತ್ ಸೃಜೇತ್ । ಅಕ್ಷ್ಣಾ ಪರಮಾಣೂನ್ನಿರೀಕ್ಷ್ಯ ಹಸ್ತೈರನ್ಯೋನ್ಯಂ ಸಂಯೋಜ್ಯ ಮಹದಾದಿತತ್ವಾನಿ

ಸ್ವೋದರಸ್ಥಬ್ರಹ್ಮಾದಿತತ್ವಾದ್ಯಭಿಮಾನಿಜೀವಾಂಸ್ತೇಷು ಸಂಕಲಯ್ಯ ಬ್ರಹ್ಮಾಂಡತದಂತರ್ಗತ ಚತುರ್ದಶಭುವನಾನಿ ಚ ಸಿಸೃಕ್ಷುಃ ಪಾತಾಲಾದಿ ಸತ್ಯಲೋಕಾಂತಾನಿಚ ಪದ್ಭ್ಯಾಂಭೂಮಿಃ ಊರೂತದಸ್ಯ ಯದ್ವೈಶ್ಯಃ ನಾಭ್ಯಾ ಆಸೀದಂತರಿಕ್ಷಂ ಬಾಹೂರಾಜನ್ಯಃ ಕೃತಃ ಮುಖಾದಿಂದ್ರ-ಶ್ಚಾಗ್ನಿಶ್ಚ ದಿಶಃ ಶ್ರೋತ್ರಾತ್ ಚಕ್ಷೋಃ ಸೂರ್ಯೋ ಅಜಾಯತ ಶೀರ್ಷ್ಣೋದ್ಯೌಃ ಸಮವರ್ತತೇ-ತ್ಯಾದಿಶ್ರುತ್ಯಾ ಪಾತಾಲಮೇತಸ್ಯ ಹಿ ಪಾದಮೂಲಮಿತ್ಯಾದಿ ಸ್ಮೃತ್ಯಾ ಚೋಕ್ತರೀತ್ಯಾ ಪಾದಾ-ದ್ಯವಯವೈರುತ್ಪಾದ್ಯ ತೈರೇವ ಸ್ವಾವಯವೈಃ ಸದಾಧಾರಯತೀತಿ ಶ್ರುತಿಸ್ಮೃತಿಪಂಚರಾತ್ರಾ-ದೀನಾಂ ಸಂಪ್ರದಾಯಃ । ಇದಂ ಚ ಪ್ರಕ್ರಿಯಾ ನಿರಾಕಾರಸ್ಯ ಕಥಂ ಸ್ಯಾತ್ । ಅತೋ ಜನ್ಮಾದ್ಯ-ಧಿಕರಣೋಕ್ತಜಗತ್‌ಕರ್ತೃತ್ವಧಾರಕತ್ವಾದಿ ಬಲಾದಪಿ ಭಗವತಃ ಸಾಕಾರತ್ವಂ ಸಿದ್ಧಮಿತಿ ಭಾವಃ । ತತ್ರ ದೃಷ್ಟಾಂತಮಾಹ–**ಧ್ವಸ್ತಹಸ್ತೇತಿ** ॥ ಚಕ್ಷುರಾದ್ಯವಯವಸ್ಯಾಪ್ಯುಪಲಕ್ಷಣ ಮೇತತ್ ॥೨೦೬॥

**ವಿವರಣೆ–** ಇಲ್ಲಿ ಸೂತ್ರಗಳಿಂದ ಸಾಕಾರತ್ವಸಿದ್ಧಿಯ ರೀತಿಯನ್ನು ಹೇಳುತ್ತಾರೆ. ಆನಂದಮಯಾಧಿಕರಣದಲ್ಲಿ 'ತಸ್ಯಪ್ರಿಯಮೇವ ಶಿರಃ' ಇತ್ಯಾದಿಗಳು ವಿಷಯವಾಕ್ಯ. ಆ ವಾಕ್ಯದಲ್ಲಿ ಬ್ರಹ್ಮನಿಗೆ ಶಿರಸ್ಸು ದಕ್ಷಿಣಪಕ್ಷ, ಉತ್ತರಪಕ್ಷ, ಮಧ್ಯದೇಹ ಮತ್ತು ಪಾದಗಳೆಂಬ ಅವಯವಗಳನ್ನು ಹೇಳಲಾಗಿದೆ. ಆದ್ದರಿಂದ ಬ್ರಹ್ಮನಿಗೆ ಆಕಾರವನ್ನು ಅಂಗೀಕರಿಸಬೇಕು. 'ಜನ್ಮಾದಿ' ಸೂತ್ರದಿಂದಲೂ ಬ್ರಹ್ಮನಿಗೆ ಆಕಾರವು ಸಿದ್ಧವಾಗುತ್ತದೆ. ಬ್ರಹ್ಮನು ಕಣ್ಣಿನಿಂದ ಪರಮಾಣುಗಳನ್ನು ನೋಡಿ, ಕೈಗಳಿಂದ ಅವುಗಳನ್ನು ಜೋಡಿಸಿ, ಮಹದಾದಿ ತತ್ವಗಳನ್ನು ಸೃಷ್ಟಿಮಾಡಿ, ಅವುಗಳಲ್ಲಿ ತನ್ನ ಉದರದಲ್ಲಿದ್ದ ಬ್ರಹ್ಮಾದಿ ದೇವತೆಗಳನ್ನು ತೆಗೆದು ಜೋಡಿಸಿ, ಬ್ರಹ್ಮಾಂಡದ ಒಳಗಿರುವ ಹದಿನಾಲ್ಕುಲೋಕಗಳನ್ನು ಸೃಷ್ಟಿಮಾಡುತ್ತಾನಷ್ಟೇ? ಇದು ಅನೇಕ ಶ್ರುತಿಗಳಿಂದ ಸಿದ್ಧವಾಗುತ್ತದೆ. ಪುರುಷಸೂಕ್ತದಲ್ಲಿ 'ಪದ್ಭ್ಯಾಂ ಭೂಮಿಃ, ಊರೂ ತದಸ್ಯ ಯದ್ ವೈಶ್ಯಃ, ನಾಭ್ಯಾ ಆಸೀದ್ ಅಂತರಿಕ್ಷಂ, ಬಾಹೂ ರಾಜನ್ಯಃಕೃತಃ, ಮುಖಾದಿಂದ್ರಶ್ಚಾಗ್ನಿಶ್ಚ, ದಿಶಃ ಶ್ರೋತ್ರಾತ್, ಚಕ್ಷೋಃ ಸೂರ್ಯೋ ಅಜಾಯತ, ಶೀರ್ಷ್ಣೋ ದ್ಯೌಃ ಸಮವರ್ತತ' ಎಂದು ಹೇಳಿ ಪಾದಗಳಿಂದ ಭೂಮಿಯ ಸೃಷ್ಟಿಯನ್ನೂ, ತೊಡೆಗಳಿಂದ ವೈಶ್ಯರ ಸೃಷ್ಟಿಯನ್ನೂ, ನಾಭಿಯಿಂದ ಅಂತರಿಕ್ಷದ ಸೃಷ್ಟಿಯನ್ನೂ, ಬಾಹುಗಳಿಂದ ಕ್ಷತ್ರಿಯರ ಸೃಷ್ಟಿಯನ್ನೂ, ಮುಖದಿಂದ ಇಂದ್ರಾಗ್ನಿಗಳ ಸೃಷ್ಟಿಯನ್ನೂ, ಶ್ರೋತ್ರಗಳಿಂದ ದಿಕ್ಕುಗಳ ಸೃಷ್ಟಿಯನ್ನೂ, ಚಕ್ಷುಸ್ಸಿನಿಂದ ಸೂರ್ಯನ ಸೃಷ್ಟಿಯನ್ನೂ ಮತ್ತು ಶಿರಸ್ಸಿನಿಂದ ದ್ಯು ಲೋಕದ ಸೃಷ್ಟಿಯನ್ನೂ ಹೇಳಿದೆ. 'ಪಾತಾಳಮೇತಸ್ಯ ಹಿ ಪಾದಮೂಲಂ' ಮೊದಲಾದ ಭಾಗವತದ ಶ್ಲೋಕಗಳಲ್ಲಿ ಪಾತಾಳಲೋಕವು ಪರಮಾತ್ಮನ ಪಾದಗಳಿಂದ ಜನಿಸಿ ಪರಮಾತ್ಮನ ಪಾದಗಳನ್ನೇ ಆಶ್ರಯಿಸಿಕೊಂಡಿದೆ ಎಂದು ಹೇಳಲಾಗಿದೆ. ಪಂಚರಾತ್ರಾದಿ ಶ್ರುತಿಗಳಲ್ಲಿಯೂ ಕೂಡ ಹೀಗೆಯೇ ಹೇಳಲಾಗಿದೆ. ಬ್ರಹ್ಮನು ನಿರಾಕಾರನಾದರೆ ಇಂತಹ ಒಂದು ಸೃಷ್ಟಿಪ್ರಕ್ರಿಯೆಯನ್ನು ಅವನಿಗೆ ಹೇಗೆ ಅಂಗೀಕರಿಸಲು ಸಾಧ್ಯ? ಆದ್ದರಿಂದ 'ಜನ್ಮಾದಿ' ಸೂತ್ರವು ಹೇಳಿದ ಜಗತ್ಕರ್ತೃತ್ವ, ಧಾರಕತ್ವಾದಿಗುಣಗಳ ಬಲದಿಂದಲೂ ಸಹ ಬ್ರಹ್ಮನಿಗೆ

ಸಾಕಾರತ್ವವು ಸಿದ್ಧವಾಗುತ್ತದೆ. ಕೈ ಇಲ್ಲದ, ಹಾಗೆಯೇ ಕಣ್ಣಿಲ್ಲದ ಕುಂಬಾರನು ಹೇಗೆ ಘಟವನ್ನು ಸೃಷ್ಟಿಮಾಡಲು ಸಾಧ್ಯವಿಲ್ಲವೋ, ಹಾಗೆ ನಿರಾಕಾರನಾದ, ನಿರವಯವನಾದ ಬ್ರಹ್ಮನು ಜಗತ್ತನ್ನು ಸೃಷ್ಟಿಮಾಡಲು ಸಾಧ್ಯವಿಲ್ಲವಾಗಿ ಅವನಿಗೆ ಎಲ್ಲಾ ಅವಯವಗಳನ್ನೂ ಅಂಗೀಕಾರ ಮಾಡಬೇಕು ಎಂದು ತಾತ್ಪರ್ಯ.

**ತಸ್ಮಾತ್ ಸಮಸ್ತಶ್ರುತ್ಯರ್ಥಸೂಚನಾತ್ ಸೂತ್ರಮುಚ್ಯತೇ ॥ ೨೦೭ ॥**

**ಅರ್ಥ–** ತಸ್ಮಾತ್= ಹಿಂದೆ ಹೇಳಿದ ರೀತಿಯಲ್ಲಿ ಮತ್ತು ಮುಂದೆ ಹೇಳುವ ರೀತಿಯಲ್ಲಿ, ಸಮಸ್ತಶ್ರುತ್ಯರ್ಥ ಸೂಚನಾತ್= ಸಗುಣತ್ವ, ಸಕಲಜಗದ್ಭಿನ್ನತ್ವ, ಸಾಕಾರತ್ವ, ಗುಣಗಳ ಸತ್ಯತ್ವ, ಸ್ವಗತಭೇದರಹಿತತ್ವ, ಸುಖರೂಪತ್ವ, ಮೊದಲಾದ ಸತ್ಸಿದ್ಧಾಂತ ಸಿದ್ಧವಾದ ಎಲ್ಲ ಅರ್ಥವನ್ನೂ ಸೂಚನೆ ಮಾಡುವುದರಿಂದ, ಸೂತ್ರಮ್= ಸೂತ್ರವೆಂದು, ಉಚ್ಯತೇ= ಕರೆಯಲ್ಪಡುತ್ತದೆ.

**ಅನುವಾದ–** ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ರೀತಿಯಲ್ಲಿ ಬ್ರಹ್ಮಸೂತ್ರಗಳು, ಸಗುಣತ್ವ, ಸಕಲಜಗದ್ ಭಿನ್ನತ್ವ, ಸಾಕಾರತ್ವ, ಗುಣಗಳ ಸತ್ಯತ್ವ, ಸ್ವಗತಭೇದರಹಿತತ್ವ, ಸುಖರೂಪತ್ವ, ಮೊದಲಾದ ಎಲ್ಲಾ ಗುಣಗಳನ್ನೂ ಸೂಚಿಸುವುದರಿಂದ ಸೂತ್ರಗಳೆಂದು ಕರೆಯಲ್ಪಡುತ್ತವೆ.

**ಭಾವವಿಲಾಸಿನೀ–** ತಸ್ಮಾದುಕ್ತಪ್ರಕಾರೇಣ ವಕ್ಷ್ಯಮಾಣ ಪ್ರಕಾರೇಣ ಚ ಸಗುಣತ್ವಸಕಲಜಗದ್ಭಿನ್ನತ್ವ ಸಾಕಾರತ್ವಾದಿ ಸಕಲಸತ್‌ಸಿದ್ಧಾಂತಸಿದ್ಧಾರ್ಥಬೋಧಕತ್ವಪ್ರಕಾರದರ್ಶನಾತ್ ॥ ೨೦೭ ॥

**ಏವಂ ಯೋ ವೇತ್ತಿ ಸೂತ್ರಾರ್ಥಂ ಸ ಬಂಧಾತ್ ಪರಿಮುಚ್ಯತೇ ।**
**ನ ಚೇತ್ ಸೂತ್ರಾರ್ಥವಿಚ್ಛೇದಾಚ್ಛಿದ್ಯತೇ ಯಮಕಿಂಕರೈಃ ॥ ೨೦೮ ॥**

**ಅರ್ಥ–** ಯಃ= ಯಾವನು, ಏವಂ= ಈ ರೀತಿಯಲ್ಲಿ, ಸೂತ್ರಾರ್ಥಂ= ಸೂತ್ರಾರ್ಥವನ್ನು, ವೇತ್ತಿ= ತಿಳಿಯುತ್ತಾನೆಯೋ, ಸಃ= ಅವನು, ಬಂಧಾತ್= ಸಂಸಾರ ಬಂಧದಿಂದ, ಪರಿಮುಚ್ಯತೇ= ಮುಕ್ತನಾಗುತ್ತಾನೆ, ನ ಚೇತ್= ಇಲ್ಲದಿದ್ದರೆ, ಸೂತ್ರಾರ್ಥ ವಿಚ್ಛೇದಾತ್= ಸೂತ್ರಾರ್ಥಕ್ಕೆ ವಿರುದ್ಧವಾಗಿ ಅರ್ಥವನ್ನು ಹೇಳುವುದರಿಂದ, ಯಮಕಿಂಕರೈಃ= ಯಮ ದೂತರಿಂದ, ಛಿದ್ಯತೇ= ಛೇದಿಸಲ್ಪಡುತ್ತಾನೆ.

**ಅನುವಾದ–** ಯಾವನು ಈ ರೀತಿಯಲ್ಲಿ ಸೂತ್ರಾರ್ಥವನ್ನು ತಿಳಿದುಕೊಳ್ಳುತ್ತಾನೆಯೋ, ಅವನು ಬಂಧದಿಂದ ಮುಕ್ತನಾಗುತ್ತಾನೆ. ಯಾವನು ಸೂತ್ರಾರ್ಥಕ್ಕೆ ವಿರುದ್ಧವಾಗಿ ಸೂತ್ರಾರ್ಥವನ್ನು ತಿಳಿದುಕೊಳ್ಳುತ್ತಾನೆಯೋ ಅಥವಾ ವ್ಯಾಖ್ಯಾನ ಮಾಡುತ್ತಾನೆಯೋ ಅವನು ಯಮಕಿಂಕರರಿಂದ ಛೇದಿಸಲ್ಪಡುತ್ತಾನೆ.

**ಭಾವವಿಲಾಸಿನೀ–** ಉಕ್ತವಿಧಯಾ ಸೂತ್ರಾರ್ಥವೇತ್ತುರ್ಮಹಾಫಲಂ ವಿಪರೀತವೇತ್ತುರ್ವಿಪರೀತ ಫಲಂ ಚ ದರ್ಶಯತಿ ॥ ಏವಮಿತಿ ॥ ೨೦೮ ॥

**ವಿವರಣೆ**– ನಾವು ಹೇಳಿದ ರೀತಿಯಲ್ಲಿ ಸೂತ್ರಾರ್ಥವನ್ನು ತಿಳಿದುಕೊಳ್ಳುವವನಿಗೆ ಮಹಾಫಲವನ್ನೂ ಅದಕ್ಕೆ ವಿಪರೀತವಾಗಿ ತಿಳಿದುಕೊಳ್ಳುವವನಿಗೆ ವಿಪರೀತ ಫಲವನ್ನೂ ಇಲ್ಲಿ ನಿರೂಪಿಸುತ್ತಾರೆ.

**ವಿಸ್ತರಸ್ತ್ವಸ್ಯ ಸರ್ವಸ್ಯ ಭಾಷ್ಯಾದಿಷ್ವೇವ ದೃಶ್ಯತಾಮ್ ।**
**ಮೂಲಶಾಸ್ತ್ರಾರ್ಣವೋತ್ಸಿಕ್ತಬಿಂದೂನ್ ವಂದಾಮಹೇ ವಯಮ್ ॥ ೨೦೯ ॥**

**ಅರ್ಥ**– ಅಸ್ಯ ಸರ್ವಸ್ಯ= ಈ ಎಲ್ಲಾ ಪ್ರಮೇಯದ, ವಿಸ್ತರಃ= ವಿಸ್ತರವು, ಭಾಷ್ಯಾದಿಷ್ವೇವ= ಸೂತ್ರಭಾಷ್ಯ ಮೊದಲಾದ ಗ್ರಂಥಗಳಲ್ಲಿಯೇ, ದೃಶ್ಯತಾಂ= ನೋಡಲ್ಪಡಲಿ, ವಯಂ= ನಾವು, ಮೂಲಶಾಸ್ತ್ರಾರ್ಣವೋತ್ಸಿಕ್ತಬಿಂದೂನ್= ಮೂಲಶಾಸ್ತ್ರವೆಂಬ ಸಮುದ್ರದಿಂದ ಸಿಡಿದ ಕಣಗಳನ್ನು, ವಂದಾಮಹೇ= ನಮಸ್ಕರಿಸುತ್ತೇವೆ.

**ಅನುವಾದ**– ಎಲ್ಲಾ ಪ್ರಮೇಯಗಳ ವಿಸ್ತಾರವನ್ನು ಸೂತ್ರಭಾಷ್ಯಮೊದಲಾದ ಗ್ರಂಥಗಳ ಅವಲೋಕನದಿಂದಲೇ ತಿಳಿಯಬೇಕು. ನಾವು ಮೂಲಶಾಸ್ತ್ರವೆಂಬ ಸಮುದ್ರದಿಂದ ಸಿಡಿದ ಬಿಂದುಗಳಿಗೆ ನಮಸ್ಕರಿಸುವವರು ಮಾತ್ರ.

**ಭಾವವಿಲಾಸಿನೀ**– ಸ್ಮೃತಮೂಲಶಾಸ್ತ್ರಮಹಿಮಾ ಗ್ರಂಥಕಾರಃ ತೇಷ್ವೇವ ಪರಮಾದರಂ ಕರೋತಿ – **ವಿಸ್ತರಸ್ತ್ವಸ್ಯೇತಿ** ॥ ಅಸ್ಯ ಪ್ರಮೇಯಸ್ಯ । ವಿಸ್ತರಃ ಯುಕ್ತಿಶ್ರುತಿಪುರಾಣ ಪಂಚರಾತ್ರಾದಿ-ವಚನಚಾತುರೀಚತುರಗ್ರಂಥಸಂದರ್ಭೈಃ ಪ್ರಪಂಚೀಕರಣಮ್ । ಆದಿಪದೇನಾನುವ್ಯಾಖ್ಯಾ-ನೋಪನಿಷದ್ಭಾಷ್ಯಾದಿಕಂ ಗೃಹ್ಯತೇ । ಮೂಲಶಾಸ್ತ್ರಾಖ್ಯಾರ್ಣವಾತ್ ಉತ್ಸಿಕ್ತಾ ಯೇ ಬಿಂದವಃ ಯುಕ್ತಿಲೇಶಾಃ ತಾನೇವ ವಂದಾಮಹೇ ಸ್ತುಮೋ ನಮಸ್ಕುರ್ಮಶ್ಚ । ತತ್ರ ತು ರುದ್ರಾದ್ಯಾ ಏವಾಧಿಕಾರಿಣಃ । ಅಸ್ಮಾಕಂ ತ್ವೇತಾವತ್ಯೇವ ಶಕ್ತಿರಿತಿ ಭಾವಃ ॥ ೨೦೯ ॥

**ವಿವರಣೆ**– ಮೂಲಶಾಸ್ತ್ರವನ್ನು ಸ್ಮರಿಸಿಕೊಂಡ ಗ್ರಂಥಕಾರರು, ಅದರಲ್ಲಿ ಪರಮಾದರವನ್ನು ವ್ಯಕ್ತಪಡಿಸುತ್ತಾರೆ. ವಿಸ್ತರವೆಂದರೆ ಯುಕ್ತಿ, ಶ್ರುತಿ, ಪುರಾಣ, ಪಂಚರಾತ್ರ ಇವುಗಳ ಸ್ಪಷ್ಟವಾದ ವಚನಗಳಿಂದ ಹೇಳಿದ ಪ್ರಮೇಯವನ್ನು ಸ್ಪಷ್ಟಪಡಿಸುವುದು. ಭಾಷ್ಯಾದಿ ಎಂಬಲ್ಲಿರುವ ಆದಿಪದದಿಂದ ಅನುವ್ಯಾಖ್ಯಾನ, ಉಪನಿಷದ್ಭಾಷ್ಯ ಮೊದಲಾದವುಗಳನ್ನು ತೆಗೆದುಕೊಳ್ಳಬೇಕು. ನಾವು ಹೇಳುತ್ತಿರುವ ಯುಕ್ತಿಗಳು ಆ ಮೂಲಶಾಸ್ತ್ರದ ಸಮುದ್ರದಿಂದ ಸಿಡಿದ ಕಣಗಳು ಮಾತ್ರ. ಮೂಲಶಾಸ್ತ್ರವು ಅಂತಹ ಯುಕ್ತ್ಯಾದಿಗಳ ಸಮುದ್ರ. ಕಣವೆಂದರೆ ಯುಕ್ತಿಯ ಲೇಶ ಎಂದು ಅರ್ಥ. ನಾವು ಆ ಕಣವನ್ನೂ ವ್ಯಾಖ್ಯಾನ ಮಾಡುತ್ತಿಲ್ಲ, ಅದಕ್ಕೆ ನಮಸ್ಕಾರವನ್ನು ಮಾತ್ರ ಮಾಡುತ್ತಿದ್ದೇವೆ ಎಂದು ಹೇಳಿ ವಾದಿರಾಜರು ತಮ್ಮ ವಿನಯವನ್ನು ತೋರಿಸುವುದರ ಜೊತೆಗೆ ಮೂಲಶಾಸ್ತ್ರದ ಮಹಿಮೆಯನ್ನೂ ತೋರಿಸಿದ್ದಾರೆ. (ಮನುಷ್ಯಾಧಿಕಾರವನ್ನು ಇಟ್ಟುಕೊಂಡು ವಯಂ ಎಂದಿದ್ದಾರೆ).

**ತಸ್ಮಾದುತ್ಸೂತ್ರಭಾಷ್ಯಸ್ಯ ಕರ್ತಾ ದುರ್ಭಾಷ್ಯಕೃದ್ ಧ್ರುವಂ ।**
**ಭಾಷ್ಯಕಾರಸ್ತು ಭಗವಾನ್ ಮಧ್ವೋ ವಿದ್ವಚ್ಛಿರೋಮಣಿಃ ॥ ೨೧೦ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಉತ್ಸೂತ್ರಭಾಷ್ಯಸ್ಯ ಕರ್ತಾ= ಸೂತ್ರಕ್ಕೆ ವಿರುದ್ಧವಾಗಿ ಭಾಷ್ಯವನ್ನು ರಚನೆ ಮಾಡುವವನು, ಧ್ರುವಂ= ನಿಶ್ಚಿತವಾಗಿ, ದುರ್ಭಾಷ್ಯಕೃತ್= ದುರ್ಭಾಷ್ಯವನ್ನು ರಚನೆ ಮಾಡಿದವನು, ವಿದ್ವಚ್ಛಿರೋಮಣಿಃ= ವಿದ್ವಾಂಸರ ಶಿರೋಮಣಿಯಾದ, ಭಗವಾನ್ ಮಧ್ವಃ ತು= ಪೂಜ್ಯರಾದ ಮಧ್ವಾಚಾರ್ಯರೇ, ಭಾಷ್ಯಕಾರಃ= ಭಾಷ್ಯಕಾರರಾದವರು.

**ಅನುವಾದ–** ಆದ್ದರಿಂದ, ಸೂತ್ರಕ್ಕೆ ವಿರುದ್ಧವಾಗಿ ಭಾಷ್ಯವನ್ನು ಬರೆಯುವವನು ಖಂಡಿತವಾಗಿ ದುರ್ಭಾಷ್ಯಕಾರನೆನಿಸುತ್ತಾನೆ, ವಿದ್ವಚ್ಛಿರೋಮಣಿಯಾದ ಪೂಜ್ಯರಾದ ಮಧ್ವಾಚಾರ್ಯರೇ ಭಾಷ್ಯಕಾರರೆಂಬ ಹೆಗ್ಗಳಿಕೆಗೆ ಪಾತ್ರರಾಗುತ್ತಾರೆ.

**ಭಾವವಿಲಾಸಿನೀ–** ಇದಾನೀಂ ಪರಭಾಷ್ಯಕಾರಂ ನಿಂದನ್ಸ್ವಮೂಲಭಾಷ್ಯಕಾರಂ ಸ್ತೌತಿ ॥ **ತಸ್ಮಾದಿತಿ** ॥ ಉಕ್ತಪ್ರಕಾರಾತ್ । ಉತ್ಸೂತ್ರಭಾಷ್ಯಸ್ಯ ಸೂತ್ರವಿರೋಧಿಭಾಷ್ಯಸ್ಯ । ವಿದ್ವಚ್ಛಿರೋ-ಮಣಿಃ ಸಮಧ್ವಃ ಮಧ್ವ ಏವ ಭಾಷ್ಯಕಾರಃ । ಸೂತ್ರೋಕ್ತಸೂಚಿತಸಕಲಪ್ರಮೇಯ ಪ್ರಪಂಚನ-ಪರಾಯಣತ್ವಾದಿತಿ ಭಾವಃ ॥ ೨೧೦ ॥

**ವಿವರಣೆ–** ಈ ಶ್ಲೋಕದಲ್ಲಿ ಪರಭಾಷ್ಯಕಾರರನ್ನು ನಿಂದಿಸಿ, ತಮ್ಮ ಮೂಲಭಾಷ್ಯಕಾರರನ್ನು ಸ್ತೋತ್ರ ಮಾಡುತ್ತಾರೆ.

**ಅತಃ ಪರಕೃತಂ ಭಾಷ್ಯಂ ಭಾಷ್ಯಂ ನಾಭೂತ್ ಸಭಾಂತರೇ ।**
**ತಸ್ಮಾತ್ ಸೂತ್ರೋದಿತೋ ಹ್ಯರ್ಥೋ ನಿರಾಕರ್ತುಂ ನ ಶಕ್ಯತೇ ॥ ೨೧೧ ॥**

**ಅರ್ಥ–** ಅತಃ= ಆದ್ದರಿಂದ, ಸಭಾಂತರೇ= ಸಭೆಯ ಮಧ್ಯದಲ್ಲಿ, ಪರಕೃತಂ ಭಾಷ್ಯಂ= ಪರಕೃತವಾದ ಭಾಷ್ಯವು, ಭಾಷ್ಯಂ ನಾಭೂತ್= ಭಾಷ್ಯವೇ ಆಗಲಿಲ್ಲ, ತಸ್ಮಾತ್= ಆದ್ದರಿಂದ, ಸೂತ್ರೋದಿತಃ= ಸೂತ್ರದಿಂದ ಹೇಳಲ್ಪಟ್ಟ, ಅರ್ಥಃ= ಪ್ರಮೇಯವನ್ನು, ನಿರಾಕರ್ತುಂ= ನಿರಾಕರಿಸಲು, ನ ಶಕ್ಯತೇ ಹಿ= ಸಾಧ್ಯವಿಲ್ಲವಷ್ಟೇ.

**ಅನುವಾದ–** ಆದ್ದರಿಂದ ಸಭೆಯ ಮಧ್ಯದಲ್ಲಿ ವಿಚಾರ ಮಾಡಿದರೆ ಪರಕೃತವಾದ ಭಾಷ್ಯವು ಭಾಷ್ಯವೇ ಅಲ್ಲ ಎಂದು ಸಿದ್ಧವಾಯಿತು. ಆದ್ದರಿಂದ ಸೂತ್ರದಿಂದ ಹೇಳಲ್ಪಟ್ಟ ಪ್ರಮೇಯಗಳನ್ನು ಯಾರೂ ನಿರಾಕರಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಅಧುನಾಪರಭಾಷ್ಯೇ ಭಾಷ್ಯಶಬ್ದ ಏವಾನುಚಿತ ಇತ್ಯಾಹ – **ಅತ ಇತಿ** ॥ ಅತಃ ಸೂತ್ರವಿರೋಧಿಭಾಷ್ಯತ್ವಾತ್ ಸಭಾಂತರೇ ವಿದ್ವತ್ಸಭಾಮಧ್ಯೇ । ಭಾಷ್ಯಂ ಭಾಷಿತುಂ

ಯೋಗ್ಯಮ್ । ಅತೋತ್ರಭಾಷ್ಯತ್ವಮಪಿ ನ ಶೋಭತ ಇತಿ ಭಾವಃ । ತಸ್ಮಾತ್ ಸೂತ್ರಪ್ರತಿಕೂಲಭಾಷ್ಯಸ್ಯ ಭಾಷಣಾಯೋಗ್ಯತ್ವಾತ್ ॥ ೨೧೧ ॥

**ವಿವರಣೆ–** ಪರಭಾಷ್ಯಗಳಲ್ಲಿ ಭಾಷ್ಯ ಎಂಬ ಶಬ್ದದ ಪ್ರಯೋಗವು ಅನುಚಿತವಾದುದು ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ಸ ಚ ಸ್ಥಿತ್ಯದನಾಭ್ಯಾಂ ಚೇತ್ಯಾಹ ಭೇದಂ ಸಯುಕ್ತಿಕಂ ।
ದ್ವಿಶಾಖಾಸಂಮತಿಂ ಭೇದೇ ಭೇದೇನೈನಮಧೀಯತೇ ॥ ೨೧೨ ॥

ಉಭಯೇಪೀತಿ ಸೂತ್ರೇಸೌ ಭೇದೋಕ್ತ್ಯಾ ಚಾನ್ಯತಾಂ ಕ್ವಚಿತ್ ।
ಭೇದಸ್ಯ ವ್ಯಪದೇಶಾಚ್ಚಾನ್ಯ ಇತ್ಯತ್ರ ಸ ಸೂತ್ರಕೃತ್ ॥ ೨೧೩ ॥

**ಅರ್ಥ–** ಸ ಚ= ಆ ಸೂತ್ರಕಾರರಾದರೂ, ಸ್ಥಿತ್ಯದನಾಭ್ಯಾಂ ಚ ಇತಿ= ಸ್ಥಿತ್ಯದನಾಭ್ಯಾಂ ಚ ಎಂಬ ಸೂತ್ರವನ್ನು ರಚನೆ ಮಾಡಿ, ಸಯುಕ್ತಿಕಂ= ಯುಕ್ತಿಸಹಿತವಾಗಿ, ಭೇದಂ= ಭೇದವನ್ನು, ಆಹ= ಹೇಳಿದ್ದಾರೆ, ಉಭಯೇಪಿ ಭೇದೇನೈನಮಧೀಯತೇ= ಶಾರೀರಶ್ಚೋಭಯೇಪಿ ಹಿ ಭೇದೇನೈನಮಧೀಯತೇ ಎಂಬ ಸೂತ್ರದಲ್ಲಿ, ದ್ವಿಶಾಖಾ ಸಂಮತಿಂ= ಎರಡು ಶಾಖೆಗಳ ಸಮ್ಮತಿಯನ್ನು, ಆಹ= ಹೇಳಿದ್ದಾರೆ, ಸ ಸೂತ್ರಕೃತ್= ಆ ಸೂತ್ರಕಾರರು, ಕ್ವಚಿತ್= ಒಂದು ಕಡೆ, ಭೇದಸ್ಯ ವ್ಯಪದೇಶಾಚ್ಚಾನ್ಯ ಇತ್ಯತ್ರ= ಭೇದವ್ಯಪದೇಶಾಚ್ಚಾನ್ಯ ಎಂಬ ಸೂತ್ರದಲ್ಲಿ, ಭೇದೋಕ್ತ್ಯಾ= ಅನ್ಯ ಎಂಬ ಭೇದವಚನದಿಂದ, ಅನ್ಯತಾಂ ಚ= ಅನ್ಯತ್ವವನ್ನು, ಆಹ= ಹೇಳಿದ್ದಾರೆ.

**ಅನುವಾದ–** ಸೂತ್ರಕಾರರು ಸ್ಥಿತ್ಯದನಾಭ್ಯಾಂ ಚ ಎಂಬ ಸೂತ್ರದಲ್ಲಿ ಸಯುಕ್ತಿಕವಾಗಿ ಭೇದವನ್ನು ಹೇಳಿದ್ದಾರೆ. ಶಾರೀರಶ್ಚೋಭಯೇಪಿ ಹಿ ಭೇದೇನೈನಮಧೀಯತೇ ಎಂಬ ಸೂತ್ರದಲ್ಲಿ ಭೇದಕ್ಕೆ ಎರಡು ಶಾಖೆಗಳ ಸಮ್ಮತಿಯನ್ನು ಹೇಳಿದ್ದಾರೆ. ಆ ಸೂತ್ರಕಾರರು ಭೇದಸ್ಯ ವ್ಯಪದೇಶಾಚ್ಚಾನ್ಯಃ ಎಂಬ ಸೂತ್ರದಲ್ಲಿ ಅನ್ಯ ಎಂಬ ವಚನದಿಂದ ಭೇದವನ್ನು ಹೇಳಿದ್ದಾರೆ.

**ಭಾವವಿಲಾಸಿನೀ–** ಅಧುನಾಸಾಕ್ಷಾತ್ ಸೂತ್ರೈರೇವ ಭೇದಸೌರಭಮುಖ್ಯಾರ್ಥ ಭೂತಜೀವೇಶ್ವರ ಭೇದಸಾಧನಪ್ರಕಾರಂ ದರ್ಶಯತಿ– **ಸ ಚೇತಿ** ॥ ಸಃ ಸೂಚನಯಾಪಿ ಅರ್ಥಸಾಧಕ ಸೂತ್ರಕರ್ತಾ ವ್ಯಾಸಃ ಸ್ಥಿತ್ಯದನಾಭ್ಯಾಂಚೇತಿ ಸೂತ್ರೇಸ್ಥಿತಿರದನಾಭಾವೇಪಿ ಸುಖೇನವರ್ತನಮ್ । ಅದನಂ ಕರ್ಮಫಲಭಕ್ಷಣಮ್ । ದೇಹಾಖ್ಯವೃಕ್ಷೇಜೀವಪರಮಾತ್ಮಾಖ್ಯೌ ದ್ವೌಕಿಲ ಸುಪರ್ಣೌ । ತತ್ರ ಜೀವಃ ಕರ್ಮಫಲಾಶನಾಭಾವೇ ಜೀವಿತುಮಪಿ ನ ಶಕ್ನೋತಿಕಿಲ। ಪರಮಾತ್ಮಾತು ಪರಿಪೂರ್ಣತ್ವಾತ್ತದಭಾವೇಪಿ ಸುಖೀಕಿಲ । ಏವಮೀದೃಗ್ವಿರುದ್ಧಧರ್ಮಯೋರಪಿಸೂತ್ರ ಏವಸ್ಪಷ್ಟಮುಕ್ತತ್ವಾತ್ ಸಯುಕ್ತಿಕಮಿತ್ಯುಕ್ತಮ್ । ಭೇದವ್ಯಪದೇಶಾಚ್ಚಾನ್ಯ ಇತಿ ಸೂತ್ರಾದನುವೃತ್ತಾನ್ಯ ಪದಸ್ಯ ಯಥಾಯೋಗಂ

ವಿಭಕ್ತೇರ್ಗ್ರಾಹ್ಯತ್ವಾತ್ ಅನ್ಯೌ ಜೀವಪರಮಾವಿತಿ ಸಾಧ್ಯಮಪಿ ಹೇತುಪ್ರತಿಪಾದಕೇಽಸ್ಮಿನ್ ಸೂತ್ರೇಽಭಿಮತಮ್ । ಅತೋ ಭೇದಸ್ಯಾಪಿ ಸ್ಪಷ್ಟಮುಕ್ತತ್ವಾತ್ ಭೇದಮಾಹೇತ್ಯುಕ್ತಮ್ । ಭೇದಸಾಧಕಸೂತ್ರಾಣಾಮಸ್ಮಾದಪ್ಯಾದೌ ಸದ್ಭಾವೇಪಿ ಸಯುಕ್ತಿಕತ್ವಾತ್ ಗ್ರಂಥಸ್ಯ ಚ ಯುಕ್ತಿಮಲ್ಲಿಕಾತ್ವಾದಸ್ಯೈವ ಪ್ರಥಮತೋ ಗ್ರಹಣಮ್ । ಅಸೌ ಸೂತ್ರಕಾರಃ । ಉಭಯೇ ಕಾಣ್ವಮಾಧ್ಯಂದಿನಾ ಇತ್ಯುಭಯೇಶಾಖಿನಃ । ಯ ಆತ್ಮನಿತಿಷ್ಠನ್ನಾತ್ಮನೋಂತರೋ ಯೋ ವಿಜ್ಞಾನೇತಿಷ್ಠನ್ವಿಜ್ಞಾನಾದಂತರ ಇತಿ ಚ ವಾಕ್ಯಾಭ್ಯಾಮಾಧಾರಾಧೇಯಭಾವೇನಾಂತರ ಇತಿ ಸಾಕ್ಷಾತ್ ಭೇದವಾಚಕಾಂತರಪದೇನ ಚೈನಂ ಪರಮಾತ್ಮಾನಂ ಶಾರೀರಪದೋಕ್ತ-ಜೀವಾದ್ಭೇದೇನಾಧೀಯತೇ ಪಠಂತೀತಿ ಭೇದೇ ದ್ವಿಶಾಖಾಸಮ್ಮತಿಂಪ್ರಾಹೇತಿ ಸಂಬಂಧಃ । ಅನೇನ ಶಾರೀರಶ್ಚೋಭಯೇಪಿ ಹಿ ಭೇದೇನೈನಮಧೀಯತ ಇತಿ ಸೂತ್ರಂ ಸಂಗೃಹೀತಮ್ । ಉಭಯೇಪೀತಿ ಸಂಧಿಕರಣಾನ್ನಪುಂಸಕ ದ್ವಿವಚನಾಂತೋಭಯಪದೇನ ಪ್ರಕೃತಾಪೇಕ್ಷಿತ-ವಚನದ್ವಯಮಾತ್ರಮ ಸಂಗೃಹ್ಯೋಭಾವಿತಿ ಶಾಖಾಪ್ರವರ್ತಕೌದ್ವೌಚಾನುಕ್ತ್ವಾ ಉಭಯೇಧಿಯತ ಇತಿ ಬಹುವಚನಾಂತಪದಪ್ರಯೋಗಃ ಶಾಖಾಪ್ರವರ್ತಕಾಭಿಯುಕ್ತ ಬಹುಪುರುಷ-ಸಮ್ಮತಿಂ ಚ ಭೇದೇ ದರ್ಶಯಿತುಮಿತಿದ್ರಷ್ಟವ್ಯಮ್ । ಸಃ ಸೂತ್ರಕೃತ್ । ಕ್ವಚಿದಧಿಕರಣೇ ಭೇದಸ್ಯ ವ್ಯಪದೇಶಾಚ್ಚಾನ್ಯ ಇತ್ಯತ್ರ ಸೂತ್ರೇ । ಭೇದವ್ಯಪದೇಶಾಚ್ಚಾನ್ಯ ಇತಿ ಸೂತ್ರಮನೇನ ಗೃಹ್ಣಾತಿ । ಭೇದೋಕ್ತ್ಯಾ ಅಂತಶ್ಚಂದ್ರಮಸಿ ಮನಸಾಚರಂತಮ್ । ಇಂದ್ರಸ್ಯಾತ್ಮಾ ನಿಹಿತಃ ಪಂಚ ಹೋತಾ । ವಾಯೋರಾತ್ಮಾನಂ ಕವಯೋನಿಚಿಕ್ಯುಃ । ಸಹ್ಯೈವಸಂತಂ ನ ವಿಜಾನಂತಿ ದೇವಾ ಇತ್ಯಾದಿ ಭೇದಪ್ರತಿಪಾದಕವಾಕ್ಯೇನೇತ್ಯರ್ಥಃ । ಅನ್ಯತಾಂ ಚಂದ್ರೇಂದ್ರಾದಿ ದೇವೇಭ್ಯೋ ಭಿನ್ನತಾಮ್ । ಆಹೇತಿಪೂರ್ವೇಣಾನ್ವಯಃ । ಭೇದಪ್ರತಿಪಾದಕ ವಚನದ್ವಯಸಮಾಯೋಗಾ-ದ್ಭೇದಾರ್ಥಕ ಷಷ್ಠೀಬಲಾತ್ ಆತ್ಮಪದಮಂತರ್ಯಾಮಿಪರಮ್ ॥ ೨೧೨-೨೧೩ ॥

**ವಿವರಣೆ–** ಇನ್ನು ಸೂತ್ರಗಳಿಂದಲೇ ಭೇದಸೌರಭದ ಮುಖ್ಯಾರ್ಥವಾದ ಜೀವೇಶ್ವರ ಭೇದವು ನೇರವಾಗಿ ಸಿದ್ಧವಾಗುವ ರೀತಿಯನ್ನು ಇಲ್ಲಿ ತೋರಿಸುತ್ತಾರೆ. ಸೂಚನೆ ಮಾಡುವುದರಿಂದಲೂ ಅರ್ಥವನ್ನು ಸಾಧಿಸುವ ಸೂತ್ರಕಾರರು ಕಂಠತಃ ಈ ಭೇದವನ್ನು ಹೇಳಿದ್ದಾರೆ ಎಂದು ಇಲ್ಲಿ ಉದಾಹರಣೆಗಳ ಮೂಲಕ ತೋರಿಸುತ್ತಾರೆ. ಸ್ಥಿತ್ಯದನಾಭ್ಯಾಂಚ ಎಂಬುದು ಒಂದು ಬ್ರಹ್ಮಸೂತ್ರ. ಇಲ್ಲಿ ಸ್ಥಿತಿ ಎಂದರೆ ಆಹಾರವಿಲ್ಲದಿದ್ದರೂ ಸುಖದಿಂದ ಇರುವುದು. ಅದನ ಎಂದರೆ ಕರ್ಮಫಲಭೋಗ. ದೇಹವೆಂಬ ವೃಕ್ಷದಲ್ಲಿ ಜೀವ ಮತ್ತು ಪರಮಾತ್ಮ ಎಂಬ ಎರಡು ಹಕ್ಕಿಗಳು ಇವೆಯಷ್ಟೇ. ಅವುಗಳಲ್ಲಿ ಜೀವನು ಕರ್ಮಫಲವನ್ನು ಭೋಗಿಸದಿದ್ದರೆ ಜೀವಿಸಲೂ ಸಾಧ್ಯವಿಲ್ಲವೆಂಬುದು ಪ್ರಸಿದ್ಧವಾದುದು. ಪರಮಾತ್ಮನು ಪರಿಪೂರ್ಣನಾದುದರಿಂದ ಕರ್ಮಫಲಭೋಗವಿಲ್ಲದಿದ್ದರೂ ಸುಖಿಯಾಗಿ ಇರುತ್ತಾನೆ. ಇಂತಹ ವಿರುದ್ಧಧರ್ಮಾಧಿಕರಣತ್ವರೂಪವಾದ ಯುಕ್ತಿಯನ್ನು ಸೂತ್ರದಲ್ಲಿ ಹೇಳಿದುದರಿಂದ ಸಯುಕ್ತಿಕವಾಗಿ ಹೇಳಿದ್ದಾರೆ ಎಂದು ಗ್ರಂಥಕಾರರು ಹೇಳುತ್ತಾರೆ. ಈ ಸೂತ್ರದಲ್ಲಿ ಭೇದವ್ಯಪದೇಶಾಚ್ಚಾನ್ಯಃ ಎಂಬ ಸೂತ್ರದಿಂದ ಅನ್ಯಪದವನ್ನು ಅನುವೃತ್ತಿ

ಮಾಡಬೇಕು. ಅದನ್ನು ಅನ್ಯೌ ಎಂದು ಪರಿವರ್ತನೆಯನ್ನು ಮಾಡಿ ಜೀವಪರಮೌ ಅನ್ಯೌ ಎಂದು ಪ್ರತಿಜ್ಞೆಯಲ್ಲಿ ಸಾಧ್ಯವನ್ನಾಗಿ ನಿರ್ದೇಶ ಮಾಡಬೇಕು. ಹೇತುವನ್ನು ಪ್ರತಿಪಾದನೆ ಮಾಡಲು ಹೊರಟ ಈ ಸೂತ್ರಕ್ಕೆ ಸಾಧ್ಯವೂ ಅಭಿಪ್ರೇತವಾಗಿರಲೇಬೇಕಷ್ಟೇ. ಆದ್ದರಿಂದ ಜೀವಪರಮಾತ್ಮಾನೌ ಅನ್ಯೌ ಸ್ಥಿತ್ಯದನರೂಪ ವಿರುದ್ಧಧರ್ಮಾಧಿಕರಣತ್ವಾತ್ ಎಂಬ ಯುಕ್ತಿಯು ಇಲ್ಲಿ ಸೂಚಿತವಾಗುತ್ತದೆ. ಯದ್ಯಪಿ ಈ ಸೂತ್ರಕ್ಕಿಂತ ಮೊದಲೇ ಬ್ರಹ್ಮಸೂತ್ರಗಳಲ್ಲಿ ಭೇದಸಾಧಕವಾದ ಸೂತ್ರಗಳಿವೆ. ಆದರೂ ಯುಕ್ತಿಸಹಿತವಾಗಿ ಭೇದವನ್ನು ಸಾಧಿಸುವ ಸೂತ್ರಗಳಲ್ಲಿ ಇದೇ ಮೊದಲನೆಯದು. ಈ ಗ್ರಂಥವು ಯುಕ್ತಿಮಲ್ಲಿಕಾ ಗ್ರಂಥವಾದ್ದರಿಂದ ಅಂತಹ ಯುಕ್ತಿಸಹಿತವಾದ ಸೂತ್ರವನ್ನೇ ಇಲ್ಲಿ ಮೊದಲು ಉದಾಹರಿಸಿದ್ದಾರೆ.

'ಶಾರೀರಶ್ಚೋಭಯೇಪಿ ಹಿ ಭೇದೇನೈನಮಧೀಯತೇ' ಎಂಬುದು ಅಂತರ್ಯಾಮ್ಯಧಿಕರಣದ ಇನ್ನೊಂದು ಸೂತ್ರ. ಕಾಣ್ವ ಮತ್ತು ಮಾಧ್ಯಂದಿನ ಶಾಖೆಯವರಿಬ್ಬರೂ ಪರಮಾತ್ಮನನ್ನು ಜೀವನಿಂದ ಭಿನ್ನನೆಂದು ತಿಳಿಯುತ್ತಾರೆ ಎಂದು ಅರ್ಥ. ಕಾಣ್ವಶಾಖೆಯಲ್ಲಿ ಆತ್ಮ ನಿತಿಷ್ಠನ್ ಆತ್ಮನೋ ಅಂತರಃ ಎಂಬ ವಾಕ್ಯವಿದೆ. ಮಾಧ್ಯಂದಿನಶಾಖೆಯಲ್ಲಿ ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರಃ ಎಂಬ ವಾಕ್ಯವಿದೆ. ಇಲ್ಲಿ ಆತ್ಮ ಮತ್ತು ವಿಜ್ಞಾನಶಬ್ದಗಳಿಗೆ ಜೀವ ಎಂದು ಅರ್ಥ. ಆತ್ಮನಿ ತಿಷ್ಠನ್ ವಿಜ್ಞಾನೇ ತಿಷ್ಠನ್ ಎಂಬ ಪದಗಳಲ್ಲಿ ಜೀವ-ಪರಮಾತ್ಮರಿಗೆ ಆಧಾರಾಧೇಯಭಾವವನ್ನು ಹೇಳಿರುವುದರಿಂದ ಭೇದವು ಸಿದ್ಧವಾಗುತ್ತದೆ. ಅಲ್ಲದೆ, ಎರಡು ಕಡೆಗಳಲ್ಲಿಯೂ ಇರುವ ಅಂತರಶಬ್ದವು ನೇರವಾಗಿ ಭೇದವನ್ನೇ ಹೇಳುತ್ತದೆ. ಸೂತ್ರದಲ್ಲಿ ಉಭಯೇಪಿ ಎಂದು ಪ್ರಯೋಗವಿದೆ. ಯದ್ಯಪಿ ಎರಡು ಶಾಖೆಗಳ ಸಮ್ಮತಿಯನ್ನು ಸೂಚಿಸುವುದಾದರೆ ಉಭಯೇ ಎನ್ನುವ ಪದಕ್ಕೆ ಪ್ರಗೃಹ್ಯ ಸಂಜ್ಞೆ ಇರುವುದರಿಂದ ಉಭಯೇ ಅಪಿ ಎಂದು ಪ್ರಕೃತಿಭಾವವು ಬರಬೇಕೇ ಹೊರತು ಪೂರ್ವರೂಪಸಂಧಿಯು ಬರಲು ಸಾಧ್ಯವಿಲ್ಲ. ಆದ್ದರಿಂದ ಉಭಯೇಪಿ ಎಂದು ಸಂಧಿಯನ್ನು ಮಾಡುವ ಸೂತ್ರಕಾರರಿಗೆ, ಇದು ದ್ವಿವಚನಾಂತ ಉಭಯ ಪದದ ರೂಪವಲ್ಲ, ನಪುಂಸಕಲಿಂಗಾಂತವಾದ ಉಭಯ ಪದದ ಬಹುವಚನಾಂತವಾದ ರೂಪ ಎಂದು ಅಭಿಪ್ರಾಯ. ಗೂಢಾಭಿಪ್ರಾಯವೇನೆಂದರೆ ಭೇದದಲ್ಲಿ ಕೇವಲ ಎರಡು ಶಾಖೆಗಳ ಸಮ್ಮತಿ ಮಾತ್ರವಲ್ಲ ಇನ್ನೂ ಅನೇಕ ಶಾಖೆಗಳ ಸಮ್ಮತಿ ಇದೆ ಎಂದು ಸೂಚಿಸುವುದು. ಅದಕ್ಕಾಗಿ ಸಂಧಿಯನ್ನು ಮಾಡಿ ಅನೇಕ ಶಾಖಾಸಮ್ಮತಿಯನ್ನು ಸೂಚಿಸಿದ್ದಾರೆ.

ಭೇದವ್ಯಪದೇಶಾಚ್ಚಾನ್ಯಃ ಎಂಬುದು ಅಂತಃಸ್ಥತ್ವಾಧಿಕರಣದ ಒಂದು ಗುಣಸೂತ್ರ. ಇಲ್ಲಿ ವಿಷಯವಾಕ್ಯದಲ್ಲಿ ಅಂತಃಚಂದ್ರಮಸಿ ಮನಸಾಚರಂತಂ, ಇಂದ್ರಸ್ಯಾತ್ಮಾನಿಹಿತಃ ಪಂಚಹೋತಾ, ವಾಯೋರಾತ್ಮಾನಾಂ ಕವಯೋನಿಚಿಕ್ಯುಃ, ಸಹೈವ ಸಂತಂ ನ ವಿಜಾನಂತಿ ದೇವಾಃ ಎಂದು ಇದೆ. ಚಂದ್ರನ ಒಳಗೆ ಸಂಚರಿಸುವ ಎಂದು ಹೇಳಿ, ಚಂದ್ರನಿಗೂ

ಅಂತಃಸ್ಥನಾದ ಪರಮಾತ್ಮನಿಗೂ ಭೇದವನ್ನು ಹೇಳಿದ್ದಾರೆ. ಚಂದ್ರಮಸಿ ಎಂಬಲ್ಲಿ ಸಪ್ತಮೀ ವಿಭಕ್ತಿಯು ಮತ್ತು ಚರಂತಂ ಎಂಬಲ್ಲಿರುವ ದ್ವಿತೀಯಾವಿಭಕ್ತಿಯು ಭೇದವನ್ನು ಹೇಳುತ್ತವೆ. ಇಂದ್ರಸ್ಯಾತ್ಮಾ ಎಂಬಲ್ಲಿಯೂ ಇಂದ್ರನ ಅಂತರ್ಯಾಮಿ ಎಂದು ಭೇದವನ್ನು ಇಂದ್ರಸ್ಯ ಮತ್ತು ಆತ್ಮಾ ಎಂಬಲ್ಲಿನ ಷಷ್ಠೀ ಮತ್ತು ಪ್ರಥಮಾ ವಿಭಕ್ತಿಯಿಂದ ಭೇದವನ್ನು ಹೇಳಿದ್ದಾರೆ. ವಾಯೋರಾತ್ಮಾನಂ ಕವಯೋ ನಿಚಿಕ್ಯುಃ ಎಂಬಲ್ಲಿ ವಾಯುವಿನ ಅಂತರ್ಯಾಮಿ ಎಂದು ಭೇದವನ್ನು ಷಷ್ಠಿ ಮತ್ತು ದ್ವಿತೀಯಾ ವಿಭಕ್ತಿಯಿಂದ ಭೇದವನ್ನು ಹೇಳಿದ್ದಾರೆ. ಸಹೈವ ಸಂತಂ ನ ವಿಜಾನಂತಿ ದೇವಾಃ ಎಂಬಲ್ಲಿ ದೇವತೆಗಳಿಂದ ಜ್ಞೇಯನಲ್ಲವೆಂದು ಭೇದವನ್ನು ಪ್ರತಿಪಾದನೆ ಮಾಡಿದ್ದಾರೆ. ಹೀಗೆ ಇಂತಹ ಸೂತ್ರಗಳಲ್ಲಿ ಭೇದವನ್ನು ಕಂಠದಿಂದಲೇ ಹೇಳಿರುವುದರಿಂದ ಅದು ಪರಮಾದರದಿಂದ ಗ್ರಾಹ್ಯವಾದುದು ಎಂದು ಅಭಿಪ್ರಾಯ.

**ಕ್ವಚಿಚ್ಚ ಭೇದವ್ಯಪದೇಶಾದಿತ್ಯೂಚೇ ತಥಾ ಕ್ವಚಿತ್ ।**
**ಭೇದವ್ಯಪದೇಶಾಚ್ಚೇತ್ಯಾಹ ಸೂತ್ರದ್ವಯಂ ತ್ವಿದಂ ॥ ೨೧೪ ॥**

**ಅರ್ಥ–** ಕ್ವಚಿತ್ ಚ= ಮತ್ತೊಂದು ಕಡೆ, ಭೇದವ್ಯಪದೇಶಾತ್ ಇತಿ= ಭೇದವ್ಯಪದೇಶಾತ್ ಎಂಬ ಸೂತ್ರದಿಂದ, ಊಚೇ= ಸೂತ್ರಕಾರರು ಭೇದವನ್ನು ಹೇಳಿದ್ದಾರೆ, ತಥಾ= ಹಾಗೆಯೇ, ಕ್ವಚಿತ್= ಇನ್ನೊಂದು ಕಡೆ, ಭೇದವ್ಯಪದೇಶಾಚ್ಚೇತಿ= ಭೇದವ್ಯಪದೇಶಾಚ್ಚ ಎಂದು, ಇದಂ ಸೂತ್ರದ್ವಯಂ= ಈ ಎರಡು ಸೂತ್ರಗಳನ್ನು, ಆಹ= ಹೇಳಿದ್ದಾರೆ.

**ಅನುವಾದ–** ಸೂತ್ರಕಾರರು ಒಂದು ಕಡೆಯಲ್ಲಿ ಭೇದವ್ಯಪದೇಶಾತ್ ಎಂದು ಇನ್ನೊಂದು ಕಡೆಯಲ್ಲಿ ಭೇದವ್ಯಪದೇಶಾಚ್ಚಾನ್ಯಃ ಎಂದು ಈ ಎರಡು ಸೂತ್ರಗಳನ್ನು ರಚಿಸಿ ಕಂಠತಃ ಭೇದವನ್ನು ಹೇಳಿದ್ದಾರೆ.

**ಭಾವವಿಲಾಸಿನೀ–** ಕ್ವಚಿದಧಿಕರಣೇ ಭೇದವ್ಯಪದೇಶಾದಿತಿ ಸೂತ್ರೇಣೋಚೇ ಅನ್ಯತಾಮೂಚೇ । ತಥಾ ಏವಮೇವ ಕ್ವಚಿದಧಿಕರಣೇ ಭೇದಸ್ಯವ್ಯಪದೇಶಾಚ್ಚ ಭೇದವ್ಯಪದೇಶಾಚ್ಚೇತಿ ಸೂತ್ರ ಇತ್ಯರ್ಥಃ । ಆಹ ಅನ್ಯತಾಮಾಹ । ಇದಂ ಪೂರ್ವೋಕ್ತಂ ಸೂತ್ರದ್ವಯಮ್ । ಭೇದವ್ಯಪದೇಶಾದಿತ್ಯೇಕಮ್ । ಭೇದವ್ಯಪದೇಶಾಚ್ಚೇತ್ಯಪರಮ್ । ಏವಂ ಸೂತ್ರದ್ವಯಮಿತ್ಯರ್ಥಃ। ಏಕತ್ರ ಚ ಶಬ್ದರಾಹಿತ್ಯಮಪರತ್ರ ತತ್ಸಾಹಿತ್ಯಂ ಚ ವಿಶೇಷಂ ದರ್ಶಯಿತುಂ ತು ಶಬ್ದಃ । ನನು ಭೇದೋಕ್ತೇರೀತ್ಯಲ್ಪಾಕ್ಷರತಯಾ ಸೂತ್ರಸ್ಯಕರ್ತುಂ ಶಕ್ಯತ್ವಾದ್ವ್ಯಪದೇಶಾದಿತ್ಯುಕ್ತಿಃ ಕಿಮರ್ಥಾ । ಸತ್ಯಮ್ । ಭೇದಸೂತ್ರಾಣಾಮೇಷಾಮತಾತ್ವಿಕ ಭೇದಪರತ್ವಂ ವದತಃ ಪರಸ್ಯ ಪ್ರತ್ಯುತ್ತರಂ ಚ ಸೂಚಯಿತುಮಿತಿಬ್ರೂಮಃ। ತಥಾಹಿ। ವಿಗತೋಽಪದೇಶೋಪಾರ್ಥಕದೇಶನಾ (ನಂ) ಯಸ್ಮಾದಿತಿ ವ್ಯುತ್ಪತ್ತ್ಯಾ ವ್ಯಪದೇಶ ಪದಸ್ಯಾತಿ ಸಾರ್ಥಕವಚನಪರತ್ವಾತ್ । ತತಶ್ಚಪರೋದೀರಿತಶಂಕಾಯಾಃ ಕಥಮವಕಾಶಃ । ಅತಾತ್ವಿಕಾರ್ಥಕಥಕ ವಾಕ್ಯಸ್ಯಾತಿಸಾರ್ಥಕವಾಕ್ಯತ್ವಾಯೋಗಾತ್ । ಅಥವಾ ಪೃಥಗುಪದೇಶಾದಿತಿ ಸೂತ್ರಾಂತರೇ ಭೇದಪ್ರತಿಪಾದಕ ವಾಕ್ಯಸ್ಯೋಪದೇಶ ರೂಪತ್ವಕಥನಾ-

ದತ್ರಾಪ್ಯಪದೇಶ ಉಪದೇಶ ಏವ । ಯದ್ವಾ ಸ್ವಾಭಿಮತಾರ್ಥೇ ಹೇತುತಯಾಕಥನಾಚ್ಚಾಯ-ಮಪದೇಶ ಉಪದೇಶ ಏವ । ನಹಿ ಕೋಽಪಿಪ್ರೇಕ್ಷಾವಾನ್ಕಂಚಿದರ್ಥಂ ಪ್ರತಿಜ್ಞಾಯತತ್ರಾಪಾರ್ಥಕವಾಕ್ಯಂ ಹೇತುತಯಾ ಪ್ರಯುಂಕ್ತೇ । ತಥಾ ಚ ವಿಶಿಷ್ಟಶ್ಚಾಸಾವಪದೇಶಶ್ಚೇತಿ ವ್ಯಪದೇಶಪದೇನ ವಿಶಿಷ್ಟೋಪದೇಶ ಏವೋಚ್ಯತೇ । ತಸ್ಯ ಚ ಸ್ವಾರ್ಥೇ ಮಹಾತಾತ್ಪರ್ಯವತ್ತ್ವನಿಯಮಾತ್ ಕಥಂ ಪರಾಭಿಲಷಿತಕುಚೋದ್ಯಾವಸರಃ । ಉಕ್ತಿಪದಂ (ತಸ್ಯ) ವಿನೋದೇ ಚ ಸತ್ತ್ವಾತ್ ಸಾವಕಾಶಂ ಉಪದೇಶಸ್ತು ನ ತಥೇತಿ ತದೇವ ಪದಮುದಾ-ಜಹಾರ । ಏವಂ ಚೈಕಯೋಕ್ತ್ಯಾ ಪರಾಭಿಲಷಿತಾರ್ಥ ಪ್ರತ್ಯಾಖ್ಯಾನಾತ್ ಸ್ವಾರ್ಥಸಮರ್ಥನಾಚ್ಚ ದ್ವಿಜಿಹ್ವೇಯಂ ಸೂತ್ರಸಾರ್ಥಭುಜಂಗೀ ಗರುಡವಾಹನಚರಣಶರಣಾನಾಮೇವ ವಶ್ಯಾಪೋಷ್ಯಾಚ ಅನ್ಯಸ್ತು ತು ದೃಶ್ಯಾಪಿ ನೈವಸ್ಯಾದಿತ್ಯನುಸಂಧೇಯಮ್ ॥ ೨೧೪ ॥

**ವಿವರಣೆ—** ಭೇದವ್ಯಪದೇಶಾತ್, ಭೇದವ್ಯಪದೇಶಾಚ್ಚ ಎಂಬುದು ಎರಡು ಸೂತ್ರಗಳು. ಆನಂದಮಯಾಧಿಕರಣದಲ್ಲಿ ಭೇದವ್ಯಪದೇಶಾಚ್ಚ ಎಂದು ಸೂತ್ರವಿದೆ. ದ್ಯುಭ್ವಾದ್ಯಧಿಕರಣದಲ್ಲಿ ಭೇದವ್ಯಪದೇಶಾತ್ ಎಂಬ ಸೂತ್ರವಿದೆ. ಒಂದು ಕಡೆ ಚ ಶಬ್ದವಿದೆ, ಇನ್ನೊಂದು ಕಡೆ ಚ ಶಬ್ದವಿಲ್ಲ ಇಷ್ಟು ವಿಶೇಷ. ಆನಂದಮಯಾಧಿಕರಣದಲ್ಲಿ ಯೋಽಸಾ ವಾದಿತ್ಯೇ ಎಂಬ ವಿಷಯವಾಕ್ಯದಲ್ಲಿ ಆದಿತ್ಯ ಮತ್ತು ಪರಮಾತ್ಮನಿಗೆ ಅಧಿಷ್ಠಾನ ಮತ್ತು ಅಧಿಷ್ಠಾತೃ ಭಾವವನ್ನು ಹೇಳಿ, ಹಾಗೆಯೇ ದ್ಯುಭಾದ್ಯಧಿಕರಣದಲ್ಲಿ ಭೇದವ್ಯಪದೇಶಾತ್ ಎಂಬಲ್ಲಿ ಅನ್ಯಮೀಶಂ ಎಂದು ಸಾಕ್ಷಾತ್ತಾಗೇ ಭೇದವನ್ನು ಹೇಳಿ ಸೂತ್ರಕಾರರು ಭೇದವನ್ನು ಪ್ರತಿಪಾದನೆ ಮಾಡಿದ್ದಾರೆ. ಎರಡು ಕಡೆಗಳಲ್ಲಿಯೂ ಭೇದೋಕ್ತೇಃ ಎಂದು ಸೂತ್ರವನ್ನು ರಚಿಸಬಹುದಾಗಿತ್ತು, ಭೇದವ್ಯಪದೇಶಾತ್ ಎಂಬ ಗುರುತರವಾದ ಸೂತ್ರವನ್ನು ಏಕೆ ರಚಿಸಿದರು ಎಂಬ ಶಂಕೆಗೆ ಗ್ರಂಥಕಾರರು ಉತ್ತರವನ್ನು ಹೇಳುತ್ತಾರೆ. ವ್ಯಪದೇಶ ಎಂಬ ಸಮಸ್ತಪದಕ್ಕೆ ವಿಗತಃ, ಅಪದೇಶಃ, ಅಪಾರಮಾರ್ಥಿಕಂ ದೇಶನಂ ಯಸ್ಮಾತ್ ಎಂಬ ವಿಗ್ರಹವನ್ನು ಆಶ್ರಯಿಸಿ, ಯಾವ ವಚನದಲ್ಲಿ ವ್ಯರ್ಥವಾದ ಉಪದೇಶವಿಲ್ಲವೋ ಅದು ವ್ಯಪದೇಶ ಎಂದು ಹೇಳಿದರೆ ಅತ್ಯಂತ ಸಾರ್ಥಕವಾದ ಬೋಧನೆಯನ್ನು ಮಾಡುವ ವಚನ ಎಂದು ಅರ್ಥವು ಸಿಗುತ್ತದೆ. ಆದ್ದರಿಂದ ಕೇವಲ ಭೇದೋಕ್ತಿ ಎಂದು ಹೇಳಿದರೆ ವಿನೋದ ವಚನದಲ್ಲಿಯೂ ಉಕ್ತಿ ಎಂಬ ಪದವು ಇರುವುದರಿಂದ ಭೇದವು ಇಂತಹ ತಾತ್ಪರ್ಯ ವಿಷಯವಾದುದು ಎಂದು ತಿಳಿಯುವುದಿಲ್ಲ. ಅಥವಾ ಪೃಥಗುಪದೇಶಾತ್ ಎಂಬ ಅಧಿಕರಣದಲ್ಲಿ ಹೇಳಿದಂತೆ ಅಪದೇಶ ಎಂದರೆ ಉಪದೇಶ. ವ್ಯಪದೇಶ ಎಂದರೆ ವಿಶಿಷ್ಟವಾದ ಉಪದೇಶವಾಗುತ್ತದೆ. ವಿಶಿಷ್ಟವಾದ ಉಪದೇಶವೆಂದರೆ ಅತಾತ್ವಿಕವಾದ ಅರ್ಥವನ್ನು ಹೇಳದೆ, ತಾತ್ವಿಕವಾದ ಅರ್ಥವನ್ನೇ ಹೇಳುತ್ತದೆ ಎಂದು ಅರ್ಥ. ಆದ್ದರಿಂದ ಹಿಂದೆ ಹೇಳಿದಂತೆ ಉಕ್ತಿ ಎಂಬ ಪದವು ವಿನೋದೋಕ್ತಿಯಲ್ಲೂ ಪ್ರಯೋಗಿಸಲ್ಪಡುವುದರಿಂದ ಇದು ವಿನೋದೋಕ್ತಿಯಲ್ಲ ತಾತ್ವಿಕವಾದ ಉಕ್ತಿ ಎಂದು ಸೂಚಿಸಲು ಅಲ್ಪಾಕ್ಷರದಿಂದ ಕೂಡಿದ

ಉಕ್ತಿ ಎಂಬ ಪದವನ್ನು ಬಿಟ್ಟು ಹೆಚ್ಚು ಅಕ್ಷರಗಳಿಂದ ಕೂಡಿದ ವ್ಯಪದೇಶ ಪದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಉಕ್ತಿ ಎಂಬ ಪದವನ್ನು ಪರಿತ್ಯಾಗ ಮಾಡಿ, ವ್ಯಪದೇಶ ಎಂಬ ಪದವನ್ನು ಪ್ರಯೋಗ ಮಾಡುವುದಕ್ಕೆ ಎರಡು ಪ್ರಯೋಜನ. ಮೊದಲನೆಯದು ಅಭೇದವನ್ನು ಹೇಳುವ ಪರವಾದಿಗಳನ್ನು ನಿರಾಕರಣೆ ಮಾಡುವುದು. ಎರಡನೆಯದು ಭೇದಕ್ಕೆ ತಾತ್ವಿಕತ್ವವನ್ನು ಹೇಳುವುದು. ಆದ್ದರಿಂದ ಸೂತ್ರದಲ್ಲಿರುವ ವ್ಯಪದೇಶ ಶಬ್ದವು ಅತ್ಯಂತ ಉಪಪನ್ನವಾಗಿದೆ ಎಂದು ಗ್ರಂಥಕಾರರ ಅಭಿಪ್ರಾಯ.

**ವಿಶೇಷಣೇನ ಭೇದಸ್ಯ ವ್ಯಪದೇಶೇನ ಚೇತಿ ಚ ।**
**ಸಯುಕ್ತಿಕಂ ಭೇದಮಾಹ ಯತ್ ಸಾರ್ವಜ್ಞ್ಯಂ ವಿಶೇಷಣಂ ॥ ೨೧೫ ॥**

**ಅರ್ಥ–** ವಿಶೇಷಣೇನ= ವಿಶೇಷಣದಿಂದಲೂ, ಭೇದಸ್ಯ ವ್ಯಪದೇಶೇನ ಚ= ಭೇದವ್ಯಪದೇಶಾತ್, ಇತಿ ಚ= ಎಂಬ ಸೂತ್ರಭಾವದಿಂದಲೂ, ಸ ಯುಕ್ತಿಕಂ= ಯುಕ್ತಿಪೂರ್ವಕವಾಗಿ, ಭೇದಂ= ಭೇದವನ್ನು, ಆಹ= ಹೇಳಿದ್ದಾರೆ, ಯತ್= ಏಕೆಂದರೆ, ಸಾರ್ವಜ್ಞ್ಯಂ= ಸರ್ವಜ್ಞತ್ವವು, ವಿಶೇಷಣಂ= ವಿಶೇಷಣವಾಗಿದೆ.

**ಅನುವಾದ–** ಸೂತ್ರಕಾರರು ವಿಶೇಷಣದಿಂದಲೂ ಮತ್ತು ಭೇದವ್ಯಪದೇಶದಿಂದಲೂ ಸಯುಕ್ತಿಕವಾಗಿ ಭೇದವನ್ನು ಉಪಪಾದಿಸಿದ್ದಾರೆ. ಏಕೆಂದರೆ ಇಲ್ಲಿ ಸರ್ವಜ್ಞತ್ವವು ವಿಶೇಷಣವಾಗಿದೆ.

**ಭಾವವಿಲಾಸಿನೀ–** ಅಧುನಾ ಭೇದೋನಾಮ ಸರ್ವತ್ರಾನ್ಯೋನ್ಯಾಭಾವ ಏವೇತಿ ಸಿದ್ಧಾಂತ ನಿರ್ಧಾರಣಾಯ ಪ್ರಾಗ್ಭೇದಪದೇನಾನ್ಯಪದೇನ ಚ ಸಾಮಾನ್ಯೇನೋಕ್ತ ಭೇದಸ್ಯ ಘಟ ಏವಾಯಂ ನ ಪಟ ಇತಿವದ್ವಿಷ್ಣುರೇವಾತ್ರ ಪ್ರತಿಪಾದ್ಯೋ ನ ವಿರಿಂಚಾದಿ ಜೀವಾ ಇತಿ ಸಾಕ್ಷಾನ್ನಞಾ ಇತರತಾದಾತ್ಮ್ಯ ನಿಷೇಧಾನ್ಯೋನ್ಯಾ ಭಾವ ರೂಪತಾಂ ಚ ಸಾಧಯದ್ಭೇದಸೂತ್ರಚತುಷ್ಟಯಂ ಕ್ರಮೇಣ ಪಠತಿ – **ವಿಶೇಷಣೇನೇತ್ಯಾದಿನಾ** ॥ ವಿಶೇಷಣೇನ ಭೇದಸ್ಯ ವ್ಯಪದೇಶೇನ ಚೇತ್ಯನೇನ ವಿಶೇಷೇಣ ಭೇದವ್ಯಪದೇಶಾಭ್ಯಾಂ ಚ ನೇತರಾವಿತಿ ಸೂತ್ರಂ ಸಂಗೃಹ್ಣಾತಿ । ವಿಶೇಷಣೇನ ಯಃಸರ್ವಜ್ಞ ಇತ್ಯುಕ್ತ ಸರ್ವಜ್ಞತ್ವ ವಿಶೇಷಣೇನ । ಭೇದವ್ಯಪದೇಶೇನ ತಸ್ಮಾದೇತತ್ ಬ್ರಹ್ಮನಾಮ ರೂಪಮನ್ನಂಚ ಜಾಯತ ಇತಿ ಶ್ರುತೌ ತಸ್ಮಾನ್ಮೂಲಬ್ರಹ್ಮಣಃ ಏತತ್ ಬ್ರಹ್ಮ ಚತುರ್ಮುಖಾಖ್ಯಂಬ್ರಹ್ಮ ಜಾಯತ ಇತಿ ಭೇದವ್ಯಪದೇಶೇನ ಚ ಇತರೌ ಪ್ರಕೃತಿವಿರಿಂಚೌ ನೇತಿ ಚ ಪ್ರಕೃತಿವಿರಿಂಚಾಭ್ಯಾಂ ಭೇದಂ ಸಯುಕ್ತಿಕಮಾಹೇತಿ ಸಂಬಂಧಃ । ಪ್ರಕೃತೇರ್ವಿರಿಂಚಸ್ಯ ಚ ವಿಷ್ಣುಭಿನ್ನತ್ವೇ ಸಿದ್ಧೇ ತದಿತರಚೇತನಾನಾಮಚೇತನಾನಾಂ ಚ ಭಿನ್ನತ್ವಸ್ಯ ಕೈಮುತ್ಯಸಿದ್ಧತ್ವಾತ್ ಚೇತನಾಚೇತನಾತ್ಮಕಜಗದ್‌ಭೇದ ಸಿದ್ಧಿರಿತಿ ಭಾವಃ ॥ ೨೧೫ ॥

**ವಿವರಣೆ–** ಇನ್ನು ಭೇದ ಎಂದರೆ ಎಲ್ಲ ಕಡೆಯಲ್ಲಿಯೂ ಅನ್ಯೋನ್ಯಾಭಾವ ರೂಪವಾದುದು ಎಂದು ಸಮರ್ಥಿಸಲು ಈ ಪ್ರಕರಣವನ್ನು ಪ್ರಾರಂಭಿಸುತ್ತಾರೆ. ಹಿಂದೆ

ಭೇದವನ್ನು ಭೇದ ಎಂಬ ಪದದಿಂದಲೂ, ಅನ್ಯ ಎಂಬ ಪದದಿಂದಲೂ ಸಾಮಾನ್ಯವಾಗಿ ಪ್ರಸ್ತಾವ ಮಾಡಲಾಗಿದೆ. ಆದರೆ ಘಟ ಏವಾಯಂ ನ ಪಟಃ, ವಿಷ್ಣುರೇವ ಅತ್ರ ಪ್ರತ್ಯಪಾದ್ಯಃ ನ ವಿರಂಚಃ ಇದು ಘಟವೇ ಹೊರತು ಪಟವಲ್ಲ, ಇಲ್ಲಿ ವಿಷ್ಣುವೇ ಪ್ರತಿಪಾದ್ಯನೇ ಹೊರತು ವಿರಂಚ್ಯಾದಿಗಳಲ್ಲ ಎಂದು ಸಾಕ್ಷಾತ್ ಅನ್ಯೋನ್ಯ ನಿಷೇಧ ಮಾಡುವುದರಿಂದ ಭೇದವು ಅನ್ಯೋನ್ಯಾಭಾವರೂಪವೇ ಎಂದು ಸಾಧಿಸಲು ಕ್ರಮವಾಗಿ ನಾಲ್ಕು ಸೂತ್ರಗಳನ್ನು ಉದಾಹರಿಸಿ ಚರ್ಚೆ ಮಾಡುತ್ತಾರೆ. ಅದೃಶ್ಯತ್ವಾಧಿಕರಣದಲ್ಲಿ ವಿಶೇಷಣ ಭೇದವ್ಯಪದೇಶಾಭ್ಯಾಂಚನೇತರೌ ಎಂಬ ಗುಣಸೂತ್ರವಿದೆ. ಅದಕ್ಕೆ ಹೀಗೆ ಅರ್ಥ - ವಿಶೇಷಣೇನ= ಯಃ ಸರ್ವಜ್ಞಃ ಎಂದು ಹೇಳಿದ ಸರ್ವಜ್ಞತ್ವಾದಿ ವಿಶೇಷಣದಿಂದಲೂ, ಭೇದವ್ಯಪದೇಶ= ತಸ್ಮಾದ್ಯೇತದ್ಬ್ರಹ್ಮನಾಮರೂಪಂ ಅನ್ನಂ ಚ ಜಾಯತೇ ಎಂಬ ಶ್ರುತಿಯಲ್ಲಿ ಪರಬ್ರಹ್ಮನಿಂದ ಚತುರ್ಮುಖ ಬ್ರಹ್ಮನ ಉತ್ಪತ್ತಿಯನ್ನು ಹೇಳಿ ಭೇದವನ್ನು ಹೇಳಿರುವುದರಿಂದಲೂ, ಇತರೌ= ಪ್ರಕೃತಿಯಾಗಲೀ ಅಥವಾ ಚತುರ್ಮುಖನಾಗಲೀ, ನ= ಅದೃಶ್ಯತ್ವಾದಿ ಗುಣವುಳ್ಳವರಲ್ಲ ಎಂದು. ಇಲ್ಲಿ ಸರ್ವಜ್ಞತ್ವ ವಿಶೇಷಣದದಿಂದ ಪ್ರಕೃತಿಯ ಭೇದವನ್ನೂ ಉತ್ಪತ್ತಿರೂಪವಾದ ಉಕ್ತಿಯಿಂದ ಚತುರ್ಮುಖಭೇದವನ್ನೂ ಸಮರ್ಥನೆ ಮಾಡಿದ್ದಾರೆ. ಎಲ್ಲ ಜಡಕ್ಕೆ ಮೂಲ ಕಾರಣವಾದುದು ಪ್ರಕೃತಿ. ಎಲ್ಲ ಜೀವರಲ್ಲಿ ಶ್ರೇಷ್ಠರಾದವರು ಚತುರ್ಮುಖ ಬ್ರಹ್ಮರು. ಆದ್ದರಿಂದ ಪ್ರಕೃತಿ ಮತ್ತು ಬ್ರಹ್ಮನಲ್ಲಿ ಭೇದವನ್ನು ಹೇಳಿದರೆ, ಉಳಿದ ಸಕಲ ಜೀವ-ಜಡಾತ್ಮಕ ಪ್ರಪಂಚದಿಂದ ಭೇದವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಶಾರೀರೋಽನುಪಪತ್ತೇರ್ನ ನೇತರೋಽನುಪಪತ್ತಿತಃ ।**
**ಇತಿ ಸೂತ್ರದ್ವಯೇ ಚೋಕ್ತೋ ಭಿನ್ನೋ ಜೀವಃ ಸಯುಕ್ತಿಕಮ್ ॥ ೨೧೬ ॥**

**ಅರ್ಥ—** ಶಾರೀರೋಽನುಪಪತ್ತೇರ್ನ= ಅನುಪಪತ್ತೇಸ್ತು ನ ಶಾರೀರಃ, ನೇತರೋಽನುಪಪತ್ತಿತಃ= ನೇತರೋಽನುಪಪತ್ತೇಃ, ಇತಿ= ಎಂಬ, ಸೂತ್ರದ್ವಯೇ= ಎರಡು ಸೂತ್ರಗಳಲ್ಲಿ, ಜೀವಃ= ಜೀವನು, ಸಯುಕ್ತಿಕಂ= ಯುಕ್ತಿಸಹಿತವಾಗಿ, ಭಿನ್ನಃ= ಭಿನ್ನನೆಂದು, ಉಕ್ತಃ= ಹೇಳಲ್ಪಟ್ಟಿದ್ದಾನೆ.

**ಅನುವಾದ—** ಅನುಪಪತ್ತೇಸ್ತು ನ ಶಾರೀರಃ ಎಂಬ ಸೂತ್ರದಲ್ಲಿಯೂ, ನೇತರೋಽನುಪಪತ್ತೇಃ ಎಂಬ ಸೂತ್ರದಲ್ಲಿಯೂ ಜೀವನು ಸಯುಕ್ತಿಕವಾಗಿ ಬ್ರಹ್ಮನಿಂದ ಭಿನ್ನನೆಂದು ಹೇಳಲ್ಪಟ್ಟಿದ್ದಾನೆ.

**ಭಾವವಿಲಾಸಿನೀ—** ಶಾರೀರೋಽನುಪಪತ್ತೇರ್ನೇತ್ಯನೇನ ಅನುಪಪತ್ತೇಸ್ತು ನ ಶಾರೀರ ಇತಿ ಸೂತ್ರಂ ಗೃಹ್ಣಾತಿ । ಅತ್ರಾನುಪಪತ್ತೇಃ ಏಕಸ್ಯ ಜೀವಸ್ಯ ಸರ್ವಶರೀರಸತ್ವಾನುಪಪತ್ತೇಃ ಶಾರೀರೋಜೀವೋತ್ರ

ಪ್ರತಿಪಾದ್ಯಃ ಸರ್ವಗತೋ ನ । ಕಿಂತು ವಿಷ್ಣುರೇವೇತಿ ಸಕಲಜೀವಪ್ರತಿಯೋಗಿಕಭೇದಸಿದ್ಧಿಃ । ನೇತರೋನುಪಪತ್ತಿತ ಇತ್ಯನೇನ ಚ ನೇತರೋನುಪಪತ್ತೇರಿತಿ ಸೂತ್ರಂ ಗೃಹ್ಣಾತಿ । ಅತ್ರಾಪ್ಯನು-ಪಪತ್ತೇಃ ಬ್ರಹ್ಮವಿದಾಪ್ನೋತಿಪರಮಿತ್ಯತ್ರೋಕ್ತ ಪ್ರಾಪ್ಯತ್ವಾನುಪಪತ್ತೇರಿತರೋ ಜೀವಃ ಆನಂದಮಯೋನ । ಕಿಂತು ವಿಷ್ಣುರೇವೇತಿ ಸಕಲ ಜೀವಭೇದಸಿದ್ಧಿಃ । ಏತದೇವದರ್ಶಯತಿ । **ಇತಿ ಸೂತ್ರದ್ವಯ ಇತಿ** ॥ ಭಿನ್ನೋಜೀವ ಇತಿ ವದತಾಗ್ರಂಥಕಾರೇಣ ಸೂತ್ರಮರ್ಯಾದಯಾ ಬ್ರಹ್ಮಪ್ರತಿಯೋಗಿಕ ಜೀವನಿಷ್ಠಭೇದಸಿದ್ಧೌ ಯದ್ವಸ್ತು ಯದ್ಧರ್ಮಿಕಭೇದಪ್ರತಿಯೋಗಿ ತದ್ವಸ್ತು ತತ್‌ಪ್ರತಿಯೋಗಿಕ ಭೇದಧರ್ಮೀತಿನ್ಯಾಯಬಲೇನ ಜೀವಪ್ರತಿಯೋಗಿಕ ಬ್ರಹ್ಮನಿಷ್ಠಭೇದೋಪಿ ಸಿದ್ಧ ಇತಿ ಸೂಚಿತಮ್ । ಅತಶ್ಚೇತನಾಚೇತನ ಜಗದ್ಭಿನ್ನಮಾಸೀದಿತ್ಯುಪಕ್ರಮವಾಕ್ಯಸ್ಯಾಪಿ ನ ವಿರೋಧಃ । ಅಹಂ ಬ್ರಹ್ಮೇತಿ ವದತಃಪ್ರತ್ಯುತ್ತರಾಯ ಜೀವಧರ್ಮಿಕಮೇವ ಭೇದ-ಮಾದಾವಸೂತ್ರಯತ್ ಸೂತ್ರಕಾರಃ ॥ ೨೧೬ ॥

**ವಿವರಣೆ–** ಅನುಪಪತ್ತೇಸ್ತು ನ ಶಾರೀರಃ ಎಂಬ ಸೂತ್ರವು ಸರ್ವಗತತ್ವಾಧಿಕರಣದ ಒಂದು ಸೂತ್ರ. ಸೂತ್ರದ ಅರ್ಥವು ಹೀಗಿದೆ. ಅಣುವಾದ ಜೀವನಿಗೆ ಅಥವಾ ಆದಿತ್ಯನಿಗೆ ಸರ್ವಶರೀರಸ್ಥತ್ವವು ಅನುಪಪನ್ನವಾಗುವುದರಿಂದ ಶಾರೀರನಾದ ಜೀವನು ಸರ್ವಗತನಲ್ಲ. ವಿಷ್ಣುವೇ ಸರ್ವಗತನಾದವನು ಎಂದು. ಹೀಗೆ ವಿಷ್ಣುವಿನಲ್ಲಿ ಸಕಲ ಜೀವಪ್ರತಿಯೋಗಿಕ ಭೇದವು ಸಿದ್ಧವಾಗುತ್ತದೆ. ನೇತರೋಽನುಪಪತ್ತೇಃ ಎಂಬುದು ಆನಂದಮಯಾಧಿಕರಣದ ಒಂದು ಸೂತ್ರ. ಇತರಃ=ಬ್ರಹ್ಮನಿಗಿಂತ ಭಿನ್ನನಾದ ಜೀವನು ನ= ಆನಂದಮಯಶಬ್ದವಾಚ್ಯನಲ್ಲ, ಅನುಪಪತ್ತೇಃ= ಬ್ರಹ್ಮವಿದಾಪ್ನೋತಿ ಪರಂ ಎಂದು ಹೇಳಿದ ಮುಕ್ತ ಪ್ರಾಪ್ಯತ್ವವು ಜೀವನಲ್ಲಿ ಕೂಡದ ಕಾರಣದಿಂದ ಎಂದು ಸೂತ್ರದ ಅರ್ಥ. ಇಲ್ಲಿಯೂ ಸಹ ಆನಂದಮಯನು ಜೀವನಲ್ಲ, ಬ್ರಹ್ಮನೇ ಆನಂದಮಯ ಎಂದು ಹೇಳಿ ಸ್ಪಷ್ಟವಾಗಿ ಪ್ರತಿಪಾದನೆ ಮಾಡಿದ್ದಾರೆ. ಜೀವನು ಸರ್ವಗತನಲ್ಲ, ಜೀವನು ಆನಂದಮಯನಲ್ಲ ಎಂದು ಹೇಳುವಾಗ ಜೀವನಲ್ಲಿ ಸರ್ವಗತನಾದ ಬ್ರಹ್ಮನ ಪ್ರತಿಯೋಗಿಕವಾದ ಭೇದವು ಸಿದ್ಧವಾಗುತ್ತದೆ. ಜೀವನಲ್ಲಿ ಬ್ರಹ್ಮಪ್ರತಿಯೋಗಿಕ ಭೇದವು ಇರುವಾಗ ಬ್ರಹ್ಮನಲ್ಲಿಯೂ ಸಮಾನನ್ಯಾಯದಿಂದ ಜೀವಪ್ರತಿಯೋಗಿಕ ಭೇದವು ಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಸಕಲ ಚೇತನಾಚೇತನ ಭೇದವು ಸಿದ್ಧವಾಗುತ್ತದೆ ಎಂದು ಉಪಕ್ರಮದಲ್ಲಿ ಹೇಳಿರುವುದು ಉಪಪನ್ನವಾಗುತ್ತದೆ.

**ಯನ್ನ ಪ್ರತೀಕೇ ನ ಹಿ ಸಃ ಇತಿ ಸೂತ್ರೇ ಸ ಸೂತ್ರಕೃತ್ ।**
**ಪ್ರತೀಕೋ ಬ್ರಹ್ಮ ನೈವೇತಿ ಸ್ಪಷ್ಟಮಾಚಷ್ಟ ಭಿನ್ನತಾಂ ॥ ೨೧೭ ॥**

**ಅರ್ಥ–** ಯತ್= ಯಾವ ಕಾರಣದಿಂದ, ಸ ಸೂತ್ರಕೃತ್= ಸೂತ್ರಕಾರರಾದ ಆ ವ್ಯಾಸರು, ನ ಪ್ರತೀಕೇ ನ ಹಿ ಸಃ ಇತಿ ಸೂತ್ರೇ= ನ ಪ್ರತೀಕೇ ನ ಹಿ ಸಃ ಎಂಬ ಸೂತ್ರದಲ್ಲಿ, ಪ್ರತೀಕಃ= ಪ್ರತೀಕವು, ಬ್ರಹ್ಮನೈವೇತಿ= ಬ್ರಹ್ಮನು ಅಲ್ಲವೇ ಅಲ್ಲ ಎಂದು, ಸ್ಪಷ್ಟಂ= ಸ್ಪಷ್ಟವಾಗಿ, ಭಿನ್ನತಾಂ=

ಭೇದವನ್ನು ಭೇದ ಎಂಬ ಪದದಿಂದಲೂ, ಅನ್ಯ ಎಂಬ ಪದದಿಂದಲೂ ಸಾಮಾನ್ಯವಾಗಿ ಪ್ರಸ್ತಾವ ಮಾಡಲಾಗಿದೆ. ಆದರೆ ಘಟ ಏವಾಯಂ ನ ಪಟಃ, ವಿಷ್ಣುರೇವ ಅತ್ರ ಪ್ರತ್ಯಪಾದ್ಯಃ ನ ವಿರಂಚಃ ಇದು ಘಟವೇ ಹೊರತು ಪಟವಲ್ಲ, ಇಲ್ಲಿ ವಿಷ್ಣುವೇ ಪ್ರತಿಪಾದ್ಯನೇ ಹೊರತು ವಿರಂಚ್ಯಾದಿಗಳಲ್ಲ ಎಂದು ಸಾಕ್ಷಾತ್ ಅನ್ಯೋನ್ಯ ನಿಷೇಧ ಮಾಡುವುದರಿಂದ ಭೇದವು ಅನ್ಯೋನ್ಯಾಭಾವರೂಪವೇ ಎಂದು ಸಾಧಿಸಲು ಕ್ರಮವಾಗಿ ನಾಲ್ಕು ಸೂತ್ರಗಳನ್ನು ಉದಾಹರಿಸಿ ಚರ್ಚೆ ಮಾಡುತ್ತಾರೆ. ಅದೃಶ್ಯತ್ವಾಧಿಕರಣದಲ್ಲಿ ವಿಶೇಷಣ ಭೇದವ್ಯಪದೇಶಾಭ್ಯಾಂಚನೇತರೌ ಎಂಬ ಗುಣಸೂತ್ರವಿದೆ. ಅದಕ್ಕೆ ಹೀಗೆ ಅರ್ಥ - ವಿಶೇಷಣೇನ= ಯಃ ಸರ್ವಜ್ಞಃ ಎಂದು ಹೇಳಿದ ಸರ್ವಜ್ಞತ್ವಾದಿ ವಿಶೇಷಣದಿಂದಲೂ, ಭೇದವ್ಯಪದೇಶ= ತಸ್ಮಾದ್ವೇತದ್ಬ್ರಹ್ಮನಾಮರೂಪಂ ಅನ್ನಂ ಚ ಜಾಯತೇ ಎಂಬ ಶ್ರುತಿಯಲ್ಲಿ ಪರಬ್ರಹ್ಮನಿಂದ ಚತುರ್ಮುಖ ಬ್ರಹ್ಮನ ಉತ್ಪತ್ತಿಯನ್ನು ಹೇಳಿ ಭೇದವನ್ನು ಹೇಳಿರುವುದರಿಂದಲೂ, ಇತರೌ= ಪ್ರಕೃತಿಯಾಗಲೀ ಅಥವಾ ಚತುರ್ಮುಖನಾಗಲೀ, ನ= ಅದೃಶ್ಯತ್ವಾದಿ ಗುಣವುಳ್ಳವರಲ್ಲ ಎಂದು. ಇಲ್ಲಿ ಸರ್ವಜ್ಞತ್ವ ವಿಶೇಷಣದದಿಂದ ಪ್ರಕೃತಿಯ ಭೇದವನ್ನೂ ಉತ್ಪತ್ತಿರೂಪವಾದ ಉಕ್ತಿಯಿಂದ ಚತುರ್ಮುಖಭೇದವನ್ನೂ ಸಮರ್ಥನೆ ಮಾಡಿದ್ದಾರೆ. ಎಲ್ಲ ಜಡಕ್ಕೆ ಮೂಲ ಕಾರಣವಾದುದು ಪ್ರಕೃತಿ. ಎಲ್ಲ ಜೀವರಲ್ಲಿ ಶ್ರೇಷ್ಠರಾದವರು ಚತುರ್ಮುಖ ಬ್ರಹ್ಮರು. ಆದ್ದರಿಂದ ಪ್ರಕೃತಿ ಮತ್ತು ಬ್ರಹ್ಮನಲ್ಲಿ ಭೇದವನ್ನು ಹೇಳಿದರೆ, ಉಳಿದ ಸಕಲ ಜೀವ-ಜಡಾತ್ಮಕ ಪ್ರಪಂಚದಿಂದ ಭೇದವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಶಾರೀರೋಽನುಪಪತ್ತೇರ್ನ ನೇತರೋಽನುಪಪತ್ತಿತಃ ।**
**ಇತಿ ಸೂತ್ರದ್ವಯೇ ಚೋಕ್ತೋ ಭಿನ್ನೋ ಜೀವಃ ಸಯುಕ್ತಿಕಮ್ ॥ ೨೧೬ ॥**

**ಅರ್ಥ–** ಶಾರೀರೋಽನುಪಪತ್ತೇರ್ನ= ಅನುಪಪತ್ತೇಸ್ತು ನ ಶಾರೀರಃ, ನೇತರೋಽನುಪಪತ್ತಿತಃ= ನೇತರೋಽನುಪಪತ್ತೇಃ, ಇತಿ= ಎಂಬ, ಸೂತ್ರದ್ವಯೇ= ಎರಡು ಸೂತ್ರಗಳಲ್ಲಿ, ಜೀವಃ= ಜೀವನು, ಸಯುಕ್ತಿಕಂ= ಯುಕ್ತಿಸಹಿತವಾಗಿ, ಭಿನ್ನಃ= ಭಿನ್ನನೆಂದು, ಉಕ್ತಃ= ಹೇಳಲ್ಪಟ್ಟಿದ್ದಾನೆ.

**ಅನುವಾದ–** ಅನುಪಪತ್ತೇಸ್ತು ನ ಶಾರೀರಃ ಎಂಬ ಸೂತ್ರದಲ್ಲಿಯೂ, ನೇತರೋಽನುಪಪತ್ತೇಃ ಎಂಬ ಸೂತ್ರದಲ್ಲಿಯೂ ಜೀವನು ಸಯುಕ್ತಿಕವಾಗಿ ಬ್ರಹ್ಮನಿಂದ ಭಿನ್ನನೆಂದು ಹೇಳಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** ಶಾರೀರೋಽನುಪಪತ್ತೇರ್ನೇತ್ಯನೇನ ಅನುಪಪತ್ತೇಸ್ತು ನ ಶಾರೀರ ಇತಿ ಸೂತ್ರಂ ಗೃಹ್ಣಾತಿ। ಅತ್ರಾನುಪಪತ್ತೇಃ ಏಕಸ್ಯ ಜೀವಸ್ಯ ಸರ್ವಶರೀರಸತ್ತಾನುಪಪತ್ತೇಃ ಶಾರೀರೋಜೀವೋತ್ರ

ಪ್ರತಿಪಾದ್ಯಃ ಸರ್ವಗತೋ ನ । ಕಿಂತು ವಿಷ್ಣುರೇವೇತಿ ಸಕಲಜೀವಪ್ರತಿಯೋಗಿಕಭೇದಸಿದ್ಧಿಃ । ನೇತರೋನುಪಪತ್ತಿತ ಇತ್ಯನೇನ ಚ ನೇತರೋನುಪಪತ್ತೇರಿತಿ ಸೂತ್ರಂ ಗೃಹ್ಣಾತಿ । ಅತ್ರಾಪ್ಯನುಪಪತ್ತೇಃ ಬ್ರಹ್ಮವಿದಾಪ್ನೋತಿಪರಮಿತ್ಯತ್ರೋಕ್ತ ಪ್ರಾಪ್ಯತ್ವಾನುಪಪತ್ತೇರಿತರೋ ಜೀವಃ ಆನಂದಮಯೋನ । ಕಿಂತು ವಿಷ್ಣುರೇವೇತಿ ಸಕಲ ಜೀವಭೇದಸಿದ್ಧಿಃ । ಏತದೇವದರ್ಶಯತಿ । **ಇತಿ ಸೂತ್ರದ್ವಯ ಇತಿ** ॥ ಭಿನ್ನೋಜೀವ ಇತಿ ವದತಾಗ್ರಂಥಕಾರೇಣ ಸೂತ್ರಮರ್ಯಾದಯಾ ಬ್ರಹ್ಮಪ್ರತಿಯೋಗಿಕ ಜೀವನಿಷ್ಠಭೇದಸಿದ್ಧೌ ಯದ್ವಸ್ತು ಯದ್ಧರ್ಮಿಕಭೇದಪ್ರತಿಯೋಗಿ ತದ್ವಸ್ತು ತತ್‌ಪ್ರತಿಯೋಗಿಕ ಭೇದಧರ್ಮೀತಿನ್ಯಾಯಬಲೇನ ಜೀವಪ್ರತಿಯೋಗಿಕ ಬ್ರಹ್ಮನಿಷ್ಠಭೇದೋಪಿ ಸಿದ್ಧ ಇತಿ ಸೂಚಿತಮ್ । ಅತಶ್ಚೇತನಾಚೇತನ ಜಗದ್ಭಿನ್ನಮಾಸೀದಿತ್ಯುಪಕ್ರಮವಾಕ್ಯಸ್ಯಾಪಿ ನ ವಿರೋಧಃ । ಅಹಂ ಬ್ರಹ್ಮೇತಿ ವದತಃಪ್ರತ್ಯುತ್ತರಾಯ ಜೀವಧರ್ಮಿಕಮೇವ ಭೇದಮಾದಾವಸೂತ್ರಯತ್ ಸೂತ್ರಕಾರಃ ॥ ೨೧೬ ॥

**ವಿವರಣೆ–** ಅನುಪಪತ್ತೇಸ್ತು ನ ಶಾರೀರಃ ಎಂಬ ಸೂತ್ರವು ಸರ್ವಗತತ್ವಾಧಿಕರಣದ ಒಂದು ಸೂತ್ರ. ಸೂತ್ರದ ಅರ್ಥವು ಹೀಗಿದೆ. ಅಣುವಾದ ಜೀವನಿಗೆ ಅಥವಾ ಆದಿತ್ಯನಿಗೆ ಸರ್ವಶರೀರಸ್ಥತ್ವವು ಅನುಪಪನ್ನವಾಗುವುದರಿಂದ ಶಾರೀರನಾದ ಜೀವನು ಸರ್ವಗತನಲ್ಲ. ವಿಷ್ಣುವೇ ಸರ್ವಗತನಾದವನು ಎಂದು. ಹೀಗೆ ವಿಷ್ಣುವಿನಲ್ಲಿ ಸಕಲ ಜೀವಪ್ರತಿಯೋಗಿಕ ಭೇದವು ಸಿದ್ಧವಾಗುತ್ತದೆ. ನೇತರೋऽನುಪಪತ್ತೇಃ ಎಂಬುದು ಆನಂದಮಯಾಧಿಕರಣದ ಒಂದು ಸೂತ್ರ. ಇತರಃ=ಬ್ರಹ್ಮನಿಗಿಂತ ಭಿನ್ನನಾದ ಜೀವನು ನ= ಆನಂದಮಯಶಬ್ದವಾಚ್ಯನಲ್ಲ, ಅನುಪಪತ್ತೇಃ= ಬ್ರಹ್ಮವಿದಾಪ್ನೋತಿ ಪರಂ ಎಂದು ಹೇಳಿದ ಮುಕ್ತ ಪ್ರಾಪ್ಯತ್ವವು ಜೀವನಲ್ಲಿ ಕೂಡದ ಕಾರಣದಿಂದ ಎಂದು ಸೂತ್ರದ ಅರ್ಥ. ಇಲ್ಲಿಯೂ ಸಹ ಆನಂದಮಯನು ಜೀವನಲ್ಲ, ಬ್ರಹ್ಮನೇ ಆನಂದಮಯ ಎಂದು ಹೇಳಿ ಸ್ಪಷ್ಟವಾಗಿ ಪ್ರತಿಪಾದನೆ ಮಾಡಿದ್ದಾರೆ. ಜೀವನು ಸರ್ವಗತನಲ್ಲ, ಜೀವನು ಆನಂದಮಯನಲ್ಲ ಎಂದು ಹೇಳುವಾಗ ಜೀವನಲ್ಲಿ ಸರ್ವಗತನಾದ ಬ್ರಹ್ಮನ ಪ್ರತಿಯೋಗಿಕವಾದ ಭೇದವು ಸಿದ್ಧವಾಗುತ್ತದೆ. ಜೀವನಲ್ಲಿ ಬ್ರಹ್ಮಪ್ರತಿಯೋಗಿಕ ಭೇದವು ಇರುವಾಗ ಬ್ರಹ್ಮನಲ್ಲಿಯೂ ಸಮಾನನ್ಯಾಯದಿಂದ ಜೀವಪ್ರತಿಯೋಗಿಕ ಭೇದವು ಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಸಕಲ ಚೇತನಾಚೇತನ ಭೇದವು ಸಿದ್ಧವಾಗುತ್ತದೆ ಎಂದು ಉಪಕ್ರಮದಲ್ಲಿ ಹೇಳಿರುವುದು ಉಪಪನ್ನವಾಗುತ್ತದೆ.

**ಯನ್ನ ಪ್ರತೀಕೇ ನ ಹಿ ಸಃ ಇತಿ ಸೂತ್ರೇ ಸ ಸೂತ್ರಕೃತ್ ।**
**ಪ್ರತೀಕೋ ಬ್ರಹ್ಮ ನೈವೇತಿ ಸ್ಪಷ್ಟಮಾಚಷ್ಟ ಭಿನ್ನತಾಂ ॥ ೨೧೭ ॥**

**ಅರ್ಥ–** ಯತ್= ಯಾವ ಕಾರಣದಿಂದ, ಸ ಸೂತ್ರಕೃತ್= ಸೂತ್ರಕಾರರಾದ ಆ ವ್ಯಾಸರು, ನ ಪ್ರತೀಕೇ ನ ಹಿ ಸಃ ಇತಿ ಸೂತ್ರೇ= ನ ಪ್ರತೀಕೇ ನ ಹಿ ಸಃ ಎಂಬ ಸೂತ್ರದಲ್ಲಿ, ಪ್ರತೀಕಃ= ಪ್ರತೀಕವು, ಬ್ರಹ್ಮನೈವೇತಿ= ಬ್ರಹ್ಮನು ಅಲ್ಲವೇ ಅಲ್ಲ ಎಂದು, ಸ್ಪಷ್ಟಂ= ಸ್ಪಷ್ಟವಾಗಿ, ಭಿನ್ನತಾಂ=

ಭೇದವನ್ನು ಆಚಷ್ಟ= ಹೇಳಿದ್ದಾರೆಯೋ (ಆ ಕಾರಣದಿಂದಲೂ ಬ್ರಹ್ಮನಲ್ಲಿ ಸಕಲ ಚೇತನ ಭೇದವು ಸಿದ್ಧವಾಗುತ್ತದೆ).

**ಅನುವಾದ–** ನ ಪ್ರತೀಕೇ ನ ಹಿ ಸಃ ಎಂಬ ಸೂತ್ರದಲ್ಲಿ ಸೂತ್ರಕಾರರಾದ ವ್ಯಾಸರು ಪ್ರತೀಕವು ಎಂದೂ ಬ್ರಹ್ಮನಲ್ಲ ಎಂದು ಸ್ಪಷ್ಟವಾಗಿ ಭೇದವನ್ನು ಹೇಳಿರುವುದರಿಂದ ಬ್ರಹ್ಮನಲ್ಲಿ ಸಕಲ ಚೇತನ ಭೇದವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯದ್ಯಸ್ಮಾತ್ ಪ್ರತೀಕೋ ಬ್ರಹ್ಮ ನೈವೇತ್ಯನೇನ ನಹಿ ಸ ಇತಿ ಸೂತ್ರ-ಖಂಡಸ್ಯಾರ್ಥಮಾಹ । ಅತ್ರಹಿ ಸೂತ್ರೇ ನ ಪ್ರತೀಕ ಇತಿ ಪ್ರತೀಕೇ ಬ್ರಹ್ಮದೃಷ್ಟಿರ್ನಕಾರ್ಯೇತಿ ಪ್ರಾಕ್‌ಪ್ರತಿಜ್ಞಾಯ ನಹಿ ಸ ಇತಿ ತತ್ರ ಹೇತುರುಕ್ತಃ । ಹಿ ಯಸ್ಮಾತ್ । ಸಃ ಪ್ರತೀಕಃ ಬ್ರಹ್ಮ ನ । ತಸ್ಮಾತ್ ಪ್ರತೀಕೇ ಬ್ರಹ್ಮದೃಷ್ಟಿರ್ನಕಾರ್ಯೇತಿ ಯೋಜನಾಯಾ ವಿವಕ್ಷಿತತ್ವಾತ್ । ಅತಃ ಪ್ರತೀಕಃ ಬ್ರಹ್ಮನೈವೇತಿ ಭಿನ್ನತಾಂ ಪ್ರತೀಕಾದ್ವಿಷ್ಣೋರ್ಭಿನ್ನತಾಂ ಸ್ಪಷ್ಟಮಾಚಷ್ಟೇತಿ ಸಂಬಂಧಃ ॥ ೨೧೭ ॥

**ವಿವರಣೆ–** ನ ಪ್ರತೀಕೇ ನ ಹಿ ಸಃ ಎಂಬುದು ಬ್ರಹ್ಮಸೂತ್ರ. ಅದರ ಅರ್ಥ ಹೀಗಿದೆ : ಪ್ರತೀಕೇ= ನಾಮಾದಿಪ್ರಾಣಪರ್ಯಂತವಾದ ದೇವತಾಪ್ರತಿಮೆಗಳಲ್ಲಿ, ನ= ಬ್ರಹ್ಮನೆಂದು ಉಪಾಸನೆಯನ್ನು ಮಾಡಬಾರದು, ಹಿ= ಏಕೆಂದರೆ, ಸಃ= ಪ್ರತೀಕವು, ನ= ಬ್ರಹ್ಮನವಲ್ಲವಷ್ಟೇ ಎಂದು, ಇಲ್ಲಿ ಪ್ರತೀಕವು ಬ್ರಹ್ಮನಲ್ಲ ಎಂದು ಹೇಳಿರುವುದರಿಂದ ಸರ್ವ ಪ್ರತೀಕಭೇದವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ ಮತ್ತು ಈ ಪ್ರತೀಕಗಳು ನಾಮಾದಿಪ್ರಾಣಪರ್ಯಂತ ದೇವತೆಗಳೇ ಆಗಿರುವುದರಿಂದ ಸರ್ವದೇವತಾಭೇದವು ಸಿದ್ಧವಾಗುತ್ತದೆ. ಸರ್ವದೇವತಾಭೇದವು ಸಿದ್ಧವಾದಮೇಲೆ ಉಳಿದ ಮನುಷ್ಯಾದಿ ಚೇತನಭೇದವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಪ್ರತೀಕಾಖ್ಯಾ ಹಿ ನಾಮಾದಿಪ್ರಾಣಪರ್ಯಂತದೇವತಾಃ ।**
**ದೇವತೈಕಸ್ಯ ಚಾಯೋಗೇ ನರೈಕ್ಯೇ ಕಾ ಕಥಾ ತತಃ ॥ ೨೧೮ ॥**

**ಅರ್ಥ–** ಹಿ= ಏಕೆಂದರೆ, ಪ್ರತೀಕಾಖ್ಯಾಃ= ಪ್ರತೀಕವೆಂಬ ಹೆಸರುಳ್ಳವರು, ನಾಮಾದಿ ಪ್ರಾಣ ಪರ್ಯಂತ ದೇವತಾಃ= ನಾಮಾಭಿಮಾನಿಯಾದ ಉಷೆಯಿಂದ ಹಿಡಿದು ಮುಖ್ಯಪ್ರಾಣನ ವರೆಗೆ ಇರುವ ದೇವತೆಗಳು, ದೇವತೈಕ್ಯಸ್ಯ ಚ= ದೇವತೈಕ್ಯವೇ, ಅಯೋಗೇ= ಇಲ್ಲದಿರುವಾಗ, ನರೈಕ್ಯೇ= ಮನುಷ್ಯೈಕ್ಯದ ವಿಷಯದಲ್ಲಿ, ತತಃ= ಇನ್ನು, ಕಾ ಕಥಾ= ಹೇಳುವುದೇನಿದೆ?

**ಅನುವಾದ–** ಇಲ್ಲಿ ಪ್ರತೀಕ ಶಬ್ದದಿಂದ ನಾಮಾದಿ ಪ್ರಾಣಪರ್ಯಂತವಾದ ದೇವತೆಗಳನ್ನೇ ಹೇಳಿದ್ದಾರೆ. ಬ್ರಹ್ಮನಿಗೆ ದೇವತೆಗಳ ಐಕ್ಯವೇ ಇಲ್ಲವೆಂದು ಹೇಳಿದ ಮೇಲೆ ಇನ್ನು ಮನುಷ್ಯರ ಐಕ್ಯ ಎಲ್ಲಿಂದ ಬರಬೇಕು?

**ಭಾವವಿಲಾಸಿನೀ–** ಪ್ರತೀಕಪದಸ್ಯಾರ್ಥಂ ದರ್ಶಯತಿ – **ಪ್ರತೀಕೇತಿ** ॥ ನಾಮಾದಿ ಪ್ರಾಣಪರ್ಯಂತದೇವತಾಃ ಪ್ರತೀಕಾಖ್ಯಾಃ । ಹೀತ್ಯನೇನ ಶ್ರೌತಪ್ರಸಿದ್ಧಿಂ ಸೂಚಯತಿ । ಪ್ರತೀಕಪದೇನಾತ್ರ ಪ್ರತಿಮೋಚ್ಯತೇ । ತತಸ್ತಸ್ಮಾತ್ಕಥಾ ಕಾ ನ ಕಾಪೀತ್ಯರ್ಥಃ । ಅತ್ರ ಸರ್ವತ್ರ ಸಾಕ್ಷಾನ್ನಿಷ್ಯೈವೇತರತಾದಾತ್ಮ್ಯಪ್ರತಿಷೇಧಾತ್ ಮೀಮಾಂಸ್ಯಮಾನ- ಭೇದಸ್ಯಾನ್ಯೋನ್ಯಾಭಾವತಾ ಸಿದ್ಧಿರಿತಿ ಜ್ಞಾತವ್ಯಮ್ ॥ ೨೧೮ ॥

**ಮುಕ್ತೋಪಸೃಪ್ಯತಾಮಾಹ ತದ್ಯೋಗಂ ಶಾಸ್ತಿ ಮುಕ್ತಿಗಮ್ ।**
**ಸುಪ್ತ್ಯುತ್ಕ್ರಾಂತ್ಯೋರ್ಭಿದಾಮಾಹ ಸ್ಪಷ್ಟಂ ಜೀವಃ ಪರಾತ್ ಪೃಥಕ್ ॥ ೨೧೯ ॥**

**ಅರ್ಥ–** ಸೂತ್ರಕಾರರು, ಮುಕ್ತೋಪಸೃಪ್ಯತಾಂ= ಮುಕ್ತಪ್ರಾಪ್ಯತ್ವವನ್ನು, ಆಹ= ಹೇಳಿದ್ದಾರೆ, ಮುಕ್ತಿಗಂ= ಮೋಕ್ಷದಲ್ಲಿರುವ, ತದ್ಯೋಗಂ= ಬ್ರಹ್ಮಪ್ರಾಪ್ತಿಯನ್ನು, ಶಾಸ್ತಿ= ಹೇಳಿದ್ದಾರೆ, ಸುಪ್ತ್ಯುತ್ಕ್ರಾಂತ್ಯೋಃ= ಸುಪ್ತಿ ಮತ್ತು ಉತ್ಕ್ರಾಂತಿಯಲ್ಲಿ, ಭಿದಾಂ= ಭೇದವನ್ನು, ಆಹ= ಹೇಳಿದ್ದಾರೆ, ಆದ್ದರಿಂದ, ಜೀವಃ= ಜೀವನು, ಸ್ಪಷ್ಟಂ= ಸ್ಪಷ್ಟವಾಗಿ, ಪರಾತ್= ಪರಮಾತ್ಮನಿಗಿಂತ, ಪೃಥಕ್= ಭಿನ್ನನಾದವನು.

**ಅನುವಾದ-** ಮುಕ್ತೋಪಸೃಪ್ಯತ್ವವನ್ನು, ಮೋಕ್ಷದಲ್ಲಿ ಬ್ರಹ್ಮಸಂಬಂಧವನ್ನು ಸುಷುಪ್ತಿ ಮತ್ತು ಉತ್ಕ್ರಾಂತಿಗಳಲ್ಲಿ ಭೇದವನ್ನು ಸೂತ್ರಕಾರರು ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದ ಜೀವನು ಬ್ರಹ್ಮನಿಗಿಂತ ಭಿನ್ನನಾದವನು.

**ಭಾವವಿಲಾಸಿನೀ–** ಅಧುನಾ ಮುಕ್ತಿಕಾಲೀನತ್ವಾಚ್ಚ ಭೇದೋನಾತಾತ್ವಿಕ ಇತಿ ವಕ್ತುಂ ಮೌಕ್ತಭೇದ-ಸಾಧಕಸೂತ್ರತ್ರಯಮರ್ಥತೋಽಗೃಹ್ಣಾತಿ ॥ **ಮುಕ್ತೇತಿ** ॥ ಸಪ್ರಭುರಿತಿವಕ್ಷ್ಯಮಾಣ-ಮತ್ರಾಪ್ಯಾಕರ್ಷಣೀಯಮ್ । ಮುಕ್ತೋಪಸೃಪ್ಯವ್ಯಪದೇಶಾದಿತಿ ಸೂತ್ರೇ ಮುಕ್ತೋಪಸೃಪ್ಯತಾಂ ಪರಂಜ್ಯೋತಿರುಪಸಂಪದ್ಯೇತಿ ಶ್ರುತ್ಯುಕ್ತಮುಕ್ತಪ್ರಾಪ್ಯತಾಮ್ । ಏವಂಚ ಪ್ರಾಪ್ಯಪ್ರಾಪಕ ಭಾವೇನಮುಕ್ತಾನಾಂ ವಿಷ್ಣೋಶ್ಚ ಭೇದಸಿದ್ಧಿರಿತಿ ಭಾವಃ । ಮುಕ್ತೋಪಸೃಪ್ಯತ್ವ ವ್ಯಪದೇಶಾದಿತಿ ಭಾವ ಪ್ರಧಾನತಯಾ ವಕ್ತವ್ಯೇ ಯತ್ ಸೂತ್ರೇ ಭವಿತೃ ಪ್ರಧಾನ್ಯೆವೋಕ್ತಿಃ ತೇನ ಬ್ರಹ್ಮಣಿ ಭಾವಭವಿತ್ರೋರ್ಧರ್ಮಧರ್ಮಿರೂಪಿಣೋರೈಕ್ಯಮೇವೇತಿ ಸೂಚಿತಮ್ । ಮುಕ್ತಿಗಂ ತದ್ಯೋಗಂ ಬ್ರಹ್ಮಯೋಗಂ ಶಾಸ್ತೀತ್ಯನೇನ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತೀತಿ ಸೂತ್ರಮರ್ಥತೋಽಗೃಹ್ಣಾತಿ । ಅತ್ರ ಚ ಸೂತ್ರೇ ಅಸ್ಮಿನ್ನಾನಂದಮಯಾಧಿಕರಣೇ ಅಸ್ಯೋಪಾಸಕಸ್ಯ ತದ್ಯೋಗಂ ಏತಮಾನಂದಮಯಮಾತ್ಮಾನಮುಪಸಂಕ್ರಾಮತೀತ್ಯಾದಿನಾಽಽನಂದ-ಮಯಾದಿನಾಮಕಬ್ರಹ್ಮಯೋಗಂ ಫಲತಯಾಶಾಸ್ತೀತಿ ಮೌಕ್ತಬ್ರಹ್ಮಯೋಗಸ್ಯೈವಕಥನಾತ್ ಮುಕ್ತಿಗಂ ತದ್ಯೋಗಮಿತ್ಯುಕ್ತಮ್ । ತತಃ ಪೂರ್ವವನ್ಮುಕ್ತಬ್ರಹ್ಮಭೇದಸಿದ್ಧಿಃ । ಸುಷುಪ್ತ್ಯುತ್ಕ್ರಾಂತ್ಯೋ-ರ್ನಿದ್ರೋತ್ಕ್ರಮಣಯೋರ್ಭಿದಾಮಾಹೇತ್ಯನೇನ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನೇತಿ ಸೂತ್ರಂ ಸೂಚಯತಿ । ಅತ್ರಸುಪ್ತಿರಿತಿ ಬ್ರಹ್ಮಪ್ರಾಪ್ತಿ ರೂಪತ್ವಾದವಾಂತರಮುಕ್ತಿರೇವ । ಉತ್ಕ್ರಾಂತಿಸ್ತು

ಮುಕ್ತಿರಿತಿ ಸರ್ವಸ್ಯಾಪಿ ಸಮ್ಮತಮ್ । ತಯೋರುಭಯೋರಪಿ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನವೇದೇತಿ ಪ್ರಾಜ್ಞೇನಾತ್ಮನಾನ್ವಾರೂಢ ಉತ್ಸರ್ಜದ್ಯಾತೀತಿ ಚ ಜೀವ-ಬ್ರಹ್ಮಭೇದಕಥನಾತ್ಕಥಮಾವಿದ್ಯಕೋ ಭೇದಃ । ಮುಕ್ತಿಕಾಲೀನಸ್ಯ ಚ ಬ್ರಹ್ಮವದಾ-ವಿದ್ಯಕತ್ವಾಯೋಗಾತ್ । ಪರೇಣಾನಂಗೀಕಾರಾಚ್ಚ । ತ್ರಿಸೂತ್ರೀಯಮುಕ್ತ ವಕ್ಷ್ಯಮಾಣ ಸೂತ್ರ ಪ್ರತಿಪಾದ್ಯ ಸಕಲಭೇದಾನಾಮಪಿ ದೇಹಲೀದೀಪನ್ಯಾಯೇನ ಪಾರಮಾರ್ಥಿಕತಾಂ ಸಾಧಯತೀತಿ ಭಾವಃ । ಪೃಥಗುಪದೇಶಾದಿತಿ ಸೂತ್ರಂ ಮನಸಿ ನಿಧಾಯತಸ್ಯಾರ್ಥಮೇವಾಹ –ಸ್ಪಷ್ಟಮಿತಿ ॥ ಜೀವಃಪರಾತ್ ಪೃಥಗಿತಿ ಸೌತ್ರಪ್ರತಿಜ್ಞಾಭಾಗಸ್ಯಾರ್ಥಃ ॥ ೨೧೯ ॥

**ವಿವರಣೆ–** ಇನ್ನು ಭೇದವು ಮುಕ್ತಿಕಾಲದಲ್ಲಿಯೂ ಇರುವುದರಿಂದ ಅತಾತ್ವಿಕವಲ್ಲ ಎಂದು ಸಮರ್ಥನೆ ಮಾಡಲು ಅದಕ್ಕೆ ಉಚಿತವಾದ ಸೂತ್ರಗಳನ್ನು ಉದಾಹರಿಸುತ್ತಾರೆ. ಸರ್ವತ್ರ ಪ್ರಸಿದ್ಧಾಧಿಕರಣದಲ್ಲಿ ಮುಕ್ತೋಪಸೃಪ್ಯವ್ಯಪದೇಶಾತ್ ಎಂದು ಗುಣಸೂತ್ರವಿದೆ. ಸರ್ವತ್ರ ಸ್ಥಿತನಾದವನು ಮುಕ್ತಪ್ರಾಪ್ಯನೆಂದು ಹೇಳಿರುವುದರಿಂದ ಮುಕ್ತಪ್ರಾಪ್ಯನಾದ ಬ್ರಹ್ಮನೇ ಸರ್ವಗತನಾದವನು, ಜೀವನು ಅಲ್ಲ ಎಂದು ಸೂತ್ರಾರ್ಥ. ಇಲ್ಲಿ ಸ್ಪಷ್ಟವಾಗಿ ಬ್ರಹ್ಮನಿಗೆ ಜೀವಭೇದವನ್ನು ಹೇಳಿದ್ದಾರೆ. ಯದ್ಯಪಿ ಇಲ್ಲಿ ಸೂತ್ರದಲ್ಲಿ ಮುಕ್ತೋಪಸೃಪ್ಯತ್ವವ್ಯಪದೇಶಾತ್ ಎಂಬ ನಿರ್ದೇಶವಿರಬೇಕಾಗಿದ್ದಿತು. ಹಾಗೆ ಮಾಡದೇ ಸೂತ್ರಕಾರರು ಭವಿತೃಪ್ರಧಾನವಾದ ಶಬ್ದದಿಂದ ಕೂಡಿದ ಮುಕ್ತೋಪಸೃಪ್ಯವ್ಯಪದೇಶಾತ್ ಎಂಬ ಸೂತ್ರನಿರ್ದೇಶವನ್ನು ಮಾಡಿದ್ದಾರೆ. ಅದರ ಅಭಿಪ್ರಾಯವೇನೆಂದರೆ ಬ್ರಹ್ಮನು ಭವಿತೃ ಎಂದರೆ ಧರ್ಮಿ. ಮುಕ್ತೋಪಸೃಪ್ಯತ್ವವು ಭಾವ ಎಂದರೆ ಒಂದು ಧರ್ಮ. ಮುಕ್ತೋಪಸೃಪ್ಯತ್ವಕ್ಕೂ ಮತ್ತು ಮುಕ್ತೋಪಸೃಪ್ಯನಿಗೂ ಎಂದರೆ ಬ್ರಹ್ಮನ ವಿಷಯದಲ್ಲಿ ಧರ್ಮಕ್ಕೂ ಮತ್ತು ಧರ್ಮಿಗೂ ಅಭೇದವಿದೆ ಎಂದು ಸೂಚಿಸುವುದು ಸೂತ್ರಕಾರರ ಉದ್ದೇಶ. ಆದ್ದರಿಂದ ಭವಿತೃಪ್ರಧಾನವಾದ ನಿರ್ದೇಶವನ್ನು ಮಾಡಿದ್ದಾರೆ ಎಂದು ತಿಳಿಯಬೇಕು. ಅಸ್ಮಿನ್ ಅಸ್ಯ ಚ ತದ್ಯೋಗಂ ಶಾಸ್ತಿ ಎಂಬುದು ಆನಂದಮಯಾಧಿಕರಣದ ಒಂದು ಗುಣಸೂತ್ರ. ಅಸ್ಮಿನ್= ಈ ಆನಂದಮಯನಲ್ಲಿ, ಅಸ್ಯ= ಈ ಜೀವನಿಗೆ, ತದ್ಯೋಗಂ= ಮೋಕ್ಷದಲ್ಲಿ ಆನಂದಮಯ ಸಂಬಂಧವನ್ನು, ಶಾಸ್ತಿ= ವೇದವು ಹೇಳುತ್ತದೆ ಎಂದು, ಮೋಕ್ಷದಲ್ಲಿಯೂ ಜೀವನಿಗೆ ಬ್ರಹ್ಮನ ಪ್ರಾಪ್ತಿರೂಪವಾದ ಸಂಬಂಧವನ್ನೇ ಹೇಳಿದೆ. ಆದ್ದರಿಂದ ಮೋಕ್ಷದಲ್ಲಿಯೂ ಜೀವಬ್ರಹ್ಮರ ಭೇದವಿದೆ ಎಂದು ಸಿದ್ಧವಾಗುತ್ತದೆ. ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಎಂಬುದು ಇನ್ನೊಂದು ಸೂತ್ರ. ಅದರ ಅರ್ಥ ಸುಷುಪ್ತಿಪ್ರಕರಣ ಮತ್ತು ಉತ್ಕ್ರಾಂತಿಪ್ರಕರಣಗಳಲ್ಲಿ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾ ಅನ್ವಾರೂಢಃ ಎಂದು ಹೇಳಿ ಜೀವ-ಪರಮಾತ್ಮರಿಗೆ ಭೇದವನ್ನೇ ಹೇಳಿರುವುದರಿಂದ ಸ್ವಪ್ನಾದಿ ದ್ರಷ್ಟೃವಾದವನು ವಿಷ್ಣುವೇ ಹೊರತು ಜೀವನಲ್ಲ ಎಂದು ಅರ್ಥ. ನಿದ್ರೆಯಲ್ಲಿಯೂ ಕೂಡ ಪಾಕ್ಷಿಕವಾದ ಬ್ರಹ್ಮಪ್ರಾಪ್ತಿ ಇರುವುದರಿಂದ ಮುಕ್ತಿ ಇದ್ದಂತೆಯೇ. ಆಗಲೂ ಜೀವನಿಗೆ ಬ್ರಹ್ಮನಿಂದ ಆಲಿಂಗನವನ್ನು ಅಥವಾ ಅಧಿಷ್ಠಿತತ್ವವನ್ನು

ಹೇಳಿ ಇಲ್ಲಿಯೂ ಸಹ ಸಂಬಂಧವನ್ನೇ ಹೇಳಿದ್ದಾರೆ. ಇವು ಮೂರು ಪ್ರಕರಣಗಳು ಮೋಕ್ಷಕ್ಕೆ ಸಂಬಂಧಪಟ್ಟವು. ಆದ್ದರಿಂದ ಮೋಕ್ಷಾವಸ್ಥೆಯಲ್ಲಿಯೂ ಸಹ ಸೂತ್ರಗಳಲ್ಲಿ ಭೇದವನ್ನೇ ಅಥವಾ ಭೇದವ್ಯಾಪ್ಯವಾದ ಸಂಬಂಧವನ್ನೇ ಸ್ಪಷ್ಟವಾಗಿ ಹೇಳಿರುವುದರಿಂದ ಜೀವೇಶಭೇದವು ಅತಾತ್ವಿಕವಲ್ಲವೆಂದು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಜೀವಃ ಪರಾತ್‌ಪೃಥಕ್ ಎಂಬ ಶ್ಲೋಕದ ಭಾಗದಲ್ಲಿ ಪೃಥಗುಪದೇಶಾತ್ ಎಂಬ ಸೂತ್ರದ ಭಾವವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ವಾದಿರಾಜರು ಈ ಎಲ್ಲ ಭೇದಗಳೂ ಸಾರ್ವಕಾಲಿಕವಾದವು ಎಂದು ಉಪಪಾದನೆಯನ್ನು ಮಾಡಿದ್ದಾರೆ.

**ಉಪದೇಶಾದಿತಿ ಪ್ರಾಹ ಫಲಾಧ್ಯಾಯೇಪಿ ಸ ಪ್ರಭುಃ ।**
**ಮುಕ್ತಂ ಜೀವಂ ಚ ಸಂಪದ್ಯಾವಿಹಾಯೇತಿ ಪೃಥಗ್ ಜಗೌ ॥ ೨೨೦ ॥**

**ಅರ್ಥ–** ಉಪದೇಶಾತ್ ಇತಿ= ಪೃಥಗುಪದೇಶಾತ್ ಎಂದು, ಪ್ರಾಹ= ಸೂತ್ರಕಾರರು ಹೇಳಿದ್ದಾರೆ, ಸ ಪ್ರಭುಃ= ಪ್ರಭುಗಳಾದ ವ್ಯಾಸರು, ಫಲಾಧ್ಯಾಯೇಪಿ= ಫಲಾಧ್ಯಾಯದಲ್ಲಿಯೂ ಸಹ, ಮುಕ್ತಂ ಜೀವಂ= ಮುಕ್ತನಾದ ಜೀವನನ್ನು, ಸಂಪದ್ಯಾವಿಹಾಯೇತಿ= ಬ್ರಹ್ಮನನ್ನು ಹೊಂದಿ ಬ್ರಹ್ಮನನ್ನು ಪರಿತ್ಯಾಗ ಮಾಡದೇ ಎಂದು ಹೇಳಿ, ಪೃಥಕ್= ಭಿನ್ನನಾಗಿಯೇ, ಜಗೌ= ಹೇಳಿದ್ದಾರೆ.

**ಅನುವಾದ–** ಪ್ರಭುಗಳಾದ ವೇದವ್ಯಾಸರು ಪೃಥಗುಪದೇಶಾತ್ ಎಂಬ ಸೂತ್ರದಲ್ಲಿ ಬ್ರಹ್ಮನು ಜೀವನಿಗಿಂತಲೂ ಭಿನ್ನನೆಂದು ಹೇಳಿದ್ದಾರೆ. ಫಲಾಧ್ಯಾಯದಲ್ಲಿಯೂ ಕೂಡ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಎಂಬ ಸೂತ್ರದಲ್ಲಿ ಮುಕ್ತಜೀವನನ್ನು ಬ್ರಹ್ಮನಿಗಿಂತ ಭಿನ್ನನಾದವನು ಎಂದೇ ಹೇಳಿದ್ದಾರೆ.

**ಭಾವವಿಲಾಸಿನೀ–** ಉಪದೇಶಾತ್ ಸರ್ವಶಾಖಾಸ್ವಪಿ ಭೇದಸ್ಯೋಪದೇಶಾದಿತಿ ಹೇತ್ವಂಶವ್ಯಾಖ್ಯಾಪಿ ದ್ರಷ್ಟವ್ಯಾ । ಇತೀತ್ಯಸ್ಯ ಪೃಥಗಿತ್ಯನೇನ ಸಂಬಂಧಃ । ಮುಕ್ತಿಪ್ರತಿಪಾದಕಫಲಾಧ್ಯಾಯೇಪಿ ಭೇದಸ್ಯೋಕ್ತತ್ವಾತ್ ಕಥಮಾವಿದ್ಯಕೋ ಭೇದ ಇತಿ ಭಾವೇನಾಹ – **ಫಲೇತಿ** ॥ ಸಂಪದ್ಯಾವಿಹಾಯಸ್ವೇನ ಶಬ್ದಾದಿತಿ ಸೂತ್ರೇ ಸಂಪದ್ಯಬ್ರಹ್ಮಸಂಪ್ರಾಪ್ಯ ಅವಿಹಾಯ ಬ್ರಹ್ಮಾತ್ಯಕ್ತ್ವಾ ತೇನ ಸಹೈವೇತಿ ಚ ಮುಕ್ತಂ ಜೀವಂ ಚ ಪೃಥಗ್‌ಬ್ರಹ್ಮಣಃ ಪೃಥಕ್‌ಜಗೌ ॥ ೨೨೦ ॥

**ವಿವರಣೆ–** ಹಿಂದಿನ ಶ್ಲೋಕದಿಂದ ಕೊನೆಯ ಪದವಾದ ಪೃಥಕ್ ಎಂಬ ಪದವನ್ನು ಇಲ್ಲಿ ತೆಗೆದುಕೊಳ್ಳಬೇಕು. ಆದ್ದರಿಂದ ಪೃಥಗುಪದೇಶಾದಿತಿ ಎಂದು ಶ್ಲೋಕದ ಯೋಜನೆಯಾಗುತ್ತದೆ. ಪೃಥಗುಪದೇಶಾತ್ ಎಂಬುದು ಒಂದು ಬ್ರಹ್ಮಸೂತ್ರ. ಆ ಸೂತ್ರದಲ್ಲಿ ಉಪದೇಶಾತ್ ಎಂದರೆ ಭಿನ್ನೋ ಅಚಿಂತ್ಯಃ ಪರಮೋ ಜೀವಸಂಘಾತ್ ಎಂಬ ಉಪದೇಶ. ಪರಮಾತ್ಮನು ಅಚಿಂತ್ಯನಾದವನು, ಸರ್ವೋತ್ತಮನಾದವನು, ಜೀವಸಮುದಾಯಕ್ಕಿಂತ ಭಿನ್ನನಾದವನು, ನಿತ್ಯಮುಕ್ತನಾದವನು, ಜೀವನು ಅವನ

ಅನುಗ್ರಹದಿಂದ ಮೋಕ್ಷವನ್ನು ಪಡೆಯಬೇಕು ಎಂದು ಹೇಳಿ ಬ್ರಹ್ಮನಿಗೆ ಅಚಿಂತ್ಯತ್ವವನ್ನು, ಪರಮತ್ವವನ್ನು, ಮೋಕ್ಷಪ್ರದತ್ವವನ್ನು ಮತ್ತು ಜೀವನಿಗೆ ಬದ್ಧತ್ವವನ್ನು, ಉಪಜೀವಕತ್ವವನ್ನು ಹೇಳಿರುವುದರಿಂದ ಮೋಕ್ಷವನ್ನು ಪಡೆದ ಜೀವನಲ್ಲೂ ಇರುವ ಈ ಭೇದವು ತಾತ್ವಿಕವೆಂದೇ ಸಿದ್ಧವಾಗುತ್ತದೆ. ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಎಂಬುದು ಫಲಾಧ್ಯಾಯದ ಇನ್ನೊಂದು ಸೂತ್ರ. ಜ್ಞಾನಿಯಾದವನು ಪರಬ್ರಹ್ಮನನ್ನು ಹೊಂದಿ ಪರಬ್ರಹ್ಮನನ್ನು ಬಿಡದೇ ಎಂದರೆ ಅತಿಕ್ರಮಿಸದೇ ತನ್ನ ಸ್ವರೂಪದಿಂದಲೇ ಇದ್ದವನಾಗಿ ಭೋಗಗಳನ್ನು ಭೋಗಿಸುತ್ತಾನೆ ಎಂದು ಅರ್ಥ. ಆದಕ್ಕೆ ಹೇತುವಾಗಿ ಪರಂಜ್ಯೋತಿರುಪಸಂಪದ್ಯ ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಆದ್ದರಿಂದ ಮೋಕ್ಷದಲ್ಲಿಯೂ ಬ್ರಹ್ಮನ ಪ್ರಾಪ್ತಿಯನ್ನು, ಬ್ರಹ್ಮನ ಅನತಿಕ್ರಮವನ್ನು ಹೇಳಿರುವುದರಿಂದ, ಮೋಕ್ಷದಲ್ಲಿಯೂ ಭೇದ ಇದೆ ಎಂದೂ, ಆ ಭೇದವು ತಾತ್ವಿಕವೆಂದೂ ಸಿದ್ಧವಾಗುತ್ತದೆ.

ಜಗದ್ವ್ಯಾಪಾರವರ್ಜಂ ತ್ವಿತ್ಯತ್ರ ಸಾವಧಿವೈಭವಂ ।
ಮುಕ್ತಸ್ಯಾಹ ಹರಿಂ ಸರ್ವಜಗಜ್ಜನ್ಮಾದಿಕಾರಣಂ ।
ವಕ್ತಿ ಸ್ಮಾದೌ ತತೋಽಪ್ಯನ್ಯೋ ಮುಕ್ತಾನಾಂ ಪರಮಾ ಗತಿಃ ॥ ೨೨೦ ॥

**ಅರ್ಥ—** ಸೂತ್ರಕಾರರು, ಜಗದ್ವ್ಯಾಪಾರವರ್ಜಂ ತು ಇತ್ಯತ್ರ= ಜಗದ್ವ್ಯಾಪಾರವರ್ಜಂ ಎಂಬ ಸೂತ್ರದಲ್ಲಿ, ಮುಕ್ತಸ್ಯ= ಮುಕ್ತನಿಗೆ, ಸಾವಧಿವೈಭವಂ= ಸಂಕುಚಿತವಾದ ವೈಭವವನ್ನು, ಆಹ= ಹೇಳಿದ್ದಾರೆ, ಆದೌ= ಮೊದಲು, ಜನ್ಮಾದಿಸೂತ್ರದಲ್ಲಿ, ಹರಿಂ= ಹರಿಯನ್ನು, ಸರ್ವಜಗಜ್ಜನ್ಮಾದಿಕಾರಣಂ= ಎಲ್ಲ ಜಗತ್ತಿನ ಜನ್ಮಾದಿಕಾರಣನೆಂದು, ವಕ್ತಿ= ಹೇಳಿದ್ದಾರೆ, ತತೋಽಪಿ= ಆ ಕಾರಣದಿಂದಲೂ, ಅನ್ಯಃ= ಬ್ರಹ್ಮನು ಜೀವನಿಗಿಂತ ಭಿನ್ನನಾದವನು, ಮುಕ್ತಾನಾಂ ಪರಮಾ ಗತಿಃ= ಮುಕ್ತನಿಗೆ ಶ್ರೇಷ್ಠನಾದ ಆಶ್ರಯನಾದವನು.

**ಅನುವಾದ—** ಸೂತ್ರಕಾರರು ಫಲಾಧ್ಯಾಯದಲ್ಲಿ ಜಗದ್ವ್ಯಾಪಾರವರ್ಜಂ ಎಂಬ ಸೂತ್ರದಲ್ಲಿ ಮುಕ್ತನಿಗೆ ಇರುವ ವೈಭವವು ಪರಿಮಿತವಾದುದು ಎಂದು ಹೇಳಿದ್ದಾರೆ. ಮೊದಲು ಜನ್ಮಾದಿ ಸೂತ್ರದಲ್ಲಿ ಹರಿಗೆ ಸರ್ವಜಗಜ್ಜನ್ಮಾದಿಕಾರಣತ್ವವನ್ನು ಹೇಳಿದ್ದಾರೆ. ಭಾರತಸ್ಮೃತಿಯು ಹರಿಯನ್ನು ಮುಕ್ತರಿಗೆ ಪರಮಾಶ್ರಯ ಎಂದು ಹೇಳುತ್ತದೆ. ಆ ಕಾರಣದಿಂದ ಹರಿಯು ಜೀವನಿಗಿಂತ ಭಿನ್ನನಾದವನು.

**ಭಾವವಿಲಾಸಿನೀ—** ಜಗದ್ವ್ಯಾಪಾರವರ್ಜಮಿತ್ಯತ್ರ ಜಗದ್ವ್ಯಾಪಾರ ವರ್ಜಮಿತಿ ಸೂತ್ರೇ । ತು ಶಬ್ದೋ ವಿರುದ್ಧಧರ್ಮಕಥನರೂಪಯುಕ್ತಿಸಾಹಿತ್ಯಾಖ್ಯ ವಿಶೇಷದ್ಯೋತನಾರ್ಥಃ । ಸಾವಧಿ ಏತಾವದೇವೇತ್ಯವಧಿಸಹಿತಮ್ । ಜಗತ್ ಸರ್ಜನಾದಿ ವ್ಯಾಪಾರಂ ವರ್ಜಯಿತ್ವಾ ಭೋಗಾನಾಪ್ನೋತಿ । ಜಗತ್ಸೃಷ್ಟ್ಯಾದಿ ವ್ಯಾಪಾರಾನ್ನಿನಾನ್ಯಾನ್ ಭೋಗಾನಾಪ್ನೋತೀತ್ಯವಧಿ ಸಹಿತ ವೈಭವಂ ಮುಕ್ತಸ್ಯಾಹೇತಿಯೋಜನಾ । ಹರಿಮಾದೌ ಜನ್ಮಾದಿಸೂತ್ರೇ

ಸರ್ವಜಗಜ್ಜನ್ಮಾದಿಕಾರಣಂ ವಕ್ತಿಸ್ಮ ಅವೋಚತ್ । ತತೋಽಪಿ ಹರೇರ್ಜಗಜ್ಜನ್ಮಾದಿ-ಕಾರಣತ್ವರೂಪವೈಭವಸದ್ಭಾವಾತ್ ಮುಕ್ತಸ್ಯ ಚ ತದ್ರಹಿತತ್ವಾದಪಿ । ಮುಕ್ತಾನಾಂ ಪರಮಾಗತಿಃ ನಾರಾಯಣೋಽನ್ಯಃ ಮುಕ್ತೇಭ್ಯೋಽಭಿನ್ನಃ ನಾರಾಯಣ ಇತ್ಯನುಕ್ತ್ವಾ ಮುಕ್ತಾನಾಂ ಪರಮಾ ಗತಿರಿತಿ ಸಹಸ್ರನಾಮಸು ಪಠಿತನಾಮ್ನಾ ವಿಶೇಷ್ಯನಿರ್ದೇಶಃ ಮುಕ್ತಭೇದೇ ಪ್ರಮಾಣಾಂತರಂ ಚ ಸೂಚಯಿತುಮ್ । ಇದಮುಕ್ತಂ ಭವತಿ । ಅವಿದ್ಯಾನಿವೃತ್ತಿ ರೂಪಮುಕ್ತ್ಯಾಖ್ಯ ಫಲಪ್ರತಿ-ಪಾದಕಾಧ್ಯಾಯೇ ಕಥಿತಂ ಸರ್ವಮನಾವಿದ್ಯಕಮಿತಿ ಪರೇಣಾಪಿವಕ್ತವ್ಯಮ್ । ಜೀವೇಶ್ವರಭೇದಶ್ಚ ಸಂಪದ್ಯೇತಿಸೂತ್ರೇ ಪ್ರಾಪ್ಯಪ್ರಾಪಕಭಾವೇನ ಜಗದ್ವ್ಯಾಪಾರವರ್ಜಮಿತಿ ಸೂತ್ರೇ ವಿರುದ್ಧಧರ್ಮಾ ಕ್ರಾಂತತ್ವೇನ ವಿಸ್ಪಷ್ಟಮುದೀರಿತಃ । ಅತಃ ಕಥಮಸಾವಪಾರಮಾರ್ಥಿಕ ಇತಿ ॥ ೨೨೧ ॥

**ವಿವರಣೆ–** ಜಗದ್ವ್ಯಾಪಾರವರ್ಜಂ ಎಂಬುದು ಫಲಾಧ್ಯಾಯದ ಒಂದು ಸೂತ್ರ. ಮುಕ್ತನಿಗೆ ಎಷ್ಟೇ ವೈಭವವಿದ್ದರೂ ಅವನಿಗೆ ಜಗತ್ಸೃಷ್ಟ್ಯಾದಿ ಸಾಮರ್ಥ್ಯವಿರುವುದಿಲ್ಲ ಎಂದು ಅರ್ಥ. ಹರಿಗೆ ಮಾತ್ರ ಜನ್ಮಾದಿಸೂತ್ರದಲ್ಲಿ ಸಕಲಜಗಜ್ಜನ್ಮಾದಿಕಾರಣತ್ವವು ಇದೆ ಎಂದು ಹೇಳಿದ್ದಾರೆ. ಸರ್ವದಾ ಸಕಲ ಜಗಜ್ಜನ್ಮಾದಿಕಾರಣತ್ವ ಇರುವ ಹರಿಗೂ ಮತ್ತು ಜಗದ್ವ್ಯಾಪಾರರಹಿತನಾದ ಮುಕ್ತನಿಗೂ ಎಂದೂ ಅಭೇದವು ಇರುವುದಿಲ್ಲ. ಈ ವಿರುದ್ಧ ಧರ್ಮಗಳಿಗೆ ಆಶ್ರಯರಾದ್ದರಿಂದ ಅವರಲ್ಲಿ ಭೇದವೇ ಇರುತ್ತದೆ. ಈ ವಿರುದ್ಧ ಧರ್ಮಾಧಿಕರಣತ್ವವನ್ನು ಶ್ಲೋಕದಲ್ಲಿ ತು ಎಂಬ ಪದದಿಂದ ಸೂಚಿಸಿದ್ದಾರೆ. ಹರಿಯ ವೈಭವವು ಮುಕ್ತರಿಗೆ ಎಂದೂ ಇಲ್ಲ ಎಂದು ಹೇಳಿದ ಮೇಲೆ ಮೋಕ್ಷದಲ್ಲಿಯೂ ಜೀವಬ್ರಹ್ಮರ ಭೇದವು ಸಿದ್ಧವಾಗುತ್ತದೆ. ಮುಕ್ತಾನಾಂ ಪರಮಾಗತಿಃ ಎಂದು ವಿಷ್ಣುಸಹಸ್ರನಾಮದಲ್ಲಿದೆ. ಮುಕ್ತರಿಗೂ ಹರಿಯು ಆಶ್ರಯನಾಗಿದ್ದಾನೆ ಎಂದೇ ಅರ್ಥ. ಆದ್ದರಿಂದ ಅಲ್ಲಿಯೂ ಭೇದವೇ ಸೂಚಿಸಲ್ಪಡುತ್ತದೆ. ಇಲ್ಲಿ ತಿಳಿಯುವುದು ಮುಕ್ತಿಕಾಲದ ಭೇದ. ಮುಕ್ತಿಕಾಲದಲ್ಲಿ ಅವಿದ್ಯೆಯ ನಾಶವಾಗಿರುತ್ತದೆ. ಆಗ ಇರುವ ಭೇದವು ಆವಿದ್ಯಕವಾದ ಭೇದವಾಗಲು ಸಾಧ್ಯವಿಲ್ಲ, ಅದು ಪಾರಮಾರ್ಥಿಕವೇ ಆಗುತ್ತದೆ ಎಂದು ಅಭಿಪ್ರಾಯ.

**ಭೇದಮಾಘೋಷಯಾಮಾಸ ಸೂತ್ರೇ ಸೂತ್ರೇ ಸ ಸೂತ್ರಕೃತ್ ।**
**ಪಂಚ ಧಾಯೋ ಭಿನತ್ತೀದಂ ಸ ಭೇದಃ ಕೇನ ವಾರ್ಯತೇ ॥ ೨೨೨ ॥**

**ಅರ್ಥ–** ಸ ಸೂತ್ರಕೃತ್= ಸೂತ್ರಕಾರರಾದ ಆ ವ್ಯಾಸರು, ಸೂತ್ರೇ ಸೂತ್ರೇ= ಪ್ರತಿಯೊಂದು ಸೂತ್ರದಲ್ಲಿಯೂ, ಭೇದಂ= ಭೇದವನ್ನು, ಆಘೋಷಯಾಮಾಸ= ಘೋಷಿಸಿದ್ದಾರೆ, ಯಃ ಭೇದಃ= ಯಾವ ಭೇದವು, ಇದಂ= ಈಶ್ವರ ಸಹಿತವಾದ ಈ ಜಗತ್ತನ್ನು, ಪಂಚಧಾ= ಐದು ರೀತಿಯಾಗಿ, ಭಿನತ್ತಿ= ವಿಭಾಗ ಮಾಡುತ್ತದೆಯೋ, ಸಃ= ಅಂತಹ ಭೇದವು, ಕೇನ= ಯಾವ ವಾದಿಯಿಂದ, ವಾರ್ಯತೇ= ನಿರಾಕರಿಸಲ್ಪಡಲು ಸಾಧ್ಯ?

**ಅನುವಾದ–** ಆ ಸೂತ್ರಕಾರರು ಪ್ರತಿಸೂತ್ರದಲ್ಲಿಯೂ ಭೇದವನ್ನು ಘೋಷಿಸಿದ್ದಾರೆ. ಈಶ್ವರ ಸಹಿತವಾದ ಜಗತ್ತನ್ನು ಐದು ವಿಭಾಗವಾಗಿ ವಿಂಗಡಿಸುವ ಈ ಭೇದವನ್ನು ಯಾವ ವಾದಿಯು ತಾನೇ ನಿರಾಕರಿಸಲು ಸಾಧ್ಯ?

**ಭಾವವಿಲಾಸಿನೀ–** ಸೂತ್ರೇ ಸೂತ್ರೇ ಪ್ರತಿಸೂತ್ರಮ್ । ಉದೀರಿತಸೂತ್ರಸಮುದಾಯೇಷು ವಚನವೃತ್ತ್ಯೈವ ಭೇದಃ ಪ್ರತಿಪಾದ್ಯತೇ । ಅರ್ಥಾತ್ತು ಸಕಲಸೂತ್ರೇಷ್ವಪಿ ಭೇದೋಽಭಿಮತಃ । ಜೀವ ಜಡಾತ್ಮಕಸಕಲಪ್ರಪಂಚಪ್ರತಿಪಾದಕಶಬ್ದಾನಾಂ ಬ್ರಹ್ಮಣಿಸಮನ್ವಯೇಽಭಿಹಿತೇಽ-ರ್ಥಾತ್ತತ್ತಚ್ಛಾಖಾಸ್ಥಿತತತ್ತಚ್ಛಬ್ದಾನಾಂ ಜೀವಜಡಾತ್ಮಕ ಪ್ರಪಂಚಾಪ್ರತಿಪಾದಕತಾಪಿಸಿದ್ಧಾ । ಏವಂಚ ತತ್ತತ್ ಶಬ್ದ ಪ್ರತಿಪಾದ್ಯಸ್ಯತದಪ್ರತಿಪಾದ್ಯಾತ್ ಜಗತಃ ಕಥಂ ನ ಭೇದಃ । ವಿರುದ್ಧ-ಧರ್ಮಾಕ್ರಾಂತಯೋರ್ಭೇದಾಪರಿಹಾರಾತ್ । ದ್ವಿತೀಯಾಧ್ಯಾಯೇ ಚ ವೈಷಮ್ಯ ನೈರ್ಘೃಣ್ಯೇನ ಸಾಪೇಕ್ಷತ್ವಾತ್ತಥಾಹಿ ದರ್ಶಯತೀತ್ಯಾದಿನಾ ನಿರ್ದೋಷತಯಾ ಪ್ರತಿಪಾದಿತಸ್ಯ ಬ್ರಹ್ಮಣಃ ಸದೋಷೇಭ್ಯೋ ಜೀವಜಡೇಭ್ಯಃ ಕಥಂ ನ ಭೇದಃ । ಸಾಧನಾಧ್ಯಾಯೇ ಚ ಸಾಧನ ವದ್ಭಿರುಪಾಸಕೈರ್ದ್ರಷ್ಟೃಭಿರ್ವೋಪಾಸ್ಯಸ್ಯ ದೃಶ್ಯಸ್ಯ ಚ ಬ್ರಹ್ಮಣಃ ಕಥಂ ನ ಭೇದಃ । ಫಲಾಧ್ಯಾಯೇ ಚ ಫಲಪ್ರದಸ್ಯ ಗಮ್ಯಸ್ಯ ಚ ಬ್ರಹ್ಮಣಃ ಫಲಪ್ರತಿಗ್ರಹೀತೃಭ್ಯೋ ಗಂತೃಭ್ಯಶ್ಚ ಜೀವೇಭ್ಯಃ ಕಥಂ ನ ಭೇದಃ । ಅತಃ ಸೂತ್ರೇಸೂತ್ರ ಇತ್ಯುಕ್ತಮ್ । ಯಃ ಭೇದಃ ಇದಂ ಜೀವಜಡಾತ್ಮಕಂ ಸೇಶ್ವರಂ ಜಗದ್ಭಿನತ್ತಿ ಭೇದವತ್ ಕರೋತಿ । ಜೀವೇಶ್ವರಭೇದಃ ಜಡೇಶ್ವರಭೇದಃ ಜೀವಜಡಭೇದಃ ಜೀವಾನಾಂ ಪರಸ್ಪರಭೇದಃ ಜಡಾನಾಂ ಪರಸ್ಪರ ಭೇದ ಇತಿ ಪಂಚವಿಧಭೇದೈ-ರನ್ಯೋನ್ಯಮಸಂಕೀರ್ಣಾನ್ ಕರೋತೀತಿ ಭಾವಃ । ಕೇನವಾದಿನಾ ಸ್ವಗೃಹದೇವಂ ಸಂಪೂಜ್ಯಸ್ವಾನ್ನಂ ಸ್ವಯಮೇವ ಭುಂಜತಾ ಕೇನಾಪಿಮಾನವೇನ ಸ್ವಕ್ರಿಯಾವಿರೋಧಾದಯಂ ಪಂಚವಿಧೋ ಭೇದೋ ವಾರಯಿತುಂ ನ ಶಕ್ಯತ ಇತಿ ಭಾವಃ । ಸೇಶ್ವರಜಗತೋಽಪಿಪಂಚಧಾಭೇದನ ಸಮರ್ಥಃ ಕೇನ ಪ್ರತಿಭಟೇನವಾರಯಿತುಂ ಶಕ್ಯತ ಇತಿ ಧ್ವನಿಃ ॥ ೨೨೨ ॥

**ವಿವರಣೆ–** ಪ್ರತಿಸೂತ್ರದಲ್ಲಿಯೂ ಭೇದವನ್ನು ಘೋಷಿಸಿದ್ದಾರೆ ಎಂದು ಹೇಳಿದ್ದಾರೆ. ಅದರ ಅಭಿಪ್ರಾಯ ಹೀಗೆ - ಇದುವರೆಗೆ ಉದಾಹರಿಸಿದ ಸೂತ್ರಗಳಲ್ಲಿ ಭೇದವು ಕಂಠತಃ ಪ್ರತಿಪಾದಿತವಾಗಿದೆ. ಉಳಿದ ಸೂತ್ರಗಳಲ್ಲಿಯೂ ಭೇದವು ಆರ್ಥಿಕವಾಗಿ ಪ್ರತಿಪಾದ್ಯವಾಗುತ್ತದೆ. ಜೀವ ಜಡಾತ್ಮಕವಾದ ಸಕಲ ಪ್ರಪಂಚವನ್ನು ಹೇಳುವ ಶಬ್ದಗಳಿಗೆ ಬ್ರಹ್ಮನಲ್ಲಿ ಸಮನ್ವಯವನ್ನು ಹೇಳಿದರೆ ಆಯಾ ಶಾಖೆಗಳಲ್ಲಿರುವ ಆಯಾ ಶಬ್ದಗಳಿಗೆ ಜೀವಜಡಾತ್ಮಕಪ್ರಪಂಚ ಪ್ರತಿಪಾದಕತ್ವವು ಇಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ಸಮನ್ವಾಯಾಧ್ಯಾಯದ ಪ್ರತಿಯೊಂದು ಸೂತ್ರದಲ್ಲೂ ಭೇದವು ಕಂಠತಃ ಅಥವಾ ಅರ್ಥತಃ ಘೋಷಿಸಲ್ಪಟ್ಟಿದೆ. ದ್ವಿತೀಯಾಧ್ಯಾಯದಲ್ಲಿ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ಎಂಬ ಸೂತ್ರದಲ್ಲಿ ಜೀವನು ವೈಷಮ್ಯಾದಿದೋಷದುಷ್ಟನು ಮತ್ತು ಬ್ರಹ್ಮನು ವೈಷಮ್ಯಾದಿದೋಷರಹಿತನು ಎಂದು ಹೇಳಿರುವುದರಿಂದ ಅಲ್ಲಿಯೂ ಸಹ ಭೇದವು ಪ್ರತಿಪಾದ್ಯವಾಗಿದೆ. ಸಾಧನಾಧ್ಯಾಯದಲ್ಲಿ ಜೀವರು ಸಾಧಕರು ಎಂದರೆ ಉಪಾಸಕರು

ಮತ್ತು ದ್ರಷ್ಟಾರರು, ಪರಮಾತ್ಮರೂಪವನ್ನು ನೋಡುವವರು ಎಂದೂ, ಬ್ರಹ್ಮನು ಉಪಾಸ್ಯನೆಂದೂ ದೃಶ್ಯನೆಂದು ಹೇಳಿ ವಿರುದ್ಧಧರ್ಮಗಳನ್ನು ಹೇಳಿರುವುದರಿಂದ ಅಲ್ಲಿಯೂ ಭೇದವು ಪ್ರತಿಪಾದಿತವಾಗಿದೆ. ಫಲಾಧ್ಯಾಯದಲ್ಲಿ ಬ್ರಹ್ಮನಿಗೆ ಫಲಪ್ರದತ್ವವನ್ನು ಮತ್ತು ಗಮ್ಯತ್ವವನ್ನು ಹೇಳಿ, ಜೀವರಿಗೆ ಪ್ರತಿಗೃಹೀತ್ವತ್ವವನ್ನು ಮತ್ತು ಗಂತೃತ್ವವನ್ನು ಹೇಳಿರುವುದರಿಂದ ಅಲ್ಲಿಯೂ ಭೇದವು ಸಿದ್ಧವಾಗುತ್ತದೆ. ಆದ್ದರಿಂದ ಪ್ರತಿಸೂತ್ರದಲ್ಲಿಯೂ ಭೇದವು ಆಘೋಷಿಸಲ್ಪಟ್ಟಿದೆ ಎಂಬ ಮಾತು ಯಥಾರ್ಥವಾಗಿದೆ. ಈ ಭೇದವು ಜಗತ್ತನ್ನು ಜೀವೇಶ್ವರ ಭೇದ, ಜಡೇಶ್ವರ ಭೇದ, ಜೀವಜಡಭೇದ, ಜೀವರ ಪರಸ್ಪರ ಭೇದ, ಜಡಗಳ ಪರಸ್ಪರ ಭೇದ ಎಂದು ಐದು ಭಾಗವಾಗಿ ಮಾಡುತ್ತದೆ. ಈ ಭೇದಸಮೂಹವು ಈಶ್ವರರನ್ನೂ ಕಬಳಿಸಿ, ಅವನನ್ನೂ ಐದು ಭೇದದ ಸಮೂಹದಲ್ಲಿ ತನ್ನ ವಶಕ್ಕೆ ತೆಗೆದುಕೊಳ್ಳುವುದರಿಂದ ಇಂತಹ ಭೇದವನ್ನು ಯಾವ ವಾದಿಯು ನಿರಾಕರಿಸಲು ಸಾಧ್ಯ ಎಂದು ರಾಜರು ಪ್ರಶ್ನೆ ಮಾಡುತ್ತಾರೆ. ತನ್ನ ಮನೆಯ ದೇವರನ್ನು ಪೂಜಿಸಿ ತಾನು ಸಂಪಾದಿಸಿದ ಅನ್ನವನ್ನು ತಾನು ತಿನ್ನುವ ಯಾವ ವಾದಿಯೂ ನಿರಾಕರಿಸಲಾರ. ಹಾಗೆ ನಿರಾಕರಿಸಿದರೆ ಸ್ವಕ್ರಿಯಾವಿರೋಧವೇ ಉಂಟಾಗುತ್ತದೆ. ತಾನು ದೇವತೆಯನ್ನು ಪೂಜಿಸುವುದರಿಂದ ತನಗೂ ದೇವತೆಗೂ ಭೇದ. ತಾನು ಸಂಪಾದಿಸಿದ ಅನ್ನವಾದ್ದರಿಂದ ತನಗೂ ಅನ್ನಕ್ಕೂ ಭೇದ. ಅನ್ನಕ್ಕೂ ವ್ಯಂಜನಕ್ಕೂ ಭೇದ. ಪಕ್ಕದಲ್ಲಿ ಕುಳಿತು ಊಟಮಾಡುವವರಿಗೂ, ತನಗೂ ಭೇದ. ಹೀಗೆ ಎಲ್ಲ ಭೇದಗಳನ್ನು ತನ್ನ ಕ್ರಿಯೆಗಳಿಂದ ಸೂಚಿಸುವ ವಾದಿಯು ಪಂಚಭೇದವನ್ನು ನಿರಾಕರಿಸಿದರೆ ಅವನಿಗೆ ಸ್ವಕ್ರಿಯಾವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ವ್ಯಾಸವಿಸ್ತೃತಮೂರ್ತೀನಾಂ ಶ್ರುತೀನಾಂ ತತ್ ಪದೇ ಪದೇ ।**
**ಜೀವೇಶಭೇದೇ ತಾತ್ಪರ್ಯಮಿತಿಹಾಸಪುರಾಣಯೋಃ ॥ ೨೨೩ ॥**

**ಶ್ರೀವ್ಯಾಸಕೃತಯೋರ್ನಿತ್ಯಂ ಮಹಾತಾತ್ಪರ್ಯಮತ್ರ ಹಿ ।**
**ಸೂತ್ರಾನುಸಾರಿ ಯತ್ ಸರ್ವಂ ಶಾಸ್ತ್ರಮಿತ್ಯತಿಮಂಗಲಂ ॥ ೨೨೪ ॥**

**ಅರ್ಥ–** ವ್ಯಾಸವಿಸ್ತೃತಮೂರ್ತೀನಾಂ= ವೇದವ್ಯಾಸರಿಂದ ವಿಸ್ತರಿಸಲ್ಪಟ್ಟ ಸ್ವರೂಪವುಳ್ಳ, ಶ್ರುತೀನಾಂ= ಶ್ರುತಿಗಳಿಗೆ, ತತ್= ಆ ಕಾರಣದಿಂದ, ಪದೇ ಪದೇ= ಪ್ರತಿಯೊಂದು ಪದದಲ್ಲಿಯೂ, ಜೀವೇಶಭೇದೇ= ಜೀವೇಶ ಭೇದದಲ್ಲಿ, ತಾತ್ಪರ್ಯಂ= ತಾತ್ಪರ್ಯವಿದೆ, ಶ್ರೀ ವ್ಯಾಸಕೃತಯೋಃ= ಶ್ರೀ ವೇದವ್ಯಾಸದೇವರು ರಚಿಸಿದ, ಇತಿಹಾಸ ಪುರಾಣಯೋಃ= ಮಹಾಭಾರತ ಇತಿಹಾಸ ಮತ್ತು ಭಾಗವತಾದಿ ಪುರಾಣಗಳಿಗೆ, ಅತ್ರ= ಈ ಜೀವೇಶ ಭೇದದಲ್ಲಿ, ನಿತ್ಯಂ= ಸರ್ವದಾ, ಮಹಾತಾತ್ಪರ್ಯಂ ಹಿ= ಮಹಾತಾತ್ಪರ್ಯವಿದೆಯಷ್ಟೇ. ಆದ್ದರಿಂದ, ಯತ್ ಸರ್ವಂ= ಯಾವ ಎಲ್ಲವೂ, ಸೂತ್ರಾನುಸಾರಿ= ಸೂತ್ರಕ್ಕೆ

ಅನುಸಾರವಾಗಿದೆಯೋ, ಅದಲ್ಲೆವ್ವೂ, ಶಾಸ್ತ್ರಂ= ಶಾಸ್ತ್ರವೇ, ಇತಿ= ಎಂದು, ಅತಿಮಂಗಲಂ= ಪರಮ ಮಂಗಲವಾದುದು.

**ಅನುವಾದ–** ಶ್ರೀ ವ್ಯಾಸರಿಂದ ವಿಸ್ತರಿಸಲ್ಪಟ್ಟ ವೇದಗಳ ಪ್ರತಿಯೊಂದು ಪದಕ್ಕೂ ಜೀವೇಶಭೇದದಲ್ಲಿ ತಾತ್ಪರ್ಯವಿದೆ. ಶ್ರೀ ವೇದವ್ಯಾಸರು ರಚಿಸಿದ ಇತಿಹಾಸ ಪುರಾಣಗಳಿಗೂ ಈ ಜೀವೇಶ ಭೇದದಲ್ಲಿ ಯಾವಾಗಲೂ ಮಹಾತಾತ್ಪರ್ಯವಿದೆ. ಆದ್ದರಿಂದ ಯಾವುದೆಲ್ಲವೂ ಸೂತ್ರಕ್ಕೆ ಅನುಸಾರವಾಗಿದೆಯೋ ಅವೆಲ್ಲವೂ ಶಾಸ್ತ್ರವೇ ಆಗುತ್ತದೆ ಎಂದು ಪರಮ ಮಂಗಳ.

**ಭಾವವಿಲಾಸಿನೀ–** ತತ್ತಸ್ಮಾದ್ವೇದವಿಸ್ತಾರಕವ್ಯಾಸಕೃತವೇದನಿರ್ಣಾಯಕಸಕಲಸೂತ್ರಾಣಾಂ ಭೇದಪರತ್ವಾತ್ । ಪದೇಪದೇ ವರ್ಣಸಮುದಾಯಾತ್ಮಕ ಸರ್ವಪದೇಷು । ಇತಿಹಾಸೋ ಭಾರತಮ್ । ವ್ಯಾಸಕೃತಯೋರಿತಿ ಹೇತುಗರ್ಭಂ ವಿಶೇಷಣಮ್ । ಏಕಕರ್ತೃಕತ್ವಾತ್ ಸೂತ್ರಾಣಾಂ ತಯೋಶ್ಚ ಗ್ರಂಥಯೋರೈಕಾರ್ಥ್ಯಮಿತಿ ಭಾವಃ । ಉಕ್ತಮೇವನಿಮಿತ್ತಂ ವಿಶದಯತಿ **–ಸೂತ್ರೇತಿ** ॥ ಯದ್ಯಸ್ಮಾತ್ । ತಸ್ಮಾದತಿ ಮಂಗಲಮ್ । ಪೂರ್ವೋಕ್ತಂ ಸರ್ವಂ ಪ್ರಮೇಯಂ ಪರಮಮಂಗಲಮಿತ್ಯರ್ಥಃ । ನ ಕೇವಲಂ ಯುಕ್ತಿಚರ್ಚಾಮಾತ್ರರೂಪಮಿದಂ ಕಿಂತು ಬ್ರಹ್ಮಮೀಮಾಂಸಾರೂಪತ್ವಾದ್ವಕ್ತೃಣಾಂ ಶ್ರೋತೃಣಾಂ ಚ ಸಕಲಪುರುಷಾರ್ಥ ಸಾಧಕಮಪೀತಿ ಭಾವಃ ॥ ೨೨೩-೨೨೪ ॥

**ವಿವರಣೆ–** ಇತಿಹಾಸ ಪುರಾಣಗಳು ಮತ್ತು ಬ್ರಹ್ಮಸೂತ್ರಗಳು ಒಬ್ಬರೇ ವ್ಯಾಸರಿಂದ ರಚಿಸಲ್ಪಟ್ಟಿವೆ. ಆದ್ದರಿಂದ ಅವುಗಳಲ್ಲಿ ಎಂದೂ ವಿರೋಧವು ಬರುವುದಿಲ್ಲ. ವ್ಯಾಸರು ವೇದಗಳನ್ನು ರಚಿಸದಿದ್ದರೂ, ವೇದಗಳನ್ನು ವಿಸ್ತಾರಗೊಳಿಸಿ ವೇದಾರ್ಥ-ನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನೂ ರಚಿಸಿರುವುದರಿಂದ ವೇದದ ಅರ್ಥಕ್ಕೂ, ಬ್ರಹ್ಮಸೂತ್ರಗಳ ಅರ್ಥಕ್ಕೂ ವಿರೋಧವಿಲ್ಲ. ಆದ್ದರಿಂದ ವೇದದ ಅರ್ಥಕ್ಕೂ, ಬ್ರಹ್ಮಸೂತ್ರಗಳ ಅರ್ಥಕ್ಕೂ ಮತ್ತು ಇತಿಹಾಸ ಪುರಾಣಗಳ ಅರ್ಥಕ್ಕೂ ವಿರೋಧವಿಲ್ಲವಾದ್ದರಿಂದ ಸೂತ್ರಾನುಸಾರಿಯಾದ ಎಲ್ಲವನ್ನೂ ಶಾಸ್ತ್ರವೆಂದೇ ಅಂಗೀಕರಿಸಬೇಕು. ಈ ಚರ್ಚೆಯನ್ನು ಕೇವಲ ಯುಕ್ತಿಯ ಮೇಲಿನ ಅಭಿರುಚಿಯಿಂದ ಮಾಡಿರುವುದಷ್ಟೇ ಅಲ್ಲ, ಆದರೆ ಇದು ಉಪಾಸಕರಿಗೆ ಸಕಲಾನಿಷ್ಟಗಳನ್ನು ನಿವಾರಣೆ ಮಾಡಿ, ಸಕಲೇಷ್ಟಗಳನ್ನು ಪ್ರದಾನ ಮಾಡುವ ಪರಮ ಮಂಗಳಪ್ರದವಾದುದು ಎಂದೂ ಅಭಿಪ್ರಾಯ. ಯಥಾರ್ಥಜ್ಞಾನವನ್ನು ಉಂಟು ಮಾಡುವುದರಿಂದಲೇ ಜೀವೇಶಭೇದಸಮರ್ಥನೆಯು ಬ್ರಹ್ಮವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಬ್ರಹ್ಮವಿದ್ಯೆ ಎಲ್ಲವೂ ಪರಮ ಮಂಗಲವಾದುದು ಎಂದು ಅಭಿಪ್ರಾಯ.

ಸ್ವಸ್ಮಿನ್ನಧ್ಯಾತ್ಮಸಂಬಂಧಭೂಯಸ್ತ್ವಾದೇವ ಕೇವಲಂ ।
ಪ್ರಾಣೋಹಮಿತಿ ಶಕ್ರೇಣ ಪ್ರೋಕ್ತಂ ತತ್ ಪ್ರಾಣತಾಸ್ಯ ನ ॥ ೨೨೫ ॥

**ಅರ್ಥ–** ಸ್ವಸ್ಮಿನ್= ತನ್ನಲ್ಲಿ, ಅಧ್ಯಾತ್ಮಸಂಬಂಧಭೂಯಸ್ತ್ವಾದೇವ= ಸರ್ವೋತ್ತಮನಾದ ಪ್ರಾಣನಾಮಕ ಪರಮಾತ್ಮನ ಸಂಬಂಧಾತಿಶಯವಿರುವ ಕಾರಣದಿಂದಲೇ, ಕೇವಲಂ= ಕೇವಲವಾಗಿ, ಪ್ರಾಣೋಹಮಿತಿ= ನಾನು ಪ್ರಾಣನೆಂದು, ಶಕ್ರೇಣ= ಇಂದ್ರನಿಂದ, ಪ್ರೋಕ್ತಂ= ಹೇಳಲ್ಪಟ್ಟಿದೆ, ತತ್= ಆದ್ದರಿಂದ, ಅಸ್ಯ= ಇಂದ್ರನಿಗೆ, ಪ್ರಾಣತಾ= ಪ್ರಾಣನಾಮಕನಾದ ಹರಿಯ ಅಭೇದವು, ನ= ಇಲ್ಲ.

**ಅನುವಾದ–** ತನ್ನಲ್ಲಿ ಸರ್ವೋತ್ತಮನಾದ ಪ್ರಾಣನಾಮಕನಾದ ನಾರಾಯಣನ ಸಂಬಂಧವಿರುವುದರಿಂದಲೇ ಇಂದ್ರನು ವಿಶ್ವಾಮಿತ್ರನನ್ನು ಕುರಿತು ನಾನು ಪ್ರಾಣ ಎಂದು ಹೇಳಿದ್ದಾನೆ. ಆದ್ದರಿಂದ ಈ ಇಂದ್ರನಿಗೆ ಪ್ರಾಣತ್ವವು ಇಲ್ಲ.

**ಭಾವವಿಲಾಸಿನೀ–** ಇದಾನೀಮದ್ವೈತವಾಕ್ಯಾನಾಂ ನ ಯಥಾಶ್ರುತಾದ್ವೈತೇ ತಾತ್ಪರ್ಯಮ್ । ಕಿಂತು ಲಕ್ಷಣಯೋಪಚಾರೇಣ ವಾ ಬ್ರಹ್ಮಸಂಬಂಧ ಸಾದೃಶ್ಯಾದಾವೇವ ತಾತ್ಪರ್ಯಮಿತ್ಯಪಿ ಸೂತ್ರ ಏವ ನಿರೂಪಿತಮತಃ ಪರಸ್ಯಮೂಕೀಭಾವ ಏವೇತಿ ಭಾವೇನ ತತ್‌ಸೂತ್ರಪ್ರವೃತ್ತಿಪ್ರಕಾರಂ ಲೇಶತೋ ದರ್ಶಯತಿ –ಸ್ವಸ್ಮಿನ್ನಿತ್ಯಾದಿನಾ ॥ ಸೂತ್ರೇ ನವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮ ಸಂಬಂಧ ಭೂಮಾಹ್ಯಸ್ಮಿನ್ನಿತಿ ಸೂತ್ರೇ । ಯಸ್ಮಾತ್ತಸ್ಮಿನ್ನಿಂದ್ರೇ ಅಧ್ಯಾತ್ಮಸಂಬಂಧಭೂಯಸ್ತ್ವಾದೇವ ಸ್ವಸ್ಮಾದಪ್ಯಧಿಕಸ್ಯಾತ್ಮನಃ ಪ್ರಾಣನಾಮಕಪರಮಾತ್ಮನಸ್ಸಂಬಂಧ ಬಾಹುಲ್ಯಾದೇವ ಶಕ್ರೇಣ ಪ್ರಾಣೋಹಮಿತಿಪ್ರೋಕ್ತಂ ಪ್ರಾಣೋವಾ ಅಹಮಸ್ಮ್ಯೃಷ ಇತಿ ಶ್ರುತಾವುಕ್ತಮ್ । ನತು ಪ್ರಾಣೈಕ್ಯಾತ್ । ತತ್ತಸ್ಮಾತ್ಕಾರಣಾತ್ ಅಸ್ಯಶಕ್ರಸ್ಯ ಪ್ರಾಣತಾ ಪ್ರಾಣಶಬ್ದವಾಚ್ಯಪರಮಾತ್ಮತಾ । ತದೈಕ್ಯಮಿತಿ ಯಾವತ್ । ನೇತಿ ಐಕ್ಯವಚಸಾಂ ಅಹಮಸ್ಮಿ ಬ್ರಹ್ಮಾಹಮಸ್ಮೀತ್ಯಾದ್ಯಾಕಾರಕೈಕ್ಯವಚಸಾಂ ಲಕ್ಷಣಾಗತಿರೀರಿತಾ ಸಮಾನನ್ಯಾಯತ್ವೇನಕಥಿತಾ । ಅಯಮಾಶಯಃ । ವಕ್ತುಃ ಬೃಹತೀ ಸಹಸ್ರವಕ್ತುರ್ವಿಶ್ವಾಮಿತ್ರಸ್ಯ ವಿಶ್ವಾಮಿತ್ರಂ ಪ್ರತೀತಿಯಾವತ್ । ಆತ್ಮೋಪದೇಶಾತ್ ಇಂದ್ರೇಣಾ-ತ್ಮನಃ ಸ್ವಸ್ಯೋಪದೇಶಾತ್ ಪ್ರಾಣೋವಾ ಅಹಮಸ್ಮೀತಿ ಪ್ರಾಣತಯೋಪದೇಶಾತ್ । ನ ಪ್ರಾಣೋಬ್ರಹ್ಮನೇತಿ ಚೇನ್ನ ಪೂರ್ವಪಕ್ಷೋನೈವೇತ್ಯರ್ಥಃ । ಪೂರ್ವಪಕ್ಷನಞೋತ್ರಾಪಿ ಆವೃತ್ತ್ಯಾಯೋಜನಾ । ಹಿ ಯಸ್ಮಾದಸ್ಮಿನ್ನಿಂದ್ರೇऽಧ್ಯಾತ್ಮಸಂಬಂಧಭೂಮಾ ಅಸ್ಮಾದಪ್ಯಧಿಕಸ್ಯಾತ್ಮನಃ ಪ್ರಾಣನಾಮಕಪರಮಾತ್ಮನಃ ಸಂಬಂಧಭೂಮಾ ಸಂಬಂಧಬಾಹುಲ್ಯಂ ತಸ್ಮಾನ್ನೇತಿ ನ ಞಾವೃತ್ತ್ಯಾ ಯೋಜನಾಯಾಂ ಯಥಾಬಹ್ವಗ್ನಿಸಂಬಂಧೇನಾಗ್ನಿವದ್ರಕ್ತೇ ತಪ್ತಾಯಃ ಪಿಂಡೇऽಯಮಗ್ನಿರಿತ್ಯಗ್ನಿ ಶಬ್ದಪ್ರಯೋಗಃ । ತಥಾಪ್ರಾಣನಾಮಕಪರಮಾತ್ಮನಃ ಸಂಬಂಧಸ್ಯ ಸ್ವಸ್ಮಿನ್ಬಹುಲತ್ವಾದೇವೇಂದ್ರಃ ಪ್ರಾಣೋಹಮಿತಿ ಬ್ರಹ್ಮವಾಚಕಪ್ರಾಣಶಬ್ದಂ ಸ್ವಾತ್ಮನಿ ಪ್ರತ್ಯುಕ್ತವಾನ್ । ನತು ಸ್ವಸ್ಯೈವ ಪ್ರಾಣತ್ವಾತ್ । ಅತೋಽಗ್ನೇರೇವಾಗ್ನಿಶಬ್ದವಾಚ್ಯತ್ವವತ್ಪ್ರಾಣಶಬ್ದವಾಚ್ಯತಾಪಿ ಬ್ರಹ್ಮಣ ಏವ ನೇಂದ್ರಸ್ಯೇತಿ ಸೂತ್ರತಾತ್ಪರ್ಯಾರ್ಥೋऽ ಲಭ್ಯತೇ । ಏವಂಚ ಬ್ರಹ್ಮವಾಚಕಪದಾನಾಂ ಬ್ರಹ್ಮಸನ್ನಿಧಾನಾಖ್ಯಸಂಬಂಧವಿಶೇಷೇಣೈವ ಜೀವೇಷು ಲಕ್ಷಣಯಾ ತತ್ರ ತತ್ರ ಪ್ರಯೋಗೋ ನ ತು ಬ್ರಹ್ಮೈಕ್ಯಾದಿತಿ ಪ್ರಾಣೋಹಮಸ್ಮೀತ್ಯಾದಿ ವಾಕ್ಯಾನಾಂ ಲಕ್ಷಣಾಗತಿಃ ಕಥಂನೇರಿತಾ ।

ಮುಖ್ಯತೋಽನ್ಯವಾಚಕಶಬ್ದಾನಾಂ ಮುಖ್ಯಾರ್ಥ ಸಂಬಂಧೇನೈವ ನಿಮಿತ್ತೇನ ಯಾನ್ಯತ್ರ ವೃತ್ತಿಸ್ಸೈವಹಿ ಲಕ್ಷಣೇತಿ ಭಾವಃ ॥ ೨೨೫ ॥

**ವಿವರಣೆ–** ಇನ್ನು ಅದ್ವೈತವಾಕ್ಯಗಳಿಗೆ ಮೇಲೆ ತೋರುವ ಅದ್ವೈತದಲ್ಲಿ ತಾತ್ಪರ್ಯವಿಲ್ಲ. ಲಕ್ಷಣಾವೃತ್ತಿಯಿಂದಾಗಲೀ ಅಥವಾ ಉಪಚಾರದಿಂದಾಗಲೀ ಬ್ರಹ್ಮಸಂಬಂಧ ಅಥವಾ ಬ್ರಹ್ಮಸಾದೃಶ್ಯವನ್ನು ಹೇಳುವುದರಲ್ಲಿಯೇ ತಾತ್ಪರ್ಯ ಎಂದು ಸೂತ್ರದಿಂದಲೇ ಸೂಚಿತವಾಗುತ್ತದೆ ಎಂದು ಸಮರ್ಥನೆ ಮಾಡುತ್ತಾರೆ. ಬೃಹತೀಸಹಸ್ರವನ್ನು ಶಂಸನೆ ಮಾಡುತ್ತಿರುವ ವಿಶ್ವಾಮಿತ್ರನನ್ನು ಕುರಿತು ಇಂದ್ರನು ಪ್ರಾಣೋವಾ ಅಹಮಸ್ಮಿ ಋಷೇ ಎಂದು ಉಪದೇಶ ಮಾಡುತ್ತಾನೆ. ಮೇಲೆ ನೋಡಿದರೆ ಈ ವಾಕ್ಯಕ್ಕೆ ನಾನೇ ಪ್ರಾಣನಾಮಕ ಪರಮಾತ್ಮ ಎಂಬ ಅರ್ಥವು ತೋರುತ್ತದೆ. ಆದರೆ ಸೂತ್ರಕಾರರು ಅಧ್ಯಾತ್ಮ ಸಂಬಂಧ ಭೂಮಾಹ್ಯಸ್ಮಿನ್ ಎಂದು ಹೇಳಿ, ಇಂದ್ರನು ಪ್ರಾಣನಲ್ಲ, ಪ್ರಾಣನಾಮಕ ನಾರಾಯಣನ ಅತಿಶಯವಾದ ಸನ್ನಿಧಾನವಿರುವ ಕಾರಣದಿಂದಲೇ ಇಂದ್ರನು ನಾನು ಪ್ರಾಣನೆಂದು ಹೇಳಿದ್ದಾನೆ ಎಂದು ನಿರ್ಣಯಿಸಿದ್ದಾರೆ. ಹೇಗೆ ಕಾದ ಕಬ್ಬಿಣದಲ್ಲಿ ಅಗ್ನಿಯು ಕಾಣದಿದ್ದರೂ ಅಗ್ನಿಯ ಸಂಬಂಧವಿರುವುದರಿಂದ ಕಬ್ಬಿಣವು ಸುಡುತ್ತದೆ ಎಂದು ಹೇಳುತ್ತೇವೋ, ಅದರಂತೆ ಪರಮಾತ್ಮನ ಸಂಬಂಧಾತಿಶಯದಿಂದ ಪರಮಾತ್ಮನು ಕಾಣದಿದ್ದರೂ ಇಂದ್ರನು ನಾನು ಪ್ರಾಣನೆಂದು ಹೇಳುತ್ತಾನೆ. ಅದರಂತೆ ಬ್ರಹ್ಮವಾಚಕಪದಗಳಿಗೆ ಬ್ರಹ್ಮಸನ್ನಿಧಾನರೂಪವಾದ ಸನ್ನಿಧಾನವಿಶೇಷದಿಂದಲೇ ಜೀವನಲ್ಲಿ ಲಕ್ಷಣಾ ಎಂಬುದು ಸಿದ್ಧವಾಗುತ್ತದೆ. ಅದರಂತೆ ಸೋಹಮಸ್ಮಿ, ಬ್ರಹ್ಮಾಹಮಸ್ಮಿ ಮುಂತಾದ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವಂತೆ ತೋರುವ ವೇದವಾಕ್ಯಗಳೂ ಸಹ ಲಕ್ಷಣಾವೃತ್ತಿಯಿಂದಲೇ ಪ್ರವೃತ್ತವಾಗುತ್ತವೆ ಎಂಬ ಸೂಚನೆಯನ್ನೂ ಇದೇ ಸೂತ್ರದಲ್ಲಿ ನೀಡಿದ್ದಾರೆ. ವೇದವನ್ನು ಬಿಟ್ಟು ಬೇರೆ ಕಡೆ ಇರುವ ಅಂತಹ ಪೌರುಷೇಯ ವಾಕ್ಯಗಳು ಅಪ್ರಮಾಣವೇ ಆಗುತ್ತವೆ. ವೇದವು ಅಪೌರುಷೇಯವಾದ್ದರಿಂದ ಅಲ್ಲಿ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷಣಾವೃತ್ತಿಯನ್ನು ಮಾಡಿ ಅಬಾಧಿತವಾದ ಅರ್ಥವನ್ನು ಹೇಳಬೇಕು ಎಂದು ಅಭಿಪ್ರಾಯ.

**ಇತ್ಯೈಕ್ಯವಚಸಾಂ ಸೂತ್ರೇ ಲಕ್ಷಣಾಗತಿರೀರಿತಾ ।**
**ಸೋಽಹಂ ಬ್ರಹ್ಮಾಹಮಿತ್ಯಾದಿರೀತ್ಯಾ ಶಾಖಾಪ್ರಲಂಬಿನಾಂ ॥ ೨೨೬ ॥**

**ಅರ್ಥ–** ಇತಿ= ಈ ರೀತಿಯಾಗಿ ಹೇಳಿ, ಸೋಽಹಂ ಬ್ರಹ್ಮಾಹಮಿತ್ಯಾದಿ ರೀತ್ಯಾ= ಸೋಹಮಸ್ಮಿ, ಬ್ರಹ್ಮಾಹಮಸ್ಮಿ ಇತ್ಯಾದಿ ರೀತಿಯಲ್ಲಿ, ಶಾಖಾಪ್ರಲಂಬಿನಾಂ= ಬೇರೆ ಬೇರೆ ಶಾಖೆಗಳಲ್ಲಿರುವ, ಐಕ್ಯವಚಸಾಂ= ಐಕ್ಯವಾಕ್ಯಗಳಿಗೆ, ಸೂತ್ರೇ= ನ ವಕ್ತುರಾತ್ಮೋಪದೇಶಾತ್ ಎಂಬ ಸೂತ್ರದಲ್ಲಿ, ಲಕ್ಷಣಾಗತಿಃ= ಲಕ್ಷಣಾವೃತ್ತಿಯು ಈ ರೀತಿ ಹೇಳಲ್ಪಟ್ಟಿದೆ.

**ಅನುವಾದ–** ತನ್ನಲ್ಲಿ ಕೇವಲ ಸರ್ವೋತ್ತಮನಾದ ನಾರಾಯಣ ಸನ್ನಿಧಾನ ವಿಶೇಷವಾದ ಸಂಬಂಧವಿರುವುದರಿಂದಲೇ ಇಂದ್ರನು ವಿಶ್ವಾಮಿತ್ರನನ್ನು ಕುರಿತು ನಾನು ಪ್ರಾಣ ಎಂದು ಹೇಳಿದ್ದಾನೆ. ಆದ್ದರಿಂದ ಇಂದ್ರನಿಗೆ ಪ್ರಾಣತ್ವವು ಎಂದರೆ ನಾರಾಯಣನ ಅಭೇದವು ಇಲ್ಲ. ಈ ರೀತಿಯಲ್ಲಿ ಸೋಽಹಮಸ್ಮಿ, ಬ್ರಹ್ಮಾಹಮಸ್ಮಿ ಮುಂತಾದ ರೀತಿಯಲ್ಲಿ ಬೇರೆ ಬೇರೆ ಶಾಖೆಗಳಲ್ಲಿರುವ ಐಕ್ಯವಾಕ್ಯಗಳಿಗೆ ಈ ಸೂತ್ರದಲ್ಲಿ (ನವಕ್ತುರಾತ್ಮೋಪದೇಶಾತ್) ಎಂಬ ಸೂತ್ರದಲ್ಲಿ ಲಕ್ಷಣಾವೃತ್ತಿಯೇ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಕೀದೃಶಾನಿ ತಾನ್ಯೈಕ್ಯವಾಕ್ಯಾನಿ ಕುತ್ರತ್ಯಾನಿಚೇತ್ಯತ ಆಹ – **ಸೋಹಮಿತಿ** ॥ ಸೋಽಹಮಸ್ಮಿಬ್ರಹ್ಮಾಹಮಸ್ಮೀತ್ಯಾದಿರಿತ್ಯಾದೀನಿ । ಆದಿಪದೇನ ಸ ಏವಾಹಮಸ್ಮಿ ಬ್ರಹ್ಮೈವಾಹ-ಮಸ್ಮೀತ್ಯಾದೀನಾಂ ಗ್ರಹಣಮ್ । ಶಾಖಾಪ್ರಲಂಬಿನಾಂ ನಾನಾಶಾಖಾಸು ವಿದ್ಯಮಾನಾ-ನಾಮಿತ್ಯರ್ಥಃ । ಸಕಲಶಾಖಾಸು ವಿದ್ಯಮಾನಾನಾಂ ಪ್ರಾಣೋಹಮಸ್ಮೀತ್ಯಾದಿ ವಾಕ್ಯಸದೃಶ-ವಾಕ್ಯಾನಾಂ ಸರ್ವೇಷಾಂ ಲಕ್ಷಣೈವಗತಿರಿತಿ ಸೂತ್ರಾಭಿಪ್ರಾಯ ಇತಿ ಭಾವಃ । ಶಾಖಾ-ಪ್ರಲಂಬಿನಾಮಿತಿ ವದತಾ ಲೌಕಿಕೈರೇವಮುಕ್ತಂ ಚೇತ್ ಅಪ್ರಾಮಾಣ್ಯಮೇವ ವಕ್ತವ್ಯಮ್ । ಅಪೌರುಷೇಯೇ ತು ವೇದೇ ತದಯೋಗಾನ್ಮುಖ್ಯಾರ್ಥಸ್ಯ ಚ ಬಾಧಾದನ್ಯೈವಗತಿರಿತಿ ಸೂಚಿತಮ್ ॥ ೨೨೬ ॥

ವಕ್ತುರಾತ್ಮೋಪದೇಶೇಪಿ ಶಕ್ರಸ್ಯಾತ್ಮಾ ಹರಿರ್ನ ಚೇತ್ ।
ಆತ್ಮೇತಿ ತೂಪಗಚ್ಛಂತೀತ್ಯತ್ರ ಜೀವಾತ್ಮನಃ ಕಥಂ ।
ಹರಿಣೈಕ್ಯಂ ವದೇದ್ ವ್ಯಾಸೋ ನ ಹಿ ತೇ ಶಕ್ರತೋಽಧಿಕಾಃ॥ ೨೨೭ ॥

**ಅರ್ಥ–** ವಕ್ತುಃ= ಬೃಹತೀಸಹಸ್ರವನ್ನು ಹೇಳುವ ವಿಶ್ವಾಮಿತ್ರನಿಗೆ, ಆತ್ಮೋಪದೇಶೇಪಿ= ನಾನು ಪ್ರಾಣ ಎಂದು ಉಪದೇಶ ಮಾಡಿದರೂ, ಶಕ್ರಸ್ಯ= ಇಂದ್ರನಿಗೆ, ಆತ್ಮಾ= ಅಭಿನ್ನನಾದವನು ಅಥವಾ ಇಂದ್ರಸ್ವರೂಪನಾದವನು, ಹರಿಃ ನ ಚೇತ್= ಹರಿಯು ಆಗದಿದ್ದರೆ, ಆತ್ಮೇತಿತೂಪಗಚ್ಛಂತೀತ್ಯತ್ರ= ಆತ್ಮೇತಿತೂಪಗಚ್ಛಂತಿಗ್ರಾಹಯಂತಿಚ ಎಂಬ ಸೂತ್ರದಲ್ಲಿ, ವ್ಯಾಸಃ= ವೇದವ್ಯಾಸರು, ಜೀವಾತ್ಮನಃ= ಜೀವಾತ್ಮನಿಗೆ, ಹರಿಣೈಕ್ಯಂ= ಹರಿಯಿಂದ ಐಕ್ಯವನ್ನು, ಕಥಂ ವದೇತ್= ಹೇಗೆ ಹೇಳುತ್ತಾರೆ, ತೇ= ಆ ಜೀವರು, ಶಕ್ರತಃ= ಇಂದ್ರನಿಗಿಂತಲೂ, ಅಧಿಕಾ ನ ಹಿ= ಅಧಿಕರಲ್ಲವಷ್ಟೇ?

**ಅನುವಾದ–** ಇಂದ್ರನು ನಾನೇ ಪ್ರಾಣ ಎಂದು ಹೇಳಿದರೂ ಸೂತ್ರಕಾರರು ಅಧ್ಯಾತ್ಮಸಂಬಂಧಾತಿಶಯವನ್ನು ಹೇಳಿ ಇಂದ್ರನು ಪ್ರಾಣನಲ್ಲ ಎಂದು ಸಮರ್ಥನೆ ಮಾಡಿದ ಮೇಲೆ ಉಪಾಸನಾ ಪಾದದ ಆತ್ಮೇತಿತೂಪಗಚ್ಛಂತಿ ಗ್ರಾಹ್ಯಂತಿ ಚ ಎಂಬ ಸೂತ್ರದಲ್ಲಿ ಜೀವಾತ್ಮರಿಗೆ ವ್ಯಾಸರು ಹೇಗೆ ಐಕ್ಯವನ್ನು ಹೇಳುತ್ತಾರೆ? ಆ ಜೀವರು ಇಂದ್ರನಿಗಿಂತಲೂ ಅಧಿಕರಲ್ಲವಷ್ಟೇ.

**ಭಾವವಿಲಾಸಿನೀ**– ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚೇತಿ ಸೂತ್ರೇ ಬ್ರಹ್ಮೇತಿ ಪದಮಧ್ಯಾಹೃತ್ಯ ಬ್ರಹ್ಮ ಆತ್ಮಾऽಹಮಿತ್ಯುಪಗಚ್ಛಂತಿ ಜಾನಂತೀತಿ ಸೂತ್ರಾರ್ಥಂ ಮಾಯಾವಾದಿನೋ ವದಂತಿ । ಈದೃಗಪಿ ವೇದವಾಕ್ಯಮಸ್ತಿ ಚೇತ್ಪ್ರಾಣೋಽಹಮಿತಿ ವಾಕ್ಯಸದೃಶತ್ವಾದುಕ್ತೈವಗತಿಃ । ಮಾನುಷವಾಕ್ಯಂ ಚೇತ್ಸೂತ್ರಕೃತೋಽಭಿಪ್ರಾಯವಿರುದ್ಧಮಿತ್ಯಾಹ – ವಕ್ತುರಿತಿ । ವಕ್ತುರ್ವಿಶ್ವಾಮಿತ್ರಸ್ಯ ಆತ್ಮೋಪದೇಶೇ । ಅಹಮೇವಪ್ರಾಣ ಇತೀಂದ್ರೇಣಸ್ವಸ್ಯೈವೋಪದೇಶೇಪಿ ಶಕ್ರಸ್ಯಽಽತ್ಮಾಸ್ವರೂಪಮೇವ ಹರಿರಿತಿ ನ ಚೇತ್ ಉಕ್ತರೀತ್ಯಾಸೂತ್ರಕಾರಾಭಿಪ್ರಾಯೋ ನ ಚೇತ್ । ಅಥವಾಶಕ್ರಸ್ಯಾತ್ಮಾಸ್ವರೂಪಮೇವ ಹರಿರ್ನಾರಾಯಣಃ ನ ಚೇತ್ ಉಕ್ತಸೂತ್ರಾರ್ಥ-ಪರ್ಯಾಲೋಚನಯಾ ನ ಭವತಿ ಚೇತ್ । ಆತ್ಮೇತಿತೂಪಗಚ್ಛಂತೀತ್ಯತ್ರಾಸ್ಮಿನ್ ಸೂತ್ರೇ । ಜೀವಾತ್ಮನಃ । ಜಾತ್ಯೇಕವಚನಮ್ । ಜೀವಾನಾಮಿತ್ಯರ್ಥಃ । ಹರಿಣೈಕ್ಯಂ ವ್ಯಾಸಃ ಕಥಂ ವದೇತ್ । ನ ಕಥಂಚಿತ್ । ತತ್ರ ಹೇತುಮಾಹ – ನಹೀತಿ ॥ ತೇ ಉಪಗಚ್ಛಂತೀತ್ಯತ್ರ ಕರ್ತೃತಯಾಭಿಪ್ರೇತಾ ಜೀವಾಃ ಶಕ್ರತ ಇಂದ್ರಾದಧಿಕಾ ನಹಿ । ಸಕಲದೇವತಾಗ್ರೇಸರಸ್ಯೇಂದ್ರಸ್ಯ ಪ್ರಾಣೋಽಹಮಿತಿ ವಾಕ್ಯಂ ಪ್ರಾಣನಾಮಕಬ್ರಹ್ಮಸಂಬಂಧಾದೇವ ಪ್ರವೃತ್ತಂ ನತು ತದೈಕ್ಯಾದಿತಿ ಸೂತ್ರಮರ್ಯಾದಯೈವ ವದನ್ವ್ಯಾಸಸ್ತತೋಽಪ್ಯತ್ಯಂತಹೀನತರಾಣಾಂ ಜೀವಾನಾಂ ಸಾಕ್ಷಾದೈಕ್ಯಮೇವ ಕಥಂ ಸೂತ್ರಯೇತ್ । ಪೂರ್ವೋತ್ತರವಿರುದ್ಧಭಾಷ್ಯಭಾಷೀ ತ್ವಮೇವೋನ್ಮತ್ತೋ ಭವ । ಸರ್ವಜ್ಞಾಸ್ತುಸೂತ್ರಕಾರಾಃ ಸರ್ವಜ್ಞಾ ಏವ ಭವಂತ್ವಿತಿ ಭಾವಃ । ಉಪಲಕ್ಷಣಂ ಚೈತತ್ । ದಶದ್ವಾದಶಸೂತ್ರೈರ್ಮುಕ್ತೌಸಂಸಾರೇ ಚ ಭೇದಮೇವ ಸೂಚಯನ್ ವ್ಯಾಸಃ ಕಥಮತ್ರಾಭೇದಂ ಸೂತ್ರಯೇತ್ । ಉಪಾಸ್ಯೋಪಾಸಕ ಭೇದಮಂತರ್ಭಾವ್ಯೋ-ಪಾಸನಾಪಾದಂ ರಚಯಂಶ್ಚ ಕಥಂ ತದ್ವಿರುದ್ಧಮಭೇದಂ ವದೇದಿತ್ಯಪಿ ದ್ರಷ್ಟವ್ಯಮ್ ॥ ೨೨೭ ॥

**ವಿವರಣೆ**– ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಎಂಬುದು ಉಪಾಸನಾಪಾದದ ಒಂದು ಸೂತ್ರ. ಮಾಯಾವಾದಿಗಳು ಸೂತ್ರದಲ್ಲಿ ಬ್ರಹ್ಮ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಆತ್ಮಾಬ್ರಹ್ಮೇತಿ ಉಪಗಚ್ಛಂತಿ ತಾನು ಬ್ರಹ್ಮನೆಂದು ತಿಳಿಯುತ್ತಾರೆ ಎಂದು ಸೂತ್ರಾರ್ಥವನ್ನು ಹೇಳುತ್ತಾರೆ. ಅಂತಹ ವೇದವಾಕ್ಯವು ಯಾವುದೂ ಇಲ್ಲ. ಒಂದು ಪಕ್ಷ ಇದ್ದರೂ ಅದಕ್ಕೆ ಪ್ರಾಣೋಹಂ ಎಂಬ ವಾಕ್ಯವನ್ನು ಹೇಗೆ ಅರ್ಥ ಮಾಡಿದೆವೋ ಆ ರೀತಿಯಲ್ಲಿಯೇ ಅರ್ಥವನ್ನು ಮಾಡಬೇಕು. ನಾನೇ ಪ್ರಾಣ ಎಂದು ಇಂದ್ರನು ಹೇಳಿದರೂ ಸೂತ್ರಕಾರರು ಇಂದ್ರ ಮತ್ತು ಪ್ರಾಣರ ಅಭೇದವನ್ನು ಒಪ್ಪದೇ ಪ್ರಾಣನ ಸಂಬಂಧಾತಿಶಯದಿಂದಲೇ ಈ ಪ್ರಯೋಗವಿದೆ ಎಂದು ಇಲ್ಲಿ ಸಮರ್ಥನೆ ಮಾಡಿದ ಮೇಲೆ ಆತ್ಮೇತಿತೂಪಗಚ್ಛಂತಿ ಸೂತ್ರದಲ್ಲಿ ಜೀವರನ್ನೇ ಬ್ರಹ್ಮನೆಂದು ಹೇಗೆ ಹೇಳುತ್ತಾರೆ? ದೇವಶ್ರೇಷ್ಠನಾದ ಇಂದ್ರನೇ ಬ್ರಹ್ಮನಲ್ಲವೆಂದು ಹೇಳಿದ ಮೇಲೆ ಸಾಮಾನ್ಯಜೀವರು ಹೇಗೆ ಬ್ರಹ್ಮರಾಗುತ್ತಾರೆ? ಹೀಗೆ ಸೂತ್ರಮರ್ಯಾದೆಯಿಂದಲೇ ಜೀವೇಶ್ವರ ಭೇದವನ್ನು ಸಮರ್ಥನೆ ಮಾಡಿದ್ದಾರೆ. ಪೂರ್ವೋತ್ತರವಿರುದ್ಧಭಾಷಣವನ್ನು ಮಾಡುವ ನೀನು ಬೇಕಾದರೆ ಉನ್ಮತ್ತನಾಗಿರು, ಆದರೆ ಸರ್ವಜ್ಞರಾದ ಸೂತ್ರಕಾರರು ನ

ವಕ್ತುರಾತ್ಮೋಪದೇಶಾತ್ ಎಂಬ ಸೂತ್ರಕ್ಕೂ ಆತ್ಮೇತಿತೂಪಗಚ್ಛಂತಿ ಸೂತ್ರಕ್ಕೂ ವಿರೋಧ ಬರುವಂತೆ ಎಂದೂ ಸೂತ್ರವನ್ನು ರಚನೆ ಮಾಡಿಲ್ಲ. ಅದೂ ಅಲ್ಲದೆ, ಆತ್ಮೇತಿತೂಪಗಚ್ಛಂತಿ ಸೂತ್ರವು ಉಪಾಸನಾ ಪಾದದಲ್ಲಿದೆ. ಅಲ್ಲಿ ಉಪಾಸಕನಾದ ಜೀವನಿಗೂ, ಉಪಾಸ್ಯನಾದ ನಾರಾಯಣನಿಗೂ ಭೇದವೇ ಪ್ರತಿಯೊಂದು ಸೂತ್ರದಲ್ಲಿಯೂ ಸೂಚಿತವಾಗುತ್ತದೆ. ಹೀಗಿರುವಾಗ ಅಲ್ಲಿ ವ್ಯಾಸರು ಐಕ್ಯವನ್ನು ಹೇಳುವುದು ಅಸಂಭಾವಿತ. ಐಕ್ಯವನ್ನು ಹೇಳುವ ನಿನ್ನ ಭಾಷ್ಯವೂ ಸಹ ಉನ್ಮತ್ತಪ್ರಲಾಪರೂಪವಾದುದು ಎಂದು ಅಭಿಪ್ರಾಯ.

**ಈಷದಧ್ಯಾತ್ಮಸಂಬಂಧಾತ್ ತಾದೃಗ್ವಾಕ್ಯಪ್ರವರ್ತನಂ ।**
**ಅಸೂಚಯದ್ಧಿ ಸೂತ್ರೇಽಸ್ಮಿಂಸ್ತೇನೈಕ್ಯಂ ನ ಕ್ವಚಿತ್ ತವ ॥ ೨೨೮ ॥**

**ಅರ್ಥ–** ತಾದೃಗ್ವಾಕ್ಯಪ್ರವರ್ತನಂ= ಸೋಹಮಸ್ಮಿ, ಬ್ರಹ್ಮಾಹಮಸ್ಮಿ ಮುಂತಾದ ವಾಕ್ಯಗಳ ಪ್ರವೃತ್ತಿಯು, ಈಶದಧ್ಯಾತ್ಮಸಂಬಂಧಾತ್= ಸರ್ವೋತ್ತಮನಾದ ಹರಿಯ ಅಲ್ಪ ಸನ್ನಿಧಾನರೂಪವಾದ ಸಂಬಂಧದಿಂದ, ಉಂಟಾಗುವುದೆಂದು, ಅಸ್ಮಿನ್ ಸೂತ್ರೇ= ಈ ಸೂತ್ರದಲ್ಲಿ ಅಸೂಚಯದ್ ಹಿ= ಸೂಚಿಸಿದ್ದಾರಷ್ಟೇ, ತೇನ= ಆ ಕಾರಣದಿಂದ, ತವ= ನಿನಗೆ ಅಭಿಪ್ರೇತವಾದ, ಐಕ್ಯಂ= ಐಕ್ಯವು, ಕ್ವಚಿದ್ ನ= ಎಲ್ಲಿಯೂ ಸಿದ್ಧಿಸುವುದಿಲ್ಲ.

**ಅನುವಾದ–** ಬ್ರಹ್ಮಾಹಮಸ್ಮಿ, ಸ ಏವಾಹಮಸ್ಮಿ ಮುಂತಾದ ವಾಕ್ಯಗಳು ಪರಮಾತ್ಮನ ಅಲ್ಪಸಂಬಂಧದಿಂದ ಪ್ರವೃತ್ತವಾಗುತ್ತವೆ ಎಂಬುದನ್ನು ವ್ಯಾಸರು ಈ ಸೂತ್ರದಲ್ಲಿಯೇ ಸೂಚಿಸಿದ್ದಾರೆ. ಆದ್ದರಿಂದ ನಿನಗೆ ಅಭಿಮತವಾದ ಐಕ್ಯವು ಎಂದೂ ಸಿದ್ಧಿಸುವುದಿಲ್ಲ.

**ಭಾವವಿಲಾಸಿನೀ–** ಭವತುಪರಕೀಯಭಾಷ್ಯಮುನ್ಮತ್ತಪ್ರಲಪಿತಮ್ । ವೇದ ಏವಕ್ವಚಿತ್ ಬ್ರಹ್ಮಾಹಮಸ್ಮೀತಿ ಜೀವಾನಾಂ ವಚನಮಸ್ತಿ ಚೇತ್ತಸ್ಯಕಾಗತಿರಿತಿ ಚೇತ್ ಸಾಪ್ಯಸ್ಮಿನ್ನೇವ ಸೂತ್ರೇ ಸೂಚಿತೇತ್ಯಾಹ – **ಈಷದಿತಿ** ॥ ಈಷದಧ್ಯಾತ್ಮಸಂಬಂಧಾತ್ ಇಂದ್ರಾದಪಿ ಹೀನತರಜೀವೇಷು ಬಹ್ವಧ್ಯಾತ್ಮಸಂಬಂಧಾಯೋಗಾದೀಷದಿತ್ಯುಕ್ತಮ್ । ಅಸ್ಮಿನ್‌ಸೂತ್ರೇ ಅಧ್ಯಾತ್ಮಸಂಬಂಧಭೂಮೇತಿ ಸೂತ್ರೇ । ಮಹತಿಮಹಾನಿತಿವದತಾಽಲ್ಪೇಽಲ್ಪ ಇತ್ಯಸ್ಯಾಪ್ಯುಕ್ತಪ್ರಾಯತ್ವಾದಸೂಚಯದಿ-ತ್ಯುಕ್ತಮ್ । ಇಂದ್ರಸದೃಶದೇವಾಂತರವಾಕ್ಯಾನಾಂ ಗತಿಃ ಪ್ರಾಗೇವೋಕ್ತಾ । ನೀಚ ಜೀವವಾಕ್ಯೇಷು ತು ವಿಶೇಷಾಂತರ ಪ್ರದರ್ಶನಾಯಪುನರ್ವಚನಮ್ ॥ ೨೨೮ ॥

**ವಿವರಣೆ–** ಪ್ರಾಣೋವಾ ಅಹಮಸ್ಮಿ ಎಂಬ ಇಂದ್ರನ ವಾಕ್ಯವು ಪರಮಾತ್ಮನ ವಿಶೇಷ ಸನ್ನಿಧಾನದಿಂದ ಪ್ರವೃತ್ತವಾಗಿದೆ ಎಂದು ಸೂತ್ರಕಾರರು ಹೇಳಿದ್ದಾರೆ. ಆದ್ದರಿಂದ ಉಳಿದ ಜೀವರು ಅನುಸಂಧಾನ ಮಾಡುವ ಸೋಹಮಸ್ಮಿ, ಬ್ರಹ್ಮಾಹಮಸ್ಮಿ ಎಂಬ ವಾಕ್ಯಗಳು ಜೀವರಲ್ಲಿ ಬ್ರಹ್ಮನ ಅಲ್ಪಸನ್ನಿಧಾನವಿರುವ ಪ್ರಯುಕ್ತ ಪ್ರವೃತ್ತವಾಗುತ್ತವೆ ಎಂದು ಈ ಸೂತ್ರದಿಂದಲೇ ಸೂಚಿಸಿದಂತಾಯಿತು. ಇಂದ್ರನಿಗೆ ಸದೃಶವಾದ ದೇವತೆಗಳಲ್ಲಿ ಇಂತಹ ಐಕ್ಯವಾಕ್ಯಗಳಿದ್ದರೆ ಅದನ್ನು ಇಂದ್ರನಲ್ಲಿರುವಂತೆಯೇ ಸಂಬಂಧವಿಶೇಷದಿಂದ

ಕೂಡಿಸಬೇಕು. ಉಳಿದ ಜೀವರ ವಿಷಯದಲ್ಲಿ ಇಂತಹ ಐಕ್ಯವಾಕ್ಯಗಳಿದ್ದರೆ ಅದನ್ನು ಅಲ್ಪಸಂಬಂಧದಿಂದ ಕೂಡಿಸಬೇಕು ಎಂಬುದು ಈ ಸೂತ್ರದಿಂದಲೇ ಸಿದ್ಧವಾಗುತ್ತದೆ.

**ಪರಮಾತ್ಮೇತಿ ತದ್ ಬ್ರಹ್ಮ ಜಾನಂತಿ ಜ್ಞಾಪಯಂತಿ ಚ ।**
**ಇತ್ಯರ್ಥೋ ಮೇ ಸ ಶಬ್ದೋ ಯತ್ ಸ್ವಭಾವೇ ಪರಮಾತ್ಮನಿ ॥ ೨೨೯ ॥**

**ಅರ್ಥ–** ಮೇ= ನನಗೆ, ತದ್ಬ್ರಹ್ಮ= ಆ ಬ್ರಹ್ಮನನ್ನು, ಪರಮಾತ್ಮೇತಿ= ಪರಮಾತ್ಮನೆಂದು, ಜಾನಂತಿ= ತಿಳಿಯುತ್ತಾರೆ, ಚ= ಮತ್ತು, ಜ್ಞಾಪಯಂತಿ= ಉಪದೇಶಿಸುತ್ತಾರೆ, ಇತ್ಯರ್ಥಃ= ಎಂದು ಅರ್ಥವಾಗುತ್ತದೆ, ಯತ್= ಏಕೆಂದರೆ, ಸಃ= ಆತ್ಮಶಬ್ದವು, ಸ್ವಭಾವೇ= ಸ್ವಭಾವದಲ್ಲಿಯೂ, ಪರಮಾತ್ಮನಿ= ಮತ್ತು ಪರಮಾತ್ಮನಲ್ಲಿಯೂ ಇದೆ.

**ಅನುವಾದ–** ಆ ಬ್ರಹ್ಮನನ್ನು ಪರಮಾತ್ಮನೆಂದು ತಿಳಿಯುತ್ತಾರೆ ಮತ್ತು ಉಪದೇಶಿಸುತ್ತಾರೆ ಎಂಬುದು ನನ್ನ ಸೂತ್ರಾರ್ಥ. ಏಕೆಂದರೆ ಆತ್ಮಾ ಶಬ್ದವು ಸ್ವಭಾವದಲ್ಲಿಯೂ ಮತ್ತು ಪರಮಾತ್ಮನಲ್ಲಿಯೂ ಪ್ರಯೋಗಿಸಲ್ಪಡುವುದಷ್ಟೆ?

**ಭಾವವಿಲಾಸಿನೀ–** ಕಸ್ತರ್ಹಿ ಸೂತ್ರಾರ್ಥ ಇತ್ಯತ ಆಹ – ಪರಮಾತ್ಮೇತಿ ॥ ತದ್ ಬ್ರಹ್ಮೋಪಾಸ್ಯತಯಾ ಸರ್ವತ್ರ ಪ್ರಸ್ತುತಂ ಬ್ರಹ್ಮ । ಅನೇನೈವಾತ್ಮಾಹಮಿತಿ ವದತಃ ಪರಸ್ಯಾಪ್ರಸ್ತುತಾಹಂ ಶಬ್ದಾಧ್ಯಾಹಾರೋ ದೋಷಃ ಸೂಚಿತಃ । ಆತ್ಮಾಪರಮಾತ್ಮೇತಿ ಸ್ವಯಂ ಜಾನಂತಿ । ಅನ್ಯಾನ್‌ಜ್ಞಾಪಯಂತಿ । ಉಪಗಚ್ಛಂತಿ ಗ್ರಾಹಯಂತೀತ್ಯಸ್ಯಾರ್ಥಕಥನಮಿದಮ್ । ಅರ್ಥಃ ಸೂತ್ರಾರ್ಥಃ । ಆತ್ಮಪದಸ್ಯಾವೃತ್ಯಾ ವಾ ತದ್ಬ್ರಹ್ಮೇತ್ಯುಕ್ತಮ್ । ಸಃ ಶಬ್ದಃ ಆತ್ಮೇತಿ ಶಬ್ದಃ । ಯದ್ಯಸ್ಮಾತ್ತಸ್ಮಾದಿತಿ ಪೂರ್ವೇಣಾನ್ವಯಃ । ಸ್ವಭಾವೇ ಪರಮಾತ್ಮನೀತಿ ಪ್ರಮೇಯನಿರೂಪಣಂ ಚ ಕೃತಮ್ । ಆತ್ಮಾ ದೇಹೇ ಧೃತೌ ಯತ್ನೇ ಸ್ವಭಾವೇ ಪರಮಾತ್ಮನೀತಿ ಪ್ರಮಾಣಭೂತಾನುಶಾಸನಂ ಚ ಸೂಚಿತಮ್ ॥ ೨೨೯ ॥

**ವಿವರಣೆ–** ನಿಮಗೆ ಅಭಿಪ್ರೇತವಾದ ಸೂತ್ರಾರ್ಥವೇನು ಎಂದು ಪರಕೀಯರು ಕೇಳಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ ಎಂದು ಸೂತ್ರವಿದೆ. ಇದು ಉಪಾಸನಾಪಾದವಾದ್ದರಿಂದ ಬ್ರಹ್ಮ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಬ್ರಹ್ಮನನ್ನು ಪರಮಾತ್ಮೇತಿ= ಪರಮಾತ್ಮನೆಂದು, ಉಪಗಚ್ಛಂತಿ= ತಿಳಿಯುತ್ತಾರೆ, ಚ= ಮತ್ತು, ಗ್ರಾಹಯಂತಿ= ಉಪದೇಶ ಮಾಡುತ್ತಾರೆ ಎಂದು ನನ್ನ ಸೂತ್ರಾರ್ಥವಾಗುತ್ತದೆ. 'ಆತ್ಮಾ ದೇಹೇ ಧೃತೌ' 'ಯತ್ನೇ ಸ್ವಭಾವೇ ಪರಮಾತ್ಮನಿ' ಎಂದು ಕೋಶವಿರುವುದರಿಂದ ಆತ್ಮ ಶಬ್ದಕ್ಕೆ ಸ್ವಭಾವ ಎಂದೂ, ಪರಮಾತ್ಮ ಎಂದೂ ಅರ್ಥವಿದೆ. ಇಲ್ಲಿ ಆತ್ಮಶಬ್ದಕ್ಕೆ ಪರಮಾತ್ಮ ಎಂದು ಅರ್ಥವನ್ನು ತೆಗೆದುಕೊಂಡು ನಾವು ಹೀಗೆ ಅರ್ಥವನ್ನು ಹೇಳುತ್ತೇವೆ. ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ನ ವಕ್ತುರಾತ್ಮೋಪದೇಶಾತ್ ಎಂಬ ಸೂತ್ರದಲ್ಲಿ ಅಧ್ಯಾತ್ಮಸಂಬಂಧ ಎಂಬುದಕ್ಕೆ ಅಧಿಕ

ಆತ್ಮನಾದ ವಿಷ್ಣುವಿನ ಸಂಬಂಧ ಎಂದು ಸೂತ್ರಕಾರರ ಅಭಿಪ್ರಾಯವಾಗಿರುವುದರಿಂದ ಆತ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ ಎಂದು ಸೂತ್ರಗಳಿಂದಲೇ ಸಿದ್ಧವಾಗುವ ಪ್ರಮೇಯ. ಆದ್ದರಿಂದ ನಮ್ಮ ಅರ್ಥದಲ್ಲಿ ಯಾವ ಅನುಪಪತ್ತಿಯೂ ಇಲ್ಲ ಎಂದು ಅಭಿಪ್ರಾಯ.

**ಯಃ ಸತ್ತ್ವಾಚ್ಚಾವರಸ್ಯೇತಿ ಸತ್ತಾಂ ವಕ್ತೀತರಸ್ಯ ಚ ।**
**ಅಪ್ರಧಾನಸ್ಯ ಸರ್ವಸ್ಯ ಸ ಮಿಥ್ಯಾತ್ವಂ ಕಥಂ ವದೇತ್ ॥ ೨೩೦ ॥**

**ಅರ್ಥ–** ಯಃ= ಯಾವ ಸೂತ್ರಕಾರರು, ಸತ್ತ್ವಾಚಾವರಸ್ಯ ಇತಿ= ಸತ್ತ್ವಾಚ್ಚ ಅವರಸ್ಯ ಎಂಬ ಸೂತ್ರವನ್ನು ಮಾಡಿ, ಅಪ್ರಧಾನಸ್ಯ= ಅಪ್ರಧಾನವಾದ, ಇತರಸ್ಯ ಸರ್ವಸ್ಯ= ಇತರ ಎಲ್ಲಾ ವಸ್ತುಗಳಿಗೆ, ಸತ್ತಾಂ= ಸತ್ತ್ವವನ್ನು, ವಕ್ತಿ= ಹೇಳುತ್ತಾರೆಯೋ, ಸಃ= ಅಂತಹ ಸೂತ್ರಕಾರರು, ಕಥಂ= ಹೇಗೆ, ಮಿಥ್ಯಾತ್ವಂ= ಮಿಥ್ಯಾತ್ವವನ್ನು, ವದೇತ್= ಹೇಳುತ್ತಾರೆ?

**ಅನುವಾದ–** ಯಾವ ಸೂತ್ರಕಾರರು ಸತ್ತ್ವಾಚ್ಚಾವರಸ್ಯ ಎಂಬ ಸೂತ್ರದಲ್ಲಿ ಅಪ್ರಧಾನವಾದ ಬ್ರಹ್ಮ ವ್ಯತಿರಿಕ್ತವಾದ ಎಲ್ಲದಕ್ಕೂ ಸತ್ತ್ವವನ್ನು ಹೇಳುತ್ತಾರೆಯೋ ಅವರು ಹೇಗೆ ಅವುಗಳಿಗೆ ಮಿಥ್ಯಾತ್ವವನ್ನು ಹೇಳುತ್ತಾರೆ?

**ಭಾವವಿಲಾಸಿನೀ–** ತದನನ್ಯತ್ವಮಾರಂಭಣಶಬ್ದಾದಿಭ್ಯ ಇತ್ಯಧಿಕರಣೇ ಜಗನ್ಮಿಥ್ಯಾತ್ವಮುಚ್ಯತ ಇತಿ ಮಾಯಾವಾದಿನೋ ವದಂತಿ । ತದಪಿ ನ ಸೂತ್ರಕಾರಸ್ಯಾಭಿಪ್ರೇತಮ್ । ತಥಾಹಿ । ಆದಿಸೂತ್ರೇಽಥಪದೇನ ಬ್ರಹ್ಮಣೋಽನ್ಯಮಧಿಕಾರಿಣಂ ಅತಃಪದೋಕ್ತ ಪ್ರಯೋಜನಂ ಕರ್ತವ್ಯತಯಾ ವಿಹಿತಜಿಜ್ಞಾಸಾಂ ಚಾಂಗೀಕೃತ್ಯ ಜನ್ಮಾದಿಸೂತ್ರೇಽಸ್ಯೇತಿ ಷಷ್ಠ್ಯಾ ಬ್ರಹ್ಮಣೋಽನ್ಯದ್ ಜನ್ಮಾದಿಯೋಗ್ಯಂ ಜಗದುರರೀಕೃತ್ಯಪ್ರಾಗುಕ್ತಭೇದಸೂತ್ರೈಶ್ಚ ಬ್ರಹ್ಮಣೋಽನ್ಯಚ್ಚೇತನಾಚೇತನಾತ್ಮಕಜಗದುರರೀಕೃತ್ಯ ಸ್ಪಷ್ಟಂ ಭೇದವ್ಯಪದೇಶಾಚ್ಚಾನ್ಯ ಇತ್ಯತ್ರ ಪರಮಾತ್ಮಾನ್ಯಃ ಜೀವೋಪ್ಯನ್ಯ ಇತಿ ಸಾಕ್ಷಾದನ್ಯಶಬ್ದೇನಾನ್ಯಾವಭ್ಯುಪಗಮ್ಯ ಸ್ಥಿತ್ಯದನಾಭ್ಯಾಂ ಚೇತಿ ಸೂತ್ರೇಸ್ಥಿತ್ಯದನಯೋಗ್ಯಾವೀಶ್ವರಜೀವಾವನ್ಯಪದದ್ವಯೇನ ಸ್ಪಷ್ಟಂ ಸ್ವೀಕೃತ್ಯ ನೇತರೋನುಪಪತ್ತೇರ್ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರಾವಿತಿ ಸೂತ್ರದ್ವಯೇ ಸಾಕ್ಷಾದಿತರಪದೇನ್ಯೈವಾನ್ಯಾನಭ್ಯುಪೇತ್ಯ ಉಪಗಚ್ಛಂತಿ ಗ್ರಾಹಯಂತೀತ್ಯತ್ರೋಪದೇಷ್ಟ್ರನುಪದೇಶ್ಯಾಂಶ್ಚ ನಿರ್ದಿಶ್ಯಾಸ್ಮಿನ್ನಪ್ಯಧಿಕರಣೇಸತ್ತ್ವಾಚ್ಚಾವರಸ್ಯೇತೀತರಸತ್ತಾಮನುಸ್ಮೃತ್ಯ ಪುನರನ್ಯಶಬ್ದೇನ ನ ವಿದ್ಯತೇಽನ್ಯದ್ಯಸ್ಯೇತಿ ತದಭಾವಂಚ ಕಥಂ ಕಥಯೇತ್ । ಪರಮಾರ್ಥತ ಇತಿ ವಿಶೇಷಣಾಧ್ಯಾಹಾರೇಚೋಕ್ತ ಜಗದ್ವಿಧಾಯಕಬಹುಸೂತ್ರಾನುಸಾರೇಣಾಪರಮಾರ್ಥತ ಇತ್ಯೇವವಿಶೇಷಣಂ ಕುತೋ ನಾಧ್ಯಾಹ್ರಿಯತೇ । ಯಾಚಮಾನೋಪಿ ಪಿಣ್ಯಾಕಮೇವ ಕುತೋ ಯಾಚಸೇ । ವಾಚಾರಂಭಣಂ ವಿಕಾರೋನಾಮಧೇಯಮಿತಿ ತವೈವ ವಿಷಯವಾಕ್ಯೇ ಯಸ್ಮಾನ್ನಾಮಧೇಯಂ ನಾಮಾತ್ಮಕಂ ರೂಪಾತ್ಮಕಂ ಜಗತ್ ವಾಚಾರಂಭಣಂ ವಾಚಾ ವಾಗಿಂದ್ರಿಯೇಣಾರಂಭಣಂ ಯಸ್ಯತದ್ವಾಗಿಂದ್ರಿಯಾಖ್ಯಕಾರಣವ್ಯಂಗ್ಯಮಿತಿ ಯಾವತ್ । ವಿಕಾರಃ

ವಿವಿಧಾಕಾರೇಣವಿಕೃತತ್ವಾದ್ವಿಕಾರಪದವಾಚ್ಯಘಟಶರಾವಾದಿಕಂ ಜಗನ್ಮೃತ್ತಿಕಾ ಕಾರ್ಯ-ಕಾರಣಯೋರಭೇದವ್ಯಪದೇಶ ಇತಿ ವಚನಾನ್ಮೃತ್ತಿಕಾದ್ಯುಪಾದಾನಜನ್ಯಮಿತಿ ಯಾವತ್ । ಉಪಾದಾನೋಪಾದೇಯಯೋರಭೇದಂ ಸೂಚಯಿತುಮೇವಮುಕ್ತಿಃ । ಇತಿ ತಸ್ಮಾದ್ಧೇತೋಃ ಉಭಯೋರಪಿಸ್ವಸ್ವಕಾರಣಜನ್ಯತ್ವಾದ್ಧೇತೋಃ ಸತ್ಯಮೇವೇತಿ ಅಸತ್ಯತ್ವವ್ಯಾವೃತ್ತಿಪೂರ್ವಕಂ ಸ್ಪಷ್ಟಂಸತ್ಯತ್ವೋಕ್ತ್ಯಾ ಚಾಪಾರವಮಾರ್ಥ್ಯಾಯೋಗಾದಸ್ಮದುಕ್ತವಿಶೇಷಣಾಧ್ಯಾಹಾರ ಏವ ಜ್ಯಾಯಾನ್ । ಯದಿ ಚಾತ್ರಾಪಿ ಮಾತ್ರ ಪದದ್ವಯಮಧ್ಯಾಹೃತ್ಯ ವಾಗಾರಂಭಣಮಾತ್ರಂ ನಾಮಧೇಯಮಾತ್ರಮಿತಿ ಶ್ರುತೇರರ್ಥಂ ವದಸಿ ತರ್ಹಿಪ್ರಾಗುಕ್ತಬಹುಸೂತ್ರಾನುಸಾರೇಣ ಯಥಾಶ್ರುತಶ್ರುತ್ಯನುಸಾರೇಣ ಚ ಸಕಲಜಗದ್ರಕ್ಷಕಮೇಕಮೇವ ಪದಮಧ್ಯಾಹರ । ಸರ್ವಸಂಹಾರಕಬಹ್ವಧ್ಯಾಹಾರಾಯ ಕುತಃ ಪ್ರಯತಸೇ । ಅಪಿಚಾರಂಭಣಶಬ್ದಾದಿಭ್ಯ ಇತಿ ವದತಸೂತ್ರಕಾರಸ್ಯನೇದಂ ವಿಷಯವಾಕ್ಯಮಭಿಮತಮ್ । ತಥಾಸತ್ಯಲ್ಪಾಕ್ಷರತಾಪೇಕ್ಷೀ ವಾ ಚೇತ್ಯೇವಸೌತ್ರಹೇತುಪದಸ್ಯಾದಿಂ ಕುರ್ಯಾತ್ । ತಸ್ಯೈವಕರಣವಾಚಕತಯಾ ಪ್ರಾಧಾನ್ಯಾತ್ ಪ್ರಾಥಮಿಕಪದತ್ವಾಚ್ಚ । ಬಹ್ವಕ್ಷರಂ ದ್ವಿತೀಯಂಚಾರಂಭಣಪದಂ ಕುತಸೂತ್ರಸ್ಯಾದಿಂಕೃತವಾನ್ । ಅತ ಏವಾಪ್ತತಮೇನಾಚಾರ್ಯೇಣೋಕ್ತಮೇವ ವಿಷಯವಾಕ್ಯಮ್ । ನ ವಿದ್ಯತೇನ್ಯೋಽಯಸ್ಯೇತಿ ವ್ಯುತ್ಪತ್ತ್ಯಾನನ್ಯತ್ವರೂಪಮದ್ವೈತಮಪಿ ನಾತ್ರಪ್ರತಿಪಾದ್ಯಮ್ । ಪ್ರಾಗುಕ್ತಭೇದಾರ್ಥಕ ಬಹುಸೂತ್ರವಿರೋಧಾತ್ । ವಿಷಯವಾಕ್ಯೇ ತದರ್ಶನಾಚ್ಚ । ಪ್ರತ್ಯುತ ಬಹಿರಂಗತಯಾ ಜಘನ್ಯಂ ಬಹುವ್ರೀಹಿಂ ವಿಹಾಯಾಂತರಂಗಂ ತತ್ಪುರುಷಮೇವಾಶ್ರಿತ್ಯಾನಾಶ್ವಾದನ್ಯಪಶ್ವಂತರಪರಿಗ್ರಹವತ್ ಅನ್ಯಸ್ಮಾಜ್ಜಗತೋಽನ್ಯದಿತಿ ವ್ಯುತ್ಪತ್ತ್ಯಾಜಗದ್ಭಿನ್ನಂ ಬ್ರಹ್ಮೈವಸಿದ್ಧ್ಯೇತ್ । ತದುಪಪಾದಕತಯಾಽ-ಧರ್ಮಾದಿಪದೇಷ್ವಿವನಞೋ ವಿರೋಧಾರ್ಥಮಂಗೀಕೃತ್ಯಾನ್ಯಪದೋಕ್ತಜಗದ್ವಿರುದ್ಧಂ ವಾ ಬ್ರಹ್ಮಸಿದ್ಧ್ಯೇತ್ । ತಸ್ಯಾಪ್ಯುಪಪಾದಕತಯಾಽಭಾವಾರ್ಥಮಂಗೀಕೃತ್ಯಾಘಟಂ ಭೂತಲಮಿತಿ ವಜ್ಜಗದಾಧಾರರಸ್ವೈಕದೇಶಾದನ್ಯತ್ರಮಹಾಕಾಯೇ ಜಗದ್ರಹಿತಂ ವಾ ಬ್ರಹ್ಮ ಸಿದ್ಧ್ಯೇತ್ । ಏವಂಚಾಣುತ್ವಮಹತ್ವಾಭ್ಯಾಂ ಪರಸ್ಪರವಿರುದ್ಧತ್ವಾಚ್ಚೇತನಾಚೇತನಾತ್ಮಕ ಜಗದ್ಭಿನ್ನಂ ಬ್ರಹ್ಮೇತಿ ನಞೋಽರ್ಥತ್ರಯೇಣಾಪ್ಯಸ್ಮಾಕಂ ಸ ಹೇತುಕಸಾಧ್ಯಸಿದ್ಧಿಃ । ತೃತೀಯೇಽರ್ಥೇಬೃಹಚ್ಛರೀರೇ ಬ್ರಹ್ಮಣಿಜಗದಭಾವಪ್ರತಿಪಾದಕತಯಾಽದ್ವಿತೀಯಾದಿಶ್ರುತೀನಾಂ ಯೋಗ್ಯಾರ್ಥಾಂತರ ಸೂಚನೇನ ತದವಿರೋಧಸಿದ್ಧಿಶ್ಚ । ತವತು ಬಹಿರಂಗಬಹುವ್ರೀಹಿ ಬಲಸ್ಯ ನೋಭಯಮಪಿ ಸಿದ್ಧ್ಯೇತ್ । ತರ್ಹಿಭವತಾಮಪಿ ವಿಷಯವಾಕ್ಯೇ ಕಿಂಸ್ವಿದಾಸೀದಿತ್ಯಧಿಷ್ಠಾನಸ್ಯ ಪ್ರಥಮಪ್ರಾಪ್ತಸ್ಯ ಕುತಃ ಪರಿತ್ಯಾಗ ಇತಿ ಚೇತ್ । ಸತ್ಯಮ್ । ಅಧಿಕರಣಕಾರಕಸ್ಯಾಮುಖ್ಯತ್ವಾನ್ಮುಖ್ಯಕರಣಾದಿ-ಕಾರಕಚಕ್ರಧಿಕ್ಕಾರ ಏವ ಭಗವತಾಸೂತ್ರಕೃತಾ ಯತೋಭೂಮಿಂ ಜನಯನ್ನಿತ್ಯುತ್ತರಾರ್ಧೇ ಪಂಚಮ್ಯಂತಯತಃಪದೇನೈತಸ್ಯೈವ ಮುಖ್ಯತೋಽಗ್ರಹೀತತ್ವಾಚ್ಚ ತದೇವಾದಾವುದಾಹೃತಮಿತಿ ಬ್ರೂಮಃ । ಆದಿಪದೇನ ಚ ಧಿಕ್ಕಾರಶಬ್ದಾದೀನಾಂ ಗ್ರಹಣಮ್ । ನ ಚಾಯಂ ಪ್ರಶ್ನ ಏವೇತಿ ಶಕ್ಯಮ್ । ಕಸ್ವಿದೇಕಾಕೀಚರತೀತ್ಯಾದೇಃ ಸೂರ್ಯ ಏಕಾಕೀಚರತೀತ್ಯಾದಿವದತ್ರ ಪರಿ-ಹಾರಾದರ್ಶನಾತ್ । ಧಿಕ್ಕಾರೇಣ ಚ ಸರ್ವಥಾಕರಣಾದ್ಯಭಾವಗ್ರಹಣೇ ಪ್ರಕೃತ್ಯಾದೇಃ

ಕಾರಣತ್ವವಿಧಾಯಕಶ್ರುತಿಪುರಾಣವಿರೋಧಾತ್ । ಸತ್ಯವತಃಕಿಮಾಯುಧೇನೇತ್ಯಾದಾವಿವ ತೇಷಾಮಪ್ರಾಧಾನ್ಯಮೇವ ಗ್ರಾಹ್ಯಮಿತ್ಯಸ್ಮದ್ಭಾಷ್ಯಕಾರೋಕ್ತ ಏವ ಸೂತ್ರಾರ್ಥೋ ನಾಪರ ಇತಿ ಭಾವೇನಾಹ – ಯ ಇತಿ ॥ ಯಸೂತ್ರಕಾರಸ್ಸತ್ತ್ವಾಚ್ಚಾವರಸ್ಯೇತಿ ಸೂತ್ರೇ ತಸ್ಮಿನ್ನೇವಾಧಿಕರಣೇ ಇತರಸ್ಯ ಬ್ರಹ್ಮವ್ಯತಿರಿಕ್ತಸ್ಯ ಸರ್ವಸ್ಯ ಜಗತಸ್ಸತ್ತಾಮಾಹ । ಸ ಸೂತ್ರಕಾರಃ ವದೇತ್ ಆದಿಸೂತ್ರೇ ವದೇತ್ ॥ ೨೩೦ ॥

**ವಿವರಣೆ–** ತದನನ್ಯತ್ವಮಾರಂಭಣಶಬ್ದಾದಿಭ್ಯಃ ಎಂಬ ಅಧಿಕರಣದಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಸೂತ್ರಕಾರರು ಹೇಳುತ್ತಾರೆ ಎಂದು ಮಾಯಾವಾದಿಗಳು ಹೇಳುತ್ತಾರೆ. ಆದರೆ ಜಗತ್ತಿನ ಮಿಥ್ಯಾತ್ವವು ಸೂತ್ರಕಾರರಿಗೆ ಅಭಿಪ್ರೇತವಾದುದಲ್ಲ. ಏಕೆಂದರೆ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಮೊದಲನೇ ಸೂತ್ರದಲ್ಲಿ ಅಥ ಶಬ್ದದಿಂದ ಬ್ರಹ್ಮನಿಂದ ಭಿನ್ನನಾದ ಅಧಿಕಾರಿಯನ್ನು, ಅಥ ಶಬ್ದದಿಂದ ಪ್ರಯೋಜನವನ್ನು ಮತ್ತು ಕರ್ತವ್ಯತ್ವೇನ ವಿಹಿತವಾದ ಜಿಜ್ಞಾಸೆಯನ್ನೂ ಅಂಗೀಕರಿಸಿದ್ದಾರೆ. ಜನ್ಮಾದ್ಯಸ್ಯ ಯತಃ ಎಂಬ ದ್ವಿತೀಯ ಸೂತ್ರದಲ್ಲಿ ಬ್ರಹ್ಮನಿಂದ ಉತ್ಪತ್ತಿಗೆ ಯೋಗ್ಯವಾದ ಜಗತ್ತನ್ನು ಅಂಗೀಕರಿಸಿದ್ದಾರೆ. ಹಿಂದೆ ಹೇಳಿದ ಭೇದಸೂತ್ರಗಳಿಂದ ಚೇತನಾಚೇತನಾತ್ಮಕವಾದ ಜಗತ್ತು ಬ್ರಹ್ಮನಿಗಿಂತ ಭಿನ್ನವಾಗಿದೆ ಎಂದು ಸ್ಪಷ್ಟವಾಗಿ ಪ್ರತಿಪಾದನೆ ಮಾಡಿದ್ದಾರೆ. ಭೇದವ್ಯಪದೇಶಾಚ್ಚಾನ್ಯಃ ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಜೀವನು ಮತ್ತು ಪರಮಾತ್ಮನು ಪರಸ್ಪರವಾಗಿ ಭಿನ್ನರೆಂದು ಹೇಳಿದ್ದಾರೆ. ಸ್ಥಿತ್ಯದನಾಭ್ಯಾಂ ಚ ಎಂಬ ಸೂತ್ರದಲ್ಲಿ ವಿರುದ್ಧಧರ್ಮಾಧಿಕರಣತ್ವವು ಇರುವುದರಿಂದ ಜೀವೇಶ್ವರ ಭೇದವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ನೇತರೋ ಅನುಪಪತ್ತೇಃ ಮತ್ತು ವಿಶೇಷಣ ಭೇದವ್ಯಪದೇಶಾಭ್ಯಾಂಚ ನೇತರೌ ಎಂಬ ಸೂತ್ರಗಳಲ್ಲಿ ಸ್ಪಷ್ಟವಾಗಿ ಜೀವನಿಗೂ ಮತ್ತು ಬ್ರಹ್ಮನಿಗೂ ಹಾಗೆಯೇ ಪ್ರಕೃತಿ ಜೀವರಿಗೂ ಮತ್ತು ಬ್ರಹ್ಮನಿಗೂ ಭೇದವನ್ನು ಹೇಳಿದ್ದಾರೆ. ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ ಎಂಬ ಸೂತ್ರದಲ್ಲಿ ಬ್ರಹ್ಮನು ಉಪಾಸ್ಯನೆಂದು, ಜೀವರು ಉಪಾಸಕರೆಂದು ನಿರ್ದೇಶ ಮಾಡಿ ಭೇದವನ್ನೇ ಹೇಳಿದ್ದಾರೆ. ಈ ಅಧಿಕರಣದಲ್ಲಿಯೇ ಸತ್ವಾಚ್ಚ ಅವರಸ್ಯ ಎಂಬ ಸೂತ್ರದಲ್ಲಿ ಬ್ರಹ್ಮನಿಗಿಂತ ಅಧಮವಾದ ವಸ್ತುಗಳಿಗೆ ಸತ್ಯತ್ವವನ್ನು ಹೇಳಿದ್ದಾರೆ. ಆದ್ದರಿಂದ ಈ ಸೂತ್ರದಲ್ಲಿ ಜಗತ್ತಿನ ಅಭಾವದಲ್ಲಿ ಪರ್ಯವಸಾನವನ್ನು ಹೊಂದುವ ಜಗತ್ತಿನ ಮಿಥ್ಯಾತ್ವವನ್ನು ಸೂತ್ರಕಾರರು ಹೇಗೆ ಹೇಳುತ್ತಾರೆ? ತದನನ್ಯತ್ವಂ ಸೂತ್ರಕ್ಕೆ ಪರಮಾರ್ಥತಃ ಎಂಬ ಪದವನ್ನು ಅಧ್ಯಾಹಾರ ಮಾಡಿ, ಬ್ರಹ್ಮವ್ಯತಿರಿಕ್ತವಾದ ವಸ್ತು ಪಾರಮಾರ್ಥಿಕವಾಗಿ ಇಲ್ಲ ಎಂದು ಅರ್ಥವನ್ನು ಮಾಡುವುದಾದರೆ, ಅಪರಮಾರ್ಥತಃ ಎಂದೇ ಅಧ್ಯಾಹಾರ ಮಾಡಿ ಬ್ರಹ್ಮವ್ಯತಿರಿಕ್ತವಾದ ವಸ್ತುವು ಅಪಾರಮಾರ್ಥಿಕವಾಗಿ ಇಲ್ಲ, ಪಾರಮಾರ್ಥಿಕವಾಗಿ ಇದೆ ಎಂದು ಅರ್ಥವನ್ನು ಮಾಡು. ಆಗ ಜಗತ್ತೂ ಇರುತ್ತದೆ, ಹಿಂದೆ ಹೇಳಿದ ಇಷ್ಟು ಸೂತ್ರಗಳ ವಿರೋಧವೂ ಬರುವುದಿಲ್ಲ. ಬೇಡುವುದಾದರೂ ಹಿಂಡಿಯನ್ನು ಏಕೆ ಬೇಡುತ್ತೀಯೆ? ಶ್ರೇಷ್ಠವಾದ ಪದಾರ್ಥವನ್ನು ಬೇಡು ಎಂದು ಅಭಿಪ್ರಾಯ. ಈ

ಅಧಿಕರಣದಲ್ಲಿ ನಿನಗೆ ವಾಚಾರಂಭಣ ಶ್ರುತಿಯು ವಿಷಯವಾಕ್ಯವಾಗಿದೆ. ಆ ವಾಕ್ಯವು ಹೀಗಿದೆ : 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬುದಾಗಿ ಅದಕ್ಕೆ ನಿನ್ನ ಅರ್ಥವು ಹೀಗೆ : ಯಾವ ಕಾರಣದಿಂದ ನಾಮಧೇಯಂ= ನಾಮಾತ್ಮಕವಾದ ಮತ್ತು ರೂಪಾತ್ಮಕವಾದ ಜಗತ್ತು, ವಾಚಾರಂಭಣಂ= ವಾಗಿಂದ್ರಿಯದಿಂದ ಆರಂಭವುಳ್ಳದ್ದಾಗಿದೆಯೋ ಎಂದರೆ ವಾಗಿಂದ್ರಿಯರೂಪವಾದ ಕಾರಣದಿಂದ ವ್ಯಂಗ್ಯವಾಗಿದೆಯೋ, ಆ ಕಾರಣದಿಂದ, ವಿಕಾರಃ= ವಿವಿಧಾಕಾರವುಳ್ಳ ಘಟಶರಾವಾದಿರೂಪವಾದ ಜಗತ್ತು, ಮೃತ್ತಿಕೇತಿ= ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಘಟಾದಿಗಳು ಮೃತ್ತಿನಿಂದಲೇ ಉಂಟಾಗುವುದರಿಂದ ಮೃತ್ತಿಕಾ ಮೊದಲಾದ ಉಪಾದಾನ ಜನ್ಯವಾಗಿದೆಯೋ, ಆ ಕಾರಣದಿಂದ, ಎಂದರೆ ನಾಮಾತ್ಮಕವಾದ ಜಗತ್ತು ಮತ್ತು ರೂಪಾತ್ಮಕವಾದ ಜಗತ್ತು ತನ್ನ ತನ್ನ ಕಾರ್ಯಗಳಿಂದ ಜನ್ಯವಾಗಿರುವುದರಿಂದ, ಸತ್ಯಂ= ಸತ್ಯದಂತೆ ಎಂದು ಅರ್ಥವನ್ನು ಮಾಡಿ ಅಸತ್ಯತ್ವವನ್ನು ವ್ಯಾವೃತ್ತಿ ಮಾಡಿ ಸ್ಪಷ್ಟವಾಗಿ ನೀನು ಸತ್ಯತ್ವವನ್ನು ಹೇಳಿರುವುದರಿಂದ ಅಪರಮಾರ್ಥತಃ ಎಂದೇ ಅಧ್ಯಾಹಾರವನ್ನು ಮಾಡು. ಆಗ ಜಗತ್ತು ರಕ್ಷಿತವಾಗುತ್ತದೆ. ಒಂದು ಪಕ್ಷ ವಾಚಾರಂಭಣಂ ಎಂಬಲ್ಲಿಯೂ, ನಾಮಧೇಯಂ ಎಂಬಲ್ಲಿಯೂ ಮಾತ್ರ ಶಬ್ದಗಳನ್ನು ಅಧ್ಯಾಹಾರ ಮಾಡಿ, ವಾಚಾರಂಭಣಮಾತ್ರಂ, ನಾಮಧೇಯಮಾತ್ರಂ ವಾಗಿಂದ್ರಿಯದಿಂದ ಉತ್ಪತ್ತಿ ಮಾತ್ರ, ಹೆಸರು ಮಾತ್ರ, ಆದರೆ ವಸ್ತುವು ಇಲ್ಲ ಎಂದು ಅರ್ಥಮಾಡುವುದಾದರೆ ನಾವು ಹಿಂದೆ ಹೇಳಿದ ಶ್ರುತಿಗಳಿಗೆ ಮತ್ತು ಸೂತ್ರಗಳಿಗೆ ಅನುಸಾರವಾಗಿ ಅಪರಮಾರ್ಥತಃ ಎಂಬ ಒಂದೇ ಪದವನ್ನು ಅಧ್ಯಾಹಾರ ಮಾಡು. ಎರಡು ಕಡೆ ಮಾತ್ರ ಪದವನ್ನು ಅಧ್ಯಾಹಾರ ಮಾಡಬೇಡ. ಸರ್ವ ವಿನಾಶಕ್ಕಾಗಿ ಏಕೆ ಪ್ರಯತ್ನಿಸುತ್ತೀಯೇ? ಅದೂ ಅಲ್ಲದೆ ಸೂತ್ರದಲ್ಲಿ ಆರಂಭಣ ಶಬ್ದಾದಿಭ್ಯಃ ಎಂದು ಹೇಳಿರುವುದರಿಂದ ಈ ನಿನ್ನ ವಾಕ್ಯವು ಇಲ್ಲಿ ವಿಷಯ ವಾಕ್ಯವೇ ಅಲ್ಲ. ಇದೇ ವಿಷಯವಾಕ್ಯವಾಗಿದ್ದರೆ ಸೂತ್ರಕಾರರು ಮೊದಲನೆಯ ಪದವಾದ ವಾಚಾ ಎಂದಿಷ್ಟೇ ಅಥವಾ ಅಲ್ಪಾಕ್ಷರವಾದ ಕಾರಣದಿಂದಲೂ ವಾಚಾ ಎಂದಿಷ್ಟೇ ಹೇಳಬೇಕಾಗಿದ್ದಿತು. ಅನೇಕ ಅಕ್ಷರಗಳನ್ನು ಒಳಗೊಂಡಿರುವ ಆರಂಭಣ ಎಂಬ ಪದದ ಸ್ವೀಕಾರವು ಅನುಚಿತವಾಗುತ್ತದೆ. ಆದ್ದರಿಂದ ನಮ್ಮ ಆಚಾರ್ಯರು ಹೇಳಿದ ಕಿಂ ಸ್ವಿದಾಸೀತ್ ಅಧಿಷ್ಠಾನಂ ಎಂಬುದೇ ವಿಷಯ ವಾಕ್ಯವೆಂದು ಸ್ವೀಕರಿಸಬೇಕು. ಇನ್ನು ಅನನ್ಯತ್ವಂ ಎಂಬ ಶಬ್ದಕ್ಕೆ ನ ವಿದ್ಯತೇ ಅನ್ಯತ್ ಯಸ್ಯ ತತ್ ಅನನ್ಯಂ, ತಸ್ಯ ಭಾವಃ ಅನನ್ಯತ್ವಂ ಎಂದು ಬಹುವ್ರೀಹಿಸಮಾಸವನ್ನು ಮಾಡಿ ದ್ವಿತೀಯ ವಸ್ತುವಿನ ಅಭಾವವನ್ನು ಪ್ರತಿಪಾದನೆ ಮಾಡಿದರೆ ಹಿಂದೆ ಹೇಳಿದ ಅನೇಕ ಸೂತ್ರಗಳ ವಿರೋಧವು ಬರುತ್ತವೆ. ವಿಷಯ ವಾಕ್ಯದಲ್ಲಿ ದ್ವಿತೀಯಾಭಾವವು ಕಂಡುಬರುವುದಿಲ್ಲ. ಆದ್ದರಿಂದ ಹೀನವಾದ ಬಹುವ್ರೀಹಿ ಸಮಾಸವನ್ನು ಬಿಟ್ಟು ಶ್ರೇಷ್ಠವಾದ ತತ್ಪುರುಷಸಮಾಸವನ್ನು ಆಶ್ರಯಿಸಿ ಅನಶ್ವಪದದಿಂದ ಅಶ್ವಭಿನ್ನವಾದ ಇನ್ನೊಂದು ಪಶುವನ್ನು ಸ್ವೀಕರಿಸುವಂತೆ ಅನನ್ಯ ಪದದಿಂದ ನ ಅನ್ಯತ್

ಅನನ್ಯತ್ ಎಂದು ವಿಗ್ರಹವನ್ನು ಹೇಳಿ, ಅನ್ಯ ಪದಾರ್ಥವಾದ ಜಗತ್ತಿನಿಂದ ಭಿನ್ನನಾದವನು ಬ್ರಹ್ಮ ಎಂದು ಹೇಳುವುದೇ ಒಳ್ಳೆಯದು. ಈ ಭೇದವನ್ನು ಉಪಪಾದನೆ ಮಾಡುವುದಕ್ಕೆ ಅನನ್ಯತ್ ಎಂಬಲ್ಲಿರುವ ನಞ್ ಪದಕ್ಕೆ ಅಧರ್ಮ ಎಂಬಲ್ಲಿ ಹೇಗೆ ಧರ್ಮವಿರೋಧಿ ಯಾದುದು ಎಂದು ಅರ್ಥವಾಗುತ್ತದೋ, ಹಾಗೆ ವಿರೋಧಾರ್ಥವನ್ನು ಸ್ವೀಕರಿಸಿ ಜಗದ್ವಿರುದ್ಧನಾದವನು ಬ್ರಹ್ಮ ಎಂದು ಅರ್ಥವೇ ಸಿದ್ಧವಾಗುತ್ತದೆ. ಆ ವಿರೋಧವನ್ನು ಉಪಪಾದನೆ ಮಾಡುವುದಕ್ಕೆ ನಞ್ ಪದಕ್ಕೆ ಅಘಟಂ ಭೂತಲಂ ಮುಂತಾದ ಸ್ಥಳದಲ್ಲಿ ಇರುವಂತೆ ಅಭಾವಾರ್ಥವನ್ನಾದರೂ ಸ್ವೀಕರಿಸಿ ಬ್ರಹ್ಮನಲ್ಲಿ ಜಗತ್ತಿನ ಅಭಾವವಿದೆ ಎಂದರೆ ಬ್ರಹ್ಮನು ಮಹಾಕಾಯನಾದುದರಿಂದ ಅವನ ಶರೀರದ ಏಕದೇಶದಲ್ಲಿ ಜಗತ್ತು ಇದೆ, ಏಕದೇಶಾಂತರದಲ್ಲಿ ಜಗತ್ತು ಇಲ್ಲ ಎಂಬ ಅರ್ಥವನ್ನಾದರೂ ಮಾಡಬೇಕು. ಹೀಗೆ, 'ನಞ್' ಪದಕ್ಕೆ ಭೇದ, ವಿರೋಧ ಅಥವಾ ಅಭಾವ ಎಂದು ಯಾವ ಅರ್ಥವನ್ನು ಮಾಡಿದರೂ ಬ್ರಹ್ಮನು ಜಗತ್ತಿಗಿಂತ ಭಿನ್ನನೆಂದೇ ಸಿದ್ಧನಾಗುತ್ತಾನೆ. ನೀನು ಮಾಡಿದಂತೆ ಬಹುವ್ರೀಹಿಯನ್ನು ಮಾತ್ರ ಆಶ್ರಯಿಸಬಾರದು. ಹಾಗಾದರೆ ನಿಮಗಾದರೆ ವಿಷಯ ವಾಕ್ಯದಲ್ಲಿ ಅಧಿಷ್ಠಾನವು ಪ್ರಥಮವಾಗಿ ಪ್ರಸಕ್ತವಾಗಿರುವುದರಿಂದ ಸೂತ್ರದಲ್ಲಿ ಅಧಿಷ್ಠಾನ ಶಬ್ದಾದಿಭ್ಯಃ ಎಂದು ಹೇಳದೆ ಆರಂಭಣಶಬ್ದಾದಿಭ್ಯಃ ಎಂದು ಹೇಗೆ ಹೇಳಿದ್ದಾರೆ ಎಂದು ಆಕ್ಷೇಪವು ಬರುತ್ತದೆ. ಅದಕ್ಕೆ ಏನು ಉತ್ತರ ಎಂದು ಕೇಳಿದರೆ, ಅದಕ್ಕೆ ನಾವು ಹೀಗೆ ಉತ್ತರವನ್ನು ಹೇಳುತ್ತೇವೆ. ಹೌದು ಅಧಿ ಷ್ಠಾನ ಶಬ್ದವು ಮೊದಲೇ ಇದೆ. ಆದರೆ ಅಧಿಷ್ಠಾನ ಶಬ್ದವು ಅಧಿಕರಣವನ್ನು ಹೇಳುತ್ತದೆ. ಅಧಿಕರಣವು ಕಾರಕಸಮೂಹದಲ್ಲಿ ಅಮುಖ್ಯವಾದುದು. ಕರಣಾದಿಗಳೇ ಮುಖ್ಯವಾದವು. ಆದ್ದರಿಂದ ಅಮುಖ್ಯವಾದ ಅಧಿಕರಣವನ್ನು ಉಪೇಕ್ಷಿಸಿ, ಪ್ರಧಾನವಾದ ಕರಣವನ್ನು ಸ್ವೀಕರಿಸಿ ಅದನ್ನು ಹೇಳುವ ಆರಂಭಣಶಬ್ದವನ್ನೇ ಸೂತ್ರಕಾರರು ಹೇತುವನ್ನಾಗಿ ಹೇಳಿದ್ದಾರೆ. ಅಲ್ಲದೇ, ಇದೇ ವಾಕ್ಯದ ಉತ್ತರ ಶೇಷದಲ್ಲಿ ಯತೋ ಭೂಮಿಂ ಜನಯನ್ ಎಂಬ ಮಂತ್ರ ಭಾಗದಲ್ಲಿ ಯತಃ ಎಂಬ ಶಬ್ದದಿಂದ ಕರಣವನ್ನೇ ಮುಖ್ಯವಾಗಿ ಸ್ವೀಕರಿಸಿರುವುದರಿಂದ ಇಲ್ಲಿ ಕರಣವನ್ನೇ ಗ್ರಹಣ ಮಾಡಿದ್ದಾರೆ. ಜೊತೆಗೆ ಆರಂಭಣಶಬ್ದಾದಿಭ್ಯಃ ಎಂಬಲ್ಲಿ ಆದಿಶಬ್ದವಿದೆ. ಆದಿಶಬ್ದದಿಂದ ಉಕ್ತವಾದ ಧಿಕ್ಕಾರವನ್ನೂ ಹೇತುವಾಗಿ ತೆಗೆದುಕೊಳ್ಳಬೇಕು. ಕಿಂ ಸ್ವಿದಾಸೀತ್ ಎಂಬುದು ಪ್ರಶ್ನೆಯೇ ಆಗಿದ್ದರೆ, ಅದಕ್ಕೆ ಒಂದು ಉತ್ತರವಿರಬೇಕಾಗಿದ್ದಿತು. ಮಂತ್ರದಲ್ಲಿ ಅದಕ್ಕೆ ಉತ್ತರವಿಲ್ಲ, ಆದ್ದರಿಂದ ಕಿಂ ಎಂಬುದು ಧಿಕ್ಕಾರಾರ್ಥದಲ್ಲಿದೆ. ಧಿಕ್ಕಾರವನ್ನು ಮಾಡಿದ್ದರಿಂದ ಕರಣಾದಿಗಳು ಸರ್ವಥಾ ಇಲ್ಲ ಎಂದು ಗ್ರಹಣ ಮಾಡಿದರೆ ಪ್ರಕೃತ್ಯಾದಿಗಳಿಗೆ ಕಾರಣತ್ವ ಹೇಳುವ ಶ್ರುತಿಪುರಾಣಗಳ ವಿರೋಧವು ಬರುತ್ತದೆ. ಆದ್ದರಿಂದ ಬಲವಿದ್ದವನಿಗೆ ಆಯುಧದಿಂದ ಏನಾಗಬೇಕು ಎಂಬ ಪ್ರಯೋಗದಲ್ಲಿ, ಆಯುಧಗಳನ್ನು ತಿರಸ್ಕರಿಸಿದರೆ ಹೇಗೆ ಆಯುಧಗಳಿಗೆ ಅಪ್ರಾಧಾನ್ಯವು ತಿಳಿಯುವುದೋ, ಅಸತ್ವವು ತಿಳಿಯುವುದಿಲ್ಲವೋ, ಹಾಗೆಯೇ ಇಲ್ಲಿ ಆರಂಭಣಾದಿಗಳನ್ನು ಧಿಕ್ಕಾರ ಮಾಡಿದರೆ ಆರಂಭಣಾಧಿಗಳಿಗೆ ಅಪ್ರಾಧಾನ್ಯವೇ ತಿಳಿಯುತ್ತದೆ ಹೊರತು ಆರಂಭಣಾದಿಗಳ ಅಭಾವವು ಇಲ್ಲಿ

ಅಧಿಕರಣದಲ್ಲಿ ನಿನಗೆ ವಾಚಾರಂಭಣ ಶ್ರುತಿಯು ವಿಷಯವಾಕ್ಯವಾಗಿದೆ. ಆ ವಾಕ್ಯವು ಹೀಗಿದೆ : 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬುದಾಗಿ ಅದಕ್ಕೆ ನಿನ್ನ ಅರ್ಥವು ಹೀಗೆ : ಯಾವ ಕಾರಣದಿಂದ ನಾಮಧೇಯಂ= ನಾಮಾತ್ಮಕವಾದ ಮತ್ತು ರೂಪಾತ್ಮಕವಾದ ಜಗತ್ತು, ವಾಚಾರಂಭಣಂ= ವಾಗಿಂದ್ರಿಯದಿಂದ ಆರಂಭವುಳ್ಳದ್ದಾಗಿದೆಯೋ ಎಂದರೆ ವಾಗಿಂದ್ರಿಯರೂಪವಾದ ಕಾರಣದಿಂದ ವ್ಯಂಗ್ಯವಾಗಿದೆಯೋ, ಆ ಕಾರಣದಿಂದ, ವಿಕಾರಃ= ವಿವಿಧಾಕಾರವುಳ್ಳ ಘಟಶರಾವಾದಿರೂಪವಾದ ಜಗತ್ತು, ಮೃತ್ತಿಕೇತಿ= ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಘಟಾದಿಗಳು ಮೃತ್ತಿನಿಂದಲೇ ಉಂಟಾಗುವುದರಿಂದ ಮೃತ್ತಿಕಾ ಮೊದಲಾದ ಉಪಾದಾನ ಜನ್ಯವಾಗಿದೆಯೋ, ಆ ಕಾರಣದಿಂದ, ಎಂದರೆ ನಾಮಾತ್ಮಕವಾದ ಜಗತ್ತು ಮತ್ತು ರೂಪಾತ್ಮಕವಾದ ಜಗತ್ತು ತನ್ನ ತನ್ನ ಕಾರ್ಯಗಳಿಂದ ಜನ್ಯವಾಗಿರುವುದರಿಂದ, ಸತ್ಯಂ= ಸತ್ಯದಂತೆ ಎಂದು ಅರ್ಥವನ್ನು ಮಾಡಿ ಅಸತ್ಯತ್ವವನ್ನು ವ್ಯಾವೃತ್ತಿ ಮಾಡಿ ಸ್ಪಷ್ಟವಾಗಿ ನೀನು ಸತ್ಯತ್ವವನ್ನು ಹೇಳಿರುವುದರಿಂದ ಅಪರಮಾರ್ಥತಃ ಎಂದೇ ಅಧ್ಯಾಹಾರವನ್ನು ಮಾಡು. ಆಗ ಜಗತ್ತು ರಕ್ಷಿತವಾಗುತ್ತದೆ. ಒಂದು ಪಕ್ಷ ವಾಚಾರಂಭಣಂ ಎಂಬಲ್ಲಿಯೂ, ನಾಮಧೇಯಂ ಎಂಬಲ್ಲಿಯೂ ಮಾತ್ರ ಶಬ್ದಗಳನ್ನು ಅಧ್ಯಾಹಾರ ಮಾಡಿ, ವಾಚಾರಂಭಣಮಾತ್ರಂ, ನಾಮಧೇಯಮಾತ್ರಂ ವಾಗಿಂದ್ರಿಯದಿಂದ ಉತ್ಪತ್ತಿ ಮಾತ್ರ, ಹೆಸರು ಮಾತ್ರ, ಆದರೆ ವಸ್ತುವು ಇಲ್ಲ ಎಂದು ಅರ್ಥಮಾಡುವುದಾದರೆ ನಾವು ಹಿಂದೆ ಹೇಳಿದ ಶ್ರುತಿಗಳಿಗೆ ಮತ್ತು ಸೂತ್ರಗಳಿಗೆ ಅನುಸಾರವಾಗಿ ಅಪರಮಾರ್ಥತಃ ಎಂಬ ಒಂದೇ ಪದವನ್ನು ಅಧ್ಯಾಹಾರ ಮಾಡು. ಎರಡು ಕಡೆ ಮಾತ್ರ ಪದವನ್ನು ಅಧ್ಯಾಹಾರ ಮಾಡಬೇಡ. ಸರ್ವ ವಿನಾಶಕ್ಕಾಗಿ ಏಕೆ ಪ್ರಯತ್ನಿಸುತ್ತೀಯೇ? ಅದೂ ಅಲ್ಲದೆ ಸೂತ್ರದಲ್ಲಿ ಆರಂಭಣ ಶಬ್ದಾದಿಭ್ಯಃ ಎಂದು ಹೇಳಿರುವುದರಿಂದ ಈ ನಿನ್ನ ವಾಕ್ಯವು ಇಲ್ಲಿ ವಿಷಯ ವಾಕ್ಯವೇ ಅಲ್ಲ. ಇದೇ ವಿಷಯವಾಕ್ಯವಾಗಿದ್ದರೆ ಸೂತ್ರಕಾರರು ಮೊದಲನೆಯ ಪದವಾದ ವಾಚಾ ಎಂದಿಷ್ಟೇ ಅಥವಾ ಅಲ್ಪಾಕ್ಷರವಾದ ಕಾರಣದಿಂದಲೂ ವಾಚಾ ಎಂದಿಷ್ಟೇ ಹೇಳಬೇಕಾಗಿದ್ದಿತು. ಅನೇಕ ಅಕ್ಷರಗಳನ್ನು ಒಳಗೊಂಡಿರುವ ಆರಂಭಣ ಎಂಬ ಪದದ ಸ್ವೀಕಾರವು ಅನುಚಿತವಾಗುತ್ತದೆ. ಆದ್ದರಿಂದ ನಮ್ಮ ಆಚಾರ್ಯರು ಹೇಳಿದ ಕಿಂ ಸ್ವಿದಾಸೀತ್ ಅಧಿಷ್ಠಾನಂ ಎಂಬುದೇ ವಿಷಯ ವಾಕ್ಯವೆಂದು ಸ್ವೀಕರಿಸಬೇಕು. ಇನ್ನು ಅನನ್ಯತ್ವಂ ಎಂಬ ಶಬ್ದಕ್ಕೆ ನ ವಿದ್ಯತೇ ಅನ್ಯತ್ ಯಸ್ಯ ತತ್ ಅನನ್ಯಂ, ತಸ್ಯ ಭಾವಃ ಅನನ್ಯತ್ವಂ ಎಂದು ಬಹುವ್ರೀಹಿಸಮಾಸವನ್ನು ಮಾಡಿ ದ್ವಿತೀಯ ವಸ್ತುವಿನ ಅಭಾವವನ್ನು ಪ್ರತಿಪಾದನೆ ಮಾಡಿದರೆ ಹಿಂದೆ ಹೇಳಿದ ಅನೇಕ ಸೂತ್ರಗಳ ವಿರೋಧವು ಬರುತ್ತವೆ. ವಿಷಯ ವಾಕ್ಯದಲ್ಲಿ ದ್ವಿತೀಯಾಭಾವವು ಕಂಡುಬರುವುದಿಲ್ಲ. ಆದ್ದರಿಂದ ಹೀನವಾದ ಬಹುವ್ರೀಹಿ ಸಮಾಸವನ್ನು ಬಿಟ್ಟು ಶ್ರೇಷ್ಠವಾದ ತತ್ಪುರುಷಸಮಾಸವನ್ನು ಆಶ್ರಯಿಸಿ ಅನಶ್ವಪದದಿಂದ ಅಶ್ವಭಿನ್ನವಾದ ಇನ್ನೊಂದು ಪಶುವನ್ನು ಸ್ವೀಕರಿಸುವಂತೆ ಅನನ್ಯ ಪದದಿಂದ ನ ಅನ್ಯತ್

ಅನನ್ಯತ್ ಎಂದು ವಿಗ್ರಹವನ್ನು ಹೇಳಿ, ಅನ್ಯ ಪದಾರ್ಥವಾದ ಜಗತ್ತಿನಿಂದ ಭಿನ್ನನಾದವನು ಬ್ರಹ್ಮ ಎಂದು ಹೇಳುವುದೇ ಒಳ್ಳೆಯದು. ಈ ಭೇದವನ್ನು ಉಪಪಾದನೆ ಮಾಡುವುದಕ್ಕೆ ಅನನ್ಯತ್ ಎಂಬಲ್ಲಿರುವ ನಞ್ ಪದಕ್ಕೆ ಅಧರ್ಮ ಎಂಬಲ್ಲಿ ಹೇಗೆ ಧರ್ಮವಿರೋಧಿ ಯಾದುದು ಎಂದು ಅರ್ಥವಾಗುತ್ತದೋ, ಹಾಗೆ ವಿರೋಧಾರ್ಥವನ್ನು ಸ್ವೀಕರಿಸಿ ಜಗದ್ವಿರುದ್ಧನಾದವನು ಬ್ರಹ್ಮ ಎಂದು ಅರ್ಥವೇ ಸಿದ್ಧವಾಗುತ್ತದೆ. ಆ ವಿರೋಧವನ್ನು ಉಪಪಾದನೆ ಮಾಡುವುದಕ್ಕೆ ನಞ್ ಪದಕ್ಕೆ ಅಘಟಂ ಭೂತಲಂ ಮುಂತಾದ ಸ್ಥಳದಲ್ಲಿ ಇರುವಂತೆ ಅಭಾವಾರ್ಥವನ್ನಾದರೂ ಸ್ವೀಕರಿಸಿ ಬ್ರಹ್ಮನಲ್ಲಿ ಜಗತ್ತಿನ ಅಭಾವವಿದೆ ಎಂದರೆ ಬ್ರಹ್ಮನು ಮಹಾಕಾಯನಾದುದರಿಂದ ಅವನ ಶರೀರದ ಏಕದೇಶದಲ್ಲಿ ಜಗತ್ತು ಇದೆ, ಏಕದೇಶಾಂತರದಲ್ಲಿ ಜಗತ್ತು ಇಲ್ಲ ಎಂಬ ಅರ್ಥವನ್ನಾದರೂ ಮಾಡಬೇಕು. ಹೀಗೆ, 'ನಞ್' ಪದಕ್ಕೆ ಭೇದ, ವಿರೋಧ ಅಥವಾ ಅಭಾವ ಎಂದು ಯಾವ ಅರ್ಥವನ್ನು ಮಾಡಿದರೂ ಬ್ರಹ್ಮನು ಜಗತ್ತಿಗಿಂತ ಭಿನ್ನನೆಂದೇ ಸಿದ್ಧನಾಗುತ್ತಾನೆ. ನೀನು ಮಾಡಿದಂತೆ ಬಹುವ್ರೀಹಿಯನ್ನು ಮಾತ್ರ ಆಶ್ರಯಿಸಬಾರದು. ಹಾಗಾದರೆ ನಿಮಗಾದರೆ ವಿಷಯ ವಾಕ್ಯದಲ್ಲಿ ಅಧಿಷ್ಠಾನವು ಪ್ರಥಮವಾಗಿ ಪ್ರಸಕ್ತವಾಗಿರುವುದರಿಂದ ಸೂತ್ರದಲ್ಲಿ ಅಧಿಷ್ಠಾನ ಶಬ್ದಾದಿಭ್ಯಃ ಎಂದು ಹೇಳದೆ ಆರಂಭಣಶಬ್ದಾದಿಭ್ಯಃ ಎಂದು ಹೇಗೆ ಹೇಳಿದ್ದಾರೆ ಎಂದು ಆಕ್ಷೇಪವು ಬರುತ್ತದೆ. ಅದಕ್ಕೆ ಏನು ಉತ್ತರ ಎಂದು ಕೇಳಿದರೆ, ಅದಕ್ಕೆ ನಾವು ಹೀಗೆ ಉತ್ತರವನ್ನು ಹೇಳುತ್ತೇವೆ. ಹೌದು ಅಧಿ ಷ್ಠಾನ ಶಬ್ದವು ಮೊದಲೇ ಇದೆ. ಆದರೆ ಅಧಿಷ್ಠಾನ ಶಬ್ದವು ಅಧಿಕರಣವನ್ನು ಹೇಳುತ್ತದೆ. ಅಧಿಕರಣವು ಕಾರಕಸಮೂಹದಲ್ಲಿ ಅಮುಖ್ಯವಾದುದು. ಕರಣಾದಿಗಳೇ ಮುಖ್ಯವಾದವು. ಆದ್ದರಿಂದ ಅಮುಖ್ಯವಾದ ಅಧಿಕರಣವನ್ನು ಉಪೇಕ್ಷಿಸಿ, ಪ್ರಧಾನವಾದ ಕರಣವನ್ನು ಸ್ವೀಕರಿಸಿ ಅದನ್ನು ಹೇಳುವ ಆರಂಭಣಶಬ್ದವನ್ನೇ ಸೂತ್ರಕಾರರು ಹೇತುವನ್ನಾಗಿ ಹೇಳಿದ್ದಾರೆ. ಅಲ್ಲದೇ, ಇದೇ ವಾಕ್ಯದ ಉತ್ತರ ಶೇಷದಲ್ಲಿ ಯತೋ ಭೂಮಿಂ ಜನಯನ್ ಎಂಬ ಮಂತ್ರ ಭಾಗದಲ್ಲಿ ಯತಃ ಎಂಬ ಶಬ್ದದಿಂದ ಕರಣವನ್ನೇ ಮುಖ್ಯವಾಗಿ ಸ್ವೀಕರಿಸಿರುವುದರಿಂದ ಇಲ್ಲಿ ಕರಣವನ್ನೇ ಗ್ರಹಣ ಮಾಡಿದ್ದಾರೆ. ಜೊತೆಗೆ ಆರಂಭಣಶಬ್ದಾದಿಭ್ಯಃ ಎಂಬಲ್ಲಿ ಆದಿಶಬ್ದವಿದೆ. ಆದಿಶಬ್ದದಿಂದ ಉಕ್ತವಾದ ಧಿಕ್ಕಾರವನ್ನೂ ಹೇತುವಾಗಿ ತೆಗೆದುಕೊಳ್ಳಬೇಕು. ಕಿಂ ಸ್ವಿದಾಸೀತ್ ಎಂಬುದು ಪ್ರಶ್ನೆಯೇ ಆಗಿದ್ದರೆ, ಅದಕ್ಕೆ ಒಂದು ಉತ್ತರವಿರಬೇಕಾಗಿದ್ದಿತು. ಮಂತ್ರದಲ್ಲಿ ಅದಕ್ಕೆ ಉತ್ತರವಿಲ್ಲ, ಆದ್ದರಿಂದ ಕಿಂ ಎಂಬುದು ಧಿಕ್ಕಾರಾರ್ಥದಲ್ಲಿದೆ. ಧಿಕ್ಕಾರವನ್ನು ಮಾಡಿದ್ದರಿಂದ ಕರಣಾದಿಗಳು ಸರ್ವಥಾ ಇಲ್ಲ ಎಂದು ಗ್ರಹಣ ಮಾಡಿದರೆ ಪ್ರಕೃತ್ಯಾದಿಗಳಿಗೆ ಕಾರಣತ್ವ ಹೇಳುವ ಶ್ರುತಿಪುರಾಣಗಳ ವಿರೋಧವು ಬರುತ್ತದೆ. ಆದ್ದರಿಂದ ಬಲವಿದ್ದವನಿಗೆ ಆಯುಧದಿಂದ ಏನಾಗಬೇಕು ಎಂಬ ಪ್ರಯೋಗದಲ್ಲಿ, ಆಯುಧಗಳನ್ನು ತಿರಸ್ಕರಿಸಿದರೆ ಹೇಗೆ ಆಯುಧಗಳಿಗೆ ಅಪ್ರಾಧಾನ್ಯವು ತಿಳಿಯುವುದೋ, ಅಸತ್ವವು ತಿಳಿಯುವುದಿಲ್ಲವೋ, ಹಾಗೆಯೇ ಇಲ್ಲಿ ಆರಂಭಣಾದಿಗಳನ್ನು ಧಿಕ್ಕಾರ ಮಾಡಿದರೆ ಆರಂಭಣಾಧಿಗಳಿಗೆ ಅಪ್ರಾಧಾನ್ಯವೇ ತಿಳಿಯುತ್ತದೆ ಹೊರತು ಆರಂಭಣಾದಿಗಳ ಅಭಾವವು ಇಲ್ಲಿ

ಅಧಿಕರಣದಲ್ಲಿ ನಿನಗೆ ವಾಚಾರಂಭಣ ಶ್ರುತಿಯು ವಿಷಯವಾಕ್ಯವಾಗಿದೆ. ಆ ವಾಕ್ಯವು ಹೀಗಿದೆ : 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬುದಾಗಿ ಅದಕ್ಕೆ ನಿನ್ನ ಅರ್ಥವು ಹೀಗೆ : ಯಾವ ಕಾರಣದಿಂದ ನಾಮಧೇಯಂ= ನಾಮಾತ್ಮಕವಾದ ಮತ್ತು ರೂಪಾತ್ಮಕವಾದ ಜಗತ್ತು, ವಾಚಾರಂಭಣಂ= ವಾಗಿಂದ್ರಿಯದಿಂದ ಆರಂಭವುಳ್ಳದ್ದಾಗಿದೆಯೋ ಎಂದರೆ ವಾಗಿಂದ್ರಿಯರೂಪವಾದ ಕಾರಣದಿಂದ ವ್ಯಂಗ್ಯವಾಗಿದೆಯೋ, ಆ ಕಾರಣದಿಂದ, ವಿಕಾರಃ= ವಿವಿಧಾಕಾರವುಳ್ಳ ಘಟಶರಾವಾದಿರೂಪವಾದ ಜಗತ್ತು, ಮೃತ್ತಿಕೇತಿ= ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಘಟಾದಿಗಳು ಮೃತ್ತಿನಿಂದಲೇ ಉಂಟಾಗುವುದರಿಂದ ಮೃತ್ತಿಕಾ ಮೊದಲಾದ ಉಪಾದಾನ ಜನ್ಯವಾಗಿದೆಯೋ, ಆ ಕಾರಣದಿಂದ, ಎಂದರೆ ನಾಮಾತ್ಮಕವಾದ ಜಗತ್ತು ಮತ್ತು ರೂಪಾತ್ಮಕವಾದ ಜಗತ್ತು ತನ್ನ ತನ್ನ ಕಾರ್ಯಗಳಿಂದ ಜನ್ಯವಾಗಿರುವುದರಿಂದ, ಸತ್ಯಂ= ಸತ್ಯದಂತೆ ಎಂದು ಅರ್ಥವನ್ನು ಮಾಡಿ ಅಸತ್ಯತ್ವವನ್ನು ವ್ಯಾವೃತ್ತಿ ಮಾಡಿ ಸ್ಪಷ್ಟವಾಗಿ ನೀನು ಸತ್ಯತ್ವವನ್ನು ಹೇಳಿರುವುದರಿಂದ ಅಪರಮಾರ್ಥತಃ ಎಂದೇ ಅಧ್ಯಾಹಾರವನ್ನು ಮಾಡು. ಆಗ ಜಗತ್ತು ರಕ್ಷಿತವಾಗುತ್ತದೆ. ಒಂದು ಪಕ್ಷ ವಾಚಾರಂಭಣಂ ಎಂಬಲ್ಲಿಯೂ, ನಾಮಧೇಯಂ ಎಂಬಲ್ಲಿಯೂ ಮಾತ್ರ ಶಬ್ದಗಳನ್ನು ಅಧ್ಯಾಹಾರ ಮಾಡಿ, ವಾಚಾರಂಭಣಮಾತ್ರಂ, ನಾಮಧೇಯಮಾತ್ರಂ ವಾಗಿಂದ್ರಿಯದಿಂದ ಉತ್ಪತ್ತಿ ಮಾತ್ರ, ಹೆಸರು ಮಾತ್ರ, ಆದರೆ ವಸ್ತುವು ಇಲ್ಲ ಎಂದು ಅರ್ಥಮಾಡುವುದಾದರೆ ನಾವು ಹಿಂದೆ ಹೇಳಿದ ಶ್ರುತಿಗಳಿಗೆ ಮತ್ತು ಸೂತ್ರಗಳಿಗೆ ಅನುಸಾರವಾಗಿ ಅಪರಮಾರ್ಥತಃ ಎಂಬ ಒಂದೇ ಪದವನ್ನು ಅಧ್ಯಾಹಾರ ಮಾಡು. ಎರಡು ಕಡೆ ಮಾತ್ರ ಪದವನ್ನು ಅಧ್ಯಾಹಾರ ಮಾಡಬೇಡ. ಸರ್ವ ವಿನಾಶಕ್ಕಾಗಿ ಏಕೆ ಪ್ರಯತ್ನಿಸುತ್ತೀಯೇ? ಅದೂ ಅಲ್ಲದೆ ಸೂತ್ರದಲ್ಲಿ ಆರಂಭಣ ಶಬ್ದಾದಿಭ್ಯಃ ಎಂದು ಹೇಳಿರುವುದರಿಂದ ಈ ನಿನ್ನ ವಾಕ್ಯವು ಇಲ್ಲಿ ವಿಷಯ ವಾಕ್ಯವೇ ಅಲ್ಲ. ಇದೇ ವಿಷಯವಾಕ್ಯವಾಗಿದ್ದರೆ ಸೂತ್ರಕಾರರು ಮೊದಲನೆಯ ಪದವಾದ ವಾಚಾ ಎಂದಿಷ್ಟೇ ಅಥವಾ ಅಲ್ಪಾಕ್ಷರವಾದ ಕಾರಣದಿಂದಲೂ ವಾಚಾ ಎಂದಿಷ್ಟೇ ಹೇಳಬೇಕಾಗಿದ್ದಿತು. ಅನೇಕ ಅಕ್ಷರಗಳನ್ನು ಒಳಗೊಂಡಿರುವ ಆರಂಭಣ ಎಂಬ ಪದದ ಸ್ವೀಕಾರವು ಅನುಚಿತವಾಗುತ್ತದೆ. ಆದ್ದರಿಂದ ನಮ್ಮ ಆಚಾರ್ಯರು ಹೇಳಿದ ಕಿಂ ಸ್ವಿದಾಸೀತ್ ಅಧಿಷ್ಠಾನಂ ಎಂಬುದೇ ವಿಷಯ ವಾಕ್ಯವೆಂದು ಸ್ವೀಕರಿಸಬೇಕು. ಇನ್ನು ಅನನ್ಯತ್ವಂ ಎಂಬ ಶಬ್ದಕ್ಕೆ ನ ವಿದ್ಯತೇ ಅನ್ಯತ್ ಯಸ್ಯ ತತ್ ಅನನ್ಯಂ, ತಸ್ಯ ಭಾವಃ ಅನನ್ಯತ್ವಂ ಎಂದು ಬಹುವ್ರೀಹಿಸಮಾಸವನ್ನು ಮಾಡಿ ದ್ವಿತೀಯ ವಸ್ತುವಿನ ಅಭಾವವನ್ನು ಪ್ರತಿಪಾದನೆ ಮಾಡಿದರೆ ಹಿಂದೆ ಹೇಳಿದ ಅನೇಕ ಸೂತ್ರಗಳ ವಿರೋಧವು ಬರುತ್ತವೆ. ವಿಷಯ ವಾಕ್ಯದಲ್ಲಿ ದ್ವಿತೀಯಾಭಾವವು ಕಂಡುಬರುವುದಿಲ್ಲ. ಆದ್ದರಿಂದ ಹೀನವಾದ ಬಹುವ್ರೀಹಿ ಸಮಾಸವನ್ನು ಬಿಟ್ಟು ಶ್ರೇಷ್ಠವಾದ ತತ್ಪುರುಷಸಮಾಸವನ್ನು ಆಶ್ರಯಿಸಿ ಅನಶ್ವಪದದಿಂದ ಅಶ್ವಭಿನ್ನವಾದ ಇನ್ನೊಂದು ಪಶುವನ್ನು ಸ್ವೀಕರಿಸುವಂತೆ ಅನನ್ಯ ಪದದಿಂದ ನ ಅನ್ಯತ್

ಪ್ರತಿಪಾದಿಸಲ್ಪಡುವುದಿಲ್ಲ. ಅದೂ ಅಲ್ಲದೆ, ಇದೇ ಅಧಿಕರಣದಲ್ಲಿ ಉತ್ತರ ಸೂತ್ರದಲ್ಲಿ ಸೂತ್ರಕಾರರು ಸತ್ವಾಚ್ಚ ಅವರಸ್ಯ ಎಂದು ಹೇಳಿ ಬ್ರಹ್ಮಭಿನ್ನವಾದ ಅಪ್ರಧಾನವಾದ ಜಗತ್ತಿನ ಸತ್ಯತ್ವವನ್ನು ಅಂಗೀಕರಿಸಿದ್ದಾರೆ. ಅಂತಹ ಸೂತ್ರಕಾರರು ಇದೇ ಅಧಿಕರಣದ ಮೊದಲನೆಯ ಸೂತ್ರವಾದ ತದನನ್ಯತ್ವಂ ಆರಂಭಣ ಶಬ್ದಾದಿಭ್ಯಃ ಎಂಬ ಸೂತ್ರದಲ್ಲಿ ಹೇಗೆ ಬ್ರಹ್ಮವ್ಯತಿರಿಕ್ತವಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಲು ಸಾಧ್ಯ ಎಂದು ಅಭಿಪ್ರಾಯ.

**ಸ್ವತಂತ್ರಕಾರಣಸ್ಯಾನ್ಯಸ್ಯೇಶೇ ಶೂನ್ಯತ್ವತಃ ಪರಂ ।**
**ತದನನ್ಯತ್ವಮಪ್ಯಾಹ ಕ್ವಚಿತ್ ಸೂತ್ರೇ ಸ ಸೂತ್ರಕೃತ್ ॥ ೨೩೧ ॥**

**ಅರ್ಥ–** ಪರಂ= ಕೇವಲ, ಅನ್ಯಸ್ಯ ಸ್ವತಂತ್ರಕಾರಣಸ್ಯ= ಇನ್ನೊಂದು ಸ್ವತಂತ್ರಕಾರಣವು, ಈಶೇ= ಈಶನಲ್ಲಿ, ಶೂನ್ಯತ್ವತಃ= ಇಲ್ಲದಿರುವ ಕಾರಣದಿಂದ, ಸ ಸೂತ್ರಕೃತ್= ಆ ಸೂತ್ರಕಾರರು, ಕ್ವಚಿತ್ಸೂತ್ರೇ= ಒಂದು ಕಡೆ ಸೂತ್ರದಲ್ಲಿ ಇಲ್ಲಿ, ತದನನ್ಯತ್ವಮಪಿ= ಸ್ವತಂತ್ರಕಾರಣಕ್ಕೆ ಬ್ರಹ್ಮನಿಂದ ಅನನ್ಯತ್ವವನ್ನು, ಆಹ= ಹೇಳಿದ್ದಾರೆ.

**ಅನುವಾದ–** ಜಗತ್ಸೃಷ್ಟಿಯ ವಿಷಯದಲ್ಲಿ ಈಶನನ್ನು ಬಿಟ್ಟು ಬೇರೆ ಸ್ವತಂತ್ರಕಾರಣ ವಿಲ್ಲದಿರುವ ನಿಮಿತ್ತದಿಂದ ಸೂತ್ರಕಾರರು ಇಲ್ಲಿ ಒಂದು ಕಡೆ ಸೂತ್ರದಲ್ಲಿ ಸ್ವತಂತ್ರಕಾರಣಕ್ಕೆ ಬ್ರಹ್ಮನಿಂದ ಅನನ್ಯತ್ವವನ್ನು ಹೇಳಿದ್ದಾರೆ.

**ಭಾವವಿಲಾಸಿನೀ–** ಕಸ್ತರ್ಹಿಸೂತ್ರಾರ್ಥ ಇತ್ಯತ ಆಹ – **ಸ್ವತಂತ್ರೇತಿ** ॥ ಸ್ವತಂತ್ರಕಾರಣ-ಸ್ಯೇತ್ಯನ್ಯಶಬ್ದಾರ್ಥ ಕಥನಮ್ । ಈಶೇ ಬ್ರಹ್ಮಣಿ ಶೂನ್ಯತ್ವತೋಽಭಾವಾತ್ತದನನ್ಯತ್ವಂ ತಸ್ಯಬ್ರಹ್ಮಣೋ ನ ವಿದ್ಯತೇಽನ್ಯಸ್ವತಂತ್ರೋ ಯಸ್ಯ ಸೋಽನನ್ಯಸ್ತಸ್ಯ ಭಾವೋಽನನ್ಯತ್ವಮ್ । ಬ್ರಹ್ಮಣಿ ಸ್ವತಂತ್ರ-ಕಾರಣಾಂತರನಿರಪೇಕ್ಷತ್ವರೂಪಮನನ್ಯತ್ವಮಿತ್ಯರ್ಥಃ । ಅಹಮನ್ಯಸ್ಸೋಽನ್ಯ ಇತಿ ಪರಸ್ಪರ-ನಿರಪೇಕ್ಷೇಷು ಲೋಕೇನ್ಯಪದಪ್ರಯೋಗದರ್ಶನಾತ್ । ಉತ್ತರಸೂತ್ರೇಽವರ- ಸತ್ತ್ವವಿಧಾನಾಚ್ಚ ತದ್ವಿಪರೀತವರಶಬ್ದವಾಚ್ಯಪ್ರಧಾನ ನಿಷೇಧಸ್ಯೈವಾತ್ರ ನ್ಯಾಯ್ಯತ್ವಾದಿತಿ ಭಾವಃ ॥ ೨೩೧ ॥

**ವಿವರಣೆ–** ಹಾಗಾದರೆ ನಿಮ್ಮ ರೀತಿಯಲ್ಲಿ ಸೂತ್ರಾರ್ಥವೇನು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ತದನನ್ಯತ್ವಂ ಎಂಬಲ್ಲಿರುವ ಅನ್ಯಶಬ್ದಕ್ಕೆ ಸ್ವತಂತ್ರಕಾರಣ ಎಂದು ಅರ್ಥ. ನ ವಿದ್ಯತೇ ಅನ್ಯತ್ ಸ್ವತಂತ್ರಕಾರಣಂ ಯಸ್ಯ ಎಂದು ವಿಗ್ರಹವನ್ನು ಹೇಳಿ ಬಹುವ್ರೀಹಿಸಮಾಸವನ್ನು ಮಾಡಿದರೂ ತೊಂದರೆಯಿಲ್ಲ. ಬ್ರಹ್ಮನಿಗೆ ಸ್ವತಂತ್ರಕಾರಣಾಂತರ ಅನಪೇಕ್ಷತ್ವರೂಪಮಹಿಮೆಯೇ ಸಿದ್ಧವಾಗುತ್ತದೆ. ವಿಭಾಗವನ್ನು ಹೊಂದಿದ ಅಣ್ಣತಮ್ಮಂದಿರು ನಾನು ಅನ್ಯ (ಬೇರೆ), ಅವನು ಅನ್ಯ (ಬೇರೆ) ಎಂದು ಪರಸ್ಪರ ನಿರಪೇಕ್ಷವಾದ ಸ್ಥಳದಲ್ಲಿ ಲೋಕದಲ್ಲಿ ಅನ್ಯಶಬ್ದವನ್ನು ಪ್ರಯೋಗಮಾಡುವುದು ಕಂಡಿದೆ. ಆದ್ದರಿಂದ ಅನ್ಯಶಬ್ದಕ್ಕೆ ಸ್ವತಂತ್ರಕಾರಣ ಎಂದು ಅರ್ಥಮಾಡುವುದು ಯುಕ್ತವಾಗುತ್ತದೆ. ಮುಂದಿನ ಗುಣಸೂತ್ರದಲ್ಲಿ ಸತ್ವಾಚ್ಚ ಅವರಸ್ಯ ಎಂದು ಹೇಳಿ, ಅವರವಾದ ಕಾರಣದ

ಸತ್ತ್ವವನ್ನು ವಿಧಾನ ಮಾಡುವುದರಿಂದ ತದನನ್ಯತ್ವಂ ಎಂಬಲ್ಲಿ ಅದಕ್ಕೆ ವಿರುದ್ಧವಾದ ಪ್ರಧಾನವಾದ ಸ್ವತಂತ್ರ ಕಾರಣವನ್ನು ನಿಷೇಧ ಮಾಡುವುದೇ ನ್ಯಾಯವಾಗುತ್ತದೆ.

**ಯದುಚ್ಚಸ್ಯ ನ ನೀಚೈಕ್ಯಂ ಯತಃ ಸಚ್ಚ ನ ಬಾಧ್ಯತೇ ।**
**ಅತೋಽಧಿಕರಣೇಽಸ್ಮಿಂಶ್ಚ ಮಿಥ್ಯಾತ್ವಾದೇಃ ಕಥಾಪಿ ನ ॥ ೨೩೨ ॥**

**ಅರ್ಥ–** ಯತ್= ಯಾವ ಕಾರಣದಿಂದ, ಉಚ್ಚಸ್ಯ= ಶ್ರೇಷ್ಠವಾದುದಕ್ಕೆ, ನೀಚೈಕ್ಯಂ ನ= ನೀಚ ವಸ್ತುವಿನಿಂದ ಐಕ್ಯವು ಇಲ್ಲವೋ, ಯತಃ ಚ= ಮತ್ತು ಯಾವ ಕಾರಣದಿಂದ, ಸತ್= ಸತ್ಯವಾದ ವಸ್ತುವು, ನ ಬಾಧ್ಯತೇ= ಬಾಧಿಸಲ್ಪಡುವುದಿಲ್ಲವೋ, ಅತಃ= ಆ ಕಾರಣದಿಂದ, ಅಸ್ಮಿಂಶ್ಚ ಅಧಿಕರಣೇ= ಈ ಅಧಿಕರಣದಲ್ಲಿಯೂ ಸಹ, ಮಿಥ್ಯಾತ್ವಾದೇಃ= ಮಿಥ್ಯಾತ್ವ ಮತ್ತು ಅಭೇದದ, ಕಥಾಪಿ= ಕಥೆಯೂ ಸಹ, ನ= ಇಲ್ಲ.

**ಅನುವಾದ–** ಸತ್ತ್ವಾಚ್ಚಾವರಸ್ಯ ಎಂಬ ಸೂತ್ರದಲ್ಲಿ ಬ್ರಹ್ಮವ್ಯತಿರಿಕ್ತವಾದ ಪ್ರಧಾನಾದಿಗಳನ್ನು ಅವರ ಎಂದು ಹೇಳಿರುವುದರಿಂದ ನೀಚಕ್ಕೂ ಮತ್ತು ಉಚ್ಚಕ್ಕೂ ಐಕ್ಯವಿಲ್ಲ ಮತ್ತು ಸತ್ತ್ವಾಚ್ಚ ಎಂದು ಸತ್ವವನ್ನು ಹೇಳಿರುವುದರಿಂದ ಪ್ರಧಾನಾದಿಗಳಿಗೆ ಬಾಧ್ಯತ್ವವೂ ಇಲ್ಲ. ಆದ್ದರಿಂದ ಈ ಅಧಿಕರಣದಲ್ಲಿಯೂ ಸಹ ಮಿಥ್ಯಾತ್ವದ ಸುದ್ದಿಯಾಗಲೀ ಅಥವಾ ಅಭೇದದ ಸುದ್ದಿಯಾಗಲೀ ಇಲ್ಲ.

**ಭಾವವಿಲಾಸಿನೀ–** ಯದ್ಯಸ್ಮಾನ್ನೀಚೈಕ್ಯಂ ನೀಚಾದೈಕ್ಯಮ್ । ಯತೋ ಯಸ್ಮಾತ್ । ಅತಸ್ತಸ್ಮಾತ್ ಕಾರಣಾತ್ । ಮಿಥ್ಯಾತ್ವಾದೇರಿತ್ಯತ್ರಾದಿಪದೇನಾಭೇದಗ್ರಹಣಮ್ । ಜಗತಸ್ಸತ್ತ್ವಕಥನಾತ್ ಮಿಥ್ಯಾತ್ವಮರ್ಥೋ ನ । ಅವರತ್ವಕಥನಾತ್ಪ್ರಧಾನಾಪ್ರಧಾನಯೋರಭೇದೋಽಪಿನಾರ್ಥಃ । ಕಿಂತುಬಹುವ್ರೀಹ್ಯಾಶ್ರಯಣೇ ಸ್ವತಂತ್ರಕಾರಣಾಂತರಭಾವಃ । ತತ್ಪುರುಷಾಶ್ರಯಣೇ ಘಟೋಽನೇತಿ ವದನ್ನ್ಯೋಽಜೀವಾದಿರ್ನೇತ್ಯುಕ್ತೇ ಜೀವಭಿನ್ನಂ ಬ್ರಹ್ಮೋಚ್ಯತೇ । ತಸ್ಯಭಾವ ಇತಿ ವ್ಯುತ್ಪತ್ತ್ಯಾ ಜೀವೇಶ್ವರಭೇದೋ ವಾರ್ಥ ಇತಿ ಭಾವಃ ॥ ೨೩೨ ॥

**ವಿವರಣೆ–** ಸತ್ತ್ವಾಚ್ಚಾವರಸ್ಯ ಎಂಬ ಸೂತ್ರದಿಂದ ಸತ್ವಾತ್ ಎಂಬ ಪದದಿಂದ ಮತ್ತು ಅವರ ಎಂಬ ಪದದಿಂದ ಕ್ರಮವಾಗಿ ಮಿಥ್ಯಾತ್ವವು ಮತ್ತು ಅಭೇದವು ನಿರಾಕರಿಸಲ್ಪಡುತ್ತದೆ. ಆದ್ದರಿಂದ ತದನನ್ಯತ್ವಂ ಎಂಬಲ್ಲಿ ಬಹುವ್ರೀಹಿ ಯನ್ನು ಆಶ್ರಯಿಸಿದರೆ ಬ್ರಹ್ಮನಿಗೆ ಸ್ವತಂತ್ರ ಕಾರಣಾಂತರ ಶೂನ್ಯತ್ವವು ಸಿದ್ಧವಾಗುತ್ತದೆ. ತತ್ಪುರುಷವನ್ನು ಆಶ್ರಯಿಸಿದರೆ ತಸ್ಮಾದನ್ಯಃ ತದನ್ಯಃ ತಸ್ಯಭಾವಃ ತದನ್ಯತ್ವಂ ಎಂಬ ವಿಗ್ರಹಪ್ರದರ್ಶನದಿಂದ ಬ್ರಹ್ಮನಲ್ಲಿ ಜೀವನ ಭೇದವೇ ಸಿದ್ಧವಾಗುತ್ತದೆ.

**ಅಪ್ರಧಾನಸ್ಯ ಜಗತಃ ಸತ್ವಂ ಸಿದ್ಧಮಭೂನ್ಮಮ ।**
**ಹೇತುಂ ಕರೋತಿ ಯದ್ ವ್ಯಾಸಃ ತತ್ಸತ್ವಂ ಕೇನ ನೇಷ್ಯತೇ ॥ ೨೩೩ ॥**

ಅನನ್ಯತ್ ಎಂದು ವಿಗ್ರಹವನ್ನು ಹೇಳಿ, ಅನ್ಯ ಪದಾರ್ಥವಾದ ಜಗತ್ತಿನಿಂದ ಭಿನ್ನನಾದವನು ಬ್ರಹ್ಮ ಎಂದು ಹೇಳುವುದೇ ಒಳ್ಳೆಯದು. ಈ ಭೇದವನ್ನು ಉಪಪಾದನೆ ಮಾಡುವುದಕ್ಕೆ ಅನನ್ಯತ್ ಎಂಬಲ್ಲಿರುವ ನಞ್ ಪದಕ್ಕೆ ಅಧರ್ಮ ಎಂಬಲ್ಲಿ ಹೇಗೆ ಧರ್ಮವಿರೋಧಿ ಯಾದುದು ಎಂದು ಅರ್ಥವಾಗುತ್ತದೋ, ಹಾಗೆ ವಿರೋಧಾರ್ಥವನ್ನು ಸ್ವೀಕರಿಸಿ ಜಗದ್ವಿರುದ್ಧನಾದವನು ಬ್ರಹ್ಮ ಎಂದು ಅರ್ಥವೇ ಸಿದ್ಧವಾಗುತ್ತದೆ. ಆ ವಿರೋಧವನ್ನು ಉಪಪಾದನೆ ಮಾಡುವುದಕ್ಕೆ ನಞ್ ಪದಕ್ಕೆ ಅಘಟಂ ಭೂತಲಂ ಮುಂತಾದ ಸ್ಥಳದಲ್ಲಿ ಇರುವಂತೆ ಅಭಾವಾರ್ಥವನ್ನಾದರೂ ಸ್ವೀಕರಿಸಿ ಬ್ರಹ್ಮನಲ್ಲಿ ಜಗತ್ತಿನ ಅಭಾವವಿದೆ ಎಂದರೆ ಬ್ರಹ್ಮನು ಮಹಾಕಾಯನಾದುದರಿಂದ ಅವನ ಶರೀರದ ಏಕದೇಶದಲ್ಲಿ ಜಗತ್ತು ಇದೆ, ಏಕದೇಶಾಂತರದಲ್ಲಿ ಜಗತ್ತು ಇಲ್ಲ ಎಂಬ ಅರ್ಥವನ್ನಾದರೂ ಮಾಡಬೇಕು. ಹೀಗೆ, 'ನಞ್' ಪದಕ್ಕೆ ಭೇದ, ವಿರೋಧ ಅಥವಾ ಅಭಾವ ಎಂದು ಯಾವ ಅರ್ಥವನ್ನು ಮಾಡಿದರೂ ಬ್ರಹ್ಮನು ಜಗತ್ತಿಗಿಂತ ಭಿನ್ನನೆಂದೇ ಸಿದ್ಧನಾಗುತ್ತಾನೆ. ನೀನು ಮಾಡಿದಂತೆ ಬಹುವ್ರೀಹಿಯನ್ನು ಮಾತ್ರ ಆಶ್ರಯಿಸಬಾರದು. ಹಾಗಾದರೆ ನಿಮಗಾದರೆ ವಿಷಯ ವಾಕ್ಯದಲ್ಲಿ ಅಧಿಷ್ಠಾನವು ಪ್ರಥಮವಾಗಿ ಪ್ರಸಕ್ತವಾಗಿರುವುದರಿಂದ ಸೂತ್ರದಲ್ಲಿ ಅಧಿಷ್ಠಾನ ಶಬ್ದಾದಿಭ್ಯಃ ಎಂದು ಹೇಳದೆ ಆರಂಭಣಶಬ್ದಾದಿಭ್ಯಃ ಎಂದು ಹೇಗೆ ಹೇಳಿದ್ದಾರೆ ಎಂದು ಆಕ್ಷೇಪವು ಬರುತ್ತದೆ. ಅದಕ್ಕೆ ಏನು ಉತ್ತರ ಎಂದು ಕೇಳಿದರೆ, ಅದಕ್ಕೆ ನಾವು ಹೀಗೆ ಉತ್ತರವನ್ನು ಹೇಳುತ್ತೇವೆ. ಹೌದು ಅಧಿ ಷ್ಠಾನ ಶಬ್ದವು ಮೊದಲೇ ಇದೆ. ಆದರೆ ಅಧಿಷ್ಠಾನ ಶಬ್ದವು ಅಧಿಕರಣವನ್ನು ಹೇಳುತ್ತದೆ. ಅಧಿಕರಣವು ಕಾರಕಸಮೂಹದಲ್ಲಿ ಅಮುಖ್ಯವಾದುದು. ಕರಣಾದಿಗಳೇ ಮುಖ್ಯವಾದವು. ಆದ್ದರಿಂದ ಅಮುಖ್ಯವಾದ ಅಧಿಕರಣವನ್ನು ಉಪೇಕ್ಷಿಸಿ, ಪ್ರಧಾನವಾದ ಕರಣವನ್ನು ಸ್ವೀಕರಿಸಿ ಅದನ್ನು ಹೇಳುವ ಆರಂಭಣಶಬ್ದವನ್ನೇ ಸೂತ್ರಕಾರರು ಹೇತುವನ್ನಾಗಿ ಹೇಳಿದ್ದಾರೆ. ಅಲ್ಲದೇ, ಇದೇ ವಾಕ್ಯದ ಉತ್ತರ ಶೇಷದಲ್ಲಿ ಯತೋ ಭೂಮಿಂ ಜನಯನ್ ಎಂಬ ಮಂತ್ರ ಭಾಗದಲ್ಲಿ ಯತಃ ಎಂಬ ಶಬ್ದದಿಂದ ಕರಣವನ್ನೇ ಮುಖ್ಯವಾಗಿ ಸ್ವೀಕರಿಸಿರುವುದರಿಂದ ಇಲ್ಲಿ ಕರಣವನ್ನೇ ಗ್ರಹಣ ಮಾಡಿದ್ದಾರೆ. ಜೊತೆಗೆ ಆರಂಭಣಶಬ್ದಾದಿಭ್ಯಃ ಎಂಬಲ್ಲಿ ಆದಿಶಬ್ದವಿದೆ. ಆದಿಶಬ್ದದಿಂದ ಉಕ್ತವಾದ ಧಿಕ್ಕಾರವನ್ನೂ ಹೇತುವಾಗಿ ತೆಗೆದುಕೊಳ್ಳಬೇಕು. ಕಿಂ ಸ್ವಿದಾಸೀತ್ ಎಂಬುದು ಪ್ರಶ್ನೆಯೇ ಆಗಿದ್ದರೆ, ಅದಕ್ಕೆ ಒಂದು ಉತ್ತರವಿರಬೇಕಾಗಿದ್ದಿತು. ಮಂತ್ರದಲ್ಲಿ ಅದಕ್ಕೆ ಉತ್ತರವಿಲ್ಲ, ಆದ್ದರಿಂದ ಕಿಂ ಎಂಬುದು ಧಿಕ್ಕಾರಾರ್ಥದಲ್ಲಿದೆ. ಧಿಕ್ಕಾರವನ್ನು ಮಾಡಿದ್ದರಿಂದ ಕರಣಾದಿಗಳು ಸರ್ವಥಾ ಇಲ್ಲ ಎಂದು ಗ್ರಹಣ ಮಾಡಿದರೆ ಪ್ರಕೃತ್ಯಾದಿಗಳಿಗೆ ಕಾರಣತ್ವ ಹೇಳುವ ಶ್ರುತಿಪುರಾಣಗಳ ವಿರೋಧವು ಬರುತ್ತದೆ. ಆದ್ದರಿಂದ ಬಲವಿದ್ದವನಿಗೆ ಆಯುಧದಿಂದ ಏನಾಗಬೇಕು ಎಂಬ ಪ್ರಯೋಗದಲ್ಲಿ, ಆಯುಧಗಳನ್ನು ತಿರಸ್ಕರಿಸಿದರೆ ಹೇಗೆ ಆಯುಧಗಳಿಗೆ ಅಪ್ರಾಧಾನ್ಯವು ತಿಳಿಯುವುದೋ, ಅಸತ್ವವು ತಿಳಿಯುವುದಿಲ್ಲವೋ, ಹಾಗೆಯೇ ಇಲ್ಲಿ ಆರಂಭಣಾದಿಗಳನ್ನು ಧಿಕ್ಕಾರ ಮಾಡಿದರೆ ಆರಂಭಣಾಧಿಗಳಿಗೆ ಅಪ್ರಾಧಾನ್ಯವೇ ತಿಳಿಯುತ್ತದೆ ಹೊರತು ಆರಂಭಣಾದಿಗಳ ಅಭಾವವು ಇಲ್ಲಿ

**ಅರ್ಥ–** ಮಮ= ನನಗೆ, ಅಪ್ರಧಾನಸ್ಯ ಜಗತಃ= ಅಪ್ರಧಾನವಾದ ಜಗತ್ತಿಗೆ, ಸತ್ತ್ವಂಸಿದ್ಧಮಭೂತ್= ಸತ್ತ್ವವು ಸಿದ್ಧವಾಯಿತು, ವ್ಯಾಸಃ= ವೇದವ್ಯಾಸರು, ಯತ್= ಯಾವ ಸತ್ತ್ವವನ್ನು, ಹೇತುಂ ಕರೋತಿ= ಹೇತುವನ್ನಾಗಿ ಮಾಡುತ್ತಾರೆಯೋ, ತತ್ ಸತ್ತ್ವಂ= ಅಂತಹ ಸತ್ತ್ವವು, ಕೇನ= ಯಾರಿಂದ, ನೇಷ್ಯತೇ= ಅಂಗೀಕರಿಸಲ್ಪಡುವುದಿಲ್ಲ?

**ಅನುವಾದ–** ನನಗೆ ಅಪ್ರಧಾನವಾದ ಜಗತ್ತಿಗೆ ಸತ್ಯತ್ವವು ಸಿದ್ಧವಾಯಿತು. ಸೂತ್ರಕಾರರಾದ ವ್ಯಾಸರು ಸತ್ವಾಚ್ಚಾವರಸ್ಯ ಎಂದು ಹೇಳಿ ಯಾವ ಜಗತ್ತಿನ ಸತ್ಯತ್ವವನ್ನು ಹೇತುವಾಗಿ ಉಪನ್ಯಾಸ ಮಾಡಿದ್ದಾರೆಯೋ, ಅಂತಹ ಜಗತ್ತಿನ ಸತ್ಯತ್ವವನ್ನು ಯಾರು ಅಂಗೀಕರಿಸುವುದಿಲ್ಲ?

**ಭಾವವಿಲಾಸಿನೀ–** ಅಸ್ಮದಭಿಮತಂ ಜಗತ್ಸತ್ಯತ್ವಮಪ್ಯಸ್ಮಾದೇವ ಸೂತ್ರಾತ್ ಸಿದ್ಧಮಿತ್ಯಾಹ – **ಅಪ್ರಧಾನಸ್ಯೇತಿ** ॥ ಯತ್ಸತ್ತ್ವಂ ಹೇತೂಕರೋತಿ । ಜಗತ್ಸೃಷ್ಟ್ಯುಪಪತ್ತೌ ಹೇತುತಯಾಽಸೂತ್ರಯತ್ । ಜಗತ್ಸೃಷ್ಟಿರುಪಪನ್ನಾ ಅಪ್ರಧಾನಕರಣಾದಿಜಗತಸ್ಸತ್ತ್ವಾದಿತಿ ಸೂತ್ರಾರ್ಥ ಪರ್ಯಾಲೋಚನಯಾ ಕರಣಾದಿಜಗತ್ಸತ್ತ್ವಮೇವ ಸೃಷ್ಟ್ಯುಪಪತ್ತೌ ಹೇತುರುಕ್ತಃ । ತಚ್ಚಮಿಥ್ಯಾತ್ವ ವಿರೋಧಿಪಾರಮಾರ್ಥಿಕಸತ್ತ್ವಮೇವಭವೇತ್ । ಅನ್ಯಥಾಹೇತೋಃ ಸ್ವರೂಪಾಸಿದ್ಧಿಪ್ರಸಂಗಾದಿತಿ ಭಾವಃ ॥ ೨೩೩ ॥

**ವಿವರಣೆ–** ಸತ್ವಾಚ್ಚಾವರಸ್ಯ ಎಂಬ ಸೂತ್ರದಲ್ಲಿ ಸತ್ವಾತ್ ಎಂದು ಹೇಳಿ ವ್ಯಾಸರು ಅಪ್ರಧಾನವಾದ ವಸ್ತುವಿನ ಸತ್ತ್ವವನ್ನು ಹೇತುವಾಗಿ ಉಪನ್ಯಾಸ ಮಾಡಿದ್ದಾರೆ. ಜಗತ್ತಿನ ಸತ್ತ್ವವನ್ನು ಅಂಗೀಕರಿಸದಿದ್ದರೆ ಈ ಹೇತುವಿಗೆ ಸ್ವರೂಪಾಸಿದ್ಧಿರೂಪವಾದ ದೋಷವು ಬರುತ್ತದೆ. ಯಾವ ವಿವೇಕಿಯಾದವನು ಸ್ವರೂಪಾಸಿದ್ಧಿ ಉಳ್ಳ ಹೇತುವನ್ನು ಉಪದೇಶ ಮಾಡುತ್ತಾನೆ? ಹೀಗಿರುವಾಗ ಸರ್ವಜ್ಞ ಚೂಡಾಮಣಿಗಳಾದ ವ್ಯಾಸರು ಹೇಗೆ ಸ್ವರೂಪಾಸಿದ್ಧಿದೋಷದಿಂದ ದುಷ್ಟವಾದ ಹೇತುವನ್ನು ಉಪದೇಶ ಮಾಡುತ್ತಾರೆ? ಆದ್ದರಿಂದ ಹೇತುವಿಗೆ ಸ್ವರೂಪಾಸಿದ್ಧಿ ದೋಷವಿಲ್ಲ. ಆದ್ದರಿಂದ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ.

ಕಿಂ ಚ ಭೋಕ್ತುಃ ಪರಾತ್ಮತ್ವಾಪತ್ತೇಃ ಸೋಽಪ್ಯವಿಭಾಗವಾನ್ ।
ಇತಿ ಚೇನ್ನೇತಿ ಯಾಂ ಪೂರ್ವಪಕ್ಷೀಕೃತ್ಯ ನಿಷೇಧತಿ ॥ ೨೩೪ ॥

ಅವಿಭಾಗಾಭಿದಾಂ ಜೀವಬ್ರಹ್ಮಣೋರೇಕತಾಂ ತು ತಾಂ ।
ಸಿದ್ಧಾಂತಯತಿ ಯಃ ಸೂತ್ರಭಾಷ್ಯಕೃತ್ ಕಿಲ ದೋಷ್ಯಸೌ ॥ ೨೩೫ ॥

**ಅರ್ಥ–** ಕಿಂ ಚ= ಮತ್ತು, ಭೋಕ್ತುಃ= ಭೋಕ್ತೃವಾದ ಜೀವನಿಗೆ, ಪರಾತ್ಮತ್ವಾಪತ್ತೇಃ= ಪರಮಾತ್ಮತ್ವವು ಬರುವುದರಿಂದ, ಸೋಽಪಿ= ಆ ಜೀವನೂ ಸಹ, ಅವಿಭಾಗವಾನ್=

ಪರಮಾತ್ಮನಿಂದ ಭೇದರಹಿತನು, ಇತಿ ಚೇನ್ನ= ಎಂದು ಹೇಳಬೇಡ, ಇತಿ= ಎಂದು, ಯಾಂ= ಯಾವ, ಅವಿಭಾಗಾಭಿದಾಂ= ಅವಿಭಾಗ ಎಂಬ ಹೆಸರಿನಿಂದ ಕರೆಯಲ್ಪಡುವ, ಜೀವಬ್ರಹ್ಮಣೋರೇಕತಾಂ= ಜೀವಬ್ರಹ್ಮರ ಐಕ್ಯವನ್ನು, ಪೂರ್ವಪಕ್ಷೀಕೃತ್ಯ= ಪೂರ್ವಪಕ್ಷವನ್ನಾಗಿ ಮಾಡಿ, ನಿಷೇಧತಿ= ನಿಷೇಧ ಮಾಡುತ್ತಾರೆಯೋ, ತಾಂ ತು= ಅದೇ ಜೀವಬ್ರಹ್ಮೈಕತ್ವವನ್ನು, ಯಃ= ಯಾವನು, ಸಿದ್ಧಾಂತಯತಿ= ಸಿದ್ಧಾಂತವನ್ನಾಗಿ ಹೇಳುತ್ತಾನೆಯೋ, ಅಸೌ= ಅಂತಹ, ಸೂತ್ರಭಾಷ್ಯಕೃತ್, ಸೂತ್ರಭಾಷ್ಯಕಾರನು, ದೋಷಿ ಕಿಲ= ದುಷ್ಟನಾದವನಷ್ಟೆ?

**ಅನುವಾದ–** ಸೂತ್ರಕಾರರು ಭೋಕ್ತ್ರಾಪತ್ತೇರವಿಭಾಗಶ್ಚೇತ್ ಎಂಬ ಸೂತ್ರದ ಶಂಕಾಭಾಗದಲ್ಲಿ ಭೋಕ್ತೃವಾದ ಜೀವನಿಗೆ ಪರಮಾತ್ಮತ್ವವು ಬರುವುದರಿಂದ ಜೀವಬ್ರಹ್ಮರಿಗೆ ಭೇದವಿಲ್ಲ ಎಂದು ಹೇಳಿ ಅವಿಭಾಗಶಬ್ದವಾಚ್ಯವಾದ ಜೀವಬ್ರಹ್ಮರ ಏಕತ್ವವನ್ನು ಪೂರ್ವಪಕ್ಷವನ್ನಾಗಿ ಮಾಡಿ ಅದನ್ನು ಅಲ್ಲ ಎಂದು ಹೇಳಿ ನಿಷೇಧ ಮಾಡುತ್ತಾರೆಯೋ, ಅಂತಹ ಪೂರ್ವಪಕ್ಷವನ್ನೇ ಸಿದ್ಧಾಂತವನ್ನಾಗಿ ನಿರೂಪಿಸುವವನು ಸೂತ್ರಭಾಷ್ಯಕಾರನು ದುಷ್ಟನಾದವನಷ್ಟೆ?

**ಭಾವವಿಲಾಸಿನೀ–** ಅಪಿ ಚ ಸೂತ್ರಕೃತಾ ಸ್ವಸೂತ್ರೇ ಸ್ಪಷ್ಟಮೈಕ್ಯಸ್ಯೈವ ಪೂರ್ವಪಕ್ಷೀಕೃತತ್ವಾಚ್ಚ ನಾಸೌ ಸಿದ್ಧಾಂತ ಇತ್ಯಾಹ – **ಕಿಂಚೇತಿ** ॥ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವದಿತಿಸೂತ್ರೇ ಭೋಕ್ತುರ್ಜೀವಸ್ಯ ಪರಾತ್ಮತ್ವಾಪತ್ತೇಃ ಪರೇಽವ್ಯಯೇ ಸರ್ವ ಏಕೀಭವಂತೀತಿ ವಾಕ್ಯೇ ಶ್ರೂಯಮಾಣತ್ವಾತ್ । ಶ್ರುತೌ ಪರ ಇತ್ಯೇವ ಶ್ರವಣಾತ್ಪರಶ್ಚಾಸಾವಾತ್ಮಾ ಚೇತಿ ಶ್ರುತಿಸಮಾಖ್ಯಾಂ ಸೂಚಯಿತುಂ ಪರಾತ್ಮೇತ್ಯುಕ್ತಮ್ । ಪರಮಾತ್ಮೇತ್ಯೇವೋಕ್ತೇ ಶ್ರುತೌ ಪರಮಪದಾಭಾವೇನ ಸಮಾಖ್ಯಾಽಯೋಗಾತ್ । ಸೂತ್ರೇ ಚ ಸಮಾಖ್ಯಾಬಲಾದೇವ ಪರತ್ವಸ್ಯ ಪ್ರಾಪ್ತತ್ವಾತ್ತದನುಪಾದಾನಮಿತಿ ಭಾವಃ । ಸಃ ಜೀವಃ ಅವಿಭಾಗವಾನ್ । ವಿಭಾಗೋ ಭೇದಃ । ಅವಿಭಾಗಃ ಐಕ್ಯಮ್ । ತದ್ವಾನ್ । ಇದಂ ಚ ತಯೋರವಿಭಾಗ ಇತ್ಯಧ್ಯಾಹಾರಸಹಿತಸೌತ್ರಪದತಾತ್ಪರ್ಯಮ್ । ಅಥವಾ ನ ವಿದ್ಯತೇ ವಿಭಾಗೋ ಯಸ್ಯ ಸ ಇತಿ ವ್ಯುತ್ಪತ್ತ್ಯಾಽವಿಭಾಗವಾನಿತ್ಯುಕ್ತಮ್ । ಭೋಕ್ತೃಪದೇನ ಜೀವಸ್ಯ ಪ್ರಸ್ತುತತ್ವಾತ್ಸ ಇತಿ ಪರಾಮರ್ಶಃ । ಶ್ರುತಾವೇಕೀಭವಂತೀತಿ ಜೀವನಿಷ್ಠೈಕ್ಯಸ್ಯೈವ ಶ್ರೂಯಮಾಣತ್ವಾದಿತಿ ಭಾವೇನ ಸೌತ್ರಪದಾರ್ಥಕಥನಂ ವಾ । ಇತಿ ಚೇತ್ ಇತಿ ಪೂರ್ವಪಕ್ಷಶ್ಚೇತ್ । ನೇತಿ ಯಾಮಭಿದಾಂ ನಿಷೇಧತಿ ಅಧ್ಯಾಹೃತನಞಾ ಸಾಕ್ಷಾತ್ ಸೂತ್ರಕಾರ ಏವ ದೂಷಯತಿ । ತಾಮಭಿದಾಂ ಯಃ ಮಾಯಾವಾದೀಸಿದ್ಧಾಂತಯತಿ ಪೂರ್ವೋಕ್ತಾಧಿಕರಣದ್ವಯೇ ಸಿದ್ಧಾಂತಯತಿ । ಅಸೌ ದೋಷೀ ಪೂರ್ವೋತ್ತರವಿವೇಕಶೂನ್ಯತ್ವಾಚ್ಛಿ ದೋಷವಾನ್ ಕಿಲೇತ್ಯಪಹಾಸಃ । ಏಕಸೂತ್ರೇ ಸೂತ್ರಕೃತೈವಸ್ಪಷ್ಟಂ ಪೂರ್ವಪಕ್ಷೀಕೃತಸ್ಯ ಪ್ರಮೇಯಸ್ಯಪುನಸ್ತಸ್ಯೈವ ಸೂತ್ರಾಂತರೇ ಸಿದ್ಧಾಂತೀಕರಣಂ ಬಾಲಸ್ಯಾಪಿ ನಾಭಿಮತಮ್ । ಅತಃ ಸೌತ್ರಪ್ರತಿಜ್ಞೈವ ಪರಸ್ಯಾನಭಿಜ್ಞತಾಂ ಗಮಯತೀತಿ ಭಾವಃ ॥ ೨೩೪-೨೩೫ ॥

**ವಿವರಣೆ–** ಸೂತ್ರಕಾರರು ಸ್ವಯಂ ಐಕ್ಯವನ್ನು ಪೂರ್ವಪಕ್ಷ ಮಾಡಿರುವುದರಿಂದ ಅದು ಎಂದೂ ಸಿದ್ಧಾಂತವಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಭೋಕ್ತ್ರಾಪತ್ತೇಃ ಅವಿಭಾಗಶ್ಚೇತ್ ಸ್ಯಾಲ್ಲೋಕವತ್ ಎಂಬ ಸೂತ್ರದಲ್ಲಿ ಭೋಕ್ತೃ ಜೀವನಿಗೆ ಪರೇಽವ್ಯಯೇ ಸರ್ವ ಏಕೀ ಭವಂತಿ ಎಂದು ಪರಾತ್ಮತ್ವವು ಪ್ರಾಪ್ತವಾಗುವುದರಿಂದ ಅವಿಭಾಗವಾನ್ ಜೀವನು ಅವಿಭಾಗವುಳ್ಳವನು ಎಂದರೆ ವಿಭಾಗ ಎಂದರೆ ಭೇದ, ಅವಿಭಾಗ ಎಂದರೆ ಐಕ್ಯ ಅಂತಹ ಐಕ್ಯವುಳ್ಳವನು ಎಂದು ಪೂರ್ವಪಕ್ಷವನ್ನು ಮಾಡಿ ಆ ಅಭೇದವನ್ನು ನಞ್ ಪದವನ್ನು ಅಧ್ಯಾಹಾರ ಮಾಡಿ ಸೂತ್ರಕಾರರು ನಿಷೇಧ ಮಾಡುತ್ತಾರೆ. ಸೂತ್ರಕಾರರು ನಿಷೇಧ ಮಾಡಿದ ಈ ಪೂರ್ವಪಕ್ಷವನ್ನೇ ಯಾವ ಭಾಷ್ಯಕಾರನು ಹಿಂದಿನ ಎರಡು ಅಧಿಕರಣದಲ್ಲಿ ಎಂದರೆ ನವಕ್ತುರಾತ್ಮೋಪದೇಶಾತ್ ಎಂಬಲ್ಲಿಯೂ ಮತ್ತು ಆತ್ಮೇತಿ ತೂಪಗಚ್ಛಂತಿ ಎಂಬಲ್ಲಿಯೂ ಸಿದ್ಧಾಂತವನ್ನಾಗಿ ನಿರೂಪಿಸುತ್ತಾನೆಯೋ ಅವನೂ ಒಬ್ಬ ಭಾಷ್ಯಕಾರನೇ? ಅಲ್ಲ, ಅವನು ದುಷ್ಟನಾದವನು. ಶ್ರುತಿಯಲ್ಲಿ ಪರೇವ್ಯಯೇ ಎಂದು ಪರಶಬ್ದ ಮಾತ್ರ ಇದೆ. ಆದರೆ ಪರಶ್ಚಾಸಾವಾತ್ಮಾ ಚ ಎಂಬ ಅಭಿಪ್ರಾಯದಿಂದ ಪರಾತ್ಮತ್ವಾಪತ್ತೇಃ ಎಂದು ರಾಜರು ಶ್ಲೋಕದಲ್ಲಿ ಹೇಳಿದ್ದಾರೆ. ಪರಮಾತ್ಮತ್ವಾಪತ್ತೇಃ ಎಂದು ಹೇಳಿದರೆ ಈ ಶ್ರುತಿಯ ಸಮಾಖ್ಯೆಯನ್ನು ಸೂಚಿಸಲು ಸಾಧ್ಯವಾಗುತ್ತಿರಲಿಲ್ಲ. ಭೋಕ್ತೃ ಪದದಿಂದ ಜೀವನೇ ಪ್ರಸ್ತುತನಾಗಿರುವುದರಿಂದ ಸೋಽಪ್ಯವಿಭಾಗವಾನ್ ಎಂಬಲ್ಲಿ ಸಃ ಎಂಬ ಪದದಿಂದ ಜೀವನನ್ನೇ ತೆಗೆದುಕೊಂಡು ಜೀವನಿಗೆ ಬ್ರಹ್ಮನಿಂದ ಭೇದವಿಲ್ಲ ಎಂದು ಪೂರ್ವಪಕ್ಷವನ್ನು ನಿರೂಪಿಸಿದ್ದಾರೆ.

ಒಂದು ಸೂತ್ರದಲ್ಲಿ ಸೂತ್ರಕಾರರೇ ಪೂರ್ವಪಕ್ಷವನ್ನಾಗಿ ನಿರೂಪಿಸಿದ ಪ್ರಮೇಯವನ್ನು ಅದೇ ಸೂತ್ರಕಾರರ ಇನ್ನೊಂದು ಸೂತ್ರದಲ್ಲಿ ಬಾಲನಾದವನೂ ಸಿದ್ಧಾಂತವನ್ನಾಗಿ ನಿರೂಪಿಸುವುದಿಲ್ಲ. ಆದ್ದರಿಂದ ಸೂತ್ರದ ಸಃ ಅವಿಭಾಗವಾನ್ ಎಂಬ ಪೂರ್ವಪಕ್ಷದ ಪ್ರತಿಜ್ಞೆಯೇ ಪರಭಾಷ್ಯಕಾರನಿಗೆ ಅನಭಿಜ್ಞತ್ವವನ್ನು ಸೂಚಿಸುತ್ತದೆ.

**ಭೋಕ್ತ್ರಾಪ್ರತ್ತೇಸ್ತದವಿಭಾಗಶ್ಚೇತ್ ಸ್ಯಾಲ್ಲೋಕವತ್ ತ್ವಿತಿ ।**
**ಏಕೀಭವಂತಿ ವಾಚಾತ್ರ ಪ್ರಾಪ್ತಮುಕ್ತೈಕ್ಯಶಂಕಯಾ ॥ ೨೩೬ ॥**

**ಏಕೀಭವಂತಿ ಗೋಷ್ಠೇಷು ಗಾವ ಇತ್ಯಾದಿಲೋಕವತ್ ।**
**ಸ್ಯಾದಿತ್ಯಾಹ ಸಮಾಧಾನಂ ತೇನ ಮುಕ್ತೋಽಪಿ ನೈಕ್ಯವಾನ್ ।**
**ಇತಿ ಪ್ರಾಪ್ತಮತೋ ಭೇದಂ ಪರಮಾರ್ಥೀಚಕಾರ ಸಃ ॥ ೨೩೭ ॥**

**ಅರ್ಥ–** ಭೋಕ್ತ್ರಾಪತ್ತೇಃ= ಭೋಕ್ತೃವಾದ ಜೀವನಿಗೆ, ಪರಬ್ರಹ್ಮತ್ವವು ಬರುವುದರಿಂದ, ತದವಿಭಾಗಃ= ಅವರಿಗೆ ಭೇದವಿಲ್ಲ ಎಂದು, ಚೇತ್= ಹೇಳಿದರೆ, ಲೋಕವತ್= ಲೋಕ ವ್ಯವಹಾರದಂತೆ, ಸ್ಯಾತ್= ಆಗುತ್ತದೆ, ಇತಿ= ಎಂದು ಹೇಳಿ, ಅತ್ರ= ಇಲ್ಲಿ, ಏಕೀಭವಂತಿ

ವಾಚಾ= ಪರೇವ್ಯಯೇ ಸರ್ವ ಏಕೀಭವಂತಿ ಎಂಬಲ್ಲಿರುವ ಏಕೀಭವಂತಿ ಎಂಬ ಶಬ್ದದಿಂದ, ಪ್ರಾಪ್ತಮುಕ್ತೈಕ್ಯಶಂಕಯಾ= ಪ್ರಾಪ್ತವಾದ ಮುಕ್ತಿಜೀವನ ಐಕ್ಯದ ಶಂಕೆಯಿಂದ, (ಪೂರ್ವ ಪಕ್ಷವು ಪ್ರಾಪ್ತವಾದರೆ), ಗೋಷ್ಠೇಷು= ಕೊಟ್ಟಿಗೆಗಳಲ್ಲಿ, ಗಾವಃ= ಗೋವುಗಳು, ಏಕೀಭವಂತಿ= ಒಂದಾಗುತ್ತವೆ, ಇತ್ಯಾದಿ= ಮೊದಲಾದ, ಲೋಕವತ್ ಸ್ಯಾತ್= ಲೋಕವ್ಯವಹಾರದಂತೆ ಆಗುತ್ತದೆ, ಇತಿ= ಎಂದು, ಸಮಾಧಾನಂ= ಸಮಾಧಾನವನ್ನು, ಆಹ= ಸೂತ್ರಕಾರರು ಹೇಳಿದ್ದಾರೆ, ತೇನ= ಆ ಕಾರಣದಿಂದ, ಮುಕ್ತೋಪಿ= ಮುಕ್ತ ಜೀವನೂ ಸಹ, ನ ಐಕ್ಯವಾನ್= ಬ್ರಹ್ಮನಿಂದ ಅಭೇದವುಳ್ಳವನಾಗಿರುವುದಿಲ್ಲ, ಇತಿ ಪ್ರಾಪ್ತಂ= ಎಂದು ಸಿದ್ಧವಾಯಿತು, ಅತಃ= ಆ ಕಾರಣದಿಂದ, ಸಃ= ಆ ಸೂತ್ರಕಾರರು, ಭೇದಂ= ಭೇದವನ್ನು, ಪರಮಾರ್ಥೀ ಚಕಾರ= ಪರಮಾರ್ಥವನ್ನಾಗಿ ಮಾಡಿದರು.

**ಭಾವವಿಲಾಸಿನೀ**— ಕಿಂಚಾಸ್ಯಸೂತ್ರಸ್ಯ ಸ್ವಸೂಚಿತವಿಷಯವಾಕ್ಯಪರ್ಯಾಲೋಚನಯಾ ಮುಕ್ತಿಕಾಲೀನ ಭೇದಸ್ಥಾಪಕತ್ವಾನ್ಮುಕ್ತಾವೈಕ್ಯಶಂಕಾಪಿಗತೇತಿ ಭಾವೇನ ಪುನಸ್ತಸ್ಯೈವ ಸೂತ್ರಸ್ಯಾರ್ಥಂ ವಿವೇಚಯತಿ – **ಭೋಕ್ತ್ರಾಪತ್ತೇರಿತಿ** ॥ ಅಪೇಕ್ಷಿತತತ್ಪದಮಾತ್ರಾಧ್ಯಾಹಾರೇಣ ಸೂತ್ರಸ್ಯೈವ ಪ್ರತೀಕಗ್ರಹಣಮಿದಮ್ । ಇತಿಸೂತ್ರೇ । ವಾಚಾ ಶ್ರುತ್ಯಾ ಮುಕ್ತಿದಶಾಪ್ರತಿಪಾದಿಕಯಾ ಪ್ರಾಪ್ತಂ ಯನ್ಮುಕ್ತೈಕ್ಯಂ ಮುಕ್ತಾನಾಂ ಪರಮಾತ್ಮನೈಕ್ಯಂ ತಸ್ಯ ಶಂಕಯೇತ್ಯರ್ಥಃ । ಇತ್ಯಾದಿಲೋಕವತ್ ಇತ್ಯಾದಿವಾಕ್ಯಪ್ರಯೋಕ್ತೃಲೋಕವಲ್ಲೌಕಿಕವದ್ವಾಸ್ಯಾತ್ । ಪರೇಽವ್ಯಯೇ ಸರ್ವ ಏಕೀಭವಂತೀತಿ ಶ್ರುತಿಃ ಗೋಷ್ಠೇ ಗವಾಮಿವಮುಕ್ತಾನಾಂ ಪರಮಾತ್ಮನಿ ಸ್ಥಾನೈಕ್ಯಪರಾಸ್ಯಾತ್ । ಅಭೂತ-ತದ್ಭಾವಾರ್ಥಕ ಚ್ವಿಪ್ರತ್ಯಯಸ್ಯ ಪ್ರಾಗ್ ಭೂತಸ್ವರೂಪೈಕ್ಯಪರತ್ವಾಯೋಗೇನಾಪೂರ್ವ-ಸ್ಥಾನೈಕ್ಯಸ್ಯೈವ ವಕ್ತವ್ಯತ್ವಾತ್ । ಸಮಾಧಾನಂ ಶ್ರುತ್ಯರ್ಥಾಪರಿಜ್ಞಾನಮೂಲಾ ತವ ಮುಕ್ತಾವಿಭಾಗಶಂಕಾ ನೋಚಿತೇತಿ ಸಮಾಧಾನಮ್ । ತೇನ ಮುಕ್ತಾಭೇದಂ ಪೂರ್ವಪಕ್ಷೀಕೃತ್ಯ ನಿರಾಕರಣೇನೈಕ್ಯವಾನ್ನೇತಿ ಪ್ರಾಪ್ತಂ ಸೂತ್ರಮರ್ಯಾದಯೈವಾಗತಮ್ । ಅತೋ ಮುಕ್ತಾವಪ್ಯೈಕ್ಯಂ ನಿಷಿಧ್ಯಭೇದಸ್ಥಾಪನಾತ್ । ಸಃ ಸೂತ್ರಕಾರಃ । ಭೇದಮಿಥ್ಯಾತ್ವವಾದಿನಾ ಪರೇಣಲುಂಠಿತಪಾರಮಾರ್ಥ್ಯಸ್ಯ ಪುನಸ್ಸ್ಥಾಪನಾತ್ಪರಮಾರ್ಥೀ ಚಕಾರೇತ್ಯುಕ್ತಮ್ । ಕೇವಲಾನಂದಾನುಭವಿತೃಮುಕ್ತಜೀವಸ್ಯೈವ ಪ್ರಸ್ತಾವೋಽಯಮಿತಿ ಜ್ಞಾಪನಾಯ ಸೂತ್ರೇ ಭೋಕ್ತೃಪದಮ್ । ಭೋಗೀ ಪರಿಜನೈಃಸಹೇತ್ಯಾದಾವಾನಂದಾನುಭವಸ್ಯೈವ ಭೋಗತಯಾ ಪ್ರಸಿದ್ಧತ್ವಾತ್ । ಭೋಗಸ್ಸುಖೇಸ್ತ್ರ್ಯಾದಿಭೃತಾವಿತ್ಯಭಿಧಾನಾಚ್ಚ । ಮುಕ್ತಸ್ಯಾಪಿ ಬ್ರಹ್ಮವದ್ಭೋಗ್ಯ-ಸ್ವಸ್ವರೂಪಾನಂದಮಾತ್ರಭೋಕ್ತೃತ್ವಸೂಚನೇನ ಭೋಕ್ತೃಭೋಜ್ಯೈಕ್ಯರೂಪಸ್ವಪೂರ್ವಪಕ್ಷಾಶೋ-ಪೋದ್ಬಲನಾಯ ಭೋಕ್ತುರ್ಭೋಜ್ಯತ್ವಾಪತ್ತೇರಿತಿ ಸ್ವಾನಭಿಮತಪೂರ್ವಪಕ್ಷಸಿದ್ಧಾಂತಾದಿಕಂ ಕೃತ್ವಾ ಪಾಪಂ ಸಂಪಾದಯತಃ ಪರಸ್ಯ ಚ ಶಂಕಾನಿವಾರಕಂ ಭೋಕ್ತುಸ್ಸಕಾಶಾದ್ಭೋಜ್ಯ ಸ್ಯಾಪತ್ತೇರ್ನಾಶರೂಪವಿಪತ್ತೇರ್ಜಾಯಮಾನತ್ವಾನ್ನತಯೋರವಿಭಾಗಶಂಕೇತಿ ಸರ್ವಂ ಖಲ್ವಿದಂ ಬ್ರಹ್ಮೇತಿ ಶ್ರುತ್ಯಾಪಿ ಭೋಕ್ತುರ್ಜೀವಸ್ಯೈವ ಬ್ರಹ್ಮತ್ವಾಪತ್ತೇರನಭಿಮತತ್ವಾತ್ತದ್ಬಲಾದ್ಭೋಕ್ತೃ-

**ಭೋಜ್ಯಯೋರ್ಬ್ರಹ್ಮಣ್ಯೈಕ್ಯ ಶಂಕಾನುತ್ಥಾನಾಚ್ಚೇತಿದೂಷಣದ್ವಯಂ ತತ್ಪಕ್ಷೇ ಸೂಚಯಿತುಂ ಸೂತ್ರೇ ಭೋಕ್ತೃಪದಮ್ । ಅತ ಏವ ಹಿ ವಿಶ್ವತೋಮುಖಂ ಸೂತ್ರಮಾಹುಃ ॥೨೩೬-೨೩೭॥**

**ವಿವರಣೆ–** ಮತ್ತು ಈ ಸೂತ್ರಕ್ಕೆ ಪರವಾದಿಗಳು ಸೂಚಿಸಿದ ವಿಷಯವಾಕ್ಯವನ್ನು ಪರ್ಯಾಲೋಚಿಸಿದರೂ ಮುಕ್ತಿಕಾಲೀನವಾದ ಭೇದವೇ ಸಿದ್ಧವಾಗುವುದರಿಂದ ಐಕ್ಯ ಶಂಕೆಯು ಎಂದೂ ಕೂಡುವುದಿಲ್ಲ ಎಂದು ತಿಳಿಸಲು ಅದೇ ಸೂತ್ರದ ಅರ್ಥವನ್ನು ಪುನಃ ಇಲ್ಲಿ ವಿಮರ್ಶೆ ಮಾಡುತ್ತಾರೆ.

ಪರೇವ್ಯಯೇ ಸರ್ವ ಏಕೀಭವಂತಿ ಎಂಬ ಶ್ರುತಿಯು ಗೋಷ್ಠೇ ಗಾವಃ ಏಕೀ ಭವಂತಿ ಎಂಬ ಲೋಕವ್ಯವಹಾರದಂತೆ ಮುಕ್ತರಿಗೆ ಪರಮಾತ್ಮನ ಜೊತೆಯಲ್ಲಿ ಸ್ಥಾನೈಕ್ಯವು ಉಂಟಾಗುತ್ತದೆ ಎಂಬ ಅರ್ಥವನ್ನು ಹೇಳುತ್ತದೆ ಹೊರತಾಗಿ ಸ್ವರೂಪೈಕ್ಯವನ್ನು ಹೇಳುವುದಿಲ್ಲ. ಏಕೆಂದರೆ ಏಕೀಭವಂತಿ ಎಂಬಲ್ಲಿ ಚ್ವಿ ಪ್ರತ್ಯಯವಿದೆ. ಅದು ಅಭೂತ ತದ್ಭಾವೇ, ಹಿಂದೆ ಇಲ್ಲದೇ ಹೊಸದಾಗಿ ಉಂಟಾದ ಅರ್ಥದಲ್ಲಿ ಇರುತ್ತದೆ. ಸ್ವರೂಪೈಕ್ಯವನ್ನು ಹೇಳಿದರೆ ಅದು ಸಂಸಾರಾವಸ್ಥೆಯಲ್ಲಿಯೂ ಇರುವುದರಿಂದ ಅದು ಹೊಸದಾಗಿ ಉಂಟಾದುದಲ್ಲ. ರೂಪವಿಶೇಷದಿಂದ ಸ್ಥಾನೈಕ್ಯವನ್ನು ಹೇಳಿದರೆ ಅದು ಸಂಸಾರಾವಸ್ಥೆಯಲ್ಲಿ ಇರಲಿಲ್ಲವಾದ್ದರಿಂದ ಹೊಸದಾಗಿ ಉಂಟಾಗಿದೆ. ಆದ್ದರಿಂದ ಸ್ಥಾನೈಕ್ಯವನ್ನೇ ಹೇಳುತ್ತದೆ. ಲೋಕವತ್‌ಸ್ಯಾತ್ ಎಂದು ಸೂತ್ರದಲ್ಲಿರುವ ಸಮಾಧಾನ. ಎಂದರೆ ಶ್ರುತ್ಯರ್ಥವನ್ನು ಸರಿಯಾಗಿ ತಿಳಿಯದೇ ನೀನು ಮಾಡಿರುವ ಮುಕ್ತಾಭೇದಶಂಕೆಯು ಉಚಿತವಾದುದಲ್ಲ ಎಂದು ಸಮಾಧಾನ. ಮುಕ್ತಾಭೇದಶಂಕೆಯು ಉಚಿತವಾದುದಲ್ಲ ಎಂದು ಹೇಳಿದರೆ ಮುಕ್ತಾಭೇದವನ್ನು ನಿರಾಕರಣೆ ಮಾಡಿದಂತಾಯಿತು. ಆದ್ದರಿಂದ ಈ ಐಕ್ಯನಿರಾಕರಣೆಯು ಸೂತ್ರಮರ್ಯಾದೆಯಿಂದಲೇ ಸಿದ್ಧವಾಯಿತು. ಯದ್ಯಪಿ ಭೇದವು ಮುಕ್ತಿಕಾಲದಲ್ಲಿಯೂ ಇರುವುದರಿಂದ ಪರಮಾರ್ಥವಾಗಿಯೇ ಇದೆ. ಆದರೂ ಪರರು ಅದನ್ನು ವ್ಯಾವಹಾರಿಕ ಎಂದು ಹೇಳಿ ಪಾರಮಾರ್ಥಿಕತ್ವವನ್ನು ಕಸಿದುಕೊಂಡಿದ್ದರಿಂದ ಶ್ರುತಿಯು ಆ ಭೇದಕ್ಕೆ ಮುಕ್ತಿಕಾಲೀನತ್ವವನ್ನು ಹೇಳಿ, ಪಾರಮಾರ್ಥಿಕತ್ವವನ್ನು ಸ್ಥಾಪನೆ ಮಾಡಿದ ಕಾರಣದಿಂದ ಚ್ವಿ ಪ್ರತ್ಯಯವು ಉಪಪನ್ನವಾಗುತ್ತದೆ. ಈ ಸೂತ್ರದಲ್ಲಿ ಭೋಕ್ತೃಪದದಿಂದ ಮುಕ್ತಜೀವನನ್ನೇ ಸೂತ್ರಕಾರರು ಪರಾಮರ್ಶೆ ಮಾಡಿದ್ದಾರೆ. ಏಕೆಂದರೆ ಅವನು ಬ್ರಹ್ಮನಂತೆ ಆನಂದಾನುಭವಿತೃ ಆಗಿದ್ದಾನೆ. ಭೋಗೀಪರಿಜನ್ನೈಃ ಸಹ ಮೊದಲಾದ ಪ್ರಮಾಣಗಳಲ್ಲಿ ಆನಂದಾನುಭವವೇ ಭೋಗವೆಂದು ಪ್ರಸಿದ್ಧವಾಗಿದೆ. ಭೋಗಃ ಸುಖೇ ಸ್ತ್ರ್ಯಾದಿಭೃತೌ ಎಂಬ ಕೋಶವೂ ಸಹ ಭೋಗಶಬ್ದಕ್ಕೆ ಸುಖವೆಂಬ ಅರ್ಥವನ್ನು ಹೇಳುತ್ತದೆ. ಮುಕ್ತನೂ ಸಹ ಬ್ರಹ್ಮನಂತೆ ಸ್ವಸ್ವರೂಪಸುಖವನ್ನೇ ಭೋಗಿಸುವುದರಿಂದ ಈ ಅಂಶದಲ್ಲಿ ಬ್ರಹ್ಮಸಾಮ್ಯವು ಬರುವುದರಿಂದ ಭೋಕ್ತೃಪದವು ಭೋಕ್ತೃಭೋಜ್ಯೈಕ್ಯ ರೂಪವಾದ

ಪೂರ್ವಪಕ್ಷಕ್ಕೆ ಪುಷ್ಟಿಯನ್ನು ಕೊಡುತ್ತದೆ. ಮಾಯಾವಾದಿಗಳು ಹೇಳುವ ಭೋಕ್ತೃವಿಗೆ ಭೋಜ್ಯತ್ವ ಉಂಟಾಗುತ್ತದೆ ಎಂಬ ಶಂಕೆಯು ಸೂತ್ರಕಾರರಿಗೆ ಅನಭಿಪ್ರೇತವಾದುದು. ಆದ್ದರಿಂದ ಅಂತಹ ಅರ್ಥವನ್ನು ಹೇಳಿದರೆ ಪಾಪವೇ ಸಂಪಾದಿಸಲ್ಪಡುತ್ತದೆ. ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯಲ್ಲಿ ಭೋಕ್ತೃವಾದ ಜೀವನಿಗೆ ಬ್ರಹ್ಮತ್ವನ್ನು ಹೇಳಿರುವುದರಿಂದ ಭೋಕ್ತೃವಿಗೆ ಭೋಜ್ಯತ್ವವು ಉಂಟಾದರೆ ಭೋಕ್ತೃವಿನಿಂದ ಭೋಜ್ಯದ ನಾಶವೇ ಉಂಟಾಗುವುದರಿಂದ ಭೋಕ್ತೃಭೋಜ್ಯಗಳಿಗೆ ವಿಭಾಗವಿಲ್ಲ ಎಂಬ ಸಮಾಧಾನವೂ ಸೂತ್ರಕಾರರಿಗೆ ಅನಭಿಪ್ರೇತವಾದುದು. ಆದ್ದರಿಂದ ಸೂತ್ರಗತವಾದ ಭೋಕ್ತೃಶಬ್ದವು ಈ ಎಲ್ಲಾ ಅಂಶಗಳನ್ನೂ ಸೂಚಿಸುವುದರಿಂದ ಸೂತ್ರಕ್ಕೆ ವಿಶ್ವತೋಮುಖತ್ವವು ಸಿದ್ಧವಾಗುತ್ತದೆ.

**ತಸ್ಮಾದ್ ಭೇದೋಽಪ್ರತಿದ್ವಂದ್ವಸ್ತತ್ರತತ್ರೋದಿತೋ ಭವೇತ್ ।**
**ಮುಕ್ತೋಪಸೃಪ್ಯತಾದ್ಯುಕ್ತ್ಯಾ ಸ್ಥಿರೀಚಕ್ರೇ ಪುನಶ್ಚ ತಂ ॥ ೨೩೮ ॥**

**ಅರ್ಥ-** ತಸ್ಮಾತ್= ಆ ಕಾರಣದಿಂದ, ತತ್ರತತ್ರೋದಿತಃ= ಅಲ್ಲಲ್ಲಿ ಹೇಳಲ್ಪಟ್ಟ ಭೇದವು, ಅಪ್ರತಿದ್ವಂದ್ವಃ= ಅಪ್ರತಿದ್ವಂದ್ವವಾಗಿ ಎಂದರೆ ನಿರಾಕರಣೆ ಮಾಡಲು ಅಸಾಧ್ಯವಾಗಿ, ಭವೇತ್= ಆಗುತ್ತದೆ, ಪುನಶ್ಚ= ಮತ್ತೂ ಸಹ, ಮುಕ್ತೋಪಸೃಪ್ಯತಾದ್ಯುಕ್ತ್ಯಾ= ಮುಕ್ತೋಪಸೃಪ್ಯತ್ವಾದಿಗಳನ್ನು ಹೇಳಿ, ತಂ= ಆ ಭೇದವನ್ನು, ಸ್ಥಿರೀಚಕ್ರೇ= ನಿತ್ಯವನ್ನಾಗಿ ಸೂತ್ರಕಾರರು ಮಾಡಿದರು.

**ಅನುವಾದ–** ಆದ್ದರಿಂದ ಭೇದವ್ಯಪದೇಶಾಚ್ಚಾನ್ಯಃ ಎಂಬುದಾಗಿ ಅಲ್ಲಲ್ಲಿ ಸೂತ್ರಗಳಲ್ಲಿ ಹೇಳಿದ ಭೇದವು ಪ್ರತಿಭಟಶೂನ್ಯವಾಗಿದೆ. ಅಲ್ಲದೆ, ಸೂತ್ರಕಾರರು ಮುಕ್ತೋಪಸೃಪ್ಯ ವ್ಯಪದೇಶಾತ್, ಅಸ್ಮಿನ್ ಅಸ್ಯ ಚ ತದ್ಯೋಗಂ ಶಾಸ್ತಿ, ಸುಷುಪ್ತ್ಯುತ್ಕ್ರಾಂತ್ಯೋಃ ಭೇದೇನ, ಸಂಪದ್ಯಾವಿಹಾಯ ಸ್ವೇನ ಶಬ್ದಾತ್, ಜಗದ್ವ್ಯಾಪಾರವರ್ಜಂ ಎಂಬ ಸೂತ್ರಗಳಲ್ಲಿ ಆ ಭೇದವು ಮುಕ್ತಿಕಾಲದಲ್ಲಿಯೂ ಇದೆ ಎಂದು ಸ್ಥಾಪನೆ ಮಾಡಿ ಆ ಭೇದವನ್ನು ಪಾರಮಾರ್ಥಿಕವನ್ನಾಗಿ ಮಾಡಿದ್ದಾರೆ.

**ಭಾವವಿಲಾಸಿನೀ–** ತಸ್ಮಾನ್ಮುಕ್ತಾವಪಿ ಭೇದಸ್ಯ ಸ್ಪಷ್ಟಂ ಸೂತ್ರ ಏವ ಸಮರ್ಥನಾತ್ । ತತ್ರ ತತ್ರ ಸೂತ್ರೇ ಸೂತ್ರೇ ಶ್ರುತೌ ಶ್ರುತೌ ಚ । ಮುಕ್ತೋಪಸೃಪ್ಯತಾದೀತ್ಯಾದಿಪದೇನ ಅಸ್ಮಿನ್ನಸ್ಯ ಚೇತಿ ಸುಷುಪ್ತ್ಯುತ್ಕ್ರಾಂತ್ಯೋರಿತಿ ಸಂಪದ್ಯಾವಿಹಾಯೇತಿ ಜಗದ್ವ್ಯಾಪಾರವರ್ಜಮಿತಿ ಚ ಸೂತ್ರಚತುಷ್ಟಯಂ ಗೃಹ್ಯತೇ । ಏವಂಚೇಮಾನಿ ಸೂತ್ರಾಣಿವಚನವೃತ್ತ್ಯಾ ಮುಕ್ತೌಭೇದಸಾಧಕಾನಿ । ಅತ ಏವ ಸ್ಥಿರೀಚಕ್ರ ಇತ್ಯುಕ್ತಮ್ । ತಂ ಭೇದಮ್ ॥ ೨೩೮ ॥

**ಚೇತನಾಚೇತನಜಗದ್ಬ್ರಹ್ಮೈಕ್ಯಾದ್ ಭೋಗ್ಯವಸ್ತುನಃ ।**
**ಭೋಕ್ತೃತಾಪಿ ಭವೇತ್ ತೇನ ವಿಭಾಗೋ ಭೋಕ್ತೃಭೋಗಯೋಃ ॥**
**॥ ೨೩೯ ॥**

**ನ ಸ್ಯಾದಿತಿ ಯದೀಹಾರ್ಥಃ ಶಂಕಾಗ್ರಂಥಸ್ಯ ಕಥ್ಯತೇ ।**
**ತರ್ಹಿ ನೇತಿ ಸಮಾಧಾತ್ರಾ ಜಡೈಕ್ಯಂ ನೈವ ಕಥ್ಯತೇ ॥ ೨೪೦ ॥**

**ಇತ್ಯೇವ ವಾಚ್ಯಂ ಶಂಕಾಂ ತಾಮಂಗೀಕೃತ್ಯ ಸಮಾದಧತ್ ।**
**ನಾಭಿಪ್ರೈತೀಮಮರ್ಥಂ ಸ ಸೂತ್ರಕೃದ್ ವದತಾಂ ವರಃ ॥ ೨೪೧ ॥**

**ಅರ್ಥ–** ಚೇತನಾಚೇತನಜಗದ್ಬ್ರಹ್ಮೈಕ್ಯಾತ್= ಚೇತನಾಚೇತನಾತ್ಮಕವಾದ ಜಗತ್ತು ಬ್ರಹ್ಮನಿಂದ ಅಭಿನ್ನವಾಗಿರುವುದರಿಂದ, ಭೋಗ್ಯವಸ್ತುನಃ= ಭೋಗ್ಯವಾದ ವಸ್ತುವಿಗೆ, ಭೋಕ್ತೃತಾಪಿ= ಭೋಕ್ತೃ ಅಭೇದವೂ ಕೂಡ, ಭವೇತ್= ಉಂಟಾಗುತ್ತದೆ, ತೇನ= ಆ ಕಾರಣದಿಂದ, ಭೋಕ್ತೃಭೋಗ್ಯಯೋಃ= ಭೋಕ್ತೃ ಮತ್ತು ಭೋಗ್ಯಗಳಿಗೆ, ವಿಭಾಗೋ ನ ಸ್ಯಾತ್= ವಿಭಾಗವು ಇರಲಾರದು, ಇತಿ= ಎಂದು, ಇಹ= ಈ ಸೂತ್ರದಲ್ಲಿ, ಶಂಕಾಗ್ರಂಥಸ್ಯ= ಶಂಕಾಗ್ರಂಥದ ಭಾಗಕ್ಕೆ, ಅರ್ಥಃ= ಅರ್ಥವು, ಯದಿ ಕಥ್ಯತೇ= ಹೇಳಲ್ಪಡುವುದಾದರೆ, ತರ್ಹಿ= ಆಗ, ನೇತಿ ಸಮಾಧಾತ್ರಾ= ಇಲ್ಲ ಎಂದು ಹೇಳಿ ಸಮಾಧಾನವನ್ನು ಮಾಡುವ ಸೂತ್ರಕಾರರಿಂದ, ಜಡೈಕ್ಯಂ ನೈವ ಕಥ್ಯತೇ= ನಾವು ಜಡೈಕ್ಯವನ್ನು ಹೇಳುವುದಿಲ್ಲ, ಇತ್ಯೇವ ವಾಚ್ಯಂ= ಎಂದು ಇಷ್ಟೇ ಹೇಳಲ್ಪಡಬೇಕು, ತಾಂ ಶಂಕಾಂ ಅಂಗೀಕೃತ್ಯ= ಆ ಶಂಕೆಯನ್ನು ಸ್ವೀಕರಿಸಿ, ಸಮಾದಧತ್= ಸಮಾಧಾನ ಮಾಡುವ, ವದತಾಂ ವರಃ= ಮಾತನಾಡುವವರಲ್ಲಿ ಶ್ರೇಷ್ಠರಾದ, ಸೂತ್ರಕೃತ್ ಸಃ= ಸೂತ್ರಕಾರರಾದ ಆ ವ್ಯಾಸರು, ಇಮಂ ಅರ್ಥಂ= ನೀನು ಹೇಳಿದ ಈ ಅರ್ಥವನ್ನು, ನಾಭಿಪ್ರೈತಿ= ಅಂಗೀಕರಿಸುವುದಿಲ್ಲ.

**ಅನುವಾದ– ಚೇತನಾಚೇತನಾತ್ಮಕವಾದ ಜಗತ್ತು ಬ್ರಹ್ಮನಿಂದ ಅಭಿನ್ನವಾಗಿರುವುದರಿಂದ ಭೋಗ್ಯವಸ್ತುವಿಗೂ, ಭೋಕ್ತೃವಿನ ಅಭೇದವು ಉಂಟಾಗುತ್ತದೆ. ಆದ್ದರಿಂದ ಭೋಕ್ತೃ ಮತ್ತು ಭೋಗ್ಯಗಳಿಗೆ ವಿಭಾಗವು ಉಪಪನ್ನವಾಗುವುದಿಲ್ಲ ಎಂಬ ಅರ್ಥವನ್ನು ಸೂತ್ರದ ಶಂಕಾಗ್ರಂಥದ ಭಾಗಕ್ಕೆ ಹೇಳುವುದಾದರೆ ಆಗ ಈ ಶಂಕೆಗೆ ಸಮಾಧಾನವನ್ನು ಹೇಳುವ ಸೂತ್ರಕಾರರು ಜಡಕ್ಕೆ ಬ್ರಹ್ಮೈಕ್ಯವೇ ಇಲ್ಲ (ಆದ್ದರಿಂದ ಈ ಶಂಕೆಯೇ ಬರುವುದಿಲ್ಲ) ಜಡಕ್ಕೆ ನಾವು ಐಕ್ಯವನ್ನೇ ಹೇಳುವುದಿಲ್ಲ ಎಂದು ಇಷ್ಟೇ ಹೇಳಬೇಕಾಗಿದ್ದಿತು. ಹಾಗೆ ಮಾಡದೇ ಆ ಶಂಕೆಯನ್ನು ಸ್ವೀಕರಿಸಿ ಅದಕ್ಕೆ ಬೇರೆ ಸಮಾಧಾನವನ್ನು ಹೇಳುವ ವಾಗ್ಮಿಗಳಲ್ಲಿ ಅಗ್ರಗಣ್ಯರಾದ ಸೂತ್ರಕಾರರಾದ ವೇದವ್ಯಾಸರು ನೀನು ಹೇಳಿದ ಈ ಅರ್ಥವನ್ನು ಸ್ವೀಕರಿಸುವುದಿಲ್ಲ.**

**ಭಾವವಿಲಾಸಿನೀ–** ಸ್ವಾಭಿಮತಸೂತ್ರಾರ್ಥಮುಕ್ತ್ವಾ ಸ್ವಸೂತ್ರೇಸೂಚನಯಾ ದೂಷಿತಮಪಿ ಪರಪಕ್ಷಂ ಸ್ಪಷ್ಟಮನೂದ್ಯದೂಷಯತಿ – **ಚೇತನೇತಿ** ॥ ಸರ್ವಂಖಲ್ವಿದಂಬ್ರಹ್ಮ ಏಕಮೇವಾದ್ವಿತೀಯಂ ನೇಹನಾನಾಸ್ತಿಕಿಂಚನೇತ್ಯಾದಿ ಶ್ರುತ್ಯಾಚೇತನಾಚೇತನಾತ್ಮಕಜಗತಃ ಬ್ರಹ್ಮೈಕ್ಯಾತ್ ಬ್ರಹ್ಮಣ್ಯೈಕ್ಯಸ್ಯ ಪ್ರತೀತತ್ವಾದಿತ್ಯರ್ಥಃ । ಭೋಕ್ತೃತಾ ಭೋಕ್ತ್ರೈಕ್ಯಮ್ । ತೇನಭೋಕ್ತೃ-

ಭೋಗ್ಯಯೋರೈಕ್ಯೇನ ನಿಮಿತ್ತೇನ । ವಿಭಾಗೋಭೇದೋಕ್ತ್ರೈನಸ್ಯಾದಿತಿ ಇಹ ಸೂತ್ರೇ ಶಂಕಾ-ಗ್ರಂಥಸ್ಯಾರ್ಥ ಇತಿ ಸಂಬಂಧಃ । ಸಮಾಧಾತ್ರಾ ಸಮಾಧಾನಂ ಕುರ್ವತಾ ಜಡೈಕ್ಯಂ ಜಡಬ್ರಹ್ಮೈಕ್ಯಂ ನೈವಕಥ್ಯತೇ । ಜಡಮಿಥ್ಯಾತ್ವವಾದಿನಾ ತ್ವಯಾಪಿ ನ ಕಥ್ಯತ ಏವ । ಅತಃ ಸ್ವಮತವಿರುದ್ಧೇಯಂ ಶಂಕೈವ ನ ಕಾರ್ಯೇತ್ಯೇವ ವಾಚ್ಯಂ ಇತಿ ಸಮಾಧಾನಮೇವ ವಾಚ್ಯಮ್ । ತಾಂ ಶಂಕಾಂ ಸೌತ್ರಪೂರ್ವಪಕ್ಷಾಂಶೋಕ್ತಶಂಕಾಂ ಅಂಗೀಕೃತ್ಯ ಪರೇಣೇಯಂ ಕರ್ತುಮುಚಿತೇತ್ಯಭ್ಯುಪಗಮ್ಯ ಸಮಾದಧತ್ ಸ್ಯಾಲ್ಲೋಕವದಿತಿ ಪೂರ್ವಪಕ್ಷ್ಯಭಿಮತ ವಾಕ್ಯಸ್ಯಾರ್ಥಂತರ ಕಥನರೂಪ-ಸಮಾಧಾನಂ ಕುರ್ವನ್ ಇಮಮರ್ಥಂ ತ್ವಯಾ ಪ್ರತಿಜ್ಞಾಭಾಗಸ್ಯೋಕ್ತಮರ್ಥಂ ನಾಭಿಪ್ರೈತಿ । ಸ್ವಪ್ರತಿಜ್ಞಾಭಾಗಾರ್ಥತಯಾನಾಂಗೀಕರೋತಿ । ಸಮ್ಯಗ್ಲಗ್ನಸ್ಯಾಪ್ಯಸ್ಯ ಸಮಾಧಾನಸ್ಯಾಸೂತ್ರಾರ್ಥ ಸಮಾಧಾನಾಂತರಕಥನಮಲ್ಪಜ್ಞಸ್ಯ ಘಟತೇ । ನ ಸರ್ವಜ್ಞಸ್ಯಸೂತ್ರಕಾರಸ್ಯೇತಿ ಭಾವೇನೋಕ್ತಂ ವದತಾಂವರ ಇತಿ ॥ ೨೩೯-೨೪೧ ॥

**ವಿವರಣೆ–** ನಮಗೆ ಅಭಿಮತವಾದ ಸೂತ್ರಾರ್ಥವನ್ನು ಹೇಳಿ ಇದರಿಂದ ಪರರಿಗೆ ಅಭಿಮತವಾದ ಸೂತ್ರಾರ್ಥದಲ್ಲಿ ದೋಷವು ಸೂಚಿತವಾಗಿದ್ದರೂ ಸಹ ಅದನ್ನು ಸ್ಪಷ್ಟವಾಗಿ ಅನುವಾದ ಮಾಡಿ ದೋಷವನ್ನು ಹೇಳುತ್ತಾರೆ. ಇಲ್ಲಿ ಪರರ ಅಧಿಕರಣ ರಚನೆ ಹೀಗಿದೆ : ಬ್ರಹ್ಮನು ಎಲ್ಲದಕ್ಕೂ ಉಪಾದಾನವಾಗಿರುವುದರಿಂದ ಭೋಕ್ತೃವಾದ ಶರೀರಕ್ಕೆ ಭೋಗ್ಯತ್ವವೂ ಮತ್ತು ಭೋಗ್ಯವಾದ ಶಬ್ದಗಳಿಗೆ ಭೋಕ್ತೃತ್ವವೂ ಉಂಟಾಗುವುದರಿಂದ ಭೋಕ್ತೃ ಮತ್ತು ಭೋಗ್ಯಗಳಿಗೆ ವಿಭಾಗವು ಉಪಪನ್ನವಾಗುವುದಿಲ್ಲ. ಏಕೆಂದರೆ ಎರಡೂ ಸಹ ಪರಮ ಕಾರಣನಾದ ಬ್ರಹ್ಮನಿಂದ ಅಭಿನ್ನವಾಗಿವೆ ಎಂದು ಪೂರ್ವಪಕ್ಷವು ಬಂದರೆ ಹಾಗಲ್ಲ. ಸಮುದ್ರದ ನೊರೆ ಮತ್ತು ಸಮುದ್ರದ ಅಲೆಗಳು ಒಂದೇ ಸಮುದ್ರದ ಕಾರ್ಯವಾದರೂ ಅವುಗಳಿಗೆ ಹೇಗೆ ವಿಭಾಗವು ಲೋಕದಲ್ಲಿ ಉಪಪನ್ನವಾಗಿದೆಯೋ, ಅದರಂತೆ ಒಂದೇ ಬ್ರಹ್ಮನೆಂಬ ಉಪಾದಾನಕಾರಣವನ್ನು ಹೊಂದಿದ್ದರೂ ಭೋಗ್ಯ ಮತ್ತು ಭೋಕ್ತೃಗಳಿಗೆ ವಿಭಾಗವು ಸಿದ್ಧವಾಗುತ್ತದೆ ಎಂದು ಸಿದ್ಧಾಂತ. ಇದು ಅವರ ಅಧಿಕರಣದ ರಚನೆಯ ಕ್ರಮ. ಏಕಮೇವಾದ್ವಿತೀಯಂ, ನೇಹನಾನಾಸ್ತಿ ಕಿಂಚನ ಮೊದಲಾದ ಶ್ರುತಿಗಳಿಂದ ಚೇತನಾಚೇತನಾತ್ಮಕವಾದ ಜಗತ್ತಿಗೆ ಬ್ರಹ್ಮೈಕ್ಯವು ಪ್ರತೀತವಾಗುತ್ತದೆ ಎಂದು ಅವರು ಆ ಐಕ್ಯವನ್ನು ಆಧರಿಸಿ ಹೀಗೆ ಪೂರ್ವಪಕ್ಷವನ್ನು ಮಾಡುತ್ತಾರೆ. ವಿಭಾಗ ಎಂದರೆ ಭೇದ, ಅವಿಭಾಗ ಎಂದರೆ ಭೇದಾಭಾವ ಎಂದು ಅರ್ಥ. ಭೋಕ್ತೃ ಮತ್ತು ಭೋಗ್ಯಗಳಿಗೆ ಭೇದವೇ ಇರಲಾರದು ಎಂದು ಶಂಕಾಗ್ರಂಥದ ಅರ್ಥ. ಇದಕ್ಕೆ ಸಮಾಧಾನ ಮಾಡುವ ಸೂತ್ರಕಾರರು ಇಲ್ಲ, ನಾವು ಜಡೈಕ್ಯವನ್ನು ಹೇಳುವುದಿಲ್ಲ ಆದ್ದರಿಂದ ಭೋಕ್ತೃ, ಭೋಗ್ಯಗಳಿಗೆ ಅವಿಭಾಗ ಪ್ರಸಕ್ತಿ ಇಲ್ಲ ಎಂದು ಇಷ್ಟೇ ಹೇಳಬೇಕಾಗಿದ್ದಿತು. ಏಕೆಂದರೆ ಜಡೈಕ್ಯವನ್ನು ಅದ್ವೈತಿಗಳೂ ಒಪ್ಪದೇ ಇರುವುದರಿಂದ ಈ ಶಂಕೆಯೇ ಅತ್ಯಂತ ದುರ್ಬಲವಾದುದು. ಆದ್ದರಿಂದ ಈ ಶಂಕೆಯೇ ಕೂಡುವುದಿಲ್ಲವೆಂದು ಹೇಳಬೇಕೇ ಹೊರತು ಶಂಕೆಯನ್ನು ಸ್ವೀಕರಿಸಿ ಅದಕ್ಕೆ ಸಮಾಧಾನಾಂತರವನ್ನು ಹೇಳುವ ಸೂತ್ರಕಾರರಿಗೆ

ಶಂಕಾಗ್ರಂಥಕ್ಕೆ ನೀನು ಹೇಳಿದ ಅರ್ಥವು ಸಮರ್ಪಕವಲ್ಲ ಎಂದು ತಿಳಿಯುತ್ತದೆ. ಏಕೆಂದರೆ ಸೂತ್ರಕಾರರು ಮಾತನಾಡುವವರಲ್ಲಿ ಅತ್ಯಂತ ಶ್ರೇಷ್ಠರು. ಹೀಗೆ ಶಂಕೆ ಮಾಡಿದರೆ ಸ್ಪಷ್ಟವಾಗಿ ತೋರುವ ಈ ಶಂಕೆಯೇ ಅನುಪಪನ್ನ ಎಂಬ ದೋಷವನ್ನು ಹೇಳದೇ, ಸೂತ್ರಕಾರರು ಸಮಾಧಾನಾಂತರವನ್ನು ಹೇಳಲು ಹೊರಟರೆ ಅವರು ವಾಗ್ಮಿಗಳೇ ಆಗುವುದಿಲ್ಲ. ಇನ್ನು ವದತಾಂ ವರಃ ಆಗುವುದು ಹೇಗೆ? ಅಲ್ಪಜ್ಞನಾದ ನಿನಗೆ ಬೇಕಾದರೆ ಚೆನ್ನಾಗಿ ತೋರುವ ಈ ದೋಷವನ್ನು ಬಿಟ್ಟು ಬೇರೆ ದೋಷವನ್ನು ಹೇಳುವುದು ಯುಕ್ತವಾಗಲಿ ವ್ಯಾಸರಿಗೆ ಅಲ್ಲ ಎಂದು ಅಭಿಪ್ರಾಯ.

ಮಮ ತು ಪ್ರಾಪಕೀಭೂತವೇದಸ್ಯೋಕ್ತಸ್ಯ ಕಾ ಗತಿಃ ।
ಇತಿ ಶಂಕಾಂ ಸಮಾಧಾತುಂ ಲೋಕದೃಷ್ಟಿಮದರ್ಶಯತ್ ।
ಐಕ್ಯಂ ತು ನೋರರೀಚಕ್ರ ಇತಿ ಸರ್ವಂ ಸಮಂಜಸಂ ॥ ೨೪೨ ॥

**ಅರ್ಥ–** ಮಮ ತು= ನನ್ನ ಮತದಲ್ಲೇ ಆದರೆ, ಉಕ್ತಸ್ಯ= ಉದಾಹರಿಸಲ್ಪಟ್ಟ, ಪ್ರಾಪಕೀಭೂತವೇದಸ್ಯ= ಮುಕ್ತೈಕ್ಯ ಪ್ರಾಪಕವಾದ ವೇದವಾಕ್ಯಕ್ಕೆ, ಕಾ ಗತಿಃ= ಏನು ಅರ್ಥ, ಇತಿ ಶಂಕಾಂ= ಎಂಬ ಶಂಕೆಯನ್ನು, ಸಮಾಧಾತುಂ= ಸಮಾಧಾನ ಮಾಡಲು, ಲೋಕದೃಷ್ಟಿಂ= ಲೋಕವತ್ ಎಂಬ ಪದದಿಂದ ಲೋಕದೃಷ್ಟಿಯನ್ನು, ಅದರ್ಶಯತ್= ಸೂತ್ರಕಾರರು ತೋರಿಸಿದ್ದಾರೆ, ಐಕ್ಯಂ ತು= ಐಕ್ಯವನ್ನು ಮಾತ್ರ, ನ ಉರರೀಚಕ್ರೇ= ಅಂಗೀಕರಿಸಲಿಲ್ಲ, ಇತಿ= ಆದ್ದರಿಂದ, ಸರ್ವಂ= ಎಲ್ಲವೂ, ಸಮಂಜಸಂ= ಸಮಂಜಸವಾಗಿದೆ.

**ಅನುವಾದ–** ನನ್ನ ಮತದಲ್ಲಾದರೆ, ಮುಕ್ತಜೀವೈಕ್ಯವು ವೇದದಿಂದಲೇ ಪ್ರಾಪ್ತವಾಗಿರುವುದರಿಂದ ಆ ವೇದವಾಕ್ಯಕ್ಕೆ ಏನು ಅರ್ಥ ಎಂಬ ಶಂಕೆಗೆ ಸಮಾಧಾನವನ್ನು ಹೇಳಲು ಸೂತ್ರಕಾರರು ಲೋಕದರ್ಶನವನ್ನು ಪ್ರದರ್ಶಿಸಿದ್ದಾರೆ. ಐಕ್ಯವನ್ನು ಮಾತ್ರ ಅಂಗೀಕರಿಸಲಿಲ್ಲ. ಆ ಕಾರಣದಿಂದ ನನ್ನ ಮತದಲ್ಲಿ ಎಲ್ಲವೂ ಸಮಂಜಸವಾಗಿದೆ.

**ಭಾವವಿಲಾಸಿನೀ–**ಅಸ್ಮದಾಚಾರ್ಯೋಕ್ತಾರ್ಥೇತು ನಾಯಂ ದೋಷ ಇತ್ಯಾಹ – ಮಮತ್ವಿತಿ ॥ ಪ್ರಾಪಕೀಭೂತವೇದಸ್ಯೈಕ್ಯಪರತಯಾ ಪರಾಭಿಮತಸ್ಯಾತ ಏವ ತೇನ ಶಂಕಿತುಂ ಯೋಗ್ಯಸ್ಯವೇದಸ್ಯೇತ್ಯರ್ಥಃ । ಶಂಕಾಂ ಮಯಾ ವೇದಮೂಲತಯೋಕ್ತಸ್ಯ ಮಮಾನುಕೂಲಸ್ಯ ಚ ಮುಕ್ತಬ್ರಹ್ಮೈಕ್ಯಸ್ಯನೇತಿ ನಿಷೇಧಂ ಕುರ್ವತಾ ತ್ವಯಾ ಮಮ ವಾಕ್ಯಸ್ಯ ಕಾಗತಿರಿತಿ ಪೂರ್ವಪಕ್ಷಿಣೋ ಹಾರ್ದೀಂ ಶಂಕಾಮಿತ್ಯರ್ಥಃ । ಪರೋಕ್ತಪೂರ್ವಪಕ್ಷ ಇವಾಸ್ಮದುಕ್ತಪೂರ್ವ ಪಕ್ಷೇಽಪಸಿದ್ಧಾಂತಸ್ಯ ದಾತುಮಯೋಗ್ಯತ್ವಾತ್ ತದ್ವಿಹಾಯ ದೂಷಣಾಂತರಮುಕ್ತಮಿತಿ ಭಾವಃ। ಅಯೋಗ್ಯದೂಷಣಸ್ಯಕಥನೇ ಸ್ವಸ್ಯೈವನಿರನುಯೋಜ್ಯಾನುಯೋಗೇನ ನಿಗ್ರಹಸ್ಸ್ಯಾತ್ । ತದಪಿ ಸರ್ವಜ್ಞಸ್ಯ ನೋಚಿತಮಿತಿ ಭಾವೇನಪ್ರಾಗ್ವದತಾಂ ವರ ಇತ್ಯುಕ್ತಮ್ । ಅಥವಾ ಶಂಕಾಂ

ಪೂರ್ವಪಕ್ಷಿಣಾ ಶಂಕಿತಂ ಜಡಾಜಡೈಕ್ಯಮಂಗೀಕೃತ್ಯ ಸ್ವಸಿದ್ಧಾಂತತಯಾಭ್ಯುಪಗಮ್ಯ ಸಮಾದಧತ್ ಅಸ್ತ್ವೈಕ್ಯಮ್ ತಥಾಪಿಸಮುದ್ರಫೇನತರಂಗಾದಿವದ್ವಿಭಾಗೋಘಟತ ಇತಿ ಸಮಾಧಾನಂ ಕುರ್ವತ್ ತವ ವ್ಯಾಖ್ಯಾನಂ ಅರ್ಥಂ ಸ್ವಸೂತ್ರಾರ್ಥಂ ನಾಭಿಪ್ರೈತೀತಿಯೋಜನಾ । ಸಕಲ-ಪ್ರಮಾಣವಿರುದ್ಧಸ್ಯ ಸ್ವಸ್ಯಾಪ್ಯನಭಿಮತಸ್ಯ ಜಡಾಜಡೈಕ್ಯಸ್ಯ ಸಿದ್ಧಾಂತೀಕರಣಮಪ್ರೌಢಸ್ಯ ತವೈವ ಶೋಭತೇ । ನತು ಪ್ರೌಢಶಿರೋಮಣೇರ್ವ್ಯಾಸಸ್ಯೇತಿ ಭಾವೇನೋಕ್ತಂ ವದತಾಂ ವರ ಇತಿ । ನನ್ವಸ್ಮದಭಿಮತವಿಷಯವಾಕ್ಯೈರೇವಭೋಕ್ತೃ ಭೋಗ್ಯಯೋರವಿಭಾಗಾಖ್ಯಮೈಕ್ಯಂ ಬ್ರಹ್ಮಣ್ಯೇವಾಶಂಕ್ಯನೇತಿ ತದೈಕ್ಯಂ ನಿಷಿಧ್ಯ ತರ್ಹಿ ವಾಕ್ಯಾನಾಂ ಕಾ ಗತಿರಿತಿ ಶಂಕಾಪರಿಹಾರಾಯ ರಾಜಾರಾಷ್ಟ್ರಂ ಅಸ್ಮಿನ್‌ಗ್ರಾಮೇಽಯಮೇಕ ಏವ, ಅಯಮದ್ವಿತೀಯೋ ರಾಜಾ, ಅತಿಸ್ನಿಗ್ಧೇ ಪುರುಷೇ ತ್ವಮೇವಾಹಮಿತಿ ಚ ಲೌಕಿಕವಾಕ್ಯವದಿತಿ ನಿದರ್ಶನಚತುಷ್ಟಯ ಪ್ರದರ್ಶನಾಯ ಸ್ಯಾಲ್ಲೋಕವದಿತಿ ಸೂತ್ರಖಂಡವೃತ್ತಿರಸ್ತು ಭೋಕ್ತೃಪದಸ್ಯ ಸ್ವಸಹಚರಿತಭೋಜ್ಯಸ್ಮಾರಕತ್ವಸ್ಯೈವ ನ್ಯಾಯ್ಯತ್ವಾತ್ ಏಕೀಭವಂತೀತಿ ವಿಷಯವಾಕ್ಯಸ್ಯ ಕಃ ಪ್ರಸಂಗ ಇತಿ ಚೇತ್ । ಸತ್ಯಮ್ । ಸ್ವನಾಸಿಕಾಭೇದಂ ಕೃತ್ವಾಪಿ ಪರಸ್ಯಾಪಶಕುನಂ ಕುರ್ವನ್ ಖಲ ಇವ ತ್ವಮೇವೇತ್ಥಮಾಶಾಸೇ ಋಜುಗಣಾಗ್ರಣೀರಸ್ಮದಾಚಾರ್ಯಸ್ತು ಅಧ್ಯಾತ್ಮಸಂಬಂಧಭೂಮಾಹ್ಯಸ್ಮಿನ್ ತದ್ಗುಣಸಾರತ್ವಾತ್ತು ತದ್ವ್ಯಪದೇಶ ಇತಿ ಚ ಸೂತ್ರಾಭ್ಯಾಂ ಲಕ್ಷಣಯಾ ಗೌಣ್ಯಾ ಚ ವೃತ್ತ್ಯಾ ಪ್ರವೃತ್ತಸಾಮಾನ್ಯ-ವಾಕ್ಯಾನಾಂ ಗತೇರುಕ್ತತ್ವಾತ್ ಅತ್ರಾಪಿ ತಸ್ಯೈವಪ್ರಸ್ತಾವಂ ಚರ್ವಿತಚರ್ವಣಂ ಮನ್ವಾನೋ ಸಾಧಾರಣ್ಯೇನ ಮುಕ್ತಾವೈಕ್ಯ ಪ್ರತಿಪಾದಕವಾಕ್ಯಾನಾಮೇವಗತಿಕಥನಮಧಿಕರಣೋ-ಪಾಧಿಂಕೃತ್ವೋಪಲಕ್ಷಣಯೈಕಂ ವಾಕ್ಯಮುದಾಹರತ್ । ಅತ್ರ ಹಿ ಪರೇಷಾಂ ಮಹಾನಾಗ್ರಹಃ । ಅತಃ ಪ್ರಾಗುಕ್ತ ಸೂತ್ರಸೂಚನಯೈವ ಕಥಂಚಿದ್ದೂಷಯಿತುಂ ಶಕ್ಯಮಪೀದಂ ಸವಿಸ್ತರಂ ಪೃಥಗ್ದೂಷಯಿತುಮಯಮಾರಂಭಃ । ಭೋಕ್ತೃಭೋಗ್ಯಯೋರಿವಕರ್ತೃತ್ವಭೋಕ್ತೃತ್ವಯೋರಪಿ ಅನ್ಯೋನ್ಯಸ್ಮಾರಕತ್ವಸಂಭವಾತ್ ಮುಕ್ತಾವಪಿ ಮುಕ್ತಾನಾಂ ಮೌಕ್ತವಿಷಯಭೋಕ್ತೃತ್ವಂ ಪರಮಾತ್ಮನಸ್ತು ಮುಕ್ತೇಷ್ವಘಟಿತಂ ತತ್ಕರ್ತೃತ್ವಂ ಜಗತ್ಕರ್ತೃತ್ವಂ ಚ ವಿರುದ್ಧಧರ್ಮಂ ಸ್ಮಾರಯಿತುಂ ಭೋಕ್ತೃಪದಪ್ರಯೋಗಸ್ಯಾಸ್ಮದರ್ಥಂ ಏವ ಸಮ್ಯಕ್ ಸಾರ್ಥಕ್ಯಾತ್ । ನನ್ವೇವಂ ಸತಿ ಮುಕ್ತಾವೈಕ್ಯಪ್ರತಿಪಾದಕತಯಾ ಪ್ರತೀತಸ್ಯ ಯತ್ರತ್ವಸ್ಯೇತಿ ವಾಕ್ಯಸ್ಯ ಕಥಮನೇನ ಸೂತ್ರೇಣಗತಿಸೂಚನಮಿತಿ ಚೇತ್ । ಇತ್ಥಮ್ । ಅವ್ಯಯಾನಾಮನೇಕಾರ್ಥತ್ವಾತ್ ತು ಶಬ್ದ ಏವಾರ್ಥೇ ಅಪಿಸ್ಸಮುಚ್ಚಯೇ ಚಸ್ತ್ವರ್ಥ ಇತ್ಯಾದಿಲೌಕಿಕವಾಕ್ಯವತ್ ಅತ್ರಾಪಿ ಯತ್ರೇತ್ಯವ್ಯಯಸ್ಯ ಯದ್ಯರ್ಥಕತ್ವಸಂಭವೇನ ತರ್ಕಮುದ್ರಯಾವಾಕ್ಯಪ್ರವೃತ್ತಿಸ್ಸ್ಯಾತ್ ಇತಿ ಸೂತ್ರಖಂಡೇನೈವ ತಸ್ಯಾಪಿ ವಾಕ್ಯಸ್ಯ ಗತೇರ್ವಕ್ತುಂ ಶಕ್ಯತ್ವಾತ್ । ಪ್ರಸಿದ್ಧಾರ್ಥ ಪರಿತ್ಯಾಗೇ ಕಿಂ ಕಾರಣಮಿತ್ಯತ್ರಾಪಿ ತತ್ಪದಸ್ಯ ಪ್ರಸಿದ್ಧಾರ್ಥಪರಿತ್ಯಾಗೇನ ತತ್ರೇತ್ಯ ಪ್ರಸಿದ್ಧಾರ್ಥಕಥಕತ್ವದಾದಿಲೋಕವತ್ ಸ್ಯಾದಿ-ತ್ಯೇವೋತ್ತರಮ್ । ಯತ್ರೇತಿ ಪದಸನ್ನಿಧಾನಾತ್ತತ್ಪದಸ್ಯ ತತ್ರೇತ್ಯರ್ಥಕಥನಮಿತ್ಯತ್ರಾಪಿ ವಿಪರೀತಂ ಕಿಂ ನ ಸ್ಯಾದಿತಿ ವದತಃ ಲ್ಲೋಕವತ್ ತತ್ಪದಸಮವಧಾನಾದ್ಯತ್ರೇತ್ಯಸ್ಯ ಯದಿತ್ಯೇವಾರ್ಥಃ ಸ್ಯಾದಿತ್ಯುತ್ತರಮ್ । ಏವಂ ತರ್ಹಿ ಯತ್ತತ್ಪದಯೋಃ ಕಥಮನ್ವಯ ಇತ್ಯತ್ರಾಪಿ ಕಿಮಾಕ್ಷೇಪ ಇತಿ

ಕಿಂಶಬ್ದಸ್ಯಾಕ್ಷೇಪಾರ್ಥಕಥಕಲೋಕವದಾಕ್ಷೇಪಾರ್ಥತ್ವಮಂಗೀಕೃತ್ಯ ಸರ್ವಮಾತ್ಮೈವಾಭೂದಿತಿ ಯತ್ತತ್ಕೇನ ಮಾನೇನ ನ ಕೇನಾಪೀತಿ ಸಕಲಶ್ರುತಿಸ್ಮೃತಿವಿರುದ್ಧಸ್ಯಾಸ್ಯೈವ ಪ್ರಮೇಯಸ್ಯ ನಿವಾರಣೇನಾನ್ವಯಸ್ಸ್ಯಾದಿತ್ಯುತ್ತರಮ್ । ನ ಕೇವಲಮೇತಾವತ್ । ತಥಾಸತಿ ಕಂಪಶ್ಯೇತ್ಕಂ ಜಿಘ್ರೇದಿತಿ ಲಿಙಾ ತರ್ಕಮುದ್ರಯಾ ಪ್ರವೃತ್ತವಾಕ್ಯಸ್ಯ ಪ್ರತಿತರ್ಕಪರಾಹತ್ಯಾಪರಪರಾಭಾವಕ ವಾವದೂಕಲೋಕವತ್ ಪ್ರವೃತ್ಯಾ ತ್ವದುಕ್ತಪ್ರಮೇಯಸ್ಯ ಪ್ರತಿತರ್ಕಪರಾಹತಿಶ್ಚಸ್ಯಾದಿತಿ ಯೋಜನಾ । ಅಪಿ ಚ ತರ್ಕಸ್ಯ ವಿಪರ್ಯಯೇ ಪರ್ಯವಸಾನನಿಯಮಾಂಗೀಕಾರಿ-ಲೋಕವತ್ಪಶ್ಯತಿ ಜಿಘ್ರತಿ ಚೇತಿ ವಾಕ್ಯಪರ್ಯವಸಾನಾವಶ್ಯಂಭಾವೇನ ಮೌಕ್ತವಿಷಯ ದರ್ಶನಘ್ರಾಣನಾದಿಪ್ರತಿಪಾದಕ ಪ್ರಮಾಣವಿರೋಧಸ್ಸ್ಯಾದಿತ್ಯಪರಾ ಯೋಜನಾ । ಕಿಂಚಾಸ್ಯೋಪಾಸಕಸ್ಯ ಸರ್ವಮಿತ್ಯುಕ್ತ ಮಿಥ್ಯಾಭೂತಸಕಲ ದೇಹೇಂದ್ರಿಯಾದೇ-ರಾತ್ಮೈವಾಭೂದಿತಿ ಸಾವಧಾರಣತಯೋಕ್ತಮುಖ್ಯಬ್ರಹ್ಮೈಕ್ಯಸ್ಯ ಪರಮತೇಪ್ಯಯೋಗಾತ್ । ಆತ್ಮವ್ಯತಿರೇಕೇಣ ಕಿಮಪಿ ನಾಸ್ತೀತ್ಯಮುಖ್ಯಾರ್ಥ ಕಥಕಮಾಯಿಲೋಕವದಸ್ಮಾಕಮಪಿ ಬ್ರಹ್ಮ-ಪ್ರೇರಣಾಮಂತರೇಣ ಕಿಮಪಿನಾಭೂತ್ತತ್ರಕೇನ ಕಂ ಸ್ವಾತಂತ್ರ್ಯೇಣ ಪಶ್ಯೇದಿತ್ಯರ್ಥಃ ಸ್ಯಾತ್ । ತೇನ ಚ ವಿಪ್ಲಿಗೃಹೀತಲೋಕವತ್ಪರಸ್ಯ ಮೂಕೀಭಾವಶ್ಚಸ್ಯಾದಿತ್ಯನ್ಯಾ ಸಕಲವಿದ್ವಜ್ಜನಮಾನ್ಯಾ ಚ ಯೋಜನಾ । ಏವಂ ಬಹುಶಾಖಾನಿರ್ಣಾಯಕತ್ವಾತ್ ಸೂತ್ರಂ ಚ ವಿಶ್ವತೋಮುಖಂ ಭಾಷ್ಯಂ ಚ ಶತಾರ್ಥಮಿತಿ ಸಂಪ್ರದಾಯವಿದಃ । ಅತೋ ನೇದಮಪೂರ್ವಮ್ । ಅಲ್ಪಮತಿತ್ವಾದೇವೋ ಪರಮ್ಯತೇ ॥ ೨೪೨ ॥

**ವಿವರಣೆ–** ನಮ್ಮ ಆಚಾರ್ಯರು ಹೇಳಿದ ಅರ್ಥದಲ್ಲಿ ಇಂತಹ ದೋಷವು ಬರುವುದಿಲ್ಲವೆಂದು ಇಲ್ಲಿ ಪ್ರತಿಪಾದನೆ ಮಾಡುತ್ತಾರೆ. ಇಲ್ಲಿ ಪೂರ್ವಪಕ್ಷಿಯು ಅವನಿಗೆ ಅನುಕೂಲವಾದ ವೇದವಾಕ್ಯವನ್ನೇ ಹಿಡಿದು ಮುಕ್ತಜೀವನಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳಿದರೆ ಸೂತ್ರಕಾರರು ನಿಷೇಧ ಮಾಡುತ್ತಾರೆ. ಹಾಗಾದರೆ ನಾನು ಹೇಳಿದ ವೇದವಾಕ್ಯಕ್ಕೆ ಏನು ಗತಿ ಎಂಬ ಪೂರ್ವಪಕ್ಷಿಯ ಮನಸ್ಸಿನಲ್ಲಿರುವ ಶಂಕೆಯನ್ನು ಸಮಾಧಾನ ಮಾಡುವುದಕ್ಕೆ ಲೋಕದರ್ಶನವನ್ನು ಹೇಳಿದ್ದಾರೆ. ಹೀಗೆ ಮಾಡಿದಾಗ ಪರೋಕ್ತ ಪೂರ್ವಪಕ್ಷದಲ್ಲಿ ಹೇಗೆ ಅಪಸಿದ್ಧಾಂತ ದೋಷವು ಬರುತ್ತದೋ, ಹಾಗೆ ನಮ್ಮ ಸಿದ್ಧಾಂತದಲ್ಲಿ ಅಪಸಿದ್ಧಾಂತ ದೋಷವು ಬರುವುದಿಲ್ಲ. ಆದ್ದರಿಂದ ಶಂಕೆಯೇ ಅಸಂಭಾವಿತ ಎಂಬ ದೋಷವನ್ನು ಹೇಳದೇ ಸೂತ್ರಕಾರರು ದೂಷಣಾಂತರವನ್ನು ಹೇಳುತ್ತಾರೆ. ಹಾಗಲ್ಲದೇ, ಅಪಸಿದ್ಧಾಂತದೋಷವನ್ನೇ ಹೇಳಿದರೆ ಅಯೋಗ್ಯವಾದ ದೂಷಣವನ್ನು ಹೇಳಿದರೆ ತಮಗೇ ನಿರನುಯೋಜ್ಯಾನುಯೋಗ ಎಂಬ ನಿಗ್ರಹ ಸ್ಥಾನವು ಬಂದೀತು. ಅದು ಸರ್ವಜ್ಞರಾದ ವೇದವ್ಯಾಸರಿಗೆ ಉಚಿತವಲ್ಲ ಎಂದು ತಿಳಿಸುವುದಕ್ಕಾಗಿಯೇ ಹಿಂದಿನ ಶ್ಲೋಕದಲ್ಲಿ ವದತಾಂ ವರಃ ಎಂದು ಹೇಳಿದ್ದಾರೆ. ಅಥವಾ ಅದ್ವೈತವಾದಿಗಳಂತೆ ಪೂರ್ವಪಕ್ಷಿಯು ಹೇಳಿದ ಜಡಾಜಡೈಕ್ಯವನ್ನು ಅಂಗೀಕರಿಸಿ ಐಕ್ಯವು ಇರಲಿ ಆದರೂ ಸಮುದ್ರದ ತರಂಗಗಳಂತೆ ವಿಭಾಗವು ಕೂಡುತ್ತದೆ ಎಂದು

ಸಮಾಧಾನವನ್ನು ಹೇಳುವ ವ್ಯಾಖ್ಯಾನವು ವೇದವ್ಯಾಸರಿಗೆ ಅಭಿಮತವಾದುದಲ್ಲ ಎಂದೂ ಹಿಂದಿನ ಶ್ಲೋಕದ ಯೋಜನೆಯನ್ನು ಮಾಡಬಹುದು. ಸಕಲ ಪ್ರಮಾಣ ವಿರುದ್ಧವಾದ ನಿನಗೂ ಅನಭಿಮತವಾದ ಜಡಾಜಡೈಕ್ಯವನ್ನು ಸಿದ್ಧಾಂತ ಮಾಡುವುದು ಅವಿವೇಕಿಯಾದ ನಿನಗೇ ಶೋಭಿಸುತ್ತದೆ. ವಿದ್ವಚ್ಛಿರೋಮಣಿಗಳಾದ ವ್ಯಾಸರಿಗೆ ಶೋಭಿಸುವುದಿಲ್ಲ ಎಂದು ತಿಳಿಸುವುದಕ್ಕಾಗಿಯೂ ಹಿಂದಿನ ಶ್ಲೋಕದಲ್ಲಿ ರಾಜರು ವದತಾಂ ವರಃ ಎಂದು ಪ್ರಯೋಗಮಾಡಿದ್ದಾರೆ. ಇಲ್ಲಿ ಅದ್ವೈತಿಗಳು ಹೀಗೆ ಶಂಕೆಯನ್ನು ಮಾಡಬಹುದು. ನಾವು ಹೇಳಿದ ಏಕಮೇವಾದ್ವಿತೀಯಂ, ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯಗಳಿಂದಲೇ ಭೋಕ್ತೃ ಮತ್ತು ಭೋಗ್ಯಗಳಿಗೆ ಅವಿಭಾಗರೂಪವಾದ ಐಕ್ಯವನ್ನು ಬ್ರಹ್ಮನಲ್ಲಿ ಆಶಂಕಿಸಿ ಸೂತ್ರಕಾರರು ಆ ಐಕ್ಯವನ್ನು ಇಲ್ಲ ಎಂದು ನಿಷೇಧಿಸಿ ಹಾಗಾದರೆ ಪೂರ್ವಪಕ್ಷ ಪ್ರಾಪಕವಾದ ನಮ್ಮ ವಾಕ್ಯಗಳಿಗೆ ಏನು ಗತಿ ಎಂಬ ಶಂಕೆಯನ್ನು ಪರಿಹರಿಸಲು ರಾಜಾರಾಷ್ಟ್ರಂ, (ರಾಜನೇ ರಾಷ್ಟ್ರ), ಅಸ್ಮಿನ್ ಗ್ರಾಮೇ ಅಯಮೇಕ ಏವ (ಈ ಗ್ರಾಮದಲ್ಲಿ ಇವನೊಬ್ಬನೇ ಇರುವವನು), ಅಯಮದ್ವಿತೀಯೋ ರಾಜಾ (ಈ ರಾಜನು ಅದ್ವಿತೀಯನು), ಅತಿಸ್ನೇಹ ಯುಕ್ತಪುರುಷನಲ್ಲಿ ತ್ವಮೇವಾಹಂ (ನೀನೇ ನಾನು), ಎಂಬ ಲೌಕಿಕ ವಾಕ್ಯಗಳ ನಾಲ್ಕು ನಿದರ್ಶನಗಳನ್ನು ತೋರಿಸುವುದಕ್ಕಾಗಿ ಲೋಕವತ್ ಸ್ಯಾತ್ ಲೋಕವತ್ ಎಂದು ಸೂತ್ರಕಾರರು ಪ್ರವೃತ್ತರಾಗಿದ್ದಾರೆ. ಅಲ್ಲದೇ, ಸೂತ್ರದಲ್ಲಿ ಭೋಕ್ತೃ ಪದವಿರುವುದರಿಂದ ಭೋಕ್ತೃ ಸಹಚರಿತವಾದ ಭೋಜ್ಯವೇ ಸ್ಮರಣೆಗೆ ಬರುತ್ತದೆ. ಆದ್ದರಿಂದ ಭೋಕ್ತೃ ಭೋಗ್ಯಗಳಿಗೆ ಅವಿಭಾಗವನ್ನೇ ಪೂರ್ವಪಕ್ಷ ಮಾಡಬೇಕು. ಭೋಕ್ತೃ ಶಬ್ದಕ್ಕೂ, ಸರ್ವ ಏಕೀ ಭವಂತಿ ಎಂಬ ಏಕೀಭವನಕ್ಕೂ ಯಾವ ಸಂಬಂಧವೂ ಇಲ್ಲ. ಆದ್ದರಿಂದ ನಿಮ್ಮ ವಿಷಯವಾಕ್ಯವೇ ಅಸಂಗತವಾದುದು. ನಮ್ಮ ವಿಷಯವಾಕ್ಯ ಮತ್ತು ಅಧಿಕರಣ ಸರಿಯಾಗಿದೆ ಎಂದು ಹೀಗೆ ಅದ್ವೈತಿಗಳು ಶಂಕೆಯನ್ನು ಮಾಡಬಹುದು. ಅದಕ್ಕೆ ರಾಜರು ಉತ್ತರವನ್ನು ಹೇಳುತ್ತಾರೆ. ತನ್ನ ಮೂಗನ್ನು ಕುಯ್ದುಕೊಂಡಾದರೂ ಇನ್ನೊಬ್ಬನಿಗೆ ಅಪಶಕುನವನ್ನು ನುಡಿಯುವ ಖಳನಾದ ನೀನು ಮಾತ್ರ ಹೀಗೆ ಅಧಿಕರಣಸ್ವರೂಪವನ್ನು ಆಲೋಚನೆ ಮಾಡುತ್ತಿದ್ದೀಯೆ. ಆದರೆ ಋಜ್ವಗ್ರೇಸರರಾದ ನಮ್ಮ ಆಚಾರ್ಯರಾದ ಮಧ್ವಾಚಾರ್ಯರು ಇಂತಹ ಶಂಕೆಯನ್ನು ಅಧ್ಯಾತ್ಮಸಂಬಂಧ ಭೂಮಾಹ್ಯಸ್ಮಿನ್ ಎಂಬ ಸೂತ್ರಾಂಶದಿಂದಲೂ, ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ ಎಂಬ ಸೂತ್ರಾಂಶದಿಂದಲೂ ಲಕ್ಷಣಾವೃತ್ತಿಯಿಂದ ಅಥವಾ ಗೌಣೀವೃತ್ತಿಯಿಂದ ಅಂತಹ ವಾಕ್ಯಗಳು ಪ್ರವೃತ್ತವಾಗುತ್ತವೆ ಎಂದು ಆ ವಾಕ್ಯಗಳಿಗೆ ಗತಿಯನ್ನು ಸೂತ್ರಾಂತರಗಳಲ್ಲಿಯೇ ಹೇಳಿರುವುದರಿಂದ ಇಲ್ಲಿಯೂ ಅದನ್ನೇ ಉತ್ತರವಾಗಿ ಹೇಳಿದರೆ ಅದು ಚರ್ವಿತಚರ್ವಣವಾಗುತ್ತದೆ ಎಂದು ಭಾವಿಸಿ ಈ ಅಧಿಕರಣದಲ್ಲಿ ಮುಕ್ತಜೀವರಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳುವ ಎಲ್ಲಾ ವಾಕ್ಯಗಳನ್ನೂ ವಿಷಯವಾಕ್ಯವನ್ನಾಗಿ ಉದ್ದೇಶಿಸಿ ಒಂದು ವಾಕ್ಯವನ್ನು ಉಪಲಕ್ಷಣವನ್ನಾಗಿ ತೆಗೆದುಕೊಂಡು ಅದನ್ನು ವಿಚಾರ ಮಾಡಿದ್ದಾರೆ. ಮೋಕ್ಷದಲ್ಲಿ ಜೀವಬ್ರಹ್ಮರಿಗೆ ಅಭೇದವಿದೆ ಎಂಬ ವಿಷಯದಲ್ಲಿಯೇ

ಅದ್ವೈತಿಗಳಾದ ನಿಮಗೆ ಮಹಾ ಆಗ್ರಹವಿದೆಯಷ್ಟೇ? ಆದ್ದರಿಂದ ಅಲ್ಲಿಯೇ ಐಕ್ಯವನ್ನು ನಿರಾಕರಣೆ ಮಾಡುವುದು ಆಚಾರ್ಯರ ಉದ್ದೇಶ. ಆದ್ದರಿಂದ ಹಿಂದೆ ಹೇಳಿದ ಸೂತ್ರಗಳು ಸೂಚಿಸಿದ ಮಾರ್ಗದಿಂದಲೇ ಈ ಪೂರ್ವಪಕ್ಷವನ್ನು ದೂಷಿಸಲು ಸಾಧ್ಯವಿದ್ದರೂ ಸಹ ಇದನ್ನು ವಿಸ್ತಾರವಾಗಿ ಪ್ರತ್ಯೇಕವಾಗಿ ದೂಷಿಸಲು ಈ ಅಧಿಕರಣದ ಆರಂಭವು ಇದೆ. ಭೋಕ್ತೃ ಶಬ್ದವನ್ನು ಕೇಳಿದರೆ ಭೋಗ್ಯದ ಸ್ಮರಣೆ ಬರುವಂತೆ ಕರ್ತೃತ್ವಭೋಕ್ತೃತ್ವಗಳು ಸಹಚರಿತವಾಗಿರುವುದರಿಂದ ಕರ್ತೃತ್ವದ ಸ್ಮರಣೆಯೂ ಬರುತ್ತದೆ. ಮೋಕ್ಷದಲ್ಲಿ ಮುಕ್ತಜೀವರಿಗೆ ವಿಷಯಭೋಕ್ತೃತ್ವವಿದೆ. ಬ್ರಹ್ಮನಿಗೆ ಆ ಮುಕ್ತರಲ್ಲಿ ಇಲ್ಲದಿರುವ ಭೋಗಕರ್ತೃತ್ವವು ಮತ್ತು ಜಗತ್ಕರ್ತೃತ್ವವು ಇದೆ ಎಂದು ಇಂತಹ ವಿರುದ್ಧ ಧರ್ಮಗಳನ್ನು ಉಪಸ್ಥಾಪಿಸಿ ಭೇದವನ್ನು ಸಾಧಿಸುವುದಕ್ಕೋಸ್ಕರ ಸೂತ್ರದಲ್ಲಿ ಉಪಯೋಗಿಸಿರುವ ಭೋಕ್ತೃ ಪದವು ಅತ್ಯಂತ ಸಾರ್ಥಕವಾಗಿದೆ. ಆದ್ದರಿಂದ ನಮ್ಮ ಪಕ್ಷದಲ್ಲಿ ಯಾವ ದೋಷವೂ ಇಲ್ಲ.

ಹಾಗಾದರೆ, ಮುಕ್ತಿಯಲ್ಲಿ ಐಕ್ಯವನ್ನು ಹೇಳುವ ಎಲ್ಲಾ ವಾಕ್ಯಗಳಿಗೂ ಇಲ್ಲಿ ಗತಿ ಕಲ್ಪನೆಯನ್ನು ಮಾಡಿದ್ದರೆ, ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ಎಂಬ ವಾಕ್ಯಕ್ಕೆ ಈ ಸೂತ್ರದಿಂದ ಯಾವ ಗತಿಕಲ್ಪನೆಯು ಸಿದ್ಧವಾಗುತ್ತದೆ ಎಂಬ ಪ್ರಶ್ನೆಗೂ ಲೋಕವತ್ ಎಂಬ ಪದದಿಂದಲೇ ಅನೇಕ ವಿಧವಾದ ಗತಿಗಳು ಸಿದ್ಧವಾಗುತ್ತವೆ ಎಂದು ಉಪಪಾದನೆ ಮಾಡುತ್ತಾರೆ. ಅದರ ಪ್ರಕಾರವು ಹೀಗೆ - ಲೋಕವತ್ ಎಂದರೆ ಲೋಕದಲ್ಲಿ ಅವ್ಯಯಗಳಿಗೆ ಅನೇಕಾರ್ಥತ್ವವು ಇದೆ. ತು ಶಬ್ದವು ಏವ ಎಂಬ ಅರ್ಥದಲ್ಲಿಯೂ, ಅಪಿ ಶಬ್ದವು ಸಮುಚ್ಚಯ ಎಂಬ ಅರ್ಥದಲ್ಲಿಯೂ, ಚ ಶಬ್ದವು ತು ಎಂಬ ಅರ್ಥದಲ್ಲಿಯೂ ಇದೆ ಎಂಬ ಲೌಕಿಕ ಪ್ರಯೋಗಗಳಿವೆ. ಅದರಂತೆ ಯತ್ರತ್ವಸ್ಯ ಎಂಬ ವಾಕ್ಯದಲ್ಲಿರುವ ಯತ್ರ ಎಂಬ ಪದಕ್ಕೂ, ಯದಿ ಎಂಬ ಅರ್ಥವನ್ನು ಮಾಡಿ ತರ್ಕಮುದ್ರೆಯಿಂದ ಈ ವಾಕ್ಯದ ಪ್ರವೃತ್ತಿಯನ್ನು ಕೂಡಿಸಬಹುದು ಎಂದು ಲೋಕವತ್ ಎಂಬ ಸೂತ್ರಖಂಡದಿಂದ ಸಮಾಧಾನವನ್ನು ಸೂಚಿಸಿದ್ದಾರೆ. ಯತ್ರ ಎಂಬ ಪದಕ್ಕೆ ಎಲ್ಲಿ ಎಂಬ ಪ್ರಸಿದ್ಧಾರ್ಥವನ್ನು ಬಿಟ್ಟು ಯದಿ ಎಂಬ ಪದದ ಅರ್ಥವನ್ನು ಸ್ವೀಕರಿಸಲು ಏನು ಕಾರಣ ಎಂಬುದಕ್ಕೂ ಲೋಕವತ್ ಎಂದೇ ಉತ್ತರ. ಇದೇ ವಾಕ್ಯದಲ್ಲಿ ತತ್ ಕೇನ ಕಂ ಪಶ್ಯೇತ್ ಎಂಬಲ್ಲಿರುವ ತತ್ ಪದಕ್ಕೆ ಪ್ರಸಿದ್ಧವಾದ ಅದು ಎಂಬ ಅರ್ಥವನ್ನು ಬಿಟ್ಟು ಅಪ್ರಸಿದ್ಧವಾದ ಅಲ್ಲಿ ಎಂಬ ಅರ್ಥವನ್ನು ಹೇಳುವ ಮಾಯಾವಾದಿ ಲೋಕದಂತೆ ಎಂದು ಅರ್ಥ. ವಾಕ್ಯದ ಮೊದಲಿನಲ್ಲಿ ಯತ್ರ ಎಂದು ಇರುವುದರಿಂದ ಅದರ ಸನ್ನಿಧಾನದಿಂದ ತತ್ಪದಕ್ಕೆ ತತ್ರ ಎಂದು ಅರ್ಥ ಮಾಡುತ್ತೇವೆ ಎಂಬುದಕ್ಕೂ ಲೋಕವತ್ ಎಂದೇ ಉತ್ತರ. ವಿಪರೀತವಾಗಿ ಏಕೆ ಅರ್ಥವನ್ನು ಮಾಡಬಾರದು ಎಂಬ ಲೋಕದಂತೆ ಎಂದೇ ಅರ್ಥ. ಎಂದರೆ ಅನಂತರ ತತ್ಪದವಿರುವುದರಿಂದ ಅದರ ಸನ್ನಿಧಾನದಿಂದ ಮೊದಲಿರುವ ಯತ್ರ ಎಂಬ ಪದಕ್ಕೂ ಯತ್ ಎಂಬ ಅರ್ಥವೇ ದೊರೆಯುತ್ತಿದೆ ಎಂದು ಉತ್ತರ. ಹಾಗಾದರೆ

ಯತ್ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ಎಂಬಲ್ಲಿ ಅನ್ವಯವು ಹೇಗೆ ಎಂಬ ಪ್ರಶ್ನೆಗೂ ಲೋಕವತ್ ಎಂದೇ ಉತ್ತರ. ಲೋಕದಲ್ಲಿ ಕಿಂ ಆಕ್ಷೇಪೇ ಎಂದು ಕಿಂ ಶಬ್ದಕ್ಕೆ ಆಕ್ಷೇಪಾರ್ಥವನ್ನು ಅಂಗೀಕಾರ ಮಾಡುತ್ತಾರೆ. ಆದ್ದರಿಂದ ಇಲ್ಲಿಯೂ ಕೂಡ ಲೋಕದಂತೆ ಕಿಂ ಶಬ್ದಕ್ಕೆ ಆಕ್ಷೇಪಾರ್ಥವನ್ನು ಸ್ವೀಕರಿಸಿ ಸರ್ವಮಾತ್ಮೈವಾಭೂದಿತಿಯತ್, ತತ್ ಕೇನ (ಮಾನೇನ) ಎಲ್ಲವೂ ಆತ್ಮನೇ ಆಗುತ್ತದೆ ಎಂದು ಏನು ಹೇಳಿದೆಯೋ ಅದು ಯಾವ ಪ್ರಮಾಣದಿಂದ ಎಂದು ಅದನ್ನು ಆಕ್ಷೇಪಿಸಿ, ಯಾವ ಪ್ರಮಾಣದಿಂದಲೂ ಸಿದ್ಧವಾಗುವುದಿಲ್ಲ ಏಕೆಂದರೆ ಅದು ಸಕಲ ಶ್ರುತಿಸ್ಮೃತಿವಿರುದ್ಧವಾದುದು ಎಂದು ಪ್ರಸಕ್ತವಾದ ಪ್ರಮೇಯವನ್ನು ನಿವಾರಣೆಯನ್ನು ಮಾಡಿ ಅನ್ವಯವನ್ನು ಮಾಡಬಹುದು ಎಂದು ಉತ್ತರ. ಇಷ್ಟೇ ಅಲ್ಲ ಲೋಕವತ್ ಎಂದರೆ ಪ್ರತಿವಾದಿಗಳನ್ನು ಸೋಲಿಸುವ ವಾದಿಲೋಕದಂತೆ ಎಂದೂ ಅರ್ಥ. ಕೇನ ಕಂ ಪಶ್ಯೇತ್, ಕಂ ಜಿಘ್ರೇತ್ ಇತ್ಯಾದಿ ವಾಕ್ಯಗಳು ಲಿಜ್‌ಸಹಿತವಾಗಿರುವುದರಿಂದ ತರ್ಕದ ರೀತಿಯಲ್ಲಿ ಪ್ರವೃತ್ತವಾಗುತ್ತವೆ. ವಾದಿಗಳು ಹೇಳಿದ ತರ್ಕಕ್ಕೆ ಪ್ರತಿವಾದಿಗಳು ಪ್ರತಿತರ್ಕದಿಂದ ಪರಾಹತಿಯನ್ನು ಉಂಟುಮಾಡುತ್ತಾರೆ. ಅದರಂತೆ ನೀನು ಹೇಳುವ ತರ್ಕಕ್ಕೂ ಲೋಕವತ್ ಲೋಕದಂತೆ ಪ್ರತಿತರ್ಕ ಪರಾಹತಿಯು ಉಂಟಾಗುತ್ತದೆ ಎಂದು ಅರ್ಥ. ಅದೂ ಅಲ್ಲದೇ, ಲೋಕವತ್ ಎನ್ನುವುದಕ್ಕೆ ಇನ್ನೊಂದು ಅರ್ಥವಿದೆ. ಈ ವಾಕ್ಯವು ತರ್ಕಮುದ್ರೆಯಿಂದ ಪ್ರವೃತ್ತವಾಗುತ್ತದೆ ಎಂದು ಹೇಳಿದ್ದೇವೆ. ತರ್ಕಕ್ಕೆ ಯಾವಾಗಲೂ ವಿಪರ್ಯಯಪರ್ಯವಸಾನವು ಇರಬೇಕು. ಆದ್ದರಿಂದ ಈ ತರ್ಕಕ್ಕೂ ಪಶ್ಯತಿ, ಜಿಘ್ರತಿ (ನೋಡುತ್ತಾನೆ, ಮೂಸುತ್ತಾನೆ) ಎಂಬ ಪರ್ಯವಸಾನವು ಅವಶ್ಯಕವಾಗಿ ಇರುವುದರಿಂದ ಇದು ಮುಕ್ತಜೀವನ ದರ್ಶನ ಗ್ರಹಣಾದಿಗಳನ್ನು ಪ್ರತಿಪಾದನೆ ಮಾಡುವುದರಿಂದ ಪ್ರತಿತರ್ಕಪರಾಹತವಾದ ಲೌಕಿಕತರ್ಕದಂತೆ ನಿನ್ನ ತರ್ಕಕ್ಕೂ ಪ್ರಮಾಣರೋಧವು ಬರುತ್ತದೆ ಎಂದೂ ಅರ್ಥ. ಅದೂ ಅಲ್ಲದೆ, ಈ ವಾಕ್ಯದಲ್ಲಿ ಅಸ್ಯ ಎಂದರೆ ಉಪಾಸಕನೆಂದು ಅರ್ಥ. ಅವನಿಗೆ ಸರ್ವಮಾತ್ಮೈವಾಭೂತ್ ಎಂದರೆ ದೇಹೇಂದ್ರಿಯಾದಿಗಳೆಲ್ಲವೂ ಅವಧಾರಣಪೂರ್ವಕವಾಗಿ ಹೇಳಿದ ಬ್ರಹ್ಮೈಕ್ಯವನ್ನೇ ಹೊಂದುತ್ತದೆ ಎಂಬ ಮುಖ್ಯವಾದ ಅರ್ಥವು ನಿನಗೂ ಸಮ್ಮತವಾದುದಲ್ಲ. ಆದ್ದರಿಂದ ಬ್ರಹ್ಮೈಕ್ಯವನ್ನು ಬಿಟ್ಟು ಬ್ರಹ್ಮವ್ಯತಿರೇಕೇಣ ಅಸತ್ವರೂಪವಾದ ಅಮುಖ್ಯಾರ್ಥವನ್ನು ನೀನು ಹೇಳುತ್ತೀಯೆ. ಲೋಕವತ್ ಎಂಬ ಸೂತ್ರಾಂಶಕ್ಕೆ ನಮಗೆ ನಿನ್ನ ಮಾರ್ಗವನ್ನು ಅನುಸರಿಸಿ ಇನ್ನೂ ಒಂದು ಅರ್ಥವು ದೊರೆಯುತ್ತದೆ. ನೀನು ಹೇಗೆ ಮುಖ್ಯವಾದ ಅಭೇದವನ್ನು ಹೇಳದೆ ಲಾಕ್ಷಣಿಕವಾದ ಬ್ರಹ್ಮವ್ಯತಿರೇಕೇಣ ಅಸತ್ವರೂಪವಾದ ಅಭೇದವನ್ನು ಹೇಳುತ್ತೀಯೋ, ಅದರಂತೆ ಬ್ರಹ್ಮಪ್ರೇರಣೆ ಇಲ್ಲದೇ ಸ್ವತಂತ್ರವಾಗಿ ಮುಕ್ತಜೀವನು ಏನನ್ನು ನೋಡುತ್ತಾನೆ, ಏನನ್ನು ಕೇಳುತ್ತಾನೆ ಎಂಬ ಅರ್ಥವನ್ನು ನಾವು ಹೇಳುತ್ತೇವೆ. ಆದರಿಂದ ಬಿಟ್ಟಿ ಕೆಲಸ ಮಾಡುವ ಮನುಷ್ಯನಿಗೆ ಹೇಗೆ ಲೋಕದಲ್ಲಿ ಮೂಕೀಭಾವ ಉಂಟಾಗುತ್ತದೋ ಅದರಂತೆ ಅದ್ವೈತಿಗೂ ಮೂಕೀಭಾವ ಉಂಟಾಗುತ್ತದೆ ಎಂಬುದೂ

ಸಹ ಲೋಕವತ್ ಎಂಬ ಶಬ್ದದ ಅರ್ಥ. ಹೀಗೆ ಬಹುಶಾಖಾನಿರ್ಣಾಯಕವಾದ ಸೂತ್ರಗಳಿಗೂ ಮತ್ತು ಭಾಷ್ಯಕ್ಕೂ ವಿಶ್ವತೋಮುಖತ್ವ ಇದೆ. ಆದ್ದರಿಂದಲೇ ಭಾಷ್ಯವು ಶತಾರ್ಥವನ್ನು ಒಳಗೊಂಡಿದೆ ಎಂಬ ಸಂಪ್ರದಾಯಜ್ಞರ ಮಾತು ಅತ್ಯಂತ ಸೂಕ್ತವಾಗಿದೆ.

ತಸ್ಮಾದನೇನ ಸೂತ್ರೇಣ ಪರಾಭೇದ್ಯೇನ ಸೂತ್ರಕೃತ್ ।
ಬಬಂಧಾದ್ವೈತಿನಾಂ ಕಂಠಂ ವಾಗ್ಬಂಧಾಯೇತಿ ಮೇ ಮತಿಃ ॥ ೨೪೩ ॥

**ಅರ್ಥ–** ತಸ್ಮಾತ್= ಆ ಕಾರಣದಿಂದ, ಸೂತ್ರಕೃತ್= ಸೂತ್ರಕಾರರಾದ ವ್ಯಾಸರು, ಪರಾಭೇದ್ಯೇನ= ಪರವಾದಿಗಳು ನಿರಾಕರಿಸಲು ಸಾಧ್ಯವಿಲ್ಲದಂತಹ, ಅನೇನ ಸೂತ್ರೇಣ= ಈ ಸೂತ್ರದಿಂದ, ಅದ್ವೈತಿನಾಂ ವಾಗ್ಬಂಧಾಯಃ= ಅದ್ವೈತಿಗಳ ವಾದವನ್ನು ನಿಲ್ಲಿಸಲು, ಕಂಠಂ= ಅವರ ಕಂಠವನ್ನು, ಬಬಂಧ= ಬಂಧಿಸಿದ್ದಾರೆ, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಅನುವಾದ–** ಆದ್ದರಿಂದ ಸೂತ್ರಕಾಶರು ಪರವಾದಿಗಳು ನಿರಾಕರಿಸಲು ಸಾಧ್ಯವಿಲ್ಲದ ಈ ಸೂತ್ರದಿಂದ ಅದ್ವೈತಿಗಳ ವಾದವನ್ನು ನಿಲ್ಲಿಸುವುದಕ್ಕೋಸ್ಕರ ಅವರ ಕಂಠವನ್ನು ಬಂಧಿಸಿದರು ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಉಕ್ತಮರ್ಥಂ ಸಾಹಿತ್ಯಮುದ್ರಯೋಪಸಂಹರತಿ ॥ **ತಸ್ಮಾದಿತಿ** ॥ ರಜ್ಜ್ವೇತಿಧ್ವನಿಃ । ಪರಾಭೇದ್ಯೇನೋಕ್ತವಿಧಯಾ ಪರಕೃತಕುಚೋದ್ಯಾಭೇದ್ಯೇನ । ಕೇನಾಪ್ಯಚ್ಛೇದ್ಯೇನೇತಿಧ್ವನಿಃ । ವಾಗ್ಬಂಧಾಯ ಮೂಕೀಭಾವಾಯ ॥ ೨೪೩ ॥

**ವಿವರಣೆ–** ಸೂತ್ರ ಶಬ್ದಕ್ಕೆ ಹಗ್ಗ ಎಂದೂ ಅರ್ಥವಿದೆ. ಕಂಠವನ್ನು ಹಗ್ಗದಿಂದ ಬಿಗಿದರೆ ಹೇಗೆ ಮಾತನಾಡಲು ಸಾಧ್ಯವಿಲ್ಲವೋ, ಹಾಗೆ ಈ ಸೂತ್ರವೆಂಬ ಹಗ್ಗದಿಂದ ಅದ್ವೈತಿಗ ಕಂಠವನ್ನು ಬಿಗಿದರೆ ಅವರು ತಮ್ಮ ವಾದವನ್ನು ಇನ್ನು ಮಂಡಿಸಲು ಸಾಧ್ಯವಿಲ್ಲ. ಆ ಕಾರಣದಿಂದ ಸೂತ್ರಕಾರರು ಅದ್ವೈತಿಗಳ ಕಂಠವನ್ನು ಈ ಸೂತ್ರದಿಂದ ಬಂಧಿಸಿದ್ದಾರೆ ಎಂಬ ಅರ್ಥವು ಧ್ವನಿತವಾಗುತ್ತದೆ.

ಏವಂ ಚ ಶ್ರುತಿಸೂತ್ರಾದೌ ನ ಕ್ವಾಪ್ಯೈಕ್ಯಂ ವಿವಿಕ್ಷತಿ ।
ಸೌತ್ರಯುಕ್ತಿಶರವ್ರಾತಘಾತಭೀರು ಪದೇ ಪದೇ ॥ ೨೪೪ ॥

**ಅರ್ಥ–** ಏವಂ ಚ= ಈ ಎಲ್ಲ ಕಾರಣಗಳಿಂದ (ಒಟ್ಟಿನಲ್ಲಿ), ಪದೇ ಪದೇ= ಪ್ರತಿಯೊಂದು ಪದದಲ್ಲಿಯೂ ಎಂದರೆ ಪ್ರತಿಯೊಂದು ಸ್ಥಳದಲ್ಲಿಯೂ, ಸೌತ್ರಯುಕ್ತಿಶರವ್ರಾತಘಾತ-ಭೀರು= ಸೂತ್ರದಲ್ಲಿ ಹೇಳಿದ ಯುಕ್ತಿಗಳೆಂಬ ಬಾಣಸಮೂಹದ ಆಘಾತಕ್ಕೆ ಹೆದರಿದ, ಐಕ್ಯಂ= ಐಕ್ಯವು, ಶ್ರುತಿಸೂತ್ರಾದೌ= ಶ್ರುತಿಸೂತ್ರಾದಿಗಳಲ್ಲ, ಕ್ವಾಪಿ= ಎಲ್ಲಿಯೂ ಕೂಡ, ನ ವಿವಿಕ್ಷತಿ= ಪ್ರವೇಶಿಸುವುದಿಲ್ಲ.

**ಅನುವಾದ–** ಪ್ರತಿ ಸೂತ್ರದಲ್ಲಿ ಹೇಳಲ್ಪಟ್ಟ ಯುಕ್ತಿಗಳೆಂಬ ಬಾಣದ ಹೊಡೆತಕ್ಕೆ ಹೆದರಿದ ಐಕ್ಯವು ಶ್ರುತಿಯಲ್ಲಾಗಲೀ ಅಥವಾ ಸೂತ್ರಗಳಲ್ಲಾಗಲೀ ಎಲ್ಲಿಯೂ ಪ್ರವೇಶವನ್ನು ಪಡೆಯಲು ಇಚ್ಛಿಸುವುದಿಲ್ಲ.

**ಭಾವವಿಲಾಸಿನೀ–** ವಿವಿಕ್ಷತಿ ಪ್ರವೇಷ್ಟುಮಿಚ್ಛತಿ । ಸೌತ್ರಯುಕ್ತಯ ಏವ ಶರಾಃ । ಘಾತಃ ನಿರಾಕರಣಮ್ । ಪದೇಪದೇ ಸೂತ್ರಸ್ಥಸರ್ವಪದೇಷು ॥ ೨೪೪ ॥

**ವಿವರಣೆ–** ಐಕ್ಯವು ಶ್ರುತಿಸೂತ್ರವಿರುದ್ಧವಾದ್ದರಿಂದ ಅದಕ್ಕೆ ಪ್ರತಿಸೂತ್ರದಲ್ಲೂ ವಿರೋಧವು ಬರುವುದರಿಂದ ಶ್ರುತಿಯಲ್ಲಾಗಲೀ, ಸೂತ್ರಗಳಲ್ಲಾಗಲೀ ಅದಕ್ಕೆ ಎಲ್ಲೂ ಸ್ಥಾನವಿಲ್ಲ ಎಂದು ಅಭಿಪ್ರಾಯ.

ತದ್ಗುಣತ್ವಾತ್ತು ತತ್ತ್ವೋಕ್ತಿರಿತ್ಯನ್ಯತ್ರ ಪ್ರಲಂಬಿನಾಂ ।
ತತ್ತ್ವಮಸ್ಯಾದಿವಾಕ್ಯಾನಾಂ ಗೌಣೀಂ ಗತಿಮಸೂತ್ರಯತ್ ॥ ೨೪೫ ॥

**ಅರ್ಥ–** ಅನ್ಯತ್ರ ಪ್ರಲಂಬಿನಾಂ= ಬೇರೆ ಕಡೆಯಲ್ಲಿ ವೇದಗಳಲ್ಲಿರುವ, ತತ್ತ್ವಮಸ್ಯಾದಿವಾಕ್ಯಾನಾಂ= ತತ್ತ್ವಮಸಿ ಮೊದಲಾದ ವಾಕ್ಯಗಳಿಗೆ, ತದ್ಗುಣತ್ವಾತ್ತು ತತ್ತ್ವೋಕ್ತಿರಿತಿ= ಬ್ರಹ್ಮನ ಗುಣಕ್ಕೆ ಸದೃಶವಾದ ಗುಣವೇ ಜೀವನ ಸಾರವಾದುದರಿಂದ ಬ್ರಹ್ಮತ್ವೋಕ್ತಿಯು, ಇತಿ= ಎಂದು, ಗೌಣೀಂ ಗತಿಂ= ಗೌಣೀ ವೃತ್ತಿಯನ್ನು, ಅಸೂತ್ರಯತ್= ಸೂತ್ರಕಾರರು ಪ್ರದರ್ಶಿಸಿದ್ದಾರೆ.

**ಅನುವಾದ–** ಪ್ರಾಣೋಹಮಸ್ಮಿ ಮುಂತಾದ ವಾಕ್ಯ ಪ್ರಕರಣಗಳಿಗಿಂತ ಅನ್ಯ ಪ್ರಕರಣಗಳಲ್ಲಿ ಮತ್ತು ಅನ್ಯ ಶಾಖೆಗಳಲ್ಲಿರುವ ತತ್ತ್ವಮಸಿ ಮೊದಲಾದ ವಾಕ್ಯಗಳಿಗೆ ಬ್ರಹ್ಮನ ಗುಣಗಳಿಗೆ ಸದೃಶವಾದ ಗುಣಗಳು ಜೀವನಿಗೆ ಸಾರವಾದುದರಿಂದ ಜೀವನಲ್ಲಿ ಬ್ರಹ್ಮತ್ವೋಕ್ತಿ ಇದೆ ಎಂದು ಹೇಳಿ ಬ್ರಹ್ಮಪದಕ್ಕೆ ಗೌಣೀ ವೃತ್ತಿಯನ್ನು ಸೂಚಿಸಿದ್ದಾರೆ.

**ಭಾವವಿಲಾಸಿನೀ–** ತದ್ಗುಣಸಾರತ್ವಾತ್ತುತದ್ವ್ಯಪದೇಶಃ ಪ್ರಾಜ್ಞವದಿತಿ ಸೂತ್ರೇಣಾಪ್ಯೈಕ್ಯವಾಕ್ಯಸ್ಯ ಗತಿರುಚ್ಯತ ಇತ್ಯಾಹ – **ತದ್ಗುಣತ್ವೇತಿ** ॥ ಯಥಾಸಿಂಹವರ್ತಿ ಶೌರ್ಯಾದಿಗುಣಸದೃಶಗುಣವತಿ ದೇವದತ್ತೇ ಸಿಂಹತ್ವವ್ಯಪದೇಶಸ್ತಥಾ ತಸ್ಯ ಬ್ರಹ್ಮಣಃ ಗುಣವದ್ಗುಣಾಸ್ತದ್ಗುಣಾಃ । ತೈಸ್ಸಾರತ್ವಾಚ್ಛ್ರೇಷ್ಠತ್ವಾತ್ ತದ್ವ್ಯಪದೇಶಃ ತತ್ತ್ವೇನ ಬ್ರಹ್ಮತ್ವೇನವ್ಯಪದೇಶಃ ಜೀವೇಷ್ವಪಿ ಭವತೀತಿ ಸೂತ್ರಾರ್ಥಃ । ಪ್ರಾಜ್ಞವದಿತಿ ದೃಷ್ಟಾಂತಸ್ತು ವೈದಿಕಮರ್ಯಾದಯಾ । ಯಥಾಸರ್ವಸ್ಯ ಪ್ರಾಜ್ಞಾಖ್ಯಬ್ರಹ್ಮವತ್ತಸ್ತ್ಯತ್ವಾವಾದಿಗುಣವತ್ತ್ವಾತ್ಸರ್ವಂ ಖಲ್ವಿದಂ ಬ್ರಹ್ಮೇತಿ ಬ್ರಹ್ಮತ್ವೇನೋಕ್ತಿ-ಸ್ತಥೇತ್ಯರ್ಥಃ । ಜಡಸ್ಯ ಬ್ರಹ್ಮತ್ವಂ ಸರ್ವೈರಪಿ ಸಾದೃಶ್ಯೇನೈವವಕ್ತವ್ಯಮಿತ್ಯತಸ್ಸಿದ್ಧ-ಪ್ರಾಯತ್ವಾತ್ಸೂತ್ರಕೃತಾ ಸ ಏವ ದೃಷ್ಟಾಂತೀಕೃತಃ । ಅಸ್ಮಾಭಿಸ್ತುಮಂದಮತೀನಾಮಪ್ಯುಪಕಾರಾಯ

ಲೌಕಿಕದೃಷ್ಟಾಂತ ಉಕ್ತಃ। ಅನೇನ ಸೂತ್ರೇಣ ಕೇಷಾಮೈಕ್ಯವಾಕ್ಯಾನಾಂಗತಿರಿತ್ಯತ ಆಹ- **ಅನ್ಯತ್ರೇತಿ** ॥ ಅನ್ಯತ್ರ ಪ್ರಾಣೋಹಮಸ್ಮೀತ್ಯಾದ್ಯುಕ್ತವಾಕ್ಯೇಭ್ಯೋಽನ್ಯತ್ರ ವೇದಭಾಗೇ ಪ್ರಲಂಬಿನಾಂ ವಿದ್ಯಮಾನಾನಾಮಿತ್ಯರ್ಥಃ। ಸಿಂಹಸ್ತ್ವಮಸೀತಿ ಲೌಕಿಕವಾಕ್ಯವತ್ಸರ್ವಂ ಬ್ರಹ್ಮೇತಿ ವೈದಿಕವಾಕ್ಯವಚ್ಚ ಗೌಣೀಂಗತಿಮಸೂತ್ರಯದಿತಿ ಯೋಜನಾ ॥ ೨೪೫ ॥

**ವಿವರಣೆ–** ಪ್ರಾಣೋಹಮಸ್ಮಿ ಎಂಬುದು ಋಗ್ವೇದಕ್ಕೆ ಸೇರಿದ ಐತರೇಯ ಉಪನಿಷತ್ತಿನ ವಾಕ್ಯ. ತತ್ತ್ವಮಸಿ ಎಂಬುದು ಸಾಮವೇದಕ್ಕೆ ಸೇರಿದ ಛಾಂದೋಗ್ಯೋಪನಿಷತ್ತಿನಲ್ಲಿರುವ ವಾಕ್ಯ. ಆದ್ದರಿಂದ ಬೇರೆ ಕಡೆಗಳಲ್ಲಿರುವ ಇಂತಹ ವಾಕ್ಯಗಳಿಗೂ ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ ಪ್ರಾಜ್ಞವತ್ ಎಂಬ ಸೂತ್ರದಿಂದ ಸೂತ್ರಕಾರರು ಗತಿಯನ್ನು ಕಲ್ಪನೆ ಮಾಡಿದ್ದಾರೆ. ತದ್ಗುಣಸಾರತ್ವಾತ್ ತು ಬ್ರಹ್ಮನ ಸತ್ಯತ್ವಾದಿಗುಣಗಳು ಜೀವನ ಮತ್ತು ಜಡದ ಶ್ರೇಷ್ಠ ಗುಣವಾಗಿರುವುದರಿಂದಲೇ, ತದ್ವ್ಯಪದೇಶಃ ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿಯಲ್ಲಿ ಜೀವಜಡಾತ್ಮಕಪ್ರಪಂಚಕ್ಕೆ ಬ್ರಹ್ಮತ್ವದ ಉಪದೇಶ ಎಂದು ಹೇಳಿ, ಪ್ರಾಜ್ಞವತ್ ಎಂದು ದೃಷ್ಟಾಂತವನ್ನು ಕೊಟ್ಟಿದ್ದಾರೆ. ಪ್ರಾಜ್ಞವತ್ ಎಂಬುದು ವೈದಿಕ ದೃಷ್ಟಾಂತ. ಪ್ರಾಜ್ಞನಾದ ಬ್ರಹ್ಮನ ಸಾರಭೂತವಾದ ಸತ್ಯತ್ವಾದಿ ಗುಣಗಳೇ ಜಗತ್ತಿನಲ್ಲಿರುವುದರಿಂದ ಸರ್ವಂ ಖಲ್ವಿದಂಬ್ರಹ್ಮ ಎಂದು ಹೇಗೆ ವೇದವು ಉಪದೇಶ ಮಾಡುತ್ತದೆಯೋ, ಅದರಂತೆಯೇ ಬ್ರಹ್ಮನಿಗೆ ಸದೃಶವಾದ ಚೇತನತ್ವಾದಿಗುಣಗಳು ಜೀವನಿಗೆ ಸಾರವಾದುದರಿಂದಲೇ ತತ್ತ್ವಮಸಿ ಮೊದಲಾದ ವಾಕ್ಯಗಳು ಗೌಣೀ ವೃತ್ತಿಯನ್ನು ಅವಲಂಬಿಸಿ ಪ್ರವೃತ್ತವಾಗುತ್ತವೆ. ಸಿಂಹೋ ದೇವದತ್ತಃ ಎಂಬುದು ಲೋಕದ ದೃಷ್ಟಾಂತ, ಸಿಂಹದ ಶೌರ್ಯಕ್ಕೆ ಸದೃಶವಾದ ಶೌರ್ಯವು ದೇವದತ್ತನಲ್ಲಿ ಇರುವುದರಿಂದ ದೇವದತ್ತನಲ್ಲಿ ಸಿಂಹತ್ವದ ವ್ಯಪದೇಶವಿದೆ. ಇದು ಲೋಕದ ಗೌಣೀವೃತ್ತಿಯ ಪ್ರಯೋಗಕ್ಕೆ ಒಂದು ಉದಾಹರಣೆ. ಅದರಂತೆ, ವೇದದಲ್ಲಿಯೂ ಗೌಣೀವೃತ್ತಿ ಅಥವಾ ಲಕ್ಷಣಾವೃತ್ತಿಯನ್ನು ಅವಲಂಬಿಸಿ ಐಕ್ಯವಾಕ್ಯಗಳಿಗೆ ಸೂತ್ರದ ವಿರೋಧ ಬರದಂತೆ ಅರ್ಥವನ್ನು ಮಾಡಬೇಕು ಎಂದು ಅಭಿಪ್ರಾಯ.

ಇದಂ ಪರಾಸ್ತ್ರಮಂತ್ರಾಣಾಮುಪಸಂಹಾರಕೌಶಲಂ ॥ ೨೪೬ ॥

**ಅರ್ಥ–** ಇದಂ= ಇದು, ಪರಾಸ್ತ್ರಮಂತ್ರಾಣಾಂ=ಪರವಾದಿಗಳ ಅಸ್ತ್ರ ಮತ್ತು ಮಂತ್ರಗಳನ್ನು, ಉಪಸಂಹಾರಕೌಶಲಂ= ಉಪಸಂಹಾರ ಮಾಡುವ ನಿಪುಣತೆ.

**ಅನುವಾದ–** ಇದು ಪರವಾದಿಗಳ ಅಸ್ತ್ರಮತ್ತು ಮಂತ್ರಗಳನ್ನು ಉಪಸಂಹಾರ ಮಾಡುವ ಕೌಶಲ.

**ಭಾವವಿಲಾಸಿನೀ–** ಏವಂ ತ್ರೇಧಾ ಐಕ್ಯವಾಕ್ಯಾನಾಂಗತಿಕಥನಸ್ಯ ಪ್ರಕೃತೋಪಯೋಗಂ ಸಾಹಿತ್ಯಮುದ್ರಯಾಽಹ – **ಇದಮಿತಿ** ॥ ಪರಸ್ಯ ಪ್ರತಿವಾದಿನಃ ಅಸ್ತ್ರಭೂತಮಂತ್ರಾಣಾಂ

ಪ್ರಾಗುಕ್ತತ್ರಿವಿಧೈಕ್ಯವಾಕ್ಯಾನಾಮಿತ್ಯರ್ಥಃ । ಏತೈರ್ವಾಕ್ಯೈಃಖಲು ಸ್ವಪ್ರತಿವಾದಿನಂ ಜೇಷ್ಯಾಮೀತಿ ಪರಸ್ಯಾಶಯಃ । ಅತೋಽಸ್ತ್ರಮಂತ್ರಾಣಾಮಿತ್ಯುಕ್ತಮ್ । ಉಪಸಂಹಾರಕೌಶಲಂ ಸ್ವಾನುಕೂಲೀ-ಕರಣಕೌಶಲಮ್ । ಯಥಾ ಪ್ರತ್ಯುಪಸಂಹಾರಮಜಾನತಾಽಶ್ವತ್ಥಾಮ್ನಾ ಪ್ರಯುಕ್ತ-ಬ್ರಹ್ಮಾಸ್ತ್ರಮಂತ್ರಸ್ಯಾರ್ಜುನೇನ ಪ್ರತ್ಯುಪಸಂಹಾರಂ ಕೃತ್ವಾ ಸ್ವವಶತಾ ಕೃತಾ ತಥೇತಿ ಸಾಹಿತ್ಯಮಪಿ ಧ್ವನಿತಮ್ ॥ ೨೪೬ ॥

**ವಿವರಣೆ–** ಸರ್ವಂಖಲ್ವಿದಂ ಬ್ರಹ್ಮ, ತತ್ತ್ವಮಸಿ ಮುಂತಾದ ವಾಕ್ಯಗಳನ್ನು ಅದ್ವೈತಿಗಳು ತಮ್ಮ ಪ್ರಬಲವಾದ ಅಸ್ತ್ರವೆಂದು ತಿಳಿದಿದ್ದಾರೆ. ಏಕೆಂದರೆ ಈ ವಾಕ್ಯಗಳನ್ನು ಉದಾಹರಿಸಿ ನಮ್ಮನ್ನು ಜಯಿಸುತ್ತೇವೆ ಎಂದು ಅವರಿಗೆ ಆಸೆ ಇದೆ. ಈ ವಾಕ್ಯಗಳಿಗೆ ಗೌಣೀ ವೃತ್ತಿಯನ್ನೋ, ಅಥವಾ ಲಕ್ಷಣಾವೃತ್ತಿಯನ್ನೋ ಹೇಳಿ ಗತಿಯನ್ನು ಕಲ್ಪನೆ ಮಾಡಿದರೆ ಈ ಅಸ್ತ್ರಗಳನ್ನೇ ನಾವು ಕಸಿದುಕೊಂಡಂತಾಗುತ್ತದೆ. ಸೂತ್ರಕಾರರು ಅವರಿಗೆ ಅಭಿಮತವಾದ ಅಂತಹ ಪ್ರಬಲವಾಕ್ಯಗಳಿಗೆ ಅರ್ಥಾಂತರವನ್ನು ಹೇಳಿ ಅವರ ಅಸ್ತ್ರದ ವೇಗವನ್ನು ನಾಶಮಾಡಿದ್ದಾರೆ. ಮಹಾಭಾರತದ ಕಥೆಯಲ್ಲಿ ಅಶ್ವತ್ಥಾಮರು ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ಅಶ್ವತ್ಥಾಮರು ಉಪಸಂಹಾರ ಮಾಡಲು ಸಾಧ್ಯವಿಲ್ಲದಿದ್ದಾಗ ಪ್ರತಿವೀರನಾದ ಅರ್ಜುನನೇ ಆ ಅಸ್ತ್ರವನ್ನು ಉಪಸಂಹಾರ ಮಾಡಿ ಅಶ್ವತ್ಥಾಮರನ್ನು ಅಸ್ತ್ರಹೀನರನ್ನಾಗಿ ಮಾಡಿದನು ಎಂಬ ಸಾಹಿತ್ಯ ಕಥೆಯೂ ಇಲ್ಲಿ ಧ್ವನಿತವಾಗುತ್ತದೆ.

ತದ್ಗತದ್ಗಶ್ರುತಿಶತಂ ಸಾಕ್ಷೀಕೃತ್ಯ ಸ ಸೂತ್ರಕೃತ್ ।
ಜೀವೇಶಭೇದಸದ್ರತ್ನಂ ಸೂತ್ರೇ ಸೂತ್ರೇಽಪ್ಯಸೂತ್ರಯತ್ ॥ ೨೪೭ ॥

**ಅರ್ಥ–** ಸ ಸೂತ್ರಕೃತ್= ಸೂತ್ರಕಾರರಾದ ಆ ವ್ಯಾಸರು, ತದ್ಗತದ್ಗಶ್ರುತಿಶತಂ= ಅಲ್ಲಲ್ಲಿ ಇರುವ ನೂರಾರು ಶ್ರುತಿಗಳನ್ನು, ಸಾಕ್ಷೀಕೃತ್ಯ= ಸಾಕ್ಷಿಯನ್ನಾಗಿ ಮಾಡಿ ಎಂದರೆ ಪ್ರಮಾಣವನ್ನಾಗಿ ಉದಾಹರಿಸಿ, ಸೂತ್ರೇ ಸೂತ್ರೇಽಪಿ= ಪ್ರತಿಯೊಂದು ಸೂತ್ರದಲ್ಲಿಯೂ ಕೂಡ, ಜೀವೇಶಭೇದಸದ್ರತ್ನಂ= ಜೀವೇಶಭೇದ ಎಂಬ ಶ್ರೇಷ್ಠವಾದ ರತ್ನವನ್ನು, ಅಸೂತ್ರಯತ್= ಸೂತ್ರಿಸಿದರು.

**ಅನುವಾದ–** ಸೂತ್ರಕಾರರಾದ ಆ ವ್ಯಾಸರು ಆಯಾ ಶಬ್ದಗಳನ್ನು ಸಮನ್ವಯ ಮಾಡುವಾಗ, ಆಯಾ ಪ್ರಕರಣದಲ್ಲಿರುವ ನೂರಾರು ಶ್ರುತಿಗಳನ್ನು ಪ್ರಮಾಣವಾಗಿ ಉದಾಹರಿಸಿ ಪ್ರತಿಯೊಂದು ಸೂತ್ರದಲ್ಲಿಯೂ ಜೀವೇಶ ಭೇದ ಎಂಬ ಸದ್ರತ್ನವನ್ನು ಸೂತ್ರಿಸಿದರು (ಸೇರಿಸಿದರು).

**ಭಾವವಿಲಾಸಿನೀ–** ಬ್ರಹ್ಮಸೂತ್ರೈರ್ಭೇದಂ ಸಾಧಯತಃ ಸೂತ್ರಕಾರಸ್ಯ ಭಾವಮಾಹ – **ತದ್ಗೇತಿ** ॥ ತೇಷು ತೇಷು ಸ್ವಸೂತ್ರವಿಷಯವಾಕ್ಯೇಷು ಗತಂ ತತ್ಪ್ರಕರಣಸ್ಥಂ ಭೇದಶ್ರುತಿಶತಂ ಸಾಕ್ಷೀಕೃತ್ಯ ಪ್ರಮಾಣೀಕೃತ್ಯ । ಸೂತ್ರೇಸೂತ್ರೇ । ಆನಂದಮಯಾಧಿಕರಣೇಸ್ವವಿಷಯಭೂತಾನಂದಮಯೇ

ಜೀವೈಕ್ಯಶಂಕಾಯಾಮಾನಂದಮಯ ಪ್ರತಿಪಾದಕವಾಕ್ಯ ಸಮೀಪಸ್ಥ ವಾಕ್ಯೈರೇವ ಭೇದಂ ಸಾಧಯಿತುಂ ತತ್ರೈಕಂ ಭೇದಸೂತ್ರಮ್ । ಏವಮನ್ಯೇಷ್ವಪ್ಯಧಿಕರಣೇಷ್ವಿತ್ಯರ್ಥಃ। ಭೇದವಿಷಯಕ-ಬಹುವಾಕ್ಯಪ್ರದರ್ಶನಾಯ ಬಹುಷ್ವಧಿಕರಣೇಷು ಭೇದಸೂತ್ರಾಣೀತಿ ಭಾವಃ ॥ ೨೪೭ ॥

**ವಿವರಣೆ–** ಸೂತ್ರಕಾರರು ಆನಂದಮಯಶಬ್ದವನ್ನು ಸಮನ್ವಯ ಮಾಡುವಾಗ ಆ ಪ್ರಕರಣದಲ್ಲಿರುವ ಭೇದಪರವಾದ ಶ್ರುತಿಗಳನ್ನು, ಅಂತಸ್ಥತ್ವಲಿಂಗವನ್ನು ಸಮನ್ವಯ ಮಾಡುವಾಗ ಅಲ್ಲಿರುವ ಭೇದಪರವಾದ ಶ್ರುತಿಗಳನ್ನು, ಹೀಗೆ ಎಲ್ಲಾ ಕಡೆಗಳಲ್ಲಿಯೂ ಅಲ್ಲಲ್ಲಿರುವ ಭೇದಪರವಾದ ಶ್ರುತಿವಾಕ್ಯಗಳನ್ನೇ ಉದಾಹರಿಸಿ ಸಮನ್ವಯವನ್ನು ಸಾಧಿಸಿದ್ದಾರೆ. ಹೇಗೆ ಮಾಲೆಯನ್ನು ಮಾಡುವವನು ಒಂದು ಸೂತ್ರದಲ್ಲಿ ಶ್ರೇಷ್ಠವಾದ ರತ್ನಮಣಿಗಳನ್ನು ಪೋಣಿಸುತ್ತಾನೆಯೋ, ಅದರಂತೆ ಬ್ರಹ್ಮಸೂತ್ರವೆಂಬ ಒಂದು ದಾರದಲ್ಲಿ ಪ್ರತಿಯೊಂದು ಕಡೆಯಲ್ಲಿಯೂ ಜೀವೇಶಭೇದವೆಂಬ ರತ್ನವನ್ನು ಪೋಣಿಸಿದ್ದಾರೆ. ಆದ್ದರಿಂದ ಬ್ರಹ್ಮಸೂತ್ರಗಳು ಮೊದಲಿನಿಂದ ಕೊನೆಯವರೆಗೆ ಜೀವೇಶಭೇದವನ್ನು ಕಂಠತಃ ಅಥವಾ ಅರ್ಥತಃ ಪ್ರತಿಪಾದನೆ ಮಾಡುತ್ತವೆ ಎಂದು ಅಭಿಪ್ರಾಯ.

ಇದಂ ಚ ಸ್ವಾಸ್ತ್ರಮಂತ್ರಾಣಾಮಭ್ಯಾಸೇನ ಪುನಃ ಪುನಃ ।
ಶಕ್ತೇರುತ್ತೇಜನಂ ತಸ್ಮಾತ್ ತಸ್ಯಾಗ್ರೇ ಕಸ್ಯ ಶೂರತಾ ॥ ೨೪೮ ॥

**ಅರ್ಥ–** ಇದಂ ಚ= ಇದೂ ಸಹ, ಸ್ವಾಸ್ತ್ರಮಂತ್ರಾಣಾಮ್= ತನ್ನ ಅಸ್ತ್ರ ಮತ್ತು ಮಂತ್ರಗಳನ್ನು, ಪುನಃ ಪುನಃ ಅಭ್ಯಾಸೇನ= ಪುನಃ ಪುನಃ ಪ್ರಯೋಗಿಸುವುದರಿಂದ, ಶಕ್ತೇಃ ಉತ್ತೇಜನಂ= ಸಾಮರ್ಥ್ಯದ ಅಭಿವರ್ಧನರೂಪವಾದುದು, ತಸ್ಮಾತ್= ಆದ್ದರಿಂದ, ತಸ್ಯಾಗ್ರೇ= ಸೂತ್ರಕಾರರ ಎದುರಿನಲ್ಲಿ, ಕಸ್ಯ=ಯಾವನಿಗೆ, ಶೂರತಾ= ಶೌರ್ಯವಿರುತ್ತದೆ?

**ಅನುವಾದ–** ಅನೇಕ ಅಧಿಕರಣಗಳಲ್ಲಿ ಭೇದವನ್ನು ಸಮರ್ಥನೆ ಮಾಡಿದ ಸೂತ್ರಕಾರರ ಈ ಕಾರ್ಯವು ತಮ್ಮ ಅಸ್ತ್ರ ಮತ್ತು ಮಂತ್ರಗಳನ್ನು ಪುನಃ ಪುನಃ ಉಪಯೋಗಿಸಿ ಅದರ ಶಕ್ತಿಯನ್ನು ಹೆಚ್ಚಿಸುವ ಕಾರ್ಯವೇ ಆಗಿದೆ. ಅಭ್ಯಾಸವೆಂದರೆ ಪುನಃ ಪುನಃ ಉಕ್ತಿ. ಪುನಃ ಪುನಃ ಅಭ್ಯಾಸವೆಂದರೆ ಅಂತಹ ಪುನಃ ಪುನಃ ಉಕ್ತಿಯು ಅನೇಕ ಕಡೆಗಳಲ್ಲಿದೆ ಎಂದು ಅರ್ಥ. ಆದ್ದರಿಂದ ತಮ್ಮ ಅಸ್ತ್ರಮಂತ್ರಗಳನ್ನು ವೇದವ್ಯಾಸರು ಅನೇಕ ಕಡೆ ಪ್ರಯೋಗಿಸಿ, ಅದು ತುಕ್ಕು ಹಿಡಿಯದೆ ಹರಿತವಾಗುವಂತೆ ಮಾಡಿದ್ದಾರೆ. ಇಂತಹ ಆಯುಧವನ್ನು ಹಿಡಿದ ರಣಾಗ್ರಣಿಯಾದ ವೇದವ್ಯಾಸರ ಎದುರಿನಲ್ಲಿ ಯಾವ ಶೂರನು ನಿಲ್ಲಲು ಸಾಧ್ಯ? ಎಂದರೆ ವೇದವ್ಯಾಸರು ಪ್ರತಿ ಸೂತ್ರದಲ್ಲಿಯೂ ಯಾವ ಭೇದವನ್ನು ಇಷ್ಟು ಪ್ರಬಲವಾಗಿ ಪ್ರತಿಪಾದಿಸಿದ್ದಾರೆಯೋ, ಅಂತಹ ಭೇದವನ್ನು ಯಾವ ವಾದಿಯೂ ನಿರಾಕರಣೆಯನ್ನು ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ಇದಂ ಬಹುಷ್ವಧಿಕರಣೇಷು ಭೇದಸಾಧನಮ್ । ಸ್ವಾಸ್ತ್ರಮಂತ್ರಾಣಾಂ ಸ್ವಾಭಿಮತಭೇದಸಾಧಕವಾಕ್ಯಾನಾಂ । ಅಭೇದವಾದಿನಾಂ ಮತ ನಿರಸನ ಸಮರ್ಥತ್ವಾದಸ್ತ್ರೇತ್ಯುಕ್ತಮ್ । ಏಕಪ್ರಕಾರಾಸಕೃದುಕ್ತಿರಭ್ಯಾಸಃ । ತಸ್ಯಾಪಿ ಬಾಹುಲ್ಯಾತ್ಪುನಃ ಪುನರಿತ್ಯುಕ್ತಮ್ । ಶಕ್ತೇರ್ಭೇದಪ್ರತಿಪಾದನ ಸಾಮರ್ಥ್ಯಸ್ಯ । ಉತ್ತೇಜನಮಭಿವರ್ಧನಮ್ । ತೇಷಾಂ ವಾಕ್ಯಾನಾಂ ಭೇದ ಏವ ತಾತ್ಪರ್ಯಪ್ರದರ್ಶನಮಿತಿ ಭಾವಃ । ತಸ್ಮಾತ್ಸತಾತ್ಪರ್ಯಭೇದವಚನೈರ್ಭೇದಸಾಧನಾತ್ । ತಸ್ಯ ಸೂತ್ರಕಾರಸ್ಯ । ಯಥಾಸಮ್ಯಗಭ್ಯಾಸೇನಸಾಧಿತಾಸ್ತ್ರಮಂತ್ರಸ್ಯಾಗ್ರೇ ಕೇನಾಪಿ ಸ್ಥಾತುಂ ನ ಶಕ್ಯತೇ ತಥಾಸೂತ್ರಕೃತೋಽಪ್ಯಗ್ರೇ ಕೇನಾಪಿ ಪ್ರತಿವಾದಿನಾಸ್ಥಾತುಂ ನ ಶಕ್ಯತ ಇತಿ ಧ್ವನಿಃ । ಮಾಯಾವಾದಿನೋ ಹೀಮಾನಿ ಸೂತ್ರಾಣಿ ಮಿಥ್ಯಾಭೂತ ಭೇದಪರಾಣೀತ್ಯಾಹುಃ । ಉಕ್ತವಿಧಯಾ ವೇದೇ ತಾತ್ಪರ್ಯವಿಷಯಸ್ಯ ಭೇದಸ್ಯ ಬ್ರಹ್ಮವತ್ತ್ವಪರಮಾರ್ಥತ್ವಾವಶ್ಯಂಭಾವಾತ್ತೇಷಾಮಪಿ ಮೂಕತೇತಿ ಭಾವಃ ॥ ೨೪೮ ॥

ಮುಕ್ತೋಪಸೃಪ್ಯತಾದ್ಯುಕ್ತ್ಯಾ ಯಸ್ಮಾದ್ ಭೇದಂ ಸಯುಕ್ತಿಕಂ ।
ಚಕ್ರೇ ತೇನ ನಿರಾಚಕ್ರೇ ಮಿಥ್ಯಾತ್ವಾಖ್ಯಶರಾಹತಿಂ ॥ ೨೪೯ ॥

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ಮುಕ್ತೋಪಸೃಪ್ಯತಾದ್ಯುಕ್ತ್ಯಾ= ಮುಕ್ತ ಪ್ರಾಪ್ಯತ್ವ ಮೊದಲಾದ ಉಕ್ತಿಯಿಂದ, ಭೇದಂ= ಭೇದವನ್ನು, ಸಯುಕ್ತಿಕಂ= ಯುಕ್ತಿ ಸಹಿತವಾದದ್ದನ್ನಾಗಿ, ಚಕ್ರೇ= ಮಾಡಿದರೋ, ತೇನ= ಆ ಕಾರಣದಿಂದ, ಮಿಥ್ಯಾತ್ವಾಖ್ಯಶರಾಹತಿಂ= ಮಿಥ್ಯಾತ್ವ ಎಂಬ ಬಾಣದ ಆಘಾತವನ್ನು, ನಿರಾಚಕ್ರೇ= ನಿರಾಕರಿಸಿದರು.

**ಅನುವಾದ–** ಯಾವ ಕಾರಣದಿಂದ ಮುಕ್ತಪ್ರಾಪ್ಯತ್ವಾದಿಧರ್ಮಗಳನ್ನು ಹೇಳಿ ಸಯುಕ್ತಿಕವಾಗಿ ಭೇದವನ್ನು ಸ್ಥಾಪಿಸಿದರೋ, ಆ ಕಾರಣದಿಂದ ಸೂತ್ರಕಾರರು ಮಿಥ್ಯಾತ್ವವೆಂಬ ಬಾಣದ ಆಘಾತವನ್ನು ನಿರಾಕರಣೆ ಮಾಡಿದ್ದಾರೆ.

**ಭಾವವಿಲಾಸಿನೀ–** ಅಸ್ಮಿನ್ನೇವಾರ್ಥೇ ಪ್ರಾಗುಕ್ತಯುಕ್ತಿಂ ಚ ಸ್ಮಾರಯನ್ಸಾಹಿತ್ಯೇನ ಧ್ವನಯತಿ – **ಮುಕ್ತೋಪಸೃಪ್ಯತೇತಿ** ॥ ಸಃ ವ್ಯಾಸಃ। ತೇನಮುಕ್ತಿಗತ್ವೇನ ಮಿಥ್ಯಾತ್ವಾಖ್ಯಶರಃ ಮಿಥ್ಯಾತ್ವಮಿತ್ಯಾಖ್ಯಾ ಯಸ್ಯ ಸಃ ಚಾಸೌ ಶರಶ್ಚ । ತೇನಾಹತಿಂ ನಿರಾಚಕ್ರೇ । ಪರಂ ಪ್ರತಿಸ್ವಪ್ರಯುಕ್ತಭೇದಾಖ್ಯಶರಸ್ಯ ತೇನ ಪ್ರಯುಕ್ತಮಿಥ್ಯಾತ್ವಾಖ್ಯಶರಘಾತೋ ಯಥಾ ನ ಭವತಿ ತಥಾ ಕೃತವಾನಿತ್ಯರ್ಥಃ । ಯಥಾಬಹುದೂರಪಾತೀ ಧಾನುಷ್ಕಶಿರೋಮಣೇಃ ಶರಃ ಅಲ್ಪದೂರಪಾತಿನಾ ದುರ್ಬಲಪ್ರತಿಭಟಶರೇರಸ್ಪ್ರಷ್ಟುಮಪಿ ನ ಶಕ್ಯತೇ । ತಥಾಮುಕ್ತೇರಧಸ್ತಾದೇವಪಾತಿನಾ ಪರಪ್ರಯುಕ್ತಮಿಥ್ಯಾತ್ವಶರೇಣಾಪಿ ಮುಕ್ತಿಗೋಽಯಂ ಭೇದಃಸ್ಪ್ರಷ್ಟುಮಪಿ ನ ಶಕ್ಯೋಽಭೂದಿತಿ ಸಾಹಿತ್ಯಮುದ್ರಾಪಿ ದ್ರಷ್ಟವ್ಯಾ ॥ ೨೪೯ ॥

**ವಿವರಣೆ–** ಹಿಂದೆ ಹೇಳಿದ ಅರ್ಥವನ್ನೇ ಇನ್ನೊಮ್ಮೆ ಸ್ಮರಣೆ ಮಾಡುತ್ತಾರೆ. ಮುಕ್ತ ಪ್ರಾಪ್ಯತ್ವ ಹೇತುವನ್ನು ಹೇಳಿ ಮೋಕ್ಷದಲ್ಲಿಯೂ ಭೇದವು ಇದೆ ಎಂದು ಸಮರ್ಥನೆ ಮಾಡಿದ್ದಾರೆ. ಮೋಕ್ಷವು ಅವಿದ್ಯಾನಿವೃತ್ತಿಯ ನಂತರ ಇರುವ ಅವಸ್ಥೆ. ಆದ್ದರಿಂದ ಆ ಅವಸ್ಥೆಯಲ್ಲಿ ಅವಿದ್ಯಾಕಾರ್ಯವು ಯಾವುದೂ ಇರಲು ಸಾಧ್ಯವಿಲ್ಲ. ಆದರೂ ಭೇದವಿದೆ ಎಂದು ಹೇಳಿದರೆ, ಅದು ಅವಿದ್ಯಾಕಾರ್ಯವಲ್ಲವೆಂದು ಸಿದ್ಧವಾಗುತ್ತದೆ. ಅವಿದ್ಯಾಕಾರ್ಯವಲ್ಲವಾದ್ದರಿಂದ ಅದಕ್ಕೆ ಮಿಥ್ಯಾತ್ವವಿಲ್ಲ. ಆದ್ದರಿಂದ ಭೇದವನ್ನು ಹೇಳುವುದರಲ್ಲಷ್ಟೇ ತಾತ್ಪರ್ಯವಲ್ಲ. ಏಕೆಂದರೆ ಮಾಯಾವಾದಿಗಳು ಭೇದವನ್ನು ಒಪ್ಪಿ ಅದು ಮಿಥ್ಯಾ ಎಂದು ಹೇಳುತ್ತಾರೆ. ಆದರೆ ವ್ಯಾಸರು ಮುಕ್ತಿ ಕಾಲದಲ್ಲಿಯೂ ಭೇದವನ್ನು ಸಮರ್ಥನೆ ಮಾಡಿ, ಅದು ಸತ್ಯವೆಂದೇ ಸಮರ್ಥನೆ ಮಾಡಿರುವುದರಿಂದ ಭೇದಮಿಥ್ಯಾತ್ವವಾದವು ನಿರಾಕೃತವಾಯಿತು ಎಂದು ಅಭಿಪ್ರಾಯ.

**ಮೋಕ್ಷಾರ್ಥಬ್ರಹ್ಮಮೀಮಾಂಸಾಮಾರಭ್ಯ ಸ ಪದೇ ಪದೇ ।**
**ಯತೋ ನಿರಣಯದ್ ಭೇದಮತಸ್ತತ್ವಂ ಮಹದ್ಧಿ ತತ್ ॥ ೨೫೦ ॥**

**ಅರ್ಥ–** ಸಃ= ಆ ವ್ಯಾಸರು ಮೋಕ್ಷಾರ್ಥಬ್ರಹ್ಮವಿದ್ಯಾಮಾರಭ್ಯ= ಮೋಕ್ಷ ಫಲವುಳ್ಳ ಬ್ರಹ್ಮವಿದ್ಯೆಯನ್ನು ಆರಂಭಿಸಿ ಪದೇ ಪದೇ= ಹೆಜ್ಜೆ ಹೆಜ್ಜೆಗೂ (ಪ್ರತಿಯೊಂದು ಸೂತ್ರದಲ್ಲಿಯೂ), ಭೇದಂ= ಭೇದವನ್ನು, ಯತಃ= ಯಾವ ಕಾರಣದಿಂದ, ನಿರಣಯತ್= ಸಾಧಿಸಿದರೋ, ಅತಃ= ಆ ಕಾರಣದಿಂದ, ತತ್= ಆ ಭೇದಕತ್ವವು ಮಹತ್ ತತ್ವಂ ಹಿ= ಶ್ರೇಷ್ಠವಾದ ತತ್ವವಷ್ಟೆ?

**ಅನುವಾದ–** ಯಾವ ಕಾರಣದಿಂದ ಮೋಕ್ಷಫಲಕವಾದ ಬ್ರಹ್ಮವಿದ್ಯೆಯನ್ನು ಆರಂಭಿಸಿ ಆ ವ್ಯಾಸರು ಪ್ರತಿಸೂತ್ರದಲ್ಲಿಯೂ ಭೇದವನ್ನು ಸಾಧಿಸಿದರೋ ಆ ಕಾರಣದಿಂದ ಭೇದವು ಶ್ರೇಷ್ಠವಾದ ತತ್ತ್ವವಾಗಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಭೇದಮಿಥ್ಯಾತ್ವಂ ನಾತ್ರ ವಕ್ತುಂ ಶಕ್ಯಮಿತ್ಯಾಹ – **ಮೋಕ್ಷಾರ್ಥಮಿತಿ** ॥ ಆರಭ್ಯ ಅಥಾತೋಬ್ರಹ್ಮಜಿಜ್ಞಾಸೇತಿ ಪ್ರಾಥಮಿಕಸೂತ್ರೇ ಪ್ರತಿಜ್ಞಾಯ । ಸಃ ಸೂತ್ರಕಾರಃ । ನಿರಣಯತ್ ನಿರ್ಣೀತವಾನ್ । ತತೋ ಮೋಕ್ಷಫಲಕತ್ವಾತ್ತದ್ಭೇದಾಖ್ಯಂ ಪ್ರಮೇಯಮ್ ॥ ೨೫೦ ॥

**ಸೂಚನಾತ್ ಖಲು ತತ್ ಸೂತ್ರಂ ತಾದೃಶೈಃ ಸೂತ್ರಸಂಚಯೈಃ ।**
**ಇತ್ಥಮಾಘೋಷಿತೋ ಯೋಽರ್ಥಸ್ತತ್ ತತ್ವಂ ತತ್ವವಾದಿನಾಂ ॥ ೨೫೧ ॥**

**ಅರ್ಥ–** ತತ್ = ಆ ಬ್ರಹ್ಮಸೂತ್ರವು, ಸೂಚನಾತ್ = ವೇದಾರ್ಥಗಳನ್ನು ಸೂಚನೆ ಮಾಡುವುದರಿಂದ, ಸೂತ್ರಂ = ಸೂತ್ರವು, ಅಸ್ತಿ ಖಲು = ಆಗಿದೆಯಷ್ಟೇ, ತಾದೃಶೈಃ = ಹೀಗೆ

ವೇದಾರ್ಥಗಳನ್ನು ಸೂಚನೆ ಮಾಡುವ, ಸೂತ್ರಸಂಚಯೈಃ = ಸೂತ್ರಗಳ ಸಮುದಾಯಗಳಿಂದ, ಇತ್ಥಂ = ಹೀಗೆ, ಯಃ ಅರ್ಥಃ = ಯಾವ ವಿಷಯವು, ಆಘೋಷಿತಃ = ಘೋಷಿಸಲ್ಪಟ್ಟಿದೆಯೋ, ತತ್= ಅದು, ತತ್ವವಾದಿನಾಂ = ತತ್ವವಾದಿಗಳ, ತತ್ವಂ = ಮತವು.

**ಅನುವಾದ–** ಸೂಚನೆಯನ್ನು ಮಾಡುವ ಕಾರಣದಿಂದ ಸೂತ್ರವೆನಿಸಿಕೊಳ್ಳುತ್ತದೆ. ಹೀಗೆ ಆ ಸೂತ್ರಸಮುದಾಯದಿಂದ ಯಾವ ಅರ್ಥವು ಆಘೋಷಿತವಾಗುತ್ತದೆಯೋ ಅದು ತತ್ವವಾದಿಗಳು ಅಂಗೀಕರಿಸುವ ನಿಜವಾದ ತತ್ವ.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರತಿ ॥ **ಸೂಚನಾದಿತಿ** ॥ ಇತ್ಥಂ ಪೂರ್ವೋಕ್ತ-ಪ್ರಕಾರೇಣ ॥ ೨೫೧ ॥

**ವಿವರಣೆ–** ಹಿಂದೆ ಹೇಳಿದ ಅರ್ಥವನ್ನು ಇಲ್ಲಿ ಉಪಸಂಹಾರ ಮಾಡುತ್ತಾರೆ. ಸೂತ್ರದಿಂದ ಸೂಚಿತವಾದದ್ದೂ ಸಹ ಗ್ರಾಹ್ಯವಾಗುತ್ತದೆ. ಹೀಗಿರುವಾಗ ಸೂತ್ರವು ಕಂಠದಿಂದ ಹೇಳಿದ ವಿಷಯವು ಇನ್ನೂ ಗ್ರಾಹ್ಯವಾಗುತ್ತದೆ. ಅನೇಕ ಸೂತ್ರಗಳು ಕಂಠತಃ ಹೇಳಿದ ವಿಷಯವು ಗ್ರಾಹ್ಯತಮವಾಗುತ್ತದೆ. ಆದ್ದರಿಂದ ಸೂತ್ರಸಮುದಾಯಗಳಲ್ಲಿ ಘೋಷಣೆಯನ್ನು ಮಾಡಿದ ಭೇದವು ಪರಮತತ್ವ ಎಂದು ತಿಳಿಯಬೇಕು.

**ಗುಣೈರ್ಲಿಂಗಾಭಿಧೈರ್ಯಸ್ಮಾತ್ ಪ್ರತಿಸೂತ್ರಂ ವಿಪಕ್ಷಿಣಃ ।**
**ಪ್ರತ್ಯಾಕ್ಷಿಪತ್ ಸ ಭಗವಾಂಸ್ತದ್ ಬ್ರಹ್ಮಗುಣಬೃಂಹಿತಂ ॥ ೨೫೨ ॥**

**ಅರ್ಥ–** ಯಸ್ಮಾತ್ = ಯಾವ ಕಾರಣದಿಂದ, ಸಃ ಭಗವಾನ್ = ಆ ಭಗವಾನ್ ವೇದವ್ಯಾಸರು, ಲಿಂಗಾಭಿಧೈಃ= ಲಿಂಗವೆಂದು ಹೆಸರುಳ್ಳ, ಗುಣೈಃ = ಪರಮಾತ್ಮನ ಗುಣಗಳಿಂದ, ಪ್ರತಿಸೂತ್ರಂ = ಪ್ರತಿಯೊಂದು ಸೂತ್ರದಲ್ಲಿಯೂ ಕೂಡ, ವಿಪಕ್ಷಿಣಃ = ಪ್ರತಿಪಕ್ಷದವರನ್ನು, ಪ್ರತ್ಯಾಕ್ಷಿಪತ್ = ನಿರಾಕರಣೆ ಮಾಡುತ್ತಾರೋ, ತತ್ = ಆಕಾರಣದಿಂದ, ಬ್ರಹ್ಮ = ಪರಬ್ರಹ್ಮನು, ಗುಣಬೃಂಹಿತಂ = ಗುಣಪೂರ್ಣನೆಂದು, ಸಿಧ್ಯತಿ= ಸಿದ್ಧವಾಗುತ್ತದೆ.

**ಅನುವಾದ–** ಪೂಜ್ಯರಾದ ವೇದವ್ಯಾಸರು ಪ್ರತಿಯೊಂದು ಸೂತ್ರದಲ್ಲಿಯೂ ಪ್ರಾಪ್ತವಾದ ಪೂರ್ವಪಕ್ಷವನ್ನು ಲಿಂಗಗಳೆಂದು ಕರೆಸಿಕೊಳ್ಳುವ ಗುಣಗಳಿಂದ ನಿರಾಕರಣೆ ಮಾಡಿದ ಕಾರಣದಿಂದ ಬ್ರಹ್ಮನು ಗುಣಪೂರ್ಣನೆಂದು ಸಿದ್ಧನಾಗುತ್ತಾನೆ.

**ಭಾವವಿಲಾಸಿನೀ–** ಪೂರ್ವಂ ಜನ್ಮಾದಿಸೂತ್ರೇ ಲಕ್ಷಣರೂಪಗುಣಸಿದ್ಧಿರಿತ್ಯುಕ್ತಮ್ । ಇದಾನೀಂ ಸಮನ್ವಯಾಧ್ಯಾಯಸಕಲಸೂತ್ರೈರಪಿ ಭಗವತೋಗುಣಸಿದ್ಧಿಪ್ರಕಾರಂ ಸವಿಸ್ತರಮಾಹ–**ಗುಣೈ-ರಿತಿ** । ಲಿಂಗಾಭಿಧೈರ್ಗುಣೈರಿತಿ ಸಂಬಂಧಃ । ಪ್ರತಿಸೂತ್ರಂ ಸೂತ್ರೇಸೂತ್ರೇ ಪ್ರತ್ಯಾಕ್ಷಿಪತ್ ನಿರಾಕೃತವಾನ್ । ಸಃ ವೇದವ್ಯಾಸಃ । ಅನ್ಯತ್ರ ಪ್ರಸಿದ್ಧಾನಾಮಾಕಾಶಾದಿಶಬ್ದಾನಾಂ

ಪರೋವರೀಯಸ್ತ್ವಾದಿಲಿಂಗೈಃ ಖಲು ಭಗವತಿ ಸಮನ್ವಯಃ ಪ್ರತಿಪಾದ್ಯತೇ । ಲಿಂಗಂ ನಾಮಾಸಾಧಾರಣೋಧರ್ಮಃ । ಲಿಂಗೈರಿತ್ಯುಪಲಕ್ಷಣಮ್ । ಅಂತಸ್ತದ್ಧರ್ಮೋಪದೇಶಾತ್ । ಅಂತರ್ಯಾಮ್ಯಧಿದೈವಾದಿಷುತದ್ಧರ್ಮವ್ಯಪದೇಶಾತ್ । ಅದೃಶ್ಯತ್ವಾದಿಗುಣಕೋಧರ್ಮೋಕ್ತೇಃ । ಸರ್ವಧರ್ಮೋಪಪತ್ತೇಶ್ಚೇತ್ಯಾದಿಸೂತ್ರೇಷು ಸ್ಪಷ್ಟಂ ಭಗವದ್ಧರ್ಮಾಣಾಮೇವ ಸಾಧನತಯಾ ಸಾಧ್ಯತಯಾ ಚ ನಿರ್ದೇಶಃ ಕ್ರಿಯತೇ । ತತ್ತಸ್ಮಾತ್ । ಗುಣಪೂರಿತಮಿತ್ಯನುಕ್ತ್ವಾ ಗುಣಬೃಂಹಿತಮಿತಿ ಸಾಧ್ಯನಿರ್ದೇಶಂ ಕುರ್ವತಾ ಸೌತ್ರಬ್ರಹ್ಮಶಬ್ದೇನಾಪಿ ಗುಣಸಿದ್ಧಿರಿತಿ ಸೂಚಿತಮ್ ॥ ೨೫೨ ॥

**ವಿವರಣೆ—** ಲಿಂಗಗಳೆಂದರೆ ಅಸಾಧಾರಣ ಧರ್ಮಗಳು. ಅವು ಗುಣಗಳೇ. ಬ್ರಹ್ಮಸೂತ್ರಗಳಲ್ಲಿ ಆಕಾಶಾದಿ ಅಧಿಕರಣದಲ್ಲಿ ಪ್ರಾಪ್ತವಾದ ಪೂರ್ವಪಕ್ಷವನ್ನು ಪರೋವರೀಯಸ್ತ್ವಾದಿ ಲಿಂಗದಿಂದ ನಿರಾಕರಿಸಿ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡಿದ್ದಾರೆ. 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣದಲ್ಲಿ ಸಮುದ್ರಶಾಯಿತ್ವ ಮತ್ತು ಬ್ರಹ್ಮಾಂಡವೀರ್ಯತ್ವರೂಪವಾದ ಧರ್ಮದಿಂದ ಅಂತಃಸ್ಥತ್ವರೂಪವಾದ ಗುಣವನ್ನು ಸಮರ್ಥನೆ ಮಾಡಿದ್ದಾರೆ. 'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬ ಸೂತ್ರದಲ್ಲಿ ಅವಿದಿತತ್ವ ಮತ್ತು ಸರ್ವಾಂತರತ್ವರೂಪವಾದ ಧರ್ಮಗಳಿಂದ ಬ್ರಹ್ಮನಿಗೆ ಅಂತರ್ಯಾಮಿತ್ವರೂಪವಾದ ಧರ್ಮವನ್ನು ಸಮರ್ಥನೆ ಮಾಡಿದ್ದಾರೆ. 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂಬ ಸೂತ್ರದಲ್ಲಿ ಪರವಿದ್ಯಾವಿಷಯತ್ವರೂಪವಾದ ಧರ್ಮದಿಂದ ಬ್ರಹ್ಮನಿಗೆ ಅದೃಶ್ಯತ್ವರೂಪವಾದ ಗುಣವನ್ನು ಸಮರ್ಥನೆ ಮಾಡಿದ್ದಾರೆ. 'ಸರ್ವಧರ್ಮೋಪಪತ್ತೇಶ್ಚ' ಎಂಬ ಸೂತ್ರದಲ್ಲಿ ಸರ್ವಗುಣೋಪಪತ್ತಿ ಶ್ರುತಿಯಿಂದ ಬ್ರಹ್ಮನಿಗೆ ನಿರ್ದೋಷತ್ವವನ್ನೂ ಮತ್ತು ಗುಣಪೂರ್ಣತ್ವವನ್ನೂ ಸಮರ್ಥನೆ ಮಾಡಿದ್ದಾರೆ. ಹೀಗೆ ಈ ಸೂತ್ರಗಳಲ್ಲಿ ಭಗವಂತನ ಗುಣರೂಪವಾದ ಧರ್ಮಗಳನ್ನೇ ಸಾಧನವನ್ನಾಗಿಯೂ, ಸಾಧ್ಯವನ್ನಾಗಿಯೂ ನಿರ್ದೇಶ ಮಾಡಿದ್ದಾರೆ. ಅವೆಲ್ಲವೂ ಸದ್‌ಹೇತುಗಳಾದ್ದರಿಂದ ಎಲ್ಲ ಹೇತುಗುಣವೂ, ಪಕ್ಷಧರ್ಮತೆಯೂ ಮತ್ತು ಎಲ್ಲಾ ಪಕ್ಷಗಳಲ್ಲಿಯೂ ಸಾಧ್ಯಸಿದ್ಧಿಯೂ ಇದೆ. ಆ ಕಾರಣದಿಂದ ಬ್ರಹ್ಮನು ಗುಣಪೂರ್ಣನೆಂದು ಸಿದ್ಧನಾಗುತ್ತಾನೆ.

**ಕಿಂ ಚ ಶಾಣಶಿತೈರ್ಬಾಣೈಃ ಪ್ರತ್ಯರ್ಥಿಮುಖಮುದ್ರಣಂ ।**
**ಕುರ್ವನ್ ನಾಮಂಸ್ತ ಬಾಣಾಗ್ರನ್ಯೂನತಾಂ ಸ ರಣಾಗ್ರಣೀಃ ॥ ೨೫೩ ॥**

**ಅರ್ಥ—** ಕಿಂಚ = ಅದಲ್ಲದೇ, ಶಾಣಶಿತೈಃ = ಸಾಣೆಹಿಡಿದ, ಬಾಣೈಃ = ಭಗವಂತನ ಗುಣಗಳೆಂಬ ಬಾಣಗಳಿಂದ, ಪ್ರತ್ಯರ್ಥಿಮುಖಮುದ್ರಣಂ = ಪ್ರತಿಪಕ್ಷಿಯ ಮುಖದ ಮೇಲೆ, ಮುದ್ರಣಂ = ಮುದ್ರಣವನ್ನು, ಕುರ್ವನ್ = ಮಾಡುತ್ತಿರುವ, ರಣಾಗ್ರಣೀಃ = ಮಹಾ ಪರಾಕ್ರಮಿಯಾದ, ಸಃ = ಆ ವೇದವ್ಯಾಸರು, ಬಾಣಾಗ್ರನ್ಯೂನತಾಂ = ತಾನು

ಪ್ರಯೋಗಮಾಡುವ ಭಗವಂತನ ಗುಣಧರ್ಮಗಳಿಂದ, ಅಗ್ರ = ತುದಿ ಭಾಗವು, ನ್ಯೂನತಾಂ = ದೋಷವನ್ನು (ತಾನು ಪ್ರಯೋಗ ಮಾಡುವ ಹೇತುಗಳಿಗೆ ಉತ್ತರಕಾಲೀನ ಬಾಧ್ಯತ್ವವನ್ನು, ನಾಮಂಸ್ತ = ಪರಿಗಣಿಸಲಿಲ್ಲ.

**ಅನುವಾದ–** ಅದೂ ಅಲ್ಲದೆ, ಸಾಣೆಯನ್ನು ಹಿಡಿದ ತಮ್ಮ ಬಾಣಗಳಿಂದ ಪ್ರತಿಪಕ್ಷಿಗಳ ಮುಖವನ್ನು ಮುದ್ರಿಸಲು ಹೊರಟ ರಣಾಗ್ರಣಿಗಳಾದ ವೇದವ್ಯಾಸರು ತಮ್ಮ ಬಾಣಗಳಿಗೆ ಅಗ್ರಭಾಗದ ನ್ಯೂನತೆಯನ್ನು ಎಂದೂ ಪರಿಗಣಿಸಲಿಲ್ಲ.

**ಭಾವವಿಲಾಸಿನೀ–** ನ ಕೇವಲಂ ಗುಣಸಿದ್ಧಿಃ । ಗುಣಾನಾಂ ಸತ್ಯತಾಪಿಸಿದ್ಧೇತಿ ಸಾಹಿತ್ಯಮುದ್ರಯಾऽऽಹ – **ಕಿಂಚೇತಿ** ॥ ಬಾಣೈಃ ಉಕ್ತರೀತ್ಯಾಭಗವದ್ಧರ್ಮಾಖ್ಯಬಾಣೈಃ । ರಣಾಗ್ರಣೀಃ ಸಃವ್ಯಾಸಃ । ಬಾಣಾಗ್ರನ್ಯೂನತಾಂ ಶರಾಗ್ರನ್ಯೂನತಾಮಿವ ಸ್ವೇನಹೇತುತಯಾ ಪ್ರಯುಕ್ತಧರ್ಮಾಣಾಮಪಿ ಅಗ್ರೇ ಉಪರಿ ಜ್ಞಾನೋತ್ತರಕಾಲಮಿತ್ಯರ್ಥಃ । ನ್ಯೂನತಾಂ ಬಾಧ್ಯತಾಮ್ । ಅನ್ಯತ್ರ ಧಾರಾನ್ಯೂನತಾಂ ನಾಮಂಸ್ತ ನಾಮನ್ಯತ । ರಣಾಗ್ರಣೀರಿತ್ಯುಭಯತ್ರ ಸಮಮ್ ॥ ೨೫೩ ॥

ಮೋಕ್ಷೇऽಪಿಯೋಗಿ ನಿಶಿತ ಜ್ಞಾನವಿಶೇಷಯುತ । ಸರ್ವೋತ್ತಮತ್ವರೂಢ

**ವಿವರಣೆ–** ಈ ಸೂತ್ರದಲ್ಲಿ ಕೇವಲ ಗುಣಗಳ ಸಿದ್ಧಿ ಮಾತ್ರವಲ್ಲ, ಗುಣಗಳ ಸತ್ಯತೆಯೂ ಸಿದ್ಧವಾಗುತ್ತದೆಂದು ಸಾಹಿತ್ಯಮುದ್ರೆಯಿಂದ ಹೇಳುತ್ತಾರೆ. ಯಾವ ಧರ್ಮಗಳನ್ನು ಹೇತುತ್ವೇನ ನಿರ್ದೇಶ ಮಾಡುತ್ತಾರೆಯೋ ಅವುಗಳಿಗೆ ಅಗ್ರನ್ಯೂನತಾ ಎಂದರೆ ಉತ್ತರಕಾಲದಲ್ಲಿ ಬಾಧ್ಯತ್ವ. ಅದನ್ನು ವೇದವ್ಯಾಸರು ಎಂದೂ ಅಂಗೀಕರಿಸಲಿಲ್ಲ.

ಮೊಂಡಾಗಿರುವ ಅಗ್ರಭಾಗವುಳ್ಳ ಬಾಣಗಳಿಂದ ಹೇಗೆ ಲಕ್ಷ್ಯವನ್ನು ಭೇದಿಸಲು ಸಾಧ್ಯವಿಲ್ಲವೋ ಹಾಗೆ ಪಶ್ಚಾತ್ತನ ಕಾಲದಲ್ಲಿ ಬಾಧ್ಯವಾಗುವ ಸಾಧನಗಳಿಂದ ಸಾಧ್ಯವನ್ನು ಸಾಧಿಸುವುದು ಅಶಕ್ಯವಾದ ಕಾರಣ ವೇದವ್ಯಾಸದೇವರು ನಿರ್ದೇಶ ಮಾಡಿರುವ ಸಾಧನಗಳು ಅಬಾಧ್ಯವೆಂದೇ ಸಿದ್ಧವಾಗುವುದರಿಂದ ಗುಣಗಳ ಸತ್ಯತೆಯು ಸಿದ್ಧವಾಗುತ್ತವೆ.

**ಅತಃ ಸದಾಪ್ಯಬಾಧ್ಯತ್ವಂ ಗುಣಾನಾಂ ವ್ಯಾಸಶಾಸನಾತ್ ।**
**ಸಾಧ್ಯಂ ಸ್ವಯಮಸಿದ್ಧೇನ ಕಃ ಸಾಧಯತಿ ಪಂಡಿತಃ ॥ ೨೫೪ ॥**

**ಅರ್ಥ–** ಅತಃ = ಆದ್ದರಿಂದ, ವ್ಯಾಸಶಾಸನಾತ್ = ವೇದವ್ಯಾಸರು ತಮ್ಮ ಸೂತ್ರಗಳಲ್ಲಿ ಎಡೆಮಾಡಿರುವುದರಿಂದ, ಗುಣಾನಾಂ = ಭಗವಂತನ ಗುಣಗಳಿಗೆ, ಸದಾಪಿ = ಎಂದೂ ಕೂಡ, ಅಬಾಧ್ಯತ್ವಂ = ಬಾಧ್ಯತ್ವವು ಇರುವುದಿಲ್ಲ. ಅಸಿದ್ಧೇನ = ಪಕ್ಷದಲ್ಲಿ ಅಸಿದ್ಧವಾದ ಹೇತುವಿನಿಂದ, ಸಾಧ್ಯಂ = ಸಾಧ್ಯವನ್ನು, ಕಃ = ಯಾವ, ಪಂಡಿತಃ = ಜ್ಞಾನಿಯು (ತಿಳಿದವನು), ಸ್ವಯಂ = ತಾನಾಗಿಯೇ, ಸಾಧಯತಿ = ಸಾಧನೆ ಮಾಡುತ್ತಾನೆ.

**ಅನುವಾದ–** ಆದ್ದರಿಂದ ವೇದವ್ಯಾಸರ ಶಾಸನದಂತೆ ಗುಣಗಳು ಸರ್ವದಾ ಅಬಾಧ್ಯವಾಗಿವೆ. ಸ್ವತಃ ಅಸಿದ್ಧವಾದ ಹೇತುವಿನಿಂದ ಯಾವ ಪಂಡಿತನು ಸಾಧ್ಯವನ್ನು ಸಾಧನೆ ಮಾಡುತ್ತಾನೆ.

**ಭಾವವಿಲಾಸಿನೀ–** ಬಾಣಾಗ್ರನ್ಯೂನತಾಯಾಃ ಕ್ವಾಪ್ಯದೃಷ್ಟತ್ವಾತ್ । ಯುಕ್ತ್ಯಂತರಮಪ್ಯಾಹ – ಸಾಧ್ಯಮಿತಿ ॥ ಸ್ವರೂಪಾಸಿದ್ಧೇರ್ಹೇತುದೂಷಣತ್ವಾತ್ । ಬಾಧಸ್ಯಚಾಸಿದ್ಧಿಪರ್ಯಾಯತ್ವಾದಿತಿ ಭಾವಃ ॥ ೨೫೪ ॥

**ವಿವರಣೆ–** ಉತ್ತರಕಾಲದಲ್ಲಿ ಸಾಧನವು ಬಾಧ್ಯವಾಗುವುದಾದರೆ, ಸಾಧನಸ್ವರೂಪವೇ ಇಲ್ಲವೆಂದಾಗುತ್ತದೆ. ಆಗ ಹೇತುವಿಗೆ ಅಸಿದ್ಧಿರೂಪವಾದ ದೋಷವು ಬರುತ್ತದೆ. ಅಸಿದ್ಧವಾದ ಹೇತುವಿನಿಂದ ಯಾವ ಸಾಧ್ಯವನ್ನೂ ಸಾಧಿಸಲಾಗುವುದಿಲ್ಲ. ವೇದವ್ಯಾಸರು ಪ್ರಯೋಗವನ್ನು ಮಾಡಿದ ಹೇತುಗಳಿಗೆ ಅಸಿದ್ಧಿದೋಷಗಳಿಲ್ಲದಿರುವುದರಿಂದ ಅವು ಅಬಾಧ್ಯ. ಆದ್ದರಿಂದ ಸತ್ಯವೆಂದೇ ಸಿದ್ಧವಾಗುತ್ತವೆ.

ಯಸ್ಮಾದಾರೋಪಿತೋ ಹೇತುಃ ಸಾಧ್ಯಮಾರೋಪಯೇತ್ ಪರಂ ।
ಯಕ್ಷಾನುರೂಪೋಬಲಿರಿತ್ಯುಕ್ತಂ ವಾಕ್ಯಮನುಸ್ಮರ ॥ ೨೫೫ ॥

**ಅರ್ಥ–** ಯಸ್ಮಾತ್ = ಯಾವ ಕಾರಣದಿಂದ, ಆರೋಪಿತಃ = ಕಲ್ಪಿತವಾದ, ಹೇತುಃ = ಹೇತುವು, ಪರಂ = ಮತ್ತೊಂದು, ಸಾಧ್ಯಂ = ಸಾಧ್ಯವನ್ನು, ಆರೋಪಯೇತ್ = ಕಲ್ಪಿಸುತ್ತದೆ. (ಕಲ್ಪಿತವಾದ ಹೇತುವು ಕಲ್ಪಿತವಾದ ಸಾಧ್ಯವನ್ನು ಊಹೆ ಮಾಡಲಿಕ್ಕೆ ಮಾತ್ರವೇ ಸಾಧ್ಯವಾಗುತ್ತದೆ). ಯಕ್ಷಾನುರೂಪಃ = ಯಕ್ಷ = ಯಕ್ಷನ ಆಹಾರಕ್ಕೆ ಅನುರೂಪಃ = ಸಮಾನವಾದ, ಬಲಿಃ= ಆಹಾರವು, ಇತಿ ಉಕ್ತಂ = ಹೀಗೆ ಹೇಳಲ್ಪಟ್ಟ ವಾಕ್ಯಂ = ವಾಕ್ಯವನ್ನು, ಅನುಸ್ಮರ = ನೆನಪು ಮಾಡಿಕೋ.

**ಅನುವಾದ–** ಆರೋಪಿತ ಹೇತುವು ಆರೋಪಿತ ಸಾಧ್ಯವನ್ನೇ ಸಾಧಿಸಿಕೊಡುತ್ತದೆ. 'ಯಕ್ಷಾನುರೂಪೋ ಬಲಿಃ' ಎಂಬ ವಾಕ್ಯವನ್ನು ಸ್ಮರಣೆ ಮಾಡಿಕೊ.

(ಇಲ್ಲಿ ಸತ್ಯತ್ವವನ್ನು ಸಾಧಿಸಲು ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. 'ಯಕ್ಷಾನುರೂಪೋ ಬಲಿಃ' ಎಂಬ ಗಾದೆಯಿದೆ. ಯಕ್ಷನಿಗೆ ಅನುಗುಣವಾಗಿ ಬಲಿ ಇರಬೇಕು ಎಂದು ಅದರ ಅರ್ಥ. ಯಕ್ಷ ದೊಡ್ಡದಾದರೆ ಬಹಳ ಬಲಿಯನ್ನೂ, ಅಲ್ಪವಾದರೆ ಅಲ್ಪ ಬಲಿಯನ್ನೂ ಕೊಡಬೇಕು ಎಂದು ಅದರ ಅರ್ಥ. ಹಾಗೆ ನಮಗೆ ಸತ್ಯವಾದ ಸಾಧ್ಯಧರ್ಮವು ಸಿದ್ಧವಾಗಬೇಕಾದರೆ, ಸತ್ಯವಾದ ಹೇತುವೇ ಅಪೇಕ್ಷಿತವಾಗುತ್ತದೆ. ಮಿಥ್ಯಾಭೂತವಾದ ಹೇತುವಿನಿಂದ ಮಿಥ್ಯಾಭೂತವಾದ ಸಾಧ್ಯವು ಮಾತ್ರ ಸಿದ್ಧವಾದೀತು. ಆದರೆ ಬ್ರಹ್ಮನಲ್ಲಿ ಅಂತಃಸ್ಥತ್ವಾದಿಧರ್ಮಗಳನ್ನು ಸಾಧಿಸಲು ಹೊರಟ ವೇದವ್ಯಾಸರು ಅವುಗಳ ಸತ್ಯತ್ವವನ್ನು ಉದ್ದೇಶವಾಗಿ

ಇಟ್ಟುಕೊಂಡಿದ್ದಾರೆ. ಆದ್ದರಿಂದ ಸಾಧ್ಯಧರ್ಮಗಳೂ, ಸಾಧನಧರ್ಮಗಳೂ ಸತ್ಯವೆಂದೇ ಸಿದ್ಧವಾಗುತ್ತವೆ. ಮಿಥ್ಯಾಧರ್ಮಗಳನ್ನು ಹೇಳಿದರೆ ಅವು ಮೋಕ್ಷೋಪಯೋಗಿ ಅಲ್ಲದ ಕಾರಣದಿಂದಲೂ ವೇದವ್ಯಾಸರು ಹೇಳಿದ ಧರ್ಮಗಳು ಸತ್ಯವೆಂದೇ ಸಿದ್ಧವಾಗುತ್ತವೆ. ವೇದವ್ಯಾಸರು ಶಬ್ದಗಳಿಂದ ಸಿದ್ಧಾಂತವನ್ನು ಮಾಡುತ್ತಾ, ಶಬ್ದಗಳಿಗೆ ಬ್ರಹ್ಮನಲ್ಲಿ ಮುಖ್ಯವೃತ್ತಿ ಇದೆ ಎಂದು ತಿಳಿಸಿದ್ದಾರೆ. ಇಲ್ಲದಿದ್ದರೆ, ಹೇತುವಿಗೆ ಅನೈಕಾಂತ್ಯವು ಬರುತ್ತದೆ. ಆ ಕಾರಣದಿಂದ ಬ್ರಹ್ಮನಲ್ಲಿ ಯಾವ ಶಬ್ದಕ್ಕೂ ಲಕ್ಷಣಾವೃತ್ತಿ ಇಲ್ಲ).

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿಯುಕ್ತಿಮಾಹ – **ಯಸ್ಮಾದಿತಿ** ॥ ಬಾಷ್ಪಾರೋಪಿತ-ಧೂಮೇನಾರೋಪಿತವಹ್ನೇರೇವಸಿದ್ಧಿದರ್ಶನಾತ್ ಬಾಧ್ಯಧರ್ಮೇಣಸಾಧಿತಃ ಸಮನ್ವಯೋಽಪಿ ಬಾಧಿತಃ ಸ್ಯಾತ್ । ತತಃ ಮೋಕ್ಷಾನುಪಯೋಗಿತ್ವಾತ್ ಮೀಮಾಂಸಾವೈಯರ್ಥ್ಯಮಿತಿ ಭಾವಃ ॥ ೨೫೫ ॥

ಶಬ್ದಾನಾಂ ಮುಖ್ಯವೃತ್ತಿಂ ಚ ಶಬ್ದೈಃ ಸಿದ್ಧಾಂತಯನ್ ಜಗೌ ।
ನ ಚೇದ್ಧೇತೋರನೈಕಾಂತ್ಯಂ ತದ್ ಬ್ರಹ್ಮಣಿ ನ ಲಕ್ಷಣಾ ॥ ೨೫೬ ॥

**ಅರ್ಥ–** ಸೂತ್ರಕೃತ್ = ಸೂತ್ರಕಾರರಾದ ವೇದವ್ಯಾಸರು, ಶಬ್ದೈಃ = ಭಗವನ್ನಿಷ್ಠ ಶಬ್ದಗಳಿಂದ, ಸಿದ್ಧಾಂತಯನ್ = ಸಿದ್ಧಾಂತವನ್ನು ಪ್ರದರ್ಶನ ಮಾಡುತ್ತಾ, ಬ್ರಹ್ಮಣಿ = ಪರಬ್ರಹ್ಮನಲ್ಲಿ, ಶಬ್ದಾನಾಂ = ಶಬ್ದಗಳಿಗೆ, ಮುಖ್ಯವೃತ್ತಿಂ = ಮುಖ್ಯವೃತ್ತಿಯನ್ನು, ಜಗೌ = ಪ್ರತಿಪಾದಿಸಿದ್ದಾರೆ. ನಚೇತ್ = ಹೀಗಲ್ಲದಿದ್ದರೆ, ಹೇತೋಃ = ಶಬ್ದಗಳೆಂಬ ಹೇತುವಿಗೆ ಅನೈಕಾಂತ್ಯಂ = ವ್ಯಭಿಚಾರದೋಷವು, ಸ್ಯಾತ್ = ಬರುತ್ತಿತ್ತು. ತತ್ = ಆದ್ದರಿಂದ, ಕಸ್ಯ ಅಪಿ = ಯಾವುದೇ, ಶಬ್ದಸ್ಯ = ಶಬ್ದಕ್ಕೆ, ಬ್ರಹ್ಮಣಿ = ಬ್ರಹ್ಮನಲ್ಲಿ, ಲಕ್ಷಣಾ= ಲಕ್ಷಣಾವೃತ್ತಿಯು, ನ ಅಸ್ತಿ = ಇಲ್ಲ.

**ಅನುವಾದ–** ಸೂತ್ರಕಾರರಾದ ವೇದವ್ಯಾಸರು ಭಗವನ್ನಿಷ್ಠಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯ ಎಂದು ಸಿದ್ಧಾಂತಮಾಡಿರುತ್ತಾರೆ. ಶಬ್ದಗಳಿಗೆ ಬ್ರಹ್ಮನಲ್ಲಿ ಮುಖ್ಯವೃತ್ತಿಯನ್ನೇ ಅಂಗೀಕರಿಸಿದ್ದಾರೆ. ಅಮುಖ್ಯವೃತ್ತಿಯನ್ನು ಅಂಗೀಕರಿಸಿದರೆ ಈ ಅಮುಖ್ಯವೃತ್ತಿಶಬ್ದಗಳೆಂಬ ಹೇತುವು ಜಗತ್ತಿನಲ್ಲಿಯೂ ಇರುವುದರಿಂದ ವ್ಯಭಿಚಾರವು ಬರುತ್ತದೆ. ಆದ್ದರಿಂದ ಯಾವ ಶಬ್ದಗಳಿಗೂ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯು ಇಲ್ಲ.

**ಭಾವವಿಲಾಸಿನೀ–** ಇದಾನೀಂ ಬ್ರಹ್ಮಣೋಽಶಬ್ದತ್ವಮಪಿ ಬ್ರಹ್ಮಸೂತ್ರಮರ್ಯಾದಯೈವನಿರಸ್ತ-ಮಿತ್ಯಾಹ – **ಶಬ್ದಾನಾಮಪಿ** ॥ ಶಬ್ದೈಃ ಸಿದ್ಧಾಂತಯನ್ ಗೌಣಶ್ಚೇನ್ನಾತ್ಮಶಬ್ದಾತ್ । ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ । ಶಬ್ದಾದೇವ ಪ್ರಮಿತ ಇತ್ಯಾದಿ ಸೂತ್ರೇಷು ಭಗವನ್ನಿಷ್ಠ-

ಶಬ್ದೈಸ್ಸಿದ್ಧಾಂತಯನ್ ಭಗವದಿತರೇಷಾಂ ಪ್ರತಿಪಾದ್ಯತ್ವನಿರಾಸಪೂರ್ವಕಂ ಭಗವತ ಏವ ತತ್ತದ್ವಾಕ್ಯಪ್ರತಿಪಾದ್ಯತ್ವಂ ಸಾಧಯನ್ ಶಬ್ದಾನಾಂ ಮುಖ್ಯವೃತ್ತಿಂ ಚ ಭಗವತಿ ಜಗಾವಿತಿ ಸಂಬಂಧಃ । ನ ಚೇದ್ಭಗವತಿಮುಖ್ಯವೃತ್ತಿರ್ನಚೇತ್ । ಹೇತೋಸ್ಸಾಧಕತ್ವೇನ ಪ್ರಯುಕ್ತ-ಶಬ್ದರೂಪಹೇತೋಃ । ಅನೈಕಾಂತ್ಯಂ ವಿಪಕ್ಷೇ ಜಗತ್ಯಪಿವಿದ್ಯಮಾನತ್ವಾತ್ । ತಥಾ ಚ ಬ್ರಹ್ಮೈವಾತ್ರ ಪ್ರತಿಪಾದ್ಯಮಿತಿ ಸಾಧ್ಯಾಸಿದ್ಧಿರಿತಿ ಭಾವಃ । ತತ್ತಸ್ಮಾದ್ಬ್ರಹ್ಮಣ ಏವ ಪ್ರತಿಪಾದ್ಯತ್ವ ಸಾಧಕಶಬ್ದಸ್ಯಾಪಿ ಬ್ರಹ್ಮಣ್ಯೇವ ವರ್ತಮಾನತ್ವಾವಶ್ಯಂ ಭಾವಾತ್ ಅನ್ಯತ್ರವೃತ್ತೇರಯೋಗಾಚ್ಚ ಬ್ರಹ್ಮಣಿ ನಲಕ್ಷಣಾ । ಲಕ್ಷಣೇತ್ಯುಪಲಕ್ಷಣಮ್ । ಗೌಣೀವೃತ್ತಿರಪಿನೇತ್ಯರ್ಥಃ । ಅನ್ಯಾಪ್ರತಿಪಾದಕಶಬ್ದೇನ ಯೋಽರ್ಥೋ ನಿಯಮೇನ ಬೋಧ್ಯತೇ ತಸ್ಯೈವ ಮುಖ್ಯಾರ್ಥತ್ವಸ್ಯ ಘಟಾದೌದರ್ಶನಾದಿತಿ ಭಾವಃ ॥ ೨೫೬ ॥

**ವಿವರಣೆ–** ಇನ್ನು ಬ್ರಹ್ಮನಿಗೆ ಶಾಬ್ದತ್ವವಿಲ್ಲವೆಂಬ ವಿಷಯವನ್ನೂ ಸಹ ಸೂತ್ರಮರ್ಯಾದೆಯಿಂದಲೇ ನಿರಾಕರಿಸುತ್ತಾರೆ. 'ಗೌಣಶ್ಚೇನ್ನಾತ್ಮಶಬ್ದಾತ್, ದ್ಯುಭ್ವಾದ್ಯಾಯತನಂ ಸ್ವಶಬ್ದಾತ್, ಶಬ್ದಾದೇವ ಪ್ರಮಿತಃ' ಮೊದಲಾದ ಸೂತ್ರಗಳಲ್ಲಿ ಆತ್ಮಶಬ್ದದಿಂದ ಹಾಗೂ ವಾಮನ ಶಬ್ದದಿಂದ ಸಾಧ್ಯವನ್ನು ಸಾಧನೆ ಮಾಡಿದ್ದಾರೆ. ಇಂತಹ ಭಗವನ್ನಿಷ್ಠ ಶಬ್ದಗಳಿಂದ ತತ್ತದ್ವಾಕ್ಯಗಳಿಂದ ಬ್ರಹ್ಮನು ಪ್ರತಿಪಾದ್ಯ ಎಂದು ಸಮರ್ಥನೆ ಮಾಡುವ ಸೂತ್ರಕಾರರು ಆ ಶಬ್ದಗಳಿಗೆ ಬ್ರಹ್ಮನಲ್ಲಿ ಮುಖ್ಯವೃತ್ತಿಯನ್ನೇ ಅಂಗೀಕರಿಸಿದ್ದಾರೆ. ಇಲ್ಲದಿದ್ದರೆ, ಆ ಶಬ್ದಗಳು ಅಮುಖ್ಯವೃತ್ತಿಯಿಂದ ಜಗತ್ತಿನಲ್ಲಿಯೂ ಇರುವುದರಿಂದ ಆ ವಾಕ್ಯದಲ್ಲಿ ಬ್ರಹ್ಮನೇ ಪ್ರತಿಪಾದ್ಯ ಎಂಬ ಅರ್ಥವನ್ನು ಸಾಧಿಸಿಕೊಡುವುದಿಲ್ಲ. ಆದ್ದರಿಂದ ಬ್ರಹ್ಮನೇ ಪ್ರತಿಪಾದ್ಯ ಎಂದು ಸಮರ್ಥಿಸುವ ಶಬ್ದವೂ ಕೂಡ ಬ್ರಹ್ಮನಲ್ಲಿಯೇ ಇರಬೇಕಾಗುತ್ತದೆ. ಅನ್ಯತ್ರ ಇರಲು ಸಾಧ್ಯವಿಲ್ಲ. ಆದ್ದರಿಂದ ಅಂತಹ ಯಾವ ಶಬ್ದಗಳಿಗೂ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯಾಗಲಿ ಅಥವಾ ಗೌಣೀವೃತ್ತಿಯಾಗಲಿ ಇಲ್ಲವೆಂದು ತಿಳಿಯಬೇಕು. ಬೇರೆ ಅರ್ಥವನ್ನು ಪ್ರತಿಪಾದನೆ ಮಾಡದೆ, ಒಂದು ಶಬ್ದವು ನಿಯಮೇನ ಯಾವ ಅರ್ಥವನ್ನು ಪ್ರತಿಪಾದನೆ ಮಾಡುತ್ತದೆಯೋ ಆ ವಸ್ತುವಿನಲ್ಲೇ ಆ ಶಬ್ದದ ಮುಖ್ಯವೃತ್ತಿ ಎಂಬುದು ಘಟಾದಿಶಬ್ದಗಳಲ್ಲಿ ಅನುಭವಸಿದ್ಧವಾಗಿದೆಯಷ್ಟೆ?

ಮುಖ್ಯಾನ್ವಯಿ ನ ಚೇತ್ ಕಸ್ಮಾತ್ಸಮನ್ವಯಮಸೂತ್ರಯತ್ ।
ಬ್ರಹ್ಮಸಂಬಂಧತಃ ಶಕ್ರೇ ಪ್ರಾಣನಾಮ ಕುತೋ ವದೇತ್ ।
ವೇದೈಶ್ಚ ಸರ್ವೈರ್ವೇದ್ಯೋಽಹಮೇವೇತ್ಯಾಹ ಕುತಃ ಪ್ರಭುಃ ॥ ೨೫೭ ॥

**ಅರ್ಥ–** ಬ್ರಹ್ಮ = ಪರಬ್ರಹ್ಮನು, ಮುಖ್ಯಾನ್ವಯಿ = ಶಬ್ದಗಳ ಮುಖ್ಯವೃತ್ತಿಗೆ ಯೋಗ್ಯನು, ನ ಚೇತ್ = ಅಲ್ಲದಿದ್ದರೆ, ಸೂತ್ರಕಾರಃ = ಸೂತ್ರಕಾರರು, ಕಸ್ಮಾತ್ = ಯಾವ ಕಾರಣದಿಂದ, ಸಮನ್ವಯಂ = ಎಲ್ಲಶಬ್ದಗಳ ಸಮನ್ವಯವನ್ನು, ಅಸೂತ್ರಯತ್ = ಸೂತ್ರದಲ್ಲಿ ಹೇಳಿದರು. (ತತ್ತುಸಮನ್ವಾಯತ್ ಎಂದು ಏಕೆ ಹೇಳಿದರು?). ಅಪಿ ಚ = ಮತ್ತೂ ಕೂಡ, ಶಕ್ರೇ =

[illegible]

ಇಂದ್ರನಲ್ಲಿ, ಬ್ರಹ್ಮಸಂಬಂಧತಃ = ಪರಬ್ರಹ್ಮನ ಸಂಬಂಧವಿರುವುದರಿಂದ, ಪ್ರಾಣನಾಮ = ಪ್ರಾಣಶಬ್ದವನ್ನು ಕುತಃ = ಯಾವಕಾರಣದಿಂದ, ವದೇತ್ = ಹೇಳಿಯಾರು. ಚ = ಮತ್ತು ಪ್ರಭುಃ = ಸರ್ವಸಮರ್ಥನಾದ ಆ ವೇದವ್ಯಾಸರು, ಸರ್ವೈಃ = ಎಲ್ಲ, ವೇದೈಃ ಚ = ವೇದಗಳಿಂದಲೂ ಕೂಡ, ಅಹಂ ಏವ = ನಾನೇ, ವೇದ್ಯಃ = ಜ್ಞೇಯನಾಗಿದ್ದೇನೆ, ಇತಿ = ಈ ರೀತಿಯಾಗಿ, ಕುತಃ = ಹೇಗೆ, ಆಹ= ಹೇಳುತ್ತಾರೆ?

**ಅನುವಾದ–** ಬ್ರಹ್ಮನಲ್ಲಿ ಶಬ್ದಗಳಿಗೆ ಮುಖ್ಯವೃತ್ತಿ ಇಲ್ಲದಿದ್ದರೆ, ಸೂತ್ರಕಾರರು ಸಮನ್ವಯಾತ್ ಎಂದು ಏಕೆ ಹೇಳಿದರು. ಇಂದ್ರನಲ್ಲಿ ಪ್ರಾಣ ಶಬ್ದವನ್ನು ಬ್ರಹ್ಮಸಂಬಂಧದಿಂದ ಏಕೆ ನಿರ್ವಾಹಮಾಡಿದರು. ಎಲ್ಲ ವೇದಗಳಿಂದಲೂ ನಾನೇ ಪ್ರತಿಪಾದ್ಯನಾದವನು ಎಂದು ಪ್ರಭುವು ಏಕೆ ಹೇಳಿದ್ದಾನೆ.

**ಭಾವವಿಲಾಸಿನೀ–** ಬ್ರಹ್ಮಣಃ ಶಬ್ದಮುಖ್ಯಾರ್ಥತ್ವೇಶ್ರೌತಯುಕ್ತ್ಯಂತರಂ ಚಾಹ – **ಮುಖ್ಯೇತಿ** ॥ ಮುಖ್ಯಾನ್ವಯಿ ಮುಖ್ಯತಃ ಶಬ್ದಾನ್ವಯವತ್ । ನಚೇತ್ ಬ್ರಹ್ಮ ನ ಭವತಿ ಚೇತ್ । ತತ್ತು ಸಮನ್ವಯಾದಿತಿ ಸೂತ್ರೇ ಸಮನ್ವಯಂ ಕಸ್ಮಾದಸೂತ್ರಯತ್ । ಸಮ್ಯಗನ್ವಯೋ ಹಿ ಸಮನ್ವಯಃ । ಲ್ಯಬ್ಲೋಪನಿಮಿತ್ತಯಾ ಪಂಚಮ್ಯಾ ಸಮನ್ವಯಂ ಪ್ರತಿಪಾದ್ಯತದ್ ಬ್ರಹ್ಮೈವಶಾಸ್ತ್ರಯೋನೀತ್ಯಪಿ ಸೂತ್ರಾರ್ಥಸ್ಯ ವಿದ್ಯಮಾನತ್ವಾತ್ ಸಕಲಶಬ್ದಾನಾಂ ಸಮ್ಯಗನ್ವಯೋಪಿ ಸೂತ್ರಕೃತೋಭಿಪ್ರೇತ ಇತಿ ಭಾವಃ। ನಿಮಿತ್ತಾಂತರಂ ಚಾಹ – **ಬ್ರಹ್ಮೇತಿ** ॥ ಭಗವತಃ ಸರ್ವಶಬ್ದಮುಖ್ಯಾರ್ಥತ್ವೇಗೀತಾ-ವಾಕ್ಯಮಪ್ಯರ್ಥತಸ್ಸ್ಮಾರಯತಿ ॥ **ವೇದೈರಿತಿ** ॥ ಅನೇನ ವೇದೈಶ್ಚಸರ್ವೈರಹಮೇವ ವೇದ್ಯ ಇತಿ ವಾಕ್ಯಂ ಸೂಚಯತಿ । ಅನ್ಯಸ್ಯ ವೇದ್ಯತ್ವಾಭಾವೇ ಸತಿ ಸ್ವಸ್ಯೈವ ವೇದ್ಯತ್ವಂ ಹಿ ಏವ ಶಬ್ದಾರ್ಥಃ । ಅತಃ ಸಕಲವೇದಮುಖ್ಯಾರ್ಥತ್ವಂ ಭಗವತಿ ಕಥಂ ನ ಸಿದ್ಧ್ಯೇದಿತಿ ಭಾವಃ ॥ ೨೫೭ ॥

**ವಿವರಣೆ–** ಬ್ರಹ್ಮನೇ ಶಬ್ದಗಳ ಮುಖ್ಯಾರ್ಥ ಎಂಬ ವಿಷಯದಲ್ಲಿ ಶ್ರುತಿಸಮ್ಮತವಾದ ಯುಕ್ತ್ಯಂತರವನ್ನು ಇಲ್ಲಿ ಹೇಳುತ್ತಾರೆ. ತತ್ತುಸಮನ್ವಯಾತ್ ಎಂಬ ಸೂತ್ರದಲ್ಲಿ ಸೂತ್ರಕಾರರು ಸಮನ್ವಯವನ್ನು ಹೇಳಿದ್ದಾರೆ. ಸಮನ್ವಯ ಎಂದರೆ ಸಮ್ಯಗನ್ವಯ, ಎಂದರೆ ಚೆನ್ನಾದ ವೃತ್ತಿ. ಮುಖ್ಯವೃತ್ತಿ ಇದ್ದರೆ ಮಾತ್ರ ಅಂತಹ ಸಮನ್ವಯ ಕೂಡುತ್ತದೆಯೇ ಹೊರತು ಇಲ್ಲದಿದ್ದರೆ ಕೂಡುವುದಿಲ್ಲ. ಸಮನ್ವಯಾತ್ ಎಂಬ ಶಬ್ದವನ್ನು ಹಿಂದಿನ ಸೂತ್ರದಲ್ಲಿರುವ ಶಾಸ್ತ್ರಯೋನಿ ಶಬ್ದದಿಂದಲೂ ಅನ್ವಯವನ್ನು ಮಾಡಬೇಕು. 'ಸಮನ್ವಯಾತ್ ಶಾಸ್ತ್ರಯೋನಿ' ಎಂದು ಅನ್ವಯ. ಸಮ್ಯಗನ್ವಯವಿರುವುದರಿಂದ ಬ್ರಹ್ಮನೇ ಸಕಲಶಾಸ್ತ್ರ ಪ್ರತಿಪಾದ್ಯ ಎಂದು ಸೂತ್ರಾರ್ಥವು ಸೂತ್ರಕಾರರಿಗೆ ಅಭಿಪ್ರೇತವಾಗಿರುವುದರಿಂದ ಬ್ರಹ್ಮನೇ ಸರ್ವಶಬ್ದಗಳ ಮುಖ್ಯಾನ್ವಯವುಳ್ಳವನು ಎಂದು ಸೂತ್ರಕಾರರಿಗೆ ಸಮ್ಮತವಾಗಿದೆ ಎಂದು ತಿಳಿಯುತ್ತದೆ.

ಪ್ರಾಣಶಬ್ದವು ಬ್ರಹ್ಮನಲ್ಲಿ ಪ್ರಸಿದ್ಧವಾಗಿರುವುದರಿಂದ ಇಂದ್ರನಿಗೆ ಪ್ರಾಣಶಬ್ದವು ಹೇಗೆ ಉಪಪನ್ನವಾಗುತ್ತದೆ ಎಂಬ ಶಂಕೆಗೆ ಸೂತ್ರಕಾರರು ಇಂದ್ರನಲ್ಲಿ ಪ್ರಾಣಶಬ್ದ ಮುಖ್ಯವಾಚ್ಯನಾದ ಬ್ರಹ್ಮನ ಸನ್ನಿಧಾನಾತಿಶಯವು ಇರುವುದರಿಂದ ಇಂದ್ರನಲ್ಲಿ

ಪ್ರಾಣಶಬ್ದವು ಉಪಪನ್ನವಾಗುತ್ತದೆ ಎಂದು ಹೇಳಿ ಪ್ರಾಣಶಬ್ದಕ್ಕೆ ನಾರಾಯಣನಲ್ಲಿಯೇ ಮುಖ್ಯವೃತ್ತಿಯನ್ನು ಸ್ವೀಕರಿಸಿದ್ದಾರೆ. 'ವೇದೇಶ್ಚ ಸರ್ವೈಃ ಅಹಮೇವ ವೇದ್ಯಃ' ಎಂಬುದು ಗೀತೆಯಲ್ಲಿ ಕೃಷ್ಣನ ಮಾತು. ಎಲ್ಲ ವೇದಗಳಿಂದಲೂ ನಾನೇ ಪ್ರತಿಪಾದ್ಯನಾದವನು ಎಂದು ಹೇಳುವಾಗ ನಾನೇ ಎಂಬಲ್ಲಿ ಅವಧಾರಣವಿದೆ. ನಾನು ಪ್ರತಿಪಾದ್ಯನಾಗುತ್ತೇನೆ, ಇನ್ನೊಂದು ವಸ್ತು ಪ್ರತಿಪಾದ್ಯನಾಗುವುದಿಲ್ಲ ಎಂದು ಅವಧಾರಣದ ಅರ್ಥ. ಆದ್ದರಿಂದಲೂ ಎಲ್ಲಾ ವೇದಗಳ ಮುಖ್ಯಾರ್ಥವು ಬ್ರಹ್ಮನೇ ಎಂದು ಸಿದ್ಧವಾಗುತ್ತದೆ.

**ತತ್ತನ್ನಾಮೋಕ್ತಧರ್ಮಾಣಾಂ ಯದಿ ಬ್ರಹ್ಮಣಿ ನಾನ್ವಯಃ ।**
**ರೂಪಮಾತ್ರಸ್ಯೈಕನಾಮ್ನಾ ಸಿದ್ಧೇಃ ಶಾಸ್ತ್ರಮನರ್ಥಕಂ ॥ ೨೫೮ ॥**

**ಅರ್ಥ–** ತತ್ತನ್ನಾಮೋಕ್ತಧರ್ಮಾಣಾಂ = ವೇದಾದಿಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಿಭಿನ್ನ ಹೆಸರುಗಳಿಂದ, ಉಕ್ತ = ಹೇಳಲ್ಪಟ್ಟ, ಧರ್ಮಾಣಾಂ = ಗುಣಗಳಿಗೆ, ಯದಿ = ಒಂದು ಪಕ್ಷದಲ್ಲಿ, ಬ್ರಹ್ಮಣಿ = ಪರಬ್ರಹ್ಮನಲ್ಲಿ, ಅನ್ವಯಃ = ಅನ್ವಯವು, ನ ಅಸ್ತಿ = ಇಲ್ಲವೆಂದಾದರೆ, ತರ್ಹಿ = ಆ ಪಕ್ಷದಲ್ಲಿ, ರೂಪಮಾತ್ರಸ್ಯ = ಕೇವಲ ಬ್ರಹ್ಮನ ಸ್ವರೂಪವು, ಏಕನಾಮ್ನಾ = ಒಂದೇ ಶಬ್ದದಿಂದ, ಸಿದ್ಧೇಃ = ಸಿದ್ಧವಾಗುವುದರಿಂದ, ಶಾಸ್ತ್ರಮ್ = ವೇದಾದಿ ಶಾಸ್ತ್ರವು, ಅನರ್ಥವು = ವ್ಯರ್ಥವಾದೀತು.

**ಅನುವಾದ–** ಆಯಾ ನಾಮಗಳಿಂದ ಹೇಳಲ್ಪಟ್ಟ ಧರ್ಮಗಳಿಗೆ ಬ್ರಹ್ಮನಲ್ಲಿ ಅನ್ವಯವು ಇಲ್ಲದಿದ್ದರೆ ಬ್ರಹ್ಮಸ್ವರೂಪವು ಒಂದೇ ನಾಮದಿಂದ ಸಿದ್ಧವಾಗುವುದರಿಂದ ಶಾಸ್ತ್ರವು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಬ್ರಹ್ಮಣಿಧರ್ಮಸಮನ್ವಯಾನಂಗೀಕಾರೇ ಬಾಧಕಂ ಚಾಹ – **ತತ್ತದಿತಿ** ॥ ರೂಪಮಾತ್ರಸ್ಯ ಬ್ರಹ್ಮಸ್ವರೂಪಮಾತ್ರಸ್ಯ । ಏಕನಾಮ್ನಾ ಪ್ರಥಮಾಧಿಕರಣೋಕ್ತಾನಂದಮಯ-ನಾಮ್ನಾ । ಪೂರ್ಣಾನಂದತ್ವ ಸರ್ವಂತಾತ್ಪ್ರಕಾಶಮಾನತ್ವಾದಿನಾಮಾರ್ಥಭೂತಗುಣ-ಸಮನ್ವಯಾಭಾವೇ ಲಕ್ಷಣಯಾ ಬ್ರಹ್ಮಸ್ವರೂಪನಿರೂಪಣಸ್ಯ ಚೈಕೇನೈವ ನಾಮ್ನಾ ಕರ್ತುಂ ಶಕ್ಯತ್ವಾದನ್ಯಚ್ಛಾಸ್ತ್ರಮನರ್ಥಕಮಿತಿ ಭಾವಃ ॥ ೨೫೮ ॥

**ವಿವರಣೆ–** ಬ್ರಹ್ಮನಲ್ಲಿ ಧರ್ಮಗಳ ಸಮನ್ವಯವನ್ನು ಅಂಗೀಕಾರ ಮಾಡದಿದ್ದರೆ, ಇಲ್ಲಿ ಬಾಧಕವನ್ನು ಹೇಳುತ್ತಾರೆ. ವೇದದಲ್ಲಿ ಬ್ರಹ್ಮನ ಅನೇಕಾನೇಕ ಧರ್ಮಗಳು ಹೇಳಲ್ಪಟ್ಟಿವೆ. ಅಂತಹ ಪೂರ್ಣಾನಂದತ್ವ, ಸರ್ವಶಃ ಪ್ರಕಾಶಮಾನತ್ವ, ಮೊದಲಾದ ಧರ್ಮಗಳೆಲ್ಲವೂ ಬ್ರಹ್ಮನಲ್ಲಿ ಇವೆ ಎಂದೇ ಅಂಗೀಕರಿಸಬೇಕು. ಹಾಗೆ ಆ ಧರ್ಮಗಳನ್ನು ಹೇಳುವ ಪದಗಳಿಗೆ ಬ್ರಹ್ಮಸ್ವರೂಪವನ್ನು ತಿಳಿಸುವುದರಲ್ಲಿ ಮಾತ್ರ ತಾತ್ಪರ್ಯವೆಂದು ಹೇಳಿದರೆ ಬ್ರಹ್ಮಸ್ವರೂಪವು ಒಂದೇ ಶಬ್ದದಿಂದ ತಿಳಿಯಲ್ಪಡುವಾಗ, ಇನ್ನೊಂದು ಶಬ್ದವು ಆ ಬ್ರಹ್ಮಸ್ವರೂಪದಲ್ಲಿ ಯಾವ ಅತಿಶಯವನ್ನೂ ತಿಳಿಸುವುದಿಲ್ಲವಾದ ಕಾರಣ ಸಮಸ್ತವಾದ

ಶಾಸ್ತ್ರವು ವ್ಯರ್ಥವಾಗುತ್ತದೆ. ಅದಕ್ಕಾಗಿ ಆಯಾ ಶಬ್ದಗಳು ಹೇಳುವ ಧರ್ಮಗಳು ಬ್ರಹ್ಮನಲ್ಲಿ ಇವೆ ಎಂದೇ ಅಂಗೀಕರಿಸಬೇಕು.

ದ್ಯುಭ್ವಾದ್ಯಾಯತನತ್ವಾದ್ಯಾ ಧರ್ಮಾಃ ಸರ್ವತ್ರ ವರ್ಣಿತಾಃ ।
ನಿರ್ವಿಶೇಷಂ ಕ್ವ ಮೀಮಾಂಸಾ ಕ್ವೇಯಂ ಸಲ್ಲಿಂಗಶಬ್ದಭೂಃ ॥ ೨೫೯ ॥

**ಅರ್ಥ–** ಸರ್ವತ್ರ = ಎಲ್ಲ ಶಾಸ್ತ್ರದಲ್ಲಿ, ದ್ಯುಭ್ವಾದ್ಯಾಯತನತ್ವಾದ್ಯಾ = ದ್ಯುಭ್ವಾದ್ಯಾಯತನತ್ವ ಮೊದಲಾದ, ಧರ್ಮಾಃ = ಧರ್ಮಗಳು, ಬ್ರಹ್ಮಣಿ = ಬ್ರಹ್ಮನಲ್ಲಿ ವರ್ಣಿತಾಃ = ವರ್ಣಿಸಲ್ಪಟ್ಟಿವೆ. ತೇ = ನಿನ್ನ ಸಿದ್ಧಾಂತದಲ್ಲಿ ಹೇಳಲ್ಪಟ್ಟ, ನಿರ್ವಿಶೇಷಂ = ಸಕಲಗುಣಧರ್ಮರಹಿತನಾದ, ಬ್ರಹ್ಮ = ಪರಬ್ರಹ್ಮನು, ಕ್ವ = ಎಲ್ಲಿ, ಚ = ಮತ್ತು, ಸಲ್ಲಿಂಗಶಬ್ದಭೂಃ = ನಿರ್ದುಷ್ಟಗಳಾದ ಹೇತುಗಳಿಂದ (ಶಬ್ದಗಳಿಂದ) ಮಾಡಲ್ಪಡುವ, ಇಯಂ = ಈ ಮೀಮಾಂಸಾ ಬ್ರಹ್ಮಜಿಜ್ಞಾಸೆಯು, ಕ್ವ = ಎಲ್ಲಿ?

**ಅನುವಾದ–** 'ದ್ಯುಭ್ವಾದ್ಯಾಯತನತ್ವ' ಮೊದಲಾದ ಧರ್ಮಗಳು ಎಲ್ಲ ಕಡೆಗಳಲ್ಲಿ ವರ್ಣಿತವಾಗಿವೆ. ನಿನ್ನ ನಿರ್ವಿಶೇಷ ಬ್ರಹ್ಮನೆಲ್ಲಿ ಮತ್ತು ನಿರ್ದುಷ್ಟವಾದ ಲಿಂಗಶಬ್ದಗಳಿಂದ ಸಮುತ್ಪನ್ನವಾದ ಈ ವಿಚಾರವೆಲ್ಲಿ?

**ಭಾವವಿಲಾಸಿನೀ–** ಪ್ರಥಮದ್ವಿತೀಯಪಾದೌ ಸವಿಶೇಷಬ್ರಹ್ಮಪ್ರತಿಪಾದಕೌ । ತೃತೀಯಪಾದ ಏವನಿರ್ವಿಶೇಷ ಬ್ರಹ್ಮಪ್ರತಿಪಾದಕ ಇತಿ ಮಾಯಾವಾದಿನೋ ವದಂತಿ । ತದಪಿ ನೇತ್ಯಾಹ – **ದ್ಯುಭ್ವಾದ್ಯಾಯತನತ್ವೇತಿ** ॥ ದ್ಯುಭ್ವಾದ್ಯಾಯತನಂ ಸ್ವಶಬ್ದಾದಿತಿ ತೃತೀಯಪಾದಸ್ಯಾದಿಸೂತ್ರಮ್ । ಏವಂಚ ದ್ಯುಭ್ವಾದ್ಯಾಯತನತ್ವಾದಿ ಧರ್ಮಾಃ ಸರ್ವತ್ರ ತೃತೀಯಪಾದೇ । ಅತಸ್ತೃತೀಯಪಾದಸ್ಯನಿರ್ವಿಶೇಷ ಬ್ರಹ್ಮಪ್ರತಿಪಾದಕತ್ವ ಕಥನಮಪ್ಯವಿಚಾರಿತರಮಣೀಯ-ಮೇವೇತಿ ಭಾವಃ । ವ್ಯಾಹತಂ ಚ ಮೀಮಾಂಸಾಯಾ ನಿರ್ವಿಶೇಷಾರ್ಥಪರತ್ವಕಥನಮಿತ್ಯಾಹ – **ನಿರ್ವಿಶೇಷಮಿತಿ** ॥ ನಿರ್ವಿಶೇಷಂ ವಸ್ತು ಕ್ವ । ಸಲ್ಲಿಂಗಶಬ್ದಭೂಃ । ಸಲ್ಲಿಂಗಾನಾಂ ಸಮೀಚೀನಶಬ್ದಾನಾಂ ಚ ಸಾಧಕತಯೋಕ್ತಾನಾಂ ಭೂರಾಧಾರಭೂತಾ । ಸಲ್ಲಿಂಗೈಃ ಸಚ್ಛಬ್ದೈಶ್ಚ ಪೂರ್ವಪಕ್ಷಂ ನಿವಾರ್ಯ ಸಿದ್ಧಾಂತಂ ಕುರ್ವಂತೀತ್ಯರ್ಥಃ । ಇಯಂ ಮೀಮಾಂಸಾ ಕ್ವ । ಅತೋ ವ್ಯಾಹತಭಾಷಿತ್ವಾತ್ ಪರಕೀಯಂ ಭಾಷ್ಯಮುಪೇಕ್ಷಣೀಯಮಿತಿ ಭಾವಃ ॥ ೨೫೯ ॥

**ವಿವರಣೆ–** ಅದ್ವೈತಿಗಳು ಸಮನ್ವಯಾಧ್ಯಾಯದ ಪ್ರಥಮದ್ವಿತೀಯ ಪಾದಗಳಲ್ಲಿ ಸವಿಶೇಷ ಬ್ರಹ್ಮನ ಪ್ರತಿಪಾದನೆಯೆಂದೂ, ತೃತೀಯಪಾದದಲ್ಲಿ ನಿರ್ವಿಶೇಷಬ್ರಹ್ಮನ ಪ್ರತಿಪಾದನೆಯೆಂದೂ ಹೇಳುತ್ತಾರೆ. ಅದನ್ನು ಇಲ್ಲಿ ನಿರಾಕರಿಸುತ್ತಾರೆ. ಮೂರನೆಯ ಪಾದದ ಮೊದಲನೆಯ ಸೂತ್ರ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬುದು. ಇಲ್ಲಿ ಬ್ರಹ್ಮನಿಗೆ ದ್ಯಾವಾಪೃಥಿವೀಗಳ ಆಧಾರತ್ವವನ್ನು ಹೇಳುತ್ತಾರೆ. ಇದು ಅವರು ಅಂಗೀಕರಿಸುವಂತೆ ನಿರ್ವಿಶೇಷಬ್ರಹ್ಮನ ಧರ್ಮವಲ್ಲ. ವಿಶಿಷ್ಟಬ್ರಹ್ಮನಲ್ಲಿಯೇ ಆಧಾರತ್ವಾದಿ

ಧರ್ಮಗಳೂ ಬರುತ್ತವೆ. ನಿರ್ವಿಶೇಷ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತದೆ ಎಂದು ಹೇಳಿದ ಮೂರನೆಯು ಪಾದದಲ್ಲಿಯೂ ಗುಣವಿಶಿಷ್ಟಬ್ರಹ್ಮನನ್ನೇ ಪ್ರತಿಪಾದನೆ ಮಾಡುವುದರಿಂದ ಉಳಿದ ಪಾದಗಳಲ್ಲಿಯೂ ಗುಣವಿಶಿಷ್ಟಬ್ರಹ್ಮನನ್ನು ವೇದಗಳು ಪ್ರತಿಪಾದನೆ ಮಾಡುತ್ತವೆ ಎಂದು ಸೂತ್ರಕಾರರ ಅಭಿಪ್ರಾಯ ಎಂಬುದು ನಿರ್ವಿವಾದವಾಗಿದೆ. ಆದ್ದರಿಂದ ನಿರ್ವಿಶೇಷಬ್ರಹ್ಮನ ವಿಚಾರವು ಎಲ್ಲಿಯೂ ಇಲ್ಲ. ಬ್ರಹ್ಮಸೂತ್ರಗಳು ಮಾಡುವ ವಿಚಾರವೆಲ್ಲವೂ ನಿರ್ದುಷ್ಟವಾದ ಶಬ್ದಗಳ ಮತ್ತು ನಿರ್ದುಷ್ಟವಾದ ಯುಕ್ತಿಗಳ ಬಲದಿಂದ ನಡೆಯುವ ವಿಚಾರವಾಗಿದೆ. ಆದ್ದರಿಂದ ಬ್ರಹ್ಮನಲ್ಲಿ ಸತ್ಯವಾದ ಧರ್ಮಗಳೇ ಸಿದ್ಧವಾಗುತ್ತವೆ. ಆದ್ದರಿಂದ ನಿನ್ನ ಬ್ರಹ್ಮನಿಗೂ, ಬ್ರಹ್ಮಸೂತ್ರದ ವಿಚಾರಕ್ಕೂ ಯಾವ ಸಂಬಂಧವೂ ಇಲ್ಲವಾದ್ದರಿಂದ ನಿನಗೆ ವ್ಯಾಹತ- ಭಾಷಿತ್ವದೋಷವು ಬರುವುದರಿಂದ ನೀನು ಉಪೇಕ್ಷಾರ್ಹನಾಗುತ್ತೀಯೆ ಎಂದು ತಾತ್ಪರ್ಯ.

**ಅತೋಽನಂತಗುಣಂ ಬ್ರಹ್ಮೇತ್ಯೇವ ಸೂತ್ರಕೃತೋ ಮತಂ ।**
**ಮುಕ್ತ್ಯರ್ಥಂ ಕಥಿತಾ ಧರ್ಮಾ ಮಿಥ್ಯೇತ್ಯಪಿ ನ ಶೋಭತೇ ॥ ೨೬೦ ॥**

**ಅರ್ಥ–** ಅತಃ = ಆದ್ದರಿಂದ, ಬ್ರಹ್ಮ = ಪರಬ್ರಹ್ಮನು, ಅನಂತಗುಣಂ = ಅನಂತಗುಣಪೂರ್ಣನಾಗಿದ್ದಾನೆ, ಇತಿ ಏವ = ಎಂಬುದೇ, ಸೂತ್ರಕೃತಃ = ಸೂತ್ರಕಾರರಾದ ವೇದವ್ಯಾಸರ, ಮತಂ = ಅಭಿಪ್ರಾಯವಾಗಿದೆ. ಅಪಿಚ = ಮತ್ತೂ ಕೂಡ, ಮುಕ್ತ್ಯರ್ಥಂ = ಜಿಜ್ಞಾಸುವಿಗೆ ಮುಕ್ತಿರೂಪಪ್ರಯೋಜನಕ್ಕಾಗಿ, ಕಥಿತಾ = ಹೇಳಲ್ಪಟ್ಟ, ಧರ್ಮಾಃ= ಬ್ರಹ್ಮನ ಗುಣಧರ್ಮಗಳು, ಮಿಥ್ಯಾ ಇತಿ = ಅಸತ್ಯಗಳೆಂಬುದು (ಮಿಥ್ಯೆಯೆಂಬುದು) ನ ಶೋಭತೇ = ಉಚಿತವಾಗುವುದಿಲ್ಲ.

**ಅನುವಾದ–** ಆದ್ದರಿಂದ ಬ್ರಹ್ಮನು ಅನಂತಗುಣಪರಿಪೂರ್ಣ ಎಂದೇ ಸೂತ್ರಕಾರರಿಗೆ ಸಮ್ಮತವಾದುದು. ಮೋಕ್ಷದ ಸಲುವಾಗಿ ಹೇಳಲ್ಪಟ್ಟ ಅಂತಹ ಧರ್ಮಗಳು ಮಿಥ್ಯಾ ಎಂಬುದು ಎಂದೂ ಸರಿಯಲ್ಲ.

**ಭಾವವಿಲಾಸಿನೀ–** ಸೂತ್ರೈರ್ಗುಣಸಾಧನಮುಪಸಂಹರತಿ ॥ **ಅತಇತಿ** ॥ ೨೬೦ ॥

**ವಿವರಣೆ–** ಸೂತ್ರಗಳಿಂದ ಮಾಡಿದ ಗುಣಸಾಧನೆಯನ್ನು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ. ಪ್ರತಿಸೂತ್ರದಲ್ಲಿಯೂ ಸೂತ್ರಕಾರರು ಬ್ರಹ್ಮನಿಗೆ ಸಾಧನರೂಪವಾದ ಗುಣವನ್ನೂ, ಸಾಧ್ಯರೂಪವಾದ ಗುಣವನ್ನೂ ಹೇಳಿರುವುದರಿಂದ ಬ್ರಹ್ಮನು ಗುಣಪೂರ್ಣನೆಂದೇ ಸೂತ್ರಕಾರರ ಅಭಿಪ್ರಾಯ. ಮತ್ತು ಈ ಗುಣಗಳೆಲ್ಲವೂ ಪ್ರಥಮಸೂತ್ರದಲ್ಲಿಯೇ ಮೋಕ್ಷಕ್ಕಾಗಿ ಜಿಜ್ಞಾಸಾ ಎಂದು ಹೇಳಿರುವುದರಿಂದ ಸತ್ಯವೇ ಆಗಬೇಕು. ಮಿಥ್ಯಾವಸ್ತುವಿನ ಜ್ಞಾನದಿಂದ ಎಂದೂ ಮೋಕ್ಷವಾಗುವುದಿಲ್ಲ. ಆದ್ದರಿಂದ

ಗುಣಗಳು ಸತ್ಯಗಳೆಂದು ಒಪ್ಪಬೇಕು ಎಂದು ಅಭಿಪ್ರಾಯ.

**ಅತಃ ಸೂತ್ರಾಕ್ಷರಂ ಮೂಲಂ ನ ತೇ ಶಾಸ್ತ್ರಸ್ಯ ದೃಶ್ಯತೇ ।**
**ತನ್ಮನ್ಯೇ ಪ್ರಕ್ರಿಯಾಮೂಲಂ ತ್ವತ್ಪೂರ್ವಾರ್ಜಿತದುಷ್ಕ್ರಿಯಾಮ್ ॥ ೨೬೧ ॥**

**ಅರ್ಥ–** ಅತಃ = ಆದ್ದರಿಂದ, ತೇ = ನಿನ್ನ, ಶಾಸ್ತ್ರಸ್ಯ = ಬ್ರಹ್ಮನು ನಿರ್ಗುಣನೆಂದು ಹೇಳುವ ಶಾಸ್ತ್ರಕ್ಕೆ, ಸೂತ್ರಾಕ್ಷರಂ = ಬ್ರಹ್ಮಸೂತ್ರದ ಅಕ್ಷರವು (ಬ್ರಹ್ಮಸೂತ್ರಗಳು) ಮೂಲಂ = ಆಧಾರವೆಂಬುದಾಗಿ, ನ ದೃಶ್ಯತೇ = ಕಾಣುವುದಿಲ್ಲ. ತತ್ = ಆದ್ದರಿಂದ, ತತ್ಪೂರ್ವಾರ್ಜಿತ ದುಷ್ಕ್ರಿಯಾಂ = ನಿನ್ನ ಪೂರ್ವಜನ್ಮಗಳಲ್ಲಿ ಮಾಡಿದ ದುಷ್ಟಕರ್ಮಗಳೇ, ಪ್ರಕ್ರಿಯಾಮೂಲಂ = ಬ್ರಹ್ಮನು ನಿರ್ಗುಣನೆಂದು ಹೇಳುವ ಅಭಿಪ್ರಾಯಕ್ಕೆ ಮೂಲವೆಂದು, ಅಹಂ = ನಾನು, ಮನ್ಯೇ = ಭಾವಿಸುತ್ತೇನೆ.

**ಅನುವಾದ–** ಆದ್ದರಿಂದ ನಿರ್ಗುಣಬ್ರಹ್ಮನನ್ನು ಪ್ರತಿಪಾದನೆ ಮಾಡುವ ನಿನ್ನ ಶಾಸ್ತ್ರಕ್ಕೆ ಬ್ರಹ್ಮಸೂತ್ರಗಳು ಮೂಲವಾಗಿಲ್ಲ. ಆದ್ದರಿಂದ ನಿನ್ನ ಪ್ರಕ್ರಿಯೆಗೆ ನಿನ್ನ ಪೂರ್ವಾರ್ಜಿತ ದುಷ್ಕರ್ಮವೇ ಮೂಲವೆಂದು ನಾನು ಭಾವಿಸುತ್ತೇನೆ.

**ಭಾವವಿಲಾಸಿನೀ–** ನಿರ್ಗುಣಬ್ರಹ್ಮಪ್ರತಿಪಾದಕಾನಿ ಸೂತ್ರಾಣೀತಿ ಪ್ರತಿಪಾದಯತ್ಪರಕೀಯ ಶಾಸ್ತ್ರಂ ಪರಿಹಸತಿ ॥ **ಅತಃ ಸೂತ್ರಾಕ್ಷರಮಿತಿ** ॥ ತೇ ಶಾಸ್ತ್ರಸ್ಯ ಸೂತ್ರಾಕ್ಷರಂ ಮೂಲಂ ನ ದೃಶ್ಯತ ಇತಿ ಸಂಬಂಧಃ । ಕಿಂ ಮೂಲಕಂ ತರ್ಹಿ ತಚ್ಛಾಸ್ತ್ರಮಿತ್ಯಾಶಂಕ್ಯ ಪಾಪಮೂಲಕಮೇವೇತ್ಯುತ್ತರ-ಮಾಹ – **ತನ್ಮನ್ಯ ಇತಿ** ॥ ತತ್ತಸ್ಮಾತ್ ಸೂತ್ರಾಕ್ಷರಮೂಲತ್ವಾಭಾವಾತ್ । ದುಷ್ಕ್ರಿಯಾಂ ಪಾಪಮ್ ॥ ೨೬೧ ॥

**ವಿವರಣೆ–** ಬ್ರಹ್ಮಸೂತ್ರಗಳು ನಿರ್ಗುಣಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆ ಎಂಬ ಅದ್ವೈತಿಗಳ ಶಾಸ್ತ್ರವನ್ನು ಇಲ್ಲಿ ನಿರಾಕರಣೆ ಮಾಡುತ್ತಾರೆ. ಹಿಂದೆ ಉದಾಹರಣೆ ಮಾಡಿದ ಅನೇಕ ಸೂತ್ರಗಳಲ್ಲಿ ಬ್ರಹ್ಮನ ಧರ್ಮಗಳನ್ನೇ ಹೇಳಿರುವುದರಿಂದ ನಿರ್ಗುಣಬ್ರಹ್ಮನು ಸೂತ್ರಕಾರರಿಗೆ ಎಂದೂ ಸಮ್ಮತನಲ್ಲ. ಆದ್ದರಿಂದ ಅದನ್ನು ಪ್ರತಿಪಾದಿಸುವ ನಿನ್ನ ಶಾಸ್ತ್ರಕ್ಕೆ ಎಂದೂ ಸೂತ್ರಾನುಗುಣ್ಯವು ಇರುವುದಿಲ್ಲ ಎಂದು ಅಭಿಪ್ರಾಯ.

**ತತ್ವಸ್ಯಾಽವೇದಕಂ ಕಿಂಚಿತ್ ಕಿಂಚಿತ್ ತತ್ವಸ್ಯ ವೇದಕಂ ।**
**ಇತಿ ವೇದೇಷು ಯದ್ ದ್ವೈಧಂ ನ ತತ್ ಸೂತ್ರಕೃತೋ ಮತಮ್ ॥೨೬೨॥**

**ಅರ್ಥ–** ಕಿಂಚಿತ್ = ವೇದಗಳ ಒಂದು ಭಾಗವು, ತತ್ವಸ್ಯ ಅವೇದಕಂ = ತತ್ವವನ್ನು ತಿಳಿಸುವಂತಹುದಾಗಿಲ್ಲ, ಚ = ಮತ್ತು, ಕಿಂಚಿತ್ = ವೇದದ ಮತ್ತೊಂದು ಭಾಗವು, ತತ್ವಸ್ಯವೇದಕಂ = ತತ್ವವನ್ನು ತಿಳಿಸುವಂತಹುದಾಗಿದೆ, ಇತಿ = ಈ ರೀತಿಯಾಗಿ, ವೇದೇಷು = ವೇದಗಳಲ್ಲಿ, ಯತ್ = ಯಾವ, ದ್ವೈಧಂ = ಎರಡು ರೀತಿಯ ವಿಭಾಗವು, ತ್ವಯಾ =

ನಿನ್ನಿಂದ, ಕೃತಂ = ಮಾಡಲ್ಪಟ್ಟಿದೆಯೋ, ತತ್ = ಅದು, ಸೂತ್ರಕೃತಃ = ಸೂತ್ರಕಾರರಾದ ವೇದವ್ಯಾಸರಿಗೆ, ನ ಮತಂ = ಸಮ್ಮತವಲ್ಲ.

**ಅನುವಾದ–** ವೇದಗಳಲ್ಲಿ ಒಂದು ಭಾಗವು ತತ್ತ್ವಾವೇದಕವಾದುದು, ಇನ್ನೊಂದು ಭಾಗವು ಅತತ್ತ್ವಾವೇದಕವಾದುದು ಎಂಬ ಈ ವಿಭಾಗವು ಸೂತ್ರಕಾರರಿಗೆ ಸಮ್ಮತವಲ್ಲ.

**ಭಾವವಿಲಾಸಿನೀ–** ವೇದೇ ಕಸ್ಯಚಿದ್ಭಾಗಸ್ಯತತ್ತ್ವಾವೇದಕತ್ವಂ ಕಸ್ಯಚಿದ್ಭಾಗಸ್ಯಾತತ್ತ್ವಾ ವೇದಕತ್ವಮಿತಿ ಮಾಯಾವಾದಿನೋ ವದಂತಿ। ತದಪಿ ಸೂತ್ರಕಾರಮತವಿರುದ್ಧಮಿತ್ಯಾಹ–**ತತ್ತ್ವಸ್ಯೇತಿ** ॥ ದ್ವೈಧಂ ದ್ವಿಪ್ರಕಾರತಾ ॥ ೨೬೨ ॥

**ವಿವರಣೆ–** ವೇದಗಳು ತತ್ತ್ವಾವೇದಕ ಮತ್ತು ಅತತ್ತ್ವಾವೇದಕ ಎಂದು ಎರಡು ವಿಧ. ಅದರಲ್ಲಿ ತತ್ತ್ವಾವೇದಕವಾದ ವೇದ ಭಾಗವು ಮಾತ್ರ ಪ್ರಮಾಣವಾದುದು. ಅತತ್ತ್ವಾವೇದಕವಾದ ವೇದ ಭಾಗವು ಪ್ರಮಾಣವಲ್ಲ ಎಂದು ಅದ್ವೈತಿಗಳು ವಿಭಾಗವನ್ನು ಮಾಡುತ್ತಾರೆ. ಈ ವಿಭಾಗವೂ ಕೂಡ ಸೂತ್ರಸಮ್ಮತಿಯನ್ನು ಹೊಂದಿರುವುದಿಲ್ಲ ಎಂದು ತಿಳಿಸುತ್ತಾರೆ.

**ಏಕಸ್ಯಾಮಾನತಾ ಸ್ಯಾಚ್ಚೇತ್ ಕುತಃ ಸೂತ್ರಕೃತೋ ವದ ।**
**ಶ್ರುತೀನಾಮವಿರೋಧಾಯ ದ್ವಿತೀಯಾಧ್ಯಾಯವಿಸ್ತರಃ ॥ ೨೬೩ ॥**

**ಅರ್ಥ–** ಏಕಸ್ಯ = ವೇದದ ಒಂದು ಭಾಗಕ್ಕೆ, ಅಮಾನತಾ = ಅಪ್ರಾಮಾಣತ್ವವು, ಸ್ಯಾತ್ ಚೇತ್ = ಇರುವುದಾದರೆ, ಶ್ರುತೀನಾಮ್ = ವೇದಗಳಿಗೆ, ಅವಿರೋಧಾಯ = ಪರಸ್ಪರ ವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ, ಸೂತ್ರಕೃತಃ = ಸೂತ್ರಕಾರರಾದ ವೇದವ್ಯಾಸರ, ದ್ವಿತೀಯಾಧ್ಯಾಯವಿಸ್ತರಃ = ವಿಸ್ತಾರವಾಗಿ ಬ್ರಹ್ಮಸೂತ್ರಗಳ ಎರಡನೆಯ ಅಧ್ಯಾಯವನ್ನು ರಚಿಸುವ ಕಾರ್ಯವು, ಕುತಃ = ಯಾವ ಪ್ರಯೋಜನಕ್ಕಾಗಿ, ಇತಿ = ಎಂಬುದನ್ನು, ತ್ವಂ = ನೀನು, ವದ= ಹೇಳು?

**ಅನುವಾದ–** ವೇದದ ಒಂದು ಭಾಗವು ಅಪ್ರಮಾಣವಾಗಬಹುದಾದರೆ, ಶ್ರುತಿಗಳ ವಿರೋಧವನ್ನು ಪರಿಹಾರಮಾಡುವುದಕ್ಕಾಗಿ ಏಕೆ ಸೂತ್ರಕಾರರು ವಿಸ್ತಾರವಾಗಿ ದ್ವಿತೀಯಾಧ್ಯಾಯವನ್ನು ರಚನೆಮಾಡಬೇಕಾಗಿದ್ದಿತು ಎಂದು ಹೇಳು?

**ಭಾವವಿಲಾಸಿನೀ– ಕುತೋನಾಭಿಮತಮಿತ್ಯತ ಆಹ – ಏಕಸ್ಯೇತಿ ॥ ಏಕಸ್ಯವೇದಭಾಗಸ್ಯ ಶ್ರುತೀನಾಂ ಬ್ರಹ್ಮಣಿ ಜಗತ್ಕಾರಣತ್ವಪೂರ್ಣಾನಂದತ್ವಾದಿ ಮಹಿಮಪ್ರತಿಪಾದಕತಯಾ ಪೂರ್ವಾಧ್ಯಾಯೇ ಸಮನ್ವಿತಶ್ರುತೀನಾಮ್ ಅವಿರೋಧಾಯ ಯುಕ್ತಿಸಮಯಪರಸ್ಪರ-ವಿರೋಧಪರಿಹಾರಾಯ । ಶ್ರುತೀನಾಂ ಪ್ರಾಮಾಣ್ಯರಕ್ಷಣಾಯ ಖಲುದ್ವಿತೀಯಾಧ್ಯಾಯೇಽ-**

ವಿರೋಧಸಮರ್ಥನಮ್ । ಅಪ್ರಾಮಾಣ್ಯಮಪಿ ಸಂಭವತಿ ಚೇತ್ ತದ್ ವ್ಯರ್ಥಮಿತಿ ಭಾವಃ ॥ ೨೬೩ ॥

**ವಿವರಣೆ–** ಹೀಗೆ ವೇದಗಳನ್ನು ವಿಭಾಗಮಾಡುವುದು ಸೂತ್ರಕಾರರಿಗೆ ಸಮ್ಮತವಲ್ಲ ಎಂಬ ವಿಷಯದಲ್ಲಿ ಒಂದು ಯುಕ್ತಿಯನ್ನು ಹೇಳುತ್ತಾರೆ. ಬ್ರಹ್ಮನು ಜಗತ್ಕಾರಣತ್ವಾದಿ ಸಕಲಗುಣಪರಿಪೂರ್ಣನು ಎಂದು ಮೊದಲನೆಯ ಅಧ್ಯಾಯದಲ್ಲಿ ಸಮನ್ವಯವನ್ನು ಮಾಡಿದ ಮೇಲೆ ಈ ಪ್ರಮೇಯಕ್ಕೆ ಯುಕ್ತಿಗಳಿಂದ, ಸಮಯಗಳಿಂದ ಮತ್ತು ಪರಸ್ಪರವಾಗಿ ಶ್ರುತಿಗಳಿಂದ ವಿರೋಧ ಬಂದರೆ, ಆ ವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಅಷ್ಟೇ ಅವಿರೋಧ್ಯಾಯವು ಪ್ರವೃತ್ತವಾಗಿರುವುದು. ವೇದಗಳ ಒಂದು ಭಾಗಕ್ಕೆ ಅಪ್ರಮಾಣ್ಯವಿರಬಹುದಾದರೆ, ವಿರೋಧ ಬಂದರೆ ಬರಲಿ, ಆ ವೇದಭಾಗವನ್ನು ಅಪ್ರಮಾಣವೆಂದು ಹೇಳಬಹುದಾದ್ದರಿಂದ ಯಾವ ಬಾಧಕವೂ ಇಲ್ಲದಿರುವುದರಿಂದ ಸೂತ್ರಕಾರರು ವಿರೋಧವನ್ನು ಪರಿಹಾರ ಮಾಡಲು ಪ್ರಯತ್ನಪಡಬಾರದಾಗಿದ್ದಿತು. ವಿರೋಧವನ್ನು ಪರಿಹಾರ ಮಾಡುವ ಸೂತ್ರಕಾರರು ಪೂರ್ವಾಧ್ಯಾಯದಲ್ಲಿ ಉಕ್ತವಾದ ಎಲ್ಲ ಶ್ರುತಿಗಳೂ ಪ್ರಮಾಣಗಳೆಂದೇ ಅಭಿಪ್ರಾಯಪಡುತ್ತಾರೆ. ಆದ್ದರಿಂದ ಶ್ರುತಿಯ ಯಾವ ಭಾಗಕ್ಕೂ ಅತತ್ವಾವೇದಕತ್ವರೂಪವಾದ ಅಪ್ರಾಮಾಣ್ಯವನ್ನು ಹೇಳಬಾರದು.

**ಜೀವೇಶಭೇದದಾರ್ಢ್ಯೋಕ್ತೇರಹಮಜ್ಞ ಇತೀರಿತಂ ।**
**ಅಜ್ಞಪ್ರತ್ಯಕ್ಷಮಪ್ಯಜ್ಞಂ ತ್ವಾಮೇವ ಕುರುತೇ ಪರಮ್ ॥ ೨೬೪ ॥**

**ಅರ್ಥ–** ಸೂತ್ರೇಷು = ಬ್ರಹ್ಮಸೂತ್ರಗಳಲ್ಲಿ, ಜೀವೇಶಭೇದದಾರ್ಢ್ಯೋಕ್ತೇಃ = ಜೀವ ಮತ್ತು ಬ್ರಹ್ಮರಿಗೆ ಭೇದವನ್ನು ಬಲವಾಗಿ ಸಮರ್ಥಿಸಿರುವುದರಿಂದ, ತ್ವಯಾ = ನಿನ್ನಿಂದ, ಈರಿತಂ = ಹೇಳಲ್ಪಟ್ಟ, ಅಹಮಜ್ಞ ಇತಿ = ನಾನು ಅಜ್ಞಾನಿಯು ಎಂಬ, ಅಜ್ಞಪ್ರತ್ಯಕ್ಷಮ್ = ಅಜ್ಞಾನಿಯ ಪ್ರತ್ಯಕ್ಷವು, ಅಪಿ = ಕೂಡ, ತ್ವಾಂ ಏವ = ನಿನ್ನನ್ನೇ, ಪರಮ್ = ಮತ್ತೊಬ್ಬ, ಅಜ್ಞಂ= ಅಜ್ಞಾನಿಯನ್ನಾಗಿ ಮಾತ್ರ, ಕುರುತೇ = ಮಾಡುತ್ತದೆ.

**ಅನುವಾದ–** ಬ್ರಹ್ಮಸೂತ್ರಗಳಲ್ಲಿ ಜೀವೇಶಭೇದವನ್ನು ಪ್ರಬಲವಾಗಿ ಸಮರ್ಥನೆ ಮಾಡಿರುವುದರಿಂದ ಬ್ರಹ್ಮನಿಗೆ ಅಜ್ಞಾನವನ್ನು ಸಮರ್ಥನೆಯನ್ನು ಮಾಡಲು ನೀನು ಉದಾಹರಿಸುವ 'ಅಹಂ ಅಜ್ಞಃ' ಎಂಬ ಪ್ರತ್ಯಕ್ಷವು ನಿನ್ನನ್ನೇ ಅಜ್ಞಾನಿಯನ್ನಾಗಿ ಮಾಡುತ್ತದೆ.

**ಭಾವವಿಲಾಸಿನೀ–** ಅಹಮಜ್ಞ ಇತಿ ಪ್ರತ್ಯಕ್ಷೇಣಯದ್ಬ್ರಹ್ಮಣ್ಯಜ್ಞಾನಸಮರ್ಥನಂ ತದಪಿ ಸೂತ್ರ-ಕೃತೋನಾಭಿಮತಮಿತ್ಯಾಹ – **ಜೀವೇಶೇತಿ** ॥ ಜೀವೇಶಭೇದದಾರ್ಢ್ಯೋಕ್ತೇಃ ಜೀವೇಶಭೇದೇ ಯದ್ದಾರ್ಢ್ಯಂ ತಸ್ಯೋಕ್ತೇಃ । ಬಹುಸೂತ್ರೈರ್ಜೀವೇಶಭೇದಸಮರ್ಥನಾದಿತ್ಯರ್ಥಃ । ಈರಿತಂ ಮಾಯಾವಾದಿನಾ ಕಥಿತಮ್ । ಅಜ್ಞಪ್ರತ್ಯಕ್ಷಂ ಅಜ್ಞಸ್ಯಾಜ್ಞಾನಿನಃ ಪ್ರತ್ಯಕ್ಷಮಜ್ಞಾನಪ್ರತ್ಯಕ್ಷಮಿತಿ

ಯಾವತ್ । ಪರಂ ಕೇವಲಮ್ । ತ್ವಾಂ ಜೀವನಿಷ್ಠಾಜ್ಞಾನಸಾಧಕಪ್ರತ್ಯಕ್ಷೇಣ ಬ್ರಹ್ಮಣ್ಯಜ್ಞಾನ-ಸಾಧನಾಯ ಯತಮಾನಮ್ ತ್ವಾಮ್ । ಜೀವೇಶ್ವರಯೋರಭೇದಾಭಿಪ್ರಾಯೇಣ ಖಲು ಜೀವನಿಷ್ಠಪ್ರತ್ಯಕ್ಷೇಣ ಬ್ರಹ್ಮಣ್ಯಜ್ಞಾನಸಾಧನಂ ಪರಸ್ಯ । ಸ್ಪಷ್ಟಂ ಸೂತ್ರಕೃತಾ ಜೀವೇಶ್ವರ-ಭೇದಸಮರ್ಥನಾತ್ತದ್ವಿರುದ್ಧಾಭೇದಮಾಶಾಸಾನಸ್ತ್ವಮೇವಾಜ್ಞ ಇತಿ ಭಾವಃ ॥ ೨೬೪ ॥

**ವಿವರಣೆ–** ಅದ್ವೈತಿಗಳು 'ಅಹಂ ಅಜ್ಞಃ' ಎಂಬ ಪ್ರತ್ಯಕ್ಷದಿಂದ ಬ್ರಹ್ಮನಿಗೆ ಅಜ್ಞಾನವನ್ನು ಸಮರ್ಥನೆಮಾಡುತ್ತಾರೆ. ಅದೂ ಸಹ ಸೂತ್ರಕಾರರಿಗೆ ಸಮ್ಮತವಲ್ಲ ಎಂದು ಇಲ್ಲಿ ಪ್ರತಿಪಾದನೆಮಾಡುತ್ತಾರೆ. ಜೀವಬ್ರಹ್ಮರಿಗೆ ಅಭೇದವನ್ನು ಇಟ್ಟುಕೊಂಡು 'ಅಹಂ ಅಜ್ಞಃ' ಎಂಬ ಪ್ರತ್ಯಕ್ಷವು ಜೀವನಲ್ಲಿ ಅಜ್ಞಾನವನ್ನು ಸಿದ್ಧಮಾಡುವುದರಿಂದ ಜೀವಾಭಿನ್ನನಾದ ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ ಎಂದು ಅವರು ಹೇಳುತ್ತಾರೆ. ಆದರೆ, ಸೂತ್ರಕಾರರು ಜೀವೇಶಭೇದದ ವಿಷಯದಲ್ಲಿ ಅನೇಕ ಸೂತ್ರಗಳನ್ನು ರಚಿಸಿರುವುದರಿಂದ ಜೀವೇಶಾಭೇದವು ಅಪ್ರಮಾಣಿಕವಾದುದು. 'ಅಹಂ ಅಜ್ಞಃ' ಎಂಬ ಪ್ರತೀತಿಯು ಜೀವನಲ್ಲಿಯೇ ಅಜ್ಞಾನವನ್ನು ತೋರಿಸುತ್ತದೆ. ಈ ಅಜ್ಞಾನವನ್ನು ಜೀವನಿಗಿಂತ ಭಿನ್ನನಾದ ಬ್ರಹ್ಮನಲ್ಲಿ ತರಲು ಹೊರಟಿರುವ ನೀನು ಶಾಸ್ತ್ರಮರ್ಮವನ್ನು ತಿಳಿಯದ ಅಜ್ಞಾನಿಯೆನಿಸಿಕೊಳ್ಳುತ್ತೀಯೆ ಎಂದು ತಾತ್ಪರ್ಯ.

**ಗುರೂಕ್ತಮನ್ಯಥೀಕುರ್ವಂಚ್ಛಿಷ್ಯೋ ದೂಷ್ಯೋ ವಿಪಶ್ಚಿತಾಂ ।**
**ನಾನಾಶಾಸ್ತ್ರಾರ್ಥನಿಪುಣೈರ್ಯದುಕ್ತಂ ತತ್ ತಥೈವ ಹಿ ॥ ೨೬೫ ॥**

**ಅರ್ಥ–** ಗುರೂಕ್ತಂ = ಗುರುಗಳು ಹೇಳಿದ್ದನ್ನೇ, ಅನ್ಯಥೀಕುರ್ವನ್= ವ್ಯತ್ಯಾಸವಾಗಿ ಅರ್ಥಮಾಡಿಕೊಳ್ಳುವ, ಶಿಷ್ಯಃ = ಶಿಷ್ಯನು, ವಿಪಶ್ಚಿತಾಂ = ಜ್ಞಾನಿಗಳಿಗೆ, ದೂಷ್ಯಃ = ನಿಂದ್ಯನಾಗುತ್ತಾನೆ. ನಾನಾಶಾಸ್ತ್ರಾರ್ಥನಿಪುಣೈಃ = ಅನೇಕ ರೀತಿಯ ಶಾಸ್ತ್ರಾರ್ಥಗಳಲ್ಲಿ ನಿಪುಣೈಃ = ಕುಶಲರಾದವರಿಂದ, ಯತ್= ಯಾವ ವಿಷಯವು, ಉಕ್ತಂ = ಹೇಳಲ್ಪಟ್ಟಿದೆಯೋ, ತತ್ = ಅದು, ತಥಾಏವ = ವ್ಯತ್ಯಾಸ ಮಾಡಲು ಯೋಗ್ಯ ವಲ್ಲದ್ದಾಗಿಯೇ, ಅಸ್ತಿ ಹಿ= ಇರುತ್ತದಷ್ಟೆ

**ಅನುವಾದ–** ಗುರುಗಳು ಹೇಳಿದ ಮಾತನ್ನು ವ್ಯತ್ಯಾಸ ಮಾಡುವವನು ಜ್ಞಾನಿಗಳಿಂದ ದೂಷ್ಯನಾಗುತ್ತಾನೆ. ನಾನಾಶಾಸ್ತ್ರಗಳಲ್ಲಿ ನಿಪುಣರಾದವರು ಏನನ್ನು ಹೇಳಿದ್ದಾರೆಯೋ ಅದನ್ನು ಏನೂ ವ್ಯತ್ಯಾಸ ಮಾಡಲು ಬರುವುದಿಲ್ಲ.

**ಭಾವವಿಲಾಸಿನೀ–** ನನು ಸೂತ್ರಕಾರೇಣ ಭೇದಃ ಪ್ರತಿಪಾದ್ಯತಾಮ್ । ತಥಾಪಿ ಮಯಾಽಭೇದ ಏವಾಶಾಸ್ಯತೇ ಕೋ ದೋಷ ಇತ್ಯತ ಆಹ – **ಗುರೂಕ್ತಮಿತಿ** ॥ ತಥೈವ ಅನ್ಯಥೀಕರ್ತುಮಶಕ್ಯ-ಮೇವ ॥ ೨೬೫ ॥

**ವಿವರಣೆ–** ಸೂತ್ರಕಾರರು ಜೀವೇಶಭೇದವನ್ನು ಹೇಳಿದ್ದರೂ ನಾನು ಅಭೇದವನ್ನೇ ಹೇಳುತ್ತೇನೆ, ಅದಕ್ಕೆ ಏನು ದೋಷ ಎಂಬ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ನೀಡುತ್ತಾರೆ. ಸೂತ್ರಕಾರರು ಎಲ್ಲರಿಗೂ ಗುರುಗಳು. ಭಾಷ್ಯಕಾರರೆಲ್ಲರೂ ಅವರ ಶಿಷ್ಯರು. ಶಿಷ್ಯನಾದವನು ಗುರುಗಳ ಮಾತಿಗೆ ವಿರುದ್ಧವಾಗಿ ಮಾತನಾಡಿದರೆ, ಜ್ಞಾನಿಗಳು ಅವನನ್ನು ದುಷ್ಟನೆಂದು ಕರೆಯುತ್ತಾರೆ. ನಾನಾಶಾಸ್ತ್ರಗಳಲ್ಲಿ ನಿಪುಣರಾದ ಸೂತ್ರಕಾರರು ಏನು ಹೇಳುತ್ತಾರೆಯೋ ಅದನ್ನು ಹಾಗೆಯೇ ಅಂಗೀಕರಿಸಬೇಕೇ, ಹೊರತಾಗಿ ವ್ಯತ್ಯಾಸ ಮಾಡಲು ಬರುವುದಿಲ್ಲ. ಸೂತ್ರಕಾರರು ಜೀವೇಶಭೇದವನ್ನು ಸಮರ್ಥನೆ ಮಾಡಿದ ಮೇಲೆ ಎಂದಿಗೂ ಜೀವೇಶ ಅಭೇದವನ್ನು ಬಯಸಬಾರದು.

**ಪ್ರಿಯಂ ಕಿಲ ಶ್ರೋತ್ರನೇತ್ರನಾಸಾಕೇಶಾನನಾದಿಕಂ ।**
**ಶಿರಃಪದಂ ಹಿ ಕೇಶಾದಿಕಂಠಾಂತಾಂಗಸ್ಯ ವಾಚಕಂ ॥ ೨೬೬ ॥**

**ಅರ್ಥ–** ಬ್ರಹ್ಮಣಃ = ಬ್ರಹ್ಮನ, ಶ್ರೋತ್ರನೇತ್ರನಾಸಾಕೇಶಾನನಾದಿಕಂ – ಶ್ರೋತ್ರ = ಕಿವಿ, ನೇತ್ರ = ಕಣ್ಣು, ನಾಸಾ = ಮೂಗು, ಕೇಶ = ಕೂದಲು, ಆನನ = ಮುಖ, ಆದಿಕಂ = ಇವೇ ಮೊದಲಾದ ಇರುವ ಭಾಗವು, ಪ್ರಿಯಂ ಕಿಲ = ಪ್ರಿಯವೆಂದು ಪ್ರಸಿದ್ಧವಾಗಿದೆಯಷ್ಟೇ. ಶಿರಃ ಪದಂ = ಶಿರಸ್ ಎಂಬ ಪದವು, ಕೇಶಾದಿಕಂಠಾಂತಾಂಗಸ್ಯ = ಕೂದಲಿನಿಂದ ಪ್ರಾರಂಭಿಸಿ, ಕಂಠಾಂತಾಂಗಸ್ಯ = ಕುತ್ತಿಗೆಯವರೆಗಿನ ಭಾಗಕ್ಕೆ, ವಾಚಕಂ ಹಿ = ವಾಚಕವೆಂದು ಪ್ರಸಿದ್ಧಿವಾಗಿದೆಯಷ್ಟೆ.

**ಅನುವಾದ–** ಬ್ರಹ್ಮನ ಶ್ರೋತ್ರ, ನೇತ್ರ, ನಾಸಿಕ, ಕೇಶ ಮತ್ತು ಆನನವು ಇರುವ ಭಾಗವು ಪ್ರಿಯವೆಂದು ಕರೆಯಲ್ಪಡುತ್ತದಷ್ಟೇ? ಶಿರಸ್ಸೆಂದರೆ, ಕಂಠದಿಂದ ಹಿಡಿದು ಕೇಶದವರೆಗೆ ಇರುವ ದೇಹದ ಭಾಗ.

**ಭಾವವಿಲಾಸಿನೀ–** ಬ್ರಹ್ಮಣೋನಿರಾಕಾರತಾಪಿ ಆನಂದಮಯಾಧಿಕರಣಪ್ರಮೇಯೇನ ನಿರಸ್ತೇತಿ ಪ್ರಾಗುಕ್ತಮ್ । ತದಧುನಾ ಸುಖಾತ್ಮದೇಹಮಾದಾಯೇತಿ ದರ್ಶಯಿತುಂ ಪ್ರಪಂಚಯತಿ – **ಪ್ರಿಯಮಿತಿ** ॥ ಪ್ರಿಯಂ ವಿಷಯಾಭಿವ್ಯಕ್ತ ಸುಖಮ್ । ಏವಮುತ್ತರತ್ರಾಪಿ ಮೋದ-ಪ್ರಮೋದಾನಂದಮುತ್ಪದ್ಯೈಃ ಸುಖಾವಸ್ಥಾವಿಶೇಷಾಃ ಕಥ್ಯಂತೇ । ಅತೋ ನ ಪೌನರುಕ್ತ್ಯಮ್ । ತಸ್ಯಪ್ರಿಯಮೇವಶಿರ ಇತ್ಯತ್ರ ಶಿರಃಪದಸ್ಯಾರ್ಥಕಥನಂ ಶ್ರೋತ್ರನೇತ್ರೇತ್ಯಾದಿ । ಹಿ ಯಸ್ಮಾಚ್ಛಿರಃ-ಪದಂ ಕೇಶಾದಿಕಂಠಾಂತಾಂಗಸ್ಯ ವಾಚಕಮ್ । ಅನ್ಯಥಾ ಕಂಠಸ್ಯ ಶಿರೋಧರಾಭಿಧಾಯಕ-ಕಂಧರಾಭಿಧಾ ಚ ನ ಸ್ಯಾದಿತಿ ಭಾವಃ ॥ ೨೬೬ ॥

**ವಿವರಣೆ–** ಹಿಂದೆ ಆನಂದಮಯಾಧಿಕರಣವನ್ನು ಪ್ರಸ್ತಾಪಿಸಿ ಬ್ರಹ್ಮನ ನಿರಾಕಾರತ್ವವನ್ನು ನಿರಾಕರಣೆ ಮಾಡಿದ್ದರು. ಈಗ ಅದೇ ಅಧಿಕರಣವನ್ನು ಅವಲಂಬಿಸಿ ಬ್ರಹ್ಮನಿಗೆ ಸುಖಮಯವಾದ ದೇಹವು ಇದೆ ಎಂದು ಸಮರ್ಥಿಸಿ ನಿರಾಕಾರತ್ವವನ್ನು ನಿರಾಕರಣೆ

ಮಾಡುತ್ತಾರೆ. ಪ್ರಿಯ ಎಂದರೆ ವಿಷಯಭೋಗದಿಂದ ಅಭಿವ್ಯಕ್ತವಾದ ಸುಖ. ಹೀಗೆ, ಮೋದ, ಪ್ರಮೋದ, ಆನಂದ ಮತ್ತು ಮುತ್ ಶಬ್ದಗಳು ಸುಖವಿಶೇಷವನ್ನು ಹೇಳುತ್ತವೆ. ಆದ್ದರಿಂದ ಎಲ್ಲೂ ಪೌನವೃತ್ಯವಿಲ್ಲ. 'ತಸ್ಯ ಪ್ರಿಯಮೇವ ಶಿರಃ' ಎಂಬುದು ತೈತ್ತಿರೀಯ ಉಪನಿಷತ್ತಿನ ವಾಕ್ಯ. ಆದ್ದರಿಂದ ಶಿರಃಶಬ್ದಿತವಾದ ಕಂಠದಿಂದ ಕೇಶದವರೆಗಿನ ಭಾಗವು ಸುಖಮಯವಾದುದು ಎಂದು ತಿಳಿಯುತ್ತದೆ.

**ಮೋದಪ್ರಮೋದೌ ದೋರ್ದ್ವಂದ್ವಂ ಪಾರ್ಶ್ವದ್ವಂದ್ವಂ ಕಿಲ ಪ್ರಭೋಃ ।**
**ದಕ್ಷಿಣೋತ್ತರಹಸ್ತೌ ಹಿ ಮಧ್ಯಪಕ್ಷೌ ವಿದುರ್ಬುಧಾಃ ॥ ೨೬೭ ॥**

**ಅರ್ಥ–** ಪ್ರಭೋಃ = ಭಗವಂತನ, ದೋರ್ದ್ವಂದ್ವಂ = ಎರಡು ತೋಳುಗಳ ರೂಪದಲ್ಲಿರುವ, ಮೋದಪ್ರಮೋದೌ = ಮೋದ ಮತ್ತು ಪ್ರಮೋದಗಳು, ಮಧ್ಯದೇಹಸ್ಯ = ಶರೀರದ ಮಧ್ಯಭಾಗದ, ಪಾರ್ಶ್ವದ್ವಂದ್ವಂ = ಎರಡು ಪಕ್ಕಗಳಲ್ಲಿ ಇರುವಂತಹವು, ಕಿಲ = ಆಗಿವೆಯಷ್ಟೆ. ಬುಧಾಃ= ಜ್ಞಾನಿಗಳು, ದಕ್ಷಿಣೋತ್ತರಹಸ್ತೌ = ದಕ್ಷಿಣ ಹಸ್ತ ಮತ್ತು ಉತ್ತರ ಹಸ್ತಗಳನ್ನು, ಮಧ್ಯಪಕ್ಷೌ = ಮಧ್ಯದೇಹದ ಪಾರ್ಶ್ವದಲ್ಲಿ ಇರುವಂತಹವು, ಇತಿ = ಎಂದು, ವಿದುಃ = ತಿಳಿಯುತ್ತಾರಷ್ಟೆ.

**ಅನುವಾದ–** ಮೋದಪ್ರಮೋದಗಳು ಪ್ರಭುವಿನ ಎರಡು ಬಾಹುಗಳು. ಅವು ಮಧ್ಯದೇಹದ ಎರಡು ಪಾರ್ಶ್ವದಲ್ಲಿ ಇವೆ. ಜ್ಞಾನಿಗಳಾದವರು ದಕ್ಷಿಣೋತ್ತರ ಹಸ್ತಗಳನ್ನು ಮಧ್ಯದೇಹದ ಪಾರ್ಶ್ವದಲ್ಲಿವೆ ಎಂದು ಹೇಳುತ್ತಾರಷ್ಟೇ?

**ಭಾವವಿಲಾಸಿನೀ–** ದಕ್ಷಿಣೋತ್ತರಪಕ್ಷೌ ಕಾವಿತ್ಯತ ಉಕ್ತಂ ದೋರ್ದ್ವಂದ್ವಮಿತಿ । ದಕ್ಷಿಣೋತ್ತರ ಹಸ್ತಾವೇವದಕ್ಷಿಣೋತ್ತರಪಕ್ಷಪದವಾಚ್ಯಾವಿತಿ ಭಾವಃ । ಹಿ ಯಸ್ಮಾತ್ ದಕ್ಷಿಣೋತ್ತರ-ಹಸ್ತೌ ಮಧ್ಯಪಕ್ಷೌ ಆತ್ಮಪದೋದಿತಮಧ್ಯಾಂಗಪಕ್ಷೌ । ತದುಭಯಪಾರ್ಶ್ವೇಸ್ಥಿತತ್ವಾತ್ । ತಸ್ಮಾದಿತಿ ಪೂರ್ವೇಣಾನ್ವಯಃ । ಪೃಷ್ಠಪಾರ್ಶ್ವಾಗ್ರಪ್ರದೇಶಾ ಹಿ ಮಿಲಿತ್ವಾ ಮಧ್ಯಾಂಗಮಿತ್ಯುಚ್ಯಂತೇ । ಅತಃ ಪ್ರಸಿದ್ಧಪಾರ್ಶ್ವಸ್ಯ ಮಧ್ಯಾಂಗ ಏವಾಂತರ್ಭಾವಾತ್ ತಸ್ಯಪಕ್ಷೌ ಹಸ್ತಾವೇವ ಭವೇತಾಮಿತಿ ಭಾವಃ ॥ ೨೬೭ ॥

**ವಿವರಣೆ–** ದಕ್ಷಿಣೋತ್ತರ ಪಕ್ಷಗಳು ಯಾವುವು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ದಕ್ಷಿಣೋತ್ತರ ಹಸ್ತಗಳೇ ದಕ್ಷಿಣೋತ್ತರ ಪಕ್ಷಗಳು. ಪೃಷ್ಠ (ಬೆನ್ನು), ಪಾರ್ಶ್ವ (ಪಕ್ಕೆ) ಮತ್ತು ಉದರ, ನಾಭಿ ಮತ್ತು ಉರಸ್ ಇದು ಮಧ್ಯಾಂಗವೆನಿಸುತ್ತದೆ. ಇದರ ಎರಡೂ ಪಕ್ಕದಲ್ಲಿ ಎರಡು ಕೈಗಳಿವೆ. ಆದ್ದರಿಂದ ಎರಡು ಹಸ್ತಗಳನ್ನು ಮಧ್ಯಾಂಗಪಕ್ಷವೆಂದು ಕರೆಯುತ್ತಾರೆ. ಆ ಎರಡು ಹಸ್ತಗಳೂ ಸಹ ಮೋದಪ್ರಮೋದ-ರೂಪವಾದ ಸುಖವಿಶೇಷರೂಪವಾದವುಗಳು.

**ಆನಂದಃ ಕಿಲ ಮಧ್ಯೋರಃಸ್ಥಲನಾಭ್ಯುದರಾದಿಕಂ ।**
**ಆತ್ಮಶಬ್ದೋದಿತಂ ರೂಪಮೇತಾವದ್ಧಿ ವಿನಿಶ್ಚಿತಂ ॥ ೨೬೮ ॥**

**ಅರ್ಥ–** ಅಸ್ಯ = ಈ ಪರಮಾತ್ಮನ, ಮಧ್ಯೋರಃಸ್ಥಲನಾಭ್ಯುದರಾದಿಕಂ = ಮಧ್ಯ = ಶರೀರ ಮಧ್ಯಭಾಗದ ರೂಪವಾದ, ಉರಃಸ್ಥಲ = ಎದೆ, ನಾಭಿ = ಹೊಕ್ಕಳು, ಉದರ = ಹೊಟ್ಟೆ, ಆದಿಕಂ = ಇವೇ ಮೊದಲಾದ ಶರೀರ ಭಾಗವು (ಆದಿ ಪದದಿಂದ ಪಕ್ಕೆಲಬುಗಳು ಮತ್ತು ನಿತಂಬವನ್ನು ತೆಗೆದುಕೊಳ್ಳಬೇಕು.) ಆನಂದಃ ಕಿಲ = ಆನಂದ ರೂಪವಾಗಿದೆಯಷ್ಟೆ ಏತಾವತ್ = ಮೇಲೆ ಹೇಳಿದ, ರೂಪಮ್ = ಶರೀರ ಮಧ್ಯಭಾಗವು, ಆತ್ಮಶಬ್ದೋದಿತಂ – ಆತ್ಮಶಬ್ದ = ಆತ್ಮಶಬ್ದದಿಂದ, ಉದಿತಂ = ಹೇಳಲ್ಪಟ್ಟಿದ್ದು, ಇತಿ = ಎಂಬುದು, ವಿನಿಶ್ಚಿತಂ ಹಿ = ನಿಶ್ಚಿತವಾಗಿದೆಯಷ್ಟೆ.

**ಅನುವಾದ–** ದೇಹದ ಮಧ್ಯಭಾಗವು ಆನಂದ ಎಂದುಹೇಳಲ್ಪಟ್ಟಿದೆ. ಆತ್ಮಶಬ್ದವು ಮಧ್ಯದೇಹವನ್ನು ಹೇಳುತ್ತದೆ. ಮಧ್ಯದೇಹವೆಂದರೆ, ವಕ್ಷಸ್ಥಲ, ನಾಭಿ, ಉದರ ಮತ್ತು ಬೆನ್ನಿನ ಪ್ರದೇಶವಷ್ಟೇ. ವಕ್ಷಸ್ಥಲ ಮೊದಲಾದ ಮಧ್ಯದೇಹವೂ ಕೂಡ ಆನಂದರೂಪವಾದುದು. ಆದ್ದರಿಂದ, ಶಿರಸ್ಸು, ಎರಡು ಬಾಹುಗಳು ಮತ್ತು ಮಧ್ಯದೇಹ ಎಲ್ಲವೂ ಕೂಡ ಸುಖಮಯವಾಗಿವೆ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಆನಂದ ಆತ್ಮೇತ್ಯಸ್ಯಾರ್ಥಕಥನಮಾನಂದಃ ಕಿಲೇತ್ಯಾದಿ । ಆದಿಪದೇನ ಪಾರ್ಶ್ವಯೋಃ ಪೃಷ್ಠಸ್ಯ ಚ ಗ್ರಹಣಮ್ । ಹಿ ಯಸ್ಮಾದಿತ್ಯಾದಿಕಂ ಪೂರ್ವವತ್ ॥ ೨೬೮ ॥

**ಬೃಹತ್ಸುಖಂ ಕಿಲಾऽಸ್ಯಾಂಘ್ರಿಜಂಘೋರುಕಟಿಪೂರ್ವಕಂ ।**
**ಮುದಃ ಪ್ರಮುದ ಇತ್ಯುಕ್ತಾ ಮುದತ್ರೋಕ್ತಾ ಸಮಾಖ್ಯಯಾ ।**
**ಇಯಮೇವ ಹಿ ಮಧ್ಯಸ್ಯ ಪುಚ್ಛಂ ಚ ಸ್ಥಿತಿಕಾರಣಂ ॥ ೨೬೯ ॥**

**ಅರ್ಥ–** ಅಸ್ಯ = ಪರಮಾತ್ಮನ, ಅಂಘ್ರಿಜಂಘೋರು ಕಟಿಪೂರ್ವಕಂ = ಅಂಘ್ರಿ = ಪಾದ, ಜಂಘ = ಮೊಣಕಾಲು, ಊರು = ತೊಡೆ, ಕಟಿ = ಸೊಂಟ, ಪೂರ್ವಕಂ = ಇವೇ ಮೊದಲಾದ (ಆದಿಪದದಿಂದ ಕಾಲಗಂಟುಗಳು, ಮಂಡಿಗಳು ಇವುಗಳನ್ನು ತೆಗೆದುಕೊಳ್ಳಬೇಕು.) ಶರೀರಂ = ಶರೀರವು, ಬೃಹತ್ಸುಖಂ = ಶ್ರೇಷ್ಠಸುಖವು, ಕಿಲ = ಆಗಿದೆಯಷ್ಟೆ. ಮುದಃ ಪ್ರಮುದ ಇತಿ = ಯತ್ರ ಆನಂದಾಶ್ಚ ಎಂಬಲ್ಲಿ ಉಕ್ತಾ = ಹೇಳಲ್ಪಟ್ಟ, ಮುತ್ = ಮುತ್ ಎಂಬ ಸುಖವು, ಅತ್ರ = ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬಲ್ಲಿ, ಸಮಾಖ್ಯಯಾ = ಸಮಾನಾರ್ಥದ ರೂಪದಿಂದ (ವಿಶೇಷ್ಯದ ರೂಪದಿಂದ), ಉಕ್ತಾ = ಹೇಳಲ್ಪಟ್ಟಿದೆ. ಚ = ಮತ್ತು, ಮಧ್ಯಸ್ಯ = ಶರೀರ ಮಧ್ಯಭಾಗದ, ಪುಚ್ಛಂ = ಕೆಳಗಡೆ ಇರುವ ಶರೀರಭಾಗವು, ಇಯತ್ ಏವ = ಇಷ್ಟು ಅಂಶವೇ, ಸ್ಥಿತಿಕಾರಣಂ ಹಿ = ಶರೀರದ ಸ್ಥಿತಿಗೆ ಕಾರಣವಾಗಿದೆಯಷ್ಟೆ

**ಅನುವಾದ–** ಪುಚ್ಛ ಎಂದರೆ ದೇಹದ ಕೆಳಭಾಗ. ಪಾದ, ಜಾನು, ಜಂಘೆ, ಊರು, ಕಟಿ ಇಷ್ಟು ಪ್ರದೇಶವು ಸೇರಿದ ಭಾಗವನ್ನು ಪುಚ್ಛವೆಂದು ಕರೆಯುತ್ತಾರೆ. ಇದೂ ಸಹ ಪೂರ್ಣಸುಖರೂಪವಾಗಿದೆ. ಮುದಃ ಪ್ರಮುದಃ ಎಂಬ ವಾಕ್ಯದಲ್ಲಿ ಹೇಳಿದ ಮುತ್ ಎಂಬ ಸುಖವಿಶೇಷವು ಪುಚ್ಛರೂಪವಾಗಿದೆ ಅಥವಾ ಪುಚ್ಛವೇ ಮುತ್ ಎಂಬ ಸುಖವಿಶೇಷರೂಪವಾಗಿದೆ. ಪುಚ್ಛ ಎಂದರೆ ಸ್ಥಿತಿಕಾರಣ ಎಂದು ಅರ್ಥ. ಈ ಪ್ರದೇಶವೇ ಮಧ್ಯದೇಹದ ಸ್ಥಿತಿಗೆ ಕಾರಣವಾಗಿದೆಯಷ್ಟೇ?

**ಭಾವವಿಲಾಸಿನೀ–**ಬ್ರಹ್ಮಪುಚ್ಛಮಿತ್ಯಸ್ಯಾರ್ಥಮಾಹ–ಬೃಹತ್ಸುಖಮಿತಿ ॥ ಬ್ರಹ್ಮಶಬ್ದಸ್ಯಾರ್ಥಕಥನಂ ಬೃಹದಿತಿ । ತಸ್ಯಾಧ್ಯಾಹೃತವಿಶೇಷ್ಯಸ್ವರೂಪಕಥನಂ ಸುಖಮಿತಿ । ಮುದಾಖ್ಯಂ ಸುಖಮಿತ್ಯರ್ಥಃ । ಅಸ್ಯಾನಂದಮಯಸ್ಯ । ಪುಚ್ಛಪದಸ್ಯಾರ್ಥಕಥನಮಂಘ್ರೀತ್ಯಾದಿ । ಪೂರ್ವಪದೇನ ಗುಲ್ಫ ಜಾನುಮೇಢ್ರಾದೀನಾಂ ಗ್ರಹಣಮ್ । ಪ್ರತಿಷ್ಠಾಪದಸ್ಯಾರ್ಥಕಥನಂ ಸ್ಥಿತಿಕಾರಣಮಿತಿ । ಪ್ರಕರ್ಷೇಣ ತಿಷ್ಠತ್ಯನೇನೇತಿ ವ್ಯುತ್ಪತ್ತ್ಯಾ ಪ್ರತಿಷ್ಠಾಸ್ಥಿತಿಕಾರಣಮಿತ್ಯರ್ಥಃ । ಅಧೋಭಾಗಾಂಗತ್ವಾತ್ಪುಚ್ಛಮಿತಿ ಚ ಪಾದಸ್ಯೈವ ನಾಮ ॥ ೨೬೯ ॥

**ವಿವರಣೆ–** 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬುದು ತೈತ್ತಿರೀಯ ಶ್ರುತಿಯ ವಾಕ್ಯ. ಇಲ್ಲಿ ಬ್ರಹ್ಮ ಶಬ್ದಕ್ಕೆ ಬೃಹತ್‌ಪೂರ್ಣ ಎಂದು ಅರ್ಥ. ವಿಶೇಷ್ಯವನ್ನು ಹೇಳಿಲ್ಲ. ಮುತ್ ಎಂಬ ಸುಖವನ್ನು ಇಲ್ಲಿ ವಿಶೇಷ್ಯವಾಗಿ ತೆಗೆದುಕೊಳ್ಳಬೇಕು. ಏಕೆಂದರೆ 'ಯತ್ರ ಆನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ' ಎಂಬ ಶ್ರುತಿವಾಕ್ಯದಲ್ಲಿ ಆನಂದ, ಮೋದ, ಪ್ರಮೋದ, ಮುತ್, ಈ ನಾಲ್ಕು ಸುಖವಿಶೇಷಗಳನ್ನು ಹೇಳಿದ್ದಾರೆ. ಅದರಲ್ಲಿ ಆನಂದ, ಮೋದ ಪ್ರಮೋದಗಳನ್ನು ತೆಗೆದುಕೊಂಡಿದ್ದಾಗಿದೆ. ಉಳಿದಿರುವುದು ಮುತ್. ಆದ್ದರಿಂದ ಅದನ್ನು ವಿಶೇಷ್ಯವಾಗಿ ತೆಗೆದುಕೊಳ್ಳಬೇಕು. ಕಟಿಯಿಂದ ಹಿಡಿದು ಪಾದದವರೆಗೆ ಇರುವ ಭಾಗವು ಸುಖವಿಶೇಷಮಯವಾದುದು ಎಂದೇ ಸಿದ್ಧವಾಯಿತು. ಆದ್ದರಿಂದ ಬ್ರಹ್ಮನ ಸರ್ವದೇಹವೂ ಸುಖಮಯವಾಗಿದೆ. ಸುಖಮಯವಾದ ಶಿರಸ್ಸು, ಸುಖಮಯವಾದ ಮಧ್ಯದೇಹ, ಸುಖಮಯವಾದ ಪಾದಗಳು, ಸುಖಮಯವಾದ ಬಾಹುಗಳು ಎಲ್ಲವೂ ಸುಖಮಯ ಎಂದು ಸಿದ್ಧವಾಗುತ್ತದೆ.

ಪ್ರಿಯಮೋದಪ್ರಮೋದಾನಂದಾತ್ಮೋರ್ಧ್ವಾಂಗಸ್ಯ ಪಾದಪಿ ।
ಸಜಾತೀಯೋ ಯತೋಽವಶ್ಯಂ ತತೋ ಬ್ರಹ್ಮ ಬೃಹತ್ಸುಖಮ್ ॥ ೨೭೦ ॥

**ಅರ್ಥ–** ಯತಃ = ಯಾವ ಕಾರಣದಿಂದ, ಪ್ರಿಯಮೋದಪ್ರಮೋದಾನಂದಾತ್ಮೋರ್ಧ್ವಾಂಗಸ್ಯ – ಪ್ರಿಯ, ಮೋದ, ಪ್ರಮೋದ, ಆನಂದಗಳೇ ಸ್ವರೂಪವಾಗಿವುಳ್ಳ, ಉರ್ಧ್ವಾಂಗಸ್ಯ = ಶರೀರದ ಮೇಲ್ಭಾಗದ, ಪಾದಪಿ = ಪಾದವೂ ಕೂಡ, ಸಜಾತೀಯಃ = ಸದೃಶವಾದದ್ದು, ಅವಶ್ಯಂ= ಅವಶ್ಯಕವಾಗಿ, ಸ್ಯಾತ್ = ಆಗಿರುತ್ತದೋ, ತತಃ = ಆದ್ದರಿಂದ, ಬ್ರಹ್ಮ = ಪರಬ್ರಹ್ಮನು, ಬೃಹತ್ಸುಖಂ = ಶ್ರೇಷ್ಠಸುಖರೂಪನು ಆಗಿದ್ದಾನೆ.

**ಅನುವಾದ–** ಯಾವ ವ್ಯಕ್ತಿಗೆ ಊರ್ಧ್ವಭಾಗವು ಪ್ರಿಯಮೋದಪ್ರಮೋದ ಆನಂದರೂಪವಾದ ಸುಖವಿಶೇಷರೂಪವಾಗಿದೆಯೋ ಅವನಿಗೆ ಪಾದವೂ ಅದಕ್ಕೆ ಸಜಾತೀಯವಾಗಿರಬೇಕಷ್ಟೇ. ಆದ್ದರಿಂದ ಆನಂದಮಯನಾದ ಬ್ರಹ್ಮನ ಪಾದವೂ ಪೂರ್ಣಸುಖರೂಪವಾಗಿಯೇ ಇದೆ.

**ಭಾವವಿಲಾಸಿನೀ–** ಬ್ರಹ್ಮಪುಚ್ಛಮಿತ್ಯೇವ ಶ್ರುತೌ ಶ್ರವಣಾತ್ ಬೃಹತ್ಸುಖಂ ಪುಚ್ಛಮಿತಿ ಕಥಂ ವ್ಯಾಖ್ಯಾನಮಿತ್ಯತ ಆಹ – ಪ್ರಿಯೇತಿ ॥ ಪ್ರಿಯಮೋದಪ್ರಮೋದಾನಂದಾ ಏವಾತ್ಮಾ ಸ್ವರೂಪಂ ಯಸ್ಯ ತಚ್ಚ ತದೂರ್ಧ್ವಾಂಗಂ ಚ ತಸ್ಯ । ಪಾತ್ ಪಾದಃ । ಯತಃ ಯಸ್ಮಾತ್ । ತತಸ್ತಸ್ಮಾತ್ । ಬ್ರಹ್ಮಪದೇನೋಕ್ತಂ ವಸ್ತು ಬೃಹತ್ಸುಖಮೇವ । ಯೋಗ್ಯತಯಾವಿಶೇಷ್ಯಾಧ್ಯಾಹಾರ ಇತಿ ಭಾವಃ । ಹಿ ಯಸ್ಮಾತ್ ಪ್ರಿಯಮೋದಪ್ರಮೋದಾನಂದಾದಿ ಸರ್ವಮೂರ್ಧ್ವಾಂಗಂ ಸುಖಮ್ । ತಸ್ಮಾದಿತಿ ಪೂರ್ವೇಣಾನ್ವಯಃ । ತದೂರ್ಧ್ವಾಂಗಂ ಹಿ ಯಸ್ಮಾದಾನಂದಮಯ ಇತ್ಯತ್ರ ಪ್ರಾಚುರ್ಯಾರ್ಥಮಯಟ್‌ಪ್ರತ್ಯಯೇನ ವಾಚ್ಯಮ್ । ತಸ್ಮಾದಿದಮಪಿ ಬೃಹತ್ಸುಖಂ ಭವೇದಿತಿ ಸಂಬಂಧಃ ॥ ೨೭೦ ॥

**ವಿವರಣೆ–** ಶ್ರುತಿಯಲ್ಲಿ ಬ್ರಹ್ಮಪುಚ್ಛಂ ಎಂದಿಷ್ಟೇ ಇರುವಾಗ ಬೃಹತ್‌ಸುಖಂಪುಚ್ಛಂ ಎಂದು ಹೇಗೆ ವ್ಯಾಖ್ಯಾನ ಮಾಡಿದ್ದೀರಿ ಎಂಬುವುದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಪ್ರಿಯಮೋದಪ್ರಮೋದ ಆನಂದಗಳನ್ನು ಶಿರ ಆದಿ ಮಧ್ಯದೇಹದವರೆಗೆ ಹೇಳಿರುವುದರಿಂದ ಯೋಗ್ಯವಾದುದರಿಂದ ಮುತ್ ಎಂಬ ವಿಶೇಷ್ಯವನ್ನು ಅಧ್ಯಾಹಾರ ಮಾಡುತ್ತೇವೆ. ಸುಖಮಯವಾದ ಊರ್ಧ್ವದೇಹವಿರುವವನಿಗೆ ಅದಕ್ಕೆ ಸಜಾತೀಯವಾದ ಅಧೋದೇಹವೇ ಇರಬೇಕಷ್ಟೇ.

**ಪ್ರಿಯಮೋದಪ್ರಮೋದಾನಂದಾದಿ ಸರ್ವಂ ಸುಖಂ ಹಿ ತತ್ ।**
**ಪ್ರಾಚುರ್ಯಾರ್ಥಮಯಡ್ವಾಚ್ಯಂ ಸರ್ವಂ ಪೂರ್ಣಂ ಚ ತತ್ ಕಿಲ ॥೨೭೧॥**

**ಅರ್ಥ–** ತತ್ = ಆ, ಪ್ರಿಯಮೋದಪ್ರಮೋದಾನಂದಾದಿ = ಪ್ರಿಯ, ಮೋದ, ಪ್ರಮೋದ, ನಂದ ಇವೇ ಮೊದಲಾದ, ಸರ್ವಂ = ಎಲ್ಲವೂ ಕೂಡ, ಸುಖಂ ಹಿ = ಸುಖವಾಗಿದೆಯಷ್ಟೆ ತತ್ = ಆ, ಪ್ರಾಚುರ್ಯಾರ್ಥಮಯಡ್ವಾಚ್ಯಂ = ಪ್ರಾಚುರ್ಯ ಎಂಬ ಅರ್ಥವನ್ನು ಕೊಡುವ ಮಯಟ್ ಪ್ರತ್ಯಯ ವಾಚ್ಯವಾದ, ಸರ್ವಂ = ಎಲ್ಲವೂ ಕೂಡ, ಪೂರ್ಣಂ ಚ = ಪೂರ್ಣವೂ ಕೂಡ ಆಗಿದೆ.

**ಅನುವಾದ–** ಪ್ರಿಯಮೋದಪ್ರಮೋದ ಆನಂದ ಇವೆಲ್ಲವೂ ಸುಖಗಳಾಗಿವೆ. ಪ್ರಾಚುರ್ಯಾರ್ಥವಾದ ಮಯಟ್ ಪ್ರತ್ಯಯದಿಂದ ವಾಚ್ಯವಾದ ಇವೆಲ್ಲವೂ ಪೂರ್ಣವಾಗಿಯೇ ಇವೆ ಎಂದು ಸಿದ್ಧವಾಗುತ್ತವೆ.

**ವಿವರಣೆ–** ಆನಂದಮಯ ಎಂಬಲ್ಲಿ ಮಯಟ್ ಶಬ್ದವು ಪ್ರಾಚುರ್ಯಾರ್ಥವನ್ನು ಹೊಂದಿದೆ. ಆದ್ದರಿಂದ ಆನಂದಮಯನ ಅವಯವಗಳಾದ ಶಿರಸ್ಸು, ಪಕ್ಷಗಳು, ಮಧ್ಯದೇಹ, ಪುಚ್ಛಗಳೆಲ್ಲವೂ ಪ್ರಿಯಾದಿ ಸುಖರೂಪವಾಗಿದ್ದು, ಎಲ್ಲವೂ ಮಯಟ್ ಶಬ್ದವಾಚ್ಯವಾದ ಪೂರ್ಣತ್ವವನ್ನೇ ಹೊಂದಿವೆ. ಊರ್ಧ್ವಾಂಗವೆಲ್ಲವೂ ಪೂರ್ಣಸುಖ-ರೂಪವಾಗಿರುವಾಗ ಪುಚ್ಛವೂ ಕೂಡ ಪೂರ್ಣಸುಖವಾಗಿಯೇ ಇರಬೇಕು. ಆದ್ದರಿಂದ ಮುತ್ ಎಂಬ ಸುಖವಿಶೇಷರೂಪವಾದ ಪಾದವೂ ಪೂರ್ಣವಾಗಿದೆ ಎಂದೇ ಸಿದ್ಧವಾಗುತ್ತದೆ.

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ ॥ ೨೮೨ ॥**

**ಇತಿ ಪಂಚವಿಧಾನಂದಂ ಮುಕ್ತೌ ವಕ್ತಿ ಯತಃ ಶ್ರುತಿಃ ।**
**ಅತೋತ್ರಾಪಿ ಬ್ರಹ್ಮಪದಂ ಮುನ್ನಾಮಸುಖಸೂಚಕಂ ॥ ೨೮೩ ॥**

**ಅರ್ಥ–** ಯತ್ರ = ಎಲ್ಲಿ, ಆನಂದಾಃ ಚ = ಆನಂದಗಳೂ, ಮೋದಾಶ್ಚ = ಮೋದಗಳೂ ಕೂಡ, ಮುದಃ = ಮುದವೂ ಕೂಡ, ಪ್ರಮುದಃ = ಪ್ರಮುದವೂ ಕೂಡ, ಆಸತೇ = ಇವೆಯೋ, ಯತ್ರ = ಎಲ್ಲಿ, ಕಾಮಸ್ಯ = ಅಪೇಕ್ಷೆಯ ಕಾಮಾಃ = ವಿಷಯಗಳು, ಆಪ್ತಾಃ = ಹೊಂದಲ್ಪಟ್ಟಿವೆಯೋ, ತತ್ರ = ಅಲ್ಲಿ, ಮಾಮ್ = ನನ್ನನ್ನು, ಅಮೃತಂ = ಮುಕ್ತನನ್ನಾಗಿ, ಕೃಧಿ = ಮಾಡು. ಇತಿ = ಈ ರೀತಿಯಾಗಿ, ಮುಕ್ತೌ = ಮುಕ್ತಿಯಲ್ಲಿ, ಪಂಚವಿಧಾನಂದಂ = ಐದು ಬಗೆಯ ಆನಂದವನ್ನು, ಶ್ರುತಿಃ = ವೇದವಾಕ್ಯವು, ಯತಃ = ಯಾವಕಾರಣದಿಂದ, ವಕ್ತಿ = ಹೇಳುತ್ತಿದೆಯೊ, ಅತಃ = ಆ ಕಾರಣದಿಂದಾಗಿ, ಅತ್ರ = ಬ್ರಹ್ಮನನ್ನು ಆನಂದಮಯನೆಂದು ಹೇಳುವ ಶ್ರುತಿಯಲ್ಲಿ ಕೂಡ, ಬ್ರಹ್ಮಪದಂ = ಬ್ರಹ್ಮ ಎಂಬ ಶಬ್ದವು, ಮುತ್‌ನಾಮ = ಮುತ್ ಎಂಬ ಹೆಸರಿನ, ಸುಖಸೂಚಕಮ್ = ಸುಖಕ್ಕೆ ಲಕ್ಷಣಾವೃತ್ತಿಯಿಂದ ಸೂಚಕವಾಗಿದೆ.

**ಅನುವಾದ–** ಎಲ್ಲಿ ಆನಂದಗಳೂ, ಮೋದಗಳೂ, ಮುದಗಳೂ, ಮತ್ತು ಪ್ರಮುದಗಳೂ ಇವೆಯೋ, ಎಲ್ಲಿ ಕಾಮ್ಯವಾದ ಎಲ್ಲ ವಿಷಯಗಳೂ ಹೊಂದಲ್ಪಡುತ್ತವೆಯೋ ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಈ ರೀತಿಯಾಗಿ ಶ್ರುತಿಯು ಮುಕ್ತಿಯಲ್ಲಿ ಐದು ವಿಧವಾದ ಆನಂದವನ್ನು ಹೇಳುವುದರಿಂದ ಇಲ್ಲಿಯೂ ಸಹ ಬ್ರಹ್ಮಪದವು ಮುತ್ ನಾಮಕವಾದ ಸುಖವನ್ನೇ ಸೂಚಿಸುತ್ತದೆ.

**ಭಾವವಿಲಾಸಿನೀ–** ಬ್ರಹ್ಮಶಬ್ದಸ್ಯ ಮುದಾತ್ಮಕಸುಖಸೂಚಕತ್ವೇ ಶ್ರುತಿಸಮಾಖ್ಯಾಂ ವದಂ-ಸ್ತತ್ಸೂಚಿತಯುಕ್ತಿಂ ಚಾಹ – **ಯತ್ರೇತಿ** ॥ ಯತ್ರ ಮುಕ್ತೌ । ಕಾಮಸ್ಯೇಚ್ಛಾಯಾಃ ಕಾಮ್ಯಂತ ಇತಿ ಕಾಮಾ ವಿಷಯಾಃ । ಏವಂ ಪಂಚವಿಧಾ ಆನಂದಾಶ್ಚ ಆಪ್ತಾ ಯಥಾಯೋಗ್ಯಂ ಪೂರ್ಣಾಃ । ತತ್ರಮಾಮಮೃತಂ ಕೃಧೀತಿ ಮಾಂ ಪ್ರತಿ ಮುಮುಕ್ಷೋಃಪ್ರಾರ್ಥನಮ್ । ಬಹುಮುಕ್ತ-

ಮಧ್ಯಾದಿಸ್ವರೂಪಭೂತಾನಂದಾನಾಮಪಿ ಬಹುತ್ವಾದ್ಬಹುವಚನಮ್ । ಅತೋ ಮೋಕ್ಷೇ ಪಂಚವಿಧಾನಂದಸ್ಯ ಶ್ರುತತ್ವಾತ್ । ಅತ್ರಾನಂದಮಯಶ್ರುತೌ । ಮುನ್ನಾಮಸುಖಸೂಚಕಮ್ ಮುದಿತಿನಾಮ ಯಸ್ಯ ತತ್ ತಚ್ಚತತ್ಸುಖಂ ಚ ತಸ್ಯ ಸೂಚಕಂ ಲಕ್ಷಣಯಾಪ್ರತಿಪಾದಕಮ್ ॥ ೨೭೨-೨೭೩ ॥

**ವಿವರಣೆ–** 'ಯತ್ರ ಆನಂದಾಶ್ಚ ಮೋದಾಶ್ಚ' ಎಂಬುದು ಶ್ರುತಿ. ಮುಮುಕ್ಷುವಾದವನು ಪವಮಾನನನ್ನು ಕುರಿತು ನನಗೆ ಇಂತಹ ಮೋಕ್ಷವನ್ನು ಕೊಡು ಎಂದು ಪ್ರಾರ್ಥಿಸುತ್ತಾನೆ. ಈ ಮೋಕ್ಷದಲ್ಲಿ ಪಂಚವಿಧವಾದ ಆನಂದಗಳು ಪ್ರಸ್ತುತವಾಗಿವೆ. ಆದ್ದರಿಂದ ಇಲ್ಲಿ ಬ್ರಹ್ಮಪದವು ಲಕ್ಷಣಾವೃತ್ತಿಯಿಂದ ಮುತ್ ಎಂಬ ಸುಖವಿಶೇಷವನ್ನೇ ಹೇಳುತ್ತದೆ.

**ಪ್ರತಿಬಿಂಬಸಮಾಕಾರಂ ಬಿಂಬಂ ಕಿಂ ನಾವಲಂಬತೇ ।**
**ಅತಃ ಸಮಾಸಮೋಕ್ತ್ಯಾ ಚ ಮುಚ್ಚ ಮುಂಚತಿ ನಾಚ್ಯುತಮ್ ॥ ೨೭೪ ॥**

**ಅರ್ಥ–** ಬಿಂಬಮ್ = ಬಿಂಬವು, ಪ್ರತಿಬಿಂಬಸಮಾಕಾರಂ = ಪ್ರತಿಬಿಂಬಕ್ಕೆ ಸದೃಶವಾದ ಆಕಾರವನ್ನು, ನ ಅವಲಂಬತೇ ಕಿಂ = ಹೊಂದಿರುವುದಿಲ್ಲವೇ, ಅತಃ = ಆದ್ದರಿಂದ, ಸಮಾಸಮೋಕ್ತ್ಯಾ ಚ = ಸಂವಾದಬರುವುದರಿಂದ, ಮುತ್ ಚ = ಮುತ್ ಎಂಬ ಸುಖವು, ಅಚ್ಯುತಂ = ಭಗವಂತನನ್ನು, ನ ಮುಂಚತಿ= ಬಿಡುವುದಿಲ್ಲ.

**ಅನುವಾದ–** ಬಿಂಬವು ಪ್ರತಿಬಿಂಬಕ್ಕೆ ಸಮಾನವಾದ ಆಕಾರವನ್ನೇ ಹೊಂದಿರುತ್ತದೆಯಷ್ಟೇ. ಆದ್ದರಿಂದ ಸಂವಾದವಿರುವುದರಿಂದ ಮುತ್ ಎಂಬ ಸುಖವು ಬಿಂಬಕ್ಕೂ ಮತ್ತು ಪ್ರತಿಬಿಂಬಕ್ಕೂ ಸಮಾನವಾಗಿರುತ್ತದೆ. ಆದ್ದರಿಂದ ಮುತ್ ಎಂಬ ಸುಖವು ಎಂದೂ ಅಚ್ಯುತನನ್ನು ಬಿಡುವುದಿಲ್ಲ.

**ಭಾವವಿಲಾಸಿನೀ–** ಬಿಂಬಂ ಪ್ರತಿಬಿಂಬಸಮಾಕಾರಂ ಕಿಂ ನಾವಲಂಬತೇ । ಅವಲಂಬತ ಏವೇತಿ ಸಮಾಖ್ಯೋಪೋದ್ಬಲಿತಾಯುಕ್ತಿಃ । ಪ್ರತಿಬಿಂಬಭೂತೇಷು ಜೀವೇಷು ಏಷಾಮಾನಂದಾನಾ- ಮಪೇಕ್ಷಿತತ್ವೇ ಬಿಂಬಭೂತೇ ಪರಮಾತ್ಮನಿ ಸುತರಾಮಪೇಕ್ಷಿತತ್ವಾತ್ । ಕಿಂಚ ಯತ್ರೇತಿ ಮುಕ್ತೌ ಖಲ್ವೇಷಾಂ ಶ್ರವಣಮ್ । ತಚ್ಚ ತತ್ರತ್ಯಸ್ಯ ಹರೇರ್ಮುಕ್ತಾನಾಂ ಚ ಸಮಮೇವ । ಅತಃ ಸಮೋಕ್ತಿ- ರಿತ್ಯುಪಲಕ್ಷಣಮ್ । ಸಮಾ ಉಭಯೋರಪಿ ಸಾಮ್ಯೇನ ಪ್ರತಿಪಾದಿಕಾ ಉಕ್ತಿಶ್ಚೇತ್ಯಪಿ ಗ್ರಾಹ್ಯಮ್ । ಸಮೋಕ್ತಿಃ ಸಮಾಖ್ಯಾ । ಮುನ್ಮುದಾಖ್ಯಸುಖಮ್ । ಅಚ್ಯುತಂ ನ ಮುಂಚತಿ । ಪಾದರೂಪೇಣ ತಂ ಭಜೇದೇವ । ವಿಷಯಾಭಿವ್ಯಂಗ್ಯ ಸುಖತಯೋಕ್ತಸ್ಯಶಿರೋರೂಪಪ್ರಿಯಸ್ಯ । ಕಾಮಸ್ಯೇತ್ಯಾದಿ- ನೋಕ್ತತ್ವಾದವಯವತ್ರಯಸ್ಯಸ್ಥಲದ್ವಯೇಪ್ಯೇಕಪ್ರಕಾರೇಣೋಕ್ತತ್ವಾತ್ ಅವಶಿಷ್ಟಪುಚ್ಛಮೇವ ಮುತ್ಪದೇನೋಚ್ಯತ ಇತಿ ಭಾವಃ । ತಸ್ಮಾತ್ ಬ್ರಹ್ಮಪದಂ ಮುನ್ನಾಮಕಬೃಹತ್ಸುಖ ಪ್ರತಿಪಾದಕಮೇವೇತಿ ಭಾವಃ ॥ ೨೭೪ ॥

**ವಿವರಣೆ–** ಬಿಂಬವು ಪ್ರತಿಬಿಂಬದ ಸಮಾನಾಕಾರವನ್ನು ಹೊಂದಿರುತ್ತದೆ. ಬ್ರಹ್ಮನು ಬಿಂಬ ಮತ್ತು ಜೀವರು ಪ್ರತಿಬಿಂಬ. ಪ್ರತಿಬಿಂಬರಾದ ಜೀವರಲ್ಲಿ ಈ ಐದೂ ವಿಧದ ಆನಂದಗಳು ಅಪೇಕ್ಷಿತವಾಗಿವೆ. ಅಷ್ಟೇ ಅಲ್ಲದೆ, ಮೋಕ್ಷದಲ್ಲಿ ಈ ಐದೂ ವಿಧದ ಆನಂದಗಳು ಇವೆ ಎಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಜೀವನಲ್ಲಿ, ಮೋಕ್ಷದಲ್ಲಿ ಮುತ್ ಎಂಬ ಸುಖವು ಇರಲೇಬೇಕು. ಪ್ರತಿಬಿಂಬನಲ್ಲಿ ಅದು ಇರಬೇಕಾದರೆ, ಬಿಂಬನಲ್ಲಿ ಇರಲೇಬೇಕು. ಆದ್ದರಿಂದ ಆನಂದಮಯನ ಅವಯವವಾದ ಪುಚ್ಛದಲ್ಲಿ ಮುತ್ ಎಂಬ ಸುಖರೂಪತ್ವವನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಆದ್ದರಿಂದ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬಲ್ಲಿರುವ ಬ್ರಹ್ಮ ಶಬ್ದವು ಆನಂದಮಯನ ಪಾದಗಳಿಗೆ ಮುತ್ ಎಂಬ ಬೃಹತ್‌ಸುಖರೂಪತ್ವವನ್ನೇ ಪ್ರತಿಪಾದನೆ ಮಾಡುತ್ತದೆ.

**ಪಾದಾದಿಕೇಶಪರ್ಯಂತಮೇವಮಾನಂದರೂಪತಾಂ ।**
**ಶ್ರುತಿಸ್ತು ಸ್ಪಷ್ಟಮಾಚಷ್ಟ ಸೂತ್ರಕಾರೋಪ್ಯಸೂತ್ರಯತ್ ॥ ೨೭೫ ॥**

**ಅರ್ಥ–** ಶ್ರುತಿಸ್ತು = ಶ್ರುತಿಯಾದರೋ, ಏವಂ = ಈ ರೀತಿಯಾಗಿ ಬ್ರಹ್ಮನಿಗೆ, ಪಾದಾದಿಕೇಶಪರ್ಯಂತಮ್ = ಪಾದದಿಂದ ಆರಂಭಿಸಿ ಕೂದಲುಗಳ ತನಕ, ಆನಂದರೂಪತಾಂ = ಸುಖರೂಪತ್ವವನ್ನು, ಸ್ಪಷ್ಟಮ್ = ಸಂದೇಹಕ್ಕೆಡೆಯಿಲ್ಲದಂತೆ, ಆಚಷ್ಟ= ಹೇಳಿದೆ. ಸೂತ್ರಕಾರಃ ಅಪಿ = ಸೂತ್ರಕಾರರಾದ ವೇದವ್ಯಾಸರೂ ಕೂಡ, ಅಸೂತ್ರಯತ್= ಬ್ರಹ್ಮನು ಆನಂದಮಯನು ಎಂದು ಸೂತ್ರದ ರೂಪದಲ್ಲಿ ಪ್ರತಿಪಾದನೆ ಮಾಡಿದ್ದಾರೆ.

**ಅನುವಾದ–** ಶ್ರುತಿಯು ಸ್ಪಷ್ಟವಾಗಿ ಪಾದಾದಿಕೇಶಪರ್ಯಂತವೂ ಆನಂದ-ರೂಪವಾಗಿದೆ ಎಂದು ಹೇಳಿದೆ. ಸೂತ್ರಕಾರರೂ ಸಹ ಹಾಗೆಯೇ ಸೂತ್ರವನ್ನು ರಚನೆಮಾಡಿದ್ದಾರೆ.

**ಭಾವವಿಲಾಸಿನೀ–** ಸಾಕಾರತಾಮುಪಸಂಹರತಿ ॥ **ಪಾದಾದಿತಿ** ॥ ೨೭೫ ॥

**ವಿವರಣೆ–** ಬ್ರಹ್ಮನಿಗೆ ಸಾಕಾರತ್ವವು ಇದೆ ಎಂಬ ವಿಷಯವನ್ನು ಇಲ್ಲಿ ಉಪಸಂಹಾರಮಾಡುತ್ತಾರೆ. ತೈತ್ತಿರೀಯ ಶ್ರುತಿಯು ಆನಂದಮಯನಿಗೆ ಆಕಾರವನ್ನು ಉಪಪಾದನೆ ಮಾಡುತ್ತದೆ. ಸೂತ್ರಕಾರರು ಆನಂದಮಯನು ಬ್ರಹ್ಮ ಎಂದು ನಿರ್ಣಯ ಮಾಡುವುದರಿಂದ ಬ್ರಹ್ಮನು ಸಾಕಾರನಾದವನು ಎಂದೇ ಸಿದ್ಧವಾಗುತ್ತದೆ.

**ಮುಖ್ಯಾರ್ಥಸ್ಯ ಪರಿತ್ಯಾಗೇ ಪುಚ್ಛಂ ಬ್ರಹ್ಮೇತಿ ಗಚ್ಛತಿ ।**
**ಸಾ ನಿರ್ಣಿನಾಯ ಪುರುಷವಿಧ ಏವೇತಿ ತದ್ವಪುಃ ।**
**ಕೋಶಾತ್ಮದೇಹಸಾದೃಶ್ಯಸ್ಯೋಕ್ತೇಃ ಕೋಶಾಚ್ಚ ಭಿನ್ನತಾಂ ॥ ೨೭೬ ॥**

**ಅರ್ಥ–** ಮುಖ್ಯಾರ್ಥಸ್ಯ = ಇದಮೇವ ಶಿರಃ ಎಂಬಲ್ಲಿ ಶಿರಸ್‌ಶಬ್ದಕ್ಕೆ ಮುಖ್ಯಾರ್ಥವನ್ನು, ಪರಿತ್ಯಾಗೇ = ಬಿಟ್ಟುಕೊಟ್ಟರೆ, ಪುಚ್ಛಂ ಬ್ರಹ್ಮೇತಿ = ಬ್ರಹ್ಮಪುಚ್ಛಂ ಎಂಬಲ್ಲಿ ಪುಚ್ಛಶಬ್ದಕ್ಕೂ ಕೂಡ ಮುಖ್ಯಾರ್ಥವು, ಗಚ್ಛತಿ = ಹೊರಟು ಹೋಗುತ್ತದೆ. ಸಾ = ಆ ತೈತ್ತಿರೀಯ ಶ್ರುತಿಯು, ತದ್ವಪುಃ = ಆನಂದಮಯನ ಶರೀರವನ್ನು, ಪುರುಷವಿಧ ಏವ ಇತಿ = ಪುರುಷಶರೀರ ಸದೃಶ ಎಂದೇ, ನಿರ್ಣಿನಾಯ = ನಿರ್ಣಯ ಮಾಡಿದೆ, ಕೋಶಾತ್ಮದೇಹಸಾದೃಶ್ಯಸ್ಯ = ಕೋಶರೂಪವಾದ ಪುರುಷದೇಹಸಾದೃಶ್ಯದ, ಉಕ್ತೇಃ = ಹೇಳಿಕೆಯಿರುವುದರಿಂದ, ಆನಂದಮಯಸ್ಯ = ಆನಂದಮಯನಿಗೆ, ಕೋಶಾತ್ = ಕೋಶದಿಂದ, ಭಿನ್ನತಾಂ ಚ = ಭಿನ್ನತ್ವವನ್ನೂ ಕೂಡ, ನಿರ್ಣಿನಾಯ= ಶ್ರುತಿಯು ನಿರ್ಣಯಿಸಿದೆ.

**ಅನುವಾದ–** ಪ್ರಿಯಮೇವ ಶಿರಃ' ಎಂಬಲ್ಲಿ ಶಿರಸ್‌ಶಬ್ದಕ್ಕೆ ಮುಖ್ಯಾರ್ಥವನ್ನು ಪರಿತ್ಯಾಗಮಾಡಿದರೆ, 'ಬ್ರಹ್ಮಪುಚ್ಛಂ' ಎಂಬಲ್ಲಿ ಪುಚ್ಛಶಬ್ದಕ್ಕೂ ಮುಖ್ಯಾರ್ಥ ಪರಿತ್ಯಾಗಮಾಡಬೇಕಾಗುವುದರಿಂದ ಆನಂದಮಯ ಪುಚ್ಛನು ಬ್ರಹ್ಮ ಎಂದು ನಿನಗೆ ಅಭಿಮತವಾದ ಅರ್ಥವು ಸಿದ್ಧವಾಗುವುದಿಲ್ಲ. ತೈತ್ತಿರೀಯಶ್ರುತಿಯು 'ಸವಾ ಏಷ ಪುರುಷವಿಧ ಏವ' ಎಂದು ಹೇಳಿ ಆನಂದಮಯನ ಶರೀರವನ್ನು ಪುರುಷಶರೀರ ಸದೃಶ ಎಂದೇ ಹೇಳಿದೆ. ಕೋಶರೂಪವಾದ ಪುರುಷಸಾದೃಶ್ಯವನ್ನು ಹೇಳಿರುವುದರಿಂದ ಆನಂದಮಯನು ಕೋಶದಿಂದ ಭಿನ್ನ ಎಂದೂ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ನನು ಶಿರ ಇವ ಶಿರ ಇತಿ ಉಪಚಾರೇಣ ಶಿರಃಪದಪ್ರಯೋಗಾತ್ ಕಥಂ ಸಾಕಾರತೇತ್ಯತ ಆಹ – **ಮುಖ್ಯಾರ್ಥಸ್ಯೇತಿ** ॥ ತದಾ ಬ್ರಹ್ಮಶಬ್ದಸ್ಯಾಪ್ಯಮುಖ್ಯತ್ವ ಸಂಭವಾತ್ ಪುಚ್ಛಂ ಮುಖ್ಯತೋ ಬ್ರಹ್ಮೇತಿ ತ್ವದಭಿಲಷಿತಂ ನ ಸಿದ್ಧ್ಯೇತ್ । ತಸ್ಯಮುಖ್ಯತ್ವೇಽತ್ರಾಪಿ ಮುಖ್ಯತ್ವಂ ಸ್ಯಾತ್ । ತಥಾ ಚ ಸಾಕಾರತ್ವಸಿದ್ಧಿಃ । ಯುಕ್ತ್ಯಂತರಂ ಚಾಹ – **ಸೇತಿ** ॥ ಯಸ್ಮಾತ್ಸಾಶ್ರುತಿಃ । ಪುರುಷವಿಧ ಏವೇತಿನಿರ್ಣಿನಾಯ ಪುರುಷಾಕಾರತಾಂ ನಿಶ್ಚಿತವತೀ । ತತ್ತಸ್ಮಾತ್ತಚ್ಛಿರ ಆದಿಪದೇನ ವರ್ಣಿತಂ ವಸ್ತು ವಪುರೇವ ಶರೀರಮೇವ । ನ ಲಕ್ಷಣಾ । ತತ್ಪದಸ್ಯಚಾವೃತ್ತಿಃ । ದೂಷಣಾಂತರಂ ಚಾಹ – **ಕೋಶಾತ್ಮೇತಿ** ॥ ಕೋಶಾತ್ಮಾ ಪಂಚಕೋಶಾತ್ಮಾ ಯೋ ಜಡದೇಹಃ ಸ ಹಿ ಪುರುಷವಿಧ ಇತ್ಯತ್ರ ಪುರುಷಪದೇನೋಕ್ತಃ । ವಿಧೇತಿತತ್ಸಾದೃಶ್ಯೋಕ್ತೇಃ ಏವೇತಿ ಸಾದೃಶ್ಯಾವಧಾರಣಾಚ್ಚ ಕೋಶಾದ್ಭಿನ್ನತಾಮನುಪಚರಿತಾಕಾರಂ ಚ ನಿರ್ಣಿನಾಯ ಆನಂದಮಯಸ್ಯನಿಶ್ಚಿತವತೀ । ತಥಾ ಚ ಪುರುಷವಿಧ ಏವೇತಿ ಶ್ರುತ್ಯಾಽರ್ಥದ್ವಯಸಿದ್ಧಿರಿತಿ ಭಾವಃ ॥ ೨೭೬ ॥

**ವಿವರಣೆ–** 'ತಸ್ಯ ಪ್ರಿಯಮೇವ ಶಿರಃ' ಎಂದು ಉಪನಿಷತ್ ವಾಕ್ಯವಿದೆ. ಇಲ್ಲಿ ಶಿರಸ್ ಶಬ್ದಕ್ಕೆ ಶಿರಸ್ಸಿನಂತೆ ಇರುವುದು ಎಂದು ಅರ್ಥವನ್ನು ಮಾಡಿ ಉಪಚರಿತ ಅರ್ಥವನ್ನು ಇಟ್ಟುಕೊಂಡರೆ, ಆಗ ಸಾಕಾರತ್ವವು ಲಬ್ಧವಾಗುವುದಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಶಿರಸ್‌ಶಬ್ದವು ಶಿರಸ್ಸಿನಲ್ಲಿ ಮುಖ್ಯವಾಗಿದೆ. ಇಲ್ಲಿ ಅದನ್ನು ತೆಗೆದುಕೊಳ್ಳಲು

ಯಾವ ಬಾಧಕವೂ ಇಲ್ಲ. ಬಾಧಕವಿಲ್ಲದೇ ಮುಖ್ಯಾರ್ಥವನ್ನು ಪರಿತ್ಯಾಗ ಮಾಡುವುದಾದರೆ, 'ಬ್ರಹ್ಮಪುಚ್ಛಂ' ಎಂಬಲ್ಲಿ ಬ್ರಹ್ಮ ಶಬ್ದಕ್ಕೂ ಅಮುಖ್ಯಾರ್ಥವನ್ನು ತೆಗೆದುಕೊಂಡು ಪುಚ್ಛನು ಬ್ರಹ್ಮನಲ್ಲ ಎಂದು ಅಂಗೀಕಾರ ಮಾಡಬೇಕಾಗುತ್ತದೆ. ಇದು ನಿನಗೆ ಇಷ್ಟವಲ್ಲ. ಬ್ರಹ್ಮ ಶಬ್ದವು ಅಲ್ಲಿ ಮುಖ್ಯವಾದರೆ, ಇಲ್ಲಿ ಶಿರಸ್‌ಶಬ್ದವು ಮುಖ್ಯವೇ ಆಗಿದೆ. ಆದ್ದರಿಂದ ಸಾಕಾರತ್ವವು ಸಿದ್ಧವಾಗುತ್ತದೆ. ಅದೂ ಅಲ್ಲದೇ, ಶ್ರುತಿಯು 'ಸವಾ ಏಷ ಪುರುಷವಿಧ ಏವ' ಎಂದು ಹೇಳಿ ಆನಂದಮಯನಿಗೆ ಪುರುಷಾಕಾರತ್ವವನ್ನು ನಿರ್ಣಯಮಾಡಿದೆ. ಪುರುಷಾಕಾರವಿದ್ದ ಮೇಲೆ ಶಿರ ಆದಿ ಶಬ್ದಗಳಿಗೆ ಮುಖ್ಯಾರ್ಥವನ್ನೇ ತೆಗೆದುಕೊಳ್ಳಬೇಕು. ಲಕ್ಷಣಾವನ್ನು ಮಾಡಬಾರದು. ಇಲ್ಲಿ ಪುರುಷ ಎಂದರೆ ಕೋಶ ಎಂದು ಅರ್ಥ. ಪುರುಷವಿಧ ಎಂಬ ಶಬ್ದದಿಂದ ಕೋಶಸದೃಶ ಎಂಬ ಅರ್ಥವು ಲಭಿಸುತ್ತದೆ. ಏವ ಎಂಬ ಅವಧಾರಣದಿಂದ ಸಾದೃಶ್ಯವನ್ನೇ ಅವಧಾರಣೆ ಮಾಡುತ್ತದೆ. ಸಾದೃಶ್ಯವು ಯಾವಾಗಲೂ ಭೇದಘಟಿತವಾದುದು. ಆದ್ದರಿಂದ 'ಸವಾ ಏಷ ಪುರುಷವಿಧ ಏವ' ಎಂದು ಹೇಳುವ ಶ್ರುತಿಯು ಆನಂದಮಯನಿಗೆ ಕೋಶಸಾದೃಶ್ಯವನ್ನೂ ಮತ್ತು ಕೋಶದಿಂದ ಭೇದವನ್ನೂ ನಿರ್ಣಯ ಮಾಡುತ್ತದೆ. ಆದ್ದರಿಂದ ಪುರುಷವಿಧ ಏವ ಎಂಬ ಶ್ರುತಿಯಿಂದಲೇ ಸಾದೃಶ್ಯ ಮತ್ತು ಭೇದಗಳೆರಡೂ ಸಿದ್ಧವಾಗುತ್ತದೆ. ಆದ್ದರಿಂದ ಎಲ್ಲೂ ಲಕ್ಷಣಾ ಮಾಡಬೇಕಾದ ಪ್ರಸಂಗವಿಲ್ಲ.

**ಆಶಾಸಾನಸ್ಯ ತೇ ಕೋಶಾನ್ ಪಂಚಸ್ಥಾನ್ಯಾಂ ಚ ವಂಚಕ ।**
**ಶಿರಆದಿಪದಂ ಮುಖ್ಯಂ ಮುಖ್ಯಾಯೋಗೇ ಹಿ ಲಕ್ಷಣಾ ॥ ೨೭೭ ॥**

**ಅರ್ಥ–** ವಂಚಕ = ವಂಚಕನಾದ ಎಲೈ ಮಾಯಾವಾದಿಯೇ, ಪಂಚಸ್ಥಾನ್ಯಾಂ ಚ = ಐದು ಪ್ರಕರಣಗಳಲ್ಲಿಯೂ ಕೂಡ, ಕೋಶಾನ್ = ಕೋಶಗಳನ್ನೇ, ಆಶಾಸಾನಸ್ಯ = ಪ್ರತಿಪಾದ್ಯಗಳಾಗಿವೆ ಎಂದು ಹೇಳುತ್ತಿರುವ, ತೇ = ನಿನಗೆ, ಶಿರ ಆದಿಪದಂ = ಶಿರ ಮೊದಲಾದ ಪದವು, ಮುಖ್ಯಂ = ಮುಖ್ಯವಾಗಿವೆ. ಮುಖ್ಯಾಯೋಗೇ = ಶಬ್ದಕ್ಕೆ ಮುಖ್ಯಾರ್ಥವು ಕೂಡದಿದ್ದಾಗ ಮಾತ್ರ, ಲಕ್ಷಣಾ ಹಿ = ಲಕ್ಷಣಾವೃತ್ತಿಯು, ಸ್ವೀಕ್ರಿಯತೇ = ಸ್ವೀಕರಿಸಲ್ಪಡುತ್ತದೆ ಅಷ್ಟೆ.

**ಅನುವಾದ–** ಎಲೈ ವಂಚಕನೇ, ನೀನು ಐದು ಪ್ರಕರಣಗಳಲ್ಲಿಯೂ ಕೋಶಗಳೇ ಪ್ರತಿಪಾದ್ಯವೆಂದು ಹೇಳುತ್ತೀಯೆ. ಆಗ ನಿನಗೆ ಶಿರ ಆದಿ ಪದಗಳು ಮುಖ್ಯವೇ ಆಗುತ್ತವೆ. ಮುಖ್ಯಾರ್ಥವು ಕೂಡದಿದ್ದಾಗ ಮಾತ್ರ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಷ್ಟೇ.

**ಭಾವವಿಲಾಸಿನೀ–** ಕಿಂಚ ಶಿರಆದಿಪದಾನಾಮಮುಖ್ಯತ್ವಂ ತ್ವಯೈವ ವಕ್ತುಂ ನ ಶಕ್ಯಮಿತ್ಯಾಹ – **ಆಶಾಸಾನಸ್ಯೇತಿ** ॥ ಹೇ ವಂಚಕ । ಪಂಚಸ್ಥಾನ್ಯಾಮ್ ಚ । ಕೋಶಾನ್ ಆನಂದಮಯಾದೀನ್

ಕೋಶಾನಾಶಾಸನಸ್ಯ ಆನಂದಮಯಾದ್ಯಾಃ ಪಂಚಾಪಿಕೋಶಾ ಏವೇತಿ ಮನ್ವಾನಸ್ಯ ತೇ ಶಿರ ಆದಿಪದಂ ಮುಖ್ಯಮ್ । ನಹಿ ಕೋಶಶಿರಸ್ಯಪಿ ಶಿರಃಪದಮಮುಖ್ಯಮ್ । ಅತಃ ಶಿರ ಆದಿಪದಸ್ಯೋಪಚಾರಾಂಗೀಕಾರೇ ತವಾಪಸಿದ್ಧಾಂತಶ್ಚಸ್ಯಾದಿತಿ ಭಾವಃ । ಯುಕ್ತ್ಯಂತರಂ ಚಾಹ – ಮುಖ್ಯಾಯೋಗ ಇತಿ ॥ ೨೭೭ ॥

**ವಿವರಣೆ–** ಅದೂ ಅಲ್ಲದೇ, ಶಿರ ಆದಿ ಪದಗಳಿಗೆ ಅಮುಖ್ಯಾರ್ಥವನ್ನು ಅಂಗೀಕರಿಸಿದರೆ, ನಿನಗೇ ನಿನ್ನ ಸಿದ್ಧಾಂತವಿರೋಧವು ಉಂಟಾಗುತ್ತದೆ ಎಂದು ಇಲ್ಲಿ ಹೇಳುತ್ತಾರೆ. ಅದ್ವೈತಿಗಳು ಅನ್ನಮಯಾದಿ ಐದು ಪ್ರಕರಣಗಳಲ್ಲಿಯೂ ಜಡವಾದ ಕೋಶವೇ ಪ್ರತಿಪಾದ್ಯವೆಂದು ಹೇಳುತ್ತಾರೆ. ಜಡವಾದ ಕೋಶಗಳಿಗೆ ಶಿರ ಮೊದಲಾದ ಅವಯವಗಳು ಇದ್ದೇ ಇವೆ. ಹೀಗಿರುವಾಗ 'ಶಿರ ಇವ ಶಿರಃ' ಎಂದು ಉಪಚರಿತವಾದ ಅರ್ಥವನ್ನು ತೆಗೆದುಕೊಂಡರೆ, ಕೋಶಗಳಲ್ಲಿ ಶಿರಆದಿ ಪದಗಳಿಗೆ ಲಕ್ಷಣಾವೃತ್ತಿಯನ್ನು ಅನುಸರಿಸಿದಂತಾಗುತ್ತದೆ. ಆದರೆ, ಶಿರಆದಿ ಶಬ್ದಗಳ ಮುಖ್ಯವಾದ ಅರ್ಥಕ್ಕೆ ಯಾವ ಬಾಧಕವೂ ಇಲ್ಲದಿರುವಾಗ ಅದನ್ನು ಪರಿತ್ಯಾಗಮಾಡಬೇಕಾದ ಅಗತ್ಯವೇ ಇಲ್ಲ. ಆದ್ದರಿಂದ ಅಮುಖ್ಯಾರ್ಥವನ್ನು ಅಂಗೀಕರಿಸಿದರೆ, ಅನ್ನಮಯಾದಿ ಐದು ಕೋಶಗಳೂ ಜಡ ಎಂದು ಸಮರ್ಥನೆ ಮಾಡುವುದೇ ನಿನಗೆ ಅಸಾಧ್ಯವಾಗುತ್ತದೆ ಎಂದು ಅಭಿಪ್ರಾಯ.

ಯತಶ್ಚ ಸೈವ ಪುರುಷವಿಧ ಏವೇತಿ ತದ್ವಪುಃ ।
ವಿನಿರ್ಣಯತಿ ತೇನಾಸ್ಯ ತನುರಾಸೀದಬಾಧಿತಾ ॥ ೨೭೮ ॥

**ಅರ್ಥ–** ಚ = ಮತ್ತೂ ಕೂಡ, ಯತಃ = ಯಾವ ಕಾರಣದಿಂದ, ಸಾ ಏವ = ಆ ಶ್ರುತಿಯೇ, ತದ್ವಪುಃ = ಆನಂದಮಯನ ಶರೀರವನ್ನು, ಪುರುಷವಿಧ ಏವ ಇತಿ = ಪುರುಷವಿಧ ಏವ ಎಂಬುದಾಗಿಯೇ, ವಿನಿರ್ಣಯತಿ = ನಿರ್ಣಯ ಮಾಡುತ್ತದೆಯೋ, ತೇನ = ಆ ಕಾರಣದಿಂದ, ಅಸ್ಯ = ಈ ಆನಂದಮಯನ, ತನುಃ = ಶರೀರವು, ಅಬಾಧಿತಾ = ಅಬಾಧಿತವಾದದ್ದು, ಅಸ್ತಿ = ಆಗಿದೆ.

**ಅನುವಾದ–** ಆ ಶ್ರುತಿಯೇ ಆನಂದಮಯನ ಶರೀರವನ್ನು 'ಪುರುಷವಿಧ ಏವ' ಎಂದು ನಿರ್ಣಯವನ್ನು ಮಾಡುತ್ತಿದೆ. ಆದ್ದರಿಂದ ಆನಂದಮಯನ ಶರೀರವು ಅಬಾಧ್ಯವೆಂದೇ ತಿಳಿಯುತ್ತದೆ.

**ಭಾವವಿಲಾಸಿನೀ–** ಪುರುಷವಿಧ ಏವೇತಿ ಶ್ರುತ್ಯಾಪ್ರಯೋಜನಾಂತರಂ ಚ ಸಿದ್ಧಮಿತ್ಯಾಹ – ಯತ ಇತಿ ॥ ಸೈವ ಪೂರ್ವೋಕ್ತಾಶ್ರುತಿರೇವ । ತದ್ವಪುರಾನಂದಮಯಸ್ಯ ವಪುಃ । ಪುರುಷವಿಧ ಏವ । ನತ್ವನ್ಯಥೇತಿ ವಿನಿರ್ಣಯತಿ । ತೇನ ಪುರುಷವಿಧತ್ವಸ್ಯ ಕದಾಪ್ಯನ್ಯಥಾಭಾವಾಭಾವ-ಸಮರ್ಥನೇನ । ಅಸ್ಯಾನಂದಮಯಸ್ಯ । ಅಬಾಧಿತಾ ಬಾಧ್ಯತ್ವರಹಿತಾ ಪಾರಮಾರ್ಥಿಕ-

ಸತ್ಯೇತ್ಯರ್ಥಃ । ಅನ್ಯಥಾಭಾವೋ ಹಿ ಬಾಧಃ । ಏವಕಾರೇಣ ಚ ತನ್ನಿರಾಸೇಽಬಾಧ್ಯತ್ವಮಪಿ ಸಿದ್ಧ್ಯತೀತಿ ಭಾವಃ ॥ ೨೭೮ ॥

**ವಿವರಣೆ–** 'ಪುರುಷವಿಧ ಏವ' ಎಂಬ ಶ್ರುತಿಯಿಂದ ಲಭ್ಯವಾಗುವ ಇನ್ನೊಂದು ಪ್ರಯೋಜನವನ್ನು ಇಲ್ಲಿ ಹೇಳುತ್ತಾರೆ. 'ಪುರುಷವಿಧ ಏವ' ಎಂಬಲ್ಲಿ ಅವಧಾರಣವಿದೆಯಷ್ಟೇ. ಅವಧಾರಣಕ್ಕೆ ಪುರುಷವಿಧವೇ ಆಗಿರುತ್ತದೆ, ಅನ್ಯಥಾಭಾವವನ್ನು ಹೊಂದುವುದಿಲ್ಲ ಎಂದು ಅರ್ಥ. ಆದ್ದರಿಂದ ಆನಂದಮಯನ ಶರೀರವು ಯಾವಾಗಲೂ ಪುರುಷವಿಧವೇ ಆಗಿರುತ್ತದೆ. ಅಂದರೆ ಅಲ್ಲಿರುವ ಪುರುಷವಿಧತ್ವವು ಅಬಾಧಿತವಾಯಿತು ಎಂದಾಯಿತು. ಏಕೆಂದರೆ, ಬಾಧವೆಂದರೆ ಅನ್ಯಥಾಭಾವ. ಏವ ಶಬ್ದವು ಅವಧಾರಣವನ್ನು ಹೇಳಿ ಅನ್ಯಥಾಭಾವವನ್ನು ನಿಷೇಧಿಸುತ್ತದೆ. ಆದ್ದರಿಂದ ಆ ದೇಹವು ಅಬಾಧ್ಯ, ಸತ್ಯ ಎಂದು ಸಿದ್ಧವಾಗುತ್ತದೆ.

ಅತಃ ಪೂರ್ಣಾನಂದಮಾತ್ರಂ ಸುಖಾದ್ಯಾಕಾರಸುಂದರಂ ।
ನಾರಾಯಣಂ ಪರಂ ಬ್ರಹ್ಮ ಪ್ರಿಯಮೇವೇತಿ ಚ ಶ್ರುತಿಃ ॥ ೨೭೯ ॥

ಅವಧಾರಯಂತೀ ಪ್ರಕೃತಿಪ್ರಾಕೃತಾಂಶವಿವರ್ಜಿತಮ್ ।
ಕೇವಲಾನುಭವಾನಂದರೂಪಾಕಾರಮನೋಹರಮ್ ॥ ೨೮೦ ॥

ಸಾಕ್ಷಾದಾಹ ಶ್ರುತೌ ಯಸ್ಯ ಪ್ರೀತಿರಸ್ತಿ ಮನೀಷಿಣಃ ।
ಸ ನಿರಾಕಾರತಾಂ ತಸ್ಯ ಕಥಂ ಬ್ರೂಯಾನ್ಮಹಾತ್ಮನಃ ॥ ೨೮೧ ॥

**ಅರ್ಥ–** ಅತಃ = ಆದ್ದರಿಂದ, ಪ್ರಿಯಮೇವೇತಿ ಚ ಶ್ರುತಿಃ = ತಸ್ಯ ಪ್ರಿಯಮೇವ ಶಿರಃ ಎಂಬ ವೇದವಾಕ್ಯವು, ಪರಂಬ್ರಹ್ಮ = ಪರಬ್ರಹ್ಮನಾದ, ನಾರಾಯಣಂ = ನಾರಾಯಣನನ್ನು, ಪೂರ್ಣಾನಂದಮಾತ್ರಂ = ಪೂರ್ಣಆನಂದವೇ ಸ್ವರೂಪವಾಗಿವುಳ್ಳವನೆಂದು, ಸುಖಾದ್ಯಾಕಾರ ಸುಂದರಂ = ಸುಖ, ಜ್ಞಾನ, ಮೊದಲಾದ ಗುಣಗಳೇ ಆಕಾರವಾಗಿವುಳ್ಳ ಸುಂದರವಾದ ಶರೀರವುಳ್ಳವನೆಂದು, ಪ್ರಕೃತಿಪ್ರಾಕೃತಾಂಶವಿವರ್ಜಿತಂ = ಪ್ರಕೃತಿ = ಪ್ರಕೃತಿಯಿಂದ, ಪ್ರಾಕೃತಾಂಶ = ಪ್ರಾಕೃತವಾದ ದೇಹಗುಣಾದಿಗಳಿಂದ, ವಿವರ್ಜಿತಂ = ರಹಿತನೆಂದು, ಅವಧಾರಯಂತೀ= ನಿರ್ಧಾರ ಮಾಡುತ್ತಾ, ಕೇವಲಾನುಭವಾನಂದ ರೂಪಾಕಾರಮನೋಹರಂ = ಕೇವಲಾನುಭವ= ಅನುಭವ = ಕೇವಲ ಜ್ಞಾನವು, ಆನಂದ = ಆನಂದವು ಇವುಗಳೇ, ರೂಪ = ಸ್ವರೂಪವಾಗಿವುಳ್ಳ, ಆಕಾರ = ಶರೀರದಿಂದ, ಮನೋಹರಂ = ಸುಂದರನಾಗಿದ್ದಾನೆಂದು, ಸಾಕ್ಷಾತ್ = ಸ್ಪಷ್ಟವಾಗಿ, ಆಹ= ಹೇಳುತ್ತಿದೆ. ಯಸ್ಯ = ಯಾವ, ಮನೀಷಿಣಃ = ಬುದ್ಧಿವಂತನಿಗೆ, ಶ್ರುತೌ = ವೇದವಾಕ್ಯದಲ್ಲಿ, ಪ್ರೀತಿಃ = ಪ್ರೀತಿಯು, ಅಸ್ತಿ = ಇದೆಯೋ, ಸ = ಆ ಬುದ್ಧಿವಂತನು, ತಸ್ಯ ಮಹಾತ್ಮನಃ = ಆ

ಪರಮಾತ್ಮನಿಗೆ, ನಿರಾಕಾರತಾಂ = ನಿರಾಕಾರತ್ವವನ್ನು, ಕಥಂ = ಹೇಗೆ, ಬ್ರೂಯಾತ್ = ಹೇಳುತ್ತಾನೆ.

**ಅನುವಾದ–** ಆದ್ದರಿಂದ 'ತಸ್ಯ ಪ್ರಿಯಮೇವ ಶಿರಃ' ಎಂಬ ಶ್ರುತಿಯು ನಾರಾಯಣನಿಗೆ ಕೇವಲ ಪೂರ್ಣಾನಂದವನ್ನೂ, ಸುಖಾದಿ ಆಕಾರವನ್ನೂ, ಆಕಾರವಿರುವುದರಿಂದ ಸೌಂದರ್ಯವನ್ನೂ ಅವಧಾರಣೆ ಮಾಡುವುದರಿಂದ ಪ್ರಕೃತಿಪ್ರಾಕೃತ ಅಂಶಗಳಿಂದ ವರ್ಜಿತನೆಂದು ಅರ್ಥಾತ್ ಸಿದ್ಧವಾಗುತ್ತದೆ. ಕೇವಲ ಜ್ಞಾನಾನಂದರೂಪವಾದ ಆಕಾರದಿಂದ ಮನೋಹರನಾಗಿದ್ದಾನೆಂದೂ ಶ್ರುತಿಯು ಹೇಳುತ್ತಿದೆ. ಅಂತಹ ಶ್ರುತಿಯಲ್ಲಿ ಯಾವನಿಗೆ ವಿಶ್ವಾಸವಿದೆಯೋ ಅಂತಹವನು ಆ ಮಹಾತ್ಮನಿಗೆ ಹೇಗೆ ನಿರಾಕಾರತ್ವನ್ನು ಹೇಳಲು ಸಾಧ್ಯ?

**ಭಾವವಿಲಾಸಿನೀ–** ಆನಂದಮಯಾದಿವಿಗ್ರಹಸ್ಯಾಪ್ರಾಕೃತತ್ವಮಪಿ ಶ್ರುತ್ಯೈವಸಿದ್ಧಮಿತ್ಯಾಹ – **ಅತ ಇತಿ** ॥ ಅತಃ ಪೂರ್ವೋಕ್ತಪ್ರಕಾರಾತ್ । ಪೂರ್ಣಾನಂದಮಾತ್ರಮಾನಂದಮಯಶ್ರುತಿರಾಹ । ಸುಖಾದ್ಯಾಕಾರ ಸುಂದರಂ ಪ್ರಿಯಮೇವ ಶಿರ ಇತ್ಯಾದಿ ಶ್ರುತಿರಾಹ । ಪ್ರಿಯಮೇವ ನತ್ವಪ್ರಿಯಂ ಕಿಂಚಿದಪೀತ್ಯವಧಾರಯಂತೀಸ್ಯೈವ ಶ್ರುತಿಃ ಪ್ರಕೃತಿಪ್ರಾಕೃತಾಂಶವಿವರ್ಜಿತಂ ಸಾಕ್ಷಾದಾಹ ॥ ೨೭೯-೨೮೧ ॥

**ವಿವರಣೆ–** 'ಪ್ರಿಯಮೇವ ಶಿರಃ' ಎಂಬಲ್ಲಿನ ಅವಧಾರಣೆಯು ಯಾವಾಗಲೂ ಪ್ರಿಯನೇ, ಅಪ್ರಿಯವಾದುದು ಯಾವುದೂ ಇಲ್ಲ ಎಂಬ ಅರ್ಥವನ್ನು ಹೇಳುತ್ತದೆ. ಪ್ರಕೃತಿಪ್ರಾಕೃತಗಳು ಅಪ್ರಿಯವಾದವುಗಳು. ಆದ್ದರಿಂದ ಪ್ರಿಯಮೇವ ಎಂಬಲ್ಲಿರುವ ಅವಧಾರಣೆಯು ಪ್ರಕೃತಿಪ್ರಾಕೃತವಿವರ್ಜಿತತ್ವವನ್ನು ಸಾಕ್ಷಾತ್ತಾಗಿಯೇ ಹೇಳುತ್ತದೆ. ಅವನಿಗೆ ಶಿರಆದಿಗಳಿರುವುದರಿಂದ ಸೌಂದರ್ಯವನ್ನೂ ಶ್ರುತಿಯು ಹೇಳುತ್ತದೆ. ಹೀಗಿರುವಾಗ ಶ್ರುತಿಯಲ್ಲಿ ವಿಶ್ವಾಸವಿರುವವರು ಎಂದೂ ಶ್ರೌತಾರ್ಥವನ್ನು ಅಲ್ಲಗಳೆಯಬಾರದು ಎಂದು ಅಭಿಪ್ರಾಯ.

ಅತೋ ವ್ಯಾಸಮತಸ್ಥಂ ಸ್ವಂ ಮನ್ಯಮಾನಸ್ತತೋಽನ್ಯಥಾ ।
ಯೋ ವರ್ಣಯತಿ ಕಿಂ ನಾಸ್ಯ ಪ್ರಕ್ರಿಯಾ ವಿಕ್ರಿಯಾ ಕಿಲ ॥ ೨೮೨ ॥

**ಅರ್ಥ–** ಅತಃ = ಆದ್ದರಿಂದ, ಸ್ವಂ = ತನ್ನನ್ನು, ವ್ಯಾಸಮತಸ್ಥಂ = ವೇದವ್ಯಾಸರ ಮತಾವಲಂಬಿಯೆಂದು, ಮನ್ಯಮಾನಃ = ತಿಳಿದುಕೊಳ್ಳುತ್ತಾ, ತತಃ = ಆ ವ್ಯಾಸರ ಅಭಿಪ್ರಾಯಕ್ಕಿಂತ, ಅನ್ಯಥಾ = ಭಿನ್ನವಾಗಿ, ಯಃ = ಯಾರು, ವರ್ಣಯತಿ= ತನ್ನ ಮತವನ್ನು ಹೇಳಿಕೊಳ್ಳುತ್ತಾನೋ, ಅಸ್ಯ = ಅವನು, ಪ್ರಕ್ರಿಯಾ = ಮತದ ಪ್ರಕ್ರಿಯೆಯು, (ಅಭಿಪ್ರಾಯವು), ವಿಕ್ರಿಯಾ = ವಿಕಾರವು, ಕಿಂ ನ ಕಿಲ= ಅಲ್ಲವೇನು?

**ಅನುವಾದ–** ಆದ್ದರಿಂದ ತಾನು ವ್ಯಾಸರ ಮತದಲ್ಲಿದ್ದೇನೆಂದು ತಿಳಿದುಕೊಂಡು ವ್ಯಾಸರಿಗೆ ವಿರುದ್ಧವಾಗಿ ಯಾವನು ವರ್ಣಿಸುತ್ತಾನೋ, ಅವನ ಪ್ರಕ್ರಿಯೆಯೆಲ್ಲವೂ ವಿಕ್ರಿಯವೇ ಆಗಿದೆ.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರನ್ ಪರಪ್ರಕ್ರಿಯಾಮುಪಹಸತಿ ॥ ಅತ ಇತಿ ॥ ಸ್ವಮಾತ್ಮಾನಮ್ । ತತಃ ವ್ಯಾಸಮತಾತ್ । ಪ್ರಕ್ರಿಯಾ ವಿಕ್ರಿಯಾ ನ ಕಿಮಿತಿ ಸಂಬಂಧಃ ॥೨೮೨॥

**ವಿವರಣೆ–** ಇದುವರೆಗೆ ಹೇಳಿದ ಅರ್ಥವನ್ನು ಉಪಸಂಹಾರ ಮಾಡುತ್ತಾ ಸೂತ್ರಕಾರರಿಗೆ ವಿರುದ್ಧವಾಗಿ ಹೇಳುವವನು ಎಂದೂ ಸೂತ್ರಕಾರರಿಗೆ ಅನುಸಾರಿಯಲ್ಲ. ಅವನ ಸಿದ್ಧಾಂತವನ್ನು ಪ್ರಕ್ರಿಯಾ ಎಂದು ಹೇಳುವುದಕ್ಕಿಂತ ವಿಕ್ರಿಯಾ ಎಂದು ಹೇಳುವುದು ಮೇಲು ಎಂದು ತಿಳಿಸುತ್ತಾರೆ.

**ವ್ಯಾಖ್ಯಾರಬ್ಧಾ ನ ತದ್ ಭೋಕ್ತುಮಾರಬ್ಧಂ ಸ್ವಸ್ಯ ದುಷ್ಕೃತಮ್ ।**
**ಕೋ ವ್ಯಾಖ್ಯಾತಾ ನಿಜಂ ಮೂಲಮಾದಾವೇವ ನಿಕೃಂತತಿ ॥ ೨೮೩ ॥**

**ಅರ್ಥ–** ಅದ್ವೈತಿನಾ = ಅದ್ವೈತಿಯಿಂದ, ವ್ಯಾಖ್ಯಾ = ಬ್ರಹ್ಮಸೂತ್ರಗಳ ವ್ಯಾಖ್ಯಾನವು, ಆರಬ್ಧಂ = ಪ್ರಾರಂಭಿಸಲ್ಪಟ್ಟಿದೆ, ಕಿಂತು = ಆದರೆ, ಸ್ವಸ್ಯ = ತನ್ನ, ತತ್ = ಆ, ದುಷ್ಕೃತಂ = ವ್ಯಾಸರ ಅಭಿಪ್ರಾಯಕ್ಕೆ ವಿರುದ್ಧವಾಗಿ ಹೇಳುವಿಕೆಯೆಂಬ ದುಷ್ಕೃತ್ಯವು, ಭೋಕ್ತಂ = ಅನುಭವಿಸಲು, ನ ಆರಬ್ಧಂ = ಪ್ರಾರಂಭಿಸಲ್ಪಟ್ಟಿಲ್ಲ. ಕಃ = ಯಾವ, ವ್ಯಾಖ್ಯಾತಾ = ವ್ಯಾಖ್ಯಾನಕಾರನು, ನಿಜಂ = ತನ್ನ, ಮೂಲಂ= ವ್ಯಾಖ್ಯಾನದ ಮೂಲವನ್ನು, ಆದಾವೇವ = ವ್ಯಾಖ್ಯಾನದ ಪ್ರಾರಂಭದಲ್ಲಿಯೇ, ನಿಕೃಂತತಿ = ಕತ್ತರಿಸುತ್ತಾನೆ.

**ಅನುವಾದ–** ವ್ಯಾಖ್ಯಾನವನ್ನು ಆರಂಭಮಾಡಿದ್ದಾಗಿದೆ. ಆದರೆ, ವ್ಯಾಸರಿಗೆ ವಿರುದ್ಧವಾಗಿ ಹೇಳಿ ಉಂಟಾದ ಪಾಪದಫಲವನ್ನು ಅನುಭವಿಸಲು ಇನ್ನೂ ಆರಂಭಮಾಡಿಲ್ಲ. ಯಾವ ವ್ಯಾಖ್ಯಾತೃವು ತಾನು ವ್ಯಾಖ್ಯಾನ ಮಾಡಲು ಹೊರಟಿರುವ ಮೂಲಗ್ರಂಥವನ್ನು ಮೊದಲಿನಲ್ಲಿಯೇ ನಿರಾಕರಿಸುತ್ತಾನೆ.

**ಭಾವವಿಲಾಸಿನೀ–** ತತ್ ತಸ್ಮಾತ್ ॥ ೨೮೩ ॥

**ವಿವರಣೆ–** ಆನಂದಮಯಾಧಿಕರಣದಲ್ಲಿ ಸೂತ್ರಕಾರರು ಆನಂದಮಯನು ಬ್ರಹ್ಮ ಎಂದು ಹೇಳುತ್ತಾರೆ. ಅದ್ವೈತಿಗಳು ಮಾತ್ರ ಆನಂದಮಯನು ಬ್ರಹ್ಮನಲ್ಲ ಎಂದು ಹೇಳಿ ಆನಂದಮಯನ ಪುಚ್ಛನು ಮಾತ್ರ ಬ್ರಹ್ಮ ಎಂದು ಹೇಳುತ್ತಾರೆ. ಹೀಗೆ ಸೂತ್ರಕಾರರಿಗೆ ವಿರೋಧವನ್ನು ಮಾಡಿದರೆ, ತನ್ನ ಮೂಲವನ್ನೇ ಛೇದನೆ ಮಾಡಿದಂತಾಯಿತು ಎಂಬುದು ಒಂದು ದೋಷ, ಜೊತೆಗೆ ವೇದವ್ಯಾಸರಿಗೆ ವಿರುದ್ಧವಾಗಿ ಮಾತನಾಡಿದುದರಿಂದ ಉಂಟಾದ ಮಹಾಪಾಪದ ಫಲವನ್ನು ಮುಂದೆ ಅನುಭವಿಸಬೇಕಾಗುತ್ತದೆ ಎಂಬುದು ಇನ್ನೊಂದು ದೋಷ

**ಇತ್ಥಂ ನಿರ್ಣಾಯಕೇ ಸೂತ್ರೇ ಸ್ಪಷ್ಟಂ ಭೇದಸ್ಯ ಸಾಧನಾತ್ ।**
**ಶ್ರುತಿಸ್ಮೃತಿಪುರಾಣಾದೌ ನಿರ್ಣೇಯೇ ಯತ್ ಕ್ವಚಿತ್ ಕ್ವಚಿತ್ ॥ ೨೮೪ ॥**

**ಭೇದೋ ನಾಸ್ತೀತಿ ವಚನಂ ತದ್ ವಿರೋಧಂ ನಿಷೇಧತಿ ।**
**ನಿರ್ಣಾಯಕಾನುಸಾರೇಣ ನಿರ್ಣೇಯಸ್ಯ ಗತಿಂ ವಿದುಃ ॥ ೨೮೫ ॥**

**ಅರ್ಥ–** ಇತ್ಥಂ = ಹೀಗೆ, ನಿರ್ಣಾಯಕೇ = ವೇದಪುರಾಣಗಳ ಅರ್ಥಗಳನ್ನು ನಿರ್ಣಯಿಸಲಿಕ್ಕಾಗಿ ಪ್ರವೃತ್ತವಾದ, ಸೂತ್ರೇ = ಬ್ರಹ್ಮಸೂತ್ರದಲ್ಲಿ, ಸ್ಪಷ್ಟಂ = ಸ್ಪಷ್ಟವಾಗಿ, ಭೇದಸ್ಯ = ಭೇದದ, ಸಾಧನಾತ್ = ಸಮರ್ಥನೆಯು ಇರುವುದರಿಂದ, ನಿರ್ಣೇಯೇ = ನಿರ್ಣೇಯಾರ್ಥಗಳಾದ, ಶ್ರುತಿಸ್ಮೃತಿಪುರಾಣಾದೌ = ಶ್ರುತಿಗಳು, ಸ್ಮೃತಿಗಳು ಮತ್ತು ಪುರಾಣ ಮೊದಲಾದ ಗ್ರಂಥರಾಶಿಯಲ್ಲಿ, ಕ್ವಚಿತ್ ಕ್ವಚಿತ್= ಕೆಲವೊಂದು ಕಡೆ, ಯತ್ = ಯಾವ, ಭೇದಃ ನಾಸ್ತಿ ಇತಿ ವಚನಂ = ಜೀವಬ್ರಹ್ಮಭೇದವು ಇಲ್ಲವೆಂದು ಹೇಳುವ ವಾಕ್ಯವು, ಅಸ್ತಿ = ಇದೆಯೋ, ತತ್ = ಆ ವಾಕ್ಯವು, ವಿರೋಧಂ = ಜೀವಬ್ರಹ್ಮರ ನಡುವೆ ವಿರೋಧವು ಇಲ್ಲವೆಂದು, ನಿಷೇಧತಿ = ನಿಷೇಧ ಮಾಡುತ್ತದೆ. ಮನೀಷಿಣಃ = ಜ್ಞಾನಿಗಳು, ನಿರ್ಣಾಯಕಾನುಸಾರೇಣ = ನಿರ್ಣಾಯಕ ಶಾಸ್ತ್ರಕ್ಕೆ ಅನುಸಾರವಾಗಿ, ನಿರ್ಣೇಯಸ್ಯ = ನಿರ್ಣೇಯಶಾಸ್ತ್ರಗಳ, ಗತಿಂ = ವ್ಯವಸ್ಥೆಯನ್ನು, ವಿದುಃ = ತಿಳಿಯುತ್ತಾರೆ.

**ಅನುವಾದ–** ಹೀಗೆ ಬ್ರಹ್ಮಸೂತ್ರಗಳಲ್ಲಿ ಸ್ಪಷ್ಟವಾಗಿ ಭೇದವನ್ನು ಸಾಧನೆ ಮಾಡಿರುವುದರಿಂದ ನಿರ್ಣೇಯಾರ್ಥವಾದ ಶ್ರುತಿಸ್ಮೃತಿಪುರಾಣಗಳಲ್ಲಿ ಒಮ್ಮೊಮ್ಮೆ ಭೇದವು ಇಲ್ಲ ಎಂಬ ವಚನವು ಬಂದರೆ ಅಲ್ಲಿ ಭೇದ ಶಬ್ದಕ್ಕೆ ವಿರೋಧ ಎಂದು ಅರ್ಥವನ್ನು ಮಾಡಬೇಕು. ಬ್ರಹ್ಮಸೂತ್ರಗಳು ನಿರ್ಣಾಯಕವಾದವುಗಳು. ಅದಕ್ಕೆ ಅನುಸಾರವಾಗಿ ನಿರ್ಣೇಯವಾದ ಶ್ರುತಿಸ್ಮೃತಿಪುರಾಣಗಳಿಗೆ ಅರ್ಥವನ್ನು ಮಾಡಬೇಕು.

**ಭಾವವಿಲಾಸಿನೀ–** ಏವಂಚ ಸಕಲಶ್ರುತಿಸ್ಮೃತಿಪುರಾಣಾದಿನಿರ್ಣಾಯಕೇ ಬ್ರಹ್ಮಸೂತ್ರೇ ಭೇದಸ್ಯೈವ ನಿರ್ಣೀತತ್ವಾತ್ ನಿರ್ಣೇಯೇ ಪುರಾಣಾದೌಕ್ವಚಿತ್ಕ್ವಚಿದ್ಭೇದನಿಂದಾವತ್ತ್ರೀಯಮಾನಾನಿ ವಾಕ್ಯಾನ್ಯನ್ಯಥಾ ಯೋಜನೀಯಾನೀತ್ಯಾಹ – **ಇತ್ಥಮಿತಿ** ॥ ತದ್ಭೇದೋ ನಾಸ್ತೀತಿ ವಚನಂ ವಿರೋಧಂ ನಿಷೇಧತಿ । ವಿರೋಧಸ್ಯಾಪಿ ಭೇದಶಬ್ದವಾಚ್ಯತ್ವಾತ್ ನತ್ವನ್ಯೋನ್ಯಾಭಾವರೂಪಮ್ ಭೇದಮ್ । ತಥಾಸತಿ ಸ್ವನಿರ್ಣಾಯಕಸೂತ್ರವಿರೋಧಪ್ರಸಂಗ ಇತಿ ಭಾವಃ । ಅಸ್ತು ನಿರ್ಣಾಯಕವಿರೋಧಃ । ಕೋದೋಷ ಇತ್ಯತ ಆಹ – **ನಿರ್ಣಾಯಕೇತಿ** ॥ ೨೮೪-೨೮೫ ॥

**ವಿವರಣೆ–** ಬ್ರಹ್ಮಸೂತ್ರಗಳು ಸಕಲ ಶ್ರುತಿಸ್ಮೃತಿಪುರಾಣಗಳ ಅರ್ಥನಿರ್ಣಾಯಕಗಳು. ಅವು ಜೀವಬ್ರಹ್ಮಭೇದವನ್ನು ಸ್ಪಷ್ಟವಾಗಿ ಸಾರುತ್ತಿವೆ. ಹೀಗಿರುವಾಗ ಒಮ್ಮೊಮ್ಮೆ

ಶ್ರುತ್ಯಾದಿಗಳಲ್ಲಿ ಜೀವಬ್ರಹ್ಮರಿಗೆ ಭೇದವಿಲ್ಲ ಎಂಬ ವಚನವು ಕಂಡುಬರುತ್ತದೆ. ಆಗ ಭೇದಶಬ್ದಕ್ಕೆ ಅನೇಕ ಅರ್ಥವಿರುವುದರಿಂದ ವಿರೋಧ ಎಂಬ ಅರ್ಥವನ್ನು ತೆಗೆದುಕೊಂಡು ಜೀವಬ್ರಹ್ಮರಿಗೆ ವಿರೋಧವಿಲ್ಲ ಎಂದೇ ಅರ್ಥವನ್ನು ಮಾಡಬೇಕು. ಸೂತ್ರಗಳು ನಿರ್ಣಯ ಮಾಡಿದ ಭೇದವನ್ನು ಎಂದೂ ನಿರಾಕರಿಸಬಾರದು. ನಿರ್ಣಾಯಕ ಗ್ರಂಥಕ್ಕೆ ಅನುಸಾರವಾಗಿ ನಿರ್ಣೇಯ ಗ್ರಂಥದ ಅರ್ಥವನ್ನು ನಯನ ಮಾಡಬೇಕೆಂಬುದು ಎಲ್ಲರೂ ಒಪ್ಪಬೇಕಾದ ಅಭಿಪ್ರಾಯ.

**ಟೀಕಾನುಸಾರತೋ ಹ್ಯರ್ಥೋ ಮೂಲಸ್ಯೋನ್ನೀಯತೇ ಬುಧೈಃ ।**
**ಮೂಲಕರ್ತೃಕೃತಾ ಟೀಕಾ ಧಾರ್ಯೈವ ಶಿರಸಾ ಖಿಲೈಃ ॥ ೨೮೬ ॥**

**ಅರ್ಥ**— ಬುಧೈಃ = ವಿದ್ವಾಂಸರಿಂದ, ಮೂಲಸ್ಯ = ಮೂಲಗ್ರಂಥಕ್ಕೆ, ಟೀಕಾನುಸಾರತಃ = ಟೀಕೆಗೆ ಅನುಸಾರವಾಗಿ, ಅರ್ಥಃ = ಅರ್ಥವು, ಉನ್ನೀಯತೇ ಹಿ = ಗ್ರಹಿಸಲ್ಪಡುತ್ತದೆಯಷ್ಟೆ. ಮೂಲಕರ್ತೃಕೃತಾ = ಮೂಲಕಾರರಿಂದಲೇ ರಚಿಸಲ್ಪಟ್ಟ, ಟೀಕಾ = ಟೀಕೆಯು, ಅಖಿಲೈಃ = ಎಲ್ಲರ ಓದುಗರಿಂದ, ಶಿರಸಾ= ತಲೆಯಿಂದ, ಧಾರ್ಯೈವ = ಗೌರವಿಸಲ್ಪಡಲೇಬೇಕು.

**ಅನುವಾದ**— ವಿವೇಕಿಗಳಾದವರು ಟೀಕೆಗೆ ಅನುಸಾರವಾಗಿ ಮೂಲದ ಅರ್ಥವನ್ನು ಗ್ರಹಿಸುತ್ತಾರೆ. ಅದರಲ್ಲಿಯೂ ಮೂಲವನ್ನು ರಚನೆಮಾಡಿದವರೇ ಟೀಕೆಯನ್ನೂ ರಚನೆಮಾಡಿದ್ದರೆ, ಆ ಟೀಕೆಯು ಎಲ್ಲರಿಂದಲೂ ಶಿರಸಾಧಾರ್ಯವಾಗುತ್ತದೆ.

**ಭಾವವಿಲಾಸಿನೀ**— ಏತತ್ಸೂತ್ರದೃಷ್ಟಮಿತ್ಯತ ಆಹ – **ಟೀಕೇತಿ** ॥ ಪ್ರಕೃತೇ ತು ಕೈಮುತ್ಯಮಾಹ – **ಮೂಲೇತಿ** ॥ ಮೂಲಸ್ಯೇತಿಹಾಸಪುರಾಣಸ್ಯಕರ್ತ್ರಾ ವ್ಯಾಸೇನಕೃತಾ ಮೂಲಕರ್ತೃಕೃತಾ ಟೀಕಾ ಸೂತ್ರರೂಪಾ । ಯೇನೈವ ಮೂಲಂ ಕೃತಂ ತೇನೈವ ತಟ್ಟೀಕಾಪಿ ಕೃತಾಚೇತ್ತದನುಸಾರೇಣ ತನ್ಮೂಲಂ ಯೋಜನೀಯಮಿತಿ ಕಿಂ ವಕ್ತವ್ಯಮಿತಿ ಭಾವಃ ॥ ೨೮೬ ॥

**ವಿವರಣೆ**— 'ವ್ಯಾಖ್ಯಾನತೋ ವಿಶೇಷ ಪ್ರತಿಪತ್ತಿಃ' ಎಂಬ ಸಂಪ್ರದಾಯವಿದೆ. ಮೂಲದ ಅರ್ಥವನ್ನು ವ್ಯಾಖ್ಯಾನಕ್ಕೆ ಅನುಸಾರವಾಗಿ ತಿಳಿದುಕೊಳ್ಳಬೇಕು ಎಂದು ಇದರ ಅರ್ಥ. ಮೂಲವನ್ನು ಬರೆದವನು ಬೇರೆಯಾಗಿದ್ದರೂ, ವ್ಯಾಖ್ಯಾನವನ್ನು ಬರೆದವನು ಬೇರೆಯಾಗಿದ್ದರೂ, ವ್ಯಾಖ್ಯಾನಕ್ಕೆ ಅನುಸಾರವಾಗಿ ಮೂಲವನ್ನು ತಿಳಿದುಕೊಳ್ಳಬೇಕು ಎಂಬ ಸಂಪ್ರದಾಯವಿದೆ. ಮೂಲಕಾರರು ತಾವೇ ವ್ಯಾಖ್ಯಾನವನ್ನು ಮಾಡಿದ್ದರೆ, ಆ ವ್ಯಾಖ್ಯಾನಕ್ಕೆ ಅನುಗುಣವಾಗಿ ಮೂಲದ ಅರ್ಥವನ್ನು ತಿಳಿದುಕೊಳ್ಳಬೇಕು ಎಂಬ ವಿಷಯದಲ್ಲಿ ವಿವಾದವೇ ಇಲ್ಲ. ಮೂಲವಾದ ಇತಿಹಾಸಪುರಾಣಗಳನ್ನು ರಚಿಸಿದವರೂ ವೇದವ್ಯಾಸರೇ. ಬ್ರಹ್ಮಸೂತ್ರಗಳು ಅದರ ಅರ್ಥವನ್ನು ನಿರ್ಣಯಮಾಡುವುದರಿಂದ ಅದು ಟೀಕಾರೂಪವಾಗಿವೆ. ಅದನ್ನು ರಚಿಸಿದವರೂ ವೇದವ್ಯಾಸರೇ. ಆದ್ದರಿಂದ ಬ್ರಹ್ಮಸೂತ್ರಗಳಿಗೆ ಅನುಸಾರವಾಗಿ ಸ್ಮೃತಿಪುರಾಣ ಇತಿಹಾಸಗಳಿಗೆ ಅರ್ಥವನ್ನು

ಮಾಡಬೇಕು. ಬ್ರಹ್ಮಸೂತ್ರಗಳಲ್ಲಿ ಭೇದವನ್ನು ಪ್ರಬಲವಾಗಿ ಪುನಃ ಪುನಃ ಪ್ರತಿಪಾದನೆ ಮಾಡಿರುವುದರಿಂದ ಭೇದವಿಲ್ಲ ಎಂಬ ಪುರಾಣದಲ್ಲಿ ಕಂಡುಬರುವ ಮಾತಿಗೆ ವಿರೋಧವಿಲ್ಲ ಎಂದೇ ಅರ್ಥಮಾಡಬೇಕೇ ಹೊರತು ಬ್ರಹ್ಮಸೂತ್ರಗಳಿಂದ ಸಿದ್ಧವಾದ ಭೇದವನ್ನು ಎಂದೂ ನಿರಾಕರಿಸಬಾರದು ಎಂದು ಅಭಿಪ್ರಾಯ.

**ಭೇದಶಬ್ದೋ ಹಿ ವಿದ್ವದ್ಭಿರ್ಮಿಥೋ ಭೇದೇ ಪ್ರಯುಜ್ಯತೇ ।**
**ಭ್ರಮೇ ವಿರೋಧೇ ಧೀಭೇದೇ ನಾಶೇಽನ್ಯೋನ್ಯವಿಮಿಶ್ರಣೇ ।**
**ಅಸಂಯುಕ್ತತಯಾಽನ್ಯೋನ್ಯಸ್ಥಿತಿಶ್ಚಾಪಿ ಭಿದೋಚ್ಯತೇ ॥ ೨೮೭ ॥**

**ಅರ್ಥ–** ಭೇದಶಬ್ದಃ= ಭೇದಶಬ್ದವು, ವಿದ್ವದ್ಭಿಃ= ವಿದ್ವಾಂಸರಿಂದ, ಮಿಥೋಭೇದೇ= ಪರಸ್ಪರ ಭೇದದಲ್ಲಿ ಎಂದರೆ ಅನ್ಯೋನ್ಯಾಭಾವದಲ್ಲಿ, ಪ್ರಯುಜ್ಯತೇಃ= ಪ್ರಯೋಗಿಸಲ್ಪಡುತ್ತದಷ್ಟೇ. ಭ್ರಮೇ= ಭ್ರಮದಲ್ಲಿಯೂ, ವಿರೋಧೇ= ವಿರೋಧ ದಲ್ಲಿಯೂ, ಧೀಭೇದೇ= ಬುದ್ಧಿ ಭೇದದಲ್ಲಿಯೂ, ನಾಶೇ= ನಾಶದಲ್ಲಿಯೂ, ಅನ್ಯೋನ್ಯ-ವಿಮಿಶ್ರಣೇ= ಪರಸ್ಪರ ವಿಮಿಶ್ರಣದಲ್ಲಿಯೂ, ಪ್ರಯುಜ್ಯತೇ= ಪ್ರಯೋಗಿಸಲ್ಪಡುತ್ತದೆ. ಅಸಂಯುಕ್ತತಯಾ ಅನ್ಯೋನ್ಯಸ್ಥಿತಿಶ್ಚಾಪಿ= ಜೊತೆಯಲ್ಲಿಲ್ಲದೇ ಸ್ವತಂತ್ರವಾಗಿ ಬೇರೆ ಬೇರೆ ಇರುವುದು ಸಹ, ಭಿದಾ= ಭೇದವೆಂದು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಭೇದಶಬ್ದವು ವಿದ್ವಾಂಸರಿಂದ ಅನ್ಯೋನ್ಯಾಭಾವದಲ್ಲಿಯೂ ಭ್ರಮದಲ್ಲಿಯೂ, ವಿರೋಧದಲ್ಲಿಯೂ, ಬುದ್ಧಿ ಭೇದದಲ್ಲಿಯೂ, ನಾಶದಲ್ಲಿಯೂ, ಪರಸ್ಪರ ವಿಮಿಶ್ರಣದಲ್ಲಿಯೂ ಪ್ರಯೋಗಿಸಲ್ಪಡುತ್ತದೆಯಷ್ಟೇ. ಪರಸ್ಪರ ಸಂಬಂಧವಿರದೇ ಸ್ವತಂತ್ರವಾಗಿರುವ ಸ್ಥಿತಿಯೂ ಸಹ ಭೇದವೆಂದು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈಭಿದಾಮ್ । ಸರ್ವಭೂತಾತ್ಮನಾಂ ಬ್ರಹ್ಮನ್ ಸಶಾಂತಿಮಧಿಗಚ್ಛತೀತಿ ಭಾಗವತಶ್ಲೋಕೇ- ಭಿದಾಶಬ್ದಸ್ಯ ಯೋಗ್ಯಾರ್ಥಂ ವಕ್ತುಂ ಭಿದಾಶಬ್ದಾರ್ಥಂ ವಿವೇಚಯತಿ ॥ **ಭೇದಶಬ್ದ ಇತಿ** ॥ ಮಿಥೋಭೇದೇ ಅನ್ಯೋನ್ಯಾಭಾವೇ ಅನ್ಯತ್ಸ್ಪಷ್ಟಮ್ ॥ ೨೮೭ ॥

**ವಿವರಣೆ–** 'ತ್ರಯಾಣಾಮೇಕಭಾವಾನಂ ಯೋ ನ ಪಶ್ಯತಿ ವೈ ಭಿದಾಮ್ ।
ಸರ್ವಭೂತಾತ್ಮನಾಂ ಬ್ರಹ್ಮನ್ ಸಶಾಂತಿಮಧಿ ಗಚ್ಛತಿ ॥'

ಎಂಬ ಭಾಗವತ ಚತುರ್ಥ ಸ್ಕಂದದ ಶ್ಲೋಕಕ್ಕೆ ಯೋಗ್ಯವಾದ ಅರ್ಥವನ್ನು ಹೇಳಲು ಭೇದ ಶಬ್ದದ ಅನೇಕ ಅರ್ಥಗಳನ್ನು ಇಲ್ಲಿ ವಿಮರ್ಶಿಸುತ್ತಾರೆ. ಈ ಎಲ್ಲ ಅರ್ಥಗಳಲ್ಲಿಯೂ ಗ್ರಂಥಕಾರರೇ ಉದಾಹರಣೆಗಳನ್ನು ಕೊಡುತ್ತಾರೆ. ಆಸ್ತಿಯನ್ನು ಪಾಲುಮಾಡಿಕೊಂಡ ಅಣ್ಣತಮ್ಮಂದಿರು ಪರಸ್ಪರ ಸಂಬಂಧವಿಲ್ಲದೇ ಸ್ವತಂತ್ರವಾಗಿರುತ್ತಾರೆ. ಅಲ್ಲಿಯೂ

ಭೇದಶಬ್ದದ ಪ್ರಯೋಗವಿದೆ. ಉಳಿದ ಅರ್ಥವು ಸ್ಪಷ್ಟವಾಗಿದೆ ಮತ್ತು ಗ್ರಂಥಕಾರರೇ ಉದಾಹರಣೆಗಳನ್ನು ಕೊಟ್ಟು ಆ ಅರ್ಥಗಳನ್ನು ಸ್ಪಷ್ಟಪಡಿಸುತ್ತಾರೆ.

ಭಿನ್ನಾ ಸೇನಾ ಮಿತ್ರಭೇದಃ ಕ್ಷೀರನೀರವಿಭೇದನಂ ।
ಭಿನ್ನನೀರತ್ವವಾಙ್ಮಾಘೇ ಭಿದುರಾಂಭಸ್ತ್ವವಾಗಪಿ ॥ ೨೮೮ ॥

ವಿಮಿಶ್ರತಾಮಾಹ ಯಸ್ಮಾತ್ ತಸ್ಮಾದ್ ಭೇದೋ ವಿಮಿಶ್ರಣಂ ।
ದ್ವೈಧಂ ಚ ಭೇದೋಪಾಯಶ್ಚ ಪೃಥಗ್ಧೀಶ್ಚೇತ್ಯುದೀರಿತಂ ॥ ೨೮೯ ॥

**ಅರ್ಥ–** ಭಿನ್ನಾಸೇನಾ= ಸೇನೆಯು ಭಿನ್ನವಾಯಿತು, ಮಿತ್ರಭೇದಃ= ಮಿತ್ರಭೇದ ಕ್ಷೀರನೀರವಿಭೇದನಂ= ಕ್ಷೀರನೀರವಿಭೇದನ ಎಂಬ ಶಬ್ದವು, ಮಾಘೇ= ಮಾಘ ಕಾವ್ಯದಲ್ಲಿ, ಭಿನ್ನನೀರತ್ವವಾಕ್= ಭಿನ್ನನೀರ ಎಂಬ ಪ್ರಯೋಗವು, ಭಿದುರಾಂಭಸ್ತ್ವವಾಗಪಿ= ಮತ್ತು ಭಿದುರಾಂಭಃ ಎಂಬ ಪ್ರಯೋಗವು, ಯಸ್ಮಾತ್= ಯಾವ ಕಾರಣದಿಂದ, ವಿಮಿಶ್ರತಾಮ್= ವಿಮಿಶ್ರಣವನ್ನು, ಆಹ= ಹೇಳುತ್ತದೆಯೋ, ತಸ್ಮಾತ್= ಆ ಕಾರಣದಿಂದ, ಭೇದಃ= ಭೇದ ಎಂದರೆ, ವಿಮಿಶ್ರಣಂ= ಮಿಶ್ರ ಭಾವವು, ದ್ವೈಧಂ ಚ= ಮತ್ತು ವಿರೋಧವು, ಭೇದೋಪಾಯಶ್ಚ= ಮತ್ತು ಭೇದೋಪಾಯವು, ಪೃಥಗ್ಧೀಶ್ಚ= ಮತ್ತು ಭ್ರಾಂತಿಯು, ಇತಿ= ಎಂದು, ಉದೀರಿತಂ= ಹೇಳಲ್ಪಡುತ್ತದೆ.

**ಅನುವಾದ–** 'ಭಿನ್ನಾಸೇನಾ' ಎಂಬಲ್ಲಿ ಸ್ಥಾನಭೇದದ ಅರ್ಥದಲ್ಲಿ ಭೇದಶಬ್ದವು ಪ್ರಯೋಗಿಸಲ್ಪಡುತ್ತದೆ. 'ಮಿತ್ರಭೇದಃ' ಎಂಬಲ್ಲಿ ವಿರೋಧ ಎಂಬ ಅರ್ಥದಲ್ಲಿ ಭೇದಶಬ್ದವು ಇದೆ ಮತ್ತು ಯಾವ ಕಾರಣದಿಂದ 'ಕ್ಷೀರನೀರವಿಭೇದನಂ' ಮತ್ತು ಮಾಘಕಾವ್ಯದ 'ಭಿನ್ನನೀರಾ' ಮತ್ತು 'ಭಿದುರಾಂಭಃ' ಎಂಬ ಪ್ರಯೋಗಗಳು ಮಿಶ್ರಣವನ್ನು ಹೇಳುತ್ತದೆಯೋ, ಆ ಕಾರಣದಿಂದ ಭೇದವೆಂದರೆ ವಿಮಿಶ್ರಣ. 'ದ್ವೈಧ' ಮತ್ತು ಭೇದೋಪಾಯ ಎಂಬಲ್ಲಿ ಬುದ್ಧಿ ಭೇದ ಎಂಬ ಅರ್ಥದಲ್ಲಿ ಭೇದಶಬ್ದವು ಪ್ರಯೋಗಿಸಲ್ಪಡುತ್ತದೆ. ಭ್ರಾಂತಿಯೂ ಸಹ ಭೇದವೆಂದು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಉಕ್ತಾರ್ಥೇ ಉದಾಹರಣನಿದರ್ಶಯತಿ – **ಭಿನ್ನಾಸೇನೇತಿ** ॥ ಘಟ-ಪಟೌ ಭಿನ್ನಾವಿತಿ ಅನ್ಯೋನ್ಯಾಭಾವಸ್ಯೋದಾಹರಣಂ ಪ್ರಸಿದ್ಧತ್ವಾನ್ನೋಕ್ತಮ್ । ಭಿನ್ನಾಸೇನೇತಿ ಸ್ಥಾನಭೇದಸ್ಯೋದಾಹರಣಮ್ । ತೇ ಸ್ಥಾನಭೇದೋಪಿ ಭೇದಶಬ್ದಾರ್ಥ ಇತಿ ಗ್ರಾಹ್ಯಮ್ । ಮಿತ್ರಭೇದ ಇತಿ ವಿರೋಧಸ್ಯೋದಾಹರಣಮ್ । ಭಿನತ್ತ್ಯನ್ಯೋನ್ಯಸೌಹಾರ್ದಮಿತಿ ಭೇದೋ ವಿರೋಧ ಇತಿ ಭಾವಃ। ಕ್ಷೀರನೀರವಿಭೇದನಮಿತಿ ಮಿಶ್ರಣಸ್ಯೋದಾಹರಣಮ್। ಮಿಶ್ರಣಾರ್ಥೇ ಮಾಘಕಾವ್ಯಸ್ಥಿತೋದಾಹರಣದ್ವಯಮಾಹ – **ಭಿನ್ನನೀರತ್ವೇತಿ** ॥ ಅನೇನ ಸ್ಫಟಿಕತಟಾಂಶು-ಭಿನ್ನ ನೀರಾನೀಲಾಶ್ಮದ್ಯುತಿಭಿದುರಾಂಭಸೋಪರತ್ರೇತಿಶ್ಲೋಕಂ ಸೂಚಯತಿ । ದ್ವೈಧಂ ಚ

ಭೇದೋಪಾಯಶ್ಚೇತಿ ಬುದ್ಧಿಭೇದಸ್ಯೋದಾಹರಣಮ್ । ಪೃಥಗ್ಧೀರಿತಿ ಭ್ರಮಸ್ಯೋದಾಹರಣಮ್ ॥ ೨೮೮-೨೮೯ ॥

**ವಿವರಣೆ–** ಹಿಂದೆ ಹೇಳಿದ ಅರ್ಥಗಳಲ್ಲಿ ಇಲ್ಲಿ ಉದಾಹರಣೆ ಕೊಡುತ್ತಾರೆ. 'ಘಟಪಟೌ ಭಿನ್ನೌ' ಎಂಬ ಅನ್ಯೋನ್ಯಾಭಾವಾರ್ಥದ ಉದಾಹರಣೆಯು ಸ್ಪಷ್ಟವಾಗಿರುವುದರಿಂದ ಅದನ್ನು ಹೇಳದೆ ಉಳಿದ ಅರ್ಥಗಳಲ್ಲಿ ಉದಾಹರಣೆಯನ್ನು ಕೊಡುತ್ತಾರೆ. ಭಿನ್ನಾಸೇನಾ ಎಂಬುದು ಸ್ಥಾನಭೇದಕ್ಕೆ ಉದಾಹರಣೆ. ಒಂದೇ ಸ್ಥಾನದಲ್ಲಿದ್ದ ಸೈನ್ಯವು ಚದುರಿ ಹೋಗಿ ಬೇರೆ ಬೇರೆ ಸ್ಥಾನದಲ್ಲಿ ನಿಂತಿತು ಎಂದು ಅರ್ಥ. ಮಿತ್ರಭೇದ ಎಂಬ ಶಬ್ದವು ಮಿತ್ರರಿಗೆ ವಿರೋಧ ಎಂಬ ಅರ್ಥದಲ್ಲಿದೆ. ಪರಸ್ಪರ ಸೌಹಾರ್ದವನ್ನು ಭೇದಿಸುವುದರಿಂದ ವಿರೋಧವು ಭೇದಶಬ್ದದ ಅರ್ಥವಾಗುತ್ತದೆ. ಕ್ಷೀರನೀರ ವಿಭೇದನಂ ಎಂಬ ಶ್ಲೋಕಕ್ಕೆ ಪ್ರಯೋಗದಲ್ಲಿ ಭೇದಶಬ್ದಕ್ಕೆ ಮಿಶ್ರಣ ಎಂದು ಅರ್ಥ. ಮಾಘ ಕಾವ್ಯದಲ್ಲಿಯೂ 'ಏಕತ್ರ ಸ್ಫಟಿಕ ತಟಾಂಶು ಭಿನ್ನನೀರಾ' ಎಂಬ ಪ್ರಯೋಗದಲ್ಲಿ ಸ್ಫಟಿಕಮಯವಾದ ತಟದ ಕಿರಣಗಳಿಂದ ವಿಮಿಶ್ರಿತವಾದ ನೀರನ್ನು ಉಳ್ಳ ಎಂಬ ಪ್ರಯೋಗದಲ್ಲಿ ಭೇದಶಬ್ದವು ಮಿಶ್ರಣದಲ್ಲಿಯೇ ಇದೆ. 'ನೀಲಾಶ್ಮದ್ಯುತಿ ಭಿದುರಾಂಭಸಃ' ಎಂಬ ಇನ್ನೊಂದು ಮಾಘ ಕಾವ್ಯಸ್ಥಳದಲ್ಲಿಯೂ ನೀಲಮಣಿಗಳ ಕಾಂತಿಯಿಂದ ವಿಮಿಶ್ರಿತವಾದ ನೀರನ್ನು ಹೊಂದಿದ ಎಂದು ಅರ್ಥವಿರುವ ಈ ಮಾತಿನಲ್ಲಿ ಭೇದಶಬ್ದ ಪರ್ಯಾಯವಾದ ಭಿದುರ ಶಬ್ದವು ವಿಮಿಶ್ರಣ ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. 'ದ್ವೈಧ' ಮತ್ತು 'ಭೇದೋಪಾಯ'ಗಳು ಬುದ್ಧಿಭೇದ ಎಂಬ ಅರ್ಥವನ್ನು ಹೇಳುತ್ತವೆ. ಭೇದೋಪಾಯವೆಂದರೆ ಸಾಮ, ದಾನ, ಭೇದ ಮತ್ತು ದಂಡ, ಈ ನಾಲ್ಕು ಉಪಾಯದ ಮಧ್ಯದಲ್ಲಿರುವ ಭೇದೋಪಾಯ ಎಂದು ಅರ್ಥ. ಪೃತಿಗ್ಧೀ ಎಂದರೆ ಭ್ರಾಂತಿ, ಅಲ್ಲಿಯೂ ಭೇದಶಬ್ದ ಪ್ರಯೋಗವಿದೆ.

ಭಿನ್ನಭಿನ್ನಮಿತಿ ಪ್ರಾಹುರ್ನಷ್ಟಂ ಘಟಪಟಾದಿಕಂ ।
ಭ್ರಮೋ ಭಿದಾ ಭಿನತ್ತ್ಯರ್ಥಾನನ್ಯಥೀಕುರುತೇ ಯತಃ ॥ ೨೯೦ ॥

**ಅರ್ಥ–** ನಷ್ಟಂ= ನಾಶವನ್ನು ಹೊಂದಿದ, ಘಟಪಟಾದಿಕಂ= ಘಟಪಟಾದಿಗಳನ್ನು, ಭಿನ್ನಭಿನ್ನಮಿತಿ= ಭಿನ್ನಭಿನ್ನವೆಂದು, ಪ್ರಾಹುಃ= ಹೇಳುತ್ತಾರೆ. ಯತಃ= ಯಾವ ಕಾರಣದಿಂದ, ಅರ್ಥಾನ್= ವಸ್ತುಗಳನ್ನು, ಭಿನತ್ತಿ= ಎಂದರೆ, ಅನ್ಯಥೀಕುರುತೇ= ಇದ್ದ ಆಕಾರಕ್ಕಿಂತಲೂ ಭಿನ್ನ ಆಕಾರವಿರುವಂತೆ ತೋರಿಸುತ್ತದೆಯೋ ಆ ಕಾರಣದಿಂದ, ಭ್ರಮಃ= ಭ್ರಾಂತಿಯೂ ಕೂಡ, ಭಿದಾ= ಭಿದಾ ಶಬ್ದದಿಂದ ಹೇಳಲ್ಪಡುತ್ತದೆ.

**ಅನುವಾದ–** ನಷ್ಟವಾದ ಘಟಪಟಾದಿಗಳು ಭಿನ್ನಭಿನ್ನವೆಂದು ಹೇಳುತ್ತಾರೆ. ಭ್ರಾಂತಿಯೂ ಒಂದು ರೀತಿಯಲ್ಲಿ ಇರುವ ವಸ್ತುವನ್ನು ಅದಕ್ಕಿಂತ ಭಿನ್ನವಾದ ರೀತಿಯಲ್ಲಿ ತೋರಿಸುವ ಕಾರಣದಿಂದ ಭಿದಾ ಶಬ್ದದಿಂದ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಭಿನ್ನಭಿನ್ನಮಿತಿ ನಾಶಸ್ಯೋದಾಹರಣಮ್ । ಭೇದಶಬ್ದಸ್ಯ ಭ್ರಮವಾಚಿತ್ವೇ ಯೋಗಂ ಚಾಹ – ಭ್ರಮ ಇತಿ ॥ ಅರ್ಥಾನ್‌ಭಿನತ್ತೀತ್ಯ ಸ್ಯಾರ್ಥಕಥನಮನ್ಯಥೀಕುರುತ ಇತಿ । ಶುಕ್ತಿಂ ರಜತೀಕರೋತೀತ್ಯರ್ಥಃ । ಭ್ರಮಃ ಯತೋರ್ಥಾನ್‌ಭಿನತ್ತಿ ತಸ್ಮಾದ್ಭಿದೇತಿ ಯೋಜನಾ । ಪೂರ್ವಾರ್ಥಾದ್ಭಿನ್ನಾರ್ಥತಾಸಂಪಾದಕತ್ವೇನ ಭ್ರಮೋಪಿ ಭಿದೇತಿ ಭಾವಃ ॥ ೨೯೦ ॥

**ವಿವರಣೆ–** ಘಟಾದಿಗಳು ಭಿನ್ನಭಿನ್ನವೆಂಬುದು ನಾಶವೆಂಬ ಅರ್ಥದಲ್ಲಿ ಭೇದಶಬ್ದ ಪ್ರಯೋಗಕ್ಕೆ ಉದಾಹರಣೆ. ಭ್ರಮ ಎಂಬುದು ಹಿಂದಿನ ಶ್ಲೋಕದಲ್ಲಿ ಹೇಳಿದ ಪೃಥಿಗ್ಧೀ ಎಂಬ ಅರ್ಥದ ವಿವರಣೆ.

**ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಮ್ ।**
**ಇತಿ ತಸ್ಯೋಕ್ತಿರವ್ಯಕ್ತಾ ತದ್ವ್ಯಕ್ತೋಕ್ತೀರ್ವಿಚಾರಯ ॥ ೨೯೧ ॥**

**ಅರ್ಥ–** ಏಕಭಾವಾನಾಂ= ಒಂದೇ ಭಾವವುಳ್ಳ, ತ್ರಯಾಣಾಂ= ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ, ಯಃ= ಯಾವನು, ಭಿದಾಂ= ಭೇದವನ್ನು, ನವೈಪಶ್ಯತಿ= ನೋಡುವುದಿಲ್ಲವೋ, ಇತಿ= ಎಂಬ, ತಸ್ಯೋಕ್ತಿಃ= ಆ ಶುಕಾಚಾರ್ಯರ ವಚನವು, ಅವ್ಯಕ್ತಾ= ಅಸ್ಪಷ್ಟವಾಗಿದೆ, ತದ್ವ್ಯಕ್ತೋಕ್ತೀಃ= ವ್ಯಾಸರ ಸ್ಪಷ್ಟವಾದ ವಚನವನ್ನು, ವಿಚಾರಯ= ವಿಚಾರ ಮಾಡು.

**ಅನುವಾದ–** ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಂ ಎಂಬ ಶುಕಾಚಾರ್ಯರ ವಚನವು ಅಸ್ಪಷ್ಟವಾಗಿದೆ. ಅವರ ಸ್ಪಷ್ಟವಾದ ವಚನಗಳನ್ನು ವಿಚಾರ ಮಾಡು.

**ಭಾವವಿಲಾಸಿನೀ–** ಯದರ್ಥಂ ಭೇದಶಬ್ದಾರ್ಥಾ ಉಕ್ತಾಸ್ತದಿದಾನೀಂ ವಕ್ತುಮಾರಭತೇ – ತ್ರಯಾಣಾಮಿತಿ ॥ ತಸ್ಯ ವ್ಯಾಸಸ್ಯ । ಅವ್ಯಕ್ತಾ ಭೇದಶಬ್ದಸ್ಯನಾನಾರ್ಥಕತ್ವಾತ್ ಅರ್ಥವಿಶೇಷ-ವ್ಯಕ್ತಿರಹಿತಾ । ತದ್ವ್ಯಕ್ತೋಕ್ತೀಃ ತಸ್ಯವ್ಯಾಸಸ್ಯವ್ಯಕ್ತೋಕ್ತೀಃ । ತಥಾ ಚ ವ್ಯಕ್ತಾನುಸಾರೇಣಾವ್ಯಕ್ತ-ಸ್ಯಾರ್ಥೋ ನೇಯ ಇತಿ ಭಾವಃ ॥ ೨೯೧ ॥

**ವಿವರಣೆ–** ಯಾವ ಉದ್ದೇಶದಿಂದ ಭೇದ ಶಬ್ದಕ್ಕೆ ಅನೇಕ ಅರ್ಥಗಳನ್ನು ಹೇಳಿ, ಹಿಂದಿನ ಶ್ಲೋಕದಲ್ಲಿ ಪೀಠಿಕೆಯನ್ನು ರಚಿಸಿದರೋ, ಆ ವಿಷಯವನ್ನು ನಿರೂಪಿಸಲು ಇಲ್ಲಿ ಪ್ರಾರಂಭಿಸುತ್ತಾರೆ. ತ್ರಯಾಣಾಮೇಕಭಾವಾನಾಂ ಎಂಬುದು ಭಾಗವತ ಚತುರ್ಥ ಸ್ಕಂದದಲ್ಲಿ ಇರುವ ಶ್ಲೋಕ. ಇದು ವಿಷ್ಣುವು ದಕ್ಷನ ಯಜ್ಞದಲ್ಲಿ ಪ್ರತ್ಯಕ್ಷನಾಗಿ ಅವನನ್ನು ಕುರಿತು ಹೇಳುವ ಮಾತು ಎಂದು ಶುಕಾಚಾರ್ಯರು ಹೇಳಿದ್ದಾರೆ. ಸರ್ವಭೂತಾತ್ಮನಾಂ ಬ್ರಹ್ಮನ್ ಸ ಶಾಂತಿ ಮಧಿಗಚ್ಛತಿ ಎಂಬುದು ಆ ಶ್ಲೋಕದ ಉತ್ತರಾರ್ಧ. ಈ ಶ್ಲೋಕದ ನಿಜವಾದ ಅರ್ಥ ಬ್ರಹ್ಮನ ಅಂತರ್ಯಾಮಿಯಾದ ನನ್ನ ಬ್ರಹ್ಮರೂಪಕ್ಕೂ, ಶಿವನ ಅಂತರ್ಯಾಮಿಯಾದ ನನ್ನ ಶಿವರೂಪಕ್ಕೂ, ಮತ್ತು ನನಗೂ ಯಾರು ಭೇದವನ್ನು

ತಿಳಿಯುವುದಿಲ್ಲವೋ ಅದರಂತೆ ಸರ್ವಜೀವಾಂತರ್ಯಾಮಿಯಾದ ನನ್ನ ರೂಪಕ್ಕೂ, ನನ್ನ ಹೊರಗಿನ ರೂಪಕ್ಕೂ ಯಾರು ಭೇದವನ್ನು ತಿಳಿಯುವುದಿಲ್ಲವೋ ಅವನು ಮೋಕ್ಷವನ್ನು ಪಡೆಯುತ್ತಾನೆ ಎಂದು ಒಂದು ಅರ್ಥ. ಅಥವಾ ಬ್ರಹ್ಮ, ವಿಷ್ಣು, ಮಹೇಶ್ವರರಾದ ನಮ್ಮ ಮೂವರಿಗೆ ಯಾರು ಅಭಿಪ್ರಾಯಭೇದವನ್ನು ಎಂದರೆ ಮತಿಭೇದವನ್ನು ತಿಳಿಯುವುದಿಲ್ಲವೋ ಮತ್ತು ಸರ್ವಜೀವಾಂತರ್ಯಾಮಿಯಾದ ರೂಪಗಳಿಗೂ ಮತಿಭೇದವನ್ನು ತಿಳಿಯುವುದಿಲ್ಲವೋ ಅವನು ಮೋಕ್ಷವನ್ನು ಪಡೆಯುತ್ತಾನೆ ಎಂದು ಇನ್ನೊಂದು ಅರ್ಥ. ಆದರೆ ಆಪಾತತಃ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಭೇದವಿಲ್ಲವೆಂದು ಅರ್ಥ ತೋರುವುದರಿಂದ ಅದನ್ನು ಇಲ್ಲಿ ವಿಚಾರ ಮಾಡುತ್ತಿದ್ದಾರೆ. ಭೇದಶಬ್ದಕ್ಕೆ ಅನೇಕ ಅರ್ಥಗಳು ಇರುವುದರಿಂದ ಇಲ್ಲಿ ಯಾವ ಅರ್ಥದಲ್ಲಿ ಭೇದಶಬ್ದವನ್ನು ಪ್ರಯೋಗಿಸಲ್ಪಟ್ಟಿದೆ ಎಂದು ತಿಳಿಯುವುದಿಲ್ಲ. ಅದನ್ನು ನಿರ್ಧರಿಸಲು ಶುಕಾಚಾರ್ಯರೇ ಇಲ್ಲಿಯೇ ಚತುರ್ಥ ಸ್ಕಂದದಲ್ಲಿ ಇದಕ್ಕಿಂತ ಮೊದಲು ಹೇಳಿರುವ ಸ್ಪಷ್ಟವಾದ ಮಾತುಗಳನ್ನು, ಅನಂತರ ಅಷ್ಟಮ, ದಶಮ ಸ್ಕಂದದಲ್ಲಿ ಹೇಳಿರುವ ಸ್ಪಷ್ಟವಾದ ಮಾತುಗಳನ್ನು ವಿಮರ್ಶಿಸು ಎಂದು ಅಭಿಪ್ರಾಯ.

**ವಿತರ್ಕಃ ಸಮಭೂತ್ ತೇಷಾಂ ತ್ರಿಷ್ವಧೀಶೇಷು ಕೋ ಮಹಾನ್ ॥೨೯೨॥**

**ಅರ್ಥ–** ತೇಷಾಂ= ಆ ಋಷಿಗಳಿಗೆ, ತ್ರಿಷ್ವಧೀಶೇಷು= ಮೂರು ಜನ ಅಧೀಶ್ವರರಾದ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ, ಕಃ= ಯಾರು, ಮಹಾನ್= ಶ್ರೇಷ್ಠರಾದವರು ಎಂದು, ವಿತರ್ಕಃ= ಜಿಜ್ಞಾಸೆಯು, ಸಮಭೂತ್= ಉಂಟಾಯಿತು.

**ಅನುವಾದ–** ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಯಾರು ಶ್ರೇಷ್ಠರಾದವರು ಎಂಬ ಜಿಜ್ಞಾಸೆಯು ಆ ಋಷಿಗಳಿಗೆ ಉಂಟಾಯಿತು.

**ಭಾವವಿಲಾಸಿನೀ–** ವಿತರ್ಕ ಇತ್ಯುತ್ತರಾರ್ಧಸ್ಯ ಸರಸ್ವತ್ಯಾಸ್ತಟೇರಾಜನ್ನೃಷಯಃ ಸತ್ರಮಾಸತೇತಿ ಪೂರ್ವಾರ್ಧಮ್ । ತೇಷಾಮೃಷೀಣಾಂ ತ್ರಿಷ್ವಧೀಶೇಷು ಬ್ರಹ್ಮವಿಷ್ಣುಮಹೇಶ್ವರೇಷು ಕೋಮಹಾನಿತಿ ವಿತರ್ಕೋವಿಚಾರಃ ಸಮಭೂದಿತಿ ಯೋಜನಾ । ಅತ್ರ ತ್ರಿಷ್ವಧೀಶೇಷ್ವಿತ್ಯುಕ್ತತ್ವಾತ್ ಸಕಲಚೇತನೇಭ್ಯೋ ವಿಭೇದಸಿದ್ಧಿಃ । ತೇನ ಸರ್ವೈಕ್ಯಂ ನೇತಿ ಸೂಚಿತಮ್ । ತ್ರಿಷ್ವಧೀಶೇಷು ಕೋ ಮಹಾನಿತ್ಯುಕ್ತ್ವಾ ತ್ರಯಾಣಾಮೈಕ್ಯಂ ಸಾಮ್ಯಂಚ ನ ಕಿಂತು ತ್ರಯಾಣಾಂ ಮಧ್ಯೇ ಏಕೋ ಮಹಾನಿತಿ ಲಬ್ಧಮ್ । ಇದಂ ಚ ಋಷೀಣಾಂ ಪ್ರಶ್ನವಚನಂ ತ್ರಯಾಣಾಂ ಸುವ್ಯಕ್ತ-ಮನ್ಯೋನ್ಯಾಭಾವರೂಪಭೇದವಚನಮ್ । ತೇಷಾಂ ಸಿದ್ಧಾಂತರೂಪಮುತ್ತರಪದ್ಯಂಚ ವಿಷ್ಣೋಃ ಸರ್ವೋತ್ತಮತ್ವಸಮರ್ಥನಾತ್ ಸ್ಪಷ್ಟಮನ್ಯೋನ್ಯಾಭಾವರೂಪಭೇದವಚನಮ್ । ಅತ-ಸ್ತ್ರಯಾಣಾಮಿತಿ ಚತುರ್ಥಸ್ಕಂಧಪದ್ಯಮನ್ಯೋನ್ಯಾಭಾವರೂಪಭೇದಮೇವ ನ ಪಶ್ಯತೀತಿ ನ ವ್ಯಾಖ್ಯಾತುಮುಚಿತಮ್ । ಪರಸ್ಪರವಿರೋಧೇನ ವಾಕ್ಯಯೋರಪ್ರಾಮಾಣ್ಯಪ್ರಸಂಗಾತ್ । ಅತಃ

ಸ್ಪಷ್ಟವಚನೋಕ್ತಮನ್ಯೋನ್ಯಾಭಾವರೂಪಭೇದಂ ವಿಹಾಯ ತ್ರಯಾಣಾಂ ವಿರೋಧಾದಿರೂಪಂ ಭೇದಂ ನ ಪಶ್ಯತೀತ್ಯೇವ ವ್ಯಾಖ್ಯೇಯಮಿತಿ ಭಾವಃ ॥ ೨೯೨ ॥

**ವಿವರಣೆ–** ಇದು ಭಾಗವತ ದಶಮಸ್ಕಂದದ ಶ್ಲೋಕ. ಸರಸ್ವತ್ಯಾಸ್ತಟೇ ಬ್ರಹ್ಮನ್ ಋಷಯಃ ಸತ್ರಮಾಶತ ಎಂಬುದು ಈ ಶ್ಲೋಕದ ಪೂರ್ವಾರ್ಧ. ಸರಸ್ವತೀ ನದಿಯ ತೀರದಲ್ಲಿ ಋಷಿಗಳು ಸತ್ವಯಾಗವನ್ನು ಮಾಡಿದರು. ಆಗ ಅವರಿಗೆ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಯಾರು ಶ್ರೇಷ್ಠರಾದವರು ಎಂಬ ಸಂಶಯ ಉಂಟಾಯಿತು ಎಂದು ಅರ್ಥ. ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಯಾರು ಶ್ರೇಷ್ಠರಾದವರು ಎಂಬ ಸಂಶಯವನ್ನು ಅಂಗೀಕರಿಸಿದ ಋಷಿಗಳು, ಬ್ರಹ್ಮ ವಿಷ್ಣು ಮಹೇಶ್ವರರು ಅಭಿನ್ನರಲ್ಲ, ಸಮಾನರಲ್ಲ, ಅವರಲ್ಲಿ ಒಬ್ಬ ಮಾತ್ರ ಶ್ರೇಷ್ಠನಾದವನು, ಅವನು ಯಾರು ಎಂದು ವಿಮರ್ಶೆ ಮಾಡಬೇಕು ಎಂದು ನಿರ್ಧರಿಸುವುದರಿಂದ ಈ ಶ್ಲೋಕವೇ ಸ್ಪಷ್ಟವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರ ಅಭೇದವನ್ನು ನಿರಾಕರಿಸುತ್ತದೆ.

ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ ।
ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್ ॥೨೯೩॥

**ಅರ್ಥ–** ಸರ್ವೇ ಮುನಯಃ= ಎಲ್ಲ ಋಷಿಗಳು, ತಚ್ಛ್ರುತ್ವಾ = ಆ ಭೃಗುಗಳ ಪರೀಕ್ಷಾಪೂರ್ವಕವಾದ ಮಾತುಗಳನ್ನು ಕೇಳಿ, ವಿಸ್ಮಿತಾಃ= ಆಶ್ಚರ್ಯವನ್ನು ಹೊಂದಿದವರಾಗಿ, ಮುಕ್ತಸಂಶಯಾಃ= ತಮ್ಮ ಸಂಶಯವನ್ನು ಕಳೆದುಕೊಂಡು, ಯತಃ= ಯಾವನಿಂದ, ಶಾಂತಿಃ= ಸುಖವು, ಮತ್ತು ಯತಃ= ಯಾವನಿಂದ, ಅಭಯಂ= ಸಂಸಾರ ಭಯಪರಿಹಾರವು ಆಗುತ್ತದೆಯೋ ಅಂತಹ, ವಿಷ್ಣುಃ= ವಿಷ್ಣುವನ್ನು, ಭೂಯಾಂಸಂ= ಶ್ರೇಷ್ಠನೆಂದು, ಶ್ರದ್ದಧುಃ= ತಿಳಿದು ಅವನಲ್ಲಿ ಶ್ರದ್ಧೆಯನ್ನು ಮಾಡಿದರು.

**ಅನುವಾದ–** ಭೃಗು ಋಷಿಗಳು ಪರೀಕ್ಷೆಯನ್ನು ಮಾಡಿಬಂದು ಹೇಳಿದ ಮಾತುಗಳನ್ನು ಕೇಳಿದ ಎಲ್ಲಾ ಋಷಿಗಳು ವಿಸ್ಮಿತರಾಗಿ ತಮ್ಮ ಸಂಶಯಗಳನ್ನು ಕಳೆದುಕೊಂಡು ಯಾವ ವಿಷ್ಣುವಿನಿಂದ ಸಂಸಾರ ಭಯಪರಿಹಾರವು ಮತ್ತು ಅಪರಿಮಿತ ಮೋಕ್ಷಸುಖವು ಉಂಟಾಗುತ್ತದೆಯೋ, ಅಂತಹ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದು ಅವನಲ್ಲಿ ಶ್ರದ್ಧೆಯನ್ನು ಮಾಡಿದರು.

**ಭಾವವಿಲಾಸಿನೀ–** ತತ್ ಭೃಗುಣಾ ಪರೀಕ್ಷಾಪೂರ್ವಕಮ್ ಕೃತಸ್ಯ ವಿಷ್ಣೋಃ ಸರ್ವೋತ್ತಮತ್ವ-ನಿರ್ಣಯಸ್ಯ ವಚನಮ್ ॥ ೨೯೩ ॥

**ವಿವರಣೆ–** ಇದು ಭಾಗವತದ ಅದೇ ಅಧ್ಯಾಯದಲ್ಲಿ ಅನಂತರ ಬರುವ ಶ್ಲೋಕ. ಮೊದಲು ಹೇಳಿದ ಸಂಶಯಕ್ಕೆ ಈ ಶ್ಲೋಕವು ಉತ್ತರರೂಪವಾಗಿದೆ. ಉತ್ತರದಲ್ಲಿಯೂ

ಸಹ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ವಿಷ್ಣುವೇ ಶ್ರೇಷ್ಠನಾದವನೆಂದು ಭೃಗುವಿನ ಪರೀಕ್ಷೆಯಿಂದ ತಿಳಿಯುತ್ತದೆ. ಉಳಿದವರು ಪರಿಹಾರ ಮಾಡಲು ಸಾಧ್ಯವಿಲ್ಲದ ಸಂಸಾರಪರಿಹಾರವನ್ನು ವಿಷ್ಣುವೇ ಮಾಡುವುದರಿಂದಲೂ, ಉಳಿದವರು ಕೊಡಲು ಸಾಧ್ಯವಿಲ್ಲದ ಮೋಕ್ಷವನ್ನು ವಿಷ್ಣುವೇ ಕೊಡುವುದರಿಂದಲೂ, ವಿಷ್ಣುವೇ ಸರ್ವೋತ್ತಮನೆಂದು ಸಯುಕ್ತಿಕವಾಗಿ ಹೇಳಲಾಗಿದೆ. ಆದುದರಿಂದ ಇವುಗಳೆಲ್ಲಾ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಭೇದವನ್ನೇ ಸಮರ್ಥಿಸುವ ಸ್ಪಷ್ಟವಾದ ಮಾತುಗಳು.

**ಶಾಪಪ್ರಸಾದಯೋರೀಶಾ ಬ್ರಹ್ಮವಿಷ್ಣುಶಿವಾದಯಃ ।**
**ಸದ್ಯಃ ಶಾಪಪ್ರಸಾದೋಂಗ ಶಿವೋ ಬ್ರಹ್ಮಾ ನ ಚಾಚ್ಯುತಃ ॥ ೨೯೪ ॥**

**ಅರ್ಥ–** ಅಂಗ= ಎಲೈ ಪ್ರೀತಿಪಾತ್ರನೇ, ಬ್ರಹ್ಮವಿಷ್ಣುಶಿವಾದಯಃ= ಬ್ರಹ್ಮವಿಷ್ಣುಶಿವ ಮೊದಲಾದವರು, ಶಾಪಪ್ರಸಾದಯೋಃ= ನಿಗ್ರಹ ಮತ್ತು ಅನುಗ್ರಹವನ್ನು ಮಾಡಲು, ಈಶಾಃ= ಸಮರ್ಥರಾದವರು, ಶಿವಃ= ಶಿವನು, ಮತ್ತು, ಬ್ರಹ್ಮಾ= ಬ್ರಹ್ಮನು, ಸದ್ಯಃ ಶಾಪಪ್ರಸಾದಃ= ಬಹು ಬೇಗ ನಿಗ್ರಹವನ್ನು, ಅನುಗ್ರಹವನ್ನು ಮಾಡುವಂತಹವರು, ಅಚ್ಯುತಃ= ಅಚ್ಯುತನು, ನ ಚ= ಬೇಗ ನಿಗ್ರಹ ಅನುಗ್ರಹಗಳನ್ನು ಮಾಡುವವನಲ್ಲ.

**ಅನುವಾದ–** ಎಲೈ ಪ್ರೀತಿಪಾತ್ರನೇ! ಬ್ರಹ್ಮ, ವಿಷ್ಣು, ಮಹೇಶ್ವರರು ಶಾಪಾನುಗ್ರಹವನ್ನು ಮಾಡಲು ಸಮರ್ಥರು. ಅವರಲ್ಲಿ ಶಿವ ಮತ್ತು ಬ್ರಹ್ಮನು ಬಹಳ ಬೇಗ ಶಾಪವನ್ನೂ ಕೊಡುತ್ತಾರೆ ಮತ್ತು ಅನುಗ್ರಹವನ್ನೂ ಮಾಡುತ್ತಾರೆ. ಆದರೆ ಅಚ್ಯುತನು ಹಾಗೆ ಮಾಡುವುದಿಲ್ಲ.

**ಭಾವವಿಲಾಸಿನೀ– ಶಾಪೇತಿ** ಅತ್ರ ತ್ರಯಾಣಾಂ ಸ್ವಭಾವಭೇದಕಥನೇನ ಸ್ವರೂಪಭೇದೋಕ್ತಿಃ ॥ ೨೯೪ ॥

**ವಿವರಣೆ–** ಇದು ಭಾಗವತ ದಶಮಸ್ಕಂದದ ಶ್ಲೋಕ. ಈ ಮಾತನ್ನು ಶುಕಾಚಾರ್ಯರು ಪರೀಕ್ಷಿತ್ ರಾಜನನ್ನು ಕುರಿತು ಹೇಳುತ್ತಾರೆ. ಇಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಸ್ವಭಾವದಲ್ಲಿಯೇ ಶಾಪಾನುಗ್ರಹಶಕ್ತಿಯಲ್ಲಿ ಭೇದವಿರುವುದರಿಂದ ಅವರಲ್ಲಿರುವ ಭೇದವು ಸ್ಪಷ್ಟವಾಗಿ ನಿರೂಪಿಸಲ್ಪಡುತ್ತದೆ. ಆದ್ದರಿಂದ ಇದು ಇನ್ನೊಂದು ಸ್ಪಷ್ಟ ವಚನ.

**ಮನ್ಯೇ ತ್ವಾಂ ದೇವ ದೇವಾನಾಂ ತ್ರಯಾಣಾಂ ಪುರುಷರ್ಷಭಂ ।**
**ಯದ್ ಬಾಧಸೇ ಗುಹಧ್ವಾಂತಂ ಪ್ರದೀಪಪ್ರಭಯಾ ಯಥಾ ॥ ೨೯೫ ॥**

**ಅರ್ಥ–** ದೇವ= ಎಲೈ ದೇವನೇ, ಯತ್= ಯಾವ ಕಾರಣದಿಂದ, ಗುಹಾಧ್ವಾಂತಂ= ಗುಹೆಯಲ್ಲಿರುವ ಕತ್ತಲೆಯನ್ನು, ಪ್ರದೀಪಪ್ರಭಯಾಯಥಾ= ದೀಪದ ಕಾಂತಿಯಿಂದ

ಹೇಗೋ ಹಾಗೆ, ಬಾಧಸೇ= ವಿನಾಶ ಮಾಡುತ್ತಿದ್ದೀಯೋ ಆ ಕಾರಣದಿಂದ, ತ್ವಾಂ= ನಿನ್ನನ್ನು, ದೇವಾನಾಂ= ದೇವತೆಗಳಾದ, ತ್ರಯಾಣಾಮ್= ಮೂರು ಜನರ ಮಧ್ಯೆ, ಪುರುಷರ್ಷಭಂ= ಪುರುಷೋತ್ತಮನಾದ ವಿಷ್ಣುವೆಂದು, ಮನ್ಯೇ= ತಿಳಿಯುತ್ತೇನೆ.

**ಅನುವಾದ–** ಪ್ರದೀಪದ ಕಾಂತಿಯಿಂದ ಕತ್ತಲೆಯು ಪರಿಹಾರವಾಗುವಂತೆ, ನೀನು ಗುಹೆಯ ಕತ್ತಲೆಯನ್ನು ನಾಶಮಾಡುತ್ತಿರುವುದರಿಂದ ನಿನ್ನನ್ನು ದೇವೇಶ್ವರರಾದ ಮೂವರ ಮಧ್ಯೆ ಪುರುಷೋತ್ತಮನಾದ ವಿಷ್ಣುವೆಂದು ಭಾವಿಸುತ್ತೇನೆ.

**ಭಾವವಿಲಾಸಿನೀ–** ಮನ್ಯೇ ತ್ವಾಮಿತಿ ಮುಚುಕುಂದ ವಾಕ್ಯೇ ಚ ತ್ರಯಾಣಾಂ ದೇವಾನಾಂ ಮಧ್ಯೇ ತ್ವಾಂ ಪುರುಷರ್ಷಭಂ ಪುರುಷೋತ್ತಮಂ ಮನ್ಯ ಇತ್ಯುಕ್ತ್ಯಾ ಬ್ರಹ್ಮಶಿವಾಭ್ಯಾಂ ಕೃಷ್ಣಸ್ಯ ಸ್ಪಷ್ಟಮನ್ಯೋನ್ಯಾಭಾವಃ ಪ್ರತಿಪಾದ್ಯತೇ । ಯದ್ಯಸ್ಮಾತ್ ಗುಹಾಧ್ವಾಂತಂ ಹೃದಯ ಗುಹಾಸ್ಥಿತಮಜ್ಞಾನಮ್ ॥ ೨೯೫ ॥

**ವಿವರಣೆ–** ಇದು ಅಷ್ಟಮಸ್ಕಂದದಲ್ಲಿ ಕೃಷ್ಣನನ್ನು ಕುರಿತು ಮುಚುಕುಂದನು ಹೇಳುವ ಮಾತು. ಇಲ್ಲಿ ತ್ರಯಾಣಾಮ್ ಎಂದು ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ತ್ರಿತ್ವಸಂಖ್ಯೆಯನ್ನು ಹೇಳಿರುವುದರಿಂದ ಸ್ಪಷ್ಟವಾಗಿ ಭೇದವೇ ತಿಳಿಯುತ್ತದೆ. ತ್ರಯಾಣಾಮ್ ಪುರುಷರ್ಷಭಂ ಎಂದು ಮೂವರ ಮಧ್ಯದಲ್ಲಿ ಶ್ರೇಷ್ಠನಾದವನು ಎಂದು ನಿರ್ಧಾರ ಮಾಡಿರುವುದರಿಂದ, ವಿಷ್ಣುವು ಬ್ರಹ್ಮ, ಶಿವರಿಗಿಂತ ಉತ್ತಮನಾದವನು, ಆದ್ದರಿಂದ ಭಿನ್ನನು ಎಂದು ಸಿದ್ಧವಾಗುತ್ತದೆ. ಆದ್ದರಿಂದ ಇದೂ ಒಂದು ಮೂವರಲ್ಲಿ ಭೇದವನ್ನು ಹೇಳುವ ಸ್ಪಷ್ಟವಾದ ವಚನ.

**ದೇವಾಸುರಮನುಷ್ಯೇಷು ಯೇ ಭಜಂತ್ಯಶಿವಂ ಶಿವಂ ।**
**ಪ್ರಾಯಸ್ತೇ ಧನಿನೋ ಬ್ರಹ್ಮನ್ ನ ತು ಲಕ್ಷ್ಮೀಪತಿಂ ಹರಿಂ ॥ ೨೯೬ ॥**

**ಅರ್ಥ–** ಬ್ರಹ್ಮನ್= ಎಲೈ ಬ್ರಾಹ್ಮಣನೇ, ದೇವಾಸುರಮನುಷ್ಯೇಷು= ದೇವಾಸುರಮನುಷ್ಯನಲ್ಲಿ, ಯೇ= ಯಾರು, ಅಶಿವಂ= ಅಮಂಗಲನಾದ, ಶಿವಂ= ರುದ್ರನನ್ನು, ಭಜಂತಿ= ಭಜಿಸುತ್ತಾರೆಯೋ, ತೇ= ಅವರು, ಪ್ರಾಯಃ= ಹೆಚ್ಚಾಗಿ, ಧನಿನಃ= ಐಶ್ವರ್ಯವಂತರಾಗಿರುತ್ತಾರೆ, ಲಕ್ಷ್ಮೀಪತಿಂ ಹರಿಂ= ಲಕ್ಷ್ಮೀಪತಿಯಾದ ಹರಿಯನ್ನು ಭಜಿಸುವವರು, ನತು= ಐಶ್ವರ್ಯವಂತರಾಗಿರುವುದಿಲ್ಲ.

**ಅನುವಾದ–** ಎಲೈ ಬ್ರಾಹ್ಮಣನೇ! ದೇವಾಸುರಮನುಷ್ಯರಲ್ಲಿ ಯಾರು ಅಮಂಗಲನಾದ ಶಿವನನ್ನು ಭಜಿಸುತ್ತಾರೆಯೋ ಅವರು ಹೆಚ್ಚಾಗಿ ಐಶ್ವರ್ಯವಂತರಾಗಿರುತ್ತಾರೆ. ಆದರೆ ಲಕ್ಷ್ಮೀಪತಿಯಾದ ಹರಿಯನ್ನು ಭಜಿಸುವವರು ಐಶ್ವರ್ಯವಂತ-ರಾಗಿರುವುದಿಲ್ಲ.

**ಭಾವವಿಲಾಸಿನೀ–** ದೇವಾಸುರಮನುಷ್ಯೇಷ್ವಿತಿ ಭಾಗವತಶ್ಲೋಕೇಪಿ ಸ್ಪಷ್ಟಂ ಶಿವಾತ್ಕೃಷ್ಣಸ್ಯ ವೈಲಕ್ಷಣ್ಯಪ್ರತಿಪಾದನಾತ್ ಅನ್ಯೋನ್ಯಾಭಾವಸಿದ್ಧಿಃ ॥ ೨೯೬ ॥

**ವಿವರಣೆ–** ಇದು ಭಾಗವತ ದಶಮಸ್ಕಂದದ ಒಂದು ವಚನ. ಇಲ್ಲಿ ಶಿವನಿಗೂ ಮತ್ತು ವಿಷ್ಣುವಿಗೂ ಫಲವನ್ನು ಕೊಡುವ ವಿಷಯದಲ್ಲಿ ಸ್ವಭಾವಭೇದವನ್ನು ಹೇಳಿದ್ದಾರೆ. ಶಿವನು ಐಶ್ವರ್ಯವನ್ನು ಕೊಡುವಂತಹವನು. ವಿಷ್ಣುವು ಅಂತಹ ಸ್ವಭಾವವನ್ನು ಹೊಂದಿರುವವನಲ್ಲ ಎಂದು ಹೇಳಿ, ಶಿವ ಮತ್ತು ವಿಷ್ಣುವಿಗೆ ಭೇದವನ್ನೇ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

**ಅತ್ರಾಪಿ ಭೃಗುರುದ್ರೋಕ್ತಿರತ್ಯುಚ್ಚಂ ಹರಿಮಾಹ ಹಿ ।**
**ಪೂರ್ವಾವ್ಯವಹಿತೋಕ್ತ್ಯಾ ಚ ಸರ್ವೇಶೋ ವಿಷ್ಣುರೀರ್ಯತೇ ॥ ೨೯೭ ॥**

**ಅರ್ಥ–** ಅತ್ರಾಪಿ= ಇಲ್ಲಿಯೂ ಸಹ, ಭೃಗುರುದ್ರೋಕ್ತಿಃ= ಭೃಗು ಮತ್ತು ರುದ್ರರ ವಚನವು, ಹರಿಂ= ಹರಿಯನ್ನು, ಅತ್ಯುಚ್ಚಂ= ಸರ್ವೋತ್ತಮನೆಂದು, ಆಹ ಹಿ= ಹೇಳುತ್ತದೆಯಷ್ಟೇ, ಪೂರ್ವಾವ್ಯವಹಿತೋಕ್ತ್ಯಾ ಚ= ಈ ಶ್ಲೋಕದ ಸಮೀಪದಲ್ಲಿಯೇ ಹಿಂದೆ ಬಂದಿರುವ ಮೈತ್ರೇಯರ ವಚನಗಳಿಂದಲೂ, ವಿಷ್ಣುಃ= ವಿಷ್ಣುವು, ಸರ್ವೇಶಃ= ಸರ್ವೋತ್ತಮನೆಂದು, ಈರ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಇಲ್ಲಿಯೂ ಸಹ ಭೃಗುವಚನ ಮತ್ತು ರುದ್ರವಚನಗಳು ಹರಿಯನ್ನೇ ಸರ್ವೋತ್ತಮನೆಂದು ಹೇಳುತ್ತವೆಯಷ್ಟೇ. ಈ ಶ್ಲೋಕಕ್ಕೆ ಸಮೀಪದಲ್ಲಿಯೇ ಇರುವ ಹಿಂದಿನ ಮೈತ್ರೇಯರ ವಚನದಿಂದಲೂ ಸಹ ವಿಷ್ಣುವೇ ಸರ್ವೇಶ್ವರನೆಂದು ಹೇಳಲ್ಪಡುತ್ತದೆಯಷ್ಟೇ!

**ಭಾವವಿಲಾಸಿನೀ–** ಬಹಿರಂಗಚತುರ್ವಿಧವಚನಮುಕ್ತ್ವಾಂತರಂಗವಚನ ಪಂಚಕವಿರೋಧಮ-ಪ್ಯಾಹ – **ಅತ್ರೇತಿ** ॥ ಅತ್ರಾಸ್ಮಿನ್ನಧ್ಯಾಯೇ ।ಯನ್ಮಾಯಯಾ ಗಹನಯೋಪಹತಾತ್ಮ ಬೋಧಾ ಬ್ರಹ್ಮಾದಯಸ್ತನುಭೃತಸ್ತಮಸಿ ಸ್ವಪಂತಃ । ನಾತ್ಮಾಶ್ರಿತಂ ತವವಿದಂತ್ಯಧುನಾಪಿತತ್ತ್ವಂ ಸೋಽಯಂ ಪ್ರಸೀದತು ಭವಾತ್ ಪ್ರಣತಾತ್ಮಬಂಧುರಿತಿ ಭೃಗೂಕ್ತಿಃ ॥

ಯಸ್ಯಪರಮಾತ್ಮನಃ ಮಾಯಯಾ ಇಚ್ಛಯಾ ತದಧೀನಪ್ರಕೃತ್ಯಾವಾ ಉಪಹತಾತ್ಮಬೋಧಾಃ ಉಪಹತಃ ಸ್ವಯೋಗ್ಯತಾತಿರೇಕೇಣ ದ್ರಷ್ಟುಂ ಪ್ರತಿಬದ್ಧಃ ಆತ್ಮಬೋಧಃಪರಮಾತ್ಮಬೋಧಃ । ಆತ್ಮಾಶ್ರಿತಂ ತವತತ್ವಂ ಯಥಾಸ್ಥಿತಗುಣಾದಿಭರಿತಸ್ವರೂಪಂ ಅಧುನಾಪಿ ನ ವಿದಂತಿ । ಪ್ರಣತಾತ್ಮ-ಬಂಧುಃ ಪ್ರಣತಾನಾಮಾತ್ಮನಾಂ ಜೀವಾನಾಂ ಬಂಧುಃಸೋಽಯಂ ಭಗವಾನ್ ಪ್ರಸೀದತ್ವಿತಿ ಯೋಜನಾ ॥

ತವವರದವರಾಂಘ್ರಾವಾಶಿಷಾ ಚಾನಭಿಧ್ಯೇ ಹ್ಯಪಿ ಮುನಿಭಿರಸಕ್ತೈರಾದರೇಣಾರ್ಹ-ಣೀಯೇ । ಯದಿ ರಚಿತಧಿಯಂ ಮಾಂ ವಿದ್ಧಿ ಲೋಕಾಪವಿದ್ಧಂ ಜಗತಿ ನ ಗಣಯೇಽಯಂ

ತ್ವತ್ಪರಾನುಗ್ರಹೇಣೇತಿರುದ್ರೋಕ್ತಿಃ ॥ ಆಶಿಷಾ ಫಲಾಶಯಾ ಅನಭಿಧ್ಯೇ ಅಭಿಧ್ಯಾತುಮ-ಯೋಗ್ಯೇ ಅಸಕ್ತೈರಪಿಮುನಿಭಿಃ । ತವವರದವರಾಂಘ್ರೌ ಲೋಕಾಪವಿದ್ಧಂ ಲೋಕಸ್ನೇಹರಹಿತಂ ರಚಿತಧಿಯಂ ಸ್ಥಾಪಿತಬುದ್ಧಿಂ ಮಾಂ ತ್ವಂ ಜಾನೀಯಾಃ । ತರ್ಹಿತ್ವತ್ಪರಾನುಗ್ರಹೇಣ ತ್ವತ್ಪರಮಾನುಗ್ರಹೇಣ । ನ ಗಣಯೇಯಮ್ । ಅನ್ಯತ್ಸರ್ವಮುಪೇಕ್ಷಯಾಮೀತಿಭಾವಃ ॥ ಏವಂಚಪ್ರಥಮಪದ್ಯೇ ಭೃಗುಣಾ ಬ್ರಹ್ಮಾದೀನಾಂ ಭಗವತಃ ಸಕಾಶಾನ್ಮಾಯಾ ಪ್ರತಿಬದ್ಧತಯಾ, ಸ್ವಹೃದ್ಯೋಧೇಯಸ್ಯ ಭಗವತಃ ಆಧಾರತಯಾ, ಸಕಲ ಭಗವತ್ತತ್ತ್ವಾಜ್ಞಾತೃತಯಾ ಚಾತ್ಯಂತ-ಭೇದಸ್ಯೈವ ಪ್ರತಿಪಾದಿತತ್ವಾತ್ । ದ್ವಿತೀಯಶ್ಲೋಕೇ ಚ ರುದ್ರೇಣೈವ ಸ್ವಸ್ಯ ಭಗವಚ್ಚರಣ-ಧ್ಯಾತೃತಯಾ ಭಗವತಃ ಪರಮಾನುಗ್ರಹಪಾತ್ರತಯಾ ಚಾತ್ಯಂತ ಭೇದಸ್ಯೈವ ಪ್ರತಿಪಾದನಾತ್ ಕಥಂ ಪುನರಸ್ಮಿನ್ನೇವಾಧ್ಯಾಯೇ ತ್ರಯಾಣಾಮಿತಿ ಪದ್ಯೇ ತದಭೇದೋಪಿ ಪ್ರತಿಪಾದನೀಯಃ । ಅತೋ ನಿರವಕಾಶೈ ತತ್ಪದ್ಯಬಲಾದ್ವಿರೋಧರೂಪಭೇದಾರ್ಥಕತಯಾ ಸಾವಕಾಶಸ್ಯ ಯೋ ನ ಪಶ್ಯತಿ ವೈಭಿದಾಮಿತ್ಯಸ್ಯೈವಾರ್ಥಾಂತರಂ ವಕ್ತವ್ಯಮಿತಿ ಭಾವಃ । ನಿಮಿತ್ತಾಂತರಂ ಚಾಹ – **ಪೂರ್ವೇತಿ** ॥ ಪೂರ್ವಾ ಭೃಗೋರುದ್ರೋಕ್ತಿತೋಪಿ ಪೂರ್ವಾ । ಅವ್ಯವಹಿತಾ ಅವ್ಯವಧಾನಾ ಪುರುಷಾಂತರವ್ಯವಧಾನರಹಿತಾ । ಉಕ್ತಿಃ ತ್ರಯಾಣಾಮಿತಿ ಶ್ಲೋಕವಕ್ತುರ್ಮೈತ್ರೇ-ಯಸ್ಯೈವೋಕ್ತಿಃ । ತಯಾ । ತಮುಪಾಗತಮಾಲಕ್ಷ್ಯಸರ್ವೇ ಸುರಗಣಾದಯಃ । ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ । ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ । ಮೂರ್ಧ್ನ್ಯಧೃತಾಂಜಲಿಪುಟಾ ಉಪತಸ್ಥುರಧೋಕ್ಷಜಮ್ । ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ । ಯಥಾಮತಿ ಗೃಣಂತಿ ಸ್ಮ ಕೃತಾನುಗ್ರಹವಿಗ್ರಹಮ್ । ಇತಿ ಭಗವದಾಗಮನ ಪ್ರಸ್ತಾವಕಾಲೀನ ಪದ್ಯತ್ರಯೇಣೇತ್ಯರ್ಥಃ । ತ್ರ್ಯಕ್ಷೋಮಹಾದೇವಃ । ಅರ್ವಾಗಧಸ್ತಾತ್ । ತನ್ಮಹಿಮ್ನಾಮೇಕದೇಶೇ । ತನ್ಮಹಿಮ್ನಾಮೇಕದೇಶಪರಿಮಿತ-ಮಹಿಮ್ನೀತಿಯಾವತ್ । ಆದ್ಯೇಽರ್ಥೇ ವೃತ್ತಿರಂತಃಕರಣಮ್ । ದ್ವಿತೀಯೇಽರ್ಥೇ ವರ್ತನಂ ವಾ ಯೇಷಾಂತೇ ತಥೋಕ್ತಾಃ । ಸ್ವಭೂಸ್ಸ್ವಯಂಭೂಃ । ಕೃತಾನುಗ್ರಹವಿಗ್ರಹಂ ಕೃತಃ ಅನುಗ್ರಹಃ ಕೃಪಾವಲೋಕನಮಂದಸ್ಮಿತಪ್ರಿಯವಚನಾದಿಃಯೇನಸಃ ಕೃತಾನುಗ್ರಹಃ ಸಃ ವಿಗ್ರಹೋ ಯಸ್ಯ । ಕೃತೌ ದೇವಾಸುರಯೋರನುಗ್ರಹವಿಗ್ರಹೌ ಅನುಗ್ರಹಕಲಹೌ ಯೇನ ಸ ಇತಿ ವಾ । ದೇವೇಷ್ವನುಗ್ರಹಾಯ ದೈತ್ಯಾನಾಂ ವಧಾಯ ಚ ಯದಾಸ್ವಮೂರ್ತಿಂ ದರ್ಶಯತಿ ತದಾ ತಮಭ್ಯುತ್ಥಾನಾದಿನಾ ಗೃಹ್ಣಂತಿ । ಅನ್ಯದಾಽದೃಶ್ಯಮೂರ್ತಿತ್ವಾತ್ ಮನಸ್ಯೇವ ಧ್ಯಾಯಂತಸ್ಸ್ವಸ್ವ ವ್ಯಾಪಾರೇಷುವರ್ತಂತ ಇತ್ಯರ್ಥಃ । ಅತ್ರ ವಿಷ್ಣುರ್ಬ್ರಹ್ಮರುದ್ರಾದಿಭ್ಯಃ ಸರ್ವೇಭ್ಯ ಈಶ ಇತಿ ಸ್ಪಷ್ಟಮೀರ್ಯತೇ ॥ ೨೯೭ ॥

**ವಿವರಣೆ**– ಬಹಿರಂಗವಾದ ಎಂದರೆ ದೂರದ ಅಷ್ಟಮ ಮತ್ತು ದಶಮಸ್ಕಂದಗಳ ವಚನದಿಂದ ವಿಷ್ಣುಸರ್ವೋತ್ತಮತ್ವವನ್ನು ಸ್ಥಾಪಿಸಿ, ಇದೇ ಪ್ರಕರಣದಲ್ಲಿ ಇರುವ ಐದು ವಚನಗಳಿಂದಲೂ ವಿಷ್ಣು ಸರ್ವೋತ್ತಮತ್ವವನ್ನು ಇಲ್ಲಿ ಸಮರ್ಥನೆ ಮಾಡುತ್ತಾರೆ. ಆ ಐದು

ವಚನಗಳಲ್ಲಿ ಒಂದು ಭೃಗು ವಚನ, ಒಂದು ರುದ್ರ ವಚನ ಮತ್ತು ಮೂರು ಮೈತ್ರೇಯ ವಚನಗಳು. ಭೃಗು ವಚನವು ಹೀಗಿದೆ :

ಯನ್ಮಾಯಯಾ ಗಹನಯೋಪಹತಾತ್ಮಬೋಧಾಃ
ಬ್ರಹ್ಮಾದಯಸ್ತನುಭೃತಃ ತಮಸಿ ಸ್ವಪಂತಃ
ನಾತ್ಮಶ್ರಿತಂ ತವ ವಿದಂತಿ ಅಧುನಾಪಿ ತತ್ವಂ
ಸೋಯಂ ಪ್ರಸೀದತು ಭವಾನ್ ಪ್ರಣತಾತ್ಮ ಬಂಧುಃ ॥ ಎಂಬುದಾಗಿ ಇದೆ.

ಈ ಶ್ಲೋಕದಲ್ಲಿ ಬ್ರಹ್ಮಾದಿಗಳು ವಿಷ್ಣುವಿನ ಸಾಮರ್ಥ್ಯದಿಂದ ತಮ್ಮ ಪರಮಾತ್ಮ ಜ್ಞಾನವನ್ನು ಕಳೆದುಕೊಂಡವರಾಗಿ ಅಜ್ಞಾನದಲ್ಲಿ ಇದ್ದಾರೆ ಎಂಬ ಅರ್ಥವು ಹೇಳಲ್ಪಡುತ್ತದೆ. ಹರಿಯ ಸಾಮರ್ಥ್ಯದಿಂದ ಬ್ರಹ್ಮಾದಿಗಳು ಆತ್ಮಬೋಧವನ್ನು ಕಳೆದುಕೊಂಡು ಅವನ ದಯೆಯಿಂದಲೇ ಅದನ್ನು ಪುನಃ ಸಂಪಾದಿಸುತ್ತಾರೆ ಎಂದು ಹೇಳಿರುವುದರಿಂದ ಬ್ರಹ್ಮಾದಿಗಳಿಗಿಂತಲೂ ಹರಿಯು ಸರ್ವೋತ್ತಮನೆಂದು ಸಿದ್ಧವಾಗುತ್ತದೆ.

ರುದ್ರ ವಚನವು ಹೀಗಿದೆ :-

ತವ ವರದ ವರಾಂಘ್ರಾ ವಾಶಿಷಾ ಚಾನಭಿದ್ಯೇ
ಹ್ಯಪಿಮುನಿಭಿರಸಕ್ತೈಃ ಆದರೇಣಾರ್ಹಣೀಯೇ ।
ಯದಿ ರಚಿತಧಿಯಂ ಮಾಂ ವಿದ್ಧಿ ಲೋಕಾಪವಿದ್ಧಂ
ಜಗತಿ ನ ಗಣಯೇಯಂ ತ್ವತ್ಪರಾನುಗ್ರಹೇಣ । ಎಂಬುದಾಗಿ ಇದೆ.

ಎಲೈ ವರಪ್ರದನಾದ ವಿಷ್ಣುವೇ, ವಿರಕ್ತರಾದ ಮುನಿಗಳಿಂದ ಆದರದಿಂದ ಅರ್ಚಿಸಲ್ಪಡುವ, ಕ್ಷುದ್ರ ಕಾಮನೆಗಳಿಂದ ಅರ್ಚಿಸಲ್ಪಡಬಾರದ ನಿನ್ನ ಪಾದಗಳಲ್ಲಿ ನನ್ನ ಬುದ್ಧಿಯು ಲಗ್ನವಾಗಿದೆ ಎಂದು ನೀನು ತಿಳಿಯುವುದಾದರೆ ನಿನ್ನ ಪರಮಾನುಗ್ರಹಕ್ಕೆ ಪಾತ್ರನಾದ ನಾನು ಲೋಕಾಪವಾದವನ್ನು ಪರಿಗಣಿಸುವುದೇ ಇಲ್ಲ ಎಂದು ಅರ್ಥ. ಇದರಿಂದ ರುದ್ರದೇವರು ಯಾವಾಗಲೂ ಹರಿಯನ್ನು ಧ್ಯಾನ ಮಾಡುತ್ತಿದ್ದಾರೆಂದೂ, ಅವರ ಅನುಗ್ರಹಾಕಾಂಕ್ಷಿಗಳಾಗಿದ್ದಾರೆಂದೂ, ಹರಿಯನ್ನು ಸಂತೋಷಪಡಿಸುವುದೇ ಅವರ ಉದ್ದೇಶವೆಂದೂ ತಿಳಿಯುವುದರಿಂದ ರುದ್ರದೇವರಿಗಿಂತಲೂ ಹರಿಯು ಉತ್ತಮನೆಂದು ತಿಳಿಯುತ್ತದೆ. ಇನ್ನು ಈ ಶ್ಲೋಕದ ಸಮೀಪದಲ್ಲೇ ಹಿಂದೆ ಬಂದಿರುವ ಮೈತ್ರೇಯರ ಮಾತುಗಳು ಈ ರೀತಿ ಇವೆ :

ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ
ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ।
ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ ।
ಮೂರ್ಧ್ನ್ಯರ್ಧ್ವತಾಂಜಲಿ ಪುಟಾ ಉಪತಸ್ಥುರಧೋಕ್ಷಜಂ ।

**ಅಪ್ಯರ್ವಾಗ್ ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ ।**
**ಯಥಾಮತಿ ಗೃಣಂತಿ ಸ್ಮಕೃತಾನುಗ್ರಹವಿಗ್ರಹಂ ॥**

ಹರಿಯು ಪ್ರಾಪ್ತನಾಗಿ ಬಂದುದನ್ನು ನೋಡಿ ಬ್ರಹ್ಮ-ರುದ್ರ-ಇಂದ್ರರನ್ನೇ ನಾಯಕರನ್ನಾಗಿ ಉಳ್ಳ ಎಲ್ಲಾ ದೇವತಾಗಣಗಳೂ ಇದ್ದಕ್ಕಿದ್ದಂತೆ ಎದ್ದು ನಮಸ್ಕರಿಸಿದವು. ಹರಿಯ ಕಾಂತಿಯಿಂದ ತಮ್ಮ ಕಾಂತಿಯನ್ನು ಕಳೆದುಕೊಂಡವರಾಗಿ ಹೆದರಿಕೆಯಿಂದ ನಾಲಿಗೆಯು ಉಡುಗಿಹೋಗುತ್ತಿರಲು ತಲೆಯ ಮೇಲೆ ಕೈಗಳನ್ನು ಜೋಡಿಸಿ ಅಧೋಕ್ಷಜನಾದ ಹರಿಯನ್ನು ಸ್ತೋತ್ರಮಾಡಿದರು. ಮಹಿಮೆಯ ವಿಷಯದಲ್ಲಿ ಬ್ರಹ್ಮಾದಿಗಳು ಹರಿಗಿಂತಲೂ ಯಾವಾಗಲೂ ಕೆಳಗೇ ಇರುವವರಾದರೂ ಭಕ್ತರ ಮೇಲೆ ಅನುಗ್ರಹ ಮಾಡಲು ಶರೀರವನ್ನು ಧರಿಸಿದ ಹರಿಯನ್ನು ತಮ್ಮ ಬುದ್ಧಿಗೆ ನಿಲುಕುವಷ್ಟು ಸ್ತೋತ್ರ ಮಾಡಿದರು.

ಈ ಮೂರು ಶ್ಲೋಕಗಳಲ್ಲಿ ಬ್ರಹ್ಮ-ರುದ್ರ- ಇಂದ್ರರು ಹರಿಗೆ ನಮಸ್ಕಾರ ಮಾಡಿದರು ಎಂದೂ, ಬ್ರಹ್ಮ-ರುದ್ರಾದಿಗಳ ಕಾಂತಿಗಿಂತ ಹರಿಯ ಕಾಂತಿ ಅಧಿಕವೆಂದೂ, ಹರಿಯ ಸಾಮರ್ಥ್ಯವನ್ನು ನೋಡಿ ಅವರಿಗೆ ಹೆದರಿಕೆಯಿಂದ ನಾಲಿಗೆಯ ಉಡುಗಿ ಹೋಯಿತೆಂದೂ, ಅವರೆಲ್ಲರೂ ಹರಿಯನ್ನು ಸ್ತೋತ್ರ ಮಾಡಿದರೆಂದೂ, ಮಹಿಮೆಯ ವಿಷಯದಲ್ಲಿ ಅವರೆಲ್ಲರೂ ಯಾವಾಗಲೂ ಕೆಳಗಿನವರೆಂದೂ, ಅವರು ಮಾಡುವ ಸ್ತೋತ್ರವೂ ಸಹ ಹರಿಯ ಎಲ್ಲಾ ಗುಣಗಳನ್ನೂ ಸ್ಪರ್ಶಿಸದೇ ಅವರವರ ಯೋಗ್ಯತೆ ಇದ್ದಷ್ಟು ಮಾತ್ರ ವರ್ಣಿಸುತ್ತದೆಂದೂ ಹೇಳಿರುವುದರಿಂದ ಹರಿಗೆ ಬ್ರಹ್ಮ-ರುದ್ರರಿಗಿಂತಲೂ ಉತ್ತಮೋತ್ತಮತ್ವವಿರುತ್ತದೆಂದು ಸಿದ್ಧವಾಗುತ್ತದೆ.

**ಹೇತುಗರ್ಭೈಕಭಾವಾನಾಮಿತಿ ತನ್ಮಧ್ಯಗೈವ ವಾಕ್ ।**
**ಅತೋಽಪಿ ಬುದ್ಧಿಭೇದಸ್ಯ ನಿಷೇಧ ಇತಿ ಸಿದ್ಧ್ಯತಿ ॥ ೨೯೮ ॥**

**ಅರ್ಥ–** ಹೇತುಗರ್ಭ= ಹೇತುಗರ್ಭವಾದ, ಏಕಭಾವಾನಾಮಿತಿ= ಏಕಭಾವಾನಾಂ ಎಂಬ, ವಾಕ್= ಮಾತು, ತನ್ಮಧ್ಯಗೈವ= ಇದೇ ಶ್ಲೋಕದ ಮಧ್ಯದಲ್ಲಿಯೇ ಇದೆ, ಅತೋಽಪಿ= ಆ ಕಾರಣದಿಂದಲೂ ಕೂಡ ಇದು, ಬುದ್ಧಿಭೇದಸ್ಯ ನಿಷೇಧಃ= ಬುದ್ಧಿಭೇದದ ನಿಷೇಧವು, ಇತಿ= ಎಂದು, ಸಿದ್ಧ್ಯತಿ= ಸಿದ್ಧವಾಗುತ್ತದೆ.

**ಅನುವಾದ–** ತ್ರಯಾಣಾಮ್ ಏಕಭಾವಾನಾಂ ಎಂಬ ಈ ಶ್ಲೋಕದ ಮಧ್ಯಲ್ಲಿಯೇ ಹೇತುಗರ್ಭವಾದ ಏಕಭಾವಾನಾಂ ಎಂಬ ಪದವು ಇದೆ. ಆದ್ದರಿಂದಲೂ ಕೂಡ ಇದು ಬುದ್ಧಿಭೇದವನ್ನೇ ನಿಷೇಧಿಸುತ್ತದೆ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಹೇತುಗರ್ಭೇತಿ** ॥ ತನ್ಮಧ್ಯಗೈವ ತ್ರಯಾಣಾಮಿತಿ ಶ್ಲೋಕಮಧ್ಯಗೈವ । ಏಕಭಾವಾನಾಮಿತಿ ಹೇತುಗರ್ಭಾ ವಾಗಸ್ತಿ । ಏಕಬುದ್ಧಿತ್ವಂ ಹಿ

ಬುದ್ಧಿಭೇದಾಭಾವ ಏವ ಹೇತುಃ । ನತು ಸ್ವರೂಪಭೇದಾಭಾವೇ । ಏಕಬುದ್ಧೀನಾಮಪಿ ಜ್ಯೇಷ್ಠ-ಕನಿಷ್ಠಾನಾಂ ಸ್ವರೂಪಭೇದದರ್ಶನಾತ್ । ಅತೋಪ್ಯೇಕಭಾವಾನಾಮಿತಿ ವಿಶೇಷಣದಾನಾದಪಿ ಬುದ್ಧಿಭೇದಸ್ಯೈವ ನಿಷೇಧ ಇತಿ ಸಿದ್ಧ್ಯತಿ ॥ ೨೯೮ ॥

**ವಿವರಣೆ–** ಈವರೆಗೆ ದೂರದಲ್ಲಿರುವ ಮತ್ತು ಇದೇ ಪ್ರಕರಣದಲ್ಲಿರುವ ವಚನಗಳಿಂದ ವಿಷ್ಣು ಶಿವರಿಗೆ ಸ್ವರೂಪಾಭೇದವನ್ನು ನಿರಾಕರಿಸಿ ಭೇದವನ್ನು ಮತ್ತು ವಿಷ್ಣುವಿನ ಸರ್ವೋತ್ತಮತ್ವವನ್ನು ಪ್ರತಿಪಾದಿಸಿದರು. ಈಗ ಇದೇ ಶ್ಲೋಕದಲ್ಲಿರುವ ಏಕಭಾವಾನಾಂ ಎಂಬ ಪದದಿಂದಲೇ ಅಭೇದವು ನಿರಸ್ತವಾಗುತ್ತದೆ ಎಂದು ಪ್ರತಿಪಾದಿಸುತ್ತಾರೆ. ಭಾವ ಎಂದರೆ ಅಭಿಪ್ರಾಯ. ಶಾಸ್ತ್ರದಲ್ಲಿ ಇತಿ ಭಾವಃ ಎಂಬ ಪ್ರಯೋಗವನ್ನು ನಾವೆಲ್ಲರೂ ನೋಡುತ್ತೇವೆ. ಏಕಭಾವ ಎಂದರೆ ಒಂದೇ ಅಭಿಪ್ರಾಯ, ಒಂದೇ ಬುದ್ಧಿ ಎಂದು ಅರ್ಥ. ಎಂದರೆ ಬುದ್ಧಿಯಲ್ಲಿ ಭೇದವಿಲ್ಲ ಎಂದಿಷ್ಟೇ ಸಿದ್ಧವಾಗುತ್ತದೆ. ಶಿವ-ವಿಷ್ಣು ಇವರ ಸ್ವರೂಪದಲ್ಲಿ ಭೇದವಿಲ್ಲ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ ಅಣ್ಣ-ತಮ್ಮಂದರಿಗೆ ಸ್ವರೂಪಭೇದವಿದ್ದರೂ ಬುದ್ಧಿಭೇದವಿಲ್ಲದಿರುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ, ವಿಷ್ಣು-ಶಿವರಿಗೆ ಸ್ವರೂಪಭೇದವಿದ್ದರೂ ಇಲ್ಲಿ ಬುದ್ಧಿಭೇದವೇ ನಿಷೇಧಿಸಲ್ಪಡುತ್ತದೆ ಎಂದು ಅಭಿಪ್ರಾಯ.

**ಮುನಿಭಿಶ್ಚರ್ಚಿತಂ ತತ್ರ ತತ್ರ ಗತ್ವಾ ವಿನಿಶ್ಚಿತಂ ।**
**ಭಯಹೃತ್ತ್ವೇನ ಚ ಪ್ರೋಕ್ತಂ ಕಥಂ ಸ್ಯಾದ್ ವ್ಯಾವಹಾರಿಕಂ ॥ ೨೯೯ ॥**

**ಅರ್ಥ–** ಮುನಿಭಿಃ= ಋಷಿಗಳಿಂದ, ಚರ್ಚಿತಂ= ಚರ್ಚಿಸಲ್ಪಟ್ಟಂತಹ, ತತ್ರ ತತ್ರ ಗತ್ವಾ= ಸತ್ಯಲೋಕ, ಕೈಲಾಸ ಮತ್ತು ವೈಕುಂಠಗಳಿಗೆ ಹೋಗಿ, ವಿನಿಶ್ಚಿತಂ= ನಿಶ್ಚಯಿಸಲ್ಪಟ್ಟಂತಹ, ಭಯಹೃತ್ತ್ವೇನ ಚ= ಮತ್ತು ಭಯಪರಿಹಾರಕವೆಂದು, ಪ್ರೋಕ್ತಂ= ಹೇಳಲ್ಪಟ್ಟ ಈ ಭಿನ್ನತ್ವವು, ಕಥಂ= ಹೇಗೆ, ವ್ಯಾವಹಾರಿಕಂ ಸ್ಯಾತ್= ವ್ಯಾವಹಾರಿಕವಾಗುತ್ತದೆ?

**ಅನುವಾದ–** ಋಷಿಗಳಿಂದ ಚರ್ಚಿಸಲ್ಪಟ್ಟಂತಹ ಕೈಲಾಸ, ವೈಕುಂಠ ಮತ್ತು ಬ್ರಹ್ಮಲೋಕಗಳಿಗೆ ಹೋಗಿ ನಿಶ್ಚಯಿಸಲ್ಪಟ್ಟಂತಹ ಮತ್ತು ಭಯಪರಿಹಾರಕವೆಂದು ಹೇಳಲ್ಪಟ್ಟಂತಹ ತಚ್ಛ್ರುತ್ವಾ ಮುನಯಃ ಸರ್ವೇ ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಭೇದ ಮತ್ತು ವಿಷ್ಣುವಿನ ಸರ್ವೋತ್ತಮತ್ವವು ಹೇಗೆ ವ್ಯಾವಹಾರಿಕವಾದೀತು.

**ಭಾವವಿಲಾಸಿನೀ–**ನನೂಕ್ತಃ ಸರ್ವೋಽಪಿ ಭೇದಃ ವ್ಯಾವಹಾರಿಕೋಸ್ತ್ವಿತ್ಯತ ಆಹ–ಮುನಿಭಿರಿತಿ ॥ ಮುನಿಭಿಃ ಸರ್ವಜ್ಞೈಶ್ಚರ್ಚಿತಂ ವಿಚಾರಿತಮ್ । ತತ್ರತತ್ರ ಬ್ರಹ್ಮಸಭಾಯಾಂ ರುದ್ರಸಭಾಯಾಂ ವಿಷ್ಣುಸಭಾಯಾಂ ಚ ಗತ್ವಾ ವಿನಿಶ್ಚಿತಮ್ । ಬ್ರಹ್ಮಾ ನ ಭವತಿ ಶಿವೋಽಪಿ ನ ಭವತಿ ಕಿಂತು ವಿಷ್ಣುರೇವೇತಿ ನಿಶ್ಚಿತಮ್ । ಭಯಹೃತ್ತ್ವೇನ ಇತ್ಯೇನ್ಮುನಿತನಯಾಸ್ಯಪದ್ಮಗರ್ಭಪೀಯೂಷಂ ಭವಭಯಹೃತ್ಪರಸ್ಯಪುಂಸ ಇತಿ ಸಂಸಾರಭಯಹಾರಿತ್ವೇನ ಪ್ರೋಕ್ತಮಿದಂ ಪ್ರಮೇಯಂ ಕಥಂ

ವ್ಯಾವಹಾರಿಕಂ ಸ್ಯಾದಿತಿ ಭಾವಃ। ಕಿಂಚ ಬಹುವಾಕ್ಯವಿರೋಧಿ ಏಕಮೇವ ವಾಕ್ಯಂ ವ್ಯಾವಹಾರಿಕಾರ್ಥಪರಂ ಭವತು। ಬಹೂನಾಮನುಗ್ರಹೋ ನ್ಯಾಯ್ಯ ಇತಿ ವಚನಾತ್। ಪ್ರಾಯೋಪವೇಶನಂ ಕೃತ್ವಾ ಮೋಕ್ಷಮೇವಾಪೇಕ್ಷಮಾಣಂ ಪರೀಕ್ಷಿತಂ ಪ್ರತಿ ವ್ಯಾವಹಾರಿಕಾರ್ಥ ನಿರೂಪಣೇ ಕಾರಣಾಭಾವಾಚ್ಚಾಸ್ಮದುಕ್ತರೀತ್ಯೋಭಯೋರಪ್ಯವ್ಯಾವಹಾರಿಕಾರ್ಥಪರತ್ವ ಸಂಭವಾಚ್ಚನ ಕ್ವಾಪ್ಯತತ್ವಾವೇದಕತ್ವರೂಪವ್ಯಾವಹಾರಿಕಾರ್ಥತ್ವಕಲ್ಪನಾವಕಾಶಃ। ಏತತ್‌ಸರ್ವಂ ಚ ಶಬ್ದೇನ ಸೂಚಯತಿ ॥ ೨೯೯ ॥

**ವಿವರಣೆ–** ಹಿಂದೆ ಉದಾಹರಿಸಿದ ಶ್ಲೋಕಗಳ ಆಧಾರದಿಂದ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಭೇದವನ್ನು ಅಂಗೀಕರಿಸೋಣ. ಆದರೆ ಆ ಭೇದವು ವ್ಯಾವಹಾರಿಕವಾಗಿರಲಿ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಮುನಿಗಳು ಸರ್ವಜ್ಞರಾದವರು. ಅವರು ವಿಚಾರಮಾಡಿದ ವಿಷಯವು ಪಾರಮಾರ್ಥಿಕವೇ ಆಗಿರಬೇಕು, ವ್ಯಾವಹಾರಿಕವಾಗಿರಲಾರದು. ಸತ್ಯಲೋಕಾದಿಗಳಿಗೆ ಹೋಗಿ ಬ್ರಹ್ಮನು ಸರ್ವೋತ್ತಮನಲ್ಲ, ಶಿವನು ಸರ್ವೋತ್ತಮನಲ್ಲ, ವಿಷ್ಣುವೇ ಸರ್ವೋತ್ತಮ ಎಂದು ನಿಶ್ಚಯಿಸಲ್ಪಟ್ಟಿದೆ. ಜೊತೆಗೆ 'ಇತ್ಯೇತನ್ ಮುನಿತನಯಾಸ್ಯ ಪದ್ಮಗರ್ಭಪೀಯೂಷಂ ಭವಭಯಹೃತ್ಪರಸ್ಯ ಪುಂಸಃ' ಎಂಬ ದಶಮಸ್ಕಂದದ ಅಂತಿಮ ಪ್ರಕರಣದ ಶ್ಲೋಕದಲ್ಲಿ ವಿಷ್ಣುವಿನ ಈ ಸರ್ವೋತ್ತಮತ್ವ ಮಹಿಮೆಯು ಸಂಸಾರ ಭಯಪರಿಹಾರಕವೆಂದು ಹೇಳಲ್ಪಟ್ಟಿದೆ. ಇಂತಹ ಸರ್ವೋತ್ತಮತ್ವವನ್ನು ಮತ್ತು ಸರ್ವೋತ್ತಮತ್ವಕ್ಕೆ ಸಾಧಕವಾದ ಭೇದವನ್ನು ವ್ಯಾವಹಾರಿಕವೆಂದು ಅಂಗೀಕರಿಸಿದರೆ ಬಹುಪ್ರಮಾಣಗಳಿಗೆ ಬಾಧೆಯು ಉಂಟಾಗುತ್ತದೆ. ಬಹುಬಾಧವು ಅನ್ಯಾಯವೆಂದು ಶಾಸ್ತ್ರಕಾರರು ಹೇಳುತ್ತಾರೆ. ಮೋಕ್ಷವನ್ನು ಉದ್ದೇಶಿಸಿ ಪ್ರಾಯೋಪದೇಶಕ್ಕೆ ಕುಳಿತ ಪರೀಕ್ಷಿತರಾಜನನ್ನು ಕುರಿತು ವ್ಯಾವಹಾರಿಕವಾದ ವಿಷಯವನ್ನು ಹೇಳುವುದು ಎಂದೂ ಸಮಂಜಸವಾಗುವುದಿಲ್ಲ. ಆದ್ದರಿಂದ ವಿಷ್ಣುವಿನಲ್ಲಿರುವ ಶಿವಾದಿಭೇದವೂ, ವಿಷ್ಣುವಿನ ಸರ್ವೋತ್ತಮತ್ವವೂ ಪಾರಮಾರ್ಥಿಕವೆಂದೇ ಸಿದ್ಧವಾಗುತ್ತದೆ. ಈ ಎಲ್ಲಾ ವಿಷಯಗಳನ್ನು ವಾದಿರಾಜರು ಶ್ಲೋಕದಲ್ಲಿರುವ ಚ ಶಬ್ದದಿಂದ ಸೂಚಿಸಿದ್ದಾರೆ.

ಇದಂ ತು ದಕ್ಷಯಜ್ಞಘ್ನಕ್ರೂರಕಿಂಕರಶಂಕಿನಾ ।
ಮುನಿನಾ ತತ್ಪ್ರಿಯಾಯೋಕ್ತಮಿತಿ ಸ್ಯಾದ್ ವ್ಯಾವಹಾರಿಕಂ ॥ ೩೦೦ ॥

**ಅರ್ಥ–** ಇದಂ ತು= ತ್ರಯಾಣಾಂ ಏಕಭಾವಾನಾಂ ಎಂಬ ಈ ಶ್ಲೋಕವಾದರೂ, ದಕ್ಷಯಜ್ಞಘ್ನಕ್ರೂರಕಿಂಕರಶಂಕಿನಾ= ದಕ್ಷಯಜ್ಞವನ್ನು ನಾಶಮಾಡಿದ ಕ್ರೂರರಾದ ಶಿವಕಿಂಕರರಿಗೆ ಹೆದರಿದ, ಮುನಿನಾ= ಶುಕಾಚಾರ್ಯರಿಂದ, ತತ್ಪ್ರಿಯಾಯ= ಆ ರುದ್ರ ಕಿಂಕರರ ಸಂತೋಷಕ್ಕಾಗಿ, ಉಕ್ತಂ ಇತಿ= ಹೇಳಲ್ಪಟ್ಟಿದೆ ಎಂಬ ಕಾರಣದಿಂದ, ವ್ಯಾವಹಾರಿಕಂ ಸ್ಯಾತ್= ವ್ಯಾವಹಾರಿಕವಾದೀತು.

**ಅನುವಾದ–** ತ್ರಯಾಣಾಂ ಏಕಭಾವಾನಾಮ್ ಎಂಬ ಪದ್ಯವೇ ದಕ್ಷಯಜ್ಞವನ್ನು ನಾಶಮಾಡಿದ ಕ್ರೂರ ಕಿಂಕರರಿಗೆ ಹೆದರಿದ ಶುಕಾಚಾರ್ಯರಿಂದ ಆ ಕಿಂಕರರನ್ನು ಸಂತೋಷ ಪಡಿಸುವ ಸಲುವಾಗಿ ಹೇಳಲ್ಪಟ್ಟಿದೆ ಎಂಬ ಕಾರಣದಿಂದ ಈ ಶ್ಲೋಕದಲ್ಲಿ ಹೇಳಿದ ಅಭೇದವೇ ವ್ಯಾವಹಾರಿಕವಾಗಲಿ.

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ತ್ರಯಾಣಾಮಿತಿ ಪದ್ಯಸ್ಯೈವ ವ್ಯಾವಹಾರಿಕಾರ್ಥತ್ವಂ ಯುಕ್ತಮಿತ್ಯಾಹ–ಇದಂ ತ್ವಿತಿ ॥ ಇದಂ ತ್ರಯಾಣಾಮಿತಿ ಪದ್ಯಮ್ । ದಕ್ಷಯಜ್ಞಘ್ನಸ್ಯ ಶಂಕರಸ್ಯ ಕಿಂಕರೇಭ್ಯಃ ಶಂಕಿನಾ ವಿಷ್ಣೋರೇವ ಸರ್ವೋತ್ತಮತ್ವೇ ಕಥಿತೇ ಮಾಮಪಿ ಘಾತಯಂತೀತಿ ಶಂಕಾವತಾ । ಅವಿದ್ಯಮಾನಾರ್ಥಕಥನೇ ಹೇತುಗರ್ಭಂ ವಿಶೇಷಣಮಿದಮ್ । ತತ್ಪ್ರಿಯಾಯ ತೇಷಾಂ ಕಿಂಕರಾಣಾಂ ಪ್ರಿಯಾಯೋಕ್ತಮ್ । ನತು ವಸ್ತುಸ್ಥಿತ್ಯಾ । ಇತಿಹೇತೋಃ ವ್ಯಾವಹಾರಿಕಂ ಸ್ಯಾದಿತಿ ಯೋಜನಾ । ಯಥಾ ಕ್ರೂರಚೋರಾದಿಭ್ಯೋ ಭೀತಸ್ತತ್ಪ್ರಿಯಾರ್ಥಮನೃತಮೇವ ವದತಿ । ತಥೈತತ್ಪದ್ಯೋಕ್ತಮೇವಾನೃತಂ ಭವಿತುಮರ್ಹತೀತಿ ಭಾವಃ ॥ ೩೦೦ ॥

**ವಿವರಣೆ–** ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಅಭೇದವೇ ವ್ಯಾವಹಾರಿಕವೆಂದು ಇಲ್ಲಿ ಯುಕ್ತ್ಯಂತರದಿಂದ ಸಮರ್ಥನೆ ಮಾಡುತ್ತಾರೆ. ದಕ್ಷಯಜ್ಞದ ಭಂಗದ ನಂತರ ಇರುವ ಪ್ರಕರಣದಲ್ಲಿ ಈ ಶ್ಲೋಕವಿದೆ. ಶುಕಾಚಾರ್ಯರು ಶಿವನಿಗಿಂತ ವಿಷ್ಣುವು ಉತ್ತಮನು ಎಂದು ಹೇಳಿದರೆ ರುದ್ರಕಿಂಕರರು ಪುನಃ ತಮ್ಮ ಮೇಲೆ ಎರಗಿ ಘಾಸಿ ಮಾಡುವುರೆಂದು ಹೆದರಿ, ಅವರನ್ನು ಸಂತೋಷಪಡಿಸುವ ಉದ್ದೇಶದಿಂದ ಯೋನಪಶ್ಯತಿ ವೈಭಿದಾಂ ಎಂದು ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಅಭೇದವೇ ಇದೆ ಎಂದು ಹೇಳಿದ್ದಾರೆ ಎಂದು ಕಲ್ಪನೆ ಮಾಡಿ, ಆ ಕಾರಣದಿಂದ ಈ ಅಭೇದವು ವಾಸ್ತವವಾಗಿರುವುದಿಲ್ಲವಾದುದರಿಂದ ಇದೇ ವ್ಯಾವಹಾರಿಕವಾಗಲಿ ಎಂದು ಆಪಾದನೆ ಮಾಡುತ್ತಾರೆ. ವಸ್ತುಸ್ಥಿತಿಯಲ್ಲಿ ರುದ್ರಾವತಾರೂ ಅವಧೂತಶಿಖಾಮಣಿಗಳೂ ಆದ ಶುಕಾಚಾರ್ಯರಿಗೆ ಯಾರ ಭಯವೂ ಇಲ್ಲ. ಆದ್ದರಿಂದ ಏಕಭಾವಾನಾಂ ಎಂದು ಹೇಳಿರುವುದರಿಂದ ಸ್ವರೂಪಭೇದವನ್ನು ಅಂಗೀಕರಿಸಿಸಬೇಕು, ಬುದ್ಧಿಭೇದವನ್ನು ಅಂಗೀಕರಿಸಬಾರದೆಂದೇ ಅವರ ಅಭಿಪ್ರಾಯ.

**ವಿಶಿಷ್ಟೈಕ್ಯಂ ಚ ತೇ ನಾಸ್ತಿ ತತೋಽನ್ಯೋಽರ್ಥಸ್ತವೈವ ಹಿ ।**
**ಅಮುಖ್ಯವೃತ್ತಿಃ ಕಿಲ ತೇ ಮುಖ್ಯಾರ್ಥೇ ಸತಿ ಸಾ ಕಥಂ ॥ ೩೦೧ ॥**

**ಅರ್ಥ–** ತೇ ಚ= ನಿನಗಾದರೂ ಸಹ, ವಿಶಿಷ್ಟೈಕ್ಯಂ= ವಿಶಿಷ್ಟವಾದ ಚೇತನಗಳಿಗೆ ಐಕ್ಯವು, ನಾಸ್ತಿ= ಇಲ್ಲ, ತತಃ= ಆದ್ದರಿಂದ, ತವೈವ= ನಿನಗೇ, ಅನ್ಯೋಽರ್ಥಃ ಹಿ= ಬೇರೆ ಅರ್ಥವನ್ನು ಹೇಳಬೇಕಾಗುತ್ತದಷ್ಟೇ, ಆದ್ದರಿಂದ, ತೇ= ನಿನಗೆ, ಅಮುಖ್ಯವೃತ್ತಿಃ ಕಿಲ= ಅಮುಖ್ಯ ವೃತ್ತಿಯೇ ಇದೆಯಷ್ಟೇ, ಮುಖ್ಯಾರ್ಥೇ ಸತಿ= ಭೇದಶಬ್ದಕ್ಕೆ ವಿರೋಧವೆಂಬ ಮುಖ್ಯಾರ್ಥವಿರುತ್ತಿರಲು, ಸಾ= ಆ ಮುಖ್ಯವೃತ್ತಿಯು, ಕಥಂ= ಹೇಗೆ ಉಪಪನ್ನವಾಗುತ್ತದೆ.

**ಅನುವಾದ–** ವಿಶಿಷ್ಟೈಕ್ಯವನ್ನು ನೀನು ಒಪ್ಪುವುದಿಲ್ಲ, ಆದ್ದರಿಂದ ಶ್ಲೋಕದಲ್ಲಿ ತೋರುವ ಅಭೇದಕ್ಕೆ ನೀನೂ ಸಹ ಬೇರೆ ಅರ್ಥವನ್ನೇ ಹೇಳಬೇಕು. ಆದ್ದರಿಂದ ನೀನು ಮುಖ್ಯವಾದ ವೃತ್ತಿಯನ್ನು ಬಿಟ್ಟು ಅಮುಖ್ಯವಾದ ವೃತ್ತಿಯನ್ನು ಆಶ್ರಯಿಸುತ್ತೀಯೆ. ನಾವು ಹೇಳುವಂತೆ ಭೇದಶಬ್ದಕ್ಕೆ ವಿರೋಧ ಎಂಬ ಮುಖ್ಯಾರ್ಥವು ಇಲ್ಲಿ ಉಪಪನ್ನವಾಗುವಾಗ ಅಮುಖ್ಯವೃತ್ತಿಯನ್ನು ಏಕೆ ಆಶ್ರಯಿಸಬೇಕು?

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ವಿಶಿಷ್ಟೈಕ್ಯಮಿತಿ ॥** ಭಿನ್ನಭಿನ್ನದೇಹೋಪಾಧಿ ವಿಶಿಷ್ಟಾನಾಂ ತ್ರಯಾಣಾಮೇಷಾಂ ದೇವಾನಾಮೈಕ್ಯಂ ವಿಶಿಷ್ಟೈಕ್ಯಂ ತೇ ಮತೇ ನಾಸ್ತಿ । ತತಃ ವಿಶಿಷ್ಟಾನಾಂ ಪರಸ್ಪರಂ ಭೇದಸ್ಯೈವಾಂಗೀಕಾರಾತ್ । ಅನ್ಯಃಅರ್ಥಃ ಭೇದಪದಸ್ಯಾನ್ಯೋನ್ಯಾ-ಭಾವಾತಿರಿಕ್ತ ವಿರೋಧಾದ್ಯರ್ಥಃ । ನನು ಯದ್ಯಪಿ ವಿಶಿಷ್ಟಯೋಃ ಸಾಕ್ಷಾದೈಕ್ಯಂ ನಾಸ್ತಿ । ತಥಾಪಿ ಜಹದಜಹಲ್ಲಕ್ಷಣಯಾ ದೇಹಾಂತಃಕರಣಾದಿವಿಶೇಷಣಭಾಗಂ ತ್ಯಕ್ತ್ವಾ ಕೇವಲಂ ವಿಶೇಷ್ಯ-ಮಾತ್ರಸ್ಯೈಕ್ಯಮಸ್ತಿ । ತದಪೇಕ್ಷಯಾ ಭಿದಾಂ ನ ಪಶ್ಯತೀತ್ಯುಕ್ತಿರಿತ್ಯತ ಆಹ – **ಅಮುಖ್ಯೇತಿ ॥** ಮುಖ್ಯಾರ್ಥೇ ವಿರೋಧರೂಪಮುಖ್ಯಾರ್ಥೇ ಸತಿ ಸಾಽಮುಖ್ಯವೃತ್ತಿಃ ॥ ೩೦೦ ॥

**ವಿವರಣೆ–** ಇಲ್ಲಿ ಭೇದವನ್ನು ಸಾಧಿಸುವ ಇನ್ನೊಂದು ಯುಕ್ತ್ಯಂತರವನ್ನು ಹೇಳುತ್ತಾರೆ. ಅದ್ವೈತ ಮತದ ಪ್ರಕ್ರಿಯೆಯಂತೆ ಬ್ರಹ್ಮ-ವಿಷ್ಣು-ಮಹೇಶ್ವರರು ವಿಶಿಷ್ಟ ಚೇತನರು. ಅವರ ಮತದಲ್ಲಿ ವಿಶಿಷ್ಟ ಚೇತನಗಳಿಗೆ ಐಕ್ಯವಿಲ್ಲ. ಶುದ್ಧ ಚೈತನ್ಯಕ್ಕೆ ಮಾತ್ರ ಐಕ್ಯವಿರುವುದು. ಆದ್ದರಿಂದ ವಿಷ್ಣು-ಶಿವರಿಗೆ ಅಭೇದವಿದೆ ಎಂದು ಹೇಳಿದರೆ ಮುಖ್ಯವಾದ ಅಭೇದವು ಇಲ್ಲವೇ ಇಲ್ಲ. ವಿಷ್ಣು-ಶಿವ ರೂಪವಾದ ವಿಶಿಷ್ಟಚೇತನಗಳ ಒಂದು ಅಂಶವಾದ ಚೈತನ್ಯಕ್ಕೆ ಮಾತ್ರ ಅಭೇದವಿದೆ ಎಂದು ಅರ್ಥ. ಹೀಗೆ ಅರ್ಥವನ್ನು ಹೇಳುವುದಕ್ಕೆ ಜಹದಜಹಲ್ಲಕ್ಷಣಾ ಎಂದು ಹೇಳುತ್ತಾರೆ. ಈ ಜಹದಜಹಲ್ಲಕ್ಷಣಾವೂ ಸಹ ಒಂದು ಅಮುಖ್ಯವೃತ್ತಿಯೇ ಸರಿ. ನಾವು ಭೇದಶಬ್ದಕ್ಕೆ ಮುಖ್ಯವೃತ್ತಿಯಿಂದಲೇ ವಿರೋಧ ಎಂಬ ಅರ್ಥವನ್ನು ಹೇಳಿ, ಲಕ್ಷಣಾವೃತ್ತಿಯನ್ನು ಅಂಗೀಕರಿಸದೇ ಬ್ರಹ್ಮ-ವಿಷ್ಣು-ಮಹೇಶ್ವರರಿಗೆ ವಿರೋಧವಿಲ್ಲ ಎಂಬ ಮುಖ್ಯವಾದ ಅರ್ಥವನ್ನು ಹೇಳುತ್ತೇವೆ. ಮುಖ್ಯವಾದ ಅರ್ಥಕ್ಕೆ ಬಾಧವಿಲ್ಲದಿರುವುದಿಂದ ಅಮುಖ್ಯವಾದ ಅರ್ಥವನ್ನು ಹೇಳಬಾರದು ಎಂದು ಅಭಿಪ್ರಾಯ.

ವಿಭಜಸ್ವ ಯಥಾನ್ಯಾಯಂ ನೈವ ಭೇದೋ ಯಥಾ ಭವೇತ್॥ ೩೦೨ ॥

ಯನ್ನಿಮಿತ್ತಂ ಸ ವೈ ಶಾಪೋ ಯಾದೃಶೋ ದ್ವಿಜಸತ್ತಮ ।
ಕಥಮೇಕಾತ್ಮನಾಂ ಭೇದ ಏತತ್ ಸರ್ವಂ ವದಸ್ವ ಮೇ । ॥ ೩೦೩ ॥

**ಅರ್ಥ–** ಯಥಾ= ಹೇಗೆ, ಭೇದಃ= ವಿರೋಧವು, ನೈವ ಭವೇತ್= ಉಂಟಾಗುವುದಿಲ್ಲವೋ ಹಾಗೆಯೇ, ಯಥಾನ್ಯಾಯಂ= ನ್ಯಾಯರೀತಿಯಲ್ಲಿ, ವಿಭಜಸ್ವ=

ಅಮೃತವನ್ನು ಹಂಚು, ದ್ವಿಜಸತ್ತಮ= ಎಲೈ ದ್ವಿಜಶ್ರೇಷ್ಠನೇ, ಸವೈಶಾಪಃ= ಆ ಯದುಕುಲಕ್ಕೆ ಬಂದ ಶಾಪವು, ಯನ್ನಿಮಿತ್ತಃ= ಯಾವ ಕಾರಣದಿಂದ ಬಂದುದು, ಯಾದೃಶಃ= ಯಾವ ರೀತಿಯಾದುದು, ಏಕಾತ್ಮನಾಂ= ಒಂದೇ ಬುದ್ಧಿಯುಳ್ಳಂತಹ ಯಾದವರಿಗೆ, ಕಥಂ= ಹೇಗೆ, ಭೇದಃ= ಬುದ್ಧಿ ಭೇದವು ಉಂಟಾಯಿತು, ಏತತ್ಸರ್ವಂ= ಈ ಎಲ್ಲ ವಿಷಯಗಳನ್ನೂ, ಮೇ= ನನಗೆ, ವದಸ್ವ= ಹೇಳು.

**ಅನುವಾದ–** ನಮಗೆ ಪರಸ್ಪರವಾಗಿ ವಿರೋಧ ಉಂಟಾಗದಂತೆ ಈ ಅಮೃತವನ್ನು ನ್ಯಾಯರೀತಿಯಲ್ಲಿ ಹಂಚು. ಎಲೈ ಬ್ರಾಹ್ಮಣಶ್ರೇಷ್ಠನೇ! ಯದುಕುಲಕ್ಕೆ ಬಂದ ಆ ಶಾಪವು ಯಾವ ನಿಮಿತ್ತದಿಂದ ಉಂಟಾಯಿತು? ಆ ಶಾಪದ ಪ್ರಕಾರವೇನು? ಒಂದೇ ಬುದ್ಧಿಯುಳ್ಳ ಆ ಯದುಗಳಿಗೆ ಹೇಗೆ ಭೇದವುಂಟಾಯಿತು? ಇವೆಲ್ಲವನ್ನೂ ನನಗೆ ಹೇಳು.

**ಭಾವವಿಲಾಸಿನೀ–** ಪ್ರಾಕ್‌ಭೇದಶಬ್ದಸ್ಯ ವಿರೋಧವಾಚಿತ್ವಂ ಬಹಿರಂಗೋದಾಹರಣೇನೋಕ್ತಮ್ । ಇದಾನೀಮಸ್ಮಿನ್ನೇವಗ್ರಂಥೇ ತದಸ್ತೀತ್ಯಾಹ – **ವಿಭಜಸ್ವೇತಿ** ॥ ಅಷ್ಟಮಸ್ಕಂಧೇಽಮೃತಮಥನಪ್ರಸ್ತಾವೇನಾರಾಯಣೀಂ ಪ್ರತಿ ದೈತ್ಯಾನಾಂ ವಚನಮಿದಮ್ । ಯಥಾನ್ಯಾಯಂ ಸುಧಾಂ ವಿಭಜಸ್ವ ವಿಭಾಗಂ ಕೃತ್ವಾ ದಿಶ । ಭೇದಃ ದೇವನಾಮಸ್ಮಾಕಂ ಚ ವಿರೋಧಃ ಯಥಾ ನೈವ ಭವೇತ್ । ತಥಾ ವಿಭಜಸ್ವೇತಿ ಪೂರ್ವೇಣಾನ್ವಯಃ ॥ ೩೦೨ ॥

ಯನ್ನಿಮಿತ್ತ ಇತ್ಯೇಕಾದಶಸ್ಕಂಧೇ ಪರೀಕ್ಷಿತ್ ಪ್ರಶ್ನರೂಪವಚನಮ್ । ಏಕಾತ್ಮನಾಮೇಕಬುದ್ಧೀನಾಂ ಯಾದವಾನಾಂ ಭೇದಃ ಅನ್ಯೋನ್ಯಯುದ್ಧಹೇತುವಿರೋಧಃ ಕಥಮಾಸೀತ್ । ಏತದ್ವದಸ್ವೇತಿ ಶುಕಂ ಪ್ರತಿಪ್ರಾರ್ಥನಮ್ । ಯದ್ಯಸ್ಮಾತ್ ॥ ೩೦೩ ॥

**ವಿವರಣೆ–** ಈ ಎರಡು ವಾಕ್ಯಗಳೂ ಭಾಗವತದ ವಾಕ್ಯಗಳು. ಮೊದಲನೆಯ ವಾಕ್ಯ, ದಾನವರು ಮೋಹಿನಿಯ ಕೈಗೆ ಅಮೃತವನ್ನು ಕೊಟ್ಟು ಹೇಳುವ ವಾಕ್ಯ. ನಮ್ಮಲ್ಲಿ ಭೇದವುಂಟಾಗದಂತೆ ಎಂದರೆ ವಿರೋಧವುಂಟಾಗದಂತೆ ಎಂದೇ ಅರ್ಥಮಾಡಬೇಕು. ಏಕೆಂದರೆ ದಾನವರಲ್ಲಿ ಸ್ವರೂಪಭೇದವು ಯಾವಾಗಲೂ ಇದ್ದೇ ಇದೆ, ಅದು ಎಂದೂ ನಶಿಸುವುದಿಲ್ಲ. ಎರಡನೆಯ ವಾಕ್ಯವು ಶುಕಾಚಾರ್ಯರನ್ನು ಕುರಿತು ಪರೀಕ್ಷಿತನ ವಾಕ್ಯ. ಯದುಕುಲನಾಶದ ಶಾಪದ ವಿಷಯವನ್ನು ಕೇಳಿದಾಗ ಪರೀಕ್ಷಿತರಾಜನು ಈ ಪ್ರಶ್ನೆಯನ್ನು ಮಾಡುತ್ತಾನೆ. ಒಂದೇ ಬುದ್ಧಿಯುಳ್ಳ ಅವರಿಗೆ ಹೇಗೆ ಭೇದವುಂಟಾಯಿತು ಎಂದು ಪ್ರಶ್ನೆ. ಇಲ್ಲಿಯೂ ಯದುಕುಲದಲ್ಲಿ ಇದ್ದ ಯಾದವರಿಗೆ ಹೊಸ ಭೇದವೇನೂ ಉಂಟಾಗಲಿಲ್ಲ. ಏಕಮನಸ್ಕರಾದ ಅವರಿಗೆ ಪರಸ್ಪರ ವಿರೋಧವು ಉಂಟಾಯಿತು. ಆದ್ದರಿಂದ ಈ ಎರಡು ಉದಾಹರಣೆಗಳಲ್ಲಿಯೂ ಭೇದಶಬ್ದವನ್ನು ವಿರೋಧ ಎಂಬ ಅರ್ಥದಲ್ಲಿಯೇ ಬಳಸಿದ್ದಾರೆ ಎಂಬ ವಿಷಯವನ್ನು ರಾಜರು ಮುಂದಿನ ಶ್ಲೋಕದಲ್ಲಿ ಪರ್ಯವಸಾನ ಮಾಡುತ್ತಾರೆ.

**ಇತ್ಯಸ್ಮಿನ್ನೇವ ಯದ್ ಗ್ರಂಥೇ ತತ್ರ ತತ್ರ ಪ್ರಯುಜ್ಯತೇ ।**
**ವಿರೋಧೇ ಭೇದಶಬ್ದೋಽಯಂ ಸಾಮಾದೌ ಲೌಕಿಕೈರಪಿ ।**
**ಅತೋಽಯಂ ಮುಖ್ಯ ಏವಾರ್ಥೋ ಮುಖ್ಯೇ ಸತಿ ನ ಲಕ್ಷಣಾ ॥ ೩೦೪॥**

**ಅರ್ಥ–** ಇತಿ= ಈ ರೀತಿಯಾಗಿ, ಯದ್= ಯಾವ ಕಾರಣದಿಂದ, ಅಸ್ಮಿನ್ನೇವ ಗ್ರಂಥೇ= ಇದೇ ಗ್ರಂಥದಲ್ಲಿಯೇ, ತತ್ರ ತತ್ರ= ಅಲ್ಲಲ್ಲಿ, ವಿರೋಧೇ= ವಿರೋಧ ಎನ್ನುವ ಅರ್ಥದಲ್ಲಿ, ಅಯಂ ಭೇದಶಬ್ದಃ= ಈ ಭೇದಶಬ್ದವು, ಪ್ರಯುಜ್ಯತೇ= ಪ್ರಯೋಗಿಸಲ್ಪಡುತ್ತದೆಯೋ, ಲೌಕಿಕೈರಪಿ= ಲೌಕಿಕರಿಂದಲೂ ಸಹ, ಸಾಮಾದೌ= ಸಾಮಾದಿ ಉಪಾಯಗಳಲ್ಲಿ ಈ ಭೇದಶಬ್ದವು ಪ್ರಯೋಗಿಸಲ್ಪಡುತ್ತದೆಯೋ, ಅತಃ= ಆ ಕಾರಣದಿಂದ, ಅಯಂ ಅರ್ಥಃ= ಈ ವಿರೋಧವೆಂಬ ಅರ್ಥವು, ಮುಖ್ಯ ಏವ= ಮುಖ್ಯವಾದದ್ದೇ. ಮುಖ್ಯೇ ಸತಿ= ಮುಖ್ಯವಾದ ಅರ್ಥವು ಇರುವಾಗ, ಲಕ್ಷಣಾ ನ= ಲಕ್ಷಣಾವೃತ್ತಿಯು ಕೂಡುವುದಿಲ್ಲ.

**ಅನುವಾದ–** ಈ ರೀತಿಯಾಗಿ ಇದೇ ಗ್ರಂಥದಲ್ಲಿ ಅಲ್ಲಲ್ಲಿ ಈ ಭೇದಶಬ್ದವು ವಿರೋಧಾರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಲೌಕಿಕರಿಂದಲೂ ಕೂಡ ಸಾಮಾದಿ ಉಪಾಯಗಳಲ್ಲಿ ಒಂದಾದ ಭೇದೋಪಾಯದಲ್ಲಿ ಭೇದಶಬ್ದವು ಪ್ರಯೋಗಿಸಲ್ಪಡುತ್ತದೆ. ಆದ್ದರಿಂದ ವಿರೋಧ ಎಂಬುದು ಭೇದಶಬ್ದದ ಮುಖ್ಯಾರ್ಥವೇ ಆಗುತ್ತದೆ. ಮುಖ್ಯಾರ್ಥ ಇರುವಾಗ ಲಕ್ಷಣಾವೃತ್ತಿಯನ್ನು ಅನುಸರಿಸಬಾರದು.

**ಭಾವವಿಲಾಸಿನೀ–** ಇತ್ಯಸ್ಮಿನ್‌ಗ್ರಂಥೇ ಅಯಂ ಭೇದಶಬ್ದಃ ವಿರೋಧೇ ಪ್ರಯುಜ್ಯತೇ । ಸಾಮಾದೌ ಸಾಮದಾನಭೇದದಂಡಾಖ್ಯನೀತಿಚತುಷ್ಟಯೇ ಲೌಕಿಕೈರಪಿ ಭೇದಶಬ್ದೋ ವಿರೋಧೇ ಪ್ರಯುಜ್ಯತೇ । ಅತೋವೈದಿಕಲೌಕಿಕಬಹುಪ್ರಯೋಗಬಲಾತ್ । ಅಯಂ ವಿರೋಧಃ ಅರ್ಥಃ ಭೇದಶಬ್ದಾರ್ಥಃ । ಉಪಲಕ್ಷಣಂ ಚೈತತ್ । ಬಹುಶೋವಿರೋಧ ಏವ ಭೇದಶಬ್ದಂ ಪ್ರಯುಂಜಾನಸ್ಯ ವ್ಯಾಸಸ್ಯಾತ್ರಾಪಿ ಸ ಏವಾಭಿಮತ ಇತಿ ದ್ರಷ್ಟವ್ಯಮ್ ॥ ೩೦೪ ॥

**ಅಥವಾ ವಾಗಿಯಂ ತೇಷಾಮೇಕಾರ್ಥವಿಷಯಾಃ ಸದಾ ।**
**ಯೇ ಭಾವಾಸ್ತದ್ಭಿದಾಂನೇತಿ ಬುದ್ಧಿಭೇದಂ ನಿಷೇಧತಿ ॥ ೩೦೫ ॥**

**ಅರ್ಥ–** ಅಥವಾ= ಅಥವಾ, ಇಯಂ ವಾಕ್= ಏಕಭಾವಾನಾಂ ಎಂಬ ಈ ವಾಕ್ಯವು, ತೇಷಾಂ= ಆ ಬ್ರಹ್ಮವಿಷ್ಣುಮಹೇಶ್ವರರಿಗೆ, ಏಕಾರ್ಥವಿಷಯಾಃ= ಒಂದೇ ಅರ್ಥದ ವಿಷಯಕವಾದ, ಯೇ ಭಾವಾಃ= ಯಾವ ಜ್ಞಾನಗಳು ಇವೆಯೋ ಅವುಗಳಲ್ಲಿ, ಸದಾ= ಯಾವಾಗಲೂ, ತದ್ಭಿದಾಂ= ಭೇದವನ್ನು, ನೇತಿ= ಇಲ್ಲ ಎಂದು ಹೇಳಿ, ಬುದ್ಧಿಭೇದಂ= ಬುದ್ಧಿ ಭೇದವನ್ನು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ–** ಅಥವಾ ತ್ರಯಾಣಾಂ ಏಕಭಾವಾನಾಮ್ ಎಂಬ ಈ ವಾಕ್ಯವು ಬ್ರಹ್ಮ-ವಿಷ್ಣು ಮಹೇಶ್ವರರಿಗೆ ಇರುವ ಒಂದೇ ವಸ್ತುವಿನ ವಿಷಯಕ ಜ್ಞಾನದಲ್ಲಿ ಯಾವಾಗಲೂ ಭೇದವಿಲ್ಲವೆಂದು ಹೇಳಿ ಬುದ್ಧಿಭೇದವನ್ನು ನಿರಾಸಮಾಡುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಯೋಜನಿಕಾಮಾಹ – **ಅಥವೇತಿ** ॥ ಇಯಂ ವಾಕ್ ತ್ರಯಾಣಾಮಿತಿ ವಾಕ್ । ತೇಷಾಂ ಬ್ರಹ್ಮವಿಷ್ಣುಶಿವಾನಾಮೇಕಾರ್ಥವಿಷಯಾಃ ಯೇ ಭಾವಾಃ ಮನೋವೃತ್ತಯಃ । ಏಕಾರ್ಥವಿಷಯಬುದ್ಧಯ ಇತಿ ಯಾವತ್ । ತೇಷಾಮಿತಿ ದ್ವೇ ಅಪಿ ವ್ಯಧಿಕರಣಷಷ್ಠ್ಯೌ । ಭಿದಾಂ ನ ಪಶ್ಯತೀತಿ ಸಾಕ್ಷಾದ್ಬುದ್ಧೀನಾಮೇವ ಭೇದೋ ನಿಷಿಧ್ಯತೇ ॥೩೦೫॥

**ವಿವರಣೆ–** ಹಿಂದೆ ಭೇದ ಎಂದರೆ ವಿರೋಧ ಎಂದು ಅರ್ಥಮಾಡಿದರು, ಈಗ ಭೇದ ಎಂದರೆ ಬುದ್ಧಿ ಭೇದ ಎಂದು ಅರ್ಥವನ್ನು ಮಾಡಿ, ಆ ಮೂವರ ಮನಸ್ಸಿನ ಜ್ಞಾನವು ಒಂದೇ ರೀತಿಯಿರುತ್ತದೆ. ಅದರಲ್ಲಿ ವ್ಯತ್ಯಾಸವಿರುವುದಿಲ್ಲ ಎಂದು ಉಪಪಾದನೆಯನ್ನು ಮಾಡುತ್ತಾರೆ.

**ತದೈವ ಯತ್ ಪ್ರಸಜ್ಯೇತ ನಿಷೇಧಸ್ತಸ್ಯ ಯುಜ್ಯತೇ ।**
**ಶೈವವೈಷ್ಣವಯೋರ್ವೈರಂ ಮಿಷತಾಂ ತು ತಯೋರಪಿ ।**
**ವಿರೋಧಶಂಕಾ ತತ್ರೈವ ಪ್ರಸಕ್ತಾ ಸಾ ನಿಷಿಧ್ಯತೇ ॥ ೩೦೬ ॥**

**ಅರ್ಥ–** ಯತ್ಪ್ರಸಜ್ಯೇತ= ಯಾವುದು ಪ್ರಸಕ್ತವಾಗುತ್ತದೆಯೋ, ತದೈವ= ಆಗಲೇ, ತಸ್ಯ ನಿಷೇಧಃ= ಅದರ ನಿಷೇಧವು, ಯುಜ್ಯತೇ= ಉಪಪನ್ನವಾಗುತ್ತದೆ, ಶೈವವೈಷ್ಣವಯೋಃ= ಶೈವರಿಗೆ ಮತ್ತು ವೈಷ್ಣವರಿಗೆ ಇರುವ, ವೈರಂ= ವೈರವನ್ನು, ಮಿಷತಾಂ= ನೋಡತಕ್ಕಂತಹವರಿಗೆ, ತಯೋರಪಿ = ವಿಷ್ಣು-ಶಿವರಿಗೂ, ವಿರೋಧ ಶಂಕಾ= ವಿರೋಧ ಶಂಕೆಯು, ತತ್ರೈವ ಪ್ರಸಕ್ತಾ= ಅಲ್ಲಿಯೇ ಪ್ರಸಕ್ತವಾಗುತ್ತದೆ. ಸಾ= ಆ ವಿರೋಧ ಶಂಕೆಯು, ನಿಷಿಧ್ಯತೇ= ನಿಷೇಧಿಸಲ್ಪಡುತ್ತದೆ.

**ಅನುವಾದ–** ಯಾವುದು ಎಲ್ಲಿ ಪ್ರಸಕ್ತವಾಗುತ್ತದೆಯೋ, ಅದನ್ನು ಅಲ್ಲಿ ನಿಷೇಧ ಮಾಡಬೇಕು. ದಕ್ಷಾಧ್ವರಭಂಗ ಪ್ರಸಂಗದಲ್ಲಿ ಶೈವರಿಗೂ ಮತ್ತು ವೈಷ್ಣವರಿಗೂ ಉಂಟಾದ ವೈರವನ್ನು ಪ್ರತ್ಯಕ್ಷವಾಗಿ ನೋಡುವ ಪುರುಷರಿಗೆ ಅವರ ಸ್ವಾಮಿಗಳಾದ ವಿಷ್ಣು-ಶಿವರಿಗೂ ವಿರೋಧವಿದೆ ಎಂಬ ಶಂಕೆಯು ಪ್ರಸಕ್ತವಾಗುತ್ತದೆ. ಆದ್ದರಿಂದ ಅವರಿಗೆ ವಿರೋಧವಿಲ್ಲ ಎಂದು ಆ ಶಂಕೆಯನ್ನು ನಿವಾರಿಸುವುದು ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ತದೈವೇತಿ** ॥ ತದಾ ತತ್ರ ಯತ್ ಪ್ರಸಜ್ಯೇತ ತದೇವ ನಿಷಿಧ್ಯತೇ । ಪ್ರಸಕ್ತಸ್ಯೈವ ಖಲು ನಿಷೇಧೋ ದೃಷ್ಟಃ । ಪ್ರಸಕ್ತಿಶ್ಚಬುದ್ಧಿ- ಭೇದಸ್ಯೈವಾಸ್ತೀತ್ಯಾಹ –

**ಶೈವವೈಷ್ಣವಯೋರಿತಿ ॥ ದಕ್ಷಾಧ್ವರೇ ಶೈವಾನಾಂ ವೈಷ್ಣವಾನಾಂ ಚ ಶಾಪತಾಡನಾದಿನಾ ಪರಸ್ಪರಂ ವೈರಂ ಪ್ರವೃತ್ತಮ್ । ತದ್ವೈರಂ ಮಿಷತಾಂ ಪಶ್ಯತಾಂ ಜನಾನಾಂ ತಯೋಸ್ತತ್ಸ್ವಾಮಿನೋರ್ವಿಷ್ಣು-ಶಿವಯೋರಪಿ ವಿರೋಧಶಂಕಾ ತತ್ರ ದಕ್ಷಾಧ್ವರ ಏವಪ್ರಸಕ್ತಾ । ಸ್ವಾಮಿನೋರ್ವಿರೋಧಾಭಾವೇ ಭೃತ್ಯಾಃ ಕಿಮಿತಿ ಕಲಹಂ ಕುರ್ಯುಃ । ಅತೋಽಭೃತ್ಯಕಲಹದರ್ಶನಾತ್ ಸ್ವಾಮಿನೋರಪಿ ಕಲಹ-ಶಂಕಾಪ್ರಾಪ್ತಾ । ಸಾ ಕಲಹಶಂಕಾ ನಿಷಿಧ್ಯತೇ । ಪ್ರಸಕ್ತಸ್ಯೈವ ನಿಷೇಧಸಂಭವಾತ್ ॥ ೩೦೬ ॥**

**ವಿವರಣೆ–** ಭೃತ್ಯರ ಕಲಹವನ್ನು ನೋಡಿದವರಿಗೆ ಸ್ವಾಮಿಗಳಲ್ಲಿಯೂ ಕಲಹದ ಪ್ರಸಕ್ತಿ ಉಂಟಾಗುತ್ತದೆ. ಆದ್ದರಿಂದ ಇಲ್ಲಿ ಸ್ವಾಮಿಗಳಲ್ಲಿ ಕಲಹವಿಲ್ಲ ಎಂದು ಹೇಳುವುದು ಉಪಪನ್ನವಾಗುತ್ತದೆ. ಆದ್ದರಿಂದ ಇಲ್ಲಿಯೂ ಸಹ ಸ್ವರೂಪಭೇದವನ್ನು ನಿಷೇಧ ಮಾಡುವುದಿಲ್ಲ. ವಿರೋಧ ಮೂಲದ ಕಲಹವನ್ನೇ ನಿಷೇಧ ಮಾಡುತ್ತದೆ ಎಂದು ಅಭಿಪ್ರಾಯ.

**ರೂಪಭೇದಪ್ರಸಕ್ತಿಸ್ತು ಸದಾ ತ್ರಿಸ್ಥಾನವಾಸಿನಾಂ ।**
**ಅತೋಽತ್ರೈವ ನ ತತ್ಪ್ರಾಪ್ತಿರ್ನಿಷೇಧೋಽಯಂ ಚ ತಸ್ಯ ನ ॥ ೩೦೭ ॥**

**ಅರ್ಥ–** ಸದಾ= ಯಾವಾಗಲೂ, ತ್ರಿಸ್ಥಾನವಾಸಿನಾಂ= ಮೂರು ಸ್ಥಾನದಲ್ಲಿ ವಾಸಿಸುವ ಬ್ರಹ್ಮ-ವಿಷ್ಣು- ಮಹೇಶ್ವರರಿಗೆ, ರೂಪಭೇದಪ್ರಸಕ್ತಿಃ= ಸ್ವರೂಪಭೇದ ಪ್ರಸಕ್ತಿಯು, ಅತ್ರೈವ= ಈ ದಕ್ಷಾಧ್ವರರ ಭಂಗ ಪ್ರಸಂಗದಲ್ಲಿಯೇ, ನ= ಇರುವುದಲ್ಲ, ಅತಃ= ಆದ್ದರಿಂದ, ಅತ್ರೈವ= ಇಲ್ಲಿಯೇ, ತತ್ಪ್ರಾಪ್ತಿಃ= ಸ್ವರೂಪಭೇದದ ಪ್ರಾಪ್ತಿಯು, ನ= ಇಲ್ಲ, ಚ= ಮತ್ತು, ಅಯಂ ನಿಷೇಧಃ= ಈ ನಿಷೇಧವು, ತಸ್ಯ= ಸ್ವರೂಪಭೇದದ್ದು, ನ= ಅಲ್ಲ.

**ಅನುವಾದ–** ಯಾವಾಗಲೂ ವೈಕುಂಠ, ಸತ್ಯಲೋಕ ಮತ್ತು ಕೈಲಾಸದಲ್ಲಿ ವಾಸಿಸುವ ಬ್ರಹ್ಮ-ವಿಷ್ಣು- ಮಹೇಶ್ವರರಿಗೆ ಸ್ವರೂಪಭೇದಪ್ರಸಕ್ತಿಯು ಈ ದಕ್ಷಾಧ್ವರ ಪ್ರಸಂಗದಲ್ಲಿಯೇ ಉಂಟಾಗಿಲ್ಲ. ಆದ್ದರಿಂದ ಇಲ್ಲಿ ಸ್ವರೂಪಭೇದ ಪ್ರಾಪ್ತಿಯು ಇಲ್ಲ, ಆದ್ದರಿಂದ ಈ ನಿಷೇಧವು ಸ್ವರೂಪಭೇದನಿಷೇಧವೂ ಅಲ್ಲ.

**ಭಾವವಿಲಾಸಿನೀ–** ತ್ರಿಸ್ಥಾನವಾಸಿನಾಂ ಸತ್ಯಲೋಕವೈಕುಂಠಕೈಲಾಸವಾಸಿನಾಮ್ । ಉಪಲಕ್ಷಣಂ ಚೈತತ್ । ಭಿನ್ನಾಯುಧಾನಾಂ ಭಿನ್ನವಾಹನಾನಾಂ ಭಿನ್ನಕರಣಾನಾಂ ಚೇತಿ ದ್ರಷ್ಟವ್ಯಮ್ । ಬ್ರಹ್ಮವಿಷ್ಣುಶಿವಾನಾಂ ರೂಪಭೇದಪ್ರಸಕ್ತಿಃ ಸ್ವರೂಪಭೇದಪ್ರಸಕ್ತಿಃ ಸದಾ ದಕ್ಷಾಧ್ವರಾತ್ ಪೂರ್ವ-ಮಪಿ ವರ್ತತೇ । ಅತಃಪೂರ್ವಮಪಿ ವಿದ್ಯಮಾನತ್ವಾತ್ । ಅತ್ರ ದಕ್ಷಾಧ್ವರೇ । ತತ್ಪ್ರಾಪ್ತಿಃ ರೂಪಭೇದಪ್ರಾಪ್ತಿಃ । ತಸ್ಯರೂಪಭೇದಸ್ಯ । ವಿರೋಧಃ ಬುದ್ಧಿಭೇದಶ್ಚ ದಕ್ಷಾಧ್ವರ ಏವಪ್ರಸಕ್ತೌ । ನ ಪೂರ್ವಮ್ । ಅತೋಽನಯೋರೇವಾತ್ರನಿಷೇಧೋ ಯುಕ್ತ ಇತಿ ಭಾವಃ ॥ ೩೦೭ ॥

**ವಿವರಣೆ–** ಸತ್ಯಲೋಕ, ವೈಕುಂಠ ಮತ್ತು ಕೈಲಾಸದಲ್ಲಿ ವಾಸಿಸುವಂತಹ ಎಂಬುದು ಉಪಲಕ್ಷಣ. ಭಿನ್ನ ಭಿನ್ನ ಆಯುಧಗಳನ್ನು ಉಳ್ಳಂತಹ, ಭಿನ್ನ ಭಿನ್ನ ವಾಹನಗಳನ್ನು ಉಳ್ಳಂತಹ, ಭಿನ್ನ ಭಿನ್ನ ಸಾಧನಗಳನ್ನು ಉಳ್ಳಂತಹ ಎಂದೂ ಅರ್ಥಮಾಡಬೇಕು. ಅಂತಹ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಭೇದವು ಪೂರ್ವದಲ್ಲಿಯೂ ಇರುವುದರಿಂದ ದಕ್ಷಾಧ್ವರದಲ್ಲಿ ಪ್ರಸಕ್ತವಾಗಿಲ್ಲ. ದಕ್ಷಾಧ್ವರದಲ್ಲಿ ಪ್ರಸಕ್ತವಾಗಿರುವುದು ಮಾತ್ರ ದಕ್ಷಾಧ್ವರಪ್ರಸಂಗದಲ್ಲಿ ನಿಷೇಧಿಸಲ್ಪಡಬೇಕು. ಭೇದವು ಇಲ್ಲಿ ಪ್ರಸಕ್ತವಾಗದಿರುವುದರಿಂದ ಭೇದದ ನಿಷೇಧವಿಲ್ಲ, ವಿರೋಧದ ನಿಷೇಧ ಮಾತ್ರ ಎಂದು ಅಭಿಪ್ರಾಯ.

**ಪೂಜ್ಯಪೂಜಕಭಾವೇನ ಪ್ರೇಮ್ಣಸ್ತತ್ರೈವ ದರ್ಶನಾತ್ ।**
**ವಿರೋಧಸ್ತು ನಿಷೇಧಾರ್ಹಃ ಕಥಂ ಭೇದೋ ನಿಷಿಧ್ಯತೇ ॥ ೩೦೮ ॥**

**ಅರ್ಥ–** ತತ್ರೈವ= ಆ ದಕ್ಷಾಧ್ವರ ಪ್ರಸಂಗದಲ್ಲಿಯೇ, ಪೂಜ್ಯ ಪೂಜಕಭಾವೇನ= ಪೂಜ್ಯ ಪೂಜಕ ಭಾವದಿಂದ, ಪ್ರೇಮ್ಣಃ= ಪ್ರೀತಿಯು, ದರ್ಶನಾತ್= ಕಾಣುವುದರಿಂದ, ವಿರೋಧಸ್ತು= ವಿರೋಧವೇ, ನಿಷೇಧಾರ್ಹಃ= ನಿಷೇಧಕ್ಕೆ ಯೋಗ್ಯವಾದುದು, ಭೇದಃ= ಭೇದವು, ಕಥಂ= ಹೇಗೆ, ನಿಷಿಧ್ಯತೇ= ನಿಷೇಧಿಸಲ್ಪಡುತ್ತದೆ.

**ಅನುವಾದ–** ದಕ್ಷಾಧ್ವರಪ್ರಸಂಗದಲ್ಲಿಯೇ ವಿಷ್ಣುವಿಗೆ ಪೂಜ್ಯತ್ವವು, ಬ್ರಹ್ಮಾದಿಗಳಿಗೆ ಪೂಜಕತ್ವವು ಹೇಳಲ್ಪಡುವುದರಿಂದ ಪರಸ್ಪರ ಪ್ರೇಮವೇ ತಿಳಿದುಬರುತ್ತದೆ. ಆದ್ದರಿಂದ ಇಲ್ಲಿ ವಿರೋಧವೇ ನಿಷೇಧಕ್ಕೆ ಯೋಗ್ಯವಾದುದು. ಭೇದವು ಹೇಗೆ ನಿಷೇಧಿಸಲ್ಪಡುತ್ತದೆ?

**ಭಾವವಿಲಾಸಿನೀ–** ಕಿಂಚನಿಷೇಧಯೋಗ್ಯ ಏವ ನಿಷೇದ್ಧವ್ಯೋ ನತು ತದಯೋಗ್ಯಃ । ನಿಷೇಧಯೋಗ್ಯಶ್ಚ ವಿರೋಧ ಏವ ನ ಸ್ವರೂಪಭೇದ ಇತ್ಯಾಹ – **ಪೂಜ್ಯಪೂಜಕೇತಿ** ॥ ಪೂಜ್ಯೋ ವಿಷ್ಣುಃ । ಪೂಜಕಾ ಬ್ರಹ್ಮಾದಯಃ । ತೇಷಾಂ ಭಾವೇನ ಪ್ರೇಮ್ಣಃ ಅನ್ಯೋನ್ಯಂ ಸ್ನೇಹಸ್ಯ । ತತ್ರೈವ ದಕ್ಷಾಧ್ವರ ಏವ । ನಿಷೇಧಾರ್ಹಃ ನಿಷೇಧಯೋಗ್ಯಃ । ಅನ್ಯೋನ್ಯಂ ತೇಷಾಂ ಪ್ರೇಮ್ಣಃ ಸರ್ವೈರಪಿ ದರ್ಶನಾತ್ ತದ್ವಿರುದ್ಧೋ ವಿರೋಧ ಏವ ಭ್ರಾಂತಿಮೂಲತ್ವಾನ್ನಿಷೇಧಯೋಗ್ಯಃ । ಉಪಲಕ್ಷಣಂ ಚೈತತ್ । ಬುದ್ಧಿಭೇದೋಪಿ ನಿಷೇಧಯೋಗ್ಯ ಇತಿ ದ್ರಷ್ಟವ್ಯಮ್ । ಭೇದಸ್ಯ ನಿಷೇಧಾನರ್ಹತ್ವಮುಪಪಾದಯತಿ ॥ **ಕಥಮಿತಿ** ॥ ೩೦೮ ॥

**ವಿವರಣೆ–** ನಿಷೇಧ ಮಾಡುವುದಾದರೂ, ನಿಷೇಧಕ್ಕೆ ಯೋಗ್ಯವಾದುದನ್ನೇ ನಿಷೇಧ ಮಾಡಬೇಕೇ ಹೊರತು, ಅಯೋಗ್ಯವಾದುದನ್ನು ನಿಷೇಧ ಮಾಡಬಾರದು. ಸ್ವರೂಪ ಭೇದವು ನಿಷೇಧಕ್ಕೆ ಅಯೋಗ್ಯವಾದುದು. ಏಕೆಂದರೆ ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ದಕ್ಷಾಧ್ವರದಲ್ಲಿಯೂ, ದಕ್ಷಾಧ್ವರಕ್ಕೆ ಮೊದಲು, ದಕ್ಷಾಧ್ವರಕ್ಕೆ ಅನಂತರವೂ ಸ್ವರೂಪಭೇದ ಇದ್ದೇ ಇದೆ. ಈ ದಕ್ಷಾಧ್ವರ ಪ್ರಸಂಗದಲ್ಲಿಯೇ ಪೂಜ್ಯ ಪೂಜಕಭಾವ

ಪ್ರಸಂಗ → ತತ್ರ ತತ್ಪ್ರಕ್ಷ್ಣ

ತೋರಿಬರುವುದರಿಂದ, ವಿಷ್ಣುಶಿವಾದಿಗಳಿಗೆ ಪರಸ್ಪರ ಪ್ರೇಮವಿದೆ ಎಂದು ತಿಳಿದುಬರುತ್ತದೆ. ಆದ್ದರಿಂದ ಪ್ರೇಮಕ್ಕೆ ವಿರೋಧಿಯಾದ ವಿರೋಧವನ್ನೇ ನಿಷೇಧಿಸಬೇಕೇ ಹೊರತು, ನಿಷೇಧಕ್ಕೆ ಅಯೋಗ್ಯವಾದ ಭೇದವನ್ನು ನಿಷೇಧಿಸಬಾರದು ಎಂದು ಅಭಿಪ್ರಾಯ.

**ತದ್ವೈವ ತತ್ಸಭಾಮಧ್ಯೇ ತ್ರಿರೂಪಾಣಾಂ ತ್ರಿಲಿಂಗಿನಾಂ ।**
**ಸ್ತೋತೃಸ್ತವ್ಯತಯಾ ನಮ್ಯನಂತೃಭಾವೇನ ಚ ಸ್ಥಿತೇಃ ॥ ೩೦೯ ॥**

**ಅರ್ಥ–** ತದ್ವೈವ= ಆ ದಕ್ಷಾಧ್ವರ ಸಮಯದಲ್ಲಿಯೇ, ತತ್ಸಭಾಮಧ್ಯೇ= ಆ ಸಭೆಯ ಮಧ್ಯದಲ್ಲಿಯೇ, ತ್ರಿರೂಪಾಣಾಂ= ಮೂರು ಬೇರೆ ಬೇರೆ ರೂಪಗಳನ್ನು ಧರಿಸಿದ, ತ್ರಿಲಿಂಗಿನಾಂ= ಚಕ್ರ, ಶೂಲ ಮತ್ತು ಅಕ್ಷಮಾಲೆ ಎಂಬ ಬೇರೆ ಬೇರೆ ಚಿನ್ಹೆಗಳನ್ನು ಧರಿಸಿದ ಬ್ರಹ್ಮ, ವಿಷ್ಣು, ಮಹೇಶ್ವರರು, ಸ್ತೋತೃಸ್ತವ್ಯತಯಾ= ಸ್ತೋತೃವಾಗಿ ಮತ್ತು ಸ್ತೋತವ್ಯರಾಗಿ, ನಮ್ಯನಂತೃತಯಾ= ನಮಸ್ಕಾರ ಮಾಡುವವರಾಗಿ ಮತ್ತು ನಮಸ್ಕಾರ ಮಾಡಿಸಿಕೊಳ್ಳುವವರಾಗಿ, ಸ್ಥಿತೇಃ= ಇರುವ ಕಾರಣದಿಂದಲೂ (ಭೇದವನ್ನು ನಿಷೇಧ ಮಾಡುವುದು ಉಚಿತವಲ್ಲ).

**ಅನುವಾದ–** ದಕ್ಷಾಧ್ವರ ಪ್ರಸಂಗದಲ್ಲಿಯೇ ಆ ಸಭೆಯ ಮಧ್ಯದಲ್ಲಿಯೇ ಬ್ರಹ್ಮ, ವಿಷ್ಣು, ಮಹೇಶ್ವರರು ಮೂರು ರೂಪಗಳನ್ನು ಧರಿಸಿ ಅಕ್ಷಮಾಲಾ, ಚಕ್ರ ಮತ್ತು ತ್ರಿಶೂಲಗಳನ್ನು ಧರಿಸಿ ವಿಷ್ಣುವು ಸ್ತೋತವ್ಯನಾಗಿಯೂ, ಬ್ರಹ್ಮರುದ್ರರು ಸ್ತೋತೃಗಳಾಗಿಯೂ, ವಿಷ್ಣುವು ನಮ್ಯನಾಗಿಯೂ, ಬ್ರಹ್ಮರುದ್ರರು ನಮಸ್ಕಾರ ಮಾಡುವವರಾಗಿಯೂ ಇರುವುದರಿಂದ ಸ್ವರೂಪಭೇದವನ್ನು ನಿಷೇಧ ಮಾಡಬಾರದು.

**ಭಾವವಿಲಾಸಿನೀ–** ತತ್ ಸಭಾಮಧ್ಯೇ ದಕ್ಷಾಧ್ವರಸಭಾಮಧ್ಯೇ । ತ್ರಿರೂಪಾಣಾಂ ತ್ರೀಣಿ ಚತುರ್ಮುಖೈಕಮುಖಪಂಚಮುಖಾನಿ ರೂಪಾಣಿ ಯೇಷಾಂತೇ । ತ್ರಿಲಿಂಗಿನಾಂ ಅಕ್ಷಮಾಲಾಚಕ್ರಶೂಲಾಖ್ಯಲಿಂಗತ್ರಯವತಾಂ ತೇಷಾಂ ಪ್ರಾಮಾಣಿಕೋ ಭೇದಃ ಕಥಂ ನಿಷಿಧ್ಯತ ಇತಿ ಪೂರ್ವೇಣಾನ್ವಯಃ । ಸ್ತೋತಾರೋಬ್ರಹ್ಮಾದ್ಯಾಃ । ಸ್ತವ್ಯೋ ನಾರಾಯಣಸ್ತೇಷಾಂ ಭಾವಃ ತಯಾ । ನಂತಾರೋ ಬ್ರಹ್ಮಾದ್ಯಾಃ ನಮ್ಯೋ ನಾರಾಯಣಸ್ತೇಷಾಂ ಭಾವಸ್ತಯಾ ಚ ಸ್ಥಿತೇರ್ದಕ್ಷಾಧ್ವರೇಽವಸ್ಥಿತೇಃ ಸ್ತೋತೃಸ್ತವ್ಯಭಾವಾದಿಘಟಕಃ ಕಥಂ ಭೇದೋ ನಿಷಿಧ್ಯತ ಇತಿ ಪೂರ್ವೇಣಾನ್ವಯಃ । ಉಕ್ತವಿರುದ್ಧಧರ್ಮಚತುಷ್ಟಯ ಘಟಕಸ್ವರೂಪಭೇದಸ್ಯ ತತ್ರೈವ ಪ್ರಾಮಾಣಿಕತಯಾ ಸಿದ್ಧತ್ವಾತ್ ನ ತತ್ ಸ್ವರೂಪಭೇದೋ ನಿಷೇಧಾರ್ಹ ಇತಿ ಭಾವಃ ॥ ೩೦೯ ॥

**ವಿವರಣೆ–** ವಿಗ್ರಹ ಭೇದ, ಲಿಂಗಭೇದ ಜೊತೆಗೆ ಸ್ತೋತೃಸ್ತವ್ಯತ್ವ, ನಂತೃನಮ್ಯತ್ವ ರೂಪವಾದ ವಿರುದ್ಧಧರ್ಮಾಧಿಕರಣತ್ವವು ಇರುವುದರಿಂದ, ಸ್ವರೂಪಭೇದವು ನಿಷೇಧಕ್ಕೆ ಯೋಗ್ಯವೇ ಅಲ್ಲ. ಏಕೆಂದರೆ ಈ ಎಲ್ಲಾ ಹೇತುಗಳಿಂದ ಸ್ವರೂಪಭೇದವು

ಪ್ರಾಮಾಣಿಕವಾಗಿ ಸಿದ್ಧವಾಗುತ್ತದೆ. ಆದ್ದರಿಂದ ವಿರೋಧವನ್ನೇ ನಿಷೇಧ ಮಾಡಬೇಕು ಎಂದು ಅಭಿಪ್ರಾಯ.

**ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ ।**
**ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ॥ ೩೧೦ ॥**

**ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ ।**
**ಮೂರ್ಧ್ನ್ಯೂರ್ಧ್ವ್ವತಾಂಜಲಿಪುಟಾ ಉಪತಸ್ಥುರಧೋಕ್ಷಜಂ ॥ ೩೧೧ ॥**

**ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ ।**
**ಯಥಾಮತಿ ಗೃಣಂತಿ ಸ್ಮ ಕೃತಾನುಗ್ರಹವಿಗ್ರಹಂ ॥ ೩೧೨ ॥**

**ಅರ್ಥ–** ತಂ ಉಪಾಗತಂ= ಆ ವಿಷ್ಣುವು ಬಂದದ್ದನ್ನು, ಆಲಕ್ಷ್ಯ= ಗಮನಿಸಿ, ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ= ಬ್ರಹ್ಮ, ಇಂದ್ರ, ರುದ್ರರನ್ನೇ ನಾಯಕರಾಗಿ ಉಳ್ಳ, ಸರ್ವೇ ಸುರಗಣಾದಯಃ= ಎಲ್ಲಾ ಸುರಗಣಾದಿಗಳೂ ಸಹ, ಸಹಸಾ= ಇದ್ದಕ್ಕಿದ್ದಂತೆಯೇ, ಉತ್ಥಾಯ= ಎದ್ದು, ಪ್ರಣೇಮುಃ= ನಮಸ್ಕಾರ ಮಾಡಿದರು.

ತತ್ತೇಜಸಾ= ಆ ವಿಷ್ಣುವಿನ ಕಾಂತಿಯಿಂದ, ಹತರುಚಃ= ತಮ್ಮ ಕಾಂತಿಯನ್ನು ಕಳೆದುಕೊಂಡವರಾಗಿ, ಸನ್ನಜಿಹ್ವಾಃ= ನಾಲಿಗೆಯು ಉಡುಗಿಹೋದವರಾಗಿ, ಸಸಾಧ್ವಸಾಃ= ಭಯದಿಂದ ಕೂಡಿದವರಾಗಿ, ಮೂರ್ಧ್ನ್ಯೂರ್ಧ್ವ್ವಂತಾಜಲಿಪುಟಾಃ= ತಲೆಯ ಮೇಲೆ ಕೈಗಳನ್ನು ಜೋಡಿಸಿ, ಅಧೋಕ್ಷಜಂ= ಅಧೋಕ್ಷಜನಾದ ಹರಿಯನ್ನು, ಉಪತಸ್ಥುಃ= ಸ್ತೋತ್ರ ಮಾಡಿದರು.

ಸ್ವಭುವಾದಯಃ= ಬ್ರಹ್ಮಾದಿ ದೇವತೆಗಳು, ಮಹಿತ್ವೇ= ಮಹಿಮೆಯ ವಿಷಯದಲ್ಲಿ, ಯಸ್ಯ= ಯಾವ ವಿಷ್ಣುವಿಗೆ, ಅರ್ವಾಗ್ವೃತ್ತಯಃ ಅಪಿ= ಕೆಳಗೆ ಇರುವವರಾದರೂ ಸಹ, ಕೃತಾನುಗ್ರಹವಿಗ್ರಹಂ= ಭಕ್ತರ ಮೇಲೆ ಅನುಗ್ರಹವನ್ನು ಮಾಡಲು ವಿಗ್ರಹವನ್ನು ಧರಿಸಿದ (ಭಕ್ತರಿಗೆ ಅನುಗ್ರಹವನ್ನು, ಶತ್ರುಗಳಿಗೆ ನಿಗ್ರಹವನ್ನು ಮಾಡುವ) ಹರಿಯನ್ನು, ಯಥಾಮತಿ= ತಮ್ಮ ಬುದ್ಧಿಗೆ ನಿಲುಕುವಷ್ಟು, ಗೃಣಂತಿ ಸ್ಮ= ಸ್ತೋತ್ರ ಮಾಡಿದರು.

**ಭಾವವಿಲಾಸಿನೀ– ದಕ್ಷಾಧ್ವರೇಸ್ತೋತ್ರಸ್ತುತ್ಯಭಾವಾದಿನಾ ಬ್ರಹ್ಮವಿಷ್ಣುಶಿವಾನಾಮವಸ್ಥಾನ ಪ್ರತಿಪಾದಕಂ ತತ್ರತ್ಯವಾಕ್ಯತ್ರಯಂ ಪಠನ್ನಿಸ್ಪಷ್ಟಭೇದಪ್ರತಿಪಾದಕೈತಚ್ಛ್ಲೋಕಾನುಸಾರೇಣೈವಾಸ್ಪಷ್ಟಸ್ಯ ತ್ರಯಾಣಾಮಿತಿ ಶ್ಲೋಕಸ್ಯಾರ್ಥ ಉನ್ನೇಯ ಇತ್ಯಾಹ – ತಮುಪಾಗತಮಿತಿ ॥ ಶ್ಲೋಕಾಭಿಪ್ರಾಯಸ್ತು ಪ್ರಾಗೇವ ವಿವೃತಃ । ತ್ರಿಕಾಲಜ್ಞಾನವಾನ್ ಅತೀತಾನಾಗತವರ್ತಮಾನದರ್ಶೀ**

ತಾತ್ಕಾಲಿಕಾಜ್ಞಾನೀ ತಸ್ಮಿನ್ನಧ್ಯಾಯ ಏವ ಪ್ರಾಗುಕ್ತಶ್ಲೋಕಜ್ಞಾನೀ ನಹೀತಿ ಯೋಜನಾ ॥೩೧೦-೩೧೨॥

**ವಿವರಣೆ–** ಹಿಂದೆ ಸೂಚಿಸಿದ ಮೂರು ಶ್ಲೋಕಗಳನ್ನೇ ಇಲ್ಲಿ ಸ್ಪಷ್ಟವಾಗಿ ಈ ಗ್ರಂಥದಲ್ಲಿ ಸೇರಿಸಿ, ವಿಷ್ಣುವಿನ ನಮ್ಯತ್ವ ಮತ್ತು ಸ್ತೋತವ್ಯತ್ವ ಹಾಗೂ ಬ್ರಹ್ಮಾದಿಗಳ ನಂತೃತ್ವ ಮತ್ತು ಸ್ತೋತೃತ್ವವನ್ನು, ವಿಷ್ಣುವಿನ ಉತ್ತಮತ್ವವನ್ನು, ಬ್ರಹ್ಮಾದಿಗಳ ಅಧಮತ್ವವನ್ನು ಸಮರ್ಥನೆ ಮಾಡುತ್ತಾರೆ.

ಇತಿ ಪೂರ್ವೋಕ್ತವಿಸ್ಪಷ್ಟವಾಕ್ಯಾದಸ್ಪಷ್ಟನಿರ್ಣಯಃ ।
ನ ಹಿ ತಾತ್ಕಾಲಿಕಾಜ್ಞಾನೀ ತ್ರಿಕಾಲಜ್ಞಾನವಾನ್ಮುನಿಃ ॥ ೩೧೩ ॥

**ಅರ್ಥ–** ಇತಿ= ಈ ರೀತಿಯಲ್ಲಿ, ಪೂರ್ವೋಕ್ತವಿಸ್ಪಷ್ಟವಾಕ್ಯಾತ್= ಹಿಂದೆ ಹೇಳಿದ ಮೂರು ಅತಿ ಸ್ಪಷ್ಟವಾದ ವಚನಗಳನ್ನು ಅನುಸರಿಸಿ, ಅಸ್ಪಷ್ಟನಿರ್ಣಯಃ= ಅಸ್ಪಷ್ಟವಾದ ವಾಕ್ಯದ ನಿರ್ಣಯವು ಮಾಡಲ್ಪಡಬೇಕು, ತ್ರಿಕಾಲಜ್ಞಾನವಾನ್= ತ್ರಿಕಾಲಜ್ಞಾನವುಳ್ಳ, ಮುನಿಃ= ಶುಕಾಚಾರ್ಯರು, ತಾತ್ಕಾಲಿಕಾಜ್ಞಾನೀ= ಆ ಕಾಲದಲ್ಲಿ ಕಣ್ಣೆದುರಿಗೆ ಇರುವ ವಸ್ತುವಿನ ಅಜ್ಞಾನವನ್ನು ಉಳ್ಳವನು ಎಂಬುದು, ನ ಹಿ= ಇಲ್ಲವಷ್ಟೇ.

**ಅನುವಾದ–** ಹೀಗೆ, ಈ ಮೂರು ಸ್ಪಷ್ಟವಾದ ವಚನವನ್ನು ಅನುಸರಿಸಿ ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕಕ್ಕೆ ಅರ್ಥವನ್ನು ಮಾಡಬೇಕು. ತ್ರಿಕಾಲ ಜ್ಞಾನಿಗಳಾದ ಶುಕಾಚಾರ್ಯರು, ಆ ಕಾಲದ ವರ್ತಮಾನವಿಷಯಕವಾದ ಜ್ಞಾನವನ್ನು ಹೊಂದಿರುವುದಿಲ್ಲವೆಂದು ಹೇಳಲು ಆಗುವುದಿಲ್ಲವಷ್ಟೇ.

**ವಿವರಣೆ–** ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕಕ್ಕಿಂತ ಮೊದಲು ಹಿಂದೆ ಉದಾಹರಿಸಿದ ಈ ಮೂರು ಶ್ಲೋಕಗಳು ಇದೆ. ಅದಕ್ಕನುಸಾರವಾಗಿ ಅಸ್ಪಷ್ಟಾರ್ಥವಾದ ಈ ಶ್ಲೋಕಕ್ಕೆ ಅರ್ಥವನ್ನು ಮಾಡಬೇಕು. ಶುಕಾಚಾರ್ಯರು ತ್ರಿಕಾಲಜ್ಞಾನವುಳ್ಳವರು. ಅವರು ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಸ್ವರೂಪಭೇದವನ್ನು ನಿಷೇಧ ಮಾಡಿದರೆ, ದಕ್ಷಾಧ್ವರ ಪ್ರಸಂಗದಲ್ಲಿ ಕಣ್ಣೆದುರಿಗೆ ಕಾಣುತ್ತಿದ್ದ ಮೂರು ಆಕೃತಿಗಳ, ಭಿನ್ನ ಚಿನ್ಹೆಗಳ ಮತ್ತು ಭಿನ್ನಾಯುಧಗಳ ಜ್ಞಾನವು ಅವರಿಗೆ ಇರಲಿಲ್ಲವೆಂದು ಅಂಗೀಕರಿಸಲು ಸಾಧ್ಯವಿಲ್ಲವಷ್ಟೇ. ತ್ರಿಕಾಲಜ್ಞಾನಿಗಳಾದ ಶುಕಾಚಾರ್ಯರಿಗೆ ದಕ್ಷಾಧ್ವರದಲ್ಲಿ ನಡೆದ ಘಟನೆಯು ಪ್ರತ್ಯಕ್ಷವಾಗಿಯೇ ಇದೆ. ಅಲ್ಲಿ ಸ್ವರೂಪ ಭೇದವು ಪ್ರತ್ಯಕ್ಷವಾಗಿ ಕಾಣುತ್ತಿರುವುದರಿಂದ, ಸ್ವರೂಪಭೇದವನ್ನು ಅವರು ನಿಷೇಧ ಮಾಡಲು ಸಾಧ್ಯವಿಲ್ಲ. ಸ್ವರೂಪ ಭೇದವನ್ನು ನಿಷೇಧ ಮಾಡಿದರೆ, ಅವರಿಗೆ ತಾತ್ಕಾಲಿಕ ಜ್ಞಾನವೂ ಇಲ್ಲವೆಂದು ಅಂಗೀಕರಿಸಬೇಕಾಗುತ್ತದೆ.

**ಮಹಿಮ್ನ್ಯರ್ವಾಗ್ವೃತ್ತಯಶ್ಚೇತ್ ಕಥಂ ತೇಧಿಕವೃತ್ತಿನಾ ।**
**ಹರಿಣೈಕ್ಯಂ ಪ್ರಾಪ್ನುವಂತೀತ್ಯಾದಿವಾಕ್ಯಂ ವಿಚಾರ್ಯತಾಮ್ ॥ ೩೧೪ ॥**

**ಅರ್ಥ–** ಮಹಿಮ್ನಿ= ಮಹಿಮೆ ವಿಷಯದಲ್ಲಿ, ಅರ್ವಾಗ್ವೃತ್ತಯಶ್ಚೇತ್= ಕೆಳಗೇ ಇರುವವರಾದರೆ, ತೇ= ಅವರು, ಅಧಿಕವೃತ್ತಿನಾ= ಅಧಿಕ ಮಹಿಮೆಯಿಂದ ಕೂಡಿದ, ಹರಿಣಾ= ಹರಿಯಿಂದ, ಐಕ್ಯಂ= ಐಕ್ಯವನ್ನು, ಕಥಂ= ಹೇಗೆ, ಪ್ರಾಪ್ನುವಂತಿ= ಹೊಂದುತ್ತಾರೆ, ಇತ್ಯಾದಿ= ಇತ್ಯಾದಿಯಾದ, ವಾಕ್ಯಂ= ಆ ವಚನವು, ವಿಚಾರ್ಯತಾಂ= ವಿಚಾರಿಸಲ್ಪಡಲಿ.

**ಅನುವಾದ–** ಅಪ್ಯರ್ವಾಗ್ವೃತ್ತಯಃ ಎಂಬ ಶ್ಲೋಕದಲ್ಲಿ ಬ್ರಹ್ಮಾದಿಗಳ ಮಹಿಮೆಯು ವಿಷ್ಣುವಿನ ಮಹಿಮೆಗಿಂತ ಯಾವಾಗಲೂ ಕಡಿಮೆ ಎಂದು ಹೇಳಿರುವುದರಿಂದ, ಅಧಿಕ ಮಹಿಮೆಯುಳ್ಳ ವಿಷ್ಣುವಿನಿಂದ ಅವರಿಗೆ ಐಕ್ಯವು ಹೇಗೆ ಉಂಟಾಗುತ್ತದೆ ಎಂದು ಆ ಶ್ಲೋಕದ ಅರ್ಥವನ್ನು ವಿಚಾರ ಮಾಡು.

**ಭಾವವಿಲಾಸಿನೀ–** ತೇ ಬ್ರಹ್ಮಾದ್ಯಾಃ ಇತಿ ಅನೇನ ಪ್ರಕಾರೇಣ । ಆದಿವಾಕ್ಯಂ ಆದೌ ಹರ್ಯಾಗಮನಪ್ರಸ್ತಾವೇ ವಿದ್ಯಮಾನಮಿದಂ ವಾಕ್ಯಂ ವಿಚಾರ್ಯತಾಮ್ । ವಿವೇಕಿಭಿರಿತಿ ಶೇಷಃ ॥ ೩೧೪ ॥

**ಯನ್ಮಾಯಯಾ ಗಹನಯೇತ್ಯುಕ್ತಂ ಮಧ್ಯೇ ಭೃಗೋರ್ವಚಃ ।**
**ಆಶ್ರಯಾಶ್ರಯಿಭಾವಾದ್ಯೈಃ ಸ್ವರೂಪೈಕ್ಯಂ ನಿಷೇಧತಿ ॥ ೩೧೫ ॥**

**ಅರ್ಥ–** ಯನ್ಮಾಯಯಾ ಗಹನಯೇ ಇತಿ= ಯನ್ಮಾಯಯಾ ಗಹನಯಾ ಎಂಬುದರಲ್ಲಿ, ಮಧ್ಯೇ= ಈ ವಚನಗಳ ಮಧ್ಯದಲ್ಲಿ, ಉಕ್ತಂ= ಹೇಳಲ್ಪಟ್ಟ, ಭೃಗೋರ್ವಚಃ= ಭೃಗುವಿನ ವಚನವು, ಆಶ್ರಯಾಶ್ರಯಿಭಾವಾದ್ಯೈಃ= ಆಧಾರತ್ವ, ಆಧೇಯತ್ವ ಮೊದಲಾದ ಧರ್ಮಗಳ ಬಲದಿಂದ, ಸ್ವರೂಪೈಕ್ಯಂ= ಸ್ವರೂಪಾಭೇದವನ್ನು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ–** ಈ ಶ್ಲೋಕಗಳ ಮಧ್ಯೆ ಇರುವ ಯನ್ಮಾಯಯಾ ಗಹನಯಾ ಎಂಬ ಭೃಗು ವಚನವು ಆಶ್ರಯಾಶ್ರಯಿಭಾವವನ್ನು ಹೇಳುವುದರಿಂದ ಸ್ವರೂಪೈಕ್ಯವನ್ನು ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಮಧ್ಯಗತಭೃಗುವಾಕ್ಯೇನಾಪಿ ಸ್ವರೂಪಭೇದ ಏವ ಸಿದ್ಧ್ಯತೀತ್ಯಾಹ – **ಯನ್ಮಾಯಯೇತಿ** ॥ ಮಧ್ಯೇ ತಮುಪಾಗತಮಿತ್ಯಾದಿ ಶ್ಲೋಕತ್ರಯಾದುಪರಿ ತ್ರಯಾಣಾಮಿತಿ ಶ್ಲೋಕಾದಧಸ್ತಾದಿತ್ಯರ್ಥಃ ॥ ೩೧೫ ॥

**ವಿವರಣೆ–** ತಮುಪಾಗತಮಾಲಕ್ಷ್ಯ ಎಂಬ ಮೂರು ಶ್ಲೋಕಗಳು ಮೊದಲು ಇವೆ. ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕವು ಕೊನೆಯಲ್ಲಿದೆ. ಯನ್ಮಾಯಯಾ

ತಾತ್ಕಾಲಿಕಾಜ್ಞಾನೀ ತಸ್ಮಿನ್ನಧ್ಯಾಯ ಏವ ಪ್ರಾಗುಕ್ತಶ್ಲೋಕಜ್ಞಾನೀ ನಹೀತಿ ಯೋಜನಾ ॥೩೧೦-೩೧೨॥

**ವಿವರಣೆ–** ಹಿಂದೆ ಸೂಚಿಸಿದ ಮೂರು ಶ್ಲೋಕಗಳನ್ನೇ ಇಲ್ಲಿ ಸ್ಪಷ್ಟವಾಗಿ ಈ ಗ್ರಂಥದಲ್ಲಿ ಸೇರಿಸಿ, ವಿಷ್ಣುವಿನ ನಮ್ಯತ್ವ ಮತ್ತು ಸ್ತೋತವ್ಯತ್ವ ಹಾಗೂ ಬ್ರಹ್ಮಾದಿಗಳ ನಂತೃತ್ವ ಮತ್ತು ಸ್ತೋತೃತ್ವವನ್ನು, ವಿಷ್ಣುವಿನ ಉತ್ತಮತ್ವವನ್ನು, ಬ್ರಹ್ಮಾದಿಗಳ ಅಧಮತ್ವವನ್ನು ಸಮರ್ಥನೆ ಮಾಡುತ್ತಾರೆ.

ಇತಿ ಪೂರ್ವೋಕ್ತವಿಸ್ಪಷ್ಟವಾಕ್ಯಾದಸ್ಪಷ್ಟನಿರ್ಣಯಃ ।
ನ ಹಿ ತಾತ್ಕಾಲಿಕಾಜ್ಞಾನೀ ತ್ರಿಕಾಲಜ್ಞಾನವಾನ್ಮುನಿಃ ॥ ೩೧೩ ॥

**ಅರ್ಥ–** ಇತಿ= ಈ ರೀತಿಯಲ್ಲಿ, ಪೂರ್ವೋಕ್ತವಿಸ್ಪಷ್ಟವಾಕ್ಯಾತ್= ಹಿಂದೆ ಹೇಳಿದ ಮೂರು ಅತಿ ಸ್ಪಷ್ಟವಾದ ವಚನಗಳನ್ನು ಅನುಸರಿಸಿ, ಅಸ್ಪಷ್ಟನಿರ್ಣಯಃ= ಅಸ್ಪಷ್ಟವಾದ ವಾಕ್ಯದ ನಿರ್ಣಯವು ಮಾಡಲ್ಪಡಬೇಕು, ತ್ರಿಕಾಲಜ್ಞಾನವಾನ್= ತ್ರಿಕಾಲಜ್ಞಾನವುಳ್ಳ, ಮುನಿಃ= ಶುಕಾಚಾರ್ಯರು, ತಾತ್ಕಾಲಿಕಾಜ್ಞಾನೀ= ಆ ಕಾಲದಲ್ಲಿ ಕಣ್ಣೆದುರಿಗೆ ಇರುವ ವಸ್ತುವಿನ ಅಜ್ಞಾನವನ್ನು ಉಳ್ಳವನು ಎಂಬುದು, ನ ಹಿ= ಇಲ್ಲವಷ್ಟೇ.

**ಅನುವಾದ–** ಹೀಗೆ, ಈ ಮೂರು ಸ್ಪಷ್ಟವಾದ ವಚನವನ್ನು ಅನುಸರಿಸಿ ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕಕ್ಕೆ ಅರ್ಥವನ್ನು ಮಾಡಬೇಕು. ತ್ರಿಕಾಲ ಜ್ಞಾನಿಗಳಾದ ಶುಕಾಚಾರ್ಯರು, ಆ ಕಾಲದ ವರ್ತಮಾನವಿಷಯಕವಾದ ಜ್ಞಾನವನ್ನು ಹೊಂದಿರುವುದಿಲ್ಲವೆಂದು ಹೇಳಲು ಆಗುವುದಿಲ್ಲವಷ್ಟೇ.

**ವಿವರಣೆ–** ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕಕ್ಕಿಂತ ಮೊದಲು ಹಿಂದೆ ಉದಾಹರಿಸಿದ ಈ ಮೂರು ಶ್ಲೋಕಗಳು ಇದೆ. ಅದಕ್ಕನುಸಾರವಾಗಿ ಅಸ್ಪಷ್ಟಾರ್ಥವಾದ ಈ ಶ್ಲೋಕಕ್ಕೆ ಅರ್ಥವನ್ನು ಮಾಡಬೇಕು. ಶುಕಾಚಾರ್ಯರು ತ್ರಿಕಾಲಜ್ಞಾನವುಳ್ಳವರು. ಅವರು ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಸ್ವರೂಪಭೇದವನ್ನು ನಿಷೇಧ ಮಾಡಿದರೆ, ದಕ್ಷಾಧ್ವರ ಪ್ರಸಂಗದಲ್ಲಿ ಕಣ್ಣೆದುರಿಗೆ ಕಾಣುತ್ತಿದ್ದ ಮೂರು ಆಕೃತಿಗಳ, ಭಿನ್ನ ಚಿನ್ಹೆಗಳ ಮತ್ತು ಭಿನ್ನಾಯುಧಗಳ ಜ್ಞಾನವು ಅವರಿಗೆ ಇರಲಿಲ್ಲವೆಂದು ಅಂಗೀಕರಿಸಲು ಸಾಧ್ಯವಿಲ್ಲವಷ್ಟೇ. ತ್ರಿಕಾಲಜ್ಞಾನಿಗಳಾದ ಶುಕಾಚಾರ್ಯರಿಗೆ ದಕ್ಷಾಧ್ವರದಲ್ಲಿ ನಡೆದ ಘಟನೆಯು ಪ್ರತ್ಯಕ್ಷವಾಗಿಯೇ ಇದೆ. ಅಲ್ಲಿ ಸ್ವರೂಪ ಭೇದವು ಪ್ರತ್ಯಕ್ಷವಾಗಿ ಕಾಣುತ್ತಿರುವುದರಿಂದ, ಸ್ವರೂಪಭೇದವನ್ನು ಅವರು ನಿಷೇಧ ಮಾಡಲು ಸಾಧ್ಯವಿಲ್ಲ. ಸ್ವರೂಪ ಭೇದವನ್ನು ನಿಷೇಧ ಮಾಡಿದರೆ, ಅವರಿಗೆ ತಾತ್ಕಾಲಿಕ ಜ್ಞಾನವೂ ಇಲ್ಲವೆಂದು ಅಂಗೀಕರಿಸಬೇಕಾಗುತ್ತದೆ.

**ಮಹಿಮ್ನ್ಯರ್ವಾಗ್ವೃತ್ತಯಶ್ಚೇತ್ ಕಥಂ ತೇಧಿಕವೃತ್ತಿನಾ ।**
**ಹರಿಣೈಕ್ಯಂ ಪ್ರಾಪ್ನುವಂತೀತ್ಯಾದಿವಾಕ್ಯಂ ವಿಚಾರ್ಯತಾಮ್ ॥ ೩೧೪ ॥**

**ಅರ್ಥ–** ಮಹಿಮ್ನಿ= ಮಹಿಮೆ ವಿಷಯದಲ್ಲಿ, ಅರ್ವಾಗ್ವೃತ್ತಯಶ್ಚೇತ್= ಕೆಳಗೇ ಇರುವವರಾದರೆ, ತೇ= ಅವರು, ಅಧಿಕವೃತ್ತಿನಾ= ಅಧಿಕ ಮಹಿಮೆಯಿಂದ ಕೂಡಿದ, ಹರಿಣಾ= ಹರಿಯಿಂದ, ಐಕ್ಯಂ= ಐಕ್ಯವನ್ನು, ಕಥಂ= ಹೇಗೆ, ಪ್ರಾಪ್ನುವಂತಿ= ಹೊಂದುತ್ತಾರೆ, ಇತ್ಯಾದಿ= ಇತ್ಯಾದಿಯಾದ, ವಾಕ್ಯಂ= ಆ ವಚನವು, ವಿಚಾರ್ಯತಾಂ= ವಿಚಾರಿಸಲ್ಪಡಲಿ.

**ಅನುವಾದ–** ಅಪ್ಯರ್ವಾಗ್ವೃತ್ತಯಃ ಎಂಬ ಶ್ಲೋಕದಲ್ಲಿ ಬ್ರಹ್ಮಾದಿಗಳ ಮಹಿಮೆಯು ವಿಷ್ಣುವಿನ ಮಹಿಮೆಗಿಂತ ಯಾವಾಗಲೂ ಕಡಿಮೆ ಎಂದು ಹೇಳಿರುವುದರಿಂದ, ಅಧಿಕ ಮಹಿಮೆಯುಳ್ಳ ವಿಷ್ಣುವಿನಿಂದ ಅವರಿಗೆ ಐಕ್ಯವು ಹೇಗೆ ಉಂಟಾಗುತ್ತದೆ ಎಂದು ಆ ಶ್ಲೋಕದ ಅರ್ಥವನ್ನು ವಿಚಾರ ಮಾಡು.

**ಭಾವವಿಲಾಸಿನೀ–** ತೇ ಬ್ರಹ್ಮಾದ್ಯಾಃ ಇತಿ ಅನೇನ ಪ್ರಕಾರೇಣ । ಆದಿವಾಕ್ಯಂ ಆದೌ ಹರ್ಯಾಗಮನಪ್ರಸ್ತಾವೇ ವಿದ್ಯಮಾನಮಿದಂ ವಾಕ್ಯಂ ವಿಚಾರ್ಯತಾಮ್ । ವಿವೇಕಿಭಿರಿತಿ ಶೇಷಃ ॥ ೩೧೪ ॥

**ಯನ್ಮಾಯಯಾ ಗಹನಯೇತ್ಯುಕ್ತಂ ಮಧ್ಯೇ ಭೃಗೋರ್ವಚಃ ।**
**ಆಶ್ರಯಾಶ್ರಯಿಭಾವಾದ್ಯೈಃ ಸ್ವರೂಪೈಕ್ಯಂ ನಿಷೇಧತಿ ॥ ೩೧೫ ॥**

**ಅರ್ಥ–** ಯನ್ಮಾಯಯಾ ಗಹನಯೇ ಇತಿ= ಯನ್ಮಾಯಯಾ ಗಹನಯಾ ಎಂಬುದರಲ್ಲಿ, ಮಧ್ಯೇ= ಈ ವಚನಗಳ ಮಧ್ಯದಲ್ಲಿ, ಉಕ್ತಂ= ಹೇಳಲ್ಪಟ್ಟ, ಭೃಗೋರ್ವಚಃ= ಭೃಗುವಿನ ವಚನವು, ಆಶ್ರಯಾಶ್ರಯಿಭಾವಾದ್ಯೈಃ= ಆಧಾರತ್ವ, ಆಧೇಯತ್ವ ಮೊದಲಾದ ಧರ್ಮಗಳ ಬಲದಿಂದ, ಸ್ವರೂಪೈಕ್ಯಂ= ಸ್ವರೂಪಾಭೇದವನ್ನು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ–** ಈ ಶ್ಲೋಕಗಳ ಮಧ್ಯೆ ಇರುವ ಯನ್ಮಾಯಯಾ ಗಹನಯಾ ಎಂಬ ಭೃಗು ವಚನವು ಆಶ್ರಯಾಶ್ರಯಿಭಾವವನ್ನು ಹೇಳುವುದರಿಂದ ಸ್ವರೂಪೈಕ್ಯವನ್ನು ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಮಧ್ಯಗತಭೃಗುವಾಕ್ಯೇನಾಪಿ ಸ್ವರೂಪಭೇದ ಏವ ಸಿದ್ಧ್ಯತೀತ್ಯಾಹ – **ಯನ್ಮಾಯಯೇತಿ** ॥ ಮಧ್ಯೇ ತಮುಪಾಗತಮಿತ್ಯಾದಿ ಶ್ಲೋಕತ್ರಯಾದುಪರಿ ತ್ರಯಾಣಾಮಿತಿ ಶ್ಲೋಕಾದಧಸ್ತಾದಿತ್ಯರ್ಥಃ ॥ ೩೧೫ ॥

**ವಿವರಣೆ–** ತಮುಪಾಗತಮಾಲಕ್ಷ್ಯ ಎಂಬ ಮೂರು ಶ್ಲೋಕಗಳು ಮೊದಲು ಇವೆ. ತ್ರಯಾಣಾಂ ಏಕಭಾವಾನಾಮ್ ಎಂಬ ಶ್ಲೋಕವು ಕೊನೆಯಲ್ಲಿದೆ. ಯನ್ಮಾಯಯಾ

ಗಹನಯಾ ಎಂಬ ಭೃಗುವಚನವು ಇವೆರಡರ ಮಧ್ಯದಲ್ಲಿದೆ. ಭೃಗುಋಷಿಗಳ ಪೂರ್ಣವಾದ ವಚನವು ಹೀಗಿದೆ :

ಯನ್ಮಾಯಯಾ ಗಹನಯೋಪಹತಾತ್ಮಬೋಧಾಃ
ಬ್ರಹ್ಮಾದಯಸ್ತನುಭೃತಃ ತಮಸಿ ಸ್ವಪಂತಃ ।
ನಾತ್ಮಶ್ರಿತಂ ತವ ವಿದಂತಿ ಅಧುನಾಪಿ ತತ್ವಂ
ಸೋಽಯಂ ಪ್ರಸೀದತು ಭವಾನ್ ಪ್ರಣತಾತ್ಮ ಬಂಧುಃ ॥ ಎಂಬುದಾಗಿ ಇದೆ.

ಈ ಶ್ಲೋಕದ ಅರ್ಥವು ಹೀಗಿದೆ. ಶರೀರವನ್ನು ಧರಿಸಿದ ಬ್ರಹ್ಮಾದಿಗಳು ಯಾವ ಪರಮಾತ್ಮನ ಅಗಾಧವಾದ ಸಾಮರ್ಥ್ಯದಿಂದ ಆತ್ಮಬೋಧವನ್ನು ಕಳೆದುಕೊಂಡು, ಅಜ್ಞಾನದಲ್ಲಿ ಇದ್ದವರಾಗಿ ತಮ್ಮಲ್ಲಿಯೇ ಇರುವ ಶ್ರೇಷ್ಠವಾದ ಭಗವತ್ತತ್ತ್ವವನ್ನು ಈಗಲೂ ತಿಳಿದಿಲ್ಲವೋ ಅಂತಹ ಪ್ರಣತ ಜೀವರಿಗೆ ಬಂಧುವಾದ ನೀನು (ವಿಷ್ಣುವು) ನಮಗೆ ಅನುಗ್ರಹವನ್ನು ಮಾಡಬೇಕು ಎಂದು. ಇಲ್ಲಿ ಬ್ರಹ್ಮಾದಿಗಳ ಹೃದಯದಲ್ಲಿ ದೇವರು ಆಶ್ರಿತನೆಂದು, ಬ್ರಹ್ಮಾದಿಗಳು ಆಧಾರವೆಂದು, ಬ್ರಹ್ಮಾದಿಗಳಿಗೆ ಅವನು ಅಜ್ಞಾನ-ಪ್ರದನೆಂದು, ಬ್ರಹ್ಮಾದಿಗಳು ಅವನ ಸಾಮರ್ಥ್ಯದ ಅಧೀನರೆಂದು, ಅವನು ಪ್ರಣತರಾದ ಬ್ರಹ್ಮಾದಿಗಳನ್ನು ಸಲಹುವವನೆಂದು ಹೇಳಿ, ಅನೇಕ ರೀತಿಯಲ್ಲಿ ಭೇದವನ್ನು ಉಪಪಾದನೆ ಮಾಡಿದೆ. ಆದ್ದರಿಂದ ಈ ಮಧ್ಯದಲ್ಲಿರುವ ಈ ಭೃಗುವಚನವು ಹೇಗೆ ಭೇದವನ್ನು ನಿಷೇಧ ಮಾಡಿ, ಬ್ರಹ್ಮ-ವಿಷ್ಣು-ಮಹೇಶ್ವರಿಗೆ ಐಕ್ಯವನ್ನು ಹೇಳಲು ಸಾಧ್ಯ ಎಂದು ಅಭಿಪ್ರಾಯ.

ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಂ ।
ಇತ್ಯಂತಿಮಂ ವಚಸ್ತಚ್ಚ ಕಥಂ ಹಂತ್ಯಾದಿಮಧ್ಯಮೌ ॥ ೩೧೬ ॥

**ಅರ್ಥ–** ಇತಿ= ಒಂದೇ ಅಭಿಪ್ರಾಯವುಳ್ಳ ನಮ್ಮಲ್ಲಿ ಯಾರು ಭೇದವನ್ನು ತಿಳಿಯುವುದಿಲ್ಲವೋ ಎಂಬ, ತಚ್ಚ ಅಂತಿಮವಚಃ= ಆ ಅಂತಿಮವಾದ ವಚನವೂ ಸಹ, ಕಥಂ= ಹೇಗೆ, ಆದಿಮಧ್ಯಮೌ= ಆದಿಯಲ್ಲಿರುವ ಮತ್ತು ಮಧ್ಯದಲ್ಲಿರುವ ವಾಕ್ಯಗಳನ್ನು, ಹಂತಿ= ಕೊಲ್ಲುತ್ತದೆ.

**ಅನುವಾದ–** ಈ ಪ್ರಕರಣದ ಕೊನೆಯಲ್ಲಿ ಇರುವ ತ್ರಯಾಣಾಂ ಏಕಭಾವಾನಾಂ ಯೋನ ಪಶ್ಯತಿ ವೈಭಿದಾಂ ಎಂಬ ವಚನವು ಮೊದಲಿನಲ್ಲಿರುವ ತಮುಪಾಗತಮಾಲಕ್ಷ್ಯ ಎಂಬ ವಚನವನ್ನು, ಮಧ್ಯದಲ್ಲಿರುವ ಯನ್ಮಾಯಾ-ಗಹನಯಾ ಎಂಬ ವಚನವನ್ನು ಹೇಗೆ ಕೊಲ್ಲುತ್ತದೆ (ಹೇಗೆ ಬಾಧಿಸುತ್ತದೆ).

**ಭಾವವಿಲಾಸಿನೀ–** ತತ್ ಅಂತಿಮವಾಕ್ಯಂ ಆದಿಮಧ್ಯಮೌ ಪ್ರಾಗುಕ್ತಶ್ಲೋಕತ್ರಯಂ ಭೃಗುವಾಕ್ಯಂ ಚ । ಭವನ್ಮತೇ ಉಪಕ್ರಮಸ್ಯ ಜ್ಯಾಯಸ್ತ್ವಾದುಭಯೋರಪಿ ಮತೇ ಬಹುತ್ವೇನಾದಿಮಧ್ಯವಚನಾ-ನಾಮೇವ ಪ್ರಬಲತ್ವಾದಿತಿ ಭಾವಃ ॥ ೩೧೬ ॥

**ವಿವರಣೆ–** ಪ್ರಾಬಲ್ಯವು, ಸ್ವಭಾವ ಪ್ರಯುಕ್ತವಾಗಿ ಮತ್ತು ಬಹುತ್ವ ಪ್ರಯುಕ್ತವಾಗಿ ಎಂದು ಎರಡು ರೀತಿ. ಅದ್ವೈತಿಗಳಂತೂ ಉಪಕ್ರಮಕ್ಕೆ ಸ್ವಭಾವಪ್ರಯುಕ್ತವಾದ ಪ್ರಾಬಲ್ಯವನ್ನು ಹೇಳುತ್ತಾರೆ. ಉಪಕ್ರಮ ಮತ್ತು ಮಧ್ಯಗಳು ಭೇದವನ್ನು ಹೇಳುತ್ತಿರುವುದರಿಂದ, ಭೇದವನ್ನೇ ಹೇಳುವ ಪ್ರಮಾಣದಲ್ಲಿ ಬಹುತ್ವವಿದೆ. ಅಂತಿಮವಾದ ತ್ರಯಾಣಾಂ ಎಂಬ ವಾಕ್ಯವು ಅಭೇದವನ್ನು ಹೇಳಿದರೆ ಅದು ಸ್ವಭಾವದಿಂದ ಪ್ರಬಲವಾದ ಉಪಕ್ರಮವನ್ನು, ಮತ್ತು ಸಂಖ್ಯೆಯಿಂದ ಪ್ರಬಲವಾದ ಉಪಕ್ರಮ ಮತ್ತು ಮಧ್ಯಗಳನ್ನು ಬಾಧಿಸಬೇಕು. ಶಾಸ್ತ್ರಮರ್ಯಾದೆಯನ್ನು ತಿಳಿದವರು ಇದನ್ನು ಎಂದೂ ಅಂಗೀಕರಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಂ ।**
**ಆದಿಮಧ್ಯಾಂತಪದ್ಯಾನಾಂ ಸ ಶಾಂತಿಮಧಿಗಚ್ಛತಿ ॥ ೩೧೭ ॥**

**ಅರ್ಥ-** ಆದಿಮಧ್ಯಾಂತಪದ್ಯಾನಾಂ= ಆದಿಯಲ್ಲಿ, ಮಧ್ಯದಲ್ಲಿ ಮತ್ತು ಕೊನೆಯಲ್ಲಿ ಇರುವ ಪದ್ಯಗಳಾದ, ಏಕಭಾವಾನಾಂ= ಒಂದೇ ಅಭಿಪ್ರಾಯವುಳ್ಳ, ತ್ರಯಾಣಾಂ= ಈ ಮೂರಕ್ಕೆ, ಯಃ= ಯಾರು, ಭಿದಾಂ= ಭೇದವನ್ನು (ವಿರೋಧವನ್ನು), ನವೈ ಪಶ್ಯತಿ= ನೋಡುವುದೇ ಇಲ್ಲವೋ, ಸಃ= ಅವನು, ಶಾಂತಿಮ್= ಶಾಂತಿಯನ್ನು (ಮೋಕ್ಷವನ್ನು ಕಲಹಶಾಂತಿಯನ್ನು), ಅಧಿಗಚ್ಛತಿ= ಹೊಂದುತ್ತಾನೆ.

**ಅನುವಾದ–** ಆದಿ, ಮಧ್ಯ ಮತ್ತು ಅಂತ್ಯದಲ್ಲಿರುವ ಈ ಹಿಂದೆ ಹೇಳಿದ ಒಂದೇ ಭಾವವುಳ್ಳ ಮೂರು ಶ್ಲೋಕಗಳಲ್ಲಿ ಯಾರು ಭೇದವನ್ನು (ವಿರೋಧವನ್ನು) ತಿಳಿಯುವುದಿಲ್ಲವೋ ಅವನು ಮೋಕ್ಷವನ್ನು (ಕಲಹ ಶಾಂತಿಯನ್ನು) ಹೊಂದುತ್ತಾನೆ.

**ಭಾವವಿಲಾಸಿನೀ–** ಅಧುನಾ ತ್ರಯಾಣಾಮಿತಿ ಪದ್ಯಸ್ಯ ಪಾದಮಾತ್ರಸ್ಯ ವ್ಯತ್ಯಾಸೇ ಕೃತೇ ತದೇವ ಪರಸ್ಯೋತ್ತರಂ ಭವತೀತ್ಯಾಹ – **ತ್ರಯಾಣಾಮಿತಿ** ॥ ಏಕಭಾವಾನಾಮೇಕ ಪ್ರಕಾರಕಾಭಿಪ್ರಾಯಾಣಾಂ ತ್ರಯಾಣಾಮಾದಿ ಮಧ್ಯಾಂತಪದ್ಯಾನಾಂ ತಮುಪಾಗತಮಾಲಕ್ಷ್ಯ ಯನ್ಮಾಯಯಾ ಗಹನಯಾ ತ್ರಯಾಣಾಮೇಕಭಾವಾನಾಮಿತಿ ಪದ್ಯಾನಾಮಿತ್ಯರ್ಥಃ । ಯಃ ಪುರುಷಃ ಭಿದಾಂ ವಾಕ್ಯಭೇದಂ ನ ಪಶ್ಯತಿ । ವಾಕ್ಯಭೇದೋ ಯಥಾಭವತಿ ತಥಾ ತದರ್ಥಂ ನ ಪಶ್ಯತೀತಿ ಯಾವತ್ । ಏಕಸ್ಮಿನ್ನಧ್ಯಾಯೇ ಏಕೇನರ್ಷಿಣಾ ಪ್ರೋಚ್ಯಮಾನಪದ್ಯಾನಾಮೇಕವಾಕ್ಯತೈವ ಕರ್ತವ್ಯಾ । ವಾಕ್ಯಭೇದಸ್ತು ಸರ್ವಥಾ ನ ಕರ್ತವ್ಯಃ । ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮಿತಿ ಯಸ್ಯ ವಿವೇಕೋಸ್ತೀತಿ ಭಾವಃ । ಸಪುರುಷಃ ಶಾಂತಿಂ ಕಲಹಶಾಂತಿಮಧಿಗಚ್ಛತಿ । ಪೂರ್ವೋತ್ತರಾವಿರುದ್ಧಾರ್ಥಸ್ಯೈವ ವಿವೇಕಿನಾ ವಕ್ತವ್ಯತ್ವಾತ್ । ಸ್ವರೂಪಭೇದಾಭಾವಸ್ಯ ಚೋಕ್ತರೀತ್ಯಾ ಪೂರ್ವವಿರುದ್ಧತ್ವಾದ್ಭಿದಾ ಶಬ್ದಸ್ಯ ಪೂರ್ವೋತ್ತರವಿರುದ್ಧ ಬುದ್ಧಿಭೇದಾದ್ಯರ್ಥ-

ಕತ್ವಮೇವ ವಕ್ತವ್ಯಮಿತ್ಯನುಸಂಧಾಯ ಭೇದವಾದಿಭಿಃಸಹಕಲಹಂ ಮುಂಚತೀತಿ ಭಾವಃ। ವೈಶಬ್ದೇನ ವಾಕ್ಯಭೇದಸ್ಯ ದೋಷತಾ ಪ್ರಸಿದ್ಧೇತಿ ಸೂಚಯತಿ। ಅಥವಾ ಆದಿಮಧ್ಯಾಂತ-ಪದ್ಯಾನಾಮಿತ್ಯನೇನ ಸರ್ವಸ್ಮಿನ್ನಾದೌ ಮಧ್ಯೇಽವಸಾನೇಚ ಭೂತಃ ವಿದ್ಯಮಾನಃ ಆತ್ಮಾಸ್ವರೂಪಂ ಯೇಷಾಂ ಪದ್ಯಾನಾಂ ತಾನೀತಿ ಸರ್ವಭೂತಾತ್ಮನಾಮಿತಿ ಪದಸ್ಯೈವಾರ್ಥಃ ಸೂಚಿತಃ। ಅತೋ ನೇಕಸ್ಯಾಪಿ ಪಾದಸ್ಯ ವ್ಯತ್ಯಾಸಃ। ತಚ್ಛಂಕಿತಶ್ಲೋಕೇನೈವ ತಸ್ಯೋತ್ತರದಾನಮಿತಿ ಭಾವಃ। ಏವಂಚ ಪರಬಾಣೈನೈವ ಪರಸ್ಯ ಘಾತಕರಣಾತ್ ಅತಿ ಚಮತ್ಕಾರೋಽಯಮಿತಿ ಜ್ಞಾತವ್ಯಮ್ ॥೩೧೭॥

**ವಿವರಣೆ–** ತ್ರಯಾಣಾಂ ಏಕಭಾವಾನಾಂ ಎಂಬ ಪದ್ಯದ ಮೂರನೆಯ ಪಾದವನ್ನು ಮಾತ್ರ ವ್ಯತ್ಯಾಸ ಮಾಡಿ, ಚಮತ್ಕಾರ ರೀತಿಯಿಂದ ಇಲ್ಲಿ ಅದ್ವೈತಿಗಳಿಗೆ ಉತ್ತರವನ್ನು ಹೇಳುತ್ತಾರೆ. ಈಗ ತ್ರಯಾಣಾಂ ಎಂದರೆ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಎಂದು ಅರ್ಥವಲ್ಲ. ಆದಿ, ಮಧ್ಯ ಮತ್ತು ಅಂತ್ಯದಲ್ಲಿರುವ ಪದ್ಯಗಳಲ್ಲಿ ಎಂದು ಅರ್ಥ. ಶುಕಾಚಾರ್ಯರ ಮಾತುಗಳಲ್ಲಿ ಏಕವಾಕ್ಯತ್ವ ಇರಬೇಕಾಗಿರುವುದರಿಂದ ಆದಿ ಮತ್ತು ಮಧ್ಯದಲ್ಲಿ ಭೇದವನ್ನು ಹೇಳುವ ವಾಕ್ಯಗಳು ಇರುವುದರಿಂದ, ಅಂತಿಮ ವಾಕ್ಯವು ಭೇದವನ್ನೇ ಹೇಳಬೇಕೆಂದು ನಿರ್ಣಯಿಸಿ, ಯಾರು ಈ ಮೂರು ವಚನಗಳಿಗೂ ವಿರೋಧವನ್ನು ತಿಳಿಯುವುದಿಲ್ಲವೋ ಅಂಥವನು ಶುಕಾಚಾರ್ಯರ ಅನುಗ್ರಹಕ್ಕೆ ಪಾತ್ರನಾಗಿ ಮೋಕ್ಷವನ್ನು ಪಡೆಯುತ್ತಾನೆ ಮತ್ತು ಭೇದವನ್ನು ಅಂಗೀಕಾರ ಮಾಡುವುದರಿಂದ, ಭೇದವಾದಿಗಳ ಜೊತೆಯಲ್ಲಿ ಇದ್ದ ಕಲಹವನ್ನು ಪರಿಹರಿಸಿಕೊಳ್ಳುತ್ತಾನೆ ಎಂದು ಅಭಿಪ್ರಾಯ. ಭಾಗವತ ಶ್ಲೋಕದಲ್ಲಿ ಸರ್ವಭೂತಾತ್ಮನಾಂ ಬ್ರಹ್ಮನ್ ಎಂಬ ಇರುವ ಮೂರನೇ ಪಾದವನ್ನು ತೆಗೆದು ಅದರ ಬದಲಾಗಿ ಆದಿಮಧ್ಯಾಂತಪದ್ಯಾನಾಂ ಎಂಬ ಪಾದವನ್ನು ಸೇರಿಸಿ ಈ ಚಮತ್ಕಾರಪೂರ್ಣವಾದ ಅರ್ಥವನ್ನು ಹೇಳಿದ್ದಾರೆ ಅಥವಾ ಸುರೋತ್ತಮ ತೀರ್ಥರು ಹೇಳುವಂತೆ ಭಾಗವತದ ಮೂರನೆಯ ಪಾದವನ್ನು ತೆಗೆದೇ ಇಲ್ಲ. ಅದನ್ನೇ ಅರ್ಥತಃ ಅನುವಾದ ಮಾಡಿದ್ದಾರೆ ಹೇಗೆಂದರೆ ಅಲ್ಲಿ ಸರ್ವಭೂತಾತ್ಮನಾಂ ಎಂದು ಇದೆ. ಸರ್ವ ಅಂದರೆ ಎಲ್ಲ ಅಧ್ಯಾಯದ ಎಲ್ಲಾ ಕಡೆಗಳಲ್ಲಿಯೂ, ಎಂದರೆ ಆದಿ, ಮಧ್ಯ ಮತ್ತು ಅವಸಾನಗಳಲ್ಲಿ, ಭೂತಃ ಎಂದರೆ ಇತರಕ್ಕಿಂತಹ, ಆತ್ಮ= ಸ್ವರೂಪವುಳ್ಳವುಗಳು, ಎಂದು ಸಮಾಸವನ್ನು ಮಾಡಿ, ಸರ್ವಭೂತಾತ್ಮನಾಂ ಎಂಬ ಶಬ್ದಕ್ಕೆ ಈ ಅಧ್ಯಾಯದಲ್ಲಿ ಆದಿ, ಮಧ್ಯಾಂತದಲ್ಲಿರುವ ಶ್ಲೋಕಗಳೆಂದೇ ಅರ್ಥ. ಆದ್ದರಿಂದ ಈ ಶ್ಲೋಕಗಳಲ್ಲಿ ಯಾರು ವಾಕ್ಯಭೇದವನ್ನು ಆಶಯಿಸದೇ ಏಕವಾಕ್ಯತ್ವವನ್ನು ಅನುಸಂಧಾನ ಮಾಡಿ ಅರ್ಥವನ್ನು ತಿಳಿಯುತ್ತಾರೆಯೋ ಅವರು ಶುಕಾಚಾರ್ಯರ ಮತ್ತು ಭಾಗವತ ಪ್ರತಿಪಾದ್ಯನಾದ ಕೃಷ್ಣನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ ಎಂದೂ ಅಭಿಪ್ರಾಯ.

**ಯದಿ ಸ್ವರೂಪಭೇದಸ್ಯ ನಿಂದ್ಯೈವೇಯಂ ಭವೇತ್ ತದಾ ।**
**ವ್ಯರ್ಥೋಚ್ಛಿಷ್ಟಾಹುತೇರಾಜ್ಞಾ ಸರ್ವಾ ಶರ್ವಾಹುತಿರ್ಯತಃ ।**
**ನಿರ್ಮೂಲ ಏವ ಕಲಹೋ ನಿರ್ಮೂಲಾ ಶಾಂತಿರಪ್ಯಭೂತ್ ॥ ೩೧೮ ॥**

**ಅರ್ಥ-** ಯದಿ= ಒಂದು ಪಕ್ಷ, ಇಯಂ ನಿಂದಾ= ತ್ರಯಾಣಾಂ ಎಂಬ ಶ್ಲೋಕದಲ್ಲಿ ಹೇಳಿದ ಈ ನಿಂದೆಯು, ಸ್ವರೂಪಭೇದಸ್ಯ ಭವೇತ್= ಸ್ವರೂಪ ಭೇದದ ವಿಷಯದಲ್ಲಿಯೇ ಇದ್ದರೆ, ತದಾ= ಆಗ, ಉಚ್ಛಿಷ್ಟಾಹುತೇಃ= ರುದ್ರನಿಗೆ ಉಚ್ಛಿಷ್ಟಾಹುತಿಯ, ಆಜ್ಞಾ= ಆಜ್ಞೆಯು, ವ್ಯರ್ಥ= ವ್ಯರ್ಥವಾಗುತ್ತದೆ, ಯತಃ= ಏಕೆಂದರೆ, ಸರ್ವಾ= ಎಲ್ಲ ಆಹುತಿಗಳು, ಶರ್ವಾಹುತಿಃ= ರುದ್ರನ ಆಹುತಿಯೇ ಆಗುತ್ತದೆಯಷ್ಟೇ, ಕಲಹಃ= ವಿವಾದವು, ನಿರ್ಮೂಲ ಏವ= ನಿರ್ಮೂಲವಾದದ್ದೇ, ಶಾಂತಿರಪಿ= ಸಮಾಧಾನವೂ ಸಹ, ನಿರ್ಮೂಲಾ ಅಭೂತ್= ನಿರ್ಮೂಲವಾದದ್ದೇ ಆಯಿತು.

**ಅನುವಾದ–** ತ್ರಯಾಣಾಂ ಏಕಭಾವಾನಾಂ ಎಂಬ ಶ್ಲೋಕದಲ್ಲಿ ಹೇಳುವ ನಿಂದೆಯು ಸ್ವರೂಪಭೇದದ ನಿಂದೆಯೆಂದೇ ಸ್ವೀಕರಿಸಿದರೆ ಆಗ ರುದ್ರದೇವರಿಗೆ ಯಜ್ಞದಲ್ಲಿ ಉಚ್ಛಿಷ್ಟಾಹುತಿಯು ಸಲ್ಲಬೇಕೆಂಬ ಭಗವದಾಜ್ಞೆಯು ವ್ಯರ್ಥವಾಗುತ್ತದೆ. ಏಕೆಂದರೆ ಎಲ್ಲಾ ಆಹುತಿಗಳೂ ರುದ್ರಾಹುತಿಗಳೇ ಆಗುತ್ತವೆ. ಆದ್ದರಿಂದ ವಿವಾದವೂ ನಿರ್ಮೂಲವಾಯಿತು ಮತ್ತು ಸಮಾಧಾನವೂ ನಿರ್ಮೂಲವಾಯಿತು.

**ಭಾವವಿಲಾಸಿನೀ–** ಪ್ರಾಕ್ ಸ್ವರೂಪಭೇದನಿಷೇಧೇ ಪೂರ್ವವಿರೋಧ ಉಕ್ತಃ। ಇದಾನೀಮುತ್ತರವಿರೋಧಂ ಚಾಹ – **ಯದೀತಿ** ॥ ಉಚ್ಚಿಷ್ಟಾಹುತೇರ್ಯಜ್ಞಾವಸಾನೇ ಯಜ್ಞೋಚ್ಛಿಷ್ಟದ್ರವ್ಯೇಣ ಕ್ರಿಯಮಾಣರುದ್ರಾಹುತೇರಾಜ್ಞಾ ದೇವಋಷ್ಯಾದೀನಾಮತಿದೇಶಃ ವ್ಯರ್ಥಾ । ತತ್ರ ಹೇತುಃ । ಯತಃ ಕಾರಣಾತ್ ಬ್ರಹ್ಮವಿಷ್ಣುರುದ್ರಾಣಾಂ ಸ್ವರೂಪೈಕ್ಯೇ ಸತಿ ಸರ್ವಾ ವಿಷ್ಣುಬ್ರಹ್ಮಾದೀನುದ್ದಿಶ್ಯ ಕ್ರಿಯಮಾಣಾಪ್ಯಾಹುತಿಃಶರ್ವಸ್ಯ ಮಹಾದೇವಸ್ಯಾಹುತಿರೇವ । ಅತ ಇತಿ ಪೂರ್ವೇಣಾನ್ವಯಃ । ತ್ರಯಾಣಾಮೇಷಾಮೈಕ್ಯೇ ಕಲಹೋಪಿ ನಿರ್ಮೂಲಃ । ವಿಷ್ಣೌ ಕ್ರಿಯಮಾಣಭಕ್ತೇರೇವ ಸ್ವಭಕ್ತಿತ್ವಾದ್ರುದ್ರಸ್ಯ ಕೋಪಕಾರಣಂ ಕಿಮಪಿನಾಸ್ತೀತಿ ಭಾವಃ । ಶಾಂತಿರಪಿ ನಿರ್ಮೂಲಾ। ಮದಾಹುತಿರೇವ ತ್ವದಾಹುತಿರಿತಿ ವಿಷ್ಣುನಾ ವಕ್ತವ್ಯಮ್। ಉಚ್ಛಿಷ್ಟಾಹುತಿದಾನಾಖ್ಯ ಶಾಂತಿರಪಿ ನಿರ್ಮೂಲೇತಿ ಭಾವಃ ॥ ೩೧೮ ॥

**ವಿವರಣೆ–** ತ್ರಯಾಣಾಂ ಎಂಬ ಶ್ಲೋಕದಲ್ಲಿ ಸ್ವರೂಪ ಭೇದವನ್ನು ನಿಷೇಧ ಮಾಡಿದರೆ ಇದಕ್ಕಿಂತ ಮೊದಲು ಪೂರ್ವ ವಿರೋಧವನ್ನು ಹೇಳಿದರು. ಈ ಶ್ಲೋಕದಲ್ಲಿ ಉತ್ತರ ಗ್ರಂಥದ ವಿರೋಧವನ್ನು ಹೇಳುತ್ತಿದ್ದಾರೆ. ಈ ಪ್ರಕರಣದ ನಂತರ ರುದ್ರದೇವರಿಗೆ ಉಚ್ಛಿಷ್ಟಾಹುತಿಯನ್ನು ದೇವರು ಆಜ್ಞೆ ಮಾಡುತ್ತಾರೆ. ಬ್ರಹ್ಮ-ವಿಷ್ಣು-ಮಹೇಶ್ವರರು ಅಭಿನ್ನರಾದರೆ ಬ್ರಹ್ಮನಿಗೆ ಕೊಟ್ಟ ಆಹುತಿಯೂ, ವಿಷ್ಣುವಿಗೆ ಕೊಟ್ಟ ಆಹುತಿಯೂ ಎಲ್ಲವೂ

ರುದ್ರಾಹುತಿಯೇ ಆಗುವುದರಿಂದ, ರುದ್ರನಿಗೆ ಉಚ್ಛಿಷ್ಟಾಹುತಿ ಎಂಬ ಶಬ್ದಕ್ಕೆ ಅರ್ಥವಿಲ್ಲದಂತಾಗುತ್ತದೆ. ಆದ್ದರಿಂದ ರುದ್ರನಿಗೆ ಯಜ್ಞಭಾಗವನ್ನು ಕೊಡದೇ ಇದ್ದುದ್ದರಿಂದ ಉಂಟಾದ ಕಲಹವೂ, ರುದ್ರನಿಗೆ ಉಚ್ಛಿಷ್ಟಭಾಗವನ್ನು ಕೊಟ್ಟಿದುದರಿಂದ ಉಂಟಾದ ಕಲಹ ಶಾಂತಿಯೂ ಎರಡೂ ಅಸಂಗತವಾಗುತ್ತದೆ. ಆದ್ದರಿಂದ ತ್ರಯಾಣಾಂ ಎಂಬ ಶ್ಲೋಕವು ಸ್ವರೂಪಭೇದವನ್ನು ನಿಷೇಧ ಮಾಡುವುದಿಲ್ಲ ಎಂದು ಅಭಿಪ್ರಾಯ.

**ಪಾರಮಾರ್ಥ್ಯೇನ ಭೇದೋಽಯಂ ಯದಿ ನೇತಿ ಮತಂ ತವ ।**
**ಅಪಾರಮಾರ್ಥ್ಯೇನ ತದಾ ನೇತ್ಯಾರ್ಯಸ್ಯ ಮತಂ ಭವೇತ್ ।**
**ಅತಃ ಸುಸ್ಥಿತ ಏವಾಯಂ ಭೇದೋಭೂತ್ ಪದಕಲ್ಪನೇ ॥ ೩೧೯ ॥**

**ಅರ್ಥ-** ಅಯಂ ಭೇದಃ= ಈ ಭೇದವು, ಪಾರಮಾರ್ಥ್ಯೇನ ನೇತಿ= ಪಾರಮಾರ್ಥಿಕವಾಗಿ ಇಲ್ಲವೆಂದು, ಯದಿ= ಒಂದು ಪಕ್ಷ, ತವ= ನಿನ್ನ, ಮತಂ= ಅಭಿಪ್ರಾಯವಾದರೆ, ತದಾ= ಆಗ, ಅಪಾರಮಾರ್ಥ್ಯೇನ= ಅಪಾರಮಾರ್ಥಿಕವಾಗಿ, ನ ಇತಿ= ಇಲ್ಲವೆಂದು, ಆರ್ಯಸ್ಯ= ಆರ್ಯರಾದ ಮಧ್ವಾಚಾರ್ಯರ, ಮತಂ= ಅಭಿಪ್ರಾಯವು, ಭವೇತ್= ಆಗುತ್ತದೆ, ಅತಃ= ಆದ್ದರಿಂದ, ಪದಕಲ್ಪನೇ= ಪದವನ್ನು ಅಧ್ಯಾಹಾರ ಮಾಡಿದರೆ, ಅಯಂ ಭೇದಃ= ಈ ಭೇದವು, ಸುಸ್ಥಿರ ಏವ ಅಭೂತ್= ಸುಸ್ಥಿರವೇ ಆಯಿತು.

**ಅನುವಾದ–** ಆದಿ ಮತ್ತು ಮಧ್ಯ ಶ್ಲೋಕಗಳು ಭೇದವನ್ನು ಹೇಳಿದರೂ, ಆ ಭೇದವು ಪಾರಮಾರ್ಥಿಕವಲ್ಲ ಎಂದು ಅಂತಿಮ ಶ್ಲೋಕದ ಅಭಿಪ್ರಾಯವನ್ನು ಹೇಳುವುದಾದರೆ, ಭೇದವು ಅಪಾರಮಾರ್ಥಿಕವಲ್ಲ ಎಂದು ಪೂಜ್ಯರಾದ ಮಧ್ವಾಚಾರ್ಯರ ಅಭಿಪ್ರಾಯವಾಗುತ್ತದೆ. ಆದ್ದರಿಂದ ಅಪಾರಮಾರ್ಥಿಕ ಎಂಬ ಪದವನ್ನು ಅಧ್ಯಾಹಾರ ಮಾಡಿದರೆ ಈ ಭೇದವು ಸುಸ್ಥಿರವಾಗುತ್ತದೆ.

**ಭಾವವಿಲಾಸಿನೀ–** ಶಂಕತೇ – **ಪಾರಮಾರ್ಥ್ಯೇನೇತಿ** ॥ ಉತ್ತರಮಾಹ – **ಅಪಾರಮಾರ್ಥ್ಯೇತಿ** ॥ ಆರ್ಯಸ್ಯ ತತ್ವವಾದಿನಃ । ಅತೋಽಪಾರಮಾರ್ಥ್ಯೇನೇತಿ ಪದಾಧ್ಯಾಹಾರಾತ್ । ಸುಸ್ಥಿರಃ ಅಪಾರಮಾರ್ಥ್ಯೇನ ನ ಪಶ್ಯತೀತ್ಯುಕ್ತೇ ಪಾರಮಾರ್ಥ್ಯೇನೈವ ಪಶ್ಯತೀತ್ಯರ್ಥಲಾಭಾತ್ ಅತಿ-ಸ್ಥಿರಃ । ಪದಕಲ್ಪನೇ ಅವಿದ್ಯಮಾನಪದಾಧ್ಯಾಹಾರೇ । ಸರ್ವಥಾಽಪೇಕ್ಷಿತಸ್ಯ ಪದಸ್ಯೋಪಾದಾನೇ ಅಧ್ಯಾಹಾರಃ । ಉಕ್ತರೀತ್ಯಾ ಯಥಾಸ್ಥಿತಪದೇನೈವಾರ್ಥಘಟನಾಯಾಮಪಿ ಬಲಾತ್ಕಾರೇಣ ಪದಾಂತರೋಪಾದಾನಾತ್ಕಲ್ಪನ ಇತ್ಯುಕ್ತಮ್ ॥ ೩೧೯ ॥

**ವಿವರಣೆ–** ತ್ರಯಾಣಾಂ ಎಂಬ ಶ್ಲೋಕದಲ್ಲಿ ಭೇದದ ನಿಂದೆ ಮಾತ್ರ ಇದೆ. ಭೇದ ಎಂದರೆ ಏನು ಎಂದು ವಿಚಾರ ಮಾಡಬೇಕು. ಹಿಂದಿನ ಶ್ಲೋಕಗಳಲ್ಲಿ ಸ್ವರೂಪಭೇದವೇ ಪ್ರತಿಪಾದಿತವಾಗಿರುವುದರಿಂದ, ಸ್ವರೂಪ ಭೇದವನ್ನು ನಿಷೇಧ ಮಾಡಲು ಬರುವುದಿಲ್ಲ. ಆದ್ದರಿಂದ ಸ್ವರೂಪಭೇದವನ್ನು ಒಪ್ಪಿ ಪಾರಮಾರ್ಥಿಕವಾಗಿ ಅದು ಇಲ್ಲ ಎಂದು

ಹೇಳಿದರೆ, ಪಾರಮಾರ್ಥಿಕ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಆಗ ನಾವು ಪಾರಮಾರ್ಥಿಕ ಎಂಬ ಪದವನ್ನೇ ಏಕೆ ಅಧ್ಯಾಹಾರ ಮಾಡಬೇಕು, ಅಪಾರಮಾರ್ಥಿಕ ಎಂಬ ಪದವನ್ನು ಅಧ್ಯಾಹಾರ ಮಾಡು. ಆಗ ಭೇದವು ಅಪಾರಮಾರ್ಥಿಕವಾಗಿ ಇಲ್ಲ ಎಂದರೆ ಪಾರಮಾರ್ಥಿಕವಾಗಿ ಇದೆ ಎಂದೇ ಸಿದ್ಧವಾಗುತ್ತದೆ. ಇದು ಮಧ್ವಾಚಾರ್ಯರ ಮತ. ಹೀಗೆ ಅಧ್ಯಾಹಾರ ಮಾಡಿದರೆ ಆದಿ ಮತ್ತು ಮಧ್ಯವಾಕ್ಯವನ್ನು ರಕ್ಷಣೆ ಮಾಡಿದಂತಾಗುತ್ತದೆ. ಯದ್ಯಪಿ, ಯಾವ ಪದವನ್ನೂ ಅಧ್ಯಾಹಾರ ಮಾಡದೇ ಇರುವ ಶ್ಲೋಕದಲ್ಲಿಯೇ ಭೇದಶಬ್ದಕ್ಕೆ ಮುಖ್ಯವೃತ್ತಿಯಿಂದ ವಿರೋಧ ಎಂದು ಅರ್ಥವನ್ನು ಮಾಡಿ ಎಲ್ಲಾ ಆಕ್ಷೇಪಗಳನ್ನೂ ಪರಿಹರಿಸಿದ್ದಾಗಿದೆ. ಆದರೂ ಬಲಾತ್ಕಾರವಾಗಿ ನೀನು ಪಾರಮಾರ್ಥಿಕವಾಗಿ ಎಂಬ ಶಬ್ದವನ್ನು ಅಧ್ಯಾಹಾರ ಮಾಡುವುದಾದರೆ, ನಾವೂ ಸಹ ಅಪಾರಮಾರ್ಥಿಕವಾಗಿ ಎಂದು ಏಕೆ ಅಧ್ಯಾಹಾರ ಮಾಡಬಾರದು ಎಂದು ಅಭಿಪ್ರಾಯ.

**ಕಥಮಾರ್ಯೋ ನ ಚರಮೋ ವಾಕ್ಯಪ್ರಾಮಾಣ್ಯರಕ್ಷಣಾತ್ ।**
**ಅನಾರ್ಯಶ್ಚ ಕಥಂ ನಾದ್ಯೋ ವಾಕ್ಯಪ್ರಾಮಾಣ್ಯಶಿಕ್ಷಣಾತ್ ॥ ೩೨೦ ॥**

**ಅರ್ಥ-** ಚರಮಃ= ಅಪಾರಮಾರ್ಥಿಕವಾಗಿ ಎಂದು ಅಧ್ಯಾಹಾರ ಮಾಡುವ ಆಚಾರ್ಯರು, ವಾಕ್ಯಪ್ರಾಮಾಣ್ಯರಕ್ಷಣಾತ್= ಎಲ್ಲ ವಾಕ್ಯಗಳ ಪ್ರಾಮಾಣ್ಯವನ್ನು ರಕ್ಷಿಸುವುದರಿಂದ, ಆರ್ಯಃ= ಆರ್ಯರಾಗಿ, ಕಥಂ ನ= ಹೇಗೆ ಆಗುವುದಿಲ್ಲ, ಆದ್ಯಃ= ಪೂರ್ವಪಕ್ಷಿಯಾದ ಮಾಯಾವಾದಿಯು, ವಾಕ್ಯಪ್ರಾಮಾಣ್ಯಶಿಕ್ಷಣಾತ್= ಮೊದಲಿನ ವಾಕ್ಯದ ಪ್ರಾಮಾಣ್ಯವನ್ನು ಭಂಗಪಡಿಸುವುದರಿಂದ, ಕಥಂ= ಹೇಗೆ, ಅನಾರ್ಯಃ ನ= ಅನಾರ್ಯನಾಗುವುದಿಲ್ಲ.

**ಅನುವಾದ–** ತತ್ತ್ವವಾದಿಗಳಾದ ಆಚಾರ್ಯರು ಎಲ್ಲ ವಾಕ್ಯಗಳ ಪ್ರಾಮಾಣ್ಯವನ್ನು ರಕ್ಷಣೆ ಮಾಡುವುದರಿಂದ ಹೇಗೆ ಆರ್ಯರಾಗುವುದಿಲ್ಲ? ಮಾಯಾವಾದಿಯು ಹಿಂದಿನ ಮತ್ತು ಮಧ್ಯದ ವಾಕ್ಯಗಳ ಪ್ರಾಮಾಣ್ಯವನ್ನು ಭಂಗಗೊಳಿಸುವುದರಿಂದ ಹೇಗೆ ಅನಾರ್ಯನಾಗುವುದಿಲ್ಲ?

**ಭಾವವಿಲಾಸಿನೀ–** ಚರಮಃ ತತ್ವವಾದೀ ಕಥಮಾರ್ಯೋ ನ । ವಾಕ್ಯದ್ವಯಸ್ಯಾಪಿ ಪ್ರಾಮಾಣ್ಯ-ರಕ್ಷಣಾತ್ ಆರ್ಯಃ ಶ್ರೇಷ್ಠ ಏವ । ಆದ್ಯಃ ಮಾಯಾವಾದೀ । ಭೇದಸ್ಯಾಪಾರಮಾರ್ಥಿಕತ್ವಕಥನೇ ತತ್‌ಪ್ರತಿಪಾದಕ ವಾಕ್ಯಾನಾಮಪ್ರಾಮಾಣ್ಯಾಖ್ಯಶಿಕ್ಷಾಕರಣಾದಿತ್ಯರ್ಥಃ ॥ ೩೨೦ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಆಚಾರ್ಯರನ್ನು ಆರ್ಯ ಎಂದು ಹೇಳಿದುದನ್ನು ಈ ಶ್ಲೋಕದಲ್ಲಿ ಸಮರ್ಥನೆ ಮಾಡುತ್ತಾರೆ. ವೇದ ಮತ್ತು ವೇದಾನುಸಾರಿ ಗ್ರಂಥಗಳ ಪ್ರಾಮಾಣ್ಯವನ್ನು ರಕ್ಷಣೆ ಮಾಡುವವರು ಆರ್ಯರು. ನಮ್ಮ ಆಚಾರ್ಯರು ಆ ಕಾರ್ಯವನ್ನು ಮಾಡಿದ್ದಾರೆ. ಸ್ವರೂಪ ಭೇದವನ್ನು ನಿಷೇಧ ಮಾಡಿ, ಸ್ವರೂಪ ಭೇದವನ್ನು

ಹೇಳುವ ಎಲ್ಲ ವೇದವಾಕ್ಯಗಳಿಗೂ ಮತ್ತು ಭಾಗವತವಾಕ್ಯಗಳಿಗೂ ಪ್ರಾಮಾಣ್ಯವನ್ನು ಭಂಗಮಾಡುವ ಮಾಯಾವಾದಿಯು ಎಂದೂ ಆರ್ಯನಲ್ಲ ಎಂದು ಅಭಿಪ್ರಾಯ.

**ನ ಚೇದಪಾರಮಾರ್ಥ್ಯೇನ ತತ್ತ್ವಮಸ್ಯಾದಿ ವಾಗಪಿ ।**
**ವಕ್ತ್ಯೈಕ್ಯಂ ಪಾರಮಾರ್ಥ್ಯೇನ ತ್ವಂ ತ್ವಮೇವಾಸಿ ತಚ್ಚ ತತ್ ॥ ೩೨೧ ॥**

**ಇತ್ಯಾಹೇತಿ ಭವೇಚ್ಛ್ರುತ್ಯಾ ಮಿಥ್ಯಾರ್ಥಸ್ತನ್ನ ಕಥ್ಯತೇ ।**
**ಮುಖ್ಯೇ ಬಾಧೇಪ್ಯಮುಖ್ಯಾರ್ಥಃ ಕಥ್ಯತೇ ಸಾವಕಾಶಯಾ ॥ ೩೨೨ ॥**

**ಅರ್ಥ-** ನ ಚೇತ್= ಇಲ್ಲದಿದ್ದರೆ, ತತ್ತ್ವಮಸ್ಯಾದಿ ವಾಗಪಿ= ತತ್ತ್ವಮಸಿ ಮೊದಲಾದ ವಾಕ್ಯವೂ ಕೂಡ, ಅಪಾರಮಾರ್ಥ್ಯೇನ= ಅಪಾರಮಾರ್ಥಿಕವಾಗಿಯೇ, ಐಕ್ಯಂ ವಕ್ತಿ= ಐಕ್ಯವನ್ನು ಹೇಳುತ್ತದೆ, ಪಾರಮಾರ್ಥ್ಯೇನ= ಪಾರಮಾರ್ಥಿಕವಾಗಿ, ತ್ವಂ= ನೀನು, ತ್ವಮೇವ= ನೀನೇ ಆಗಿದ್ದೀಯೆ, ತತ್ ತಚ್ಚ= ಅದೂ ಸಹ, ತದೇವ= ಅದೇ ಆಗಿದೆ ಎಂದು ಹೇಳುತ್ತದೆ, ಇತಿ ಭವೇತ್= ಎಂದು ಆಗುತ್ತದೆ, ತತ್= ಆದ್ದರಿಂದ, ಶ್ರುತ್ಯಾ= ಶ್ರುತಿಯಿಂದ, ಮಿಥ್ಯಾರ್ಥಃ= ಮಿಥ್ಯಾಭೂತವಾದ ಅರ್ಥವು, ನ ಕಥ್ಯತೇ= ಎಂದೂ ಹೇಳಲ್ಪಡುವುದಿಲ್ಲ, ಮುಖ್ಯೇ ಬಾಧೇ= ಮುಖ್ಯಾರ್ಥವು ಬಾಧಿತವಾದರೆ ಮಾತ್ರ, ಸಾವಕಾಶಯಾ= ಸ್ವಯಂ ಅರ್ಥಾಂತರವನ್ನು ಹೇಳುವ ಶ್ರುತಿಯಿಂದ, ಅಮುಖ್ಯಾರ್ಥಃ= ಅಮುಖ್ಯವಾದ ಅರ್ಥವು, ಕಥ್ಯತೇ= ಹೇಳಲ್ಪಡುತ್ತದೆ.

**ಅನುವಾದ-** ನಾವು ಹೇಳಿದ ಅರ್ಥವನ್ನು ಅಂಗೀಕಾರ ಮಾಡದೆ ಈ ವಾಕ್ಯಗಳಲ್ಲಿ ಹೇಳಲ್ಪಟ್ಟ ಭೇದವು ಅಪಾರಮಾರ್ಥಿಕವೆಂದು ನೀನು ಹೇಳುವುದಾದರೆ ತತ್ತ್ವಮಸಿ ಮೊದಲಾದ ವಾಕ್ಯಗಳೂ ಕೂಡ ಅಪಾರಮಾರ್ಥಿಕವಾದ ಐಕ್ಯವನ್ನು ಹೇಳುತ್ತವೆ. ಪಾರಮಾರ್ಥಿಕವಾಗಿ ನೀನು ನೀನೇ ಮತ್ತು ಬ್ರಹ್ಮನು ಬ್ರಹ್ಮನೇ ಎಂಬ ಅರ್ಥವನ್ನು ಹೇಳುತ್ತವೆ ಎಂದು ಅಂಗೀಕರಿಸು. ಆದ್ದರಿಂದ ಶ್ರುತಿಯು ಎಂದೂ ಮಿಥ್ಯಾಭೂತವಾದ ಅರ್ಥವನ್ನು ಹೇಳುವುದಿಲ್ಲ. ಮುಖ್ಯಾರ್ಥವು ಬಾಧಿತವಾದರೆ ಮಾತ್ರ ಸ್ವಯಂ ಅರ್ಥಾಂತರವನ್ನು ಹೇಳುವ ಶ್ರುತಿಯು ಅಮುಖ್ಯಾರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ-** ನಚೇತ್ ಮದುಕ್ತಾಧ್ಯಾಹಾರಮನಂಗೀಕೃತ್ಯಭೇದಸ್ಯ ಪಾರಮಾರ್ಥ್ಯಮೇವ ನಿಷಿಧ್ಯತೇ ಚೇತ್ । ತರ್ಹಿ ತತ್ತ್ವಮಸ್ಯಾದಿವಾಗಪ್ಯಪಾರಮಾರ್ಥ್ಯೇನೈಕ್ಯಂ ವಕ್ತಿ । ಪಾರಮಾರ್ಥ್ಯೇನ ತ್ವಂಪದಸ್ಯ ತತ್‌ಪದಸ್ಯಾವೃತ್ತಿಂ ಕೃತ್ವಾ ತ್ವಂ ತ್ವಮೇವ ತತ್ತದೇವೇತಿ ಜೀವಸ್ಯ ಬ್ರಹ್ಮಣಶ್ಚಾತ್ಯಂತ-ವೈಲಕ್ಷಣ್ಯಪ್ರತಿಪಾದನೇನ ಭೇದಮೇವ ವಕ್ತೀತಿ ತತ್ವವಾದ್ಯಪಿ ವದೇತ್ । ಇಯಾಂಸ್ತು ವಿಶೇಷಃ। ಮಾಯಾವಾದಿನಾ ತು ಭೇದಸ್ಯಾಪಾರಮಾರ್ಥಿಕತ್ವಮುಕ್ತ್ವಾ ತತ್‌ಪ್ರತಿಪಾದಕವಾಕ್ಯಸ್ಯಾ-

ತತ್ತ್ವಾವೇದಕತ್ವಮೇವೋಕ್ತಮ್ । ತತ್ವವಾದೀತು ತತ್ತ್ವಮಸೀತಿ ವಾಕ್ಯಸ್ಯೈಕ್ಯಾರ್ಥೇಽಪ್ರಾಮಾಣ್ಯ-ಮುಕ್ತ್ವಾ ತದೇವ ವಾಕ್ಯಂ ಸ್ವಾರ್ಥೇ ಪ್ರಮಾಣೀಕೃತವಾಂಶ್ಚ । ಅತಃ ಸರ್ವಥಾವಾಕ್ಯಸ್ಯಾ-ಪ್ರಾಮಾಣ್ಯಾಕಥನಾತ್ ಪೂರ್ವವದಯಮೇವ ವಿದುಷಾಮಾರ್ಯ ಇತಿ ಭಾವಃ । ಇತ್ಯಾಹೇತಿ ಭವೇತ್ ಇತ್ಯರ್ಥಮಾಹೇತಿ ಸ್ಯಾತ್ । ತತ್ತಸ್ಮಾತ್ । ಅರ್ಥಮಿಥ್ಯಾತ್ವಂ ಯಥಾ ನ ಭವತಿ ತಾದೃಶಾಧ್ಯಾಹಾರಾದೇಃ ಸಂಭವಾತ್ । ತದೇವವಿವೇಚಯತಿ ॥ ಮುಖ್ಯ ಇತಿ ॥ ೩೨೧-೩೨೨॥

**ವಿವರಣೆ–** ನಾನು ಹೇಳಿದ ಅಧ್ಯಾಹಾರವನ್ನು ಅಂಗೀಕರಿಸದೆ ನೀನು ಪಾರಮಾರ್ಥಿಕವಾಗಿ ಎಂದು ಅಧ್ಯಾಹಾರ ಮಾಡಿ ಭೇದವನ್ನು ನಿಷೇಧ ಮಾಡುವುದಾದರೆ, ನಿನಗೆ ಅಭಿಪ್ರೇತವಾದ ಐಕ್ಯವೂ ಸಹ ಅಪಾರಮಾರ್ಥಿಕವಾಗಿ ಶ್ರುತಿಯಿಂದ ಹೇಳಲ್ಪಡುತ್ತದೆ ಎಂದು ಅರ್ಥವನ್ನು ಮಾಡಬಹುದು. ಹಾಗಾಗಿ ಶ್ರುತಿಗೆ ನಿಜವಾದ ಅರ್ಥವು ಏನೆಂದು ಕೇಳಿದರೆ, ತತ್ ಮತುತ್ತ್ವಂ ಎಂಬ ಪದವನ್ನು ಆಹೃತಿ ಮಾಡಿಕೊಂಡು ತತ್ ತತ್, ತ್ವಂ ತ್ವಂ, ಬ್ರಹ್ಮನು ಬ್ರಹ್ಮನೇ, ನೀನು ನೀನೇ ಎಂದು ಪಾರಮಾರ್ಥಿಕವಾಗಿ ಭೇದವನ್ನೇ ಹೇಳುತ್ತದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಯು ಹೇಳುವ ಅರ್ಥವು ಅಪಾರಮಾರ್ಥಿಕವಲ್ಲವೆಂದು ನೀನೂ ಸಹ ಹೇಳಬೇಕು. ಇಲ್ಲದಿದ್ದರೆ ನಿನಗೂ ಈ ಆಪತ್ತಿಯೂ ಬಂದೇ ಬರುತ್ತದೆ. ಮುಖ್ಯಾರ್ಥಕ್ಕೆ ಬಾಧವಿದ್ದರೆ ಮಾತ್ರ ಶ್ರುತಿಯು ಬೇರೆ ಅರ್ಥವನ್ನು ಹೇಳುತ್ತದೆ. ಇಲ್ಲಿ ಮುಖ್ಯಾರ್ಥವಾದ ವಿರೋಧ ರೂಪವಾದ ಅರ್ಥಕ್ಕೆ ಬಾಧವಿಲ್ಲದಿರುವಾಗ ಪಾರಮಾರ್ಥಿಕವಾಗಿ ಎಂದು ಪದವನ್ನು ಅಧ್ಯಾಹಾರ ಮಾಡಿ, ಭೇದವು ಅಪಾರಮಾರ್ಥಿಕವಾಗಿದೆ ಎಂದು ಹೇಳುವ ಪ್ರಸಂಗವಿಲ್ಲ ಎಂದು ಅಭಿಪ್ರಾಯ.

**ಸೋಽನುಪ್ರವಿಷ್ಟೋ ಭಗವಾಂಶ್ಚೇಷ್ಟಾರೂಪೇಣ ತಂ ಗಣಂ ।**
**ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್॥ ೩೨೩ ॥**

**ಇತ್ಯಸಂಯುಕ್ತತಾಭೇದೋ ಗ್ರಂಥೇಽಸ್ಮಿನ್ನೇವ ಕಥ್ಯತೇ ।**
**ಅಸಂಯುಜ್ಯ ಸ್ಥಿತಿಂ ತೇಷಾಮಿಯಂ ವಾಕ್ ತನ್ನಿಷೇಧತಿ ।**
**ಸದಾ ಸಂಯುಜ್ಯ ವಸತಾಮಂಗಹೃತ್ಪದ್ಮಧಾಮಸು ॥ ೩೨೪ ॥**

**ಅರ್ಥ–** ಸಃ ಭಗವಾನ್= ಆ ಭಗವಂತನು, ಚೇಷ್ಟಾರೂಪೇಣ= ಚೇಷ್ಟಕ ರೂಪವನ್ನು ಧರಿಸಿ, ಭಿನ್ನಂ= ಪರಸ್ಪರವಾಗಿ ಅಸಂಯುಕ್ತವಾಗಿದ್ದ, ಸುಪ್ತಂ= ತಮ್ಮ ಕಾರ್ಯವನ್ನು ಮಾಡಲು ಅಸಮರ್ಥವಾದ, ತಂ ಗಣಂ= ತತ್ತ್ವ ಮತ್ತು ತತ್ತ್ವದೇವತಾ ಗಣವನ್ನು, ಅನುಪ್ರವಿಷ್ಟಃ= ಪ್ರವೇಶಿಸಿದವನಾಗಿ, ಕರ್ಮಪ್ರಬೋಧಯನ್= ಅವು ತಮಗೆ ಉಚಿತವಾದ ಕರ್ಮಗಳನ್ನು ಮಾಡುವ ರೀತಿಯಲ್ಲಿ ಉದ್ಬೋಧಿಸುತ್ತಾ, ಸಂಯೋಜಯಮಾಸ= ಅವುಗಳನ್ನು ಸೇರಿಸಿದನು, ಇತಿ= ಎಂದು, ಅಸ್ಮಿನ್ನೇವ ಗ್ರಂಥೇ= ಇದೇ ಗ್ರಂಥದಲ್ಲಿ, ಭೇದಃ=

ಭೇದವೆಂದರೆ, ಅಸಂಯುಕ್ತತಾ= ಸಂಯೋಗ ಇಲ್ಲದಿರುವಿಕೆ ಎಂದು, ಕಥ್ಯತೇ= ಹೇಳಲ್ಪಡುತ್ತದೆ, ತತ್= ಆದ್ದರಿಂದ, ಇಯಂ ವಾಕ್= ತ್ರಯಾಣಾಂ ಎಂಬ ಈ ವಚನವು, ಸದಾ= ಯಾವಾಗಲೂ, ಅಂಗಹೃತ್ಪದ್ಮಧಾಮಸು= ಅವಯವ, ಹೃದಯ ಪದ್ಮ ನಿವಾಸಗಳಲ್ಲಿ, ಸಂಯುಜ್ಯವಸತಾಂ= ಸಂಯುಕ್ತವಾಗಿಯೇ ವಾಸಿಸುವ, ತೇಷಾಂ= ಬ್ರಹ್ಮ-ವಿಷ್ಣು-ಮಹೇಶ್ವರರಿಗೆ, ಅಸಂಯುಜ್ಯಸ್ಥಿತಿಂ= ಸಂಯೋಗರಹಿತಸ್ಥಿತಿಯನ್ನು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ–** ಇದೇ ಗ್ರಂಥದಲ್ಲಿ ಆ ಭಗವಂತನು ಪರಸ್ಪರ ಸಂಯೋಗವನ್ನು ಹೊಂದದೇ ತಮಗೆ ಉಚಿತವಾದ ಕಾರ್ಯವನ್ನು ಮಾದಲು ಅಸಮರ್ಥವಾದ ತತ್ತ್ವದೇವತಾ ಗಣವನ್ನು ಚೇಷ್ಟಕತ್ವರೂಪದಿಂದ ಪ್ರವೇಶ ಮಾಡಿ, ಅವುಗಳು ತಮಗೆ ಉಚಿತವಾದ ಕರ್ಮಗಳನ್ನು ಮಾಡುವಂತೆ ಅವುಗಳನ್ನು ಸೇರಿಸಿದನು ಎಂದು ಭೇದವೆಂದರೆ ಸಂಯೋಗಾಭಾವ ಎಂದು ಹೇಳಲ್ಪಟ್ಟಿದೆ. ಆದ್ದರಿಂದ ತ್ರಯಾಣಾಂ ಏಕಭಾವಾನಾಂ ಎಂಬ ಈ ವಾಕ್ಯವು ಯಾವಾಗಲೂ ನಾಭಿ ಮೊದಲಾದ ಶರೀರ ಮತ್ತು ಹೃತ್ಪದ್ಮಧಾಮಗಳಲ್ಲಿ ಪರಸ್ಪರ ಸಂಯುಕ್ತವಾಗಿ ವಾಸಿಸುವ ಬ್ರಹ್ಮ-ವಿಷ್ಣು-ಮಹೇಶ್ವರರಿಗೆ ಸಂಯೋಗರಹಿತ ಸ್ಥಿತಿಯನ್ನು ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಭಿದಾಶಬ್ದಸ್ಯ ಭಾಗವತೋಕ್ತರೀತ್ಯೈವಾರ್ಥಾಂತರಮಾಹ – **ಸೋಽನುಪ್ರವಿಷ್ಟ ಇತಿ** ॥ ಸಃ ಭಗವಾನ್ನಾರಾಯಣಃ । ತಂ ಗಣಂ ತತ್ವದೇವತಾಗಣಮ್ । ಭಿನ್ನಂ ಅನ್ಯೋನ್ಯಾ-ಸಂಯುಕ್ತತಯಾ ಸ್ಥಿತಂ ಸಂಯೋಜಯಾಮಾಸ । ಅನ್ಯತ್ ಸ್ಪಷ್ಟಮ್ । ಇತ್ಯನೇನ ಪ್ರಕಾರೇಣ ಅಸಂಯುಕ್ತತಾ ಅನ್ಯೋನ್ಯಸಂಯೋಗರಾಹಿತ್ಯಮೇವ ಭೇದ ಇತಿ ಕಥ್ಯತೇ । ತೇಷಾಂ ಬ್ರಹ್ಮವಿಷ್ಣು-ಶಿವಾನಾಮ್ । ಯಾಽಸಂಯುಜ್ಯಸ್ಥಿತಿಃ ಮಂದದೃಷ್ಟೀನಾಂ ಪ್ರತೀಯಮಾನಾ ತಾಮ್ । ಅಂಗಂ ನಾಭ್ಯಾದ್ಯವಯವಃ । ಹೃತ್ಪದ್ಮಂ ಚ । ತಾನ್ಯೇವಧಾಮಾನಿ । ತೇಷು ಸಂಯುಜ್ಯವಸತಾಂ ತೇಷಾ-ಮಿತ್ಯನ್ವಯಃ । ಸದಾನಾರಾಯಣನಾಭೌ ಮನಃಪ್ರಸಾದೇ ವಾ ಬ್ರಹ್ಮಾಸಂಯುಜ್ಯತಿಷ್ಠತಿ । ಮನಸ್ಯಂತಃಕರಣೇ ಕ್ರೋಧೇ ವಾ ರುದ್ರಃ ಸಂಯುಜ್ಯತಿಷ್ಠತಿ । ನಿತ್ಯಂ ಧ್ಯಾಯತೋಸ್ತಯೋ-ರ್ಹೃತ್ಪದ್ಮೇ ವಿಷ್ಣುಸ್ತಿಷ್ಠತಿ । ಅತಸ್ತೇಷಾಮಸಂಯೋಗಾಖ್ಯಭೇದಂ ವಾ ಭಿದಾಂ ನ ಪಶ್ಯತೀತಿ ವಾಙ್ನಿಷೇಧತೀತಿ ಭಾವಃ ॥ ೩೨೩-೩೨೪ ॥

**ವಿವರಣೆ–** ಹಿಂದೆ ಭಿದಾ ಶಬ್ದಕ್ಕೆ ಅನೇಕ ಅರ್ಥಗಳನ್ನು ಹೇಳುವಾಗ ಅಸಂಯುಜ್ಯ ಸ್ಥಿತಿಃ ಎಂಬುದು ಒಂದು ಅರ್ಥವೆಂದು ಹೇಳಿದರು. ಆ ಅರ್ಥವನ್ನು ಭಾಗವತದ ಪ್ರಯೋಗದಿಂದಲೇ ಸಮರ್ಥನೆ ಮಾಡಿ ಆ ಅರ್ಥದ ಉಪಯೋಗವನ್ನು ಈ ಶ್ಲೋಕಗಳಲ್ಲಿ ತಿಳಿಸುತ್ತಾರೆ. ಹರಿಯ ನಾಭಿಯಲ್ಲಿ ಬ್ರಹ್ಮದೇವರಿದ್ದಾರೆ. ಹರಿಯ ಮನಸ್ಸಿನಲ್ಲಿ ರುದ್ರದೇವರಿದ್ದಾರೆ, ಹರಿಯ ಮನಃಪ್ರಸನ್ನತೆಯಲ್ಲಿಯೂ ಬ್ರಹ್ಮದೇವರಿದ್ದಾರೆ. ನಿತ್ಯವೂ ಧ್ಯಾನ ಮಾಡುವ ಬ್ರಹ್ಮ ಮತ್ತು ರುದ್ರರಲ್ಲಿ ವಿಷ್ಣುವಿದ್ದಾನೆ. ಆದ್ದರಿಂದ ವಿಷ್ಣುವಿಗೂ

ಬ್ರಹ್ಮ-ರುದ್ರರಿಗೂ ಯಾವಾಗಲೂ ಸಂಯೋಗವೇ ಇದೆ. ಸಂಯೋಗರಹಿತಸ್ಥಿತಿಯಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಬ್ರಹ್ಮ-ವಿಷ್ಣು-ಶಿವರಿಗೆ ಭೇದವಿಲ್ಲ ಎಂದರೆ ಪರಸ್ಪರ ಸಂಯೋಗರಹಿತಸ್ಥಿತಿಯಿಲ್ಲ ಎಂಬ ಅರ್ಥವು ಭಾಗವತದ ಪ್ರಯೋಗದ ಪ್ರಮಾಣದಿಂದಲೇ ಅನಾಯಾಸವಾಗಿ ಸಿದ್ಧವಾಗುತ್ತದೆ.

**ಉಕ್ತಾ ವಿರೋಧಸಿದ್ಧ್ಯರ್ಥಮರ್ಥೋಽಯಂ ಚ ನಿಗದ್ಯತೇ ॥ ೩೨೫ ॥**

**ಅರ್ಥ-** ಉಕ್ತಾ ವಿರೋಧಸಿದ್ಧ್ಯರ್ಥಂ= ಅವರಿಗೆ ವಿರೋಧವಿಲ್ಲ ಎಂಬ ಅರ್ಥದ ಸಿದ್ಧಿಗಾಗಿ, ಅಯಂ ಅರ್ಥ ಚ= ಈ ಅರ್ಥವೂ ಸಹ, ನಿಗದ್ಯತೇ= ಹೇಳಲ್ಪಡುತ್ತದೆ.

**ಅನುವಾದ- ವಿಷ್ಣುವಿಗೂ ಮತ್ತು ಬ್ರಹ್ಮರುದ್ರರಿಗೂ ವಿರೋಧವಿಲ್ಲ ಎಂದು ಹಿಂದೆ ಹೇಳಿದ ಅರ್ಥದ ಸಿದ್ಧಿಗಾಗಿ ಅವರಿಗೆ ಸಂಯೋಗರಹಿತಸ್ಥಿತಿಯಿಲ್ಲ ಎಂದು ಈ ಅರ್ಥವೂ ಹೇಳಲ್ಪಡುತ್ತದೆ.**

**ಭಾವವಿಲಾಸಿನೀ–** ಅಸ್ಯಾರ್ಥಸ್ಯ ಪೂರ್ವೋಕ್ತಾರ್ಥೇನ ಸಹ ಸಂಬಂಧಂ ಘಟಯತಿ ॥ **ಉಕ್ತಾವಿರೋಧೇತಿ ॥** ಬ್ರಹ್ಮಶಿವಯೋರ್ವಿಷ್ಣುಧ್ಯಾತೃತ್ವಾದ್ವಿಷ್ಣೋಶ್ಚ ತದಾಧಾರತ್ವೇನ ಸದಾ ಸಂಯುಕ್ತತ್ವಾದ್ವಿರೋಧಾದೇರವಕಾಶ ಏವ ನಾಸ್ತೀತಿ ಭಾವಃ ॥ ೩೨೫ ॥

**ವಿವರಣೆ–** ಸಂಯೋಗರಹಿತಸ್ಥಿತಿಯಿಲ್ಲ ಎಂದರೆ ಯಾವಾಗಲೂ ಜೊತೆಯಲ್ಲಿ ಇರುತ್ತಾರೆ ಎಂದರ್ಥ. ವಿರೋಧವಿದ್ದವರು ಯಾವಾಗಲೂ ಜೊತೆಯಲ್ಲಿ ಇರುವುದಿಲ್ಲ. ಆದ್ದರಿಂದ ಸಂಯುಜ್ಯ ಸ್ಥಿತಿಯು ವಿರೋಧಾಭಾವವನ್ನು ಉಪಪಾದನೆ ಮಾಡುತ್ತದೆ. ತ್ರಯಾಣಾಂ ಎಂಬ ಶ್ಲೋಕದಲ್ಲಿ ಭೇದಾಭಾವವು ವಿರೋಧಾಭಾವರೂಪವೆಂದು ಹೇಳಿರುವುದರಿಂದ, ಸಂಯುಜ್ಯ ಸ್ಥಿತಿಯೆಂಬ ಅರ್ಥವು ಅದಕ್ಕೆ ಉಪಪಾದಕವಾಗುತ್ತದೆ ಎಂದು ಅಭಿಪ್ರಾಯ.

**ದೇವಾನುದ್ದೀಪಯನ್ ವಿಷ್ಣುರ್ದೇವೈ ರೂಪೈಃ ಕಿಲಾವಿಶತ್ ।**
**ಅಸುರಾನಾಸುರೈರೂಪೈಃ ನಾಗಂ ನಾಗಾಕೃತಿಃ ಕಿಲ ॥ ೩೨೬ ॥**

**ಅಂತಃ ಸರ್ವತ್ರ ತದ್ರೂಪರೂಪೋ ವಿಷ್ಣುಶ್ಚ ತಿಷ್ಠತಿ ।**
**ತದ್ಬ್ರಹ್ಮಸ್ಥಬ್ರಹ್ಮರೂಪಾಚ್ಛಿವಸ್ಥ ಶಿವರೂಪತಃ ।**
**ಪೃಥಕ್ ಸ್ಥಿತಸ್ಯ ವಿಷ್ಣೋರ್ವಾಗ್ ಭೇದಮೇಷಾ ನಿಷೇಧತಿ ॥ ೩೨೭ ॥**

**ಅರ್ಥ-** ವಿಷ್ಣುಃ= ವಿಷ್ಣುವು, ದೇವಾನುದ್ದೀಪಯನ್= ದೇವತೆಗಳನ್ನು ಉದ್ದೀಪಿಸುತ್ತಾ, ದೇವೈರೂಪೈಃ= ದೇವತೆಗಳ ರೂಪದಿಂದ, ಆವಿಶತ್ ಕಿಲ= ಪ್ರವೇಶಿಸಿದನಷ್ಟೇ, ಅಸುರಾನ್= ಅಸುರರನ್ನು, ಆಸುರೈರೂಪೈಃ= ಅಸುರರ ರೂಪಗಳಿಂದ ಪ್ರವೇಶಿಸಿದನಷ್ಟೇ, ನಾಗಂ=

ಸರ್ಪವನ್ನು, ನಾಗಾಕೃತಿಃ= ಸರ್ಪರೂಪವನ್ನು ಧರಿಸಿದವನಾಗಿ, ಆವಿಶತ್ ಕಿಲ= ಪ್ರವೇಶಿಸಿದನಷ್ಟೇ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಅಂತಃ= ಆಯಾ ವಸ್ತುಗಳೊಳಗೆ, ತದ್ರೂಪರೂಪಃ= ಆ ವಸ್ತುವಿನ ರೂಪದಂತಹ ರೂಪವುಳ್ಳವನಾಗಿ, ವಿಷ್ಣುಶ್ಚ= ವಿಷ್ಣುವೂ ಸಹ, ತಿಷ್ಠತಿ= ಇದ್ದಾನೆ, ತತ್= ಆದ್ದರಿಂದ, ಏಷಾ ವಾಕ್= ತ್ರಯಾಣಾಂ ಏಕಭಾವಾನಾಂ ಎಂಬ ಈ ವಾಕ್ಯವು, ಬ್ರಹ್ಮಸ್ಥ ಬ್ರಹ್ಮರೂಪಾತ್= ಬ್ರಹ್ಮನಲ್ಲಿರುವ ಬ್ರಹ್ಮರೂಪದಿಂದಲೂ, ಶಿವಸ್ಥ ಶಿವರೂಪತಃ= ಶಿವನಲ್ಲಿರುವ ಶಿವರೂಪದಿಂದಲೂ, ಪೃಥಕ್ ಸ್ಥಿತಸ್ಯ ವಿಷ್ಣೋಃ= ಬೇರೆಯಾಗಿರುವ ವಿಷ್ಣುವಿಗೆ, ಭೇದಂ= ಭೇದವನ್ನು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ-** ವಿಷ್ಣುವು ದೇವತೆಗಳನ್ನು ದೇವರೂಪಗಳಿಂದಲೂ, ಅಸುರರನ್ನು ಅಸುರ ರೂಪಗಳಿಂದಲೂ, ವಾಸುಕಿಯನ್ನು ಸರ್ಪದ ರೂಪದಿಂದಲೂ ಪ್ರವೇಶಿಸಿದನಷ್ಟೇ? ಜಡಚೇತನಗಳಾದ ಸರ್ವಪದಾರ್ಥಗಳೊಳಗೆ ಆ ವಸ್ತುವಿನ ರೂಪದಂತಹ ರೂಪವನ್ನು ಧರಿಸಿ ಇರುತ್ತಾನೆ. ಆದ್ದರಿಂದ ತ್ರಯಾಣಾಂ ಏಕಭಾವಾನಾಂ ಎಂಬ ಈ ವಾಕ್ಯವು ಬ್ರಹ್ಮನಲ್ಲಿರುವ ಬ್ರಹ್ಮರೂಪದಿಂದಲೂ, ಶಿವನಲ್ಲಿರುವ ಶಿವರೂಪದಿಂದಲೂ ಪೃಥಕ್ ಸ್ಥಿತನಾದ ವಿಷ್ಣುವಿಗೆ ಭೇದವನ್ನು ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಭಿದಾಶಬ್ದಸ್ಯ ಸ್ವರೂಪಭೇದಪರತ್ವೇಪಿ ಭಾಗವತಪ್ರಕ್ರಿಯಯೈವ ಯೋಜನಿಕಾಪ್ರಕಾರಮಾಹ – **ದೇವಾನಿತಿ** ॥ ಅನೇನ ಪದ್ಯೇನ ತಥಾಽಸುರಾನಾವಿಶದಾಸುರೇಣ ರೂಪೇಣ ತೇಷಾಂ ಬಲವೀರ್ಯಮೀರಯನ್ । ಉದ್ದೀಪಯನ್ ದೇವಗಣಾಂಶ್ಚ ವಿಷ್ಣುರ್ದೈವೇನ ನಾಗೇಂದ್ರಮಥಾಪರೇಣ । ಇತಿ ಭಾಗವತವಾಕ್ಯಮರ್ಥತೋ ಗೃಹ್ಣಾತಿ । ಅತೋ ಭಾಗವತೇ ಪ್ರೋಕ್ತತ್ವಾತ್ । ಸರ್ವತ್ರ ದೇವಾಸುರಸರೀಸೃಪಾದಿಷು । ತದ್ರೂಪರೂಪಃ ತೇಷಾಂ ರೂಪವದ್ರೂಪಂ ಯಸ್ಯ ಸಃ । ತತ್ತಸ್ಮಾತ್ ಬ್ರಹ್ಮಣಿ ಬ್ರಹ್ಮರೂಪೇಣ ರುದ್ರೇ ರುದ್ರರೂಪೇಣ ಭಗವತೋಪ್ಯಂತರ್ಯಾಮಿತಯಾಸ್ಥಿತತ್ವಾತ್ । ಏಷಾವಾಕ್ ತ್ರಯಾಣಾಮಿತಿ ವಾಕ್ । ಭೇದಂ ಅನ್ಯೋನ್ಯಾಭಾವರೂಪಭೇದಮ್ । ಏಕಭಾವಾನಾಮೇಕಸ್ವಭಾವಾನಾಂ ತ್ರಯಾಣಾಂ ಬ್ರಹ್ಮಸ್ಥ-ವಿಷ್ಣು ರುದ್ರಸ್ಥವಿಷ್ಣು ಪೃಥಕ್‌ಸ್ಥಿತವಿಷ್ಣುರೂಪಾಣಾಂ ಭಿದಾಂ ನ ಪಶ್ಯತೀತಿ ವಾಕ್ಯಾರ್ಥಃ । ತ್ರಯಾಣಾಮಿತಿ ಸಾಮಾನ್ಯತಸ್ತ್ರಿತ್ವ ವಾಚಕಪದಸ್ಯೋಕ್ತಭಗವದ್ರೂಪೇಷ್ವಪಿ ನೇತುಂ ಶಕ್ಯತ್ವಾದಿತಿ ಭಾವಃ ॥ ೩೨೬-೩೨೭ ॥

**ವಿವರಣೆ–** ಭಿದಾ ಶಬ್ದಕ್ಕೆ ಅನ್ಯೋನ್ಯಾಭಾವರೂಪವಾದ ಭೇದವೆಂದು ಅರ್ಥವನ್ನು ಮಾಡಿದರೂ ಈ ವಾಕ್ಯವನ್ನು ಭಾಗವತದ ಆಧಾರದಿಂದಲೇ ಯೋಜನೆಯನ್ನು ಮಾಡಬಹುದೆಂದು ಇಲ್ಲಿ ಹೇಳುತ್ತಾರೆ.

'ತದಾಸುರಾನ್ ಆವಿಷದಾಸುರೇಣ ರೂಪೇಣ ತೇಷಾಂ ಬಲವೀರ್ಯಮೀರಯನ್। ಉದ್ದೀಪಯನ್ ದೇವಗಣಾಂಶ್ಚ ವಿಷ್ಣುಃ ದೈವೇನ ನಾಗೇಂದ್ರ ಮಥಾಪರೇಣ' ಎಂಬುದು

ಸಮುದ್ರ ಮಥನ ಪ್ರಸಂಗದಲ್ಲಿ ಬರುವ ಒಂದು ವಚನ. ದೇವತೆಗಳು, ಅಸುರರು ಮತ್ತು ವಾಸುಕಿಯು ಸೇರಿ ಸಮುದ್ರವನ್ನು ಕಡೆಯಲು ಅಸಮರ್ಥರಾದಾಗ ವಿಷ್ಣುವು ದೇವತೆಗಳನ್ನು ದೇವತಾರೂಪದಿಂದಲೂ, ಅಸುರರನ್ನು ಅಸುರರೂಪದಿಂದಲೂ, ಸರ್ಪವನ್ನು ಸರ್ಪರೂಪದಿಂದಲೂ ಪ್ರವೇಶಿಸಿದನು ಮತ್ತು ಅನಂತರ ತಾನೇ ಮಥನವನ್ನು ಮಾಡಿದನು ಎಂದು ಅರ್ಥ. ಆದ್ದರಿಂದ ದೇವತೆಗಳಲ್ಲಿ ದೇವತಾರೂಪದಿಂದಿರುವ ವಿಷ್ಣುವು ಬ್ರಹ್ಮನಲ್ಲಿ ಬ್ರಹ್ಮರೂಪದಿಂದಲೂ, ಶಿವನಲ್ಲಿ ಶಿವರೂಪದಿಂದಲೂ ಇದ್ದಾನೆ. ಬ್ರಹ್ಮನ ಅಂತರ್ಯಾಮಿಯಾದ ಬ್ರಹ್ಮರೂಪಕ್ಕೂ, ಶಿವನ ಅಂತರ್ಯಾಮಿಯಾದ ಶಿವರೂಪಕ್ಕೂ ಮತ್ತು ಪೃಥಕ್ ಸ್ಥಿತನಾದ ವಿಷ್ಣುರೂಪಕ್ಕೂ ಭೇದವಿಲ್ಲವೆಂದು ಈ ವಾಕ್ಯವು ಅನ್ಯೋನ್ಯಾಭಾವರೂಪವಾದ ಭೇದವನ್ನೇ ನಿಷೇಧ ಮಾಡುತ್ತದೆ ಎಂದೂ ಯೋಜನೆಯನ್ನು ಮಾಡಬಹುದು.

**ಸಂಯುಜ್ಯೈವ ಸ್ಥಿತಿಂ ಪ್ರೋಕ್ತಾಂ ಸ್ಥಿರೀಕರ್ತುಮಿದಂ ವಚಃ ।**
**ಹೃದಿಸ್ಥರೂಪಪ್ರೇಮಿತ್ವಾದವೈರಂ ವಾ ತಯೋರ್ಹರೌ ॥ ೩೨೮ ॥**

**ಅರ್ಥ-** ಪ್ರೋಕ್ತಾಂ= ಹಿಂದೆ ಹೇಳಲ್ಪಟ್ಟ, ಸಂಯುಜ್ಯೈವ ಸ್ಥಿತಿಂ= ಸಂಯೋಗವನ್ನು ಹೊಂದಿರುವಿಕೆಯನ್ನು, ಸ್ಥಿರೀಕರ್ತುಂ= ಸ್ಥಿರವನ್ನಾಗಿ ಮಾಡಲು, ಇದಂ ವಚಃ= ಈ ವಚನವು ಪ್ರವೃತ್ತವಾಗುತ್ತದೆ, ತಯೋಃ= ಬ್ರಹ್ಮರುದ್ರರಿಗೆ, ಹೃದಿಸ್ಥರೂಪಪ್ರೇಮಿತ್ವಾತ್= ಹೃದಯದಲ್ಲಿರುವ ಭಗವಂತನ ರೂಪದಲ್ಲಿ ಪ್ರೇಮವಿರುವುದರಿಂದ, ಹರೌ= ಆ ಹರಿಯಲ್ಲಿ, ಅವೈರಂ ವಾ= ವಿರೋಧಾಭಾವವನ್ನಾಗಲೀ ಹೇಳುತ್ತದೆ.

**ಅನುವಾದ-** ಹಿಂದಿನ ಶ್ಲೋಕಗಳಲ್ಲಿ ಬ್ರಹ್ಮರುದ್ರರಿಗೂ ಮತ್ತು ವಿಷ್ಣುವಿಗೂ ಯಾವಾಗಲೂ ಸಂಯೋಗವೇ ಇದೆ ಎಂದು ಹೇಳಲ್ಪಟ್ಟಿದೆ. ಅದನ್ನು ಸ್ಥಿರೀಕರಿಸಲು ತ್ರಯಾಣಾಂ ಎಂಬ ಈ ವಾಕ್ಯವು ಬ್ರಹ್ಮರುದ್ರರ ಹೃದಯದಲ್ಲಿರುವ ಪರಮಾತ್ಮನ ರೂಪಕ್ಕೂ ಮತ್ತು ಹರಿಗೂ ವೈರವಿಲ್ಲವೆಂದು ಹೇಳುತ್ತದೆ. ಹೃದಯದಲ್ಲಿರುವ ರೂಪವನ್ನು ಉಪಾಸನೆ ಮಾಡುವುದರಿಂದ ಅವರಿಗೆ ಅದರಲ್ಲಿ ಪ್ರೇಮವೇ ಇದೆ. ಆದ್ದರಿಂದ ವೈರವು ಇಲ್ಲವೆಂದು ಹೇಳುತ್ತದೆ.

**ಭಾವವಿಲಾಸಿನೀ**—ಅಸ್ಯಾಪ್ಯರ್ಥಸ್ಯ ದ್ವೇಧಾಪೂರ್ವೋಕ್ತಾರ್ಥೇಸಂಗತಿಮಾಹ – **ಸಂಯುಜ್ಯೇತಿ** ॥ ಅಂತರ್ಯಾಮಿರೂಪಯೋಃ ಪೃಥಕ್‌ಸ್ಥಿತರೂಪಸ್ಯ ಚ ಭೇದಾಭಾವೇऽಸ್ಯಾಪಿ ರೂಪಸ್ಯ ಸದಾಸಂಯುಜ್ಯೈವ ಸ್ಥಿತಿರುಕ್ತಪ್ರಾಯೇತಿ ಭಾವಃ । ಅವೈರಮವಿರೋಧಮ್ । ಯುಕ್ತಿಸ್ತು ಪೂರ್ವವದೇವ ದ್ರಷ್ಟವ್ಯಾ ॥ ೩೨೮ ॥

**ವಿವರಣೆ—** ಭೇದವೆಂದರೆ ಸಂಯೋಗರಹಿತಸ್ಥಿತಿ ಎಂದು ಹಿಂದೆ ಹೇಳಿದ್ದಾರೆ. ಬ್ರಹ್ಮ ವಿಷ್ಣು ಮಹೇಶ್ವರರಿಗೆ ಸಂಯೋಗರಹಿತವಾದ ಸ್ಥಿತಿಯು ಇಲ್ಲವೆಂದು ತ್ರಯಾಣಾಂ ಎಂಬ

ಶ್ಲೋಕಕ್ಕೆ ಯೋಜನೆಯನ್ನು ಮಾಡಬಹುದು ಎಂದೂ ತಿಳಿಸಿದ್ದಾರೆ. ಅದನ್ನು ದೃಢೀಕರಿಸಲು ಇಲ್ಲಿ ಭಾಗವತದ ಶ್ಲೋಕವನ್ನು ಉದಾಹರಿಸುತ್ತಿದ್ದಾರೆ. ಈ ಶ್ಲೋಕದಿಂದ ಬ್ರಹ್ಮನ ಹೃದಯದಲ್ಲಿ ಬ್ರಹ್ಮರೂಪದಿಂದಲೂ, ರುದ್ರನ ಹೃದಯದಲ್ಲಿ ರುದ್ರ ರೂಪದಿಂದಲೂ ಹರಿಯು ಇರುವನೆಂದು ಸಿದ್ಧವಾಗುತ್ತದೆ. ಹೃದಯದಲ್ಲಿರುವ ಹರಿ ರೂಪವನ್ನು ಅವರು ಉಪಾಸನೆ ಮಾಡುವುದರಿಂದ ಅವರಿಗೆ ಅದರಲ್ಲಿ ಪ್ರೇಮವೇ ಇದೆ. ಪ್ರೇಮವಿರುವುದರಿಂದ ಸಂಯುಜ್ಯ ಸ್ಥಿತಿಯೇ ಇದೆ. ಹೊರಗಿರುವ ಹರಿರೂಪಕ್ಕೂ ಮತ್ತು ಅಂತರ್ಯಾಮಿ ರೂಪಗಳಿಗೂ ಅಭೇದವಿರುವುದರಿಂದ ಬ್ರಹ್ಮರುದ್ರರಿಗೆ ಅಂತರ್ಯಾಮಿ ರೂಪದ ಜೊತೆಯಲ್ಲಿ ಸಂಯುಜ್ಯ ಸ್ಥಿತಿ ಇರುವಂತೆ ಬಹಿಃಸ್ಥಿತವಾದ ಹರಿಯರೂಪದ ಜೊತೆಯಲ್ಲಿಯೂ ಸಂಯುಜ್ಯ ಸ್ಥಿತಿಯೇ ಇದೆ. ಆದ್ದರಿಂದ ಭೇದಶಬ್ದದ ಅರ್ಥವಾದ ಅಸಂಯುಜ್ಯ ಸ್ಥಿತಿಯನ್ನು ನಿರಾಕರಿಸಿ ಸಂಯುಜ್ಯ ಸ್ಥಿತಿಯನ್ನು ಉಪಪಾದನೆ ಮಾಡುವುದಕ್ಕಾಗಿ ಅವರ ಹೃದಯದಲ್ಲಿರುವ ಅವರಿಗೆ ಪ್ರೇಮಾಸ್ಪದವಾದ ಮತ್ತು ಹೊರಗಿರುವ ಹರಿ ರೂಪಗಳನ್ನು ಇಲ್ಲಿ ಭಾಗವತದ ಆಧಾರದಿಂದ ನಿರೂಪಿಸಿದ್ದಾರೆ ಎಂದು ಅಭಿಪ್ರಾಯ.

**ಅಂತರ್ಯಾಮಿವಿವಕ್ಷಾಯಾಂ ಭೇದೋ ನಾಶೋ ಭ್ರಮೋಪಿ ವಾ ।**
**ಮಿಶ್ರಣಂ ವಾ ಕ್ರಮಾದೇಷು ತ್ರಿತಯಂ ವಾಙ್ನಿಷೇಧತಿ ॥ ೩೨೯ ॥**

**ಅರ್ಥ-** ಅಂತರ್ಯಾಮಿವಿವಕ್ಷಾಯಾಂ= ಬ್ರಹ್ಮರುದ್ರರ ಅಂತರ್ಯಾಮಿಯನ್ನು ವಿವಕ್ಷ್ಯ ಮಾಡಿದರೆ, ಭೇದೋ= ಭೇದವು, ನಾಶಃ= ನಾಶವೆಂಬ ಅರ್ಥವಾಗಲೀ, ವಾ= ಅಥವಾ, ಭ್ರಮೋಪಿ= ಭ್ರಮೆಯೆಂಬ ಅರ್ಥವಾಗಲೀ, ವಾ= ಅಥವಾ, ಮಿಶ್ರಣಂ= ಮಿಶ್ರಣ ಎಂಬ ಅರ್ಥವಾಗಲೀ, ಎಂದು ಭಾವಿಸಿದರೂ, ಏಷು= ಈ ಮೂರು ರೂಪಗಳಲ್ಲಿ, ಕ್ರಮವಾತ್= ಕ್ರಮದಿಂದ, ತ್ರಿತಯಂ= ಈ ಮೂರನ್ನು, ವಾಕ್= ತ್ರಯಾಣಾಂ ಏಕಭಾವಾನಾಂ ಎಂಬ ವಚನವು, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ-** ಅಂತರ್ಯಾಮಿಯ ವಿವಕ್ಷೆಯನ್ನು ಮಾಡಿದರೆ ಯೋನಪಶ್ಯತಿ ವೈಭಿದಾಂ ಎಂಬಲ್ಲಿರುವ ಭೇದಶಬ್ದಕ್ಕೆ ನಾಶವೆಂದು ಅರ್ಥಮಾಡಿದರೂ, ಭ್ರಮವೆಂದು ಅರ್ಥಮಾಡಿದರೂ, ಮಿಶ್ರಣವೆಂದು ಅರ್ಥಮಾಡಿದರೂ ಸಹ ಇದೇ ವಾಕ್ಯವು ಕ್ರಮವಾಗಿ ಈ ಮೂರು ರೂಪಗಳಲ್ಲಿ ಆ ಮೂರನ್ನೂ ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಪುನರರ್ಥತ್ರಯಮಾಹ –**ಅಂತರ್ಯಾಮೀತಿ** । ಏಷುರೂಪತ್ರಯೇಷು । ತ್ರಯಾಣಾಮೇಷಾಂ ಭಗವದ್ರೂಪಾಣಾಂ ಭಿದಾಂ ನಾಶಂ ಭ್ರಮಂ ಮಿಶ್ರಣಂ ಚ ಯೋನ ಪಶ್ಯತಿ । ಇತ್ಯರ್ಥತ್ರಯಂ ಚ ಸಂಭವತೀತಿ ಭಾವಃ ॥ ೩೨೯ ॥

**ವಿವರಣೆ–** ಮೂರು ರೂಪಗಳ ಭೇದವಿಲ್ಲ ಎಂದು ಹೇಳಿದ್ದಾರೆ. ಭೇದವಿಲ್ಲ ಎಂದು ಅನ್ಯೋನ್ಯಾಭಾವ ನಿಷೇಧ ಮಾಡಿದರೆ ಅದನ್ನು ಉಪಪಾದನೆ ಮಾಡಬೇಕು. ಈ

ಮೂರು ರೂಪಗಳಿಗೆ ನಾಶವಿಲ್ಲ, ಭ್ರಾಂತಿಯಿಲ್ಲ ಮತ್ತು ಮಿಶ್ರಣವಿಲ್ಲ ಎಂದು ಹೇಳಿ ಆ ಭೇದವನ್ನು ಉಪಪಾದನೆ ಮಾಡುತ್ತಾರೆ. ಭೇದವನ್ನು ಉಪಪಾದನೆ ಮಾಡುವ ಕ್ರಮವನ್ನು ಗ್ರಂಥಕಾರರೇ ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ.

**ಅಭೇದಘಟನಾಯೋಕ್ತಾ ತ್ರಯಾಣಾಮಪ್ಯನಾಶ್ಯತಾ ।**
**ನಶ್ಯದ್ದೇಹೇಪ್ಯನಾಶಾಯ ತದ್ದೇಹೇ ಭ್ರಮಶೂನ್ಯತಾ ।**
**ಅವಿದ್ಯಾದ್ಯೈರಮಿಶ್ರತ್ವಂ ತದಭ್ರಾಂತ್ಯೈ ನಿಗದ್ಯತೇ ॥ ೩೩೦ ॥**

**ಅರ್ಥ-** ಅಭೇದಘಟನಾಯ= ಅಭೇದವನ್ನು ಉಪಪಾದನೆ ಮಾಡುವುದಕ್ಕೋಸ್ಕರ, ತ್ರಯಾಣಾಮಪಿ= ಆ ಮೂರು ರೂಪಗಳಿಗೂ, ಅನಾಶ್ಯತಾ= ನಾಶಾಭಾವವು, ಉಕ್ತಾ= ಹೇಳಲ್ಪಟ್ಟಿದೆ, ನಶ್ಯದ್ದೇಹೇಪಿ= ನಾಶವನ್ನು ಹೊಂದುವ ದೇಹದಲ್ಲಿಯೂ ಸಹ, ಅನಾಶಾಯ= ನಾಶವನ್ನು ಹೊಂದದೇ ಇರುವುದಕ್ಕಾಗಿ, ತದ್ದೇಹೇ= ಆ ದೇಹದಲ್ಲಿ, ಭ್ರಮಶೂನ್ಯತಾ= ಭ್ರಮರಾಹಿತ್ಯವು ಹೇಳಲ್ಪಟ್ಟಿದೆ, ತದಭ್ರಾಂತ್ಯೈ= ಆ ಭ್ರಾಂತಿಯ ಅಭಾವವನ್ನು ಉಪಪಾದನೆ ಮಾಡಲು, ಅವಿದ್ಯಾದ್ಯೈಃ= ಅವಿದ್ಯ ಮೊದಲಾದವುಗಳಿಂದ, ಅಮಿಶ್ರತತ್ವಂ= ಮಿಶ್ರಣಾಭಾವವು, ನಿಗದ್ಯತೇ= ಹೇಳಲ್ಪಡುತ್ತದೆ.

**ಅನುವಾದ-** ಅಭೇದವನ್ನು ಉಪಪಾದನೆ ಮಾಡಲು ಮೂರು ರೂಪಗಳಿಗೂ ನಾಶಾಭಾವವನ್ನು ಹೇಳಿದ್ದಾರೆ. ನಾಶವನ್ನು ಹೊಂದುವ ದೇಹದಲ್ಲಿದ್ದರೂ ನಾಶಾಭಾವವನ್ನು ಕೂಡಿಸುವುದಕ್ಕಾಗಿ ಆ ದೇಹದಲ್ಲಿರುವ ಹರಿಗೆ ಭ್ರಾಂತಿ ಶೂನ್ಯತ್ವವನ್ನು ಹೇಳಿದ್ದಾರೆ. ಆ ಭ್ರಾಂತ್ಯಭಾವವನ್ನು ಕೂಡಿಸುವುದಕ್ಕಾಗಿ ಅವಿದ್ಯಾದಿ ಗಳಿಂದ ಮಿಶ್ರಣವಿಲ್ಲವೆಂದು ಹೇಳಿದ್ದಾರೆ.

**ಭಾವವಿಲಾಸಿನೀ–** ತತ್ರ ನಾಶಾಭಾವಾರ್ಥಸ್ಯ ಪೂರ್ವೋಕ್ತಾರ್ಥಸಂಗತಿಮಾಹ – **ಅಭೇದೇತಿ ॥** ಅಭೇದಘಟನಾಯ ಪೂರ್ವೋಕ್ತಭೇದಾಭಾವಘಟನಾಯ । ಏಕಸ್ಯ ನಾಶೇಽಪರಸ್ಯ ಚಾನಾಶೇ ಹ್ಯಭೇದೋ ನ ಘಟತೇ । ಸರ್ವೇಷಾಮನಾಶೇ ವೈಲಕ್ಷಣ್ಯಾಭಾವಾತ್ ಪ್ರಾಗುಕ್ತಾಭೇದೋ ಘಟತ ಇತಿ ಭಾವಃ । ಭ್ರಮಾಭಾವಾರ್ಥಸ್ಯಾಪಿ ಪ್ರಾಗುಕ್ತಾನಾಶಾರ್ಥೇ ಸಂಗತಿಮಾಹ – **ನಶ್ಯದಿತಿ ॥** ತದ್ದೇಹೇ ತಯೋರ್ಬ್ರಹ್ಮರುದ್ರಯೋರ್ದೇಹೇ ಭ್ರಮಶೂನ್ಯತಾ ಅಹಂಮಮತಾಖ್ಯ-ಭ್ರಮಶೂನ್ಯತಾ ಉಕ್ತಾ । ತದ್ದೇಹಾಭಿಮಾನೇ ಸತಿ ಹ್ಯಂತರ್ಯಾಮಿರೂಪಯೋರಪಿ ದೇಹನಾಶಪ್ರಯುಕ್ತನಾಶಃ ಸ್ಯಾತ್ । ದೇಹಾಭಿಮಾನಾಖ್ಯಭ್ರಮಾಭಾವೇ ತನ್ನಾಶೇಪ್ಯನಯೋ-ರನಾಶ್ಯತಾದೃಢೀಕೃತೇತಿ ಭಾವಃ । ತೃತೀಯಾರ್ಥಸ್ಯಾಪಿ ದ್ವಿತಾಯಾರ್ಥೇನ ಸಂಗತಿಮಾಹ – **ಅವಿದ್ಯಾದ್ಯೈರಿತಿ ॥** ಭಿದಾಶಬ್ದಸ್ಯ ಮಿಶ್ರಣಾರ್ಥತ್ವೇಕೇನ ಮಿಶ್ರಣಮಿತ್ಯಾಕಾಂಕ್ಷಾ-ಪೂರಣಾಯಾವಿದ್ಯಾದ್ಯೈರಿತ್ಯುಕ್ತಮ್ । ಅವಿದ್ಯಾದಿದೋಷೈರ್ಮಿಶ್ರಣಂ ಯೋ ನ ಪಶ್ಯತೀತಿ ತೃತೀಯೋರ್ಥಃ । ಅವಿದ್ಯಾದಿದೋಷಾಮಿಶ್ರತ್ವಂ ಚ ತದಭ್ರಾಂತ್ಯೈ ತಯೋರಂತರ್ಯಾಮಿ ರೂಪಯೋರ್ದೇಹಾಭಿಮಾನಾಖ್ಯ ಭ್ರಾಂತ್ಯಭಾವಾಯ ನಿಗದ್ಯತ ಇತಿ ಯೋಜನಾ ॥೩೩೦॥

**ವಿವರಣೆ–** ಬ್ರಹ್ಮನ ಅಂತರ್ಯಾಮಿ ರೂಪ, ರುದ್ರನ ಅಂತರ್ಯಾಮಿ ರೂಪ ಮತ್ತು ವಿಷ್ಣು ರೂಪ, ಈ ಮೂರು ರೂಪಗಳಿಗೆ ಭೇದವಿಲ್ಲ ಎಂದು ಹೇಳಿದ್ದಾಗಿದೆ. ಎರಡು ಪದಾರ್ಥಗಳಿಗೆ ಭೇದವಿದ್ದರೆ ಒಂದು ಪದಾರ್ಥ ನಾಶವಾದರೂ ಇನ್ನೊಂದು ಪದಾರ್ಥ ಉಳಿದಿರುತ್ತದೆ. ಈ ಅನ್ಯತರನಾಶದಿಂದ ಭೇದವನ್ನು ಸಾಧನೆ ಮಾಡಬಹುದು. ಆದರೆ ಈ ಮೂರು ಭಗವದ್ರೂಪಗಳಿಗೂ ನಾಶವೇ ಇಲ್ಲದಿರುವುದರಿಂದ ಅಲ್ಲಿ ಭೇದವಿಲ್ಲ ಎಂದು ಅಭಿಪ್ರಾಯ. ಹೀಗೆ ಭೇದಶಬ್ದಕ್ಕೆ ನಾಶ ಎಂದು ಅರ್ಥ ಮಾಡಿದಂತೆ, ಭ್ರಾಂತಿಶೂನ್ಯತ್ವ ಎಂದೂ ಅರ್ಥವನ್ನು ಮಾಡಬಹುದು. ಬ್ರಹ್ಮಾದಿ ದೇಹದಲ್ಲಿ ಅಂತರ್ಯಾಮಿಯಾಗಿರುವ ಹರಿಯ ರೂಪಕ್ಕೆ ಬ್ರಹ್ಮಶರೀರಕ್ಕೆ ನಾಶವಾದರೂ ಏಕೆ ನಾಶವಿಲ್ಲ ಎಂಬ ಪ್ರಶ್ನೆಗೆ ಆ ದೇಹದಲ್ಲಿರುವ ಬ್ರಹ್ಮಾದಿ ಚೇತನಗಳಿಗೆ ಭ್ರಾಂತಿ ಇದೆ ಆದ್ದರಿಂದ ಅದು ನಾಶವನ್ನು ಹೊಂದುತ್ತದೆ. ಹರಿಗೆ ಭ್ರಮವಿಲ್ಲದಿರುವುದರಿಂದ ಅವನು ನಾಶವನ್ನು ಹೊಂದುವುದಿಲ್ಲ ಎಂದು ನಾಶಾಭಾವವನ್ನು ಉಪಪಾದನೆಯನ್ನು ಮಾಡುವುದಕ್ಕಾಗಿ ಅದೇ ಭೇದವಿಲ್ಲ ಎಂಬ ಶಬ್ದವು ಭ್ರಾಂತಿಶೂನ್ಯತ್ವವನ್ನು ಹೇಳುತ್ತದೆ. ಒಂದೇ ದೇಹದಲ್ಲಿರುವ ಬ್ರಹ್ಮನಿಗೆ ಭ್ರಾಂತಿಯಿದ್ದರೂ ಅಲ್ಲಿರುವ ಹರಿಗೆ ಏಕೆ ಭ್ರಾಂತಿಯಿಲ್ಲ ಎಂದು ಉಪಪಾದನೆ ಮಾಡಲು ಅದೇ ಭೇದವಿಲ್ಲ ಎಂಬ ಶಬ್ದವು ಮಿಶ್ರಣಾಭಾವವನ್ನು ಹೇಳುತ್ತದೆ. ಎಂದರೆ ಬ್ರಹ್ಮಾದಿಗಳಿಗೆ ಅವಿದ್ಯಾದಿಗಳಿಂದ ಮಿಶ್ರಣವಿದೆ, ಆದ್ದರಿಂದ ಅವರಿಗೆ ಭ್ರಾಂತಿ ಇದೆ. ಹರಿಗೆ ಅವಿದ್ಯಾದಿಗಳಿಂದ ಮಿಶ್ರಣವಿಲ್ಲ, ಆದ್ದರಿಂದ ಅವನಿಗೆ ಭ್ರಾಂತಿ ಇಲ್ಲ ಎಂದು ಹೇಳಿ ಅನ್ಯೋನ್ಯಾಭಾವವನ್ನು ನಿಷೇಧ ಮಾಡಿ ಅಭೇದವನ್ನು ಹೇಳುವುದಕ್ಕಾಗಿ ನಾಶಾಭಾವವನ್ನೂ, ನಾಶಾಭಾವವನ್ನು ಉಪಪಾದನೆ ಮಾಡುವುದಕ್ಕಾಗಿ ಭ್ರಮಾಭಾವವನ್ನೂ, ಭ್ರಮಾಭಾವವನ್ನು ಉಪಪಾದನೆ ಮಾಡುವುದಕ್ಕಾಗಿ ಅವಿದ್ಯಾದಿಗಳ ಮಿಶ್ರಣಾಭಾವವನ್ನೂ ಭೇದಾಭಾವಶಬ್ದದ ಅರ್ಥವೆಂದು ತಿಳಿದುಕೊಂಡು ತ್ರಯಾಣಾಂ ಏಕಭಾವಾನಾಂ ಎಂಬ ಶ್ಲೋಕವು ನಾಶ, ಭ್ರಾಂತಿ ಮತ್ತು ಮಿಶ್ರಣ ಈ ಮೂರು ವಿಧವಾದ ಭೇದವನ್ನು ನಿಷೇಧ ಮಾಡಿ ಹರಿಯ ರೂಪದಲ್ಲಿ ಅಭೇದವನ್ನು ಸಮರ್ಥಿಸುತ್ತದೆ ಎಂದು ಯೋಜನೆಯನ್ನು ಮಾಡಬಹುದು ಎಂದು ಗ್ರಂಥಕಾರರ ಅಭಿಪ್ರಾಯ.

**ಅಂತರ್ಯಾಮಿವಿವಕ್ಷಾಯಾಂ ಮುಖ್ಯಾ ಸ್ಯಾದೇಕಭಾವನಾ ।**
**ಭಿನ್ನಭಿನ್ನಮನಸ್ಕತ್ವಾನ್ನ ಚೇನ್ನಾತೋಽಪಿ ತಸ್ಯ ವಾಕ್ ॥ ೩೩೧ ॥**

**ಅರ್ಥ–** ಅಂತರ್ಯಾಮಿವಿವಕ್ಷಾಯಾಂ= ಬ್ರಹ್ಮರುದ್ರರ ಅಂತರ್ಯಾಮಿಯನ್ನು ವಿವಕ್ಷೆ ಮಾಡಿದರೆ, ಏಕಭಾವನಾ= ಏಕಭಾವಾನಾಂ ಎಂಬ ಶಬ್ದದಿಂದ ಹೇಳಿದ ಒಂದೇ ಭಾವನೆಯು, ಮುಖ್ಯಾಸ್ಯಾತ್= ಮುಖ್ಯವಾಗುತ್ತದೆ, ನ ಚೇತ್= ಅಂತರ್ಯಾಮಿ ವಿವಕ್ಷೆಯನ್ನು ಮಾಡದಿದ್ದರೆ, ಭಿನ್ನಭಿನ್ನಮನಸ್ಕತ್ವಾತ್= ಭಿನ್ನಭಿನ್ನವಾದ ಮನಸ್ಸನ್ನು

ಹೊಂದಿರುವುದರಿಂದ, ನ= ಏಕಭಾವನೆಯು ಮುಖ್ಯವಾಗುವುದಿಲ್ಲ, ಅತೋಪಿ= ಆ ಕಾರಣದಿಂದಲೂ ಅದು, ತಸ್ಯ= ಆ ಅಂತರ್ಯಾಮಿಯ, ವಾಕ್= ವಚನವಾಗಿದೆ.

**ಅನುವಾದ-** ಬ್ರಹ್ಮರುದ್ರರ ಅಂತರ್ಯಾಮಿಯನ್ನು ವಿವಕ್ಷೆ ಮಾಡಿದರೆ ತ್ರಯಾಣಾಂ ಏಕಭಾವಾನಾಂ ಎಂಬ ಶ್ಲೋಕದಲ್ಲಿ ಹೇಳಿದ ಏಕಭಾವನೆಯು ಮುಖ್ಯವಾಗುತ್ತದೆ. ಅಂತರ್ಯಾಮಿ ವಿವಕ್ಷೆಯನ್ನು ಮಾಡದಿದ್ದರೆ ಬ್ರಹ್ಮವಿಷ್ಣುಮಹೇಶ್ವರರಿಗೆ ಇರುವ ಮನಸ್ಸು ಭಿನ್ನ ಭಿನ್ನವಾದುದರಿಂದ ಏಕಭಾವನೆಯು ಮುಖ್ಯವಾಗುವುದಿಲ್ಲ. ಆದ್ದರಿಂದಲೂ ಸಹ ಈ ವಚನವು ಅಂತರ್ಯಾಮಿಯನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಅಂತರ್ಯಾಮಿವಿವಕ್ಷಾಯಾಃ ಸೂಚಕಂ ಚ ಮೂಲ ಏವಾಸ್ತೀತ್ಯಾಹ – **ಅಂತರ್ಯಾಮೀತಿ** ॥ ಏಕಃ ಭಾವೋಂತಃಕರಣಂ ಯೇಷಾಮಿತಿ ಹ್ಯೇಕಭಾವಶಬ್ದಾರ್ಥಃ । ಸ ಚ ಪರಮಾತ್ಮರೂಪೇಷು ತದಂತಃಕರಣಸ್ಯಾಪ್ಯೇಕ ತ್ವಾದ್ಘಟತೇ । ನ ಚೇದಂತರ್ಯಾಮಿ ವಿವಕ್ಷಾ ನ ಕ್ರಿಯತೇ ಚೇತ್ ಭಿನ್ನಭಿನ್ನಮನಸ್ಕತ್ವಾದೇಕಭಾವಾನಾಮಿತಿ ವಿಶೇಷಣಂ ನ ಘಟತ ಇತ್ಯರ್ಥಃ । ಅತಃ ಏಕಭಾವಾನಾಮಿತಿ ವಿಶೇಷಣಸ್ಯ ಘಟನೀಯತ್ವಾತ್ । ತಸ್ಯಾಂತರ್ಯಾಮಿಣಃ ॥೩೩೦॥

**ವಿವರಣೆ–** ಅಂತರ್ಯಾಮಿಯನ್ನು ವಿವಕ್ಷೆ ಮಾಡಿದರೆ ಮೂರು ಕಡೆಯಲ್ಲಿಯೂ ಇರುವ ವಿಷ್ಣುವಿಗೆ ಒಂದೇ ಮನಸ್ಸು. ಒಂದೇ ಮನಸ್ಸಿನ ಒಂದೇ ಅಭಿಪ್ರಾಯವು ಮುಖ್ಯವಾದುದು. ಹಾಗೆ ಮಾಡದಿದ್ದರೆ ಬ್ರಹ್ಮನ ಮನಸ್ಸು ಬೇರೆ, ರುದ್ರನ ಮನಸ್ಸು ಬೇರೆ ಮತ್ತು ವಿಷ್ಣುವಿನ ಮನಸ್ಸು ಬೇರೆ ಇರುವುದರಿಂದ ಏಕಭಾವನೆಯನ್ನು ಗೌಣವಾಗಿ ಕೂಡಿಸಬೇಕಾಗುತ್ತದೆ. ಮುಖ್ಯವಾದ ಏಕಭಾವನೆಯನ್ನೇ ತೆಗೆದುಕೊಳ್ಳುವುದಕ್ಕಾಗಿ ಇಲ್ಲಿ ಅಂತರ್ಯಾಮಿ ವಿವಕ್ಷೆ ಮಾಡುವುದೇ ಮುಖ್ಯವಾದುದು ಎಂದು ಅಭಿಪ್ರಾಯ.

ರೂಢಲಕ್ಷಣಯಾಽನ್ಯತ್ರ ಬುದ್ಧೇರೈಕ್ಯಂ ಚ ಭಿನ್ನತಾ ।
ವಿಷಯಸ್ಯೈಕ್ಯಭೇದಾಭ್ಯಾಮುಕ್ತೇ ಮುಖ್ಯಂ ತು ತದ್ಧರೌ ॥ ೩೩೧ ॥

**ಅರ್ಥ-** ಅನ್ಯತ್ರ= ಹರಿಯನ್ನು ಬಿಟ್ಟು ಬೇರೆಯ ಸ್ಥಳದಲ್ಲಿ, ರೂಢಲಕ್ಷಣಯಾ= ರೂಢಲಕ್ಷಣಾ ವೃತ್ತಿಯಿಂದ, ವಿಷಯಸ್ಯೈಕ್ಯಭೇದಾಭ್ಯಾಂ= ವಿಷಯದ ಐಕ್ಯ ಮತ್ತು ಭೇದಗಳಿಂದ, ಬುದ್ಧೇರೈಕ್ಯಂ ಭಿನ್ನತಾ ಚ= ಬುದ್ಧಿಯ ಐಕ್ಯವು ಮತ್ತು ಭೇದವು, ಉಕ್ತೇ= ಹೇಳಲ್ಪಡುತ್ತವೆ, ತತ್= ಆ ಬುದ್ಧಿಯ ಐಕ್ಯವು, ಹರೌ ತು= ಹರಿಯಲ್ಲಾದರೆ ಮಾತ್ರ, ಮುಖ್ಯಂ= ಮುಖ್ಯವೇ ಆಗುತ್ತದೆ.

**ಅನುವಾದ-** ಬುದ್ಧಿಯ ಐಕ್ಯವನ್ನು ಹರಿಯನ್ನು ಬಿಟ್ಟು ಬೇರೆ ಕಡೆ ಹೇಳಬೇಕಾದರೆ ರೂಢಲಕ್ಷಣಾ ವೃತ್ತಿಯಿಂದಲೇ ಹೇಳಬೇಕು. ಎಂದರೆ ವಿಷಯವು ಒಂದೇ ಆದರೆ ಬುದ್ಧಿಯು ಒಂದೇ ಆಗುತ್ತದೆ. ಅದರಂತೆ ವಿಷಯವು ಭಿನ್ನವಾದರೆ ಬುದ್ಧಿಯು

ಭಿನ್ನವಾಗುತ್ತದೆ ಎಂದು ಹೇಳಬೇಕು. ಹರಿಯಲ್ಲಾದರೆ ಮಾತ್ರ ಬುದ್ಧಿಯ ಐಕ್ಯವು ಮುಖ್ಯವಾದುದೇ ಆಗುತ್ತದೆ.

**ಭಾವವಿಲಾಸಿನೀ–** ಅನ್ಯತ್ರ ಭಗವತೋಽನ್ಯತ್ರ । ಬುದ್ಧೇರೈಕ್ಯಂ ಭಿನ್ನತಾ ಚ ಬುದ್ಧ್ಯೈಕ್ಯಂ ಬುದ್ಧಿಭೇದಶ್ಚೇತ್ಯರ್ಥಃ । ರೂಢಲಕ್ಷಣಯಾ ವಿಷಯಸ್ಯೈಕ್ಯಭೇದಾಭ್ಯಾಮುಕ್ತ್ಯೈ । ವಿಷಯೈಕ್ಯಾದ್ ಬುದ್ಧ್ಯೈಕ್ಯಮುಕ್ತಮ್ । ವಿಷಯಭೇದಾದ್ಬುದ್ಧಿಭಿನ್ನತಾಚೋಕ್ತಾ । ಬಹುಪುರುಷೇಷು ಬುದ್ಧ್ಯೈಕ್ಯಂ ಲಕ್ಷಣಯೈಕವಿಷಯಕಬುದ್ಧಿತ್ವಾದೇವ ವಕ್ತವ್ಯಮ್ । ನ ತು ಸಾಕ್ಷಾದ್ಬುದ್ಧೀನಾಮೇವೈಕ್ಯಮಸ್ತಿ । ಬುದ್ಧಿಭೇದೋಽಪಿ ಲಕ್ಷಣಯಾ ಭಿನ್ನ ವಿಷಯಕಬುದ್ಧಿತ್ವಾದೇವವಕ್ತವ್ಯಃ । ಬುದ್ಧಿಸ್ವರೂಪಭೇದಸ್ಯ ಸರ್ವದಾವಿದ್ಯಮಾನತ್ವಾತ್ । ತಸ್ಮಾತ್ ಭಗವತೋಽನ್ಯತ್ರೋಭಯಮಪ್ಯಮುಖ್ಯಮೇವ । ಬುದ್ಧಿಭೇದಸ್ವರೂಪನಿರೂಪಣಂ ತು ಪ್ರಸಂಗಾದಿತಿ ಜ್ಞಾತವ್ಯಮ್ । ತದ್ಬುದ್ಧ್ಯೈಕ್ಯಂ ಹರೌ ಮುಖ್ಯಮ್ । ಅತೋಮುಖ್ಯಾರ್ಥಲಾಭಾಯೋಕ್ತವಿಧಯಾ ಭಗವದ್ರೂಪಾಣಾಮೇವಾತ್ರ ನಿರೂಪಣಂ ಕರ್ತವ್ಯಮಿತಿ ಭಾವಃ ॥ ೩೩೨ ॥

**ವಿವರಣೆ–** ಹರಿಯನ್ನು ಬಿಟ್ಟು ಬೇರೆ ಕಡೆಯಲ್ಲಿ ಮನೋವೃತ್ತಿ ರೂಪವಾದ ಬುದ್ಧಿಯು ಮನಸ್ಸುಗಳು ಭಿನ್ನಭಿನ್ನವಾದ್ದರಿಂದ ಭಿನ್ನವಾಗುತ್ತವೆ. ಆದ್ದರಿಂದ ವಿಷಯದ ಏಕತೆಯಿಂದಲೇ ಬುದ್ಧಿಯ ಏಕತ್ವವನ್ನು ಹೇಳಬೇಕು. ಅದರಂತೆ ವಿಷಯಗಳು ಭಿನ್ನವಾದರೆ ಬುದ್ಧಿಭೇದವನ್ನು ಹೇಳಬೇಕು. ಹರಿಯ ಅಂತರ್ಯಾಮಿ ರೂಪಗಳಲ್ಲಿ ಮತ್ತು ಪೃಥಕ್ ಸ್ಥಿತ ರೂಪದಲ್ಲಿ ಒಂದೇ ಮನಸ್ಸು ಇರುವುದರಿಂದ ಆ ಮನಸ್ಸಿನ ಬುದ್ಧಿಯೂ ಸಹ ಒಂದೇ ಆಗುತ್ತದೆ ಎಂದು ಬುದ್ಧೈಕ್ಯವನ್ನು ಹೇಳುವ ಏಕಭಾವನಾ ಶಬ್ದಕ್ಕೆ ಮುಖ್ಯಾರ್ಥದ ಸ್ವೀಕಾರವು ಉಂಟಾಗುತ್ತದೆ. ಇಲ್ಲಿ ಮುಖ್ಯವಾದುದನ್ನೇ ತೆಗೆದುಕೊಳ್ಳಬೇಕಷ್ಟೇ. ಆದ್ದರಿಂದ ಅಂತರ್ಯಾಮಿ ವಿವಕ್ಷೆಯನ್ನೇ ಮಾಡಬೇಕು. ಯದ್ಯಪಿ ಈ ಪ್ರಕರಣದಲ್ಲಿ ಬುದ್ಧಿಯ ಐಕ್ಯವು ಮುಖ್ಯವಾದುದೆಂದು ಉಪಪಾದನೆ ಮಾಡಿದರೆ ಸಾಕು. ಬುದ್ಧಿಭೇದವನ್ನು ವಿಮರ್ಶೆ ಮಾಡುವ ಅಗತ್ಯವಿಲ್ಲ. ಆದರೂ ಬುದ್ಧೈಕ್ಯವನ್ನು ವಿಮರ್ಶೆ ಮಾಡುವಾಗ ಬುದ್ಧಿ ಭೇದವು ಸ್ಮೃತವಾಗುವ ಕಾರಣ ಅದನ್ನೂ ಉಪಪಾದನೆ ಮಾಡಿದ್ದಾರೆ. ಆದ್ದರಿಂದ ಈ ಕಾರಣದಿಂದಲೂ ಸಹ ಈ ಶ್ಲೋಕದಲ್ಲಿ ಅಂತರ್ಯಾಮಿ ರೂಪಗಳನ್ನೇ ಸ್ವೀಕರಿಸಬೇಕು ಎಂದು ಅಭಿಪ್ರಾಯ.

ಶಬ್ದೋ ನೇಯೋ ಹ್ಯನೇಕಾರ್ಥೇ ನಿರ್ಣೀತೋಽರ್ಥಃ ಕ್ವ ನೀಯತೇ ।
ಪುತ್ರೋ ನ ಪುತ್ರೀತಿ ವಾಕ್ಯಂ ನಿರ್ಣೀತಾರ್ಥಾನುಸಾರಿ ಹಿ ॥ ೩೩೩ ॥

**ಅರ್ಥ–** ಶಬ್ದೋ= ಶಬ್ದವು, ಅನೇಕಾರ್ಥೇ= ಒಂದು ಅರ್ಥವು ಕೂಡದಿದ್ದಾಗ ಇನ್ನೊಂದು ಅರ್ಥದಲ್ಲಿ, ನೇಯೋ ಹಿ= ತೆಗೆದುಕೊಂಡು ಹೋಗಲ್ಪಡುವುದಷ್ಟೇ, ನಿರ್ಣೀತಃ ಅರ್ಥಃ= ನಿರ್ಣೀತವಾದ ಅರ್ಥವು, ಕ್ವ ನೀಯತೇ= ಎಲ್ಲಿಗೆ ಒಯ್ಯಲ್ಪಡುತ್ತದೆ, ಪುತ್ರೋ ನ ಪುತ್ರೀತಿ

ವಾಕ್ಯಂ= ಪುತ್ರೋ ನ ಪುತ್ರೀ ಎಂಬ ವಾಕ್ಯವು, ನಿರ್ಣೀತಾರ್ಥಾನುಸಾರಿ ಹಿ= ನಿರ್ಣೀತವಾದ ಅರ್ಥಕ್ಕೆ ಅನುಸಾರವಾಗಿಯೇ ಒಯ್ಯಲ್ಪಡುವುದಷ್ಟೇ?

**ಅನುವಾದ-** ಅನೇಕಾರ್ಥವಿರುವ ಶಬ್ದವನ್ನು ಒಂದು ಅರ್ಥವು ಸರಿಹೊಂದದಿದ್ದಾಗ ಇನ್ನೊಂದು ಅರ್ಥದಲ್ಲಿ ಕೊಂಡೊಯ್ಯಬಹುದು. ಶಬ್ದಕ್ಕೆ ಅರ್ಥವು ನಿರ್ಣೀತವಾಗಿದ್ದಲ್ಲಿ ಆ ಅರ್ಥವನ್ನು ನಿರಾಕರಿಸಿ ಕೊಂಡೊಯ್ಯಲಾಗದು. 'ಪುತ್ರೋ ನ ಪುತ್ರೀ' ಎಂಬ ಐಕ್ಯವು ನಿರ್ಣೀತವಾದ ಅರ್ಥಕ್ಕೆ ಅನುಸಾರವಾಗಿಯೇ ಕೊಂಡೊಯ್ಯಲ್ಪಡುವುದಷ್ಟೇ!

**ಭಾವವಿಲಾಸಿನೀ-** ಭಿದಾಂ ನ ಪಶ್ಯತೀತಿ ಶಬ್ದಮಾತ್ರಬಲಾತ್ ತ್ರಿದೇವತೈಕ್ಯಂ ವದತಾಮಪ್ರೌಢಿಂ ದರ್ಶಯತಿ ॥ ಶಬ್ದ ಇತಿ ॥ ಶಬ್ದೋಽನೇಕಾರ್ಥೀನೇಯಃ ಏಕಾರ್ಥಾಯೋಗೇಽನ್ಯಾರ್ಥೇಪಿ ನೇತುಂ ಶಕ್ಯಃ । ನಾನಾರ್ಥಕತ್ವಾತ್ ಶಬ್ದಾನಾಮ್ । ನಿರ್ಣೀತೋರ್ಥಃ ಸ್ವಾಮಿಭೃತ್ಯಭಾವೇನ ಪೂರ್ವೋತ್ತರಪ್ರಕರಣೇಷು ನಿಶ್ಚಿತಃ ಅಸ್ಮಿನ್ ಶ್ಲೋಕೇಪಿ ತತ್ ಸಮಾಖ್ಯಯಾತ್ರಯಾಣಾಮಿತಿ ಭೇದಸಾಪೇಕ್ಷತ್ರಿತ್ವೋಕ್ತ್ಯಾ ಏತತ್‌ಶ್ಲೋಕಾರ್ಥ ವಕ್ತೃಮೈತ್ರೇಯದೃಷ್ಟ್ಯಾ ನಿಶ್ಚಿತೋ ಬ್ರಹ್ಮವಿಷ್ಣು-ಶಿವಾನಾಮನ್ಯೋನ್ಯಾ ಭಾವರೂಪಾರ್ಥಃ ಕ್ವನೀಯತೇ ಕಥಂ ತಸ್ಯ ನಿಷೇಧಃ ಕ್ರಿಯತೇ । ಅಂತರ್ಯಾಮಿಪಕ್ಷೇಽಸ್ಮಾಕಂ ತ್ರಿತ್ವೋಕ್ತಿಸ್ತು ವಿಶೇಷಬಲಾದನ್ಯಪಕ್ಷೇ ಭೇದಬಲಾತ್ । ಪರಸ್ಯತು ನಿರ್ವಿಶೇಷವಾದಿನಃ ಸರ್ವತ್ರ ಭೇದಬಲಾದೇವ । ಅತಸ್ತ್ರಿತ್ವಕಥನಾತ್ ಕಥಂ ನ ಭೇದನಿಶ್ಚಯಃ । ಕಿಂಚ ಪರಮತೇ ಸರ್ವಭೂತಾತ್ಮನಾಮಿತಿ ಸರ್ವಭೂತೈಕ್ಯಕಥನಾತ್ ತ್ರಯಾಣಾಮೇವ ಭೇದ ಪ್ರತಿಷೇಧೇ ಕಾರಣಾಭಾವಾಚ್ಚ । ಅತೋಽನ್ಯತ್ರ ಸಂಭಾವಿತ ವಿರೋಧ ರೂಪಭೇದಸ್ಯ ಜಿತಮನಸ್ಕೇಷ್ವೇಷು ಪ್ರತಿಷೇಧ ಇತ್ಯೇವ ಪರೇಣಾಪಿ ವಕ್ತುಮುಚಿತಮಿತಿ ಭಾವಃ । ಅನೇಕಾರ್ಥ-ಶಬ್ದಸ್ಯ ನಿರ್ಣೀತಾರ್ಥಾನುಸಾರಿತ್ವಂ ದೃಷ್ಟಾಂತೇನ ಘಟಯತಿ ॥ ಪುತ್ರ ಇತಿ ॥ ಕಶ್ಚಿದಲ್ಪಶಕುನಜ್ಞಃ ಗರ್ಭಸ್ಥಶಿಶುಃ ಪುತ್ರೋವಾಪುತ್ರೀವೇತಿ ವಿಚಾರಿತೇ ಸತಿ ಪುತ್ರೇತಿವಾಕ್ಯಂ ಪ್ರಯುಂಕ್ತೇ । ತದ್ಧಿ ನಞಃ ಪೂರ್ವಪದಯೋಗೇಪುತ್ರೀತ್ವಮೇವಸ್ಥಾಪಯತಿ । ಉತ್ತರಪದಯೋಗೇ ಚ ಪುತ್ರತ್ವಮೇವ ಸ್ಥಾಪಯತಿ । ಅತಃ ಪುತ್ರೇಜಾತೇ ತದನುಕೂಲತಯಾ ತದ್ವಾಕ್ಯಂ ವ್ಯಾಖ್ಯಾತಿ । ಪುತ್ರ್ಯಾಂ ಚ ಜಾತಾಯಾಂ ತದನುಕೂಲತಯೈವ ವ್ಯಾಖ್ಯಾತಿ ತಥಾ ಚ ವಾಕ್ಯಸ್ಯ ನಿರ್ಣೀತಾರ್ಥಾನುಸಾರಿತ್ವ-ಮತ್ರೈವ ಪ್ರಸಿದ್ಧಮಿತಿ ಭಾವಃ ॥ ೩೩೩ ॥

**ವಿವರಣೆ-** ಯೋ ನ ಪಶ್ಯತಿ ವೈಭಿದಾಂ ಎಂಬಲ್ಲಿರುವ ಭಿದಾ ನಿಷೇಧ ಮಾತ್ರದಿಂದ ಮೂರು ದೇವತೆಗಳ ಐಕ್ಯವನ್ನು ಹೇಳುವವರ ಅಕೌಶಲವನ್ನು ಗ್ರಂಥಕಾರರು ಇಲ್ಲಿ ಸ್ಪಷ್ಟಪಡಿಸುತ್ತಾರೆ. ಅನೇಕಾರ್ಥವಿರುವ ಶಬ್ದವನ್ನು ಒಂದು ಅರ್ಥವು ಸರಿಹೊಂದದಿದ್ದರೆ ಇನ್ನೊಂದು ಅರ್ಥದಲ್ಲಿ ತೆಗೆದುಕೊಂಡು ಹೋಗಬಹುದು. ಭೇದಶಬ್ದಕ್ಕೆ ಅನೇಕ ಅರ್ಥ ಇರುವುದರಿಂದ ಭೇದವಿಲ್ಲ ಎಂದರೆ ಅನ್ಯೋನ್ಯಾಭಾವವನ್ನು ನಿಷೇಧ ಮಾಡಲು ಬರದಿದ್ದರೆ ವಿರೋಧವನ್ನಾಗಲೀ, ಭ್ರಾಂತಿಯನ್ನಾಗಲೀ ಅಥವಾ ಭೇದಶಬ್ದದ ಇತರ ಅರ್ಥಗಳನ್ನಾಗಲೀ

ನಿಷೇಧ ಮಾಡಬಹುದು. ಈ ಪ್ರಕರಣದಲ್ಲಿ ಹಿಂದಿನ ವಾಕ್ಯಗಳಿಂದಲೂ, ಮುಂದಿನ ವಾಕ್ಯಗಳಿಂದಲೂ ಭೇದವು ನಿರ್ಣೀತವಾಗಿರುವಾಗ ಮತ್ತು ಇದೇ ವಾಕ್ಯದಲ್ಲಿ ತ್ರಯಾಣಾಂ ಎಂದು ಭೇದವ್ಯಾಪ್ತವಾದ ತ್ರಿತ್ವವನ್ನು ಹೇಳಿರುವುದರಿಂದ ಅಂತಹ ಭೇದವನ್ನು ನಿರಾಕರಿಸಲು ಸಾಧ್ಯವಿಲ್ಲ, ಅಂತರ್ಯಾಮಿಯ ವಿವಕ್ಷೆಯನ್ನು ಮಾಡುವ ನಾವು ವಿಶೇಷ ಬಲದಿಂದ ತ್ರಿತ್ವವನ್ನು ಕೂಡಿಸುತ್ತೇವೆ. ಅದೂ ಅಲ್ಲದೆ ತ್ರಯಾಣಾಂ ಏಕಭಾವಾನಾಂ ಎಂದು ಮೂರೇ ವ್ಯಕ್ತಿಗಳಿಗೆ ಅಭೇದವನ್ನು ಹೇಳುವುದು ಪರಮತದಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಅದೇ ಶ್ಲೋಕದಲ್ಲಿಯೇ ಸರ್ವಭೂತಾತ್ಮನಾಂ ಎಂದು ಹೇಳಿ ನಿನ್ನ ರೀತಿಯಲ್ಲಿ ಸರ್ವಭೂತೈಕ್ಯವು ಹೇಳಲ್ಪಡುತ್ತದೆ. ಆದ್ದರಿಂದ ಕೇವಲ ಮೂವರಿಗೆ ಭೇದಪ್ರತಿಷೇದವನ್ನು ಮಾಡುವುದು ಸಂಗತ ವಾಗುವುದಿಲ್ಲ. ಆದ್ದರಿಂದ ಪರನಾದರೂ ಬೇರೆಯವರಲ್ಲಿಯೇ ಕಂಡು ಬರುವ ವಿರೋಧವು ಜಿತಮನಸ್ಕರಾದ ಈ ಮೂವರಲ್ಲಿ ಕಂಡುಬರುವುದಿಲ್ಲ ಎಂದು ಭೇದಶಬ್ದಕ್ಕೆ ವಿರೋಧ ಎಂಬ ಅರ್ಥವನ್ನೇ ಹೇಳಬೇಕು. ಅನೇಕಾರ್ಥವಾದ ಶಬ್ದಕ್ಕೆ ನಿರ್ಣೀತಾರ್ಥಕ್ಕೆ ಅನುಸಾರವಾಗಿ ಅರ್ಥವನ್ನು ಹೇಳುವ ವಿಷಯದಲ್ಲಿ ಗ್ರಂಥಕಾರರು ಒಂದು ಗಾದೆಯನ್ನು ಹೇಳುತ್ತಾರೆ. ಒಬ್ಬ ಅಲ್ಪಜ್ಞಾನವುಳ್ಳ ಜ್ಯೋತಿಷಿಯ ಬಳಿಗೆ ಒಬ್ಬ ಗರ್ಭಿಣೀ ವನಿತೆಯು ಹೋಗಿ ಎಂತಹ ಮಗು ಜನಿಸುತ್ತದೆ ಎಂದು ಕೇಳಿದರೆ, ಅವನು ಪುತ್ರೋ ನ ಪುತ್ರೀ ಎಂದು ಹೇಳುತ್ತಾನೆ. ಗಂಡು ಮಗು ಹುಟ್ಟಿದರೆ ಅವನು ಪುತ್ರಃ= ಪುತ್ರನು ಹುಟ್ಟುತ್ತಾನೆ, ನ ಪುತ್ರೀ= ಪುತ್ರಿಯು ಅಲ್ಲ ಎಂದು ತಾನು ಹೇಳಿದ ವಾಕ್ಯಕ್ಕೆ ಅರ್ಥ ಎಂದು ಹೇಳುತ್ತಾನೆ. ಹೆಣ್ಣು ಮಗು ಹುಟ್ಟಿದರೆ ಪುತ್ರೋ ನ= ಮಗನಲ್ಲ, ಪುತ್ರೀ= ಮಗಳು ಎಂದು ತಾನು ಹೇಳಿದ ವಾಕ್ಯಕ್ಕೆ ಅರ್ಥ ಎಂದು ಹೇಳುತ್ತಾನೆ. ಅವನು ಹೇಗೆ ನಿರ್ಣೀತವಾದ ಪುತ್ರ ಅಥವಾ ಪುತ್ರಿಯ ಜನ್ಮವನ್ನು ನೋಡಿ ಅವನ ವಾಕ್ಯಕ್ಕೆ ವಿರೋಧವು ಬರದಂತೆ ಅರ್ಥವನ್ನು ಹೇಳುತ್ತಾನೋ, ಅದರಂತೆ ಈ ಪ್ರಕರಣದಲ್ಲಿ ಎಲ್ಲ ಕಡೆಗಳಲ್ಲೂ ನಿರ್ಣೀತವಾದ ಭೇದವನ್ನು ಅನುಸರಿಸಿ ಭೇದ ನಿಷೇಧಶಬ್ದಕ್ಕೆ ಅರ್ಥಾಂತರವನ್ನು ಹೇಳಬೇಕು ಎಂದು ಅಭಿಪ್ರಾಯ.

**ಅತೋ ನಿರ್ವಿಷರಾಶಿಸ್ಥೋ ವಿಷಬಿಂದುಶ್ಚ ನಿರ್ವಿಷಂ ।**
**ಗ್ರಂಥೇಸ್ಮಿನ್ನೇವ ಯದ್ ಬಹ್ವೀ ತ್ರಯಾಣಾಂ ಭೇದವಾಕ್ ಸ್ಫುಟಾ ॥ ೩೩೪ ॥**

**ಅರ್ಥ-** ಅತಃ= ಆ ಕಾರಣದಿಂದ, ನಿರ್ವಿಷರಾಶಿಸ್ಥಃ= ವಿಷರಹಿತವಾದ ಒಂದು ರಾಶಿಯಲ್ಲಿರುವ, ವಿಷಬಿಂದುಶ್ಚ= ಒಂದು ವಿಷಬಿಂದುವೂ, ನಿರ್ವಿಷಂ= ನಿರ್ವಿಷವಾಗುತ್ತದೆ. ಯತ್= ಏಕೆಂದರೆ, ಅಸ್ಮಿನ್ ಏವ ಗ್ರಂಥೇ= ಈ ಗ್ರಂಥದಲ್ಲಿಯೇ, ತ್ರಯಾಣಾಂ= ಬ್ರಹ್ಮ ವಿಷ್ಣು ಮಹೇಶ್ವರರಿಗೆ, ಬಹ್ವೀ= ಅನೇಕವಾದ, ಸ್ಫುಟಾ= ಸ್ಪಷ್ಟವಾದ, ಭೇದವಾಕ್= ಭೇದವಾಕ್ಯಗಳಿವೆ.

**ಅನುವಾದ-** ಆದ್ದರಿಂದ ನಿರ್ವಿಷರಾಶಿಯಲ್ಲಿ ಬಿದ್ದ ಒಂದು ವಿಷದ ಬಿಂದುವು ನಿರ್ವಿಷವಾಗುತ್ತದೆ. ಏಕೆಂದರೆ ಈ ಗ್ರಂಥದಲ್ಲಿಯೇ ಮೂರು ದೇವತೆಗಳಿಗೆ ಸ್ಪಷ್ಟವಾಗಿ ಭೇದವನ್ನು ಹೇಳುವ ಅನೇಕ ವಾಕ್ಯಗಳು ಇವೆ.

**ಭಾವವಿಲಾಸಿನೀ–** ಭಾಗವತಶ್ಲೋಕಾರ್ಥಕಥನಮುಪಸಂಹರನ್ ಪುನರ್ನಿದರ್ಶ- ನಾಂತರಮಪ್ಯಾಹ – **ಅತ ಇತಿ ॥** ಯದ್ಯಸ್ಮಾತ್ । ಭೇದವಾಕ್ ಬಹ್ವೀಸ್ಫುಟಾ ಚ । ಅತೋ ನಿರ್ವಿಷರಾಶಿಸ್ಥ ವಿಷಬಿಂದುರ್ಯಥಾನಿರ್ವಿಷಮೇವ ಭವತಿ । ತಥಾ ಇದಮಪಿ ವಾಕ್ಯಂ ಪೂರ್ವೋತ್ತರಬಹುತರ ಭೇದವಾಕ್ಯಘಾತಕಂ ನ ಭವತೀತಿ ಭಾವಃ ॥ ೩೩೪ ॥

**ವಿವರಣೆ–** ಭಾಗವತ ಶ್ಲೋಕದ ವ್ಯಾಖ್ಯಾನವನ್ನು ಉಪಸಂಹಾರ ಮಾಡುತ್ತಾ ಇನ್ನೊಂದು ನಿದರ್ಶನವನ್ನು ಕೊಡುತ್ತಾರೆ. ನಾವು ಅಂಗೀಕಾರ ಮಾಡುವ ಭೇದವನ್ನು ತ್ರಯಾಣಾಂ ಎಂಬ ವಾಕ್ಯವು ಆಪಾತತಃ ನಿಷೇಧ ಮಾಡುವಂತೆ ತೋರುವುದರಿಂದ ಈ ವಾಕ್ಯವು ವಿಷಸದೃಶವಾಗಿದೆ. ಆದರೆ ಹಿಂದಿನ ಮುಂದಿನ ವಾಕ್ಯಗಳೆಲ್ಲವೂ ನಿರ್ವಿಷವಾಗಿರುವುದರಿಂದ ಈ ವಾಕ್ಯವೂ ಸಹ ತನ್ನ ವಿಷವನ್ನು ಕಳೆದುಕೊಂಡು ಎಂದರೆ ಭೇದವನ್ನು ನಿಷೇಧ ಮಾಡದೆ, ವಿರೋಧಾದಿಗಳನ್ನೇ ನಿಷೇಧ ಮಾಡುತ್ತದೆ. ಆದ್ದರಿಂದ ಈ ಭಾಗವತ ವಾಕ್ಯದಿಂದಲೂ ಅಭೇದವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಶೃಣುದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಾತ್ ।**
**ಯೇಷಾಂ ಶ್ರವಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ ॥ ೩೩೫ ॥**

**ಅರ್ಥ-** ದೇವಿ= ಎಲೌ ಪಾರ್ವತಿಯೇ, ಯೇಷಾಂ= ಯಾವುದರ, ಶ್ರವಣಮಾತ್ರೇಣ= ಕೇವಲ ಶ್ರವಣದಿಂದ, ಜ್ಞಾನಿನಾಮಪಿ= ಜ್ಞಾನಿಗಳಿಗೂ ಸಹ, ಪಾತಿತ್ಯಂ= ಪಾತಿತ್ಯ ಉಂಟಾಗುವುದೋ, ಅಂತಹ, ತಾಮಸಾನಿ= ತಾಮಸ ಪುರಾಣಗಳನ್ನು, ಯಥಾ ಕ್ರಮಾತ್= ಒಂದು ಕ್ರಮವನ್ನು ಅನುಸರಿಸಿ, ಪ್ರವಕ್ಷ್ಯಾಮಿ= ಹೇಳುವೆನು, ಶೃಣು= ಕೇಳು.

**ಅನುವಾದ-** ದೇವಿಯೇ, ಯಾವ ಪುರಾಣಗಳನ್ನು ಕೇವಲ ಶ್ರವಣ ಮಾಡುವುದರಿಂದ ಜ್ಞಾನಿಗಳಿಗೂ ಪಾತಿತ್ಯ ಉಂಟಾಗುವುದೋ ಅಂತಹ ತಾಮಸ ಪುರಾಣಗಳನ್ನು ಒಂದು ಕ್ರಮವನ್ನು ಅನುಸರಿಸಿ ಹೇಳುವೆನು, ಅದನ್ನು ನೀನು ಕೇಳು.

**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ತು ಷಡೇತಾನಿ ತಾಮಸಾನಿ ನಿಬೋಧ ಮೇ ॥ ೩೩೬ ॥**

**ಅರ್ಥ-** ಮಾತ್ಸ್ಯಂ= ಮತ್ಸ್ಯ ಪುರಾಣ, ಕೌರ್ಮಂ= ಕೂರ್ಮ ಪುರಾಣ, ತಥಾ= ಆದರಂತೆ, ಲೈಂಗಂ= ಲಿಂಗಪುರಾಣ, ಶೈವಂ= ಶಿವಪುರಾಣ, ತಥೈವ= ಆದರಂತೆ, ಸ್ಕಾಂದಂ

ಚ= ಸ್ಕಾಂದ ಪುರಾಣ, ಆಗ್ನಿಯಂ ತು= ಮತ್ತು ಆಗ್ನೇಯ ಪುರಾಣ, ಏತಾನಿ ಷಡ್= ಈ ಆರು, ತಾಮಸಾನಿ= ತಾಮಸ ಪುರಾಣಗಳೆಂದು, ಮೇ= ನನ್ನಿಂದ, ನಿಬೋಧ= ತಿಳಿ.

**ಅನುವಾದ-** ಮತ್ಸ್ಯ ಪುರಾಣ, ಕೂರ್ಮ ಪುರಾಣ, ಲಿಂಗ ಪುರಾಣ, ಶಿವ ಪುರಾಣ, ಸ್ಕಾಂದ ಪುರಾಣ ಮತ್ತು ಅಗ್ನಿಯ ಪುರಾಣ, ಈ ಆರು ಪುರಾಣಗಳನ್ನು ತಾಮಸ ಪುರಾಣಗಳೆಂದು ತಿಳಿ.

ವೈಷ್ಣವಂ ನಾರದೀಯಂ ತು ತಥಾ ಭಾಗವತಂ ಶುಭಂ ।
ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ ॥ ೩೩೭ ॥

ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ ॥ ೩೩೮ ॥

**ಅರ್ಥ-** ಶುಭದರ್ಶನೇ= ಎಲೌ ಶುಭದರ್ಶನಳೇ, ವೈಷ್ಣವಂ= ವಿಷ್ಣುಪುರಾಣ, ನಾರದೀಯಂ= ನಾರದೀಯ ಪುರಾಣ, ತಥಾ= ಅದರಂತೆ, ಶುಭಂ= ಪವಿತ್ರವಾದ, ಭಾಗವತಂ= ಭಾಗವತ ಪುರಾಣ, ಗಾರುಡಂ= ಗರುಡ ಪುರಾಣ, ಚ= ಮತ್ತು, ತಥಾ= ಅದರಂತೆ, ಪಾದ್ಮಂ= ಪಾದ್ಮಪುರಾಣ, ವಾರಾಹಂ= ವರಾಹ ಪುರಾಣ, ಈ ಪುರಾಣಗಳನ್ನು, ಸಾತ್ವಿಕಾನಿ ಪುರಾಣಾನಿ= ಸಾತ್ವಿಕ ಪುರಾಣಗಳೆಂದೂ, ಶುಭಾನಿ= ಮಂಗಳಪ್ರದವೆಂದೂ, ವಿಜ್ಞೇಯಾನಿ= ತಿಳಿಯಬೇಕು.

**ಅನುವಾದ-** ಎಲೌ ಶುಭದರ್ಶನಳೇ! ವಿಷ್ಣುಪುರಾಣ, ನಾರದೀಯ ಪುರಾಣ, ಮಂಗಳವಾದ ಭಾಗವತ ಪುರಾಣ, ಗರುಡ ಪುರಾಣ, ಪದ್ಮಪುರಾಣ ಮತ್ತು ವರಾಹ ಪುರಾಣ, ಈ ಪುರಾಣಗಳನ್ನು ಮಂಗಳಪ್ರದವಾದ ಸಾತ್ವಿಕಪುರಾಣ ಗಳೆಂದು ತಿಳಿಯಬೇಕು.

ಬ್ರಹ್ಮಾಂಡಂ ಬ್ರಹ್ಮವೈವತಂ ಮಾರ್ಕಾಂಡೇಯಂ ತಥೈವ ಚ ।
ಭವಿಷ್ಯದ್ ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ॥ ೩೩೯ ॥

**ಅರ್ಥ-** ಬ್ರಹ್ಮಾಂಡಂ= ಬ್ರಹ್ಮಾಂಡ ಪುರಾಣ, ಬ್ರಹ್ಮವೈವತಂ= ಬ್ರಹ್ಮವೈವತ ಪುರಾಣ, ಅಥೈವ= ಆದರಂತೆ, ಮಾರ್ಕಾಂಡೇಯಂ= ಮಾರ್ಕಾಂಡೇಯ ಪುರಾಣ, ಭವಿಷ್ಯತ್= ಭವಿಷ್ಯತ್ ಪುರಾಣ, ವಾಮನಂ= ವಾಮನ ಪುರಾಣ, ಮತ್ತು, ಬ್ರಾಹ್ಮಂ= ಬ್ರಹ್ಮಪುರಾಣ, ಈ ಪುರಾಣಗಳು, ರಾಜಸಾನಿ= ರಾಜಸ ಪುರಾಣಗಳೆಂದು, ಮೇ= ನನ್ನಿಂದ, ನಿಬೋಧ= ತಿಳಿ.

**ಅನುವಾದ-** ಬ್ರಹ್ಮಾಂಡ ಪುರಾಣ, ಬ್ರಹ್ಮವೈವತ ಪುರಾಣ, ಮಾರ್ಕಾಂಡೇಯ ಪುರಾಣ, ಭವಿಷ್ಯತ್ ಪುರಾಣ, ವಾಮನ ಪುರಾಣ, ಬ್ರಹ್ಮಪುರಾಣ, ಈ ಪುರಾಣಗಳು ರಾಜಸ ಪುರಾಣಗಳೆಂದು ನನ್ನಿಂದ ತಿಳಿ.

**ಸಾತ್ವಿಕಾ ಮೋಕ್ಷದಾಃ ಪ್ರೋಕ್ತಾ ರಾಜಸಾಃ ಸ್ವರ್ಗದಾಃ ಶುಭಾಃ ।**
**ತಥೈವ ತಾಮಸಾ ದೇವಿ ನಿರಯಪ್ರಾಪ್ತಿಹೇತವಃ ॥ ೩೪೦ ॥**

**ಅರ್ಥ-** ದೇವಿ= ಎಲೌ ಪಾರ್ವತಿಯೇ, ಸಾತ್ವಿಕಾಃ= ಸಾತ್ವಿಕ ಪುರಾಣಗಳು, ಮೋಕ್ಷದಾಃ= ಮೋಕ್ಷಪ್ರದವೆಂದು, ಪ್ರೋಕ್ತಾಃ= ಹೇಳಲ್ಪಡುತ್ತವೆ, ಶುಭಾಃ= ಶುಭವಾದ, ರಾಜಸಾಃ= ರಾಜಸ ಪುರಾಣಗಳು, ಸ್ವರ್ಗದಾಃ= ಸ್ವರ್ಗಪ್ರದವೆಂದು ಹೇಳಲ್ಪಡುತ್ತದೆ, ತಥೈವ= ಅದರಂತೆ, ತಾಮಸಾ= ತಾಮಸ ಪುರಾಣಗಳು, ನಿರಯಪ್ರಾಪ್ತಿಹೇತವಃ= ನರಕ ಪ್ರಾಪ್ತಿಗೆ ಕಾರಣವಾಗಿವೆ.

**ಅನುವಾದ- ಎಲೌ ದೇವಿಯೇ, ಸಾತ್ವಿಕ ಪುರಾಣಗಳು ಮೋಕ್ಷಪ್ರದವೆಂದು ಹೇಳಲ್ಪಡುತ್ತವೆ, ಶುಭವಾದ ರಾಜಸ ಪುರಾಣಗಳು ಸ್ವರ್ಗಪ್ರದವೆಂದು ಹೇಳಲ್ಪಡುತ್ತವೆ ಅದರಂತೆ ತಾಮಸ ಪುರಾಣಗಳು ನರಕ ಪ್ರಾಪ್ತಿಗೆ ಕಾರಣವೆಂದು ಹೇಳಲ್ಪಡುತ್ತವೆ.**

**ತಥೈವ ಸ್ಮೃತಯಃ ಪ್ರೋಕ್ತಾ ಋಷಿಭಿಸ್ತ್ರಿಗುಣಾನ್ವಿತಾಃ ।**
**ಸಾತ್ವಿಕಾ ರಾಜಸಾಶ್ಚೈವ ತಾಮಸಾಃ ಶುಭದರ್ಶನೇ ॥ ೩೪೧ ॥**

**ಅರ್ಥ-** ಶುಭದರ್ಶನೇ= ಎಲೌ ಸುಂದರಿಯೇ, ತಥೈವ= ಅದರಂತೆ, ಋಷಿಭಿಃ= ಋಷಿಗಳಿಂದ, ತ್ರಿಗುಣಾನ್ವಿತಾಃ= ಮೂರು ಗುಣಗಳಿಂದ ಕೂಡಿದ, ಸಾತ್ವಿಕಾ ರಾಜಸಾ ತಾಮಸಾಶ್ಚ= ಸಾತ್ವಿಕ, ರಾಜಸ, ತಾಮಸಗಳಾದ, ಸ್ಮೃತಯಃ= ಸ್ಮೃತಿಗಳೂ ಸಹ, ಪ್ರೋಕ್ತಾಃ= ಹೇಳಲ್ಪಟ್ಟಿವೆ.

**ಅನುವಾದ- ಎಲೌ ಸುಂದರಿಯೇ, ಹಾಗೆಯೇ ಋಷಿಗಳಿಂದ ಸತ್ತ್ವರಜಸ್ತಮೋಗುಣ ಗಳಿಂದ ಕೂಡಿದ ಸಾತ್ವಿಕ, ರಾಜಸ ಮತ್ತು ತಾಮಸ ಸ್ಮೃತಿಗಳು ಹೇಳಲ್ಪಟ್ಟಿವೆ.**

**ವಾಸಿಷ್ಠಂ ಚೈವ ಹಾರೀತಂ ವ್ಯಾಸಂ ಪಾರಾಶರಂ ತಥಾ ।**
**ಭಾರದ್ವಾಜಂ ಕಾಶ್ಯಪಂ ಚ ಸಾತ್ವಿಕಾ ಮುಕ್ತಿದಾಃ ಶುಭಾಃ ॥ ೩೪೨ ॥**

**ಅರ್ಥ-** ವಾಸಿಷ್ಠಂ= ವಾಸಿಷ್ಠ ಸ್ಮೃತಿ, ಹಾರೀತಂ= ಹಾರೀತ ಸ್ಮೃತಿ, ವ್ಯಾಸಂ= ವ್ಯಾಸ ಸ್ಮೃತಿ, ಪಾರಾಶರಂ= ಪರಾಶರ ಸ್ಮೃತಿ, ತಥಾ= ಅದರಂತೆ, ಭಾರದ್ವಾಜಂ= ಭರದ್ವಾಜ ಸ್ಮೃತಿ, ಚ= ಮತ್ತು, ಕಾಶ್ಯಪಂ= ಕಾಶ್ಯಪ ಸ್ಮೃತಿಯು, ಸಾತ್ವಿಕಾಃ= ಸಾತ್ವಿಕಗಳಾಗಿ, ಶುಭಾಃ= ಮಂಗಳಪ್ರದವೂ, ಮುಕ್ತಿದಾಃ= ಮೋಕ್ಷಪ್ರದವೂ ಆಗಿವೆ.

**ಅನುವಾದ- ವಾಸಿಷ್ಠ, ಹಾರೀತ, ವ್ಯಾಸ, ಪಾರಾಶರ, ಭಾರದ್ವಾಜ ಮತ್ತು ಕಾಶ್ಯಪ ಈ ಆರು ಸ್ಮೃತಿಗಳು ಸಾತ್ವಿಕಗಳೆನಿಸಿ ಶುಭಗಳೂ, ಮೋಕ್ಷಪ್ರದವೂ ಆಗಿವೆ.**

**ವಾಮನಂ ಯಾಜ್ಞವಲ್ಕ್ಯಂ ಚ ಆತ್ರೇಯಂ ದಾಕ್ಷ್ಯಮೇವ ಚ ।**
**ಕಾತ್ಯಾಯನಂ ವೈಷ್ಣವಂ ಚ ರಾಜಸಾಃ ಸ್ವರ್ಗದಾಃ ಶುಭಾಃ ॥ ೩೪೩ ॥**

**ಅರ್ಥ-** ವಾಮನಂ= ವಾಮನ ಸ್ಮೃತಿ, ಯಾಜ್ಞವಲ್ಕ್ಯಂ= ಯಾಜ್ಞವಲ್ಕ್ಯ ಸ್ಮೃತಿ, ಆತ್ರೇಯಂ= ಆತ್ರೇಯ ಸ್ಮೃತಿ, ದಾಕ್ಷ್ಯಂ= ದಕ್ಷಸ್ಮೃತಿ, ಕಾತ್ಯಾಯನಂ= ಕಾತ್ಯಾಯನ ಸ್ಮೃತಿ, ಚ= ಮತ್ತು, ವೈಷ್ಣವಂ= ವಿಷ್ಣುಸ್ಮೃತಿ, ಇವುಗಳು, ರಾಜಸಾಃ= ಈ ರಾಜಸಸ್ಮೃತಿಗಳು, ಶುಭಾಃ= ಶುಭಗಳೆಂದೂ, ಸ್ವರ್ಗದಾಃ= ಸ್ವರ್ಗಪ್ರದಗಳೆಂದೂ ಹೇಳಲ್ಪಟ್ಟಿವೆ.

**ಅನುವಾದ- ವಾಮನ, ಯಾಜ್ಞವಲ್ಕ್ಯ, ಆತ್ರೇಯ, ದಾಕ್ಷ್ಯ, ಕಾತ್ಯಾಯಾನ, ವಿಷ್ಣು ಸ್ಮೃತಿ, ಈ ಆರು ಸ್ಮೃತಿಗಳು ಶುಭಗಳೆಂದೂ, ಸ್ವರ್ಗಪ್ರದಗಳೂ ಆಗಿ ರಾಜಸಗಳೆಂದು ಹೇಳಲ್ಪಡುತ್ತವೆ.**

**ಗೌತಮಂ ಬಾರ್ಹಸ್ಪತ್ಯಂ ಚ ಸಾಂವರ್ತಂ ಚ ಯಮಸ್ಮೃತಂ ।**
**ಶಾಂಖಂ ಚೌಶನಸಂ ದೇವಿ ತಾಮಸಾ ನಿರಯಪ್ರದಾಃ ॥ ೩೪೪ ॥**

**ಅರ್ಥ-** ದೇವಿ= ಎಲೌ ದೇವಿಯೇ, ಗೌತಮಂ= ಗೌತಮ ಸ್ಮೃತಿ, ಬಾರ್ಹಸ್ಪತ್ಯಂ= ಬಾರ್ಹಸ್ಪತ್ಯ ಸ್ಮೃತಿ, ಸಾಂವರ್ತಂ= ಸಾಂವರ್ತ ಸ್ಮೃತಿ, ಯಮಸ್ಮೃತಂ= ಯಮಸ್ಮೃತಿ, ಶಾಂಖಂ= ಶಂಖಸ್ಮೃತಿ, ಚೌಶನಸಂ= ಮತ್ತು ಶುಕ್ರಸ್ಮೃತಿಗಳು, ನಿರಯಪ್ರದಾಃ= ನರಕವನ್ನು ಕೊಡುವಂತಹವುಗಳಾಗಿ, ತಾಮಸಾಃ= ತಾಮಸ ಸ್ಮೃತಿಗಳು ಎನಿಸಿಕೊಳ್ಳುತ್ತವೆ.

**ಅನುವಾದ- ಎಲೌ ದೇವಿಯೇ, ಗೌತಮ ಸ್ಮೃತಿ, ಬೃಹಸ್ಪತಿ ಸ್ಮೃತಿ, ಸಂವರ್ತ ಸ್ಮೃತಿ, ಯಮಸ್ಮೃತಿ, ಶಂಖ ಸ್ಮೃತಿ ಮತ್ತು ಶುಕ್ರ ಸ್ಮೃತಿ ಇವು ನರಕಪ್ರದವಾದ ಕಾರಣದಿಂದ ತಾಮಸ ಸ್ಮೃತಿಗಳು ಎನಿಸಿಕೊಳ್ಳುತ್ತವೆ.**

**ಕಿಮತ್ರ ಬಹುನೋಕ್ತೇನ ಪುರಾಣೇಷು ಸ್ಮೃತಿಷ್ವಪಿ ।**
**ತಾಮಸಾ ನಿರಯಾಯೈವ ವರ್ಜಯೇತ್ ತಾನ್ ವಿಚಕ್ಷಣಃ ॥ ೩೪೫ ॥**

**ಅರ್ಥ-** ಅತ್ರ= ಈ ವಿಷಯದಲ್ಲಿ, ಬಹುನೋಕ್ತೇನ= ಬಹಳ ಮಾತುಗಳಿಂದ, ಕಿಂ= ಏನು ಪ್ರಯೋಜನ, ಪುರಾಣೇಷು= ಪುರಾಣಗಳಲ್ಲಿಯೂ, ಸ್ಮೃತಿಷ್ವಪಿ= ಮತ್ತು ಸ್ಮೃತಿಗಳಲ್ಲಿಯೂ, ತಾಮಸಾಃ= ತಾಮಸವಾದವುಗಳು, ನಿರಯಾಯೈವ= ನರಕವನ್ನೇ ಫಲವಾಗಿ ಕೊಡುವಂತಹವು, ವಿಚಕ್ಷಣಃ= ವಿವೇಕಿಯಾದವನು, ತಾನ್= ಅವುಗಳನ್ನು, ವರ್ಜಯೇತ್= ಪರಿತ್ಯಜಿಸಬೇಕು.

**ಅನುವಾದ- ಈ ವಿಷಯದಲ್ಲಿ ಬಹಳ ಮಾತನಾಡಿ ಏನು ಪ್ರಯೋಜನ? ಪುರಾಣಗಳಲ್ಲಿ ಮತ್ತು ಸ್ಮೃತಿಗಳಲ್ಲಿ ಯಾವುದು ತಾಮಸವೋ ಅವೆಲ್ಲವೂ ನರಕವನ್ನೇ ಕೊಡುತ್ತವೆ. ವಿವೇಕಿಯಾದವನು ಅವುಗಳನ್ನು ಪರಿತ್ಯಜಿಸಬೇಕು.**

ಶಾಸ್ತ್ರಾಣ್ಯಪಿ ಚ ಸರ್ವಾಣಿ ತ್ರಿವಿಧಾನಿ ಮಹಾಮತೇ ॥ ೩೪೬ ॥

ಯಾನಿ ಸತ್ತ್ವಪರಂ ವಿಷ್ಣುಂ ವದಂತಿ ಪರಮೇಶ್ವರಂ ।
ತಾನಿ ಸರ್ವಾಣಿ ಶಾಸ್ತ್ರಾಣಿ ಸಾತ್ವಿಕಾನಿ ಮತಾನಿ ವೈ ॥ ೩೪೭ ॥

**ಅರ್ಥ-** ಮಹಾಮತೇ= ಎಲೈ ಮೇಧಾವಿಯಾದ ಗರುಡನೇ, ಸರ್ವಾಣಿ ಶಾಸ್ತ್ರಾಣ್ಯಪಿ= ಎಲ್ಲ ಶಾಸ್ತ್ರಗಳೂ ಸಹ, ತ್ರಿವಿಧಾನಿ= ಮೂರು ಬಗೆಯಾದವು, ಯಾನಿ= ಯಾವ ಶಾಸ್ತ್ರಗಳು, ಸತ್ತ್ವಪರಂ= ನಿರ್ದೋಷಗುಣ ಪರಿಪೂರ್ಣನಾದ, ವಿಷ್ಣುಂ= ವಿಷ್ಣುವನ್ನು, ಪರಮೇಶ್ವರಂ= ಸರ್ವೋತ್ತಮನೆಂದು, ವದಂತಿ= ಹೇಳುತ್ತವೆಯೋ, ತಾನಿ ಸರ್ವಾಣಿ ಶಾಸ್ತ್ರಾಣಿ= ಆ ಎಲ್ಲಾ ಶಾಸ್ತ್ರಗಳೂ, ಸಾತ್ವಿಕಾನಿ= ಸಾತ್ವಿಕಗಳೆಂದೇ, ಮತಾನಿ ವೈ= ತಿಳಿಯಲ್ಪಡುತ್ತವೆ.

**ಅನುವಾದ-** ಮೇಧಾವಿಯಾದ ಎಲೈ ಗರುಡನೇ! ಶಾಸ್ತ್ರಗಳೆಲ್ಲವೂ ಮೂರು ಬಗೆಯವು. ಅವುಗಳಲ್ಲಿ ಯಾವ ಶಾಸ್ತ್ರಗಳು ನಿರ್ದೋಷ ಗುಣಪರಿಪೂರ್ಣನಾದ ವಿಷ್ಣುವನ್ನು ಸರ್ವೋತ್ತಮನೆಂದು ಹೇಳುತ್ತವೆಯೋ ಆ ಎಲ್ಲ ಶಾಸ್ತ್ರಗಳು ಸಾತ್ತ್ವಿಕವೆಂದೇ ತಿಳಿಯಲ್ಪಡುತ್ತವೆ.

ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಂ ।
ಪರತ್ವೇನ ವದಚ್ಛಾಸ್ತ್ರಂ ರಾಜಸಂ ಪರಿಚಕ್ಷತೇ ॥ ೩೪೮ ॥

**ಅರ್ಥ-** ಪ್ರಜಾಪತಿಂ= ಬ್ರಹ್ಮನನ್ನು, ಚ= ಮತ್ತು, ಕೃಶಾನುಂ= ಅಗ್ನಿಯನ್ನು, ತಥಾ= ಅದರಂತೆ, ದೇವೀಂ= ದುರ್ಗೆಯನ್ನು, ಸರಸ್ವತೀಂ= ಸರಸ್ವತಿಯನ್ನು, ಪರತ್ವೇನ= ಸರ್ವೋತ್ತಮ ಎಂದು, ವದಚ್ಛಾಸ್ತ್ರಂ= ಹೇಳುವ ಶಾಸ್ತ್ರವನ್ನು, ರಾಜಸಂ ಪರಿಚಕ್ಷತೇ= ರಾಜಸವೆಂದು ಹೇಳುತ್ತಾರೆ.

**ಅನುವಾದ-** ಬ್ರಹ್ಮನನ್ನು, ಅಗ್ನಿಯನ್ನು, ದುರ್ಗೆಯನ್ನು ಹಾಗೂ ಸರಸ್ವತಿಯನ್ನು ಸರ್ವೋತ್ತಮ ವಸ್ತುವೆಂದು ಹೇಳುವ ಶಾಸ್ತ್ರಗಳನ್ನು ರಾಜಸವೆಂದು ಕರೆಯುತ್ತಾರೆ.

ಯಚ್ಛಾಸ್ತ್ರಂ ಲಿಂಗಪಾರಮ್ಯಂ ಪರಂ ದೇವಮುಮಾಪತಿಮ್ ।
ತಮಃಪ್ರವರ್ತಕಂ ವಕ್ತಿ ತತ್ ತಾಮಸಮುದಾಹೃತಮ್ ॥ ೩೪೯ ॥

**ಅರ್ಥ-** ಯಚ್ಛಾಸ್ತ್ರಂ= ಯಾವ ಶಾಸ್ತ್ರವು, ತಮಃ ಪ್ರವರ್ತಕಂ= ಅಜ್ಞಾನ ಪ್ರವರ್ತಕವಾದ, ಲಿಂಗಪಾರಮ್ಯಂ= ಲಿಂಗದ ಶ್ರೇಷ್ಠತೆಯನ್ನು ಹೇಳುತ್ತದೆಯೋ, ಮತ್ತು, ಉಮಾಪತಿಂ= ಪಾರ್ವತಿ ಪತಿಯನ್ನು, ಪರಂ ದೇವಂ= ಸರ್ವೋತ್ತಮದೇವನೆಂದು, ವಕ್ತಿ= ಹೇಳುತ್ತದೆಯೋ, ತತ್= ಅದು, ತಾಮಸಂ= ತಾಮಸವೆಂದು, ಉದಾಹೃತಂ= ಹೇಳಲ್ಪಡುತ್ತದೆ.

**ವಾಮನಂ ಯಾಜ್ಞವಲ್ಕ್ಯಂ ಚ ಆತ್ರೇಯಂ ದಾಕ್ಷ್ಯಮೇವ ಚ ।**
**ಕಾತ್ಯಾಯನಂ ವೈಷ್ಣವಂ ಚ ರಾಜಸಾಃ ಸ್ವರ್ಗದಾಃ ಶುಭಾಃ ॥ ೩೪೩ ॥**

**ಅರ್ಥ-** ವಾಮನಂ= ವಾಮನ ಸ್ಮೃತಿ, ಯಾಜ್ಞವಲ್ಕ್ಯಂ= ಯಾಜ್ಞವಲ್ಕ್ಯ ಸ್ಮೃತಿ, ಆತ್ರೇಯಂ= ಆತ್ರೇಯ ಸ್ಮೃತಿ, ದಾಕ್ಷ್ಯಂ= ದಕ್ಷಸ್ಮೃತಿ, ಕಾತ್ಯಾಯನಂ= ಕಾತ್ಯಾಯನ ಸ್ಮೃತಿ, ಚ= ಮತ್ತು, ವೈಷ್ಣವಂ= ವಿಷ್ಣುಸ್ಮೃತಿ, ಇವುಗಳು, ರಾಜಸಾಃ= ಈ ರಾಜಸಸ್ಮೃತಿಗಳು, ಶುಭಾಃ= ಶುಭಗಳೆಂದೂ, ಸ್ವರ್ಗದಾಃ= ಸ್ವರ್ಗಪ್ರದಗಳೆಂದೂ ಹೇಳಲ್ಪಟ್ಟಿವೆ.

**ಅನುವಾದ-** ವಾಮನ, ಯಾಜ್ಞವಲ್ಕ್ಯ, ಆತ್ರೇಯ, ದಾಕ್ಷ್ಯ, ಕಾತ್ಯಾಯಾನ, ವಿಷ್ಣು ಸ್ಮೃತಿ, ಈ ಆರು ಸ್ಮೃತಿಗಳು ಶುಭಗಳೆಂದೂ, ಸ್ವರ್ಗಪ್ರದಗಳೂ ಆಗಿ ರಾಜಸಗಳೆಂದು ಹೇಳಲ್ಪಡುತ್ತವೆ.

**ಗೌತಮಂ ಬಾರ್ಹಸ್ಪತ್ಯಂ ಚ ಸಾಂವರ್ತಂ ಚ ಯಮಸ್ಮೃತಂ ।**
**ಶಾಂಖಂ ಚೌಶನಸಂ ದೇವಿ ತಾಮಸಾ ನಿರಯಪ್ರದಾಃ ॥ ೩೪೪ ॥**

**ಅರ್ಥ-** ದೇವಿ= ಎಲೌ ದೇವಿಯೇ, ಗೌತಮಂ= ಗೌತಮ ಸ್ಮೃತಿ, ಬಾರ್ಹಸ್ಪತ್ಯಂ= ಬಾರ್ಹಸ್ಪತ್ಯ ಸ್ಮೃತಿ, ಸಾಂವರ್ತಂ= ಸಾಂವರ್ತ ಸ್ಮೃತಿ, ಯಮಸ್ಮೃತಂ= ಯಮಸ್ಮೃತಿ, ಶಾಂಖಂ= ಶಂಖಸ್ಮೃತಿ, ಚೌಶನಸಂ= ಮತ್ತು ಶುಕ್ರಸ್ಮೃತಿಗಳು, ನಿರಯಪ್ರದಾಃ= ನರಕವನ್ನು ಕೊಡುವಂತಹವುಗಳಾಗಿ, ತಾಮಸಾಃ= ತಾಮಸ ಸ್ಮೃತಿಗಳು ಎನಿಸಿಕೊಳ್ಳುತ್ತವೆ.

**ಅನುವಾದ-** ಎಲೌ ದೇವಿಯೇ, ಗೌತಮ ಸ್ಮೃತಿ, ಬೃಹಸ್ಪತಿ ಸ್ಮೃತಿ, ಸಂವರ್ತ ಸ್ಮೃತಿ, ಯಮಸ್ಮೃತಿ, ಶಂಖ ಸ್ಮೃತಿ ಮತ್ತು ಶುಕ್ರ ಸ್ಮೃತಿ ಇವು ನರಕಪ್ರದವಾದ ಕಾರಣದಿಂದ ತಾಮಸ ಸ್ಮೃತಿಗಳು ಎನಿಸಿಕೊಳ್ಳುತ್ತವೆ.

**ಕಿಮತ್ರ ಬಹುನೋಕ್ತೇನ ಪುರಾಣೇಷು ಸ್ಮೃತಿಷ್ವಪಿ ।**
**ತಾಮಸಾ ನಿರಯಾಯ್ಯೈವ ವರ್ಜಯೇತ್ ತಾನ್ ವಿಚಕ್ಷಣಃ ॥ ೩೪೫ ॥**

**ಅರ್ಥ-** ಅತ್ರ= ಈ ವಿಷಯದಲ್ಲಿ, ಬಹುನೋಕ್ತೇನ= ಬಹಳ ಮಾತುಗಳಿಂದ, ಕಿಂ= ಏನು ಪ್ರಯೋಜನ, ಪುರಾಣೇಷು= ಪುರಾಣಗಳಲ್ಲಿಯೂ, ಸ್ಮೃತಿಷ್ವಪಿ= ಮತ್ತು ಸ್ಮೃತಿಗಳಲ್ಲಿಯೂ, ತಾಮಸಾಃ= ತಾಮಸವಾದವುಗಳು, ನಿರಯಾಯ್ಯೈವ= ನರಕವನ್ನೇ ಫಲವಾಗಿ ಕೊಡುವಂತಹವು, ವಿಚಕ್ಷಣಃ= ವಿವೇಕಿಯಾದವನು, ತಾನ್= ಅವುಗಳನ್ನು, ವರ್ಜಯೇತ್= ಪರಿತ್ಯಜಿಸಬೇಕು.

**ಅನುವಾದ-** ಈ ವಿಷಯದಲ್ಲಿ ಬಹಳ ಮಾತನಾಡಿ ಏನು ಪ್ರಯೋಜನ? ಪುರಾಣಗಳಲ್ಲಿ ಮತ್ತು ಸ್ಮೃತಿಗಳಲ್ಲಿ ಯಾವುದು ತಾಮಸವೋ ಅವೆಲ್ಲವೂ ನರಕವನ್ನೇ ಕೊಡುತ್ತವೆ. ವಿವೇಕಿಯಾದವನು ಅವುಗಳನ್ನು ಪರಿತ್ಯಜಿಸಬೇಕು.

**ಶಾಸ್ತ್ರಾಣ್ಯಪಿ ಚ ಸರ್ವಾಣಿ ತ್ರಿವಿಧಾನಿ ಮಹಾಮತೇ ॥ ೩೪೬ ॥**

**ಯಾನಿ ಸತ್ತ್ವಪರಂ ವಿಷ್ಣುಂ ವದಂತಿ ಪರಮೇಶ್ವರಂ ।**
**ತಾನಿ ಸರ್ವಾಣಿ ಶಾಸ್ತ್ರಾಣಿ ಸಾತ್ವಿಕಾನಿ ಮತಾನಿ ವೈ ॥ ೩೪೭ ॥**

**ಅರ್ಥ-** ಮಹಾಮತೇ= ಎಲೈ ಮೇಧಾವಿಯಾದ ಗರುಡನೇ, ಸರ್ವಾಣಿ ಶಾಸ್ತ್ರಾಣ್ಯಪಿ= ಎಲ್ಲ ಶಾಸ್ತ್ರಗಳೂ ಸಹ, ತ್ರಿವಿಧಾನಿ= ಮೂರು ಬಗೆಯಾದವು, ಯಾನಿ= ಯಾವ ಶಾಸ್ತ್ರಗಳು, ಸತ್ತ್ವಪರಂ= ನಿರ್ದೋಷಗುಣ ಪರಿಪೂರ್ಣನಾದ, ವಿಷ್ಣುಂ= ವಿಷ್ಣುವನ್ನು, ಪರಮೇಶ್ವರಂ= ಸರ್ವೋತ್ತಮನೆಂದು, ವದಂತಿ= ಹೇಳುತ್ತವೆಯೋ, ತಾನಿ ಸರ್ವಾಣಿ ಶಾಸ್ತ್ರಾಣಿ= ಆ ಎಲ್ಲಾ ಶಾಸ್ತ್ರಗಳೂ, ಸಾತ್ವಿಕಾನಿ= ಸಾತ್ವಿಕಗಳೆಂದೇ, ಮತಾನಿ ವೈ= ತಿಳಿಯಲ್ಪಡುತ್ತವೆ.

**ಅನುವಾದ- ಮೇಧಾವಿಯಾದ ಎಲೈ ಗರುಡನೇ! ಶಾಸ್ತ್ರಗಳೆಲ್ಲವೂ ಮೂರು ಬಗೆಯವು. ಅವುಗಳಲ್ಲಿ ಯಾವ ಶಾಸ್ತ್ರಗಳು ನಿರ್ದೋಷ ಗುಣಪರಿಪೂರ್ಣನಾದ ವಿಷ್ಣುವನ್ನು ಸರ್ವೋತ್ತಮನೆಂದು ಹೇಳುತ್ತವೆಯೋ ಆ ಎಲ್ಲ ಶಾಸ್ತ್ರಗಳು ಸಾತ್ವಿಕವೆಂದೇ ತಿಳಿಯಲ್ಪಡುತ್ತವೆ.**

**ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಂ ।**
**ಪರತ್ವೇನ ವದಚ್ಛಾಸ್ತ್ರಂ ರಾಜಸಂ ಪರಿಚಕ್ಷತೇ ॥ ೩೪೮ ॥**

**ಅರ್ಥ-** ಪ್ರಜಾಪತಿಂ= ಬ್ರಹ್ಮನನ್ನು, ಚ= ಮತ್ತು, ಕೃಶಾನುಂ= ಅಗ್ನಿಯನ್ನು, ತಥಾ= ಅದರಂತೆ, ದೇವೀಂ= ದುರ್ಗೆಯನ್ನು, ಸರಸ್ವತೀಂ= ಸರಸ್ವತಿಯನ್ನು, ಪರತ್ವೇನ= ಸರ್ವೋತ್ತಮ ಎಂದು, ವದಚ್ಛಾಸ್ತ್ರಂ= ಹೇಳುವ ಶಾಸ್ತ್ರವನ್ನು, ರಾಜಸಂ ಪರಿಚಕ್ಷತೇ= ರಾಜಸವೆಂದು ಹೇಳುತ್ತಾರೆ.

**ಅನುವಾದ- ಬ್ರಹ್ಮನನ್ನು, ಅಗ್ನಿಯನ್ನು, ದುರ್ಗೆಯನ್ನು ಹಾಗೂ ಸರಸ್ವತಿಯನ್ನು ಸರ್ವೋತ್ತಮ ವಸ್ತುವೆಂದು ಹೇಳುವ ಶಾಸ್ತ್ರಗಳನ್ನು ರಾಜಸವೆಂದು ಕರೆಯುತ್ತಾರೆ.**

**ಯಚ್ಛಾಸ್ತ್ರಂ ಲಿಂಗಪಾರಮ್ಯಂ ಪರಂ ದೇವಮುಮಾಪತಿಮ್ ।**
**ತಮಃಪ್ರವರ್ತಕಂ ವಕ್ತಿ ತತ್ ತಾಮಸಮುದಾಹೃತಮ್ ॥ ೩೪೯ ॥**

**ಅರ್ಥ-** ಯಚ್ಛಾಸ್ತ್ರಂ= ಯಾವ ಶಾಸ್ತ್ರವು, ತಮಃ ಪ್ರವರ್ತಕಂ= ಅಜ್ಞಾನ ಪ್ರವರ್ತಕವಾದ, ಲಿಂಗಪಾರಮ್ಯಂ= ಲಿಂಗದ ಶ್ರೇಷ್ಠತೆಯನ್ನು ಹೇಳುತ್ತದೆಯೋ, ಮತ್ತು, ಉಮಾಪತಿಂ= ಪಾರ್ವತಿ ಪತಿಯನ್ನು, ಪರಂ ದೇವಂ= ಸರ್ವೋತ್ತಮದೇವನೆಂದು, ವಕ್ತಿ= ಹೇಳುತ್ತದೆಯೋ, ತತ್= ಅದು, ತಾಮಸಂ= ತಾಮಸವೆಂದು, ಉದಾಹೃತಂ= ಹೇಳಲ್ಪಡುತ್ತದೆ.

**ಅನುವಾದ–** ಯಾವ ಶಾಸ್ತ್ರವು ಅಜ್ಞಾನ ಪ್ರವರ್ತಕವಾದ ಲಿಂಗಶ್ರೇಷ್ಠತೆಯನ್ನು ಮತ್ತು ಪಾರ್ವತೀ ಪತಿಯ ಸರ್ವೋತ್ತಮತ್ವವನ್ನು ಹೇಳುತ್ತದೆಯೋ, ಆ ಶಾಸ್ತ್ರವು ತಾಮಸವೆಂದು ಕರೆಯಲ್ಪಡುತ್ತದೆ.

ಸತ್ವನಿಷ್ಠಾಂ ಹಿ ಪುರುಷಾ ವಿಷ್ಣುಮೇವ ಯಜಂತಿ ತೇ ।
ಬ್ರಹ್ಮಾಣಂ ರಾಜಸಾಃ ಸರ್ವೇ ತಮೋನಿಷ್ಠಾಸ್ತು ಶೂಲಿನಂ ॥ ೩೫೦ ॥

**ಅರ್ಥ-** ಸತ್ವನಿಷ್ಠಾ ಪುರುಷಾಃ= ಸತ್ವಗುಣದಲ್ಲಿಯೇ ನಿಷ್ಠೆಯುಳ್ಳ ಪುರುಷರು ಯಾರಿದ್ದಾರೆಯೋ, ತೇ= ಅವರು, ವಿಷ್ಣುಮೇವ= ವಿಷ್ಣುವನ್ನೇ, ಯಜಂತಿ ಹಿ= ಭಜಿಸುತ್ತಾರಷ್ಟೇ, ಸರ್ವೇ ರಾಜಸಾಃ= ಎಲ್ಲ ರಾಜಸರು, ಬ್ರಹ್ಮಾಣಂ= ಬ್ರಹ್ಮದೇವರನ್ನು ಯಜಂತಿ= ಭಜಿಸುತ್ತಾರೆ, ತಮೋನಿಷ್ಠಾಃ= ತಮೋಗುಣದ ನಿಷ್ಠೆಯುಳ್ಳವರೆಲ್ಲರೂ, ಶೂಲಿನಂ= ರುದ್ರದೇವರನ್ನು, ಯಜಂತಿಃ= ಭಜಿಸುತ್ತಾರಷ್ಟೇ.

**ಅನುವಾದ-** ಸತ್ವಗುಣಪ್ರಧಾನರಾದ ಪುರುಷರೆಲ್ಲರೂ ವಿಷ್ಣುವನ್ನೇ ಪೂಜಿಸುತ್ತಾರೆ, ಎಲ್ಲ ರಾಜಸರು ಬ್ರಹ್ಮದೇವರನ್ನು ಪೂಜಿಸುತ್ತಾರೆ ಮತ್ತು ತಮೋನಿಷ್ಠೆಯುಳ್ಳವರೆಲ್ಲರೂ ರುದ್ರದೇವರನ್ನು ಪೂಜಿಸುತ್ತಾರೆ.

**ಭಾವವಿಲಾಸಿನೀ–** ಕಿಂಚ ಪಾದ್ಮೇ ಗಾರುಡೇ ಚ ವಿಷ್ಣುವಿಷಯಸ್ಮೃತಿಪುರಾಣಾದೀನಾಂ ಸಾತ್ವಿಕತ್ವಮುಚ್ಯತೇ । ಬ್ರಹ್ಮವಿಷಯಸ್ಮೃತಿಪುರಾಣಾದೀನಾಂ ರಾಜಸತ್ವಮುಚ್ಯತೇ । ರುದ್ರವಿಷಯ-ಸ್ಮೃತಿಪುರಾಣಾದೀನಾಂ ಚ ಸ್ಪಷ್ಟಂ ತಾಮಸತ್ವಮುಚ್ಯತೇ । ತ್ರಯಾಣಾಮಪ್ಯೇಕಸ್ವರೂಪತ್ವೇ ಸರ್ವೇಷಾಮಪಿ ಪುರಾಣಾನಾಂ ವೈಷ್ಣವತ್ವಾನ್ನಾಯಂ ವಿಭಾಗೋಘಟತೇ । ಅತಸ್ತ್ರಿದೇವತೈಕ್ಯಂ ತತ್ಸಾಮ್ಯಂ ಚ ವ್ಯಾಸಸ್ಯ ಮತಂ ನೇತಿ ವಕ್ತುಂ ಪುರಾಣವಿಭಾಜಕಪಾದ್ಮಗಾರುಡವಾಕ್ಯಾನಿ ಪಠತಿ –**ಶ್ರುಣುದೇವೀತ್ಯಾದಿನಾ** ॥ ಅತ್ರ ವರ್ಜಯೇತ್ತಾನ್ವಿಚಕ್ಷಣ ಇತ್ಯೇತದಂತವಚನಾನಿ ಪಾದ್ಮಪುರಾಣಸ್ಥಾನಿ । ಶಾಸ್ತ್ರಾಣ್ಯಪಿ ಚ ಸರ್ವಾಣೀತ್ಯಾದೀನಿ ತವೋನಿಷ್ಠಾಸ್ತುಶೂಲಿನ-ಮಿತ್ಯೇತದಂತಾನಿ ಗಾರುಡ ಪುರಾಣಸ್ಥಾನಿ ॥ ೩೩೫-೩೫೦ ॥

**ವಿವರಣೆ–** ಇಲ್ಲಿ ಶೃಣುದೇವಿ ಪ್ರವಕ್ಷ್ಯಾಮಿ ಎಂದು 335ನೇ ಶ್ಲೋಕದಿಂದ ಆರಂಭಿಸಿ ವರ್ಜಯೇತ್ತಾನ್ವಿಚಕ್ಷಣಃ ಎಂಬ 345ನೇ ಶ್ಲೋಕದವರೆಗೆ ಇರುವ ಶ್ಲೋಕಗಳು ಪದ್ಮ ಪುರಾಣದ ಶ್ಲೋಕಗಳು. ಅಲ್ಲಿಂದ ಮುಂದೆ 350 ರವರೆಗೂ ಉದಾಹರಿಸಿರುವ ಶ್ಲೋಕಗಳು ಗರುಡ ಪುರಾಣದ ಶ್ಲೋಕಗಳು. ಈ ಪುರಾಣ ವಾಕ್ಯಗಳಿಂದ ಸಾತ್ವಿಕ, ರಾಜಸ, ತಾಮಸ ಪುರಾಣಗಳು ಮತ್ತು ಸ್ಮೃತಿಗಳು ಕ್ರಮವಾಗಿ ವಿಷ್ಣು, ಬ್ರಹ್ಮ ಮತ್ತು ರುದ್ರರನ್ನು ಪ್ರತಿಪಾದನೆ ಮಾಡುತ್ತವೆ ಮತ್ತು ಆ ಪುರಾಣ ಮತ್ತು ಸ್ಮೃತಿಗಳಿಂದ ಉಂಟಾಗುವ ಫಲವು ಮೋಕ್ಷ, ಸ್ವರ್ಗ ಮತ್ತು ನರಕ ರೂಪವಾಗಿದೆ ಎಂದು ತಿಳಿದುಬರುತ್ತದೆ. ಬ್ರಹ್ಮ ವಿಷ್ಣು ಮಹೇಶ್ವರರ ಐಕ್ಯವೇ ಇದ್ದರೆ ಪುರಾಣಗಳಲ್ಲಿ ಈ

ವಿಭಾಗವು ಇರಬಾರದಾಗಿದ್ದಿತು ಮತ್ತು ಬೇರೆ ಬೇರೆ ಪುರಾಣ ಮತ್ತು ಸ್ಮೃತಿಗಳಿಗೆ ವಿರುದ್ಧವಾದ ಬೇರೆ ಬೇರೆ ಫಲಗಳೂ ಇರಬಾರದಾಗಿದ್ದಿತು. ಏಕೆಂದರೆ ಆ ಪಕ್ಷದಲ್ಲಿ ಎಲ್ಲವೂ ಒಂದೇ ದೇವತೆಯನ್ನು ಹೇಳುವ ಪುರಾಣ ಮತ್ತು ಸ್ಮೃತಿಗಳಾಗುತ್ತದೆ. ಆದರೆ ಇಲ್ಲಿ ಪ್ರತಿಪಾದ್ಯ ಭೇದವನ್ನು, ಅಧಿಕಾರಿ ಭೇದವನ್ನು, ಫಲಭೇದವನ್ನು ಹೇಳಿರುವುದರಿಂದ ಈ ವಿಭಾಗದಿಂದ ಬ್ರಹ್ಮ-ವಿಷ್ಣು-ಮಹೇಶ್ವರರಿಗೆ ಅಭೇದವಿಲ್ಲವೆಂದು ಸಿದ್ಧವಾಗುತ್ತದೆ.

**ಇತಿ ಪಾದ್ಮೇ ಗಾರುಡೇ ಚ ತ್ರಿದೇವಪದಸೇವಿನಾಂ ।**
**ವಿರುದ್ಧಂ ತ್ರಿಪ್ರಕಾರತ್ವಂ ತದ್ಗ್ರಂಥಸ್ಯ ತ್ರಿರೂಪತಾ ।**
**ಕಥಂ ತ್ರಿದೇವತೈಕ್ಯಂ ಸ್ಯಾತ್ ಸಮತ್ವಂ ವಾ ಕಥಂ ವದ ॥ ೩೫೧ ॥**

**ಅರ್ಥ-** ಇತಿ= ಈ ರೀತಿಯಲ್ಲಿ, ಪಾದ್ಮೇ= ಪಾದ್ಮಪುರಾಣದಲ್ಲಿಯೂ, ಗಾರುಡೇ ಚ= ಗರುಡ ಪುರಾಣದಲ್ಲಿಯೂ, ತ್ರಿದೇವಪದಸೇವಿನಾಂ= ಮೂರು ದೇವತೆಗಳ ಪಾದವನ್ನು ಭಜಿಸುವವರಿಗೆ, ವಿರುದ್ಧಂ= ವಿರುದ್ಧವಾದ, ತ್ರಿಪ್ರಕಾರತ್ವಂ= ಮೂರು ಪ್ರಕಾರವಾದ ಫಲವು, ತದ್ಗ್ರಂಥಸ್ಯ= ಮೂರು ದೇವತೆಗಳನ್ನು ಪ್ರತಿಪಾದನೆ ಮಾಡುವ ಗ್ರಂಥಕ್ಕೆ, ತ್ರಿರೂಪತಾ= ಮೂರು ಪ್ರಕಾರಗಳು ಹೇಳಲ್ಪಟ್ಟಿರುವುದರಿಂದ, ತ್ರಿದೇವತೈಕ್ಯಂ= ಮೂರು ದೇವತೆಗಳ ಐಕ್ಯವು, ಕಥಂ= ಹೇಗೆ, ಸ್ಯಾತ್= ಆಗುತ್ತದೆ, ಸಮತ್ವಂ ವಾ= ಸಾಮ್ಯವಾಗಲೀ, ಕಥಂ ಸ್ಯಾತ್= ಹೇಗೆ ಆಗುತ್ತದೆ, ವದ= ಹೇಳು.

**ಅನುವಾದ-** ಹೀಗೆ ಪಾದ್ಮಪುರಾಣದಲ್ಲಿಯೂ ಮತ್ತು ಗರುಡಪುರಾಣದಲ್ಲಿಯೂ ಮೂರು ದೇವತೆಗಳ ಪಾದವನ್ನು ಭಜಿಸುವವರಿಗೆ ವಿರುದ್ಧವಾದ ಮೂರು ರೀತಿಯ ಫಲವೂ ಮತ್ತು ಆ ದೇವತೆಗಳನ್ನು ಪ್ರತಿಪಾದನೆ ಮಾಡುವ ಗ್ರಂಥಗಳಿಗೆ ಸಾತ್ತ್ವಿಕ, ರಾಜಸ, ತಾಮಸವೆಂದು ಮೂರು ರೀತಿಯ ಪ್ರಕಾರಗಳೂ ಹೇಳಲ್ಪಟ್ಟಿರುವುದರಿಂದ ಮೂರು ದೇವತೆಗಳಿಗೆ ಐಕ್ಯವಾಗಲೀ ಅಥವಾ ಸಾಮ್ಯವಾಗಲೀ ಹೇಗೆ ಉಂಟಾಗುವುದೆಂದು ಹೇಳು?

**ಭಾವವಿಲಾಸಿನೀ–** ಉಕ್ತಪುರಾಣದ್ವಯವಚನಾನಾಂ ತಾತ್ಪರ್ಯಮಾಹ – **ಇತೀತಿ** ॥ ೩೫೧ ॥

**ಕೃಷ್ಣರಾಮಾದಿ ಭಕ್ತೇಷು ತದ್ಗ್ರಂಥೇಷ್ವಪಿ ನೇದೃಶಃ ।**
**ವಿಭಾಗೋ ದೃಶ್ಯತೇ ತಸ್ಮಾದ್ ಬ್ರಹ್ಮೇಶೌ ನ ಹರಿಃ ಸ್ವಯಂ ॥ ೩೫೨ ॥**

**ಅರ್ಥ-** ಕೃಷ್ಣರಾಮಾದಿಭಕ್ತೇಷು= ಕೃಷ್ಣರಾಮಾದಿಗಳನ್ನು ಭಜನೆ ಮಾಡುವವರಲ್ಲಿ, ತದ್ಗ್ರಂಥೇಷ್ವಪಿ= ಮತ್ತು ಕೃಷ್ಣರಾಮಾದಿಗಳ ಮಹಿಮೆಗಳನ್ನು ಹೇಳುವ ಗ್ರಂಥಗಳಲ್ಲಿ, ನೇದೃಶಃ ವಿಭಾಗಃ= ಇಂತಹ ವಿಭಾಗವು, ನ ದೃಶ್ಯತೇ= ಕಂಡುಬರುವುದಿಲ್ಲ, ತಸ್ಮಾತ್= ಆದ್ದರಿಂದ,

ಬ್ರಹ್ಮೇಶೌ= ಬ್ರಹ್ಮರುದ್ರರು, ಸ್ವಯಂ ಹರಿಃ ನ= ತಾವೇ ಹರಿಯಲ್ಲ.

**ಅನುವಾದ-** ಕೃಷ್ಣರಾಮಾದಿ ಭಕ್ತರಲ್ಲಿ ಮತ್ತು ಕೃಷ್ಣರಾಮಾದಿಗಳ ಮಹಿಮೆಯನ್ನು ಪ್ರತಿಪಾದನೆ ಮಾಡುವ ವೇದವ್ಯಾಸರಚಿತವಾದ ಮಹಾಭಾರತದಲ್ಲಿ ಅಥವಾ ರಾಮಾಯಣದಲ್ಲಿ ಇಂತಹ ವಿಭಾಗವು ಕಂಡುಬರುವುದಿಲ್ಲ. ಆದ್ದರಿಂದ ಬ್ರಹ್ಮರುದ್ರರು ಎಂದೂ ಹರಿಯ ಅಭಿನ್ನರಲ್ಲ.

**ಭಾವವಿಲಾಸಿನೀ–** ಬ್ರಹ್ಮರುದ್ರಯೋರ್ವಿಷ್ಣ್ವಾತ್ಮಕತ್ವೇ ತದ್ಗ್ರಂಥಾನಾಂ ರಾಜಸತ್ವಂ ತಾಮಸತ್ವಂ ಚ ನ ಸ್ಯಾದಿತ್ಯತ್ರ ದೃಷ್ಟಾಂತಮಾಹ –**ಕೃಷ್ಣರಾಮಾದೀತಿ** ॥ ಕೃಷ್ಣರಾಮಾದಿಭಕ್ತೇಷು ವ್ಯಾಸಮತಾನು-ಸಾರೇಣ ಕೃಷ್ಣರಾಮಾದಿಭಜಕೇಷು ತದ್ಗ್ರಂಥೇಷು ವ್ಯಾಸಕೃತತನ್ಮಹಿಮಪ್ರತಿಪಾದಕ ಭಾರತರಾಮಾಯಣಾದಿಗ್ರಂಥೇಷು ॥ ೩೫೨ ॥

ಪಂಚಸಾತ್ವಿಕಸಾಚಿವ್ಯಾತ್ ಸ್ಪಷ್ಟಗಾರುಡವಾಗ್ಬಲಾತ್ ।
ಪಾದ್ಮಸ್ಯ ಹ್ಯುತ್ತರಃ ಕಾಂಡಃ ಸ್ವಯಂ ಸಿದ್ಧಾಂತ ಏವ ಸನ್ ।
ಸಂಜ್ಞಾಶಕ್ತ್ಯಾ ಚ ಪೂರ್ವಾಂಶಂ ಪೂರ್ವಪಕ್ಷೀಕರೋತಿ ಹಿ ॥ ೩೫೩ ॥

**ಅರ್ಥ-** ಪಾದ್ಮಸ್ಯ ಹ್ಯುತ್ತರಃ ಕಾಂಡಃ= ಪಾದ್ಮಪುರಾಣದ ಉತ್ತರಕಾಂಡವು, ಪಂಚಸಾತ್ವಿಕಸಾಚಿವ್ಯಾತ್= ಐದು ಸಾತ್ವಿಕಪುರಾಣಗಳ ಸಂವಾದ ಇರುವ ಕಾರಣದಿಂದಾಗಿ, ಸ್ಪಷ್ಟಗಾರುಡವಾಗ್ಬಲಾತ್= ವಿಷ್ಣು ಪಾರಮ್ಯವನ್ನು ಹೇಳುವ ಪುರಾಣಗಳು ಸಾತ್ವಿಕವಾದವು ಎಂಬ ಸ್ಪಷ್ಟವಾದ ಗರುಡ ಪುರಾಣವಚನ ಬಲದಿಂದಲೂ, ಸ್ವಯಂ ಸಿದ್ಧಾಂತ ಏವ ಸನ್= ವಿಷ್ಣುಮಹಿಮೆಯನ್ನು ಪ್ರತಿಪಾದನೆ ಮಾಡುವುದರಿಂದ ಸ್ವಯಂ ಸಿದ್ಧಾಂತರೂಪವುಳ್ಳದ್ದಾಗಿ, ಪೂರ್ವಾಂಶಂ= ಪೂರ್ವಕಾಂಡವನ್ನು, ಸಂಜ್ಞಾಶಕ್ತ್ಯಾ ಚ= ಪೂರ್ವಕಾಂಡ ಎಂಬ ಹೆಸರಿನ ಬಲದಿಂದಲೇ, ಪೂರ್ವಪಕ್ಷೀಕರೋತಿ ಹಿ= ಪೂರ್ವಪಕ್ಷವನ್ನಾಗಿ ಮಾಡುತ್ತದೆಯಷ್ಟೇ.

**ಅನುವಾದ-** ಪಾದ್ಮಪುರಾಣದ ಉತ್ತರಕಾಂಡವು ಪಂಚಸಾತ್ವಿಕಪುರಾಣಗಳ ಸಂವಾದದಿಂದಲೂ ಮತ್ತು ಲಿಂಗಪಾರಮ್ಯವನ್ನು ಹೇಳುವ ಪುರಾಣವು ತಾಮಸ ಪುರಾಣವೆಂಬ ಸ್ಪಷ್ಟವಾದ ಗರುಡಪುರಾಣದ ವಚನದ ಬಲದಿಂದಲೂ ವಿಷ್ಣುಪಾರಮ್ಯವನ್ನು ಹೇಳುವ ತಾನು ಸಿದ್ಧಾಂತರೂಪವಾಗಿದ್ದು ಪೂರ್ವಕಾಂಡ ಸಂಜ್ಞಾ ಎಂಬ ಬಲದಿಂದಲೇ ಪೂರ್ವಕಾಂಡವನ್ನು ಪೂರ್ವಪಕ್ಷವನ್ನಾಗಿ ಮಾಡುತ್ತದೆ.

**ಭಾವವಿಲಾಸಿನೀ–** ಸಾತ್ವಿಕಪುರಾಣೇಷು ಪಠಿತಪಾದ್ಮಸ್ಯ ವಿರುದ್ಧಾರ್ಥಕಥಕಪೂರ್ವಕಾಂಡಂ ಪೂರ್ವಪಕ್ಷೀಕರ್ತುಂ ಯುಕ್ತಿಮಾಹ – **ಪಂಚೇತಿ** ॥ ಪಾದ್ಮಸ್ಯೋತ್ತರಃ ಕಾಂಡಃ ಪಂಚಾನಾಂ

ಸಾತ್ವಿಕಾನಾಂ ವಿಷ್ಣುಪುರಾಣಾದೀನಾಂ ಸಾಚಿವ್ಯಾದೇಕಾರ್ಥಪ್ರತಿಪಾದಕತ್ವೇನ ಸ್ವಸಹಾಯತ್ವಾತ್ ಸ್ವಪ್ನಾಯಾಃ ಯಾನಿಸತ್ವಪರಂ ವಿಷ್ಣುಮಿತಿ ಗಾರುಡವಾಚೋಬಲಾತ್ ಉತ್ತರಕಾಂಡಾಖ್ಯ ಸಂಜ್ಞಾಶಕ್ತ್ಯಾ ಚ ಸ್ವಯಂ ಸಿದ್ಧಾಂತ ಏವ ಸನ್ ಯಚ್ಛಾಸ್ತ್ರಂ ಲಿಂಗಪಾರಮ್ಯಮಿತಿ ಸ್ವಪ್ನಗಾರುಡ-ವಾಗ್ಬಲಾತ್ ಪೂರ್ವಕಾಂಡಾಖ್ಯಸಂಜ್ಞಾಶಕ್ತ್ಯಾ ಚಾಸ್ಯ ಪೂರ್ವಾಂಶಂ ಪೂರ್ವಕಾಂಡಂ ಪೂರ್ವಪಕ್ಷೀಕರೋತಿ । ಸಾತ್ವಿಕ ಪುರಾಣಸ್ಥೋಽಪಿ ಸೋಽಂಶಃ ಪೂರ್ವಪಕ್ಷ ಏವ । ನ ಸಿದ್ಧಾಂತ ಇತಿ ವಿವೇಚಯತೀತ್ಯರ್ಥಃ । ಹಿ ಶಬ್ದೇನ ಶಂಕಾಗ್ರಂಥಸ್ಯ ಪೂರ್ವಕಾಂಡಾಪರಪರ್ಯಾಯ-ಪೂರ್ವಪಕ್ಷತ್ವಂ ಸಿದ್ಧಾಂತಸ್ಯ ಚೋತ್ತರಕಾಂಡಾಪರಪರ್ಯಾಯೋತ್ತರಪಕ್ಷತ್ವಂ ಚ ಪ್ರಸಿದ್ಧಮಿತಿ ಸೂಚಯತಿ । ವಿಷ್ಣುಪುರಾಣಾದಿಸಾತ್ವಿಕಪಂಚಪುರಾಣೇಷು ಸರ್ವತ್ರ ವಿಷ್ಣೋರ್ಮ-ಹಿಮ್ನೈವೋಚ್ಯತೇ । ನ ಪಂಚಸ್ವಪಿ ಕ್ವಚಿತ್ಪಾದ್ಮವದ್ವಿರುದ್ಧೋ ಭಾಗೋಽಸ್ತಿ । ಅತಃ ಪಾದ್ಮೇಽಪಿ ತೇಷಾಂ ಸಾತ್ವಿಕಾನಾಮನುಕೂಲೋಭಾಗಃ ಸಾತ್ವಿಕಃ । ವಿಪರೀತಸ್ತು ತಾಮಸೋರಾಜಸೋವಾ । ಅತಃ ಪಾದ್ಮಸ್ಯ ಸಾತ್ವಿಕಪುರಾಣತ್ವೇಽಪಿ ತತ್ಪೂರ್ವಕಾಂಡೋ ನ ಗ್ರಾಹ್ಯ ಏವ ॥ ೩೫೩ ॥

**ವಿವರಣೆ–** ಪಾದ್ಮಪುರಾಣದಲ್ಲಿ ಪೂರ್ವಕಾಂಡ ಮತ್ತು ಉತ್ತರಕಾಂಡ ಎಂಬ ಎರಡು ಭಾಗಗಳಿವೆ. ಉತ್ತರಕಾಂಡದಲ್ಲಿ ವಿಷ್ಣುಪಾರಮ್ಯವು ಹೇಳಲ್ಪಡುತ್ತದೆ. ಪೂರ್ವಕಾಂಡದಲ್ಲಿ ಶಿವಪಾರಮ್ಯವು ಹೇಳಲ್ಪಟ್ಟಿದೆ. ಪಾದ್ಮಪುರಾಣದ ಉತ್ತರಕಾಂಡವು ಮಾತ್ರ ಪಂಚಸಾತ್ವಿಕ ಪುರಾಣಗಳ ಸಂವಾದದಿಂದಲೂ ವಿಷ್ಣುಪಾರಮ್ಯವನ್ನು ಹೇಳುವ ಕಾರಣದಿಂದಲೂ ಸಿದ್ಧಾಂತಪಕ್ಷವಾಗುತ್ತದೆ. ಪೂರ್ವಕಾಂಡವು ಶಿವಪಾರಮ್ಯವನ್ನು ಹೇಳುವುದರಿಂದ ಶಿವಪಾರಮ್ಯವನ್ನು ಹೇಳುವ ಪುರಾಣವು ತಾಮಸಪುರಾಣ ಎಂಬ ಗರುಡ ಪುರಾಣದ ವಚನಬಲದಿಂದಲೂ, ಪೂರ್ವಕಾಂಡ ಎಂಬ ಸಂಜ್ಞಾ ಬಲದಿಂದಲೂ ಮತ್ತು ಉತ್ತರಕಾಂಡಕ್ಕೆ ವಿರುದ್ಧವಾಗಿರುವ ಬಲದಿಂದಲೂ ಪೂರ್ವಪಕ್ಷ ಎನಿಸಿಕೊಳ್ಳುತ್ತದೆ. ಆದ್ದರಿಂದ ಪೂರ್ವಕಾಂಡದಲ್ಲಿ ಹೇಳಿರುವುದು ಅಗ್ರಾಹ್ಯವಾದುದು ಮತ್ತು ಉತ್ತರಕಾಂಡದಲ್ಲಿ ಹೇಳಿದುದು ಗ್ರಾಹ್ಯವಾದುದು ಎಂದು ಅಭಿಪ್ರಾಯ.

**ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೩೫೪ ॥**

**ಅರ್ಥ–** ಸತ್ವಸ್ಥಾಃ= ಸಾತ್ವಿಕ ಗುಣವುಳ್ಳವರು, ಊರ್ಧ್ವಂ ಗಚ್ಛಂತಿ= ಊರ್ಧ್ವಮುಖವಾಗಿ ಹೋಗುತ್ತಾರೆ, ರಾಜಸಾಃ= ರಾಜಸ ಗುಣವುಳ್ಳವರು, ಮಧ್ಯೇ ತಿಷ್ಠಂತಿ= ಮಧ್ಯದಲ್ಲಿಯೇ ನಿಲ್ಲುತ್ತಾರೆ. ಜಘನ್ಯಗುಣವೃತ್ತಿಸ್ಥಾಃ= ಅಧಮವಾದ ಗುಣದ ಸ್ವಭಾವವುಳ್ಳ, ತಾಮಸಾಃ= ತಾಮಸರು, ಅಧೋ ಗಚ್ಛಂತಿ= ಅಧಃಪಾತವನ್ನು ಹೊಂದುತ್ತಾರೆ.

**ಅನುವಾದ–** ಸಾತ್ವಿಕರು ಊರ್ಧ್ವಗತಿಯನ್ನು ಹೊಂದುತ್ತಾರೆ. ರಾಜಸರು ಮಧ್ಯದಲ್ಲಿಯೇ ಇರುತ್ತಾರೆ ಮತ್ತು ನೀಚವಾದ ತಾಮಸ ಗುಣವನ್ನು ಸೇವಿಸುವವರು ಅಧೋಗತಿಯನ್ನು ಹೊಂದುತ್ತಾರೆ.

**ಭಾವವಿಲಾಸಿನೀ–** ನನ್ವಾಪ್ತತಮಸ್ಯ ವ್ಯಾಸಸ್ಯೋಕ್ತರೀತ್ಯಾ ತ್ರಿವಿಧಪುರಾಣಕರಣೇ ಕಿಂ ಪ್ರಯೋಜನಮಿತ್ಯತಃ ತ್ರಿವಿಧಾಧಿಕಾರಿಣಾಂ ತತ್ತದ್ಯೋಗ್ಯಗತಿದಾನಾಯೇತಿ ವಕ್ತುಮಧಿಕಾರಿತ್ರೈವಿಧ್ಯಂ ತೇಷಾಂ ಗತೀಶ್ಚ ಗೀತಾವಾಕ್ಯೇನೈವ ದರ್ಶಯತಿ–**ಊರ್ಧ್ವಮಿತಿ** ॥ ರೂಜಘನ್ಯಗುಣಸ್ತಮೋ ಗುಣಃ ॥ ೩೫೪ ॥

**ವಿವರಣೆ–** ಸರ್ವಜ್ಞರೂ, ಆಪ್ತತಮರೂ ಆದ ವ್ಯಾಸರು ಏಕೆ ಮೂರು ವಿಧವಾದ ಪುರಾಣಗಳನ್ನು ರಚಿಸಿದರು ಎಂಬ ಶಂಕೆಗೆ ಉತ್ತರವಾಗಿ, ಮೂರು ವಿಧವಾದ ಅಧಿಕಾರಿಗಳಿರುವುದರಿಂದ ಆಯಾ ಅಧಿಕಾರಿಗಳಿಗೆ ರುಚಿಸುವ ಪುರಾಣಗಳನ್ನು ವ್ಯಾಸರು ರಚಿಸಿದ್ದಾರೆ ಎಂದು ಗೀತಾವಾಕ್ಯವನ್ನು ಪ್ರದರ್ಶಿಸಿ ವಾದಿರಾಜರು ಇಲ್ಲಿ ಉಪಪಾದನೆ ಮಾಡುತ್ತಿದ್ದಾರೆ.

**ಇತಿ ಗೀತೋಕ್ತಿಮಾರ್ಗೇಣ ತ್ರಯಾಣಾಮಧಿಕಾರಿಣಾಮ್ ।**
**ಗತಿತ್ರಯಂ ದಾತುಮೇವ ಚಕ್ರೇ ವ್ಯಾಸಾತ್ಮಕೋ ಹರಿಃ ।**
**ತ್ರಿವಿಧಾನಿ ಪುರಾಣಾನಿ ಬುದ್ಧೋ ಬೌದ್ಧಾಗಮಂ ಯಥಾ ॥ ೩೫೫ ॥**

**ಅರ್ಥ-** ಇತಿ= ಈ ರೀತಿಯಲ್ಲಿ, ಗೀತೋಕ್ತಿಮಾರ್ಗೇಣ= ಗೀತೆಯು ಹೇಳಿದ ರೀತಿಯಲ್ಲಿ, ತ್ರಯಾಣಾಮಧಿಕಾರಿಣಾಂ= ಮೂರು ವಿಧವಾದ ಅಧಿಕಾರಿಗಳಿಗೆ, ಗತಿತ್ರಯಂ ದಾತುಮೇವ= ಮೂರು ವಿಧವಾದ ಗತಿಯನ್ನು ಕೊಡುವುದಕ್ಕಾಗಿಯೇ, ವ್ಯಾಸಾತ್ಮಕೋ ಹರಿಃ= ವ್ಯಾಸಾವತಾರನಾದ ಹರಿಯು, ಬುದ್ಧೋ ಬೌದ್ಧಾಗಮಂ ಯಥಾ= ಬುದ್ಧನು ಬೌದ್ಧಾಗಮವನ್ನು ರಚಿಸಿದಂತೆ, ತ್ರಿವಿಧಾನಿ ಪುರಾಣಾನಿ= ಮೂರು ವಿಧವಾದ ಪುರಾಣಗಳನ್ನು, ಚಕ್ರೇ= ರಚಿಸಿದರು.

**ಅನುವಾದ-** ಹೀಗೆ, ಗೀತೆಯಲ್ಲಿ ಉಕ್ತವಾದ ರೀತಿಯಲ್ಲಿ ಮೂರು ವಿಧವಾದ ಅಧಿಕಾರಿಗಳಿಗೆ ಮೂರು ವಿಧವಾದ ಫಲವನ್ನು ಕೊಡಲು ವ್ಯಾಸಾವತಾರನಾದ ಹರಿಯು ಬುದ್ಧನು ಬೌದ್ಧಾಗಮವನ್ನು ರಚಿಸಿದಂತೆ ತ್ರಿವಿಧವಾದ ಪುರಾಣಗಳನ್ನು ರಚಿಸಿದನು.

**ಭಾವವಿಲಾಸಿನೀ–** ಸರ್ವಜ್ಞವ್ಯಾಸಕೃತತ್ವೇಪಿ ವಿಪ್ರಲಿಪ್ಸಾಮೂಲತ್ವಾತ್ತಾಮಸ- ಪುರಾಣಾನಾಮಪ್ರಾಮಾಣ್ಯಂ ಘಟತ ಇತ್ಯತ್ರ ದೃಷ್ಟಾಂತಮಾಹ – **ಬುದ್ಧ ಇತಿ** ॥ ೩೫೫ ॥

**ವಿವರಣೆ–** ಸರ್ವಜ್ಞರಾದ ವ್ಯಾಸರೇ ರಚಿಸಿದ್ದರೂ ರಾಜಸ, ತಾಮಸ ಪುರಾಣಗಳು ಬೌದ್ಧಾಗಮದಂತೆ ವಿಪ್ರಲಿಪ್ಸಾ ನಿಮಿತ್ತದಿಂದ ರಚಿಸಲ್ಪಟ್ಟಿರುವುದರಿಂದ ಅವುಗಳು ಗ್ರಾಹ್ಯವಲ್ಲ ಎಂದು ಈ ಶ್ಲೋಕದಲ್ಲಿ ತಿಳಿಸಿದ್ದಾರೆ.

ಹೇಯಾಹೇಯವಿಭಾಗಶ್ಚ ಸಾತ್ವಿಕೇಷ್ವೇವ ದರ್ಶಿತಃ ।
ಯೋಗ್ಯಾನಾಂ ಬುದ್ಧಿಶುದ್ಧ್ಯರ್ಥಂ ಯತಸ್ತೇ ಸಾತ್ವಿಕಪ್ರಿಯಾಃ ॥ ೩೫೬ ॥

**ಅರ್ಥ-** ಯತಃ= ಯಾವ ಕಾರಣದಿಂದ, ತೇ= ಆ ಸಾತ್ವಿಕ ಪುರಾಣಗಳು, ಸಾತ್ವಿಕಪ್ರಿಯಾಃ= ಸಾತ್ವಿಕರಿಗೆ ಪ್ರಿಯವಾದವುಗಳೋ, ಆ ಕಾರಣದಿಂದ, ಯೋಗ್ಯಾನಾಂ= ಯೋಗ್ಯವಾದವರಿಗೆ, ಬುದ್ಧಿಶುದ್ಧ್ಯರ್ಥಂ= ಬುದ್ಧಿಯ ಶುದ್ಧಿಯನ್ನು ಉಂಟು ಮಾಡುವುದಕ್ಕಾಗಿ, ಹೇಯಾಹೇಯವಿಭಾಗಶ್ಚ= ಹೇಯಾಹೇಯವಿಭಾಗವೂ ಸಹ, ಸಾತ್ವಿಕೇಷ್ವೇವ= ಸಾತ್ವಿಕ ಪುರಾಣಗಳಲ್ಲಿಯೇ, ದರ್ಶಿತಃ= ಪ್ರದರ್ಶಿಸಲ್ಪಟ್ಟಿದೆ.

**ಅನುವಾದ-** ಸಾತ್ವಿಕ ಪುರಾಣಗಳು ಸಾತ್ವಿಕರಿಗೆ ಪ್ರಿಯವಾದ ಕಾರಣದಿಂದಲೇ ಯೋಗ್ಯವಾದ ಅಂತಹವರ ಬುದ್ಧಿಶುದ್ಧಿಗಾಗಿ ಹೇಯಾಹೇಯವಿಭಾಗವೂ ಕೂಡ ಸಾತ್ವಿಕ ಪುರಾಣಗಳಲ್ಲಿಯೇ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ನನ್ವಯಂ ವಿಭಾಗಃ ಪಾದ್ಮಗಾರುಡಯೋರಿವ ತಾಮಸಪುರಾಣೇಷ್ವಪಿ ಕುತೋ ನ ದರ್ಶಿತ ಇತ್ಯತ್ರ ಆಹ – **ಹೇಯಾಹೇಯೇತಿ** ॥ ತೇ ಯೋಗ್ಯಾಃ ॥ ೩೫೬॥

**ವಿವರಣೆ–** ಸಾತ್ವಿಕ ಪುರಾಣಗಳಲ್ಲಿ ಹೇಳಿದಂತೆ ತಾಮಸ, ರಾಜಸ ಪುರಾಣಗಳಲ್ಲಿ ಏಕೆ ಗ್ರಾಹ್ಯ ಮತ್ತು ಅಗ್ರಾಹ್ಯವಾದ ವಿಭಾಗಗಳನ್ನು ಹೇಳಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಇಂತಹ ವಿಭಾಗವೆಲ್ಲವೂ ಸಾತ್ವಿಕರಿಗೇ ಪ್ರಿಯವಾದುದು. ರಾಜಸ, ತಾಮಸರಿಗಲ್ಲ. ಆದ್ದರಿಂದ ಸಾತ್ವಿಕ ಪುರಾಣಗಳಲ್ಲಿ ಹೇಳಿದ್ದಾರೆಯೇ ಹೊರತು ರಾಜಸ, ತಾಮಸ ಪುರಾಣಗಳಲ್ಲಿ ಹೇಳಿಲ್ಲ ಎಂದು ಅಭಿಪ್ರಾಯ.

ರಾಜಸೇ ತಾಮಸೇ ಚೈವ ವಿವೇಕೋऽಯಂ ನ ದರ್ಶಿತಃ ।
ಅಯೋಗ್ಯಾನಾಮಬೋಧಾರ್ಥಂ ತತಸ್ತತ್ರೈವ ತೇ ರತಾಃ ॥ ೩೫೭ ॥

ಏವಂ ಪುರಾಣಕರ್ತ್ರೈವ ಸ್ವಕೃತಗ್ರಂಥರಾಶಿಷು ।
ಗ್ರಾಹ್ಯಾಗ್ರಾಹ್ಯವಿಭಾಗೋಕ್ತೇರ್ನ ಸಂದೇಹೋ ವಿವೇಕಿನಾಮ್ ॥ ೩೫೮ ॥

**ಅರ್ಥ-** ಅಯೋಗ್ಯಾನಾಂ= ತತ್ತ್ವಜ್ಞಾನಕ್ಕೆ ಅಯೋಗ್ಯರಾದವರಿಗೆ, ಅಬೋಧಾರ್ಥಂ= ತಿಳಿಯದಿರಲಿ ಎಂಬ ಉದ್ದೇಶದಿಂದ, ರಾಜಸೇ ತಾಮಸೇ ಚೈವ= ರಾಜಸ ಮತ್ತು ತಾಮಸ ಪುರಾಣಗಳಲ್ಲಿ, ಅಯಂ ವಿವೇಕಃ= ಈ ವಿಭಾಗವು, ನ ದರ್ಶಿತಃ= ನಿರೂಪಿಸಲ್ಪಟ್ಟಿಲ್ಲ, ತತಃ= ಆ ಕಾರಣದಿಂದ, ತೇ= ಅವರು, ತತ್ರೈವ= ರಾಜಸ, ತಾಮಸ ಪುರಾಣಗಳಲ್ಲಿಯೇ, ರತಾಃ= ಆಸಕ್ತರಾಗಿದ್ದಾರೆ, ಏವಂ= ಈ ರೀತಿಯಲ್ಲಿ, ಪುರಾಣಕರ್ತ್ರೈವ= ಪುರಾಣ ಕರ್ತೃವಾದ ವ್ಯಾಸರಿಂದಲೇ, ಸ್ವಕೃತಗ್ರಂಥರಾಶಿಷು= ತಾವು ರಚಿಸಿದ ಗ್ರಂಥಗಳ ರಾಶಿಗಳಲ್ಲಿ,

ಗ್ರಾಹ್ಯಾಗ್ರಾಹ್ಯವಿಭಾಗೋಕ್ತೇಃ= ಗ್ರಾಹ್ಯ ಮತ್ತು ಅಗ್ರಾಹ್ಯವೆಂದು ವಿಭಾಗವೆಂದು ಹೇಳಿರುವುದರಿಂದ, ವಿವೇಕಿನಾಂ= ವಿವೇಕವುಳ್ಳವರಿಗೆ, ಸಂದೇಹೋ ನ= ಸಂದೇಹವು ಉಂಟಾಗುವುದಿಲ್ಲ.

**ಅನುವಾದ-** ಅಯೋಗ್ಯರಿಗೆ ಯಥಾರ್ಥ ಜ್ಞಾನವುಂಟಾಗದಿರಲಿ ಎಂಬ ಕಾರಣದಿಂದ ವೇದವ್ಯಾಸರು ರಾಜಸ ಮತ್ತು ತಾಮಸ ಪುರಾಣಗಳಲ್ಲಿ ಈ ವಿಭಾಗಗಳನ್ನು ಪ್ರದರ್ಶಿಸಿಲ್ಲ. ಆದ್ದರಿಂದ ಅಯೋಗ್ಯರಾದವರು ರಾಜಸ, ತಾಮಸ ಪುರಾಣಗಳಲ್ಲಿಯೇ ಆಸಕ್ತರಾಗಿದ್ದಾರೆ. ಹೀಗೆ, ಪುರಾಣಕರ್ತೃಗಳಾದ ವೇದವ್ಯಾಸರು ತಾವು ರಚಿಸಿದ ಗ್ರಂಥರಾಶಿಗಳಲ್ಲಿ ಗ್ರಾಹ್ಯಾಗ್ರಾಹ್ಯ ವಿಭಾಗವನ್ನು ತಾವೇ ಹೇಳಿರುವುದರಿಂದ ವಿವೇಕಿಗಳಾದವರಿಗೆ ಸಂದೇಹವು ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ಅಬೋಧಾರ್ಥಮ್ ಉಕ್ತತ್ವೈವಿಧ್ಯಾಜ್ಞಾಪನಾರ್ಥಮ್ । ತತಸ್ತಾಮಸತ್ವಾದ್ಯಜ್ಞಾನಾತ್ । ತತ್ರೈವ ತಾಮಸರಾಜಸಪುರಾಣೇಷ್ವೇವ ॥ ೩೫೭-೩೫೮ ॥

ತಸ್ಮಾಚ್ಛೈವಬ್ರಾಹ್ಮಣಪಕ್ಷಪುರಾಣವಚನಾಶ್ರಯಾತ್ ।
ನ ತತ್ವಪ್ರಚ್ಯುತಿಃ ಕಾರ್ಯಾ ಕಾರ್ಯಾಕಾರ್ಯವಿವೇಕಿನಾ ॥ ೩೫೯ ॥

**ಅರ್ಥ-** ತಸ್ಮಾತ್= ಆ ಕಾರಣದಿಂದ, ಶೈವಬ್ರಾಹ್ಮಣಪಕ್ಷಪುರಾಣವಚನಾಶ್ರಯಾತ್= ಶೈವ ಪುರಾಣ ಮತ್ತು ಬ್ರಾಹ್ಮಣ ಪುರಾಣಗಳ ವಚನವನ್ನು ಆಶ್ರಯಿಸಿ, ಕಾರ್ಯಾ-ಕಾರ್ಯವಿವೇಕಿನಾ= ಕಾರ್ಯಾಕಾರ್ಯ ವಿವೇಕವನ್ನು ತಿಳಿದವನು, ತತ್ವಪ್ರಚ್ಯುತಿಃ= ತತ್ವನಿರಾಕರಣೆಯನ್ನು, ನ ಕಾರ್ಯಾ= ಮಾಡಬಾರದು.

**ಅನುವಾದ-** ಆದ್ದರಿಂದ ಕಾರ್ಯಾಕಾರ್ಯ ವಿವೇಕಿಯಾದವನು ಶೈವ, ಬ್ರಾಹ್ಮಣ ಪುರಾಣಗಳನ್ನು ಅವಲಂಬಿಸಿ ಎಂದೂ ಸಾತ್ವಿಕ ಪುರಾಣದಲ್ಲಿ ನಿರೂಪಿತವಾದ ತತ್ತ್ವದ ನಿರಾಕರಣೆಯನ್ನು ಮಾಡಬಾರದು.

**ಭಾವವಿಲಾಸಿನೀ–** ಅನೇನ ವಿಭಾಗಪ್ರದರ್ಶನೇನ ಪ್ರಯೋಜನಾಂತರಮಪಿ ಸಿದ್ಧಮಿತ್ಯಾಹ – **ತಸ್ಮಾದಿತಿ** ॥ ೩೫೯ ॥

**ವಿವರಣೆ–** ತ್ರಯಾಣಾಂ ಏಕಭಾವಾನಾಂ ಎಂಬ ವಾಕ್ಯದ ವಿಮರ್ಶೆಯನ್ನು ಗ್ರಂಥಕಾರರು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ.

ದ್ವಿತೀಯಾಭಿನಿವೇಶೇನ ಭಯಂ ಸ್ಯಾದಿತಿ ಯದ್ ವಚಃ ।
ತಚ್ಚಾತ್ಮದೇಹಗೇಹಾದಿ ದ್ವಯಶಬ್ದೇನ ಭಣ್ಯತೇ ॥ ೩೬೦ ॥

ತತ್ರಾಗ್ರಹಾದ್ ಭಯಂ ತೇ ಸ್ಯಾತ್ ತತೋ ಭಕ್ತ್ಯಾ ಭಜೇಶ್ವರಮ್ ।
ಇತ್ಯಾಹ ನೋ ಚೇದ್ ವಾಕ್ಯಸ್ಯ ಪೂರ್ವೋತ್ತರವಿರುದ್ಧತಾ ॥ ೩೬೧ ॥

**ಅರ್ಥ–** ದ್ವಿತೀಯಾಭಿನಿವೇಶೇನ ಭಯಂ ಸ್ಯಾದ್ ಇತಿ = ದ್ವಿತೀಯಾಭಿ... ಸ್ಯಾತ್ ಎಂದು ಯದ್‌ವಚಃ = ಯಾವ ಮಾತು (ಭಾಗವತ ಪುರಾಣದಲ್ಲಿ ಇದೆಯೋ, ೧೧-೨-೩೭, ತತ್ ಚ = ಆ ವಚನವು (ಅದರಲ್ಲಿ) ಆತ್ಮದೇಹಗೇಹಾದಿ = ಜೀವಾತ್ಮನ ದೇಹ, ಮನೆ ಮೊದಲಾದವುಗಳು, ದ್ವಯಶಬ್ದೇನ = ದ್ವಯ ಶಬ್ದದಿಂದ ಭಣ್ಯತೇ = ಹೇಳಲ್ಪಡುತ್ತವೆ, ತತ್ರ = ಆ ವಸ್ತುಗಳಲ್ಲಿ, ಆಗ್ರಹಾದ್ = ಗಾಢ ಅಭಿಮಾನದಿಂದ, ತೇ = ನಿನಗೆ ಭಯಂ = ಭಯವು = ಸಂಸಾರವು ಸ್ಯಾತ್ = ಉಂಟಾಗುವುದು, ತತಃ = ಆದ್ದರಿಂದ, ಭಕ್ತ್ಯಾ = ಭಕ್ತಿಯಿಂದ ಈಶ್ವರಂ = ದೇವರನ್ನು, ಭಜ = ಭಜಿಸು – ಇತಿ ಎಂದು, ಆಹ = ಹೇಳುತ್ತದೆ, ನೋ ಚೇದ್ = ಹೀಗೆ ಅರ್ಥವಲ್ಲದಿದ್ದರೆ, ವಾಕ್ಯಸ್ಯ = ಭಯ ದ್ವಿತೀಯಾಭಿನಿವೇಶತಃ ಸ್ಯಾದ್ ... ಈ ಶ್ಲೋಕಕ್ಕೆ ಪೂರ್ವೋತ್ತರ ವಿರುದ್ಧತಾ (ಭವತಿ) ಪೂರ್ವಶ್ಲೋಕದಲ್ಲಿ ಹೇಳಿರುವ ಮತ್ತು ಈ ಶ್ಲೋಕದ ಉತ್ತರಾರ್ಧ ಮತ್ತು ಮುಂದಿನ ಶ್ಲೋಕಗಳಲ್ಲಿ ಹೇಳಲಾಗುವ ವಿಷಯಗಳಿಂದ ವಿರೋಧವು (ಉಂಟಾಗುತ್ತದೆ).

**ಅನುವಾದ–** ತನ್ನ ದೇಹ, ಮನೆ, ಪತ್ನಿ-ಪುತ್ರರು ಮೊದಲಾದವುಗಳಲ್ಲಿ ಗಾಢವಾದ ಅಭಿಮಾನವು ಜೀವಾತ್ಮನನ್ನು ಹುಟ್ಟು-ಸಾವುಗಳ ಚಕ್ರದಲ್ಲಿ ಸಿಕ್ಕಿಸುತ್ತದೆ. ಎಂದರೆ, ಈ ಅಭಿಮಾನದ ಫಲವಾಗಿ ಅನೇಕ ಜನ್ಮ-ಮರಣಗಳು ಸಂಭವಿಸುತ್ತವೆ. ಈ ಜನ್ಮ-ಮರಣಗಳ ಚಕ್ರವೇ ಸಂಸಾರ, ಇದೇ ಭಯ. ಆದ್ದರಿಂದ (ಈ ಸ್ಥಿತಿಗೆ ಒಳಗಾಗದಿರುವುದಕ್ಕಾಗಿ) ಭಕ್ತಿಯಿಂದ ದೇವರ ಸೇವೆಯನ್ನು ಮಾಡಬೇಕು. ಇದು ಭಯಂ ದ್ವಿತೀಯಾಭಿನಿವೇಶತಃ ..... ಎಂಬ ಭಾಗವತ ಶ್ಲೋಕದ ತಾತ್ಪರ್ಯ. ಇದು ತಾತ್ಪರ್ಯವಲ್ಲದಿದ್ದರೆ ಈ ಶ್ಲೋಕಕ್ಕೆ ಹಿಂದಿನ ಶ್ಲೋಕಗಳ ಈ ಶ್ಲೋಕದ ಉತ್ತರಾರ್ಧದ ಮತ್ತು ಮುಂದಿನ ಶ್ಲೋಕಗಳ ವಿರೋಧವುಂಟಾಗುತ್ತದೆ.

**ಭಾವವಿಲಾಸಿನೀ–** ಇದಾನೀಂ ಭಯಂ ದ್ವಿತೀಯಾಭಿನಿವೇಶತಸ್ಸ್ಯಾದೀಶಾದಪೇತಸ್ಯ ವಿಪರ್ಯಯೋಽಸ್ಮೃತಿಃ । ಯನ್ಮಾಯಯಾತೋ ಬುಧ ಆಭಜೇತ್ತಂ ಭಕ್ತ್ಯೈಕಯೇಶಂ ಗುರು-ದೇವತಾತ್ಮಾ । ಇತಿ ಭಾಗವತವಾಕ್ಯಸ್ಯೈಕ್ಯಪರತಾಂ ನಿರಾಕೃತ್ಯ ಸ್ವಾಭಿಮತಾರ್ಥಪರತಾಂ ಸ್ಥಾಪಯತಿ- **ದ್ವಿತೀಯಾಭಿನಿವೇಶೇನೇತಿ ॥** ಆತ್ಮದೇಹಗೇಹಾದಿ ಜೀವದೇಹಗೇಹಾದಿ । ಆತ್ಮನೋ ದೇಹಗೇಹಾದಿ ದ್ವಯಶಬ್ದೇನ ಭಣ್ಯತ ಇತಿ ಸ್ಮೃತಿಂ ಸ್ಮಾರಯಿತುಂ ಕೀರ್ತ್ಯತ ಇತ್ಯನುಕ್ತ್ವಾ ಭಣ್ಯತ ಇತ್ಯುಕ್ತವ್ । ತೇ ಸ್ಯಾದಿತಿ ಜೀವಂ ಪ್ರತಿವಚನಮ್ । ತತೋ ದೇಹಗೇಹಾದ್ಯಾಗ್ರಹಸ್ಯ ಭಯಹೇತುತ್ವಾತ್ । ನೋಚೇದೇವಮರ್ಥೋ ನ ಚೇತ್ ॥ ೩೬೦-೩೬೧ ॥

**ವಿವರಣೆ–** ಭಾಗವತ 11.2.37 ಶ್ಲೋಕದಲ್ಲಿ ಭಯಂ ದ್ವಿತೀಯಾಭಿ ನಿವೇಶತಃ... ಎಂದು ಇದೆ. ಅದ್ವೈತದರ್ಶನವು ಇಲ್ಲಿಯ ದ್ವಿತೀಯ ಶಬ್ದವನ್ನು ಎರಡನೆಯ ವಸ್ತು ಅಂದರೆ ಬ್ರಹ್ಮಭಿನ್ನವಾದ ಇಡೀ ಜಗತ್ತು ಎಂದು ವ್ಯಾಖ್ಯಾನಿಸುತ್ತದೆ. ಬ್ರಹ್ಮಾತಿರಿಕ್ತವಾದ ಜಗತ್ತಿನ ಮೇಲೆ ಅಭಿಮಾನದಿಂದ = ಸತ್ಯವಲ್ಲದ ಜಗತ್ತನ್ನು ಸತ್ಯ ಎಂದು

ತಿಳಿಯುವುದರಿಂದ ಸಂಸಾರವು ಸಂಭವಿಸುತ್ತದೆ ಎಂದೂ ವ್ಯಾಖ್ಯಾನಿಸುತ್ತದೆ. ಬ್ರಹ್ಮ ಸತ್ಯಂ ಜಗನ್ಮಿಥ್ಯಾ... ಎಂಬ ವಿಚಾರವೇ ಈ ಭಾಗವತ ಶ್ಲೋಕದ ತಾತ್ಪರ್ಯ ಎಂದು ನಿರ್ಣಯಿಸುತ್ತದೆ. ಅದ್ವೈತ ದರ್ಶನದ ಈ ವ್ಯಾಖ್ಯಾನವು ಪೂರ್ವಾಪರ ವಿರುದ್ಧ ಎಂದು ಯುಕ್ತಿಮಲ್ಲಿಕಾಕಾರರು 360ನೇ ಶ್ಲೋಕದಿಂದ ಆರಂಭಿಸಿ ಕೆಲವು ಶ್ಲೋಕಗಳಲ್ಲಿ ವಿವರಿಸುತ್ತಾರೆ.

ಅವಿದ್ಯಮಾನೋಪ್ಯವಭಾತಿ ಹಿ ದ್ವಯೋ.... (ಭಾಗವತ 11.2.38) ಈ ಶ್ಲೋಕವು ಪೂರ್ವಶ್ಲೋಕದ ದ್ವಿತೀಯ ಶಬ್ದದ ಅರ್ಥವನ್ನು ದ್ವಯ ಶಬ್ದದಿಂದ ಹೇಳಿದೆ. ದ್ವಯ ಶಬ್ದದ ಅರ್ಥವನ್ನು ಸ್ಪಷ್ಟಪಡಿಸುವ ಹರಿವಂಶವಚನವನ್ನು ಶ್ರೀಮಧ್ವಾಚಾರ್ಯರು ತಮ್ಮ ಭಾಗವತತಾತ್ಪರ್ಯನಿರ್ಣಯದಲ್ಲಿ ಉದಾಹರಿಸಿದ್ದಾರೆ.

ಆತ್ಮನೋ ದೇಹಗೇಹಾದಿ ದ್ವಯಶಬ್ದೇನ ಭಣ್ಯತೇ ।
ಅವಿದ್ಯಮಾನಂ ಜೀವಸ್ಯ ಪ್ರತಿಭಾತಿ ತದೀಯವತ್ ॥

ಜಾಗ್ರದ್ವತ್ತು ಯಥಾಸ್ವಪ್ನಃ ಪ್ರತಿಭಾತಿ ಮನೋರಥಃ ।

ವಿದ್ಯಾಮಾನವದೇವೈವಂ ದೇಹಾದೀಶವಶೇ ಸ್ಥಿತಮ್ ॥

ವಿಭಾತಿ ಸ್ವವಶತ್ವೇನ ಸೈಷಾ ಸಂಸೃತಿರುಚ್ಯತೇ ।
ತಸ್ಮಾತ್ ತದ್ವಿಷಯಂ ತ್ಯಕ್ತ್ವಾ ಮನೋ ವಿಷ್ಣೌ ನಿವೇಶಯೇತ್ ॥

- ಇತಿ ಹರಿವಂಶೇಷು

ಶ್ಲೋಕ 360 ರಲ್ಲಿರುವ ಭಣ್ಯತೇ ಪದದ ಬಗ್ಗೆ ಶ್ರೀಸುರೋತ್ತಮರು ಹೀಗೆ ಹೇಳುತ್ತಾರೆ. ಶ್ರೀ ಮಧ್ವಾಚಾರ್ಯರು ತಮ್ಮ ಭಾಗವತತಾತ್ಪರ್ಯ ನಿರ್ಣಯದಲ್ಲಿ ಉದಾಹರಿಸಿರುವ ಹರಿವಂಶವಚನದಲ್ಲಿ ಭಣ್ಯತೇ ಎಂದು ಇದೆ. ಗುರುರಾಜರು ತಮ್ಮ ಶ್ಲೋಕದಲ್ಲಿ ಕೀರ್ತ್ಯತೇ ಇತ್ಯಾದಿ ಪದಗಳನ್ನು ಹೇಳದೆ ಭಣ್ಯತೇ ಎಂದು ಹೇಳಿ ತಮ್ಮ ವಿಮರ್ಶೆಯು ಹರಿವಂಶಸ್ಮೃತಿಗೆ ಅನುಗುಣವಾಗಿದೆ ಎಂದು ಸೂಚಿಸಿದ್ದಾರೆ.

**ಆತ್ಮತೋನ್ಯದ್ ದ್ವಿತೀಯಂ ಚೇದ್ ಭಯಂ ತತ್ರಾಗ್ರಹಾದ್ ಯದಿ ।**
**ತರ್ಹೀಶಭಕ್ತಿಭಜನರೂಪೇ ಮುಖ್ಯೇ ದ್ವಿತೀಯಕೇ ।**
**ಕಥಮಂತೇ ವಿಧಿಶ್ಚ ಸ್ಯಾದ್ ಯತ್ ಪೂರ್ವಾರ್ಧೇ ನಿಷಿಧ್ಯತೇ ॥ ೩೬೨ ॥**

**ಅರ್ಥ–** ಆತ್ಮತಃ = ಪರಮಾತ್ಮ (ಪರಬ್ರಹ್ಮ) ನಿಗಿಂತ, ಅನ್ಯದ್ = ಬೇರೆಯಾಧ= ಜಗತ್ತು, ದ್ವಿತೀಯಂ ಚೇದ್ = ದ್ವಿತೀಯವಾದರೆ, ತತ್ರ = ಆ ದ್ವಿತೀಯದಲ್ಲಿ (ಜಗತ್‌ನಲ್ಲಿ), ಆಗ್ರಹಾದ್ = ಗಾಢ ಅಭಿಮಾನದಿಂದ, ಯದಿ ಭಯಂ ತರ್ಹಿ = ಭಯವು ಸಂಸಾರವು ಉಂಟಾಗುವುದಾದರೆ, ಅಂತೇ = ಶ್ಲೋಕದ (ಭಾಗವತ ೧೧.೨.೩೭) ಕೊನೆಯಲ್ಲಿ

ಈಶ-ಭಕ್ತಿ-ಭಜನ ರೂಪೇ = ಈಶ-ಭಕ್ತಿ-ಸೇವೆಗಳ ರೂಪವಾದ, ಮುಖ್ಯೇ ದ್ವಿತೀಯಕೇ = ಮುಖ್ಯವಾದ ದ್ವಿತೀಯ ಪದಾರ್ಥಗಳಲ್ಲಿ ವಿಧಿಶ್ಚ= ಆಭಜೇತ್ ಎಂಬ ಲಿಙಂತ ಪದದಿಂದ ಆದೇಶವು, ಕಥಂ ಸ್ಯಾದ್= ಹೇಗೆ ಸಂಭವಿಸೀತು, ಯತ್ = ಏಕೆಂದರೆ, ಪೂರ್ವಾರ್ಧೇ = ಶ್ಲೋಕದ ಪೂರ್ವಾರ್ಧದಲ್ಲಿ (ಇವುಗಳು) ನಿಷಿಧ್ಯತೇ = ನಿಷೇಧಿಸಲ್ಪಡುತ್ತವೆ.

**ಅನುವಾದ–** ಪರಬ್ರಹ್ಮನನ್ನು ಬಿಟ್ಟು ಇಡೀ ಜಗತ್ತು ದ್ವಿತೀಯ; ಈ ಜಗತ್ತಿನ ಮೇಲೆ ಗಾಢ ಅಭಿಮಾನದಿಂದ ಜೀವಾತ್ಮನಿಗೆ ಭಯವು ಉಂಟಾಗುತ್ತದೆ, ಎಂದರೆ, ಅವನು ಹುಟ್ಟು-ಸಾವುಗಳ ಚಕ್ರಕ್ಕೆ ಸಿಕ್ಕುತ್ತಾನೆ. ಇದು ಭಾಗವತ ೧೧.೨.೩೭ ರ ಪೂರ್ವಾರ್ಧದ ಅದ್ವೈತ ದರ್ಶನದ ವ್ಯಾಖ್ಯಾನ. ಇದರ ಪ್ರಕಾರ ದೇವರು-ಭಕ್ತಿ-ಭಜನೆಗಳು ದ್ವಿತೀಯ ವಾಗುತ್ತವೆ. ಭೇದವಿಲ್ಲದೆ ಈ ಮೂರು ಇರಲಾರವು. ಆದ್ದರಿಂದ ಅದ್ವೈತವಿರೋಧಿಯಾದ ಭೇದವನ್ನು ಅವಲಂಬಿಸಿರುವ ಈ ಮೂರು ಮುಖ್ಯದ್ವಿತೀಯಗಳು. ಈ ದ್ವಿತೀಯವನ್ನು (೧) ತಮ್ ಈಶಮ್ (೨) ಭಕ್ತ್ಯಾ (೩) ಆಭಜೇತ್ - ಎಂದು ಶ್ಲೋಕದ ಉತ್ತರಾರ್ಧವೇ ವಿಧಿಸುತ್ತದೆ. ಅದ್ವೈತ ವ್ಯಾಖ್ಯಾನದ ಪ್ರಕಾರ ಶ್ಲೋಕದ ಪೂರ್ವಾರ್ಧವು ದ್ವಿತೀಯವನ್ನು ನಿಷೇಧಿಸುತ್ತದೆ. ಉತ್ತರಾರ್ಧವು ಅದನ್ನು ವಿಧಿಸುತ್ತದೆ. ಭಾಗವತ ಶ್ಲೋಕದಲ್ಲಿ ಪೂರ್ವಾಪರ ವಿರೋಧವು ಇರಬಹುದೇ? ಸರ್ವಥಾ ಇಲ್ಲ. ಆದ್ದರಿಂದ ಅದ್ವೈತ ವ್ಯಾಖ್ಯಾನವು ಸರಿಯಲ್ಲ.

**ಭಾವವಿಲಾಸಿನೀ–** ತರ್ಹಿ ಕೋऽರ್ಥಃ ಪರಸ್ಯೇತ್ಯತಃ ಪರಾಭಿಮತಮರ್ಥ ಮನೂದ್ಯ ಪೂರ್ವೋತ್ತರವಿರೋಧಮೇವ ವಿಶದಯತಿ-**ಆತ್ಮತ ಇತಿ** ॥ ಆತ್ಮತಃ ಪರಮಾತ್ಮತಃ ಅನ್ಯಜ್ಜಗತ್। ತತ್ರ ಬ್ರಹ್ಮವ್ಯತಿರಿಕ್ತೇ ಜಗತಿ । ಈಶಶ್ಚ ಭಕ್ತಿಶ್ಚ ಭಜನಂ ಚ ತಾನ್ಯೇವ ರೂಪಂ ಯಸ್ಯ ತಸ್ಮಿನ್ ಮುಖ್ಯದ್ವಿತೀಯಕೇ ಸಾಕ್ಷಾದದ್ವೈತ ವಿರೋಧಿಭೇದವಾಸನಾರೂಪತ್ವೇನ ಪರಾನಭಿಮತ ಘಟ-ಪಟಾದಿತೋऽಪ್ಯಸ್ಯೈವ ದ್ವಿತೀಯಸ್ಯ ಮುಖ್ಯತ್ವಾದಿತಿ ಭಾವಃ । ಮಾಯಾವಾದಿಮತೇ ಹಿ ನಿರ್ವಿಶೇಷಚಿತಃ ಅವಿದ್ಯಾಶಾಬಲ್ಯೇ ಸತೀಶ್ವರಾಖ್ಯಂ ದ್ವಿತೀಯಂ ತಸ್ಮಿನ್‌ಭಕ್ತಿಸ್ತಸ್ಯ ಸೇವಾ ಚೇತಿ ದ್ವಿತೀಯಂ **ಚ ಪ್ರಥಮಂ ಭವತಿ** । ಪಶ್ಚಾದ್ಘಟಪಟಾದಿಕಂ ಜಗತ್ । ಅಂತೇ ಶ್ಲೋಕಸ್ಯೋತ್ತರಾರ್ಧೇ ವಿಧಿಃ ಆಭಜೇದಿತಿ ಲಿಙಂತಪದೇನವಿಧಾನಮ್ । ಯತಃ ಪೂರ್ವಾರ್ಧೇ ಬ್ರಹ್ಮಣೋ ದ್ವಿತೀಯೇऽಭಿನಿವೇಶತಃ ಭಯಂ ಸ್ಯಾದಿತಿ ದ್ವಿತೀಯಂ ದೂಷಯಿತ್ವಾ ಪುನರುತ್ತರಾರ್ಧೇ ಅತ ಇತಿ ದ್ವಿತೀಯಾಭಿನಿವೇಶಸ್ಯ ಭಯಹೇತುತ್ವಮೇವ ಹೇತೂಕೃತ್ಯ ಈಶಂ ಭಕ್ತ್ಯಾऽऽಭಜೇದಿತಿ ವಾಚೋ ಭಂಗ್ಯಂತರೇಣೇಶ್ವರಾದಿ ದ್ವಿತೀಯೇऽಭಿನಿವೇಶ ಏವ ವಿಧೀಯತೇ । ಅತಃ ಪೂರ್ವೋತ್ತರವಿರೋಧಃ । ಸೇವ್ಯಸೇವಕಭಾವೋಹಿ ಭೇದಘಟಿತತ್ವಾತ್ ಪರಸ್ಯ ಮುಖ್ಯಂ ದ್ವಿತೀಯಮ್ । ತಸ್ಯೈವ ವಿಧಾನೇಕಥಂ ನ ಪೂರ್ವೋತ್ತರವಿರೋಧ ಇತಿ ಭಾವಃ ॥ ೩೬೨ ॥

**ವಿವರಣೆ–** ಮುಖ್ಯ ದ್ವಿತೀಯ (ಅದ್ವೈತ ದರ್ಶನದ ಪ್ರಕಾರ)

ಅವಿದ್ಯಾ ಸಂಬಂಧವುಳ್ಳ ಶುದ್ಧ ಚೈತನ್ಯವೇ ಈಶ್ವರ. ಈ ಈಶ್ವರ ಅವನಲ್ಲಿ ಭಕ್ತಿ-ಅವನ ಸೇವೆ-ಇವು ದ್ವಿತೀಯಗಳು ಘಟ-ಪಟ ಮೊದಲಾದ ಪದಾರ್ಥಗಳೂ ದ್ವಿತೀಯ ಗಳು. ಇವೆರಡರಲ್ಲಿ ಮೊದಲನೆಯದು ಮುಖ್ಯ ದ್ವಿತೀಯ; ಇವು ಸಾಧಕನಿಗೆ ಅತಿಮುಖ್ಯವಾದುದರಿಂದ ಇದಲ್ಲದೆ, ಈಶನು ಸೇವ್ಯ. ಬುಧನು ಸೇವಕ, ಸೇವೆಯು ಕ್ರಿಯೆ. ಇವುಗಳಿಗೆ ಪರಸ್ಪರ ಭೇದವಿದೆ. ಭೇದವನ್ನೊಳಗೊಂಡ ಯಾವುದೇ ಪದಾರ್ಥವು ಅದ್ವೈತ ಚಿಂತಕನಿಗೆ ಭಯಜನಕ. ಆದ್ದರಿಂದ ಈಶ-ಬುಧ-ಸೇವೆಗಳು ಮುಖ್ಯದ್ವಿತೀಯ.

**ಗುರುದೇವಯೋರಾತ್ಮಾ ಚಿತ್ತಂ ಯಸ್ಯೇತಿ ವಿಗ್ರಹೇ ।**
**ಪದಂ ತದಪಿ ವಕ್ತೀಶಭಜಕಸ್ಯ ಗುಣಾಂತರಮ್ ॥ ೩೬೩ ॥**

**ಅರ್ಥ–** ಗುರುದೇವತಯೋಃ ಆತ್ಮಾ ಚಿತ್ತಂ ಯಸ್ಯ ಇತಿ ವಿಗ್ರಹೇ, ತದ್ ಅಪಿ ಪದಂ = ಆ ಪದವೂ ಕೂಡ (ಗುರುದೇವತಾತ್ಮಾ ಎಂಬ ಪದವೂ ಕೂಡ) ಈಶಭಜಕಸ್ಯ = ಈಶಸೇವಕನ ಗುಣಾಂತರಂ = ಇನ್ನೊಂದು ಗುಣವನ್ನು ವಕ್ತಿ = ಹೇಳುತ್ತದೆ.

**ಅನುವಾದ–** ಭಾಗವತ ಶ್ಲೋಕದಲ್ಲಿ ಗುರುದೇವತಾತ್ಮಾ ಎಂಬ ಸಮಸ್ತ ಪದವಿದೆ. ಗುರುದೇವತಯೋಃ ಆತ್ಮಾ ಯಸ್ಯ ಸಃ ಎಂದು ಇದರ ವಿಗ್ರಹ; ಆತ್ಮಾ ಎಂದರೆ ಮನಸ್ಸು; ಹೀಗೆ ಪರಿಗಣಿಸಿದರೆ ಗುರುಗಳಲ್ಲಿ ಮತ್ತು ಪರಮಾತ್ಮನಲ್ಲಿ ಮನಸ್ಸನ್ನು ಇಟ್ಟವನು ಎಂದು ಅರ್ಥವು ಲಭಿಸುತ್ತದೆ. ಇದು ಬುಧ ಪದಕ್ಕೆ ವಿಶೇಷಣ. ಇಂತಹ ಬುಧನು ಈಶನನ್ನು ಭಜಿಸಬೇಕು ಎಂದು ಅಭಿಪ್ರಾಯವು ಲಭಿಸುತ್ತದೆ. ಹರಿ-ಗುರುಗಳಲ್ಲಿ ಮನಸ್ಸು ಇರುವುದು ಈಶಭಜಕನ ಉತ್ಕೃಷ್ಟ ಗುಣ. ಆದ್ದರಿಂದ ಗುರುದೇವತಾತ್ಮಾ ಎಂಬ ವಿಶೇಷಣವು ಈಶನನ್ನು ಭಜಿಸುವವರಿಗೆ ಬೇಕಾದ ಇನ್ನೊಂದು ಗುಣವನ್ನು ಹೇಳುತ್ತದೆ.

**ಭಾವವಿಲಾಸಿನೀ–** ನನು ತರ್ಹಿ ಗುರುದೇವತಾತ್ಮೇತಿ ಪದಸ್ಯ ಕೋಽರ್ಥ ಇತ್ಯತ ಆಹ– **ಗುರುದೇವತಯೋರಿತಿ** ॥ ವಿಗ್ರಹೇ ಸಮಾಸೇ ಗುಣಾಂತರಂ ಗುರೌ ದೇವತಾಯಾಂ ಚ ಕೃತಮನಸ್ಕತ್ವರೂಪಗುಣಮ್ ॥ ೩೬೩ ॥

**ನ ಚೇತ್ ಪ್ರಾಗುಕ್ತಭಜನವಿರುದ್ಧಾರ್ಥಃ ಕಥಂ ವದ ।**
**ಲಿಙರ್ಥಃ ಸೋಽಪಿ ಬಲವಾನ್ ವಿಶೇಷಣಪದಾರ್ಥತಃ ॥ ೩೬೪ ॥**

**ಅರ್ಥ–** ನ ಚೇತ್ = ಹೀಗೆ ಅರ್ಥವಲ್ಲವಾದರೆ, ಪ್ರಾಗುಕ್ತ = ಹಿಂದೆ ಹೇಳಲ್ಪಟ್ಟ ಭಜನ = ಈಶ ಭಜನೆಗೆ ವಿರುದ್ಧಾರ್ಥಃ = ವಿರುದ್ಧವಾದ ಅರ್ಥವು, ಕಥಮ್? = ಹೇಗೆ? ವದ = ಹೇಳು. ಸಃ ಲಿಙರ್ಥಃ ಅಪಿ = ಆ ಲಿಙ್ ನ ಅರ್ಥವಾದರೂ ವಿಶೇಷಣ ಪದಾರ್ಥತಃ =

ಗುರುದೇವತಾತ್ಮಾ ಎಂಬ ವಿಶೇಷಣ ಪದದ ಅರ್ಥಕ್ಕಿಂತಲೂ, ಬಲವಾನ್ = ಹೆಚ್ಚು ಬಲವುಳ್ಳದ್ದು.

**ಅನುವಾದ–** ಗುರುದೇವತಾತ್ಮಾ ಎಂಬ ಪದಕ್ಕೆ ಈಶಭಜಕ ಎಂಬ ಅರ್ಥವಲ್ಲವಾದರೆ; ಇದಕ್ಕೆ ವಿರುದ್ಧವಾದ ಅರ್ಥವು ಯಾವುದೆಂದು ಹೇಳು! ಗುರುದೇವತಾತ್ಮಾ ಎಂಬ ವಿಶೇಷಣ ಪದಕ್ಕಿಂತಲೂ ಆಭಜೇತ್ ಎಂಬ ಲಿಂಜ್‌ನ ಅರ್ಥವು ಬಲಿಷ್ಠವಾದುದು.

**ಭಾವವಿಲಾಸಿನೀ–** ನಚೇತ್ ಏವಮರ್ಥೋ ನಚೇತ್ । ಪ್ರಾಗುಕ್ತೇಶ್ವರಭಜನವಿರುದ್ಧಃ ಗುರುದೇವತಾಸ್ವರೂಪತ್ವ ರೂಪೋಽರ್ಥಃ । ಪೂರ್ವಮೀಶ್ವರಭೇದಘಟಿತ ತತ್ಸೇವಾಮುಕ್ತ್ವಾ ಇದಾನೀಂ ಪುನಸ್ತದಭೇದೋಪಿ ಕಥಂ ವಕ್ತವ್ಯ ಇತಿ ಭಾವಃ । ಲಿಙರ್ಥಃ ಆಭಜೇದಿತಿ ಲಿಙರ್ಥಃ । ಸಃ ಸೇವ್ಯಸೇವಕಭಾವಃ । ಬಲವಾನ್ ಉದ್ದೇಶ್ಯಪದಾರ್ಥತ್ವಾದಾವಶ್ಯಕಃ । ವಿಶೇಷಪದಾರ್ಥತಃ ಬುಧಾಖ್ಯಸ್ಯ ವಿಶೇಷ್ಯಸ್ಯ ವಿಶೇಷಣೀಭೂತ ಗುರುದೇವತಾತ್ಮಪದಾರ್ಥಾತ್ । ಲಿಙ್ಲೋಟ್ ತವ್ಯಪ್ರತ್ಯಯಾರ್ಥೋ ಹಿ ವಾಕ್ಯಮುಖ್ಯಾರ್ಥಃ । ತದನಂತರಂ ಅಧಿಕಾರಿವಾಚಕಬುಧಪದಮ್ । ತತಃ ಪರಂ ತಸ್ಯ ವಿಶೇಷಣೀಭೂತಪದಮ್ । ಅತೋ ಮುಖ್ಯೇ ಬಾಧಾಯೋಗಾತ್ ತದಾನುಕೂಲ್ಯೇನೈವಾನ್ಯತ್ಪದಂ ಯೋಜ್ಯಮಿತಿ ಭಾವಃ ॥ ೩೬೪ ॥

**ವಿವರಣೆ–** ಗುರುದೇವತಾತ್ಮಾ ಪದಕ್ಕೆ ಗುರುಗಳಲ್ಲಿ ಮತ್ತು ಪರಮಾತ್ಮನಲ್ಲಿ ಮನಸ್ಸುಳ್ಳವನು ಎಂದು ಅರ್ಥವಲ್ಲದಿದ್ದರೆ, ಗುರುಗಳ ಮತ್ತು ಪರಮಾತ್ಮನ ಸ್ವರೂಪನೇ ಆದ ಎಂದು ಅರ್ಥವಾಗಬೇಕಾಗುತ್ತದೆ. ಆಗ ಗುರು ಮತ್ತು ಪರಮಾತ್ಮನಾದ ಬುಧನು ಈಶನನ್ನು ಭಕ್ತಿಯಿಂದ ಭಜಿಸಬೇಕು ಎಂದು ಅರ್ಥವಾಗುತ್ತದೆ. ಈ ಅರ್ಥವು ಭಾಗವತ ಪದ್ಯದಲ್ಲಿರುವ ಆಭಜೇತ್ ನ ಅರ್ಥಕ್ಕೆ ವಿರುದ್ಧ. ಆಭಜೇತ್ ನಲ್ಲಿ ಆ + ಭಜ್ + ಲಿಙ್ - ಹೀಗೆ ಮೂರು ಭಾಗಗಳಿವೆ. ಭಜ್‌ಗೆ = ಸೇವಾ ಎಂದು ಅರ್ಥ. ಲಿಙ್ ಗೆ = ಇಷ್ಟ ಸಾಧನ (ಆದ್ದರಿಂದ ಕರ್ತವ್ಯ) ಎಂದು ಅರ್ಥ. ಈ ವಾಕ್ಯದಲ್ಲಿ ಲಿಙ್ ನ ಅರ್ಥವೇ ಮುಖ್ಯ. ಸೇವೆಯು ಯಾರಿಗೆ ಇಷ್ಟಸಾಧನ? ಸೇವಕನಿಗೆ. ಯಾರ ಸೇವೆ? ಈಶನ ಸೇವೆ. ಸೇವ್ಯ (ಈಶ) ಮತ್ತು ಸೇವಕ (ಬುಧ) ರು ಇದ್ದರೆ ಮಾತ್ರ ಸೇವೆಯು ಇಷ್ಟಸಾಧನ ಎಂಬ ಧಾತು ಮತ್ತು ಲಿಙ್‌ಗಳ ಅರ್ಥವು ಸಮಂಜಸವಾಗುವುದು. ಸೇವಕನಾದ ಬುಧನು ಪರಮಾತ್ಮನೇ ಆಗಿದ್ದರೆ, ಪರಮಾತ್ಮನು ಸೇವಕನಲ್ಲವಾದ್ದರಿಂದ ಬುಧನೂ ಸೇವಕನಾಗಲಾರ, ಸೇವಕನಿಲ್ಲದಿದ್ದರೆ ಪರಮಾತ್ಮನು ಸೇವ್ಯನೂ ಆಗಲಾರ. ಸೇವ್ಯ-ಸೇವಕರಿಲ್ಲದೆ ಧಾತು ಮತ್ತು ಲಿಙ್‌ಗಳ ಅರ್ಥವೂ ಸಮಂಜಸವಾಗಲಾರದು. ವಾಕ್ಯದ ಮುಖ್ಯಭಾಗ ಆಭಜೇತ್. ಇದರ ಅರ್ಥವು ಈಶ ಮತ್ತು ಬುಧನ ಭೇದವನ್ನು ತನ್ನೊಳಗೇ ಇಟ್ಟುಕೊಂಡಿದೆ. ಪದ್ಯದಲ್ಲಿ ಆಭಜೇತ್ ಪದದ ಅನಂತರ ಬಂದಿರುವ ಗುರುದೇವತಾತ್ಮಾ ಪದವು ಈಶ-ಬುಧರ ಅಭೇದವನ್ನು ಹೇಳಿದರೆ, ಇದು ಆಭಜೇತ್ ನ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಹೇಳಿದಂತಾಗುತ್ತದೆ. ಇದೇ ಪ್ರಾಗುಕ್ತಭಜನ-

ವಿರುದ್ಧಾರ್ಥ. ಭಾಗವತ ಪದ್ಯವು ಹೀಗೆ ಪೂರ್ವೋತ್ತರ ವಿರುದ್ಧಾರ್ಥವನ್ನು ಹೇಳುವುದಿಲ್ಲ. ಆದ್ದರಿಂದ ಗುರುದೇವಾತಾತ್ಮಾ ಎಂಬ ಪದದಿಂದ ಜೀವ-ಬ್ರಹ್ಮರ ಐಕ್ಯವು ಸಿದ್ಧವಾಗುವುದಿಲ್ಲ.

**ಅತೋ ಗ್ರಾಂಥಿಕಮುದ್ರಾಜ್ಞೋ ನಾಪಾತಾರ್ಥೇನ ತುಷ್ಯತಿ ॥ ೩೬೫ ॥**

**ಅರ್ಥ–** ಅತಃ = ಆದ್ದರಿಂದ = ಅದ್ವೈತನಿಷ್ಠರ ಅರ್ಥವು ಪೂರ್ವೋತ್ತರ ವಿರುದ್ಧವಾದುದರಿಂದ, ಗ್ರಾಂಥಿಕ = ಗ್ರಂಥದ = ಆಗಮದ ಮುದ್ರಾ = ಲಕ್ಷಣವನ್ನು ಜ್ಞಃ = ತಿಳಿದವನು ಆಪಾತಾರ್ಥೇನ = ಮೇಲುನೋಟಕ್ಕೆ ಕಾಣುವ ಅರ್ಥದಿಂದ ನ ತುಷ್ಯತಿ = ಸಂತೋಷಪಡುವುದಿಲ್ಲ.

**ಅನುವಾದ–** ಭಾಗವತ ಪದಕ್ಕೆ ಅದ್ವೈತನಿಷ್ಠರು ಹೇಳುವ ಅರ್ಥವು ಪೂರ್ವಾಪರ ವಿರುದ್ಧ. ಪೂರ್ವೋತ್ತರ ವಿರೋಧಾಭಾವ, ಪ್ರಮಾಣ ವಿರೋಧಾಭಾವಗಳು ಗ್ರಂಥದ, ಎಂದರೆ, ಆಗಮದ ಲಕ್ಷಣ. ಭಾಗವತವು ಆಗಮ. ಇದರಲ್ಲಿ ಈ ಲಕ್ಷಣವು ಇದ್ದೇ ಇದೆ. ಈ ಲಕ್ಷಣವನ್ನು ತಿಳಿದ ವ್ಯಾಖ್ಯಾನಕಾರರು ಯಾರೂ ಮೇಲುನೋಟಕ್ಕೆ ಕಾಣುವ, ಪೂರ್ವೋತ್ತರವಿರುದ್ಧವಾದ ಅರ್ಥವನ್ನು ಹೇಳಿ ಸಂತೋಷಿಸುವುದಿಲ್ಲ.

**ಭಾವವಿಲಾಸಿನೀ–** ಅತಃ ಪರಕೀಯಾರ್ಥಸ್ಯ ಪೂರ್ವೋತ್ತರವಿರುದ್ಧತ್ವಾತ್ ॥ ೩೬೫ ॥

**ಪೂರ್ವೋತ್ತರಾವಿರುದ್ಧಾರ್ಥಂ ವದೇನ್ಮೀಮಾಂಸಯಾ ಬುಧಃ ।**
**ನ ಚೇದಾಕಾಶಶಬ್ದೇನ ಪರಂಬ್ರಹ್ಮ ಕಥಂ ಜಗುಃ ॥ ೩೬೬ ॥**

**ಅರ್ಥ–** ಬುಧಃ = ಪ್ರಾಜ್ಞನು, ಮೀಮಾಂಸಯಾ = ವಿಮರ್ಶೆಯಿಂದ ಪೂರ್ವೋತ್ತರಾವಿರುದ್ಧಾರ್ಥಂ = ಹಿಂದಿನ-ಮುಂದಿನ ವಾಕ್ಯಗಳಿಗೆ ವಿರುದ್ಧವಾಗದ ಅರ್ಥವನ್ನು ವದೇತ್ = ಹೇಳಬೇಕು. ನ ಚೇತ್ = ಹೀಗಲ್ಲದಿದ್ದರೆ, ಆಕಾಶ ಶಬ್ದೇನ = ಆಕಾಶ ಶಬ್ದದಿಂದ, ಪರಂಬ್ರಹ್ಮ = ಪರಬ್ರಹ್ಮನನ್ನು, ಕಥಮ್ = ಹೇಗೆ ತಾನೆ ಜಗುಃ = ಹೇಳಿದರು?

**ಅನುವಾದ–** ತಿಳಿದವರು ವಿಮರ್ಶಿಸಿ ಹಿಂದಿನ-ಮುಂದಿನ ವಾಕ್ಯಗಳಿಗೆ ಮತ್ತು ಬೇರೆ ಪ್ರಮಾಣಗಳಿಗೆ ವಿರೋಧವಿಲ್ಲದಂತೆ ವಾಕ್ಯಗಳಿಗೆ ಅರ್ಥವನ್ನು ಹೇಳಬೇಕು. ಈ ವ್ಯವಸ್ಥೆಯು ಇರುವುದರಿಂದಲೇ ಛಾಂದೋಗ್ಯ (೧.೯,೮-೧೪-೧೧) ಮತ್ತು ತೈತ್ತಿರೀಯ (ಬ್ರಹ್ಮವಲ್ಲಿ) ಉಪನಿಷತ್‌ಗಳಲ್ಲಿ ಇರುವ ಆಕಾಶ ಶಬ್ದವನ್ನು ಬ್ರಹ್ಮಸೂತ್ರಕಾರರು ೧.೧.೨೨., ೧.೩.೪೧ ಮತ್ತು ೧.೪.೧೫ ಸೂತ್ರಗಳಲ್ಲಿ ವಿಷ್ಣು ಎಂದು ವ್ಯಾಖ್ಯಾನಿಸಿದ್ದಾರೆ. ಭಾಗವತ ಪದ್ಯದಲ್ಲಿರುವ ಗುರುದೇವತಾತ್ಮಾ ಬುಧಃ ಈ ಪದಗಳಿಗೆ ಗುರು ಮತ್ತು ದೇವತಾ ಸ್ವರೂಪನೇ ಆದ ಬುಧನು ಎಂಬ ವ್ಯಾಖ್ಯಾನವು ಪೂರ್ವೋತ್ತರ ವಿರುದ್ಧ. ಆದ್ದರಿಂದ ಹೀಗೆ ವ್ಯಾಖ್ಯಾನಿಸದೆ ಗುರು ದೇವತೆಗಳಲ್ಲಿ

ಮನಸ್ಸನ್ನು ಇಟ್ಟಿರುವ ಬುಧನು ಎಂದು ವ್ಯಾಖ್ಯಾನಿಸಬೇಕು. ಈ ವ್ಯಾಖ್ಯಾನವು ಪೂರ್ವೋತ್ತರ ವಿರುದ್ಧವಲ್ಲ.

**ಭಾವವಿಲಾಸಿನೀ–** ನಚೇತ್ ಪೂರ್ವೋತ್ತರವಿರುದ್ಧೋಥೋನ ವಕ್ತವ್ಯಶ್ಚೇತ್ ।।೩೬೬।।

**ವಿವರಣೆ–** ಬ್ರಹ್ಮ ಮೀಮಾಂಸಾಶಾಸ್ತ್ರದಲ್ಲಿ ಮೂರು ಸೂತ್ರಗಳಲ್ಲಿ ಆಕಾಶ ಶಬ್ದವನ್ನು ವ್ಯಾಖ್ಯಾನಿಸಿದ್ದಾರೆ.

(1) ಆಕಾಶ್‌ಸ್ತಲ್ಲಿಂಗಾತ್ = 1.1.22

(2) ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್ 1.3.41

(3) ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ 1.4.15

(1) ಅಸ್ಯ ಲೋಕಸ್ಯ ಕಾ ಗತಿಃ? ಆಕಾಶ ಇತಿ ಹ ಉವಾಚ (ಛಾಂ 1.9) ಈ ಶ್ರುತಿಯು ಆಕಾಶ ವನ್ನು ಲೋಕದ ಗತಿ ಎಂದು ಹೇಳುತ್ತದೆ. ಲೋಕಕ್ಕೆ ಗತಿಯಾಗುವ ವಸ್ತುವು ಆನಂದ ಪೂರ್ಣವಾಗಿರಲೇಬೇಕು ಎಂದು ತೈತ್ತಿರೀಯವು ಹೇಳುತ್ತದೆ. ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್. ಈ ವಾಕ್ಯಗಳನ್ನು ಸಮೀಕರಿಸಿದಾಗ ಭೂತಾಕಾಶವು ಆನಂದಮಯ ಎಂಬ ಅಭಿಪ್ರಾಯಕ್ಕೆ ಅವಕಾಶವಿದೆ. ಸೂತ್ರವು ಹೇಳುತ್ತದೆ : ಛಾಂದೋಗ್ಯ 1.9 ರಲ್ಲಿ ಪ್ರಸುತ್ತವಾದ ಆಕಾಶವನ್ನು ಕುರಿತು ಇದೇ ವಾಕ್ಯದಲ್ಲಿ ಪರೋವರೀಯ ಉದ್ಗೀಥ ಅನಂತ ಎಂಬ ಹೇಳಿಕೆಗಳಿವೆ. ಸರ್ವೋತ್ತಮ, ಸರ್ವೋತ್ತಮ ಎಂದು ವೇದಪ್ರತಿಪಾದ್ಯ, ಅನಂತ ಎಂದು ಈ ಹೇಳಿಕೆಗಳ ಅರ್ಥ. ಈ ಉತ್ಕರ್ಷಗಳು ಭೂತಾಕಾಶದಲ್ಲಿ ಸರ್ವಥಾ ಇಲ್ಲ, ವಿಷ್ಣುವಿನಲ್ಲಿ ಇದೆ. ಆದ್ದರಿಂದ ಈ ಶ್ರುತಿಯಲ್ಲಿ ಆಕಾಶಶಬ್ದಕ್ಕೆ ವಿಷ್ಣು ಎಂದು ಅರ್ಥ. ಆದ್ದರಿಂದ ಅವನೇ ಲೋಕಗತಿ. ಅವನೇ ತೈತ್ತಿರೀಯದಲ್ಲಿ ಹೇಳಲ್ಪಡುವ ಆಕಾಶ. ಆದ್ದರಿಂದ ಅವನೇ ಆನಂದಮಯ.

ಛಾಂದೋಗ್ಯದ ಆಕಾಶವನ್ನು ಭೂತಾಕಾಶ ಎಂದು ಪರಿಗಣಿಸಿದರೆ ಉತ್ತರ ವಿರೋಧವಿದೆ; ತೈತ್ತಿರೀಯದ ವಿರೋಧವಿದೆ; ಪ್ರಮಾಣಬಾಧವಿದೆ. ವಿಷ್ಣು ಎಂದು ಪರಿಗಣಿಸಿದರೆ ಈ ದೋಷಗಳಿಲ್ಲ, ಆದ್ದರಿಂದ ಸೂತ್ರಕಾರರು ವಿಷ್ಣು ಎಂದು ನಿರ್ಣಯಿಸಿದ್ದಾರೆ.

(2) ವಿಷ್ಣುವು ಸರ್ವಾಧಾರ ಎಂದು ಆಥರ್ವಣೋಪನಿಷತ್‌ನ ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥ ಆತ್ಮಾನಮ್.... ಎಂಬ ವಾಕ್ಯದಿಂದ ತಿಳಿಯುತ್ತದೆ.

ಆಕಾಶೋ ವೈನಾಮ ನಾಮರೂಪಯೋರ್ನಿರ್ವಹಿತಾ (8.14.1) ಎಂಬ ಛಾಂದೋಗ್ಯ ವಾಕ್ಯದಿಂದ ಆಕಾಶವು ಸರ್ವಾಧಾರ ಎಂದು ತಿಳಿಯುತ್ತದೆ. ಈ ವಾಕ್ಯದಲ್ಲಿ ಇರುವ ವೈ, ನಾಮ-ಈ ಅವ್ಯಯಗಳಿಗೆ ಪ್ರಸಿದ್ಧ ಎಂದು ಅರ್ಥ. ಆದ್ದರಿಂದ ಇಲ್ಲಿಯ ಆಕಾಶ ಶಬ್ದಕ್ಕೆ ಪ್ರಸಿದ್ಧ ಆಕಾಶವೇ ಅರ್ಥ. ಆದ್ದರಿಂದ ಆಥರ್ವಣದ ಅಭಿಪ್ರಾಯಕ್ಕೆ ಛಾಂದೋಗ್ಯದ ವಿರೋಧವಿದೆ. ಈ ವಿರೋಧವನ್ನು ಸೂತ್ರಕಾರರು ಅರ್ಥಾಂತರತ್ವಾದಿ ವ್ಯಪದೇಶವನ್ನು (1.3.41) ತೋರಿಸಿ ಪರಿಹರಿಸಿದ್ದಾರೆ.

ಇದೇ ಛಾಂದೋಗ್ಯದಲ್ಲಿ ತೇ ಯದಂತರಾ ತದ್ ಬ್ರಹ್ಮ ಎಂದು ಇದೆ. ಆಕಾಶವನ್ನು ನಾಮ-ರೂಪ ವಿಲಕ್ಷಣ ಎಂದು, ಬ್ರಹ್ಮ ಎಂದು ಇಲ್ಲಿ ಹೇಳಲಾಗಿದೆ. ಜಡ ಆಕಾಶದಲ್ಲಿ ಈ ಗುಣಗಳು ಇಲ್ಲ. ಆದ್ದರಿಂದ ಇಲ್ಲಿಯೂ ಆಕಾಶ ವಿಷ್ಣು. ಇಲ್ಲಿ ಸೂತ್ರಕಾರರು ಪೂರ್ವೋತ್ತರಾವಿರುದ್ಧ ಅರ್ಥವನ್ನು ಆಕಾಶಶಬ್ದಕ್ಕೆ ಹೇಳಿದ್ದಾರೆ.

(3)ತಸ್ಮಾದ್ ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಆಕಾಶಾದ್‌ವಾಯುಃ ಎಂದು ತೈತ್ತಿರೀಯ ಬ್ರಹ್ಮವಲ್ಲಿಯಲ್ಲಿ ಇದೆ. ಇಲ್ಲಿ ಆಕಾಶವು ಆತ್ಮನಿಂದ ಹುಟ್ಟಿ ವಾಯುಜನಕ ಎಂದು ತಿಳಿಯುತ್ತದೆ. ಪರಮಾತ್ಮನಿಗೆ ಹುಟ್ಟು ಇಲ್ಲವೇ ಇಲ್ಲ. ಆದ್ದರಿಂದ ಆತ್ಮನಿಂದ ಸಂಭೂತವಾಗಿರುವ ಆಕಾಶವು ವಿಷ್ಣುವಲ್ಲ; ಆದ್ದರಿಂದ ಇಲ್ಲಿಯ ಆಕಾಶಶಬ್ದಕ್ಕೆ ವಿಷ್ಣು ಎಂದು ಅರ್ಥವಲ್ಲ ಎಂದು ಪೂರ್ವಪಕ್ಷ.

ಇಲ್ಲಿಯೂ ಆಕಾಶ ಶಬ್ದಕ್ಕೆ ವಿಷ್ಣು ಎಂದೇ ಅರ್ಥ. ಆಕಾಶದ ಉತ್ಪತ್ತಿಯು ಆಗುವಾಗ ಅದರ ನಿಯಾಮಕನಾಗಿ ಅದರೊಳಗೆ ಆಕಾಶನಾಮಕ ಭಗವದ್‌ರೂಪದ ಅಭಿವ್ಯಕ್ತಿಯಾಗುತ್ತದೆ. ಬೃಹದಾರಣ್ಯಕದಲ್ಲಿ ಯ ಆಕಾಶೇ ತಿಷ್ಠನ್, ಆಕಾಶಮಂತರೋ ಯಮಯತಿ, ಯಮಾಕಾಶೋ ನ ವೇದ... ಎಂದು ಹೇಳಿದೆ. ಆಕಾಶದ ಒಳಗಿದ್ದು ನಿಯಾಮಕ, ಇದನ್ನು ಭೂತಾಕಾಶಾಭಿಮಾನಿಯು ತಿಳಿದಿಲ್ಲ ಎಂದು ಇದರ ಅರ್ಥ. ನಿಯಮೇನ, ತಿಳಿಯಲ್ಪಡದಿರುವುದು ಇತ್ಯಾದಿಗಳು ಪರಮಾತ್ಮನ ಮಹಿಮೆ ಎಂದು ಐತರೇಯದಲ್ಲಿ ಹೇಳಿದೆ.

ತೈತ್ತಿರೀಯದಲ್ಲಿ ಹೇಳಿದ, ಆತ್ಮಸಂಭೂತವೂ, ವಾಯುಜನಕವೂ ಆದ ಆಕಾಶವು ವಿಷ್ಣು ಅಲ್ಲದಿದ್ದರೆ ಬಹದಾರಣ್ಯಕ, ಐತರೇಯಗಳ ವಿರೋಧವು ಉಂಟಾಗುತ್ತದೆ. ಸಕಲ ಕಾರಣತ್ವವನ್ನು ಹೇಳುವ ವಾಕ್ಯಗಳ ವಿರೋಧವೂ ಉಂಟಾಗುತ್ತದೆ. ಆತ್ಮನಿಂದ ಹುಟ್ಟುವ ಆಕಾಶದ ಒಳಗೆ ಅದಕ್ಕೆ ನಿಯಾಮಕವಾಗಿ ಆಕಾಶ ನಾಮಕ ಭಗವದ್ರೂಪದ ಅಭಿವ್ಯಕ್ತಿಯಾಗುತ್ತಿದೆ ಎಂದು ವ್ಯಾಖ್ಯಾನಿಸಿದರೆ ಎಲ್ಲ ವಿರೋಧಗಳ ಪರಿಹಾರವಾಗುತ್ತದೆ. ಆದ್ದರಿಂದಲೇ ಸೂತ್ರಕಾರರು ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ಎಂದು ಹೇಳಿ ತೈತ್ತಿರೀಯದ ಬ್ರಹ್ಮವಲ್ಲಿಯ ಆಕಾಶಶಬ್ದಕ್ಕೆ ವಿಷ್ಣು ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ.

**ಗ್ರಂಥೇಸ್ಮಿನ್ ದೇಹಗೇಹಾದಿ ಭಯಹೇತುತಯೋಚ್ಯತೇ ।**
**ಸ್ಥಲೇ ಸ್ಥಲೇ ತತ್ಸಮೋಕ್ತ್ಯಾ ತಸ್ಯೈವ ಸ್ಯಾದ್ ದ್ವಿತೀಯತಾ ॥ ೩೬೭ ॥**

**ಅರ್ಥ–** ಅಸ್ಮಿನ್ ಗ್ರಂಥೇ = ಈ ಗ್ರಂಥದಲ್ಲಿ, ಭಾಗವತದಲ್ಲಿ, ಸ್ಥಲೇ ಸ್ಥಲೇ = ಬಹಳ ಕಡೆ, ದೇಹಗೇಹಾದಿ = ದೇಹ, ಮನೆ ಮೊದಲಾದವುಗಳು, ಭಯಹೇತುತಯಾ = ಭಯಕಾರಣಗಳೆಂದು ಉಚ್ಯತೇ = ಹೇಳಲ್ಪಡುತ್ತದೆ. ತತ್ಸಮೋಕ್ತ್ಯಾ = ಆ ಸಮಾನ ಉಕ್ತಿಯಿಂದ, ತಸ್ಯೈವ = ಅದಕ್ಕೇ = ದೇಹಗೇಹ ಮೊದಲಾದವುಗಳಿಗೇ ದ್ವಿತೀಯತಾ = ದ್ವಿತೀಯತ್ವವು ಸ್ಯಾತ್ = ಉಪಪಪನ್ನವಾಗುವುದು.

**ಅನುವಾದ–** ಭಾಗವತ ಗ್ರಂಥದಲ್ಲಿ ಬಹಳ ಕಡೆ ದೇಹ-ಗೇಹ-ಧನ-ಅಪತ್ಯಾದಿಗಳು ಭಯಕ್ಕೆ ಕಾರಣಗಳೆಂದು ಹೇಳಲ್ಪಟ್ಟಿದೆ. ಈ ಭಾಗವತ ಸಮಾಖ್ಯೆಯಿಂದ ದೇಹ-ಗೇಹಾದಿಗಳಿಗೆ ದ್ವಿತೀಯತ್ವವು ಯುಕ್ತವಾಗುತ್ತದೆ.

**ಭಾವವಿಲಾಸಿನೀ–** ದ್ವಿತೀಯಶಬ್ದೇನ ದೇಹಗೇಹಾದಿಕಮೇವ ಗ್ರಾಹ್ಯಮಿತ್ಯತ್ರಾಽಽಂತರಯುಕ್ತಿ-ಮಪ್ಯಾಹ – **ಗ್ರಂಥ ಇತಿ** ॥ ಅಸ್ಮಿನ್ ಗ್ರಂಥೇಭಾಗವತೇ । ತಸ್ಮಾತ್ ರಜೋರಾಗವಿಷಾದ-ಮನ್ಯುಮಾನಸ್ಪೃಹಾಭಯದೈನ್ಯಾಧಿಮೂಲಮ್ । ಹಿತ್ವಾಗೃಹಂ ಸಂಸೃತಿಚಕ್ರವಾಲಂ ನೃಸಿಂಹ-ಪಾದಂ ಭಜತಾಽಕುತೋಭಯಮಿತ್ಯಾದೌ ಸ್ಥಲೇಸ್ಥಲೇ । ತತ್ಸಮೋಕ್ತ್ಯಾ ತತ್ಸಮಾಖ್ಯಯಾ । ದ್ವಿತೀಯತಾ ಭಯಹೇತುಭೂತದ್ವಿತೀಯತಾ ॥ ೩೬೭ ॥

**ವಿವರಣೆ-** ಭಾಗವತದಲ್ಲಿ ಬಹಳ ಕಡೆ ದೇಹ-ಗೇಹ ಮೊದಲಾದವುಗಳನ್ನು ಭಯಕಾರಣ ಎಂದು ಹೇಳಲಾಗಿದೆ.

(1) ತಸ್ಮಾದ್ರಜೋರಾಗ ವಿಷಾದಮನ್ಯುಮಾನಸ್ಪೃಹಾಭಯದೈನ್ಯಾಧಿಮೂಲಮ್ ।
ಹಿತ್ವಾ ಗೃಹಂ ಸಂಸೃತಿಚಕ್ರವಾಲಂ ನೃಸಿಂಹಪಾದಂ ಭಜತಾಕುತೋಭಯಮ್॥

(2) ಹಿತ್ವಾತ್ಮಪಾತಂ ಗೃಹಮಂಧಕೂಪಂ ವನಂ ಗತೋ ಯದ್ಧರಿಮಾಶ್ರಯೇತ ।

(3) ಕಿಮು ವ್ಯವಹಿತಾಪತ್ಯದಾರಾಗಾರಧನಾದಯಃ ।

ಅವುಗಳು ಭಯಂ ದ್ವಿತೀಯಾಭಿನಿವೇಶತಃ .... (11.2.37) - ಈ ಉಕ್ತಿಗೆ ಸಮಾನವಾದ ಉಕ್ತಿಗಳು, ಅವುಗಳಲ್ಲಿ ಗೃಹ, ಅಪತ್ಯ, ಧನ, ಪತ್ನಿ - ಇವುಗಳನ್ನು ಭಯಜನಕ ಎಂದು ವರ್ಣಿಸಲಾಗಿದೆ. ಇಲ್ಲಿ ದ್ವಿತೀಯವನ್ನು ಭಯಜನಕ ಎಂದು ಹೇಳಲಾಗಿದೆ. ಆದ್ದರಿಂದ ಈ ಪದ್ಯದಲ್ಲಿ ಹೇಳಲ್ಪಟ್ಟಿರುವ ದ್ವಿತೀಯ ಎಂದರೆ ದೇಹ-ಗೇಹ ಮೊದಲಾದವುಗಳು. ಬ್ರಹ್ಮಭಿನ್ನವಾದ ಸಮಸ್ತ ಜಗತ್ ಅಲ್ಲ.

**ಸದ್ಧರ್ಮಂ ಸಾಧುಭಿಃ ಸಂಗಂ ತತ್ಪೂರುಷನಿಷೇವಣಮ್ ।**
**ಯೋ ಹ್ಯಪೇಕ್ಷಿತಮಾಚಷ್ಟೇ ನಿರಾಚಷ್ಟೇ ಕಥಂ ಹಿ ತತ್ ॥ ೩೬೮ ॥**

**ಅರ್ಥ–** ಯಃ = ಯಾವ ಗ್ರಂಥವು, ಸದ್ಧರ್ಮಂ = ಉತ್ತಮ ಧರ್ಮವನ್ನು ಸಾಧುಭಿಃ ಸಂಗಂ = ಸಾಧುಗಳೊಡನೆ ಸಂಗವನ್ನು, ತತ್ಪುರುಷ ನಿಷೇವಣಂ = ಭಗವದ್ಭಕ್ತರ ಸೇವೆಯನ್ನು, ಅಪೇಕ್ಷಿತಂ = ಬೇಕಾದದ್ದು ಎಂದು, ಆಚಷ್ಟೇ = ಹೇಳುವುದೋ (ಅದೇ ಗ್ರಂಥವು) ತತ್ = ಅದನ್ನು, ಸದ್ಧರ್ಮ ಇತ್ಯಾದಿಗಳನ್ನು ಕಥಂ ಹಿ = ಹೇಗೆ ತಾನೇ, ನಿರಾಚಷ್ಟೇ = ನಿರಾಕರಿಸುತ್ತದೆ?

**ಅನುವಾದ–** ಭಾಗವತ ಗ್ರಂಥವು ಉತ್ತಮ ಧರ್ಮವನ್ನು, ಸಾಧುಗಳ ಸಂಗವನ್ನು ಮತ್ತು ಭಗವದ್ಭಕ್ತರ ಸೇವೆಯನ್ನು ಪುರುಷಾರ್ಥ ಸಾಧನ ಎಂದು ಹೇಳುತ್ತದೆ. ಅದ್ವೈತ ದರ್ಶನದ ದ್ವಿತೀಯ ಶಬ್ದದ ಅರ್ಥದಲ್ಲಿ ಇವೆಲ್ಲವೂ ಸೇರುತ್ತವೆ; ಆದ್ದರಿಂದ ಇವು ಭಯಕಾರಣಗಳು; ಇವುಗಳನ್ನು ತ್ಯಜಿಸಬೇಕು ಎಂದು ಅರ್ಥವಾಗುತ್ತದೆ. ಇದರಿಂದ ಭಾಗವತ ಗ್ರಂಥವು ಒಂದು ಕಡೆ ಸದ್ಧರ್ಮ ಇತ್ಯಾದಿಗಳು ಎಲ್ಲ ಸಾಧಕರಿಗೂ ಅತ್ಯವಶ್ಯಕ ಎಂದು ಹೇಳಿ ಮತ್ತೊಂದು ಕಡೆ ಇವುಗಳನ್ನು ತ್ಯಜಿಸಬೇಕು ಎಂದು ಹೇಳಿದೆ ಎಂದಾಗುತ್ತದೆ. ಭಾಗವತವು ಹೇಗೆ ತಾನೆ ಹೀಗೆ ಮಾಡುತ್ತದೆ? ಸರ್ವಥಾ ಇಲ್ಲ. ಆದ್ದರಿಂದ ದ್ವಿತೀಯ ಶಬ್ದಕ್ಕೆ ಅದ್ವೈತ ದರ್ಶನದ ವ್ಯಾಖ್ಯಾನವು ಯುಕ್ತವಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಸದ್ಧರ್ಮಮಿತಿ** ॥ ಸದ್ಧರ್ಮಃ ಶೇವಧಿರ್ನೃಣಾಂ, ಸಂಗೋ ಯದಿ ಸ್ಯಾತ್ ಭಗವತ್ಪ್ರಿಯೇಷು ನಃ, ತತ್ ಪೂರೂಷನಿಷೇವಯಾ, ಇತ್ಯಾದೌ ಅಪೇಕ್ಷಿತಮಾಚಷ್ಟ ಇತಿ ಯೋಜನಾ । ತದೇವ ಭಯಂ ದ್ವಿತೀಯಾಭಿನಿವೇಶತ ಇತಿ ಶ್ಲೋಕೇ ದ್ವಿತೀಯಪದೇನ ಕಥಂ ನಿರಾಚಷ್ಟೇ । ಬ್ರಹ್ಮವ್ಯತಿರಿಕ್ತಸ್ಯ ಸರ್ವಸ್ಯ ದ್ವಿತೀಯಪದಾರ್ಥತ್ವೇ ಸದ್ಧರ್ಮ ಸತ್ಸಂಗ ಶ್ರವಣಮನನನಿದಿಧ್ಯಾಸನಾದೇರಪಿ ಭಯಹೇತುತ್ವಾಪತ್ತ್ಯಾ ನ ಪರಕೀಯ ವ್ಯಾಖ್ಯಾನಮುಚಿತಂ ಕಿಂತ್ವಸ್ಮದುಕ್ತ ಏವಾರ್ಥ ಇತಿ ಭಾವಃ ॥ ೩೬೮ ॥

**ವಿವರಣೆ–** (1) ಸದ್ಧರ್ಮಃ ಶೇವಧಿರ್ನೃಣಾಮ್....

(2) ಸಂಗೋ ಯದಿ ಸ್ಯಾದ್ ಭಗವತ್ಪ್ರಿಯೇಷು ನಃ

(3) ತತ್ಪೂರುಷನಿಷೇವಯಾ

(4) ಧರ್ಮಸ್ಯ ಹ್ಯಾಪವರ್ಗ್ಯಸ್ಯ 1.2.9

(5) ತಚ್ಛ್ರದ್ಧಯಾ ಭಗವದ್ಧರ್ಮಚರ್ಯಯಾ 4.22.22

(6) ತುಲಯಾಮ ಲವೇನಾಪಿ ನ ಸ್ವರ್ಗಂ... 4.30.34

(7) ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ .... 3.26.24

(8) ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ 5.5.2

**ಅಪಿಚಾಭಿನಿವೇಶಸ್ಯ ಭಯದತ್ವೇ ಸ ಏವ ಹಿ ।**
**ತ್ಯಾಜ್ಯಃ ಸ್ಯಾತ್ ಸೋಪಿ ಬಾಧ್ಯೋ ನ ದ್ವಿತೀಯಂ ಕೇನ ಬಾಧ್ಯತೇ ॥೩೬೯॥**

**ಅರ್ಥ–** ಅಪಿ ಚ = ಮತ್ತು (ಇದಲ್ಲದೆ) ಅಭಿನಿವೇಶಸ್ಯ ಭಯದತ್ವೇ = ಗಾಢ ಆಗ್ರಹವು ಭಯವನ್ನುಂಟು ಮಾಡುವುದಾದರೆ, ಸ ಏವ = ಆ ಅಭಿನಿವೇಶನವು ಮಾತ್ರ, ತ್ಯಾಜ್ಯಃ ಸ್ಯಾತ್ = ತ್ಯಾಗಾರ್ಹವಾಗುವುದು. ಸಃ ಅಪಿ = ಆ ಅಭಿನಿವೇಶವೂ ಕೂಡ, ನ ಬಾಧ್ಯಃ ಸ್ಯಾತ್ = ಅಭಿನಿವೇಶವೇ ಇಲ್ಲ ಎಂಬ ಪ್ರತೀತಿಗೆ ವಿಷಯವಾಗುವುದಿಲ್ಲ, ದ್ವಿತೀಯಂ= ಬ್ರಹ್ಮಾತಿರಿಕ್ತ ಪ್ರಪಂಚವು ಕೇನ = ಯಾವುದರಿಂದ, ಬಾಧ್ಯತೇ= ಬಾಧಿಸಲ್ಪಡುತ್ತದೆ?

**ಅನುವಾದ- ದ್ವಿತೀಯಾಭಿನಿವೇಶವು ಭಯಕ್ಕೆ ಕಾರಣ ಎಂದು ಭಾಗವತ ಹೇಳಿದೆ. ಭಯಕ್ಕೆ ಕಾರಣವಾದ ಅಭಿನಿವೇಶವು ಬಿಡಲು ಯೋಗ್ಯ ಎಂಬ ಅರ್ಥ ಲಭಿಸುತ್ತದೆ. ಆದರೆ ಅಭಿನಿವೇಶವನ್ನು ಬಿಡಲಾಗುವುದಿಲ್ಲ. ಅಭಿನಿವೇಶವು ಬಾಧ್ಯವಲ್ಲದಿರುವಾಗ ಭಾಗವತದ ಯಾವ ಮಾತಿನಿಂದ ಪ್ರಪಂಚವು ಬಾಧಿ ಸಲ್ಪಡುತ್ತದೆ.**

**ಭಾವವಿಲಾಸಿನೀ–** ಅಸ್ತು ವಾ ಪರಕೀಯ ಏವಾರ್ಥಃ । ತಥಾಪಿ ಬ್ರಹ್ಮಣೋ ನಾದ್ವಿತೀಯತ್ವ ಸಿದ್ಧಿರಿತ್ಯಾಹ – **ಆಪ ಚೇತಿ** ॥ ಸ ಏವಾಭಿನಿವೇಶ ಏವ । ಸೋಪ್ಯಭಿನಿವೇಶೋಪಿ । ಏವಶಬ್ದಸ್ಯ ವ್ಯವಚ್ಛೇದ್ಯಮಾಹ – **ದ್ವಿತೀಯಮಿತಿ** ॥ ಯಥಾಕಂಟಕಸ್ಪರ್ಶಸ್ಯ ಭಯಹೇತುತ್ವೇ ತತ್‌ಸ್ಪರ್ಶ ಏವ ಪರಿಹರಣೀಯೋ ನತು ಕಂಟಕಸ್ಯಾಪಿ ಮಿಥ್ಯಾತ್ವಮ್ । ತಥೇಹಾಪಿ ದ್ವಿತೀಯಾಭಿನಿವೇಶಸ್ಯ ಭಯಹೇತುತ್ವೇ ಸ ಏವತ್ಯಾಜ್ಯೋ ನ ಪುನರ್ದ್ವಿತೀಯಾದೇರ್ಮಿಥ್ಯಾತ್ವ ಮಪ್ಯಂಗೀ-ಕಾರ್ಯಮ್ । ಇಯಾಂಸ್ತು ವಿಶೇಷಃ । ಅಸ್ಮದಾಚಾರ್ಯಾಃ ಜ್ಞಾನಭಕ್ತ್ಯಾದಿಗುಣಭರಿತಾಃ ವಿಷಯ ಏವ ವಿರಕ್ತಾ ದೇಹ ಗೇಹಾದಿ ದುರ್ವಿಷಯಮೇವ ಹೇಯಕೋಟೌನಿಕ್ಷಿಪ್ತವಂತಃ । ತ್ವಂ ತು ಸರ್ವಾವಲಕ್ಷಣಃ ಶೋಭನಮಪಿ ಜಗದಾಭಾಸೀಕರೋಷೀತಿ । ಬಾಧ್ಯತ್ವಾಭಾವಾ-ಸ್ತೂಭಯತ್ರಾಪಿ ಸಮ ಇತಿ ಭಾವಃ ॥ ೩೬ ॥

**ವಿವರಣೆ–** (1) : ಬಾಧಃ ಒಂದು ವಸ್ತುವನ್ನು ತಪ್ಪಾಗಿ ತಿಳಿದವರು, ಅನಂತರ ಪಡೆಯುವ ಆ ವಸ್ತು ಅದಲ್ಲ ಎಂಬ ಜ್ಞಾನವು ಬಾಧ. ಅಥವಾ ತಪ್ಪಾಗಿ ತಿಳಿಯಲ್ಪಟ್ಟ ವಸ್ತುವಿನ ಸರಿಯಾದ ಜ್ಞಾನವು ಬಾಧ.

ಬಾಧ್ಯತ್ವ : ಈ ಪ್ರತೀತಿಗೆ ವಿಷಯವಾದ ವಸ್ತುವು ಬಾಧ್ಯ; ಬಾಧ್ಯವಸ್ತುವಿನ ಭಾವವು ಬಾಧ್ಯತ್ವ.

ಉದಾ : ಡೊಂಕಾಗಿ ಬಿದ್ದಿರುವ ಹಗ್ಗವನ್ನು ಹಾವು ಎಂದು ತಿಳಿದವನಿಗೆ, ಅನಂತರ ಇದು ಹಾವು ಅಲ್ಲ, ಹಗ್ಗ ಎಂಬ ಪ್ರತೀತಿಯು ಹುಟ್ಟುತ್ತದೆ. ಈ ಪ್ರತೀತಿಯು ಬಾಧ. ಈ ನಿಷೇಧಪ್ರತೀತಿಗೆ ವಿಷಯವಾದ ಹಾವು ಬಾಧ್ಯ. ಹಾವಿನಲ್ಲಿ ಬಾಧ್ಯತ್ವ.

(2) ಪ್ರಕೃತ, ದ್ವಿತೀಯದಲ್ಲಿ ಅಭಿನಿವೇಶವು ಭಯಕಾರಣ ಎಂದು ಭಾಗವತ ಪದ್ಯವು ಹೇಳಿದೆ. ಭಯ ಪರಿಹಾರವನ್ನು ಬಯಸುವವನು ಅಭಿನಿವೇಶನವನ್ನು ಬಿಡಬೇಕು

ಎಂದು ಅಭಿಪ್ರಾಯವು ಲಭಿಸುತ್ತದೆ. ಅಭಿನಿವೇಶನವನ್ನು ಬಿಟ್ಟವನಿಗೆ ತನಗೆ ಇದ್ದದ್ದು ಅಭಿನಿವೇಶವಲ್ಲ ಎಂಬ ಪ್ರತೀತಿಯು ಹುಟ್ಟುವುದಿಲ್ಲ. ಆದ್ದರಿಂದ ಅಭಿನಿವೇಶವು ಬಾಧ್ಯವಲ್ಲ. ಬಾಧ್ಯವಾದದ್ದು ಮಿಥ್ಯಾ ಎಂದು ಅದ್ವೈತ ದರ್ಶನದ ಅಭಿಪ್ರಾಯ. ಅಭಿನಿವೇಶವು ಬಾಧ್ಯವಾಗುವುದಿಲ್ಲವಾದ್ದರಿಂದ ಅದು ಮಿಥ್ಯಾ ಎಂದು ಈ ಪದ್ಯದ ಅಭಿಪ್ರಾಯವಾಗುವುದಿಲ್ಲ. ಹೀಗಿರುವಾಗ ದ್ವಿತೀಯವನ್ನು ಮಿಥ್ಯಾ ಎಂದು ಪ್ರತಿಪಾದಿಸುವ ಯಾವ ಅಂಶವೂ ಈ ಪದ್ಯದಲ್ಲಿ ಇಲ್ಲ.

(3) ಮುಳ್ಳಿನ ಸ್ಪರ್ಶದಿಂದ ನೋವು ಉಂಟಾಗುತ್ತದೆ. ಆದ್ದರಿಂದ ಮುಳ್ಳಿನ ಸ್ಪರ್ಶವಾಗದಂತೆ ಎಚ್ಚರವಹಿಸಬೇಕು. ಮುಳ್ಳಿನ ಸ್ಪರ್ಶವು ತ್ಯಾಜ್ಯವಾದರೆ ಮುಳ್ಳು ಮಿಥ್ಯಾ ಆಗುವುದಿಲ್ಲ. ಹಾಗೆಯೇ, ದ್ವಿತೀಯಾಭಿನಿವೇಶದಿಂದ ಭಯ ಉಂಟಾಗುವುದರಿಂದ ದ್ವಿತೀಯಾಭಿನಿವೇಶವು ತ್ಯಾಜ್ಯವಾಗುತ್ತದೆ; ದ್ವಿತೀಯವು ಮಿಥ್ಯಾ ಆಗುವುದಿಲ್ಲ.

(4) ನಮ್ಮ ಗುರುಗಳಾದ ಮಧ್ವಾಚಾರ್ಯರು ಜ್ಞಾನ-ಭಕ್ತಿ-ವೈರಾಗ್ಯ ಮೊದಲಾದ ಗುಣಸಂಪನ್ನರು. ಆದ್ದರಿಂದ ಅವರು ದೇಹ, ಮನೆ ಮೊದಲಾದ ವಿಷಯಪದಾರ್ಥಗಳನ್ನು ಮಾತ್ರ ಹೇಯವೆಂದು ಭಾಗವತ ಪದ್ಯವು ಹೇಳುತ್ತಿದೆ ಎಂದು ವ್ಯಾಖ್ಯಾನಿಸಿದ್ದಾರೆ. ಅದ್ವೈತ ದರ್ಶನವು ಬ್ರಹ್ಮನನ್ನು ಬಿಟ್ಟು ಇಡೀ ಜಗತ್ತನ್ನು ಹೇಯವೆಂದು ಈ ಭಾಗವತಪದ್ಯವು ಹೇಳುತ್ತಿದೆ ಎಂದು ವ್ಯಾಖ್ಯಾನಿಸಿದೆ.

**ಅತೋಽದ್ವಿತೀಯಭಾವಸ್ಯ ಕಥಮಾಶಾತ್ರ ಕಥ್ಯತಾಮ್ ।**
**ಗೃಹಾತ್ ಪ್ರವ್ರಜಿತೇ ಭಿಕ್ಷೌ ಕಿಂ ಗೇಹಂ ಭಸ್ಮಸಾದ್ ಭವೇತ್ ॥ ೩೭೦ ॥**

**ಅರ್ಥ–** ಅತಃ = ಆದ್ದರಿಂದ = ದ್ವಿತೀಯಕ್ಕೆ ಬಾಧವಿಲ್ಲದಿರುವುದರಿಂದ, ಅದ್ವಿತೀಯಭಾವಸ್ಯ = ಬ್ರಹ್ಮನ ಅದ್ವಿತೀಯತ್ವಕ್ಕೆ, ಅತ್ರ = ಈ ಭಾಗವತ ಪದ್ಯದಲ್ಲಿ ಆಶಾ = ಆಸೆಯು, ಕಥಮ್ = ಹೇಗೆ ಎಂದು, ಕಥ್ಯತಾಮ್ = ಹೇಳಲ್ಪಡಲಿ. ಭಿಕ್ಷೌ = ಸನ್ಯಾಸಿಯು, ಗೃಹಾತ್ = ಮನೆಯಿಂದ, ಪ್ರವ್ರಜಿತೇ = ಹೊರಗೆ ಹೋದನಂತರ, ಗೇಹಂ = ಮನೆಯು, ಭಸ್ಮಸಾದ್ ಭವೇತ್ ಕಿಮ್ = ಬೂದಿಯಾಗುವುದೇ?

**ಅನುವಾದ–** ಬ್ರಹ್ಮವೊಂದೇ ಸತ್ಯ; ಎರಡನೆಯದು ಯಾವುದೂ ಸತ್ಯವಲ್ಲ; ಆದ್ದರಿಂದ ಬ್ರಹ್ಮನು ಅದ್ವಿತೀಯ; ಪ್ರಕೃತ ಭಾಗವತ ಶ್ಲೋಕದಲ್ಲಿ ದ್ವಿತೀಯದ ನಿರಾಕರಣೆಯು ಇರುವುದರಿಂದ ಬ್ರಹ್ಮನು ಅದ್ವಿತೀಯ ಎಂದು ಶ್ಲೋಕದ ತಾತ್ಪರ್ಯ ಎಂದು ಅದ್ವೈತ ದರ್ಶನದ ಅಭಿಪ್ರಾಯ. ಆದರೆ ಮೇಲಿನ ಪದ್ಯಗಳಲ್ಲಿ ವಿವರಿಸಿದಂತೆ ಭಾಗವತಪದ್ಯಕ್ಕೆ ಆ ಅಭಿಪ್ರಾಯವಿಲ್ಲ. ಆದ್ದರಿಂದ ಬ್ರಹ್ಮನ ಅದ್ವಿತೀಯತ್ವವು ಈ ಪದ್ಯದಿಂದ ಸಿದ್ಧವಾಗುತ್ತದೆ ಎಂಬ ಆಸೆಗೆ ಸರ್ವಥಾ ಅವಕಾಶವಿಲ್ಲ.

ಯಾರಿಗೆ ವಿಷಯ ಪದಾರ್ಥಗಳ ಮೇಲೆ ವೈರಾಗ್ಯವು ಉಂಟಾಗುವುದೋ ಅವನು ಅವುಗಳನ್ನು ಬಿಟ್ಟು ಯತಿಯಾಗುತ್ತಾನೆ. ಹಾಗೆ ಆದಾಗ ತಾನು ವಾಸಿಸುತ್ತಿದ್ದ ಮನೆಯನ್ನು ಬಿಟ್ಟುಹೋಗುತ್ತಾನೆ. ಅವನು ಮನೆಯನ್ನು ಬಿಟ್ಟು ಹೋದ ಕಾರಣದಿಂದ ಮನೆಯು ಇಲ್ಲವಾಗುವುದಿಲ್ಲ. ಹಾಗೆಯೇ, ದೇಹ-ಗೇಹ ಮೊದಲಾದ ದ್ವಿತೀಯವನ್ನು ತ್ಯಜಿಸಿದರೆ ಅವು ಇಲ್ಲವಾಗುವುದಿಲ್ಲ. ತಾನು ತ್ಯಜಿಸಿದ ಗೃಹವು ಗೃಹವಲ್ಲ ಎಂಬ ಬಾಧ ಪ್ರತೀತಿಯೂ ಯತಿಗೆ ಹುಟ್ಟುವುದಿಲ್ಲ. ಆದ್ದರಿಂದ ಗೃಹವು ಬಾಧಿತ, ಎಂದರೆ, ಮಿಥ್ಯಾ ಆಗುವುದಿಲ್ಲ. ಗೃಹವು ಮೊದಲೂ ಸತ್ಯ; ಅನಂತರವೂ ಸತ್ಯ. ಹೀಗೆ ಬ್ರಹ್ಮಾತ್ತಿರಿಕ್ತವಾದ ದ್ವಿತೀಯವು ಸತ್ಯವಾದ್ದರಿಂದ ಅದ್ವೈತದರ್ಶನಕ್ಕೆ ಬೇಕಾದ ರೀತಿಯಲ್ಲಿ ಬ್ರಹ್ಮನು ಅದ್ವಿತೀಯನಾಗುವುದಿಲ್ಲ.

**ಭಾವವಿಲಾಸಿನೀ–** ಅತಃ ದ್ವಿತೀಯಬಾಧಾಭಾವಾತ್ । ಅದ್ವಿತೀಯಭಾವಸ್ಯೇತಿ ಪದಚ್ಛೇದಃ । ಅತ್ರ ಶ್ಲೋಕೇ । ತತ್ರೋದಾಹರಣಮಾಹ – ಗೃಹಾದಿತಿ ॥ ೩೭೦ ॥

ಪೀಠಿಕೆ : ಶ್ಲೋಕ 360 ರಿಂದ 370 ರವರೆಗೆ ಭಾಗವತ ಪುರಾಣದ 11.2.37ನೇ ಪದ್ಯವನ್ನು ವ್ಯಾಖ್ಯಾನಿಸಿದ ಗುರುರಾಜರು 371-372 ಶ್ಲೋಕಗಳಲ್ಲಿ 11-2-38ನೇ ಪದ್ಯವನ್ನು ವ್ಯಾಖ್ಯಾನಿಸುತ್ತಾರೆ.

ಅವಿದ್ಯಮನೋಽಪ್ಯವಭಾತಿ ಹಿ ದ್ವಯೋ-
ರ್ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ ।
ತತ್ಕರ್ಮ ಸಂಕಲ್ಪವಿಕಲ್ಪಕಂ ಮನೋ
ಬುಧೋ ನಿರುಧ್ಯಾದಭಯಂ ತತಃ ಸ್ಯಾತ್ ॥

ನಾನು ರಾಜನಾಗುವೆನು ಎಂಬ ಮನೋರಥವು ಸ್ವಪ್ನವಾದಾಗ, ಎಂದರೆ, ರಾಜನಾಗಿರುವ ಕನಸುಬಿದ್ದಾಗ, ಆ ಸಮಯದಲ್ಲಿ ಆ ಸನ್ನಿವೇಶವು ಜಾಗ್ರದವಸ್ಥೆಯ ಸ್ಥಿತಿಯಂತೆ ತೋರುತ್ತದೆ. ಹೀಗೆಯೇ ದ್ವಯವು ಜೀವಾತ್ಮನಿಗೆ ಅಧೀನವಲ್ಲದಿದ್ದರೂ, ಅವನಿಗೆ ಅಧೀನವಾಗಿರುವಂತೆ ತೋರುತ್ತದೆ. ಇವುಗಳನ್ನು ವಿವಿಧವಾಗಿ ಚಿಂತಿಸುವ ಮನಸ್ಸನ್ನು ಪರಮಾತ್ಮನಲ್ಲಿ ಇಡಬೇಕು. ಹೀಗೆ ಮಾಡಿದಾಗ ಸಂಸಾರದಿಂದ ಬಿಡುಗಡೆಯಾಗುತ್ತದೆ.

ಅದ್ವೈತದರ್ಶನದ ಪ್ರಕಾರ : ದ್ವಯಃ = ಬ್ರಹ್ಮವನ್ನು ಬಿಟ್ಟು ಎಲ್ಲ ಪ್ರಪಂಚ, ಅವಿದ್ಯಮಾನಃ = ಇಲ್ಲ, ಅಪಿ = ಆದರೂ ಅವಭಾತಿ = ತೋರುತ್ತದೆ. ಸ್ವಪ್ನ ಮತ್ತು ಮನೋರಥಗಳಂತೆ

ದ್ವಯೋಽಯಂ ದೇಹಗೇಹಾದಿಃ ಸ್ವಭಾವೇನೈವ ದೇಹಿನಾಮ್ ।
ಅವಿದ್ಯಮಾನೋಽಭಿಮಾನಾದ್ ಭಾತಿ ಸ್ವೀಯತಯಾ ಕಿಲ ॥ ೩೭೧ ॥

**ಅರ್ಥ–** ದೇಹಗೇಹಾದಿಃ = ದೇಹ-ಮನೆ ಮೊದಲಾದ, ಅಯಂ = ಈ ದ್ವಯಃ = ದ್ವಯವು, ದೇಹಿನಾಮ್ = ಜೀವಾತ್ಮರಿಗೆ ಸ್ವಭಾವೇನ ಏವ = ಸ್ವತಂತ್ರವಾಗಿ, ಎಂದರೆ, ಅವರ ಇಚ್ಛೆಯಂತೆ ಅವಿದ್ಯಮಾನಃ = ಇಲ್ಲದಿರುವುದು, ಅಭಿಮಾನಾತ್ = ರಜೋಗುಣದಿಂದ ಉಂಟಾಗುವ ಆಸೆಯಿಂದ, ಸ್ವೀಯತಯಾ = ತನ್ನ ವಶದಲ್ಲಿದೆ ಎಂದು, ಭಾತಿ = ತೋರುತ್ತದೆ.

ಅ = ಪರಮಾತ್ಮನಿಗೆ ವಶವಾಗಿ, ವಿದ್ಯಮಾನಃ = ಇರುವ ದ್ವಯಃ = ದ್ವಯವು, ಅಭಿಮಾನಾದ್ = ರಜೋಗುಣದ ಪ್ರಭಾವಕ್ಕೊಳಗಾದ ಮನಸ್ಸಿನ ಉದ್ರೇಕದಿಂದ, ಸ್ವೀಯತಯಾ = ತನ್ನ ವಶದಲ್ಲಿದೆಯೆಂದು, ಭಾತಿ = ತೋರುತ್ತದೆ.

**ಅನುವಾದ–** ದೇಹ-ಮನೆ ಮೊದಲಾದವುಗಳಿಗೆ ದ್ವಯ ಎಂದು ಹೆಸರು. ಇವುಗಳ ಮೇಲೆ ಜೀವಾತ್ಮನಿಗೆ ಸ್ವಾತಂತ್ರ್ಯವು ಇಲ್ಲ. ಇವುಗಳು ಪರಮಾತ್ಮನಿಗೆ ವಶವಾಗಿವೆ; ಅವನ ಇಚ್ಛೆಯಂತೆ ಜೀವಾತ್ಮನಿಗೆ ಉಪಯೋಗಿಯಾಗಿವೆ. ಆದರೆ ರಜೋಗುಣದ ಪ್ರಭಾವದಿಂದ ಬಹಿರ್ಮುಖವಾಗಿರುವ ಮನಸ್ಸಿನ ಸ್ಥಿತಿಯಿಂದ ದ್ವಯವು ತನಗೆ ಅಧೀನ ಎಂದು ಜೀವಾತ್ಮನು ಭಾವಿಸುತ್ತಾನೆ.

**ಭಾವವಿಲಾಸಿನೀ–** ಏವಮಾದ್ಯಪದ್ಯಸ್ಯಾರ್ಥಮುಕ್ತ್ವಾ ಅವಿದ್ಯಮಾನೋ ಹ್ಯವಭಾತಿ ಹಿ ದ್ವಯೋ-ರ್ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ। ತತ್ಕರ್ಮ ಸಂಕಲ್ಪವಿಕಲ್ಪಕಂ ಮನೋ ಬುಧೋ ನಿರುಂಧ್ಯಾದಭಯಂ ತತಃ ಸ್ಯಾದಿತಿ ದ್ವಿತೀಯಪದ್ಯಸ್ಯಾರ್ಥಮಾಹ – **ದ್ವಯೋಽಯಮಿತಿ** । ಸ್ವಭಾವೇನೈವ ಪರಂ ನಿರಪೇಕ್ಷತಾ ಸ್ವಭಾವತ ಏವ । ದೇಹಿನಾಮವಿದ್ಯಮಾನಃ ನತು ವಸ್ತುಸ್ಥಿತ್ಯಾಽವಿದ್ಯಮಾನಃ । ಈಶ್ವರಕಾಲಕರ್ಮಾದ್ಯಧೀನದೇಹಸ್ಯ ಪ್ರತ್ಯಕ್ಷಾದಿಪ್ರಮಾಣಸಿದ್ಧತ್ವೇನ ಸರ್ವಥಾಽವಿದ್ಯಮಾನತ್ವಸ್ಯಾಯೋಗಾತ್ ಸ್ವಪ್ನಮನೋರಥಾಖ್ಯದೃಷ್ಟಾಂತಾಯೋಗಾಚ್ಚ ಪದಾಂತರಮಧ್ಯಾಹೃತ್ಯೈವ ವ್ಯಾಖ್ಯೇಯಮ್ । ಸ್ವಾಪ್ನೋ ಹಿ ಪದಾರ್ಥಃ ಸ್ವೇಚ್ಛಯೈವ ಪರಂ ಜೀವಾನಾಂ ನ ವರ್ತತೇ । ಸಂಧ್ಯೇ ಸೃಷ್ಟಿರಾಹ ಹೀತಿ ಸೂತ್ರಾದೀಶ್ವರೇಚ್ಛಯಾಽಸ್ತ್ಯೇವ । ಮನೋರಥವಿಷಯೋಽಪಿ ರಾಜ್ಯಾದಿರ್ನ ಸ್ವರೂಪತ ಏವಾವಿದ್ಯಮಾನಃ ಕಿಂತು ಧ್ಯಾತುಃ ಪುರುಷಸ್ಯ ಸ್ವಭಾವತ ಏವಾವಿದ್ಯಮಾನಃ। ಅತಃ ಕಥಂ ನ ದೃಷ್ಟಾಂತಾಯೋಗಃ। ಅಕಾರವಾಚ್ಯೇನ ಪರಮಾತ್ಮನಾ ನಿಮಿತ್ತೇನ ವಿದ್ಯಮಾನ ಇತಿ ವಾ । ಅಭಿಮಾನಾದ್ರಜೋಗುಣನಿಮಿತ್ತರಾಗ-ವಿಶೇಷಾತ್ ॥ ೩೭೧ ॥

**ವಿವರಣೆ–** ೧೧-೨-೩೮ನೇ ಪದ್ಯದಲ್ಲಿರುವ

(1) ದ್ವಯಃ ಪದವನ್ನು ದೇಹಗೇಹಾದಿ ಎಂದು ವಿವರಿಸಿದ್ದಾರೆ. ಈ ವಿವರಣೆಯು ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯ ಮಧ್ವರು ಉದಾಹರಿಸಿರುವ ಹರಿವಂಶವಚನಕ್ಕೆ ಅನುಗುಣವಾಗಿದೆ.

(2) ಅವಿದ್ಯಮಾನಃ ಪದವನ್ನು ಸ್ವಭಾವೇನೈವ ಅವಿದ್ಯಮಾನಃ ಎಂದು ವಿವರಿಸಿದ್ದಾರೆ.

(3) ಅವಭಾತಿಯನ್ನು ಅಭಿಮಾನಾದ್ ಸ್ವೀಯತಯಾ ಭಾತಿ ಎಂದು ವಿವರಿಸಿದ್ದಾರೆ.

(1) ಭಾಗವತ ಪದ್ಯದಲ್ಲಿ ಸ್ವಭಾವೇನ ಏವ ಎಂದು ಇಲ್ಲ. ಗುರುರಾಜರು ಈ ಎರಡು ಪದಗಳನ್ನು ಆಧ್ಯಾಹಾರ ಮಾಡಿಕೊಂಡು ಅವಿದ್ಯಮಾನ ಪದಕ್ಕೆ ಅನ್ವಯಿಸಿದ್ದಾರೆ. ಇದರಿಂದ ಜೀವಾತ್ಮನಿಗೆ ದೇಹ-ಗೇಹ ಮೊದಲಾದವುಗಳು ಇವೆ. ಆದರೆ ಅವನಿಗೆ ಅವುಗಳ ಮೇಲೆ ಸ್ವಾತಂತ್ರ್ಯವಿಲ್ಲ ಎಂದು ಅರ್ಥವಾಗಿದೆ. ಈ ಅಧ್ಯಾಹಾರ ಮತ್ತು ವ್ಯಾಖ್ಯಾನವನ್ನು ಸುರೋತ್ತಮತೀರ್ಥರು ವಿವರಿಸಿದ್ದಾರೆ. ಈಶ್ವರ-ಕಾಲ-ಕರ್ಮ ಮೊದಲಾದವುಗಳಿಗೆ ಅಧೀನವಾದ ದೇಹವು ಪ್ರತ್ಯಕ್ಷ ಸಿದ್ಧ; ಆದ್ದರಿಂದ ಅವುಗಳು ಇಲ್ಲವೇ ಇಲ್ಲ ಎಂಬ ಅಭಿಪ್ರಾಯವು ಯುಕ್ತವಲ್ಲ; ಇದಲ್ಲದೆ ಸ್ವಪ್ನಮನೋರಥೋ ಯಥಾ ಎಂದು ಹೇಳಿರುವ ಸ್ವಪ್ನ ಮನೋರಥ ದೃಷ್ಟಾಂತವೂ ಯುಕ್ತವಾಗುವುದಿಲ್ಲ; ಸ್ವಪ್ನ ಪದಾರ್ಥಗಳನ್ನು ಪರಮಾತ್ಮನು ಸಷ್ಟಿಸಿ ಜೀವಾತ್ಮರಿಗೆ ತೋರಿಸುತ್ತಾನೆ ಎಂದು ಸಂಧ್ಯೇ ಸೃಷ್ಟಿರಾಹ ಹಿ (ಬ್ರ.ಸೂ.3-2-1) ಎಂಬ ಸೂತ್ರದಲ್ಲಿ ಹೇಳಿದ್ದಾರೆ; ಆದ್ದರಿಂದ ಅವುಗಳು ಇವೆ. ಇಲ್ಲ ಎಂಬ ಅಭಿಪ್ರಾಯಕ್ಕೆ 'ಇದು ದೃಷ್ಟಾಂತವಾಗುವುದಿಲ್ಲ; ಮನೋರಥಕ್ಕೆ ವಿಷಯವಾದ ರಾಜ್ಯ ಮೊದಲಾದವುಗಳು ಸರ್ವಥಾ ಇಲ್ಲ ಎನ್ನಲಾಗುವುದಿಲ್ಲ. ಅವುಗಳು ಇವೆ; ಅವುಗಳನ್ನು ಧ್ಯಾನಿಸುವವನಿಗೆ ಅವುಗಳ ಮೇಲೆ ಸ್ವಾತಂತ್ರ್ಯವಿಲ್ಲ ಅಷ್ಟೇ.

(2)ಅವಿದ್ಯಮಾನಃ ಪದದಲ್ಲಿ ಅ ಎಂದರೆ ಪರಮಾತ್ಮ ಎಂದು, ವಿದ್ಯಮಾನಃ ಎಂದರೆ ಇರುವ ಎಂದು ಅರ್ಥ. ದ್ವಯವು ಪರಮಾತ್ಮನ ಇಚ್ಛೆಯಂತೆ ಇದೆ ಎಂದು ಅರ್ಥ.

(3) ಅಭಿಮಾನ ಎಂದರೆ ರಜೋಗುಣದಿಂದ ಉಂಟಾಗುವ ಆಸೆ.

**ಸರ್ವಥಾಽವಿದ್ಯಮಾನತ್ವೇ ಶಶಶೃಂಗಾಯಿತೋ ಭವೇತ್ ।**
**ಪಾರಮಾರ್ಥ್ಯೇನ ತಾದೃಕ್ತ್ವಂ ತವ, ಮೇ ತೂಕ್ತವರ್ತನಾ ॥ ೩೭೨ ॥**

**ಅರ್ಥ–**(ದ್ವಯಸ್ಯ = ದೇಹ–ಗೇಹ ಮೊದಲಾದವುಗಳಿಗೆ), ಸರ್ವಥಾ ಅವಿದ್ಯಮಾನತ್ವೇ = ಯಾವ ಕಾಲದಲ್ಲೂ ಅಸ್ತಿತ್ವವೇ ಇಲ್ಲ ಎಂದು ಅರ್ಥವಾದರೆ, (ಅದು) ಶಶಶೃಂಗಾಯಿತಃ ಭವೇತ್ = ಮೊಲದ ಕೊಂಬಿನಂತೆ ಆಗುತ್ತದೆ, ಪಾರಮಾರ್ಥ್ಯೇನಃ= ವಸ್ತುತಃ, ತಾದೃಕ್ತ್ವಂ = ಅಂತಹ ಅವಿದ್ಯಮಾನತ್ವವು, ಅಭಾವವು ತವ = ನಿನ್ನ (ಮತಂ = ಅಭಿಪ್ರಾಯ). ಮೇ ತು = ನನ್ನ ಅಭಿಪ್ರಾಯವಾದರೂ, ಉಕ್ತ ವರ್ತ್ಮನಾ = ಮೇಲೆ ಹೇಳಿದ ಕ್ರಮದಿಂದ (ದೇಹ–ಗೇಹ ಮೊದಲಾದವುಗಳ ಮೇಲೆ ಜೀವಾತ್ಮನಿಗೆ ಸ್ವಾತಂತ್ರ್ಯವಿಲ್ಲ ಎಂಬ ಅಭಿಪ್ರಾಯದಿಂದ) ಅವಿದ್ಯಮಾನತ್ವವು.

**ಅನುವಾದ–** ಭಾಗವತ ಪದ್ಯದಲ್ಲಿರುವ ಅವಿದ್ಯಮಾನಃ ದ್ವಯಃ – ಈ ಪದಗಳಿಗೆ ದ್ವಯಕ್ಕೆ
**ಅಸ್ತಿತ್ವವೇ ಇಲ್ಲ ಎಂದು ಅಭಿಪ್ರಾಯವಿದ್ದರೆ, ಅದು ಮೊಲದ ಕೊಂಬಿನಂತೆ**

ಆಗುತ್ತದೆ. ಮೊಲದ ಕೊಂಬಿಗೆ ಹೇಗೆ ಅಸ್ತಿತ್ವವೇ ಇಲ್ಲವೋ ಹಾಗೆ ದ್ವಯಕ್ಕೆ ಅಸ್ತಿತ್ವವೇ ಇಲ್ಲ ಎಂದು ಅದ್ವೈತ ವ್ಯಾಖ್ಯಾನದ ಅಭಿಪ್ರಾಯ. ದ್ವಯಕ್ಕೆ ಅಸ್ತಿತ್ವವಿದೆ; ಅವುಗಳಿಂದ ಜೀವಾತ್ಮನಿಗೆ ಉಪಯೋಗವಿದೆ; ಆದರೆ ಅವುಗಳ ಮೇಲೆ ಅವನಿಗೆ ಸ್ವಾತಂತ್ರ್ಯವಿಲ್ಲ ಎಂದು ಶ್ರೀಮಧ್ವಾಚಾರ್ಯರ/ಶ್ರೀವಾದಿರಾಜರ ಅಭಿಪ್ರಾಯ.

**ಭಾವವಿಲಾಸಿನೀ–** ಯಥಾಶ್ರುತಾರ್ಥೇ ದೋಷಾಂತರಂ ಚಾಹ – **ಸರ್ವಥೇತಿ** ॥ ತಾದೃಕ್ತ್ವಂ ಅವಿದ್ಯಮಾನತ್ವಾತ್ । ತವ ಮಾಯಾವಾದಿನಃ । ತುಶಬ್ದೇನಾರ್ಥಕ್ರಿಯಾಕಾರಿಣೋ ದೇಹಾದೇ-ರಪಾರಮಾರ್ಥ್ಯಾಯೋಗಾತ್ ಸ್ವಕೃತಾಧ್ಯಾಹಾರಸ್ಯೈವ ವಿಶೇಷಮಾಹ ॥ ೩೭೨ ॥

**ವಿವರಣೆ–** ದೇಹ-ಗೇಹ ಮೊದಲಾದವುಗಳಿಂದ ಜೀವಾತ್ಮನಿಗೆ ಉಪಯೋಗವಿದೆ. ಆದ್ದರಿಂದ ಅವುಗಳ ಅಸ್ತಿತ್ವದ ನಿರಾಕರಣೆಯು ಯುಕ್ತವಲ್ಲ. ಆದ್ದರಿಂದ 371ನೇ ಶ್ಲೋಕದಲ್ಲಿ ಹೇಳಿರುವಂತೆ ಸ್ವಭಾವೇನ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಅವಿದ್ಯಮಾನ ಪದಕ್ಕೆ ಅನ್ವಯಿಸಿದರೆ ಸ್ವತಂತ್ರವಾಗಿ ಇಲ್ಲ ಎಂದು ಅರ್ಥವಾಗುತ್ತದೆ. ಜೀವಾತ್ಮನಿಗೆ ದೇಹ-ಗೇಹ ಮೊದಲಾದವುಗಳ ಮೇಲೆ ಸ್ವಾತಂತ್ರ್ಯವಿಲ್ಲ ಎಂದು ತಾತ್ಪರ್ಯ; ಇದು ಪ್ರಮಾಣಾನುಗುಣವಾದ ವ್ಯಾಖ್ಯಾನ.

ಭಯಂ ದ್ವಿತೀಯಾಭಿನಿವೇಶತ... (ಭಾಗವತ ೧೧.೨.೩೭) ಎಂಬ ಈ ಪದ್ಯದಲ್ಲಿ ಅದ್ವೈತ-ಶೈವ ಮತಗಳ ವಿಮರ್ಶೆಯೂ, ಪ್ರವೃತ್ತಕರ್ಮದ ನಿರಾಕರಣೆಯೂ ಇದೆ ಎಂದು ೩೭೩-೩೮೧ ಶ್ಲೋಕಗಳಿಂದ ವಿವರಿಸುತ್ತಾರೆ.

ಈಶಾತ್ ಸರ್ವೇಶ್ವರಾದ್ ವಿಷ್ಣೋರಪೇತಸ್ಯ ತತಃ ಪ್ರಭೋಃ ॥ ೩೭೩ ॥

ಬ್ರಹ್ಮಣಸ್ತು ದ್ವಿತೀಯೇಽಪಿ ಬ್ರಹ್ಮಣ್ಯಭಿನಿವೇಶತಃ ।
ನಿರ್ಗುಣಾಖ್ಯೇಽಭಿಮಾನೇನ ಭಯಂ ಭವತಿ ಯನ್ನೃಣಾಮ್ ।
ವಿಪರ್ಯಯೋಽಸ್ಮೃತಿಶ್ಚ ಸ್ಯಾನ್ಮುಕುಂದಬ್ರಹ್ಮಮೋಚನಾತ್ ॥ ೩೭೪ ॥

---

(**ಟಿಪ್ಪಣಿ :** ಯುಕ್ತಿಮಲ್ಲಿಕೆಯ ಈ ಶ್ಲೋಕಗಳಲ್ಲಿ ಈಶಾತ್ – ಈ ಪದವು ಭಾಗವತ ಪದ್ಯ (11.2.37) ದಲ್ಲಿರುವ ಪದ. ಸರ್ವೇಶ್ವರಾದ್ – ಇದು ಈಶಾತ್ ನ ವ್ಯಾಖ್ಯಾನ. ತತಃ ಪ್ರಭೋಃ ವಿಷ್ಣೋಃ ಇದು ಭಾಗವತ 11.2.33 ಮತ್ತು 36 ರಲ್ಲಿರುವ ಅಚ್ಯುತಸ್ಯ ಮತ್ತು ನಾರಾಯಣಾಯ ಪದಗಳಿಂದ ಲಭಿಸಿದ ಅರ್ಥಗಳ ಅನುವಾದ. ಅಪೇತಸ್ಯ 11.2.37 ರಲ್ಲಿರುವ ಪದ. ದ್ವಿತೀಯೇ ಅಭಿನಿವೇಶತಃ – ಇವುಗಳು 11.2.37 ರಲ್ಲಿರುವ ದ್ವಿತೀಯಾಭಿ ನಿವೇಶತಃ ಪದದ ವಿಗ್ರಹ. ಬ್ರಹ್ಮಣಿ ನಿರ್ಗುಣಾಖ್ಯೇ ಎಂಬ ಪದಗಳು ದ್ವಿತೀಯ ಪದದ ವ್ಯಾಖ್ಯಾನ. ಅಭಿಮಾನೇನ – ಇದು ಅಭಿನಿವೇಶತಃ ಪದದ ವ್ಯಾಖ್ಯಾನ. ವಿಪರ್ಯಯಃ ಅಸ್ಮೃತಿಃ ಇವು 11.2.37 ರಲ್ಲಿರುವ ಪದಗಳು)

**ಅರ್ಥ–** ಯತ್ = ಯಾವ ಕಾರಣದಿಂದ, ಈಶಾತ್ = ಸರ್ವೇಶ್ವರನಾದ ತತಃ ಪ್ರಭೋಃ ವಿಷ್ಣೋಃ = ಆ ಪ್ರಭು ವಿಷ್ಣುವಿನಿಂದ ಅಪೇತಸ್ಯ = ದೂರಹೋದವನಿಗೆ (ವಿಮುಖನಾದವನಿಗೆ) ಅಪಿತು = ಮತ್ತು, ತತಃ ಪ್ರಭೋಃ ಬ್ರಹ್ಮಣಃ = ಆ ಪ್ರಭು ಪರಬ್ರಹ್ಮನಿಗಿಂತ, ದ್ವಿತೀಯೇ = ವಿಜಾತೀಯನಾದ = ಭಿನ್ನನಾದ ನಿರ್ಗುಣಾಖ್ಯೇ ಬ್ರಹ್ಮಣಿ = ನಿರ್ಗುಣಬ್ರಹ್ಮನಲ್ಲಿ ಅಭಿನಿವೇಶತಃ = ಅಭಿಮಾನೇನ = ಅಭಿಮಾನದಿಂದ, ಮುಕುಂದಬ್ರಹ್ಮಮೋಚನಾತ್ = ಮುಕ್ತಿಪ್ರದನಾದ ಪರಬ್ರಹ್ಮನ ತ್ಯಾಗದಿಂದ (ನಿರಾಕರಣೆಯಿಂದ) ನೃಣಾಮ್ = ಜನರಿಗೆ ವಿಪರ್ಯಯಃ = ವಿಪರೀತ ಜ್ಞಾನವು, ಚ = ಮತ್ತು ಅಸ್ಮೃತಿಃ = ಅಜ್ಞಾನವು ಸ್ಯಾತ್ = ಉಂಟಾಗುವುದೋ, (ಅತಃ = ಆದ್ದರಿಂದ, ಭಕ್ತ್ಯಾ ಈಶಂ ಭಜೇತ್- ಶ್ಲೋಕ ೩೭೭)

**ಅನುವಾದ–** ಭಾಗವತ ೧೧.೨.೩೭ ಅದ್ವೈತ ದರ್ಶನದ ವಿಚಾರಕ್ಕೆ ವಿರುದ್ಧವಾದ ಅಭಿಪ್ರಾಯವನ್ನೇ ಕೊಡುತ್ತದೆ. ಅದ್ವೈತ ದರ್ಶನದ ಪ್ರಕಾರ ದ್ವಿತೀಯದಲ್ಲಿ ಅಭಿನಿವೇಶನದಿಂದ ಭಯ ಎಂದು ಶ್ಲೋಕದ ಅಭಿಪ್ರಾಯ. ೧೧.೨.೩೩, ಮತ್ತು ೩೬ ರಲ್ಲಿ ಅಚ್ಯುತನ ನಾರಾಯಣನ ಉಲ್ಲೇಖವಿದೆ. ಅವನನ್ನೇ ೩೭ ರಲ್ಲಿ ಈಶ ಪದದಿಂದ ಉಲ್ಲೇಖಿಸಲಾಗಿದೆ. ಅದ್ವೈತ ದರ್ಶನದ ಪ್ರಕಾರ ಈ ಈಶನು ಸಗುಣಬ್ರಹ್ಮ. ಈಶಾದ್ ದ್ವಿತೀಯ ಎಂದರೆ ಈಶನಲ್ಲದ ಎಂದು ಅರ್ಥ. ಸಗುಣಬ್ರಹ್ಮನಲ್ಲದವನು ನಿರ್ಗುಣಬ್ರಹ್ಮನೇ. ಈಶನಿಂದ ವಿಮುಖನಾಗಿ, ನಿರ್ಗುಣಬ್ರಹ್ಮನ ಮೇಲೆ ಅಭಿಮಾನವಿಟ್ಟವನಿಗೆ ಭಯ, ವಿಪರ್ಯಾಸ (ಮಿಥ್ಯಾಜ್ಞಾನ) ಮತ್ತು ಅಸ್ಮೃತಿ (ಅಜ್ಞಾನ) ಗಳು ಸಂಭವಿಸುತ್ತವೆ ಎಂದು ೧೧.೨.೩೭ ರ ಭಾವ. ಆದ್ದರಿಂದ ನಿರ್ಗುಣಬ್ರಹ್ಮನಿಷ್ಠೆಯ ನಿರಾಕರಣೆಯ ಧ್ವನಿಯು ಈ ಪದ್ಯದಲ್ಲಿದೆ.

**ಭಾವವಿಲಾಸಿನೀ–** ಇದಾನೀಂ ಭಯಂ ದ್ವಿತೀಯಾಭಿನಿವೇಶತ ಇತಿ ಪರಾಭಿಮತಪದ್ಯೇನೈವ ಮಾಯಾವಾದಶೈವಾದಿಸಕಲಮತನಿರಾಕರಣಂ ಕರೋತಿ – **ಈಶಾದಿತಿ ॥** ಯದ್ಯಸ್ಮಾತ್ । ಈಶಾದಿತ್ಯಸ್ಯಾರ್ಥಕಥನಂ ಸರ್ವೇಶ್ವರಾದಿತಿ । ಸ ಚ ಕ ಇತ್ಯತ ಉಕ್ತಂ ತತಃ, ಮನ್ಯೇಽಕುತಶ್ಚಿದ್ಭಯ-ಮಚ್ಯುತಸ್ಯೇತಿ, ನಾರಾಯಣಾಯೇತಿ ಸಮರ್ಪಯೇತ್ತದಿತಿ ಚ ಪ್ರಾಚೀನಪದ್ಯದ್ವಯೇ ಪ್ರಸ್ತುತಾತ್ ಪ್ರಭೋಃ ಸಮರ್ಥಾದ್ವಿಷ್ಣೋರಿತಿ । ದ್ವಿತೀಯಮಿತ್ಯಸ್ಯಾವಧಿಪೂರಕಮಪಿ ತದೇವೇಶಪದಮಿತಿ ಭಾವೇನೋಕ್ತಂ ತತಸ್ತಸ್ಮಾತ್ ಪ್ರಭೋರ್ವಿಷ್ಣೋರ್ಬ್ರಹ್ಮಣಃ ವಿಷ್ಣ್ವಾಖ್ಯ-ಬ್ರಹ್ಮಣಸ್ತ್ವಿತಿ । ಪೂರ್ವಪದ್ಯೇ ವಿಷ್ಣೋಃ ಪ್ರಸ್ತುತತ್ವಾತ್ ಅಸ್ಮಿನ್ ಪದ್ಯೇಽಪೀಶಪದೇನ ವಿಷ್ಣುರೇವ ಗ್ರಾಹ್ಯಃ । ಕಸ್ಮಾತ್ ದ್ವಿತೀಯಮಿತಿ ಶಂಕಾಪೂರಣಾಯಾಪ್ಯಸ್ಮಿನ್ ಪದ್ಯೇ ಪಂಚಮೀವಿಭಕ್ತ್ಯಂತೇ-ಶಪದೇನ ಪ್ರಸ್ತುತ ಏವ ಗ್ರಾಹ್ಯ ಇತ್ಯರ್ಥದ್ವಯಸೂಚನಾಯ ತತಃಪದಸ್ಯಾವೃತ್ತ್ಯಾ ಯೋಜನಾ ಕೃತಾ । ದ್ವಿತೀಯೇಽಪಿ ನಿರ್ಗುಣಾಖ್ಯೇ ಬ್ರಹ್ಮಣೀತಿ ಸಂಬಂಧಃ । ವಿಪರ್ಯಯಃ ವಿಪರೀತ-

ಜ್ಞಾನಮ್ ಅಂಧಂತಮೋ ವಾ । ಮುಕ್ತಿದಾಯಕಾದ್ವಿಷ್ಣೋರನ್ಯದ್ ತದ್ ಬ್ರಹ್ಮ ಆಗ್ರಹಾದೇ-ವೋಕ್ತಮಿತಿ ಸೂಚನಾಯ ಮುಕುಂದ- ಬ್ರಹ್ಮಮೋಚನಾದಿತ್ಯುಕ್ತಮ್ ॥ ೩೭೩-೩೭೪ ॥

**ವಿವರಣೆ–** ಈಶಮ್ ಆಭಜೇತ್ ಎಂದು ವಿಧಿಯೂ ನಿರ್ಗುಣ ಬ್ರಹ್ಮನಿಷ್ಠೆಯ ನಿರಾಕರಣೆಯನ್ನು ಧ್ವನಿಸುತ್ತದೆ.

ಸಗುಣಸ್ಯ ದ್ವಿತೀಯಂ ಹಿ ನಿರ್ಗುಣಂ ಸ್ಯಾನ್ನಚಾಪರಮ್ ।
ನಿರರ್ಥೋಽಸಿ ನಿರರ್ಥಾಖ್ಯಂ ಭೇದಕಂ ಯದಿ ಮುಂಚಸಿ ॥ ೩೭೫ ॥

**ಅರ್ಥ–** ಸಗುಣಸ್ಯ = ಸಗುಣಬ್ರಹ್ಮನಿಗೆ ದ್ವಿತೀಯಂ = ವಿರುದ್ಧವಾದದ್ದು ನಿರ್ಗುಣಂ ಹಿ = ನಿರ್ಗುಣ ಬ್ರಹ್ಮನೇ, ಸ್ಯಾತ್ = ಆಗಬೇಕು, ಅಪರಂ = ಬೇರೆ ಗುಣಪೂರ್ಣ ಬ್ರಹ್ಮ ಅಥವಾ ತ್ರಿಗುಣಾತ್ಮಕ ಪ್ರಕೃತಿಯು, ನ ಚ ಸ್ಯಾತ್ = ಆಗುವುದಿಲ್ಲ, ನಿರರ್ಥಾಖ್ಯಂ = ನಿರ್ ನ ಅರ್ಥವಾದ ಅಭಾವ/ ವಿರೋಧ ಎಂಬ, ಭೇದಕಂ = ಭೇದಸಾಧಕವನ್ನು ಯದಿ ಮುಂಚಸಿ = ತ್ಯಜಿಸಿದರೆ, ನಿರರ್ಥಃ ಅಸಿ = ಶಬ್ದಾರ್ಥಜ್ಞಾನವಿಲ್ಲದವನಾಗುವಿ.

**ಅನುವಾದ–** ಈಶನಿಂದ ದ್ವಿತೀಯನಲ್ಲಿ ಅಭಿನಿವೇಶದಿಂದ ಭಯ-ಅನ್ಯಥಾಜ್ಞಾನ-ಅಜ್ಞಾನಗಳನ್ನು ಭಾಗವತ ಪದ್ಯವು ಹೇಳಿದೆ. ಇಲ್ಲಿ ಈಶನು ಸಗುಣಬ್ರಹ್ಮ. ಅಸ್ಯದ್ವಿತೀಯಃ ಕಃ (ಇವನಿಗೆ ಎರಡನೆಯವರು ಯಾರು?) ಎಂಬ ಪ್ರಯೋಗದಲ್ಲಿ ದ್ವಿತೀಯ ಶಬ್ದಕ್ಕೆ ಸದೃಶ ಎಂದು ಅರ್ಥ.

ಪ್ರಕೃತ ಭಾಗವತ ಪದ್ಯದಲ್ಲಿ ದ್ವಿತೀಯ ಶಬ್ದಕ್ಕೆ ಸದೃಶ ಎಂದು ಅರ್ಥವಿದ್ದರೆ, ಈಶನಿಗೆ ಸದೃಶ ಈಶನೇ, ಆದ್ದರಿಂದ ಅವನಲ್ಲಿ ಅಭಿನಿವೇಶದಿಂದ ಭಯ; ಅವನನ್ನು ಭಜಿಸು ಎಂದು ಹೇಳಿದಂತಾಗುತ್ತದೆ. ಇದು ಅಸಂಗತ. ಆದ್ದರಿಂದ ದ್ವಿತೀಯ ಶಬ್ದಕ್ಕೆ ಭಿನ್ನ ಎಂದೇ ಅರ್ಥವನ್ನು ಹೇಳಬೇಕು. ಈಗ ಈಶಾದ್ ದ್ವಿತೀಯ ಎಂದರೆ ಈಶನಿಂದ ಭಿನ್ನನಾದವನು ಎಂದು ಅರ್ಥ. ಸಗುಣವು ಸಗುಣಭಿನ್ನನಾಗಲು ಸಾಧ್ಯವಿಲ್ಲ; ಈಶ ಅಥವಾ ಪ್ರಕೃತಿಯು ಸಗುಣವಾದ್ದರಿಂದ, ಈಶಾದ್ ದ್ವಿತೀಯವಾಗುವುದಿಲ್ಲ. ನಿರ್ಗುಣಬ್ರಹ್ಮನೇ ಈಶಾದ್ ದ್ವಿತೀಯ ಆಗಬೇಕು. ಸಗುಣನಿಂದ ಭಿನ್ನನಲ್ಲಿ ಭೇದಸಾಧಕವಾದ ಗುಣವಿರೋಧ ಅಥವಾ ಗುಣಾಭಾವವು ಇರಬೇಕು. ಈ ಭೇದಸಾಧಕವು ನಿರ್ಗುಣಬ್ರಹ್ಮನಲ್ಲಿ ಮಾತ್ರವೇ ಇದೆ. ನಿರ್ಗುಣ ಶಬ್ದದಲ್ಲಿರುವ ನಿರ್ ನ ಅರ್ಥ ಗುಣವಿರೋಧ ಅಥವಾ ಗುಣಾಭಾವ. ಆದ್ದರಿಂದ ಸಗುಣದಿಂದ ಭೇದಸಾಧಕವನ್ನು= ಗುಣ ವಿರೋಧ ಅಥವಾ ಗುಣಾಭಾವವನ್ನು ಹೊಂದಿರುವ ನಿರ್ಗುಣಬ್ರಹ್ಮನನ್ನು ದ್ವಿತೀಯ ಶಬ್ದದ ಅರ್ಥ ಎಂದು ಅಂಗೀಕರಿಸಿದವನು ನಿರ್ ನ ಅರ್ಥವನ್ನು ತಿಳಿಯದವನು ಮತ್ತು ಭಾಗವತ ಪದ್ಯದ ದ್ವಿತೀಯ ಪದದ ಅರ್ಥವನ್ನು ಗ್ರಹಿಸಲಾಗದವನು ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ನನು ವಿಷ್ಣೋರ್ದ್ವಿತೀಯಂ ಬ್ರಹ್ಮನಿರ್ಗುಣಮೇವ ಕುತಃ ಸ್ಯಾದಿತ್ಯತ ಆಹ – **ಸಗುಣಸ್ಯೇತಿ ॥** ಭಾವಾದ್ವಿತೀಯೋಽಭಾವ ಇತಿವತ್ಸಗುಣಾದ್ವಿತೀಯಂ ನಿರ್ಗುಣಮೇವ ಭವತಿ ನಾನ್ಯದಿತಿ ಭಾವಃ । ಶಬ್ದಶಕ್ತ್ಯಾಪಿ ಸಗುಣಸ್ಯ ದ್ವಿತೀಯಂ ನಿರ್ಗುಣಮೇವೇತಿ ಭಾವೇನಾಹ – **ನಿರರ್ಥೋಽಸೀತಿ ॥** ನಿರ್ಗತೋಽರ್ಥೋ ಯಸ್ಮಾತ್ಸಃ ನಿರರ್ಥಃ । ಶಬ್ದಾರ್ಥಾನಭಿಜ್ಞ ಇತಿ ಯಾವತ್ । ನಿರರ್ಥಾಖ್ಯಂ ನಿರಃ ನಿರಿತ್ಯುಪಸರ್ಗಸ್ಯ ಅರ್ಥಂ ಅಭಾವಂ ವಿರೋಧಂ ವಾ ಭೇದಕಂ ಸಗುಣಾದ್ಭೇದಸಾಧಕಮ್ । ದ್ವಿತೀಯಶಬ್ದೋ ಯದಿ ಸದೃಶವಾಚೀ ಸ್ಯಾತ್ ತದಾ ಸಗುಣಸ್ಯ ಸಗುಣಮೇವ ದ್ವಿತೀಯಂ ವಾಚ್ಯಂ ನತು ನಿರ್ಗುಣಮ್ । ಇಹ ಚ ದ್ವಿತೀಯಶಬ್ದಸ್ತವ ಚ ಮಮ ಚ ಮತೇ ಭಿನ್ನವಾಚ್ಯೇವ । ಭಿನ್ನವಾಚಿತ್ವೇ ಚ ಯತ್ರ ಭೇದಕಮಸ್ತಿ ತದೇವ ದ್ವಿತೀಯಂ ಸ್ಯಾತ್ । ನತು ಸಜಾತೀಯವಮ್ । ಸಗುಣಾದ್ಭೇದಕಂ ಚ ಗುಣರಹಿತತ್ವಂ ನಿರ್ಗುಣ ಏವಾಸ್ತಿ ನತು ವಸ್ತ್ವಂತರೇ । ಉಕ್ತವಕ್ಷ್ಯಮಾಣರೀತ್ಯಾ ಸಗುಣಸ್ಯೈವಾತ್ರ ಪ್ರಸ್ತುತತ್ವೇ ತತೋ ದ್ವಿತೀಯಂ ನಿರ್ಗುಣಬ್ರಹ್ಮೈವ ಸ್ಯಾನ್ನ ತು ಜ್ಞಾನಾದಿಗುಣಭರಿತಂ ತ್ರಿಗುಣಭರಿತಂ ಪ್ರಕೃತ್ಯಾತ್ಮಕಂ ವಾ ಜಗದಿತಿ ಭಾವಃ ॥ ೩೭೫ ॥

ದ್ವಿತೀಯಕೋಟಿಸ್ಥೇಶಾತ್ತೇ ದ್ವಿತೀಯಾ ಸ್ಯಾತ್ತದೇವ ಹಿ ॥ ೩೭೬ ॥

**ಅರ್ಥ–** ತೇ = ನಿನ್ನ ಮತದಲ್ಲಿ, ದ್ವಿತೀಯ = ಎರಡನೆಯ, ಕೋಟಿಸ್ಥ = ಕೋಟಿಯಲ್ಲಿ ಇರುವ, ಈಶಾತ್ = ಈಶನಿಂದ ತದ್ ಏವ = ಆ ನಿರ್ಗುಣಬ್ರಹ್ಮನೇ, ದ್ವಿತೀಯಂ = ದ್ವಿತೀಯವು, ಸ್ಯಾದ್ ಹಿ = ಆಗಬೇಕಷ್ಟೇ?

**ಅನುವಾದ–** ಮಾಯಾವಾದದಲ್ಲಿ (೧) ಬ್ರಹ್ಮ ಮತ್ತು (೨) ಜಗತ್ತು ಎಂದು ಎರಡು ವಿಭಾಗ. ಪ್ರಕೃತ ಭಾಗವತ ಪದ್ಯವು ಹೇಳುತ್ತಿರುವ ಈಶ ಎರಡನೆಯ ವಿಭಾಗಕ್ಕೆ ಸೇರಿದವನು. ಈ ಈಶನಿಂದ ದ್ವಿತೀಯ ಎಂದರೆ ಮೊದಲನೆಯ ವಿಭಾಗದಲ್ಲಿರುವ ನಿರ್ಗುಣ ಬ್ರಹ್ಮನೇ ಆಗಬೇಕು.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ದ್ವಿತೀಯಕೋಟಿಸ್ಥೇತಿ ॥** ಅದ್ವಿತೀಯಂ ನಿರ್ಗುಣ-ಬ್ರಹ್ಮ, ದ್ವಿತೀಯಂ ಜಗದಿತಿ ಕೋಟಿದ್ವಯಂ ಹಿ ಮಾಯಾವಾದಿನೋ ಮತೇ । ತತ್ರ ದ್ವಿತೀಯ-ಕೋಟಿಸ್ಥೇಶ್ವರಸ್ಯೇಶಪದೇನ ಸಂಗ್ರಹೇ ದ್ವಿತೀಯಕೋಟೇರೇವ ಸಂಗೃಹೀತತ್ವಾತ್ ತತೋ ದ್ವಿತೀಯಂ ಭಿನ್ನಮದ್ವಿತೀಯನಿರ್ಗುಣಮೇವ ಸ್ಯಾತ್ । ಅಥವಾ ನಿರ್ಗುಣಬ್ರಹ್ಮಾಖ್ಯಕೋಟೇಃ ಪ್ರಾಕ್ ಗ್ರಹಣೇ ತತ್ಪ್ರಥಮಂ ಜಗದೇವ ದ್ವಿತೀಯಂ ಸ್ಯಾತ್ । ಜಗತ್ಕೋಟೇಃ ಪ್ರಾಕ್ಗ್ರಹಣೇ ಚ ಪಶ್ಚಾದ್ಗೃಹ್ಯಮಾಣಾ ನಿರ್ಗುಣಕೋಟಿರೇವ ದ್ವಿತೀಯಾ ಸ್ಯಾತ್ । ಪ್ರಥಮದ್ವಿತೀಯಭಾವಸ್ಯ ವಿವಕ್ಷಾನುಸಾರಿತ್ವಾದಿತಿ ಭಾವಃ। ವಸ್ತುತಸ್ತ್ವಾಲೋಕಸ್ಯಾಭಯದತ್ವೇಽಂಧಕಾರಸ್ಯೈವ ಭಯದತ್ವ-ವದಕುತಶ್ಚಿತ್ಭಯಮಿತಿ ಸಗುಣಹರಿಪಾದೋಪಾಸನಸ್ಯಾಭಯದತ್ವೋಕ್ತೇರ್ಭಯದಂ ತದ್ವಿರುದ್ಧಂ ನಿರ್ಗುಣಮೇವ ಸ್ಯಾತ್ ಇತಿ ಜ್ಞೇಯಮ್ ॥ ೩೭೬ ॥

**ವಿವರಣೆ–** ನಿರ್ಗುಣ ಬ್ರಹ್ಮನೇ ದ್ವಿತೀಯ ಆಗುವುದರಿಂದ ಈಶಾದ್ ದ್ವಿತೀಯದಲ್ಲಿ ಅಭಿನಿವೇಶದಿಂದ ಭಯ ಇತ್ಯಾದಿಗಳು ಉಂಟಾಗುತ್ತವೆ ಎಂಬ ಭಾಗವತದ ಮಾತಿಗೆ, ನಿರ್ಗುಣಬ್ರಹ್ಮನಲ್ಲಿ ಅಭಿನಿವೇಶದಿಂದ ಭಯ ಇತ್ಯಾದಿಗಳು ಉಂಟಾಗುತ್ತವೆ ಎಂದು ಅರ್ಥವಾಗುತ್ತದೆ. ಆದ್ದರಿಂದ ಸಗುಣ ಈಶನನ್ನು ಭಕ್ತಿಯಿಂದ ಭಜಿಸು ಎಂದು ಭಾಗವತ ಪದ್ಯವು ಹೇಳುತ್ತಿದೆ ಎಂದು ಅರ್ಥವಾಗುತ್ತದೆ.

**ಅತೋ ಭಕ್ತ್ಯಾ ತಮೇವೇಶಂ ಭಜೇದ್ ಯಸ್ತು ಗುರುರ್ಭುವಿ ।**
**ದೇವತಾ ಚ ಭವೇತ್ ತಾದೃಶಾಚಾರ್ಯೇ ಯತ್ನವಾನ್ ಬುಧಃ ॥ ೩೭೭ ॥**

**ಅರ್ಥ–** ಅತಃ = ಆದ್ದರಿಂದ (ನಿರ್ಗುಣದಲ್ಲಿ ಅಭಿನಿವೇಶವು ಭಯ ಕಾರಣವಾದ್ದರಿಂದ) ಭುವಿ = ಭೂಮಿಯಲ್ಲಿ (ಹುಟ್ಟಿದ) ಬುಧಃ = ಪ್ರಾಜ್ಞನು ತಮ್ ಈಶಮ್ ಏವ = ಆ ಈಶನನ್ನೇ, ಭಕ್ತ್ಯಾ = ಭಕ್ತಿಯಿಂದ ಭಜೇತ್ = ಭಜಿಸಬೇಕು (ಇದಕ್ಕಾಗಿ) ಯಃ = ಯಾರು, ಗುರುಃ ದೇವತಾ ಚ = ಗುರುಯೂ ಮತ್ತು ದೇವತೆವೂ ಆಗಿರುವರೋ, ತಾದೃಶಾಚಾರ್ಯೇ = ಅಂತಹ ಆಚಾರ್ಯರಲ್ಲಿ (ಆಚಾರ್ಯರನ್ನು ಪಡೆಯಲು) ಯತ್ನವಾನ್ ಭವೇತ್ = ಪ್ರಯತ್ನವುಳ್ಳವನು ಆಗಬೇಕು.

**ಅನುವಾದ–** ನಿರ್ಗುಣಬ್ರಹ್ಮನಲ್ಲಿ ಅಭಿನಿವೇಶವು ಭಯ-ವಿಪರೀತ ಜ್ಞಾನ-ಅಜ್ಞಾನಗಳನ್ನು ಉಂಟುಮಾಡುವುದರಿಂದ ಭೂಮಿಯಲ್ಲಿರುವ ವಿವೇಕಿಯು ಆ ಈಶನನ್ನೇ ಭಕ್ತಿಯಿಂದ ಭಜಿಸಬೇಕು. ಈಶನನ್ನು ಭಜಿಸುವ ಮನೋಧರ್ಮವು ಗುರುವಿನ ಅನುಗ್ರಹದಿಂದ ಲಭಿಸುತ್ತದೆ. ದೇವತೆಯಾಗಿರುವವರೇ ಗುರುವಾದರೆ ಅವರಿಂದ ಅಪೇಕ್ಷಿತ ಅನುಗ್ರಹವು ಲಭಿಸುತ್ತದೆ. ಅಂತಹ ಗುರುಗಳು ವಾಯುದೇವರ ಅವತಾರರಾಗಿರುವ ಮಧ್ವಾಚಾರ್ಯರು. ಅವರನ್ನು ಗುರುಗಳನ್ನಾಗಿ ಪಡೆಯಲು ಪ್ರಯತ್ನಿಸಬೇಕು. ಆದ್ದರಿಂದ ಅವರ ಸೇವೆಯಲ್ಲಿ, ಅವರಿಂದ ರಚಿತವಾದ ಶಾಸ್ತ್ರಗಳ ಅಧ್ಯಯನದಲ್ಲಿ ನಿರತರಾಗಬೇಕು.

**ಭಾವವಿಲಾಸಿನೀ–** ಗುರುದೇವತಾತ್ಮೇತಿ ಪದಸ್ಯಾರ್ಥಮಾಹ – **ಯಸ್ತ್ವಿತಿ** ॥ ಯಃ ಪುರುಷಃ ಗುರುರ್ಭವೇತ್ ದೇವತಾ ಚ ಭವೇತ್ । ಮೂಲರೂಪವಿಚಾರೇ ದೇವೋ ಭವೇತ್ । ಅವತಾರರೂಪವಿಚಾರೇ ಗುರುರ್ಭವೇತ್ । ಸ ಚ ವಾಯೋರವತಾರರೂಪೋ ಮಧ್ವ ಏವ । ತಾದೃಶಾಚಾರ್ಯೇ ಯತ್ನವಾನಿತಿ ಸಮಸ್ತಪದಸ್ಯಾರ್ಥಃ । ಅನೇನ ಗುರುಶ್ಚಾಸೌ ದೇವತಾ ಚ ಗುರುದೇವತಾ ಗುರುದೇವತಾಯಾಮಾತ್ಮಾ ಶ್ರವಣಾದ್ಯರ್ಥಂ ಪ್ರಯತ್ನೋ ಯಸ್ಯೇತಿ ವಿಗ್ರಹಃ ಸೂಚಿತೋ ಭವತಿ । ಆತ್ಮಾ ಯತ್ನೇ ಧೃತೌ ದೇಹೇ ಸ್ವಭಾವೇ ಪರಮಾತ್ಮನೀತ್ಯಭಿಧಾನಾತ್ । ಏತಾದೃಶಭಜನಕೌಶಲಂ ವಾತಾವತಾರಮಧ್ವಭಜಕಸ್ಯೈವ ಸ್ಯಾತ್ । ನಾಲ್ಪಜ್ಞಗುರುಭಜಕಸ್ಯೇತಿ ಭಾವಃ ॥ ೩೭೭ ॥

**ವಿವರಣೆ–** ಭಾಗವತ ಪದ್ಯ (11.2.37) ದಲ್ಲಿ ಗುರುದೇವತಾತ್ಮಾ ಎಂಬ ಪದವಿದೆ. ಈ ಪದವನ್ನು ಗುರುರಾಜರು ಈ ಶ್ಲೋಕದಲ್ಲಿ ದೇವತೆಯ ಅವತಾರನಾಗಿರುವ ಗುರುವನ್ನು ಹೊಂದಲು ಪ್ರಯತ್ನಿಸಬೇಕು ಎಂದು ವ್ಯಾಖ್ಯಾನಿಸಿದ್ದಾರೆ. ಶ್ರೀ ಸುರೋತ್ತಮತೀರ್ಥರು ಈ ವ್ಯಾಖ್ಯಾನವನ್ನು ದೇವತೆಯ ಅವತಾರರಾಗಿರುವ ಗುರುಗಳು ಶ್ರೀಮಧ್ವಾಚಾರ್ಯರು; ಅವರು ರಚಿಸಿರುವ ಶಾಸ್ತ್ರಗಳ ಅಧ್ಯಯನದಲ್ಲಿ ನಿರತನಾಗಬೇಕು ಎಂದು ವ್ಯಾಖ್ಯಾನಿಸಿದ್ದಾರೆ.

ಗುರುಶ್ಚಾಸೌ ದೇವತಾ ಚ ಗುರುದೇವತಾ, ಗುರುದೇವತಾಯಾಮ್ ಆತ್ಮಾ = ಪ್ರಯತ್ನಃ ಯಸ್ಯ ಸಃ = ಗುರುದೇವತಾತ್ಮಾ ಆತ್ಮನ್ ಶಬ್ದಕ್ಕೆ ಪ್ರಯತ್ನ ಎಂಬ ಅರ್ಥವನ್ನು ಕೋಶಗಳು ದಾಖಲಿಸಿವೆ. (ಆತ್ಮಾದೇಹೇ ಧೃತೌ ಯತ್ನೇ..... ಎಂದು ಕೋಶ).

**ಇತಿ ವಾಕ್ಯಾರ್ಥಮಾಲೋಚ್ಯ ತ್ಯಜಾನ್ಯದ್ ಭಜ ನಃ ಪ್ರಭುಮ್ ॥ ೩೭೮ ॥**

**ಅರ್ಥ–** ಇತಿ = ಹೀಗೆ, ವಾಕ್ಯಾರ್ಥಮ್ = ವಾಕ್ಯದ ಅರ್ಥವನ್ನು ಆಲೋಚ್ಯ = ಆಲೋಚಿಸಿ, ಅನ್ಯದ್ = ಬೇರೆಯನ್ನು, ಎಂದರೆ, ನಿರ್ಗುಣ ಬ್ರಹ್ಮನನ್ನು ತ್ಯಜ = ಬಿಡು, ನಃ = ನಮ್ಮ ಪ್ರಭುಂ = ಪ್ರಭುವನ್ನು ಭಜ = ಭಜಿಸು.

**ಅನುವಾದ–** ದ್ವಿತೀಯಾಭಿನಿವೇಶತಃ (೧೧.೨.೩೭) ಈ ಪದದಲ್ಲಿರುವ ದ್ವಿತೀಯ ಪದದ ಅರ್ಥವನ್ನು ಆಲೋಚಿಸಿದರೆ ನಿರ್ಗುಣ ಬ್ರಹ್ಮನಲ್ಲಿ ಅಭಿಮಾನದಿಂದ ಭಯ, ವಿಪರೀತಜ್ಞಾನ ಮತ್ತು ಅಜ್ಞಾನಗಳು ಉಂಟಾಗುತ್ತವೆ ಎಂದು ಅರ್ಥವಾಗುತ್ತದೆ. ಇದು ಅದ್ವೈತದಾರ್ಶನಿಕರಿಗೆ ಸಮ್ಮತವಲ್ಲ. ಆದ್ದರಿಂದ ಭಾಗವತದ ಈ ಶ್ಲೋಕಕ್ಕೆ ಗುರುರಾಜರು ೩೭೭ನೇ ಶ್ಲೋಕದಲ್ಲಿ ಹೇಳಿರುವ ಅರ್ಥವು ನಿರವಕಾಶ. ಈ ಅನುಪಪತ್ತಿ-ಉಪಪತ್ತಿಗಳನ್ನು ಆಲೋಚಿಸಿ, ನಿರ್ಗುಣಬ್ರಹ್ಮ ಎಂಬ ಪದಾರ್ಥವನ್ನು ತ್ಯಜಿಸಬೇಕು. ಶ್ರೀಮಧ್ವದರ್ಶನವು ಪ್ರತಿಪಾದಿಸುವ ಪ್ರಭುವನ್ನು ಭಜಿಸಬೇಕು.

**ಭಾವವಿಲಾಸಿನೀ–** ಶ್ಲೋಕಾರ್ಥಮುಪಸಂಹರತಿ– ಇತೀತಿ ॥ ಅನ್ಯನ್ನಿರ್ಗುಣಂ ಬ್ರಹ್ಮ ॥ ೩೭೮ ॥

ಅದ್ವೈತದರ್ಶನವು ಭಾಗವತ ೧೧.೨.೩೭ ರಲ್ಲಿರುವ ದ್ವಿತೀಯಾಬಿಮಾನಿವೇಶತಃ - ಈ ಪದದಲ್ಲಿರುವ ದ್ವಿತೀಯ ಶಬ್ದಕ್ಕೆ ನಿರ್ಗುಣಬ್ರಹ್ಮ ಎಂದು ಅರ್ಥವನ್ನು ಅಂಗೀಕರಿಸಬೇಕು. ೩೭೫, ೩೭೬ನೇ ಶ್ಲೋಕಗಳಲ್ಲಿ ಇದನ್ನು ವಿವರಿಸಲಾಗಿದೆ. ಈ ಅಭಿಪ್ರಾಯಕ್ಕೆ ಅನುಗುಣವಾಗಿ ಭಾಗವತ ೧೧.೨.೩೮ ಶ್ಲೋಕವನ್ನು ವ್ಯಾಖ್ಯಾನಿಸುತ್ತಾರೆ.

ಅವಿದ್ಯಮಾನೋऽಪ್ಯವಭಾತಿ ಹಿ ದ್ವಯೋ-
ರ್ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ ।
ತತ್ಕರ್ಮಸಂಕಲ್ಪವಿಕಲ್ಪಕಂ ಮನೋ
ಬುಧೋ ನಿದಧ್ಯಾದಭಯಂ ತತಃ ಸ್ಯಾತ್ ॥ ೩೭೮ ॥

**ಅವಿದ್ಯಮಾನೋ ಹ್ಯತ್ಯಂತಾಸನ್ನಪಿ ದ್ವಯಶಬ್ದಿತಃ ।**
**ದ್ವಿತೀಯೋ ನಿರ್ಗುಣಾಖ್ಯಾತ್ಮಾ ಧ್ಯಾತುರ್ನೈರ್ಗುಣ್ಯವಾದಿನಃ ।**
**ದುರ್ಧಿಯಾ ಭಾತಿ ತತ್ತ್ವಂ ತು ತನ್ನ ಕಿಂತ್ವಚ್ಯುತಾಭಿಧಃ ॥ ೩೭೯ ॥**

**ಅರ್ಥ–** ಅವಿದ್ಯಮಾನಃ ಹಿ = ಅತ್ಯಂತಾಸನ್ ಅಪಿ = ಕಾಲತ್ರಯದಲ್ಲೂ ಇಲ್ಲದ, ದ್ವಯಶಬ್ದಿತಃ = ದ್ವಯ ಶಬ್ದದ ಅರ್ಥವಾದ, ದ್ವಿತೀಯಃ = ದ್ವಿತೀಯವಾದ = (ನೋಡಿ ಶ್ಲೋಕ ೩೭೬) ನಿರ್ಗುಣಾಖ್ಯಾತ್ಮಾ = ನಿರ್ಗುಣ ಎಂಬ ಹೆಸರಿನ ಆತ್ಮವು, ದುರ್ಧಿಯಾ = ದೋಷ ತುಂಬಿದ ಮನಸ್ಸಿನಿಂದ, ಧ್ಯಾತುಃ = ಚಿಂತಿಸುವ ನೈರ್ಗುಣ್ಯವಾದಿನಃ = ಆತ್ಮನು ಗುಣರಹಿತ ಎಂದು ಪ್ರತಿಪಾದಿಸುವವನಿಗೆ, ಭಾತಿ = ತೋರುತ್ತದೆ, ತು = ಆದರೆ, ತತ್ = ಅದು, ನ ತತ್ತ್ವಮ್ = ತತ್ತ್ವವಲ್ಲ, ಕಿಂತು = ಆದರೆ, ಅಚ್ಯುತಾಭಿಧಃ = ಅಚ್ಯುತ ಎಂಬ ಹೆಸರಿನವನು (ತತ್ತ್ವಂ = ತತ್ತ್ವವು)

**ಅನುವಾದ–** ಭಾಗವತ ೧೧.೨.೩೮ ಶ್ಲೋಕದಲ್ಲಿರುವ ದ್ವಯಶಬ್ದಕ್ಕೆ ದ್ವಿತೀಯ ಎಂದು ಅರ್ಥ. ಅದ್ವೈತ ದರ್ಶನದ ಪ್ರಕಾರ, ಕಾಲತ್ರಯದಲ್ಲಿ ಇಲ್ಲದ ನಿರ್ಗುಣ ಆತ್ಮವು ದ್ವಿತೀಯ. ಈ ಆತ್ಮವು ತತ್ತ್ವ ಎಂದು ದೋಷ ತುಂಬಿದ ಮನಸ್ಸಿನಿಂದ ಆಲೋಚಿಸುವವನಿಗೆ ತೋರುತ್ತದೆ. ವಸ್ತುತಃ ಈ ನಿರ್ಗುಣ ಆತ್ಮವು ತತ್ತ್ವವಲ್ಲ; ಅಚ್ಯುತ ಎಂಬ ಹೆಸರಿನ ಗುಣಪೂರ್ಣ ಪರಮಾತ್ಮನೇ ತತ್ತ್ವ

**ಭಾವವಿಲಾಸಿನೀ–** ಅಸ್ಮಿನ್ ಪಕ್ಷೇಽಪ್ಯವಿದ್ಯಮಾನ ಇತಿ ಶ್ಲೋಕಂ ಯೋಜಯತಿ–ಅವಿದ್ಯಮಾನ ಇತಿ ॥ ನಿರ್ಗುಣಬ್ರಹ್ಮಣೋಽಪ್ರಾಮಾಣಿಕತ್ವಾತ್ ಯಥಾಸ್ಥಿತ ಏವ ಶಬ್ದಾರ್ಥಃ ॥ ೩೭೯ ॥

**ವಿವರಣೆ–** ಭಾಗವತ 11.2.38 ಶ್ಲೋಕದಲ್ಲಿ ಇರುವ ಅವಿದ್ಯಮಾನಃ ಹಿ - ಈ ಪದಗಳಿಗೆ ಅತ್ಯಂತಾಸನ್ ಅಪಿ ಎಂದು ವ್ಯಾಖ್ಯಾನ. ದ್ವಯ ಶಬ್ದಕ್ಕೆ ದ್ವಿತೀಯಃ ನಿರ್ಗುಣಾಖ್ಯಾತ್ಮಾ ಎಂದು ವ್ಯಾಖ್ಯಾನ. ಧಿಯಾ ಪದಕ್ಕೆ ದುರ್ಧಿಯಾ ಎಂದು ವ್ಯಾಖ್ಯಾನ.

ಭಾಗವತ ಶ್ಲೋಕದ ಪೂರ್ವಾರ್ಧ ಈಶನಿಂದ ದ್ವಿತೀಯವಾದ ಸರ್ವಥಾ ಇಲ್ಲದ ನಿರ್ಗುಣಾತ್ಮವು ತತ್ತ್ವ ಎಂದು ದೋಷಕಲುಷಿತ ಮನಸ್ಸಿನಿಂದ ಧ್ಯಾನಿಸುವವರಿಗೆ ತೋರುತ್ತದೆ. ಸ್ವಪ್ನಪದಾರ್ಥಗಳ ಬಗ್ಗೆ ಅವುಗಳು ಎಚ್ಚರ ಕಾಲದ ವಸ್ತುಗಳು ಎಂದು, ಮನೋರಥ ವಿಷಯವಾದ, ಇಲ್ಲದ ಪದಾರ್ಥಗಳ ಬಗ್ಗೆ ಅವು ಇರುವ ವಸ್ತುಗಳು ಎಂದು ತೋರುವಂತೆ. ಪ್ರಾಜ್ಞನು ನಿರ್ಗುಣಾತ್ಮನನ್ನು ಧ್ಯಾನಿಸುವ, ಸಂಕಲ್ಪ-ವಿಕಲ್ಪಗಳಲ್ಲಿ ತೂಗಾಡುವ ಮನಸ್ಸನ್ನು ಈಶನಲ್ಲಿ ಇಡಬೇಕು. ಇದರಿಂದ ಅಭಯವು = ಮುಕ್ತಿಯು ಲಭಿಸುತ್ತದೆ.

**ಅಸ್ಮಾತ್ ಪದ್ಯದ್ವಯಾತ್ ಪೂರ್ವಪದ್ಯೇ ಸ್ಪಷ್ಟೋದಿತಃ ಕಿಲ ।**
**ಉಪರ್ಯುಪರಿ ಚಕ್ರಾಂಕೋಽಧೋಽಧೋ ನಾರಾಯಣಶ್ಚ ಯಃ ॥ ೩೮೦ ॥**

**ಅರ್ಥ–** ಅಸ್ಮಾತ್ ಪದ್ಯದ್ವಯಾತ್ = ಈ ಎರಡು ಪದ್ಯಗಳಿಗಿಂತ ಪುರ್ವಪದ್ಯೇ= ಸ್ವಲ್ಪ ಹಿಂದಿರುವ ಪದ್ಯದಲ್ಲಿ (೧೧.೨.೩೩) (ಅಚ್ಯುತಃ = ಅಚ್ಯುತನು) ಸ್ಪಷ್ಟೋದಿತಃ ಕಿಲ = ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನಷ್ಟೇ. ಉಪರ್ಯುಪರಿ = ಮುಂದಿನ ಮುಂದಿನ ಶ್ಲೋಕದಲ್ಲಿ ಚಕ್ರಾಂಕಃ = ಚಕ್ರದ ಗುರುತಿನವನು ಎಂದು ಯಃ = ಯಾರು ಸ್ಪಷ್ಟೋದಿತಃ = ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೋ, ಅಧೋಽಧಃ = ಹಿಂದಿನ ಹಿಂದಿನ ಶ್ಲೋಕದಲ್ಲಿ (೧೧.೨.೩೬) ಯಃ ನಾರಾಯಣಃ = ಯಾವ ನಾರಾಯಣನು, ಸ್ಪಷ್ಟೋದಿತಃ = ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೋ, (ಸ ಏವ ತತ್ವಂ = ಅವನೇ ತತ್ವ).

**ಅನುವಾದ–** ಚರ್ಚಿಸಲ್ಪಡುತ್ತಿರುವ ಪದ್ಯಗಳು ೧೧.೨.೩೭,೩೮. ಈ ಪದ್ಯಗಳಿಗಿಂತ ಸ್ವಲ್ಪ ಹಿಂದಿನ ಪದ್ಯದಲ್ಲಿ (೧೧.೨.೩೩) ಉಪಾಸ್ಯನನ್ನು ಅಚ್ಯುತ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಅಚ್ಯುತ ಎಂದರೆ ಗುಣಪರಿಪೂರ್ಣ ಎಂದು ಅರ್ಥ. ೧೧.೨.೩೯ ರಲ್ಲಿ ಸೇವ್ಯನನ್ನು ಚಕ್ರಪಾಣಿ ಎಂದು ಹೇಳಲಾಗಿದೆ. ೧೧.೨.೩೬ ರಲ್ಲಿ ಸರ್ವಕರ್ಮ ಸಮರ್ಪಣೆಯನ್ನು ನಾರಾಯಣನಿಗೆ ಮಾಡಬೇಕು ಎಂದು ಹೇಳಲಾಗಿದೆ. ಇವೆಲ್ಲವೂ ಗುಣಪರಿಪೂರ್ಣ ಪಠಬ್ರಹ್ಮನೇ ತತ್ವ ಎಂದು ತಿಳಿಸುತ್ತವೆ. ಆದ್ದರಿಂದ ನಿರ್ಗುಣ ಆತ್ಮನು ತತ್ವವಲ್ಲ.

**ಭಾವವಿಲಾಸಿನೀ–** ದ್ವಯಶಬ್ದಿತಃ ದ್ವಿತೀಯಶಬ್ದಪರ್ಯಾಯದ್ವಯ ಶಬ್ದವಾಚ್ಯಃ । ಪೂರ್ವಪದ್ಯೇ ಕಿಂಚದ್ವ್ಯವಧಾನೇನ ಪೂರ್ವಂ ವಿದ್ಯಮಾನೇ । ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ ಪಾದಾಂಬುಜೋಪಾಸನಮತ್ರ ನಿತ್ಯಮ್ ಇತಿ ಪದ್ಯೇ । ಉಪರ್ಯುಪರಿ ಅವ್ಯವಹಿತೋಪರಿತನೇ ಶೃಣ್ವನ್ ಸುಭದ್ರಾಣಿ ರಥಾಂಗಪಾಣೇರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ ಇತಿ ಪದ್ಯೇ । ಯಶ್ಚಕ್ರಾಂಕ ಇತ್ಯಸಾಧಾರಣಲಿಂಗವತ್ತಯಾ ಕೀರ್ತ್ಯತೇ । ಅಧೋಧಃ ಅವ್ಯವಹಿತಾಧೋ ಭಾಗಸ್ಥೇ ಕಾಯೇನ ವಾಚೇತಿ ಪದ್ಯೇ । ಯಃ ನಾರಾಯಣಃ ನಾರಾಯಣಾಖ್ಯಾಸಾಧಾರಣ-ನಾಮವಾನ್ನಾರಾಯಣಾಯೇತಿ ಸಮರ್ಪಯೇತ್ತದಿತಿ ಕೀರ್ತ್ಯತೇ ಸ ಇತಿಪೂರ್ವೇಣಾನ್ವಯಃ । ವಿಷ್ಣುವಿಷಯಕಶ್ರುತಿದ್ವಯೇನ ಲಿಂಗೇನ ಚಾಸ್ಯಾಧ್ಯಾಯಸ್ಯ ವಿಷ್ಣಾವೇವ ತಾತ್ಪರ್ಯಮತಸ್ಸ ಏವ ಪರತತ್ವಮಿತಿ ಭಾವಃ ॥ ೩೮೦ ॥

**ವಿವರಣೆ–** ಪೂರ್ವಪದ್ಯ ಎಂದರೆ ಈ ಪದ್ಯಕ್ಕಿಂತ ಸ್ವಲ್ಪ ಹಿಂದೆ ಇರುವ 'ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ ಪಾದಾಂಬುಜೋಪಾಸನಮತ್ರ ನಿತ್ಯಮ್' ಎಂಬ ಶ್ಲೋಕ ಮುಂದಿನ ಶ್ಲೋಕವೆಂದರೆ 'ಶೃಣ್ವನ್ ಸುಭದ್ರಾಣಿ ರಥಾಂಗಪಾಣೇ' ಎಂಬ ಶ್ಲೋಕ. ಯಾವನು ಚಕ್ರಾಂಕನೆಂದು ಅಸಾಧಾರಣಲಿಂಗದಿಂದ ಹೇಳಲ್ಪಡುತ್ತಾನೋ ಮತ್ತು ಅನಂತರ ಇರುವ 'ಕಾಯೇನ ವಾಚ' ಎಂಬ ಪದ್ಯದಲ್ಲಿ ನಾರಾಯಣಾಯೇತಿ ಸಮರ್ಪಯೇತ್ ತತ್' ಎಂದು ಹೇಳಲ್ಪಡುತ್ತಾನೆಯೋ ಅವನೇ ವಿಷ್ಣುವಷ್ಟೇ. ಅಚ್ಯುತ ಮತ್ತು ನಾರಾಯಣ ಎಂಬ ವಿಷ್ಣುವಿಷಯಕವಾದ ಶ್ರುತಿಯಿರುವುದರಿಂದಲೂ

ರಥಾಂಗಪಾಣಿತ್ವರೂಪವಾದ ಅಸಾಧಾರಣಲಿಂಗದಿಂದಲೂ ಈ ಅಧ್ಯಾಯಕ್ಕೆ ವಿಷ್ಣುವಿನಲ್ಲಿಯೇ ತಾತ್ಪರ್ಯವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಅವನೇ ಪರತತ್ತ್ವ.

**ದೈವತ್ವೇನಾಸದೀಶಾದೇರ್ವಾ ದ್ವಯಸ್ಯಾಗ್ರಹಾಚ್ಚ ಭೀಃ ।**
**ಗುರುತ್ವೇನ ತು ತತ್ಸೇವಾಽಸೂಚಿ ಪೂರ್ವವಿಶೇಷಣಾತ್ ॥ ೩೮೧ ॥**

**ಅರ್ಥ–** ೧) ಚ = ಮತ್ತು ದೈವತ್ವೇನ = ಪರದೇವತೆಯಾಗಿ, ಅಸತ್ = ಇಲ್ಲದ, ಈಶಾದೇಃ = ಶಿವ, ಚತುರ್ಮುಖ ಬ್ರಹ್ಮ ಮೊದಲಾದ, ದ್ವಯಸ್ಯ = (ಪರದೇವತೆ ವಿಷ್ಣುವಿನಿಂದ ಭಿನ್ನವಾದ, ಎರಡನೆಯ ವರ್ಗಕ್ಕೆ ಸೇರಿದವರಲ್ಲಿ, ಆಗ್ರಹಾತ್ = ಪರದೇವತೆ ಎಂಬ ಆಗ್ರಹದಿಂದ ಭೀಃ ವಾ = ಭಯವೇ = ಅಧೋಗತಿಯು (ಉಂಟಾಗುತ್ತದೆ). ತು = ಆದರೆ, ಪೂರ್ವವಿಶೇಷಣಾತ್ = ಹಿಂದಿನ ಪದ್ಯದಲ್ಲಿ(೧೧.೨.೩೭) (ಬುಧಃ – ಈ ಪದಕ್ಕೆ) ಗುರುದೇವತಾತ್ಮಾ ಎಂದು ವಿಶೇಷಣವಿರುವುದರಿಂದ, ಗುರುತ್ವೇನ = ಗುರು ಎಂಬ ಭಾವದಿಂದ ತತ್ಸೇವಾ = ಆ ಶಿವ, ಚತುರ್ಮುಖ ಬ್ರಹ್ಮ ಮೊದಲಾದವರ ಸೇವೆಯು (ಗ್ರಾಹ್ಯವೆಂದು), ಅಸೂಚಿ = ಸೂಚಿಸಲ್ಪಟ್ಟಿದೆ.

**ಅನುವಾದ–** ಭಾಗವತ ೧೧.೨.೩೭ ರಲ್ಲಿರುವ ದ್ವಿತೀಯ ಮತ್ತು ೧೧.೨.೩೮ ರಲ್ಲಿರುವ ದ್ವಯ ಶಬ್ದಗಳಿಗೆ ಒಂದೇ ಅರ್ಥ. ೧೧.೨.೩೭ರಲ್ಲಿ ಪ್ರಸ್ತುತವಾದ ಈಶನು ಪ್ರಥಮ. ಅವನನ್ನು ಬಿಟ್ಟು ಎಲ್ಲ ಚೇತನ- ಅಚೇತನಗಳು ದ್ವಿತೀಯ. (ಸ್ವತಂತ್ರ ಮಸ್ವತಂತ್ರಂ ಚ ದ್ವಿವಿಧಂ ತತ್ವಮಿಷ್ಯತೇ । ಸ್ವತಂತ್ರೋ ಭಗವಾನ್ ವಿಷ್ಣುಃ ಭಾವಾಭಾವೌ ದ್ವಿಧೇತರತ್) ದ್ವಿತೀಯರಾಗಿರುವ ಶಿವ, ಚತುರ್ಮುಖಬ್ರಹ್ಮ ಮೊದಲಾದವರಲ್ಲಿ ಸರ್ವೋತ್ತಮ ಎಂಬ ಅಭಿಮಾನವು ಭಯಜನಕ. ಶಿವ ಮೊದಲಾದವರು ವಿಷ್ಣುವಿನ ಅಧೀನರಾದ ದೇವತೆಗಳು ಮತ್ತು ಲೋಕಗುರುಗಳು. ಈ ದೇವತಾಗುರುಗಳ ಸೇವೆಯಲ್ಲಿ ನಿರತರಾಗಿ ಈಶನನ್ನು ಭಜಿಸಬೇಕು. ಇದು ೧೧.೨.೩೭ ರ ಅಭಿಪ್ರಾಯ. ಆದ್ದರಿಂದ ಸರ್ವೋತ್ತಮರಲ್ಲದ ಶಿವ, ಚತುರ್ಮುಖ ಬ್ರಹ್ಮ ಮೊದಲಾದ ದೇವತೆಗಳಲ್ಲಿ ಸರ್ವೋತ್ತಮ ಎಂಬ ಭಾವನೆಯು ತಪ್ಪು ಉಪಾಸನೆಯಾಗುತ್ತದೆ. ಇದರಿಂದ ಭಯ. ಆದ್ದರಿಂದ ಶಿವ ಮೊದಲಾದವರನ್ನು ಗುರುಸ್ಥಾನದಲ್ಲಿರುವ ದೇವತೆಗಳು ಎಂದು ಭಜಿಸಬೇಕು, ಪರದೇವತೆ ಎಂದು ಭಜಿಸಬಾರದು ಎಂದು ಭಾಗವತ ೧೧.೨.೩೭ ಸೂಚಿಸಿದೆ. ೧೧.೨.೩೩, ೩೬, ೩೯ ಶ್ಲೋಕಗಳು ಈ ಅಭಿಪ್ರಾಯವನ್ನೇ ದೃಢೀಕರಿಸುತ್ತವೆ.

**ಭಾವವಿಲಾಸಿನೀ–** ಇದಾನೀಂ ಶೈವಾದಿಮತಖಂಡನಪರತಯಾಪಿ ಯೋಜನಿಕಾಂ ಸೂಚಯತಿ –ದೈವತ್ವೇನೇತಿ ॥ ದೈವತ್ವೇನ ಪರದೈವತ್ವೇನ । ಅಸತೋಽವಿದ್ಯಮಾನಸ್ಯೇಶಾದೇರ್ಮಹಾದೇವಾದೇಃ । ದ್ವಯಸ್ಯ ದ್ವಯಶಬ್ದವಾಚ್ಯಸ್ಯ । ಉಪಲಕ್ಷಣಂ ಚೈತತ್ । ಪೂರ್ವಶ್ಲೋಕೇ

ದ್ವಿತೀಯಶಬ್ದವಾಚ್ಯಸ್ಯೇತ್ಯಪಿ ದ್ರಷ್ಟವ್ಯಮ್ । ಈಶಪದೋದಿತವಿಷ್ಣೋಃ ಸಕಾಶಾದ್ದ್ವಿತೀಯತ್ವಂ ತತೋಽರ್ವಾಚೀನಬ್ರಹ್ಮರುದ್ರಾದೇರಪಿ ಘಟತೇ । ಅತಸ್ತೇಷ್ವಪ್ಯಾಗ್ರಹಾತ್ ಪರದೈವತ್ವೇನಾ-ಗ್ರಹಾತ್ ಭೀರ್ಭಯಂ ಭವತಿ । ಶೈವಾದಿಮತಾನ್ಯಪ್ಯನೇನೈವ ಶ್ಲೋಕೇನ ನಿರಸ್ತಾನಿ ಭವಂತೀತಿ ಭಾವಃ । ಶಿವಾದಯೋಽಪಿ ಸರ್ವಥಾ ನ ತ್ಯಾಜ್ಯಾ ಇತ್ಯಾಹ – **ಗುರುತ್ವೇನೇತಿ** ॥ ಪೂರ್ವವಿಶೇಷಣಾತ್ ಪೂರ್ವಂ ವ್ಯಾಖ್ಯಾತಗುರುದೇವ ತಾತ್ಮಾಖ್ಯವಿಶೇಷಣಾತ್ । ಗುರು-ಭೂತದೇವತಾಭಜನೇ ಯತ್ನವಾನಿತ್ಯುಕ್ತವಾನ್ ಗುರುಭೂತದೇವತಾತ್ವೇನ ಶಿವಾದೇರಪಿ ಭಜನಮಸೂಚಿ । ಪರದೇವತಾತ್ವೇನ ಭಜನಂ ನಿಷಿದ್ಧಮಿತ್ಯುಕ್ತಂ ಭವತಿ । ಕಿಂಚ ಪೂರ್ವ-ಶ್ಲೋಕಾಭ್ಯಾಂ ಸಾಕಾರಾಚ್ಯುತಪಾದಾರ್ಚನಾದಿಸೇವಾರೂಪಕರ್ಮಣಾಂ ಫಲಮನಪೇಕ್ಷ್ಯ ಭಗವತ್ಯೇವ ಸಮರ್ಪ್ಯಮಾಣನಿವೃತ್ತಿಕರ್ಮಣಾಂ ಚಾಕುತಶ್ಚಿತ್ ಭಯತ್ವಮುಕ್ತ್ವಾ ಅಸ್ಮಿನ್ ಪದ್ಯದ್ವಯೇ ತತೋಽತ್ಯಂತವಿಭಿನ್ನತಯಾ ದ್ವಿತೀಯಶಬ್ದವಾಚ್ಯಕಾಮ್ಯಕರ್ಮಪ್ರವಾಹಸ್ಯ ಭಯಹೇತುತ್ವಮುಕ್ತ್ವಾ ಶೃಣ್ವನ್ ಸುಭದ್ರಾಣೀತ್ಯಂತಿಮಶ್ಲೋಕೇ ಪೂರ್ವೋಕ್ತನಿವೃತ್ತಿ-ಕರ್ಮಾಣ್ಯೇವ ಸ್ಥಿರೀಕರೋತೀತಿ ವ್ಯಾಖ್ಯಾನಮಪ್ಯುಚಿತಮ್ । ದೇಹಗೇಹಾದೀತ್ಯತ್ರಾದಿಶಬ್ದೇನ ದೇಹಗೇಹಾದ್ಯುಪಯುಕ್ತಕಾಮ್ಯಕರ್ಮಣಾಮಪಿ ಹೇಯಕೋಟೌ ಸಂಗೃಹೀತ-ತ್ವಾತ್ ಪೂರ್ವೋತ್ತರಶ್ಲೋಕೇಷು ನಿವೃತ್ತಿಕರ್ಮಣಾಂ ಸ್ತೂಯಮಾನತ್ವಾಚ್ಚ ಮಧ್ಯೇ ಪ್ರಸಕ್ತ-ಹೇಯಕಾಮ್ಯಕರ್ಮನಿಂದೈವ ನ್ಯಾಯ್ಯಾ । ತತ್ಕರ್ಮಸಂಕಲ್ಪವಿಕಲ್ಪಕಂ ಮನೋ ಬುಧೋ ನಿರುಂಧ್ಯಾದಿತಿ ತತ್ರೈವೋಪಸಂಹಾರೇ ತತ್ತಸ್ಮಾದಿತಿ ಪೂರ್ವೋಕ್ತಭಯಹೇತುತ್ವಂ ನಿಮಿತ್ತೀಕೃತ್ಯ ಕರ್ಮಸು ಸಂಕಲ್ಪಂ ವಿಕಲ್ಪಂ ಚ ಕುರ್ವನ್ಮನೋ ನಿರುಂಧ್ಯಾದಿತಿ ಕರ್ಮನಿಂದನೇನೈವ ನಿಗಮನಾಚ್ಚ ಪೂರ್ವದ್ವಿತೀಯದ್ವಯಶಬ್ದಾಭ್ಯಾಂ ಪ್ರವೃತ್ತಿಕರ್ಮಣಾಮೇವ ದುಃಖಹೇತುತ್ವಂ ವಾಚ್ಯಮ್ । ಅನ್ಯಥಾ ದ್ವಿತೀಯಜಗನ್ನಿಷೇಧಪರತ್ವೇ ಹೇತುಸಾಧ್ಯಯೋರ್ವೈಯಧಿಕರಣ್ಯಪ್ರಸಂಗಾತ್ । ಅಸ್ಮಾಕಂ ತು ತೃತೀಯೇಽರ್ಥೇ ಸ್ಪಷ್ಟೈವ ಸಂಗತಿಃ । ದೇಹಗೇಹಾದ್ಯರ್ಥತ್ವೇಽಪಿ ತತ್ತಸ್ಮಾತ್ ದೇಹಗೇಹಾದೀನಾಂ ದುಃಖದತ್ವಾತ್ ಐಹಿಕಾಮುಷ್ಮಿಕಾನಿತ್ಯದೇಹಗೇಹಾದಿಸಾಧಕಕಾಮ್ಯ-ಕರ್ಮಣಿ ಮನೋ ನಿರುಂಧ್ಯಾದಿತಿ ಸಂಗತಿಸಂಭವಾತ್ । ನಿರ್ಗುಣಶಿವಾದ್ಯರ್ಥತ್ವೇಽಪಿ ತತ್ತಸ್ಮಾನ್ನಿರ್ಗುಣಶಿವಾದ್ಯಾಗ್ರಹಸ್ಯ ದುಃಖಹೇತುತ್ವಾತ್ ತದುಪಾಸನಾದಿಕರ್ಮಣಿ ಮನೋ ನಿರುಂಧ್ಯಾದಿತಿ ಸಂಗತಿಸಂಭವಾತ್ । ತವ ತು ದ್ವಿತೀಯಜಗದಾಗ್ರಹಸ್ಯ ದುಃಖಹೇತುತ್ವೇ ದ್ವಿತೀಯೇ ಜಗತ್ಯೇವ ಮನೋನಿರೋಧೋ ವಕ್ತವ್ಯಃ । ಕರ್ಮಮಾತ್ರೇ ಮನೋನಿರೋಧಸ್ಯ ಕಾ ಸಂಗತಿಃ । ನಹಿ ಯಜ್ಞಾದಿಕಂ ಜಗತ್ಸಾಧಕಂ ಜಗದುಪಾಸನಾದಿಕರ್ಮ ವಾ ಕಸ್ಯಚಿನ್ಮತೇ ಪ್ರಸಕ್ತಮ್ । ಅತಃ ಪರಮತೇ ಸುಸ್ಥೈವಾಸಂಗತಿಃ । ಉಕ್ತರೀತ್ಯಾ ನಿವೃತ್ತಿ ಕರ್ಮಣಾ-ಮಂಗೀಕೃತತ್ವಾತ್ ಸಾಧಾರಣೋಽಪ್ಯಯಂ ಕರ್ಮಶಬ್ದಃ ಪ್ರವೃತ್ತಿಕರ್ಮಮಾತ್ರಪರಃ । ಅವಿದ್ಯಮಾನಃ ಶಾಸ್ತ್ರೇಷ್ವವಿದ್ಯಮಾನಃ । ರೋಚನಾರ್ಥಂ ಫಲಶ್ರುತಿರಿತಿ ವಚನಾತ್ ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತೇತ್ಯಾದಿಶಾಸ್ತ್ರತಾತ್ಪರ್ಯಾವಿಷಯ ಇತ್ಯರ್ಥಃ । ದ್ವಯಃ ಪ್ರವೃತ್ತಿಕರ್ಮಸಮೂಹಃ । ಧ್ಯಾತುಃ ವಿಷಯಾನೇವ ಧ್ಯಾತುಃ ಪುಂಸಃ । ಧಿಯಾ ರಾಗ-ಕಲುಷಿತಬುದ್ಧ್ಯಾಽವಭಾತಿ ಶಾಸ್ತ್ರವಿಷಯತಯಾ ಪ್ರತಿಭಾತಿ । ತತ್ತಸ್ಮಾದ್ಬುಧಃ ಕರ್ಮ-

ಸಂಕಲ್ಪವಿಕಲ್ಪಕಂ ಮನೋ ನಿರುಂಧ್ಯಾದಿತಿ ಪೂರ್ವೋತ್ತರಯೋಜನಾಸೌಕರ್ಯಾ- ದಯಮೇವ ಶಾಸ್ತ್ರಾರ್ಥ ಇತಿ ನ ಪರೇಷಾಮವಕಾಶಃ । ದ್ವೈತತ್ವೇನಾಸದೀಶಾದೇರಿತ್ಯತ್ರಾದಿ- ಪದೇನ ಮೀಮಾಂಸಕಾಭಿಮತಕಾಮ್ಯಕರ್ಮಣಾಮಪಿ ಸಂಗೃಹೀತತ್ವಾತ್ ತದ್ದೂಷಣಾ- ಯೇದಮಪಿ ವ್ಯಾಖ್ಯಾನಂ ಮೂಲಕೃತ ಏವಾಭಿಮತಮ್ ॥ ೩೮೧ ॥

**ವಿವರಣೆ–** 1) ಪರದೇವತೆ ಎಂಬ ಅಭಿಮಾನವು ನವವಿಧ ಹರಿದ್ವೇಷಗಳಲ್ಲಿ ಒಂದು.

ಜೀವಾಭೇದೋ ನಿರ್ಗುಣತ್ವಮ್ ಅಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥

ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥

- ಮಹಾಭಾರತ ತಾತ್ಪರ್ಯ ನಿರ್ಣಯ ೨.೧೧೧,೧೧೨

(2) ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾಃ ಪ್ರಧಾನತಃ

ಪ್ರತಿಪದಾರ್ಥ (2) ದ್ವೈತತ್ವೇನ = ಹೊಳಪಿನಿಂದ ಅಥವಾ ಪ್ರಧಾನವಾಗಿ, ಅಸತ್ = ಇಲ್ಲದ, ಈಶಾದೇಃ ದ್ವಯಸ್ಯ = ಪ್ರವೃತ್ತಕರ್ಮದಲ್ಲಿ, ಆಗ್ರಹಾತ್ = ಅಭಿಮಾನದಿಂದ ಭೀಃ = ಭಯವು (ಆಗುತ್ತದೆ)

ಈಶಾದೇಃ - ಈ ಪದದಲ್ಲಿರುವ ಆದಿ ಶಬ್ದದಿಂದ ಕಾಮ್ಯ ಕರ್ಮವನ್ನು ಗ್ರಹಿಸಬೇಕು. ದ್ವಯ ಶಬ್ದಕ್ಕೆ ದೇಹ-ಗೇಹ ಇತ್ಯಾದಿಗಳು ಎಂದು ಅರ್ಥ. ಇವುಗಳಿಗೆ ಉಪಯುಕ್ತವಾದ ಕಾಮ್ಯಕರ್ಮಗಳನ್ನು ದ್ವಯ ಶಬ್ದದ ಅರ್ಥ ಎಂದು ಪರಿಗಣಿಸಬೇಕು. ಈಶ ಪದದ ಅರ್ಥವನ್ನು ಪರಿಗಣಿಸಬಾರದು. ಈ ವ್ಯವಸ್ಥೆಯಿಂದ ಈಶಾದೇಃ ದ್ವಯಸ್ಯ ಈ ಪದಗಳಿಗೆ ಪ್ರವೃತ್ತ ಕರ್ಮದಲ್ಲಿ ಎಂಬ ಅರ್ಥವು ಲಭಿಸುತ್ತದೆ.

ಈಶ ಮೊದಲಾದವುಗಳನ್ನು ದ್ವಯ ಎಂದು ಪರಿಗಣಿಸಿದಾಗ ಕಾಮ್ಯಕ್ರರ್ಮಗಳೂ ದ್ವಯ ಎಂದು ಪರಿಗಣನೆಯನ್ನು ಪಡೆಯುತ್ತವೆ. ಇವು ಬದುಕಿಗೆ ಪ್ರಧಾನವಲ್ಲವಾದ್ದರಿಂದ, ಇವುಗಳಲ್ಲಿ ಗಾಢಪ್ರವತ್ತಿಯಿಂದ ಭಯ = ನಾನಾ ದುಃಖಕರ ಸನ್ನಿವೇಶಗಳು ಏರ್ಪಡುತ್ತವೆ.

ಆದ್ದರಿಂದ ಇವುಗಳನ್ನು ಬಿಡಬೇಕು ಎಂದು ಭಾಗವತ 11.2.38 ರ ಅಭಿಪ್ರಾಯ.

381ನೇ ಪದ್ಯದ ಮೊದಲನೆಯ ಸಾಲಿನಿಂದ ಈ ಅಭಿಪ್ರಾಯವನ್ನು ಗ್ರಂಥಕಾರರು ತಿಳಿಸಿದ್ದಾರೆ.

ಇದರ ಬೆಳಕಿನಲ್ಲಿ ಭಾಗವತ 11.2.38 ರ ಅರ್ಥ ಹೀಗೆ : ಅವಿದ್ಯಮಾನಃ = ಶಾಸ್ತ್ರತಾತ್ಪರ್ಯಕ್ಕೆ ವಿಷಯವಾಗಿರದ ದ್ವಯಃ = ಪ್ರವೃತ್ತ ಅಥವಾ ಕಾಮ್ಯಕರ್ಮವು

ಧ್ಯಾತುಃ = ಭೋಗವಸ್ತುಗ್ಗಳನ್ನೇ ಧ್ಯಾನಿಸುವವನ ಧಿಯಾ = (ಕಾಮ ಕಲುಷಿತವಾದ) ಮನಸ್ಸಿನಿಂದ, ಅವಭಾತಿ = (ಶಾಸ್ತ್ರ ತಾತ್ಪರ್ಯ ವಿಷಯವೆಂದು) ತೋರುತ್ತದೆ. ತತ್ = ಆದ್ದರಿಂದ, ಬುಧಃ = ಜ್ಞಾನಿಯು, ತತ್‌ಕರ್ಮಸಂಕಲ್ಪ ವಿಕಲ್ಪಕಂ = ಆ ಕಾಮ್ಯಕರ್ಮಗಳ ಬಗ್ಗೆ ಸಂಕಲ್ಪ ವಿಕಲ್ಪಗಳನ್ನು ಮಾಡುವ, ಮನಃ = ಮನಸ್ಸನ್ನು ನಿರುಂಧ್ಯಾತ್ = ನಿಗ್ರಹಿಸಬೇಕು, ತತಃ = ಅದರಿಂದ, ಅಭಯಂ ಸ್ಯಾತ್ = ಭಯವಿಲ್ಲದ ಸ್ಥಿತಿಯು = ಮುಕ್ತಿಯು ಉಂಟಾಗುವುದು.

ಇನ್ನು ಈ ಶ್ಲೋಕವನ್ನು ಶೈವಾದಿಮತ ನಿರಾಕರಣಪರವಾಗಿಯೂ ಯೋಜನೆಯನ್ನು ಮಾಡಬಹುದೆಂದು ಸೂಚಿಸುತ್ತಾರೆ. ಪಾರ್ವತಿಯ ಮಕ್ಕಳಾದವರು ಪರದೈವತಾತ್ವೇನ ಅವಿದ್ಯಾಮಾನರಾದವರು, ಮತ್ತು ದ್ವಯಶಬ್ದವಾಚ್ಯರಾದವರು. ಮತ್ತು ಹಿಂದಿನ ಶ್ಲೋಕದಲ್ಲಿ ದ್ವಿತೀಯಶಬ್ದವಾಚ್ಯರಾದವರು. ಬ್ರಹ್ಮರುದ್ರಾದಿಗಳು ಈಶಪದದಿಂದ ಹೇಳಲ್ಪಟ್ಟ ವಿಷ್ಣುವಿನಿಂದ ಜನ್ಯರಾದುದರಿಂದ ವಿಷ್ಣುವಿನ ಅನಂತರ ಇರುವುದರಿಂದ ಅವರು ವಿಷ್ಣುವಿನಿಂದ ದ್ವಿತೀಯರಾಗುತ್ತಾರೆ. ಆದ್ದರಿಂದ ಅವರಲ್ಲಿ ಆಗ್ರಹವನ್ನು ಮಾಡಿದರೆ, ಎಂದರೆ ಅವರೇ ಪರದೇವತೆ ಎಂದು ಆಗ್ರಹವನ್ನು ಮಾಡಿದರೆ ಭಯವುಂಟಾಗುತ್ತದೆ ಎಂದು ಈ ಶ್ಲೋಕದಲ್ಲಿ ಶೈವಾದಿಮತಗಳು ನಿರಸ್ತವಾಗಿದೆ. ಆದರೆ ಶೈವಾದಿಗಳನ್ನು ಸರ್ವಥಾ ಪರಿತ್ಯಾಗಮಾಡಬಾರದು ಎಂದು ಇಲ್ಲಿಯೇ ಹೇಳುತ್ತಾರೆ. 'ಗುರುದೇವತಾತ್ಮ' ಎಂಬ ವಿಷಯಗಣದಲ್ಲಿ ಗುರುಗಳಾದ ದೇವತೆಗಳ ಭಜನೆಯನ್ನು ಮಾಡಲು ಪ್ರಯತ್ನವನ್ನು ಪಡಬೇಕು ಎಂದು ವ್ಯಾಖ್ಯಾನ ಮಾಡಿರುವುದರಿಂದ ಶಿವಾದಿ ದೇವತೆಗಳನ್ನು ಗುರುಗಳೆಂದು ಭಜನೆ ಮಾಡಬೇಕೆಂದು ಸೂಚಿತವಾಗುತ್ತದೆ. ಪರದೇವತೆಯೆಂದು ಮಾತ್ರ ಭಜನೆ ಮಾಡಬಾರದು.

ಮತ್ತು ಹಿಂದಿನ ಎರಡು ಶ್ಲೋಕಗಳಿಂದ ಸಾಕಾರನಾದ ಅಚ್ಯುತನ ಪಾದಾರ್ಚನೆಯ ರೂಪವಾದ ಸೇವಾ ರೂಪವಾದ ಕರ್ಮಗಳಿಗೂ, ಮತ್ತು ಫಲಾಪೇಕ್ಷೆಯಿಲ್ಲದೇ ಹರಿಯಲ್ಲಿಯೇ ಸಮರ್ಪಣೆ ಮಾಡುವ ನಿವೃತ್ತಿಕರ್ಮಗಳಿಗೂ ಸಹ ಭಯತ್ವಪ್ರದತ್ವವಿಲ್ಲವೆಂದು ಹೇಳಿ ಈ ಎರಡು ಪದ್ಯಗಳಲ್ಲಿ ಅಂತಹ ಕರ್ಮಗಳಿಗಿಂತ ಅತ್ಯಂತ ಭಿನ್ನವಾದ ದ್ವಿತೀಯ ಶಬ್ದವಾಚ್ಯವಾದ ಕಾಮ್ಯಕರ್ಮಪ್ರವಾಹಕ್ಕೆ ಭಯಹೇತುತ್ವವನ್ನು ಹೇಳಿ, 'ಶೃಣ್ವನ್ ಸುಭದ್ರಾಣಿ' ಎಂಬ ಕೊನೆಯ ಶ್ಲೋಕದಲ್ಲಿ ಮೊದಲು ಪ್ರಸಕ್ತವಾದ ನಿವೃತ್ತಿಕರ್ಮಗಳನ್ನೇ ಶ್ರೇಷ್ಠವಾದುದೆಂದು ನಿರ್ಣಯಿಸುತ್ತಾರೆ ಎಂಬ ವ್ಯಾಖ್ಯಾನವೂ ಸಹ ಉಚಿತವೇ ಆಗುತ್ತದೆ. 'ದೇಹಗೇಹಾದಿ' ಎಂಬಲ್ಲಿರುವ ಆದಿಶಬ್ದದಿಂದ ದೇಹಗೇಹಾದಿಗಳಿಗೆ ಪ್ರಯೋಜಕವಾದ ಕಾಮ್ಯಕರ್ಮಗಳೂ ಸಹ ಹೇಯಕೋಟಿಯಲ್ಲಿ ಸಂಗ್ರಹಿತವಾಗಿದೆ. ಪೂರ್ವೋತ್ತರಶ್ಲೋಕಗಳಲ್ಲಿ ನಿವೃತ್ತಿಕರ್ಮಗಳೇ ಪ್ರಶಂಸಿಸಲ್ಪಡುವುದರಿಂದ ಮಧ್ಯದಲ್ಲಿ ಪ್ರಸಕ್ತವಾದ ಹೇಯವಾದ ಕಾಮ್ಯಕರ್ಮದ

ನಿಂದೆಯೇ ನ್ಯಾಯವಾಗುತ್ತದೆ. 'ತತ್ ಕರ್ಮ ಸಂಕಲ್ಪವಿಕಲ್ಪಕಂ ಮನೋ ಬುಧೋ ನಿರುಂಧ್ಯಾತ್' ಎಂಬ ಅಲ್ಲಿಯೇ ಇರುವ ಉಪಸಂಹಾರ ಪದ್ಯದಲ್ಲಿ 'ತತ್' ಎಂಬ ಪದದಿಂದ ಪೂರ್ವೋಕ್ತವಾದ ಭಯಹೇತುತ್ವವನ್ನು ನಿಮಿತ್ತವನ್ನಾಗಿ ಮಾಡಿ, 'ಕರ್ಮ ಸಂಕಲ್ಪಂ ವಿಕಲ್ಪಕಂ' ಎಂದರೆ ಕರ್ಮಗಳಲ್ಲಿ ಸಂಕಲ್ಪ-ವಿಕಲ್ಪರೂಪವಾಗಿ ಯೋಚನೆ ಮಾಡುವ ಮನಸ್ಸನ್ನು ವಿರೋಧಗೊಳಿಸಬೇಕು ಎಂದು ಕರ್ಮನಿಂದನೆಯನ್ನೇ ಮಾಡಿರುವುದರಿಂದ ಮೊದಲು ಇರುವ ದ್ವಿತೀಯ ಮತ್ತು ದ್ವಯ ಶಬ್ದಗಳಿಂದ ಪ್ರವೃತ್ತಿಕರ್ಮಗಳಿಗೆ ದುಃಖಹೇತುತ್ವವನ್ನು ಹೇಳಬೇಕು. ಹಾಗಿಲ್ಲದೇ ಎಂದರೆ ಪ್ರವೃತ್ತಿಕರ್ಮವನ್ನು ನಿಷೇಧ ಮಾಡದೇ ದ್ವಿತೀಯವಾದ ಜಗತ್ತನ್ನು ನಿಷೇಧ ಮಾಡಿದರೆ ಪ್ರವೃತ್ತಿಕರ್ಮವು ದುಃಖಹೇತುವಾದರೆ, ಜಗತ್ತನ್ನು ನಿಷೇಧ ಮಾಡುವುದಕ್ಕೆ ಹೇತುಸಾಧ್ಯಗಳಿಗೆ ವೈಯಧಿಕರಣವು ಬರುತ್ತದೆ. ನಮಗಾದರೆ ಪ್ರವೃತ್ತಿಕರ್ಮ-ನಿಷೇಧರೂಪವಾದ ಮೂರನೆಯ ಅರ್ಥದಲ್ಲಿಯೂ ಸ್ಪಷ್ಟವಾದ ಸಂಗತಿಯೇ ಇದೆ. ದ್ವಿತೀಯ ದೇಹಶಬ್ದಗಳಿಗೆ ದೇಹಗೇಹಾದಿಗಳು ಎಂಬರ್ಥವನ್ನು ಅಂಗೀಕರಿಸಿದರೂ 'ತತ್' ಎಂದರೆ ಆದ್ದರಿಂದ ಎಂದರೆ ದೇಹಗೇಹಾದಿಗಳು ದುಃಖಪ್ರದವಾದ್ದರಿಂದ ಕರ್ಮ ಎಂದರೆ ಕರ್ಮಗಳಲ್ಲಿ ಎಂದರೆ ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಅನಿತ್ಯವಾದ ದೇಹಗೇಹಾದಿಗಳನ್ನು ಕೊಡುವ ಕಾಮ್ಯಕರ್ಮಗಳಲ್ಲಿ___ಎಂದರೆ ಕಾಮ್ಯಕರ್ಮಗಳ ವಿಷಯದಲ್ಲಿ ಮನಸ್ಸನ್ನು ನಿರೋಧಗೊಳಿಸಬೇಕು ಎಂಬ_ಸಂಗತಿಯು ಕೂಡುತ್ತದೆ. ದ್ವಿತೀಯಾದಿ ಶಬ್ದಗಳಿಗೆ ನಿರ್ಗುಣವಾದ ಶಿವಾದಿಗಳು ಎಂಬರ್ಥವನ್ನು ತೆಗೆದುಕೊಂಡರೂ ನಿರ್ಗುಣಶಿವಾದಿಗಳಲ್ಲಿ ಆಗ್ರಹವನ್ನು ಮಾಡುವುದರಿಂದ ದುಃಖವೇ ಉಂಟಾಗುವುದರಿಂದ (ಇದು 'ತತ್' ಶಬ್ದದ ಅರ್ಥ) 'ಕರ್ಮ' ಎಂದರೆ 'ಕರ್ಮಣಿ' ಎಂದರೆ ಅಂತಹ ನಿರ್ಗುಣಶಿವಾದಿ ಉಪಾಸನಕರ್ಮದಲ್ಲಿ ಮನಸ್ಸನ್ನು ನಿರೋಧಿಸಬೇಕು ಎಂಬ ಸಂಗತಿಯು ಕೂಡುತ್ತದೆ. ನಿನಗಾದರೆ ದ್ವಿತೀಯವಾದ ಜಗತ್ತಿನ ಅಭಿನಿವೇಶವು ದುಃಖಹೇತುವಾದರೆ ದ್ವಿತೀಯಾದಿ ಜಗತ್ತಿನಲ್ಲಿಯೇ ಮನೋನಿರೋಧವನ್ನು ಹೇಳಬೇಕು. ಕರ್ಮಮಾತ್ರದಲ್ಲಿ ಮನೋನಿರೋಧವನ್ನು ಹೇಳುವುದಕ್ಕೆ ಯಾವ ಸಂಗತಿಯೂ ಇಲ್ಲ. ಏಕೆಂದರೆ ಇಲ್ಲಿ ಯಜ್ಞಾದಿಗಳಾಗಲೀ, ಜಗತ್ಸಾಧಕವಾದ ಜಗತ್ತಿನ ಉಪಾಸನಾರೂಪಕರ್ಮವಾಗಲೀ ಯಾರ ಮತದ ರೀತಿಯಲ್ಲಿಯೂ ಪ್ರಸಕ್ತವಾಗಿಲ್ಲ. ಆದ್ದರಿಂದ ಪರಮಾತ್ಮನಲ್ಲಿ ಅಸಂಗತಿಯು ಸ್ಪಷ್ಟವಾಗಿದೆ. ನಾವು ಹಿಂದೆ ಹೇಳಿದಂತೆ ನಿವೃತ್ತಿಕರ್ಮಗಳು ಶಾಸ್ತ್ರದಿಂದ ಪ್ರಶಂಸಿಸಲ್ಪಟ್ಟಿರುವುದರಿಂದ ಕರ್ಮಶಬ್ದವು ನಿಂದೆಯನ್ನು ಹೇಳುವ ಕಾರಣದಿಂದ, ಇಲ್ಲಿ ಪ್ರವೃತ್ತಿಕರ್ಮ ಮಾತ್ರ ಪರವಾಗಿದೆ.. 'ಅವಿದ್ಯಮಾನ' ಎಂದರೆ ಪ್ರವೃತ್ತಿಕರ್ಮಗಳು ಶಾಸ್ತ್ರತಾತ್ಪರ್ಯವಿಷಯವಾಗಿ ವಿದ್ಯಮಾನವಲ್ಲ ಎಂದು ಅರ್ಥ. 'ರೋಚನಾರ್ಥಂ ಫಲಶ್ರುತಿಃ' ಎಂದು ಹೇಳಿರುವುದರಿಂದ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳಿಗೆ ಸ್ವರ್ಗಸಾಧನತ್ವೇನ

ಜ್ಯೋತಿಷ್ಟೋಮಾದಿಗಳಲ್ಲಿ ತಾತ್ಪರ್ಯವಿಲ್ಲ ಎಂದು ತಿಳಿಯುತ್ತದೆ. ಆದ್ದರಿಂದ ದ್ವಯಃ = ಪ್ರವೃತ್ತಿಕರ್ಮಸಮುದಾಯವು, ಧ್ಯಾತುಃ = ವಿಷಯಗಳನ್ನೇ ಧ್ಯಾನ ಮಾಡುವ ಪುರುಷನ, ಧಿಯಾ = ರಾಗಕಲುಷಿತವಾದ ಬುದ್ಧಿಯಿಂದ, ಅವಭಾತಿ = ಶಾಸ್ತ್ರವಿಷಯವೆಂದು ತೋರುತ್ತದೆ. ಆದ್ದರಿಂದ ವಿವೇಕಿಯಾದವನು ಪ್ರವೃತ್ತಿಕರ್ಮಗಳಲ್ಲಿ ಸಂಕಲ್ಪವಿಕಲ್ಪಾತ್ಮಕವಾಗಿ ತೊಡಗಿರುವ ಮನಸ್ಸನ್ನು ವಿರೋಧಿಸಬೇಕು ಎಂಬ ಪೂರ್ವೋತ್ತರ ಯೋಜನೆಯು ಅತ್ಯಂತ ಶ್ರೇಷ್ಠವಾಗುವುದರಿಂದ ಇದೇ ಶಾಸ್ತ್ರಾರ್ಥವಾಗುತ್ತದೆ. 'ದೇವತ್ವಾ ಅಸದೀಶಾದೇಃ' ಎಂದು ಹೇಳುವ ರಾಜರು ಆದಿಪದದಿಂದ ಮೀಮಾಂಸಗಳಿಗೆ ಅಭಿಮತವಾದ ಕಾಮ್ಯಕರ್ಮಗಳನ್ನು ಸಂಗ್ರಹಿಸಿರುವುದರಿಂದ ಈ ಕಾಮ್ಯಕರ್ಮನಿಂದಾಪರವಾದ ವ್ಯಾಖ್ಯಾನವೂ ಸಹ ಮೂಲಕಾರರಿಗೆ ಅಭಿಪ್ರೇತವಾದುದೇ ಆಗಿದೆ.

**ತ್ವಮೇವಾಹಮಿತಿ ಪ್ರೋಕ್ತೇಽಪ್ಯೈಕ್ಯಾಶಾ ನೈವ ಶಕ್ಯತೇ ।**
**ತ್ವಮೇವಾಹಮಿತಿ ಪ್ರಾಹುರತಿಸ್ನಿಗ್ಧಂ ಯತೋ ಜನಾಃ ॥ ೩೮೨ ॥**

**ಅರ್ಥ–**ತ್ವಮ್ ಏವ ಅಹಮ್ ಇತಿ = ನೀನೇ ನಾನು ಎಂದು ಪ್ರೋಕ್ತೇ ಅಪಿ = ಉಕ್ತಿಯು ಇದ್ದರೂ (ಹೇಳಿದರೂ), ಐಕ್ಯಾಶಾ= ಐಕ್ಯವನ್ನು ತಿಳಿಸುವ ಅಭಿಪ್ರಾಯವಿದೆ ಎಂಬ ಆಶೆಯು ನೈವ ಶಕ್ಯತೇ = ಸರ್ವಥಾ ಶಕ್ಯವಿಲ್ಲ, ಯತಃ = ಏಕೆಂದರೆ, ಜನಾಃ = ಜನರು, ಅತಿಸ್ನಿಗ್ಧಂ = ಬಹಳ ಪ್ರೀತಿಪಾತ್ರನನ್ನು ಕುರಿತು, ತ್ವಮ್ ಏವ ಅಹಮ್ ಇತಿ = ನೀನೇ ನಾನು ಎಂದು ಪ್ರಾಹುಃ = ಹೇಳುತ್ತಾರೆ.

**ಅನುವಾದ–** ನೀನೇ ನಾನು ಎಂದು ಉಕ್ತಿಯು ಇದ್ದರೂ ಈ ಉಕ್ತಿಯಿಂದ ಆತ್ಮದ ಐಕ್ಯವನ್ನು ತಿಳಿಸುತ್ತಿದ್ದಾರೆ ಎಂದು ಆಸೆಪಡುವಂತಿಲ್ಲ. ಏಕೆಂದರೆ ಇಬ್ಬರು ವ್ಯಕ್ತಿಗಳಿಗೆ ಭೇದವು ಸ್ಪಷ್ಟವಾಗಿ ಗೋಚರವಾಗಿದ್ದಾಗಲೂ ಬಹಳ ಪ್ರೀತಿಪಾತ್ರ ವ್ಯಕ್ತಿಯನ್ನು ಕುರಿತು ಜನರು ನೀನೇ ನಾನು ಎಂದು ಹೇಳುತ್ತಾರೆ.

**ಭಾವವಿಲಾಸಿನೀ–** ಅಧುನಾ ವಾಕ್ಯಾಂತರೇಽಪ್ಯೈಕ್ಯಶಂಕಾಂ ನಿರಾಕರ್ತುಮುಪೋದ್ಘಾತ-ಸಂಗತಿಮಾಹ – **ತ್ವಮೇವಾಹಮಿತಿ** ॥ ಯತಃ ಯಸ್ಮಾತ್ । ಅತಿಸ್ನಿಗ್ಧಮತಿಪ್ರಿಯಂ ಸಖಾಯಂ ಜನಾಸ್ತ್ವಮೇವಾಹಮಿತಿ ಪ್ರಾಹುಃ ತತ ಇತಿ ಪೂರ್ವೇಣಾನ್ವಯಃ ॥ ೩೮೨ ॥

**ವಿವರಣೆ–** ಭಾಗವತ ಪುರಾಣದಲ್ಲಿ ಅಹಂ ಭವಾನ್ ನಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವಭೋಃ । ನ ನೌ ಪಶ್ಯಂತಿ ಕವಯಃ ಛಿದ್ರಂ । ಜಾತು ಮನಾಗಪಿ (4.28.62) ಎಂಬ ಪದ್ಯವಿದೆ.

ಇದು ಜೀವಾತ್ಮನಿಗೆ ಪರಮಾತ್ಮನ ಉಪದೇಶ. ನಾನು ನೀನೇ ಎಂದು ಹೇಳುವುದರಿಂದ ಜೀವ ಪರಮಾತ್ಮರ ಐಕ್ಯವನ್ನೇ ಪರಮಾತ್ಮನು ಉಪದೇಶಿಸಿದ್ದಾನೆ

ಎಂದು ಆಪಾತತಃ ತೋರಿದರೂ ಈ ಪದ್ಯವು ಐಕ್ಯವನ್ನು ಉಪದೇಶಿಸುವುದಿಲ್ಲ ಎಂದು ಯುಕ್ತಿ ಮಲ್ಲಿಕಾಕಾರರು 385-402 ರವರೆಗೆ ಪ್ರತಿಪಾದಿಸುತ್ತಾರೆ. ಇದಕ್ಕೆ ಉಪೋದ್ಘಾತ- ವಾಗುವ ವಿಷಯಗಳನ್ನು 382-384 ರಲ್ಲಿ ಹೇಳುತ್ತಿದ್ದಾರೆ.

**ಅಹಂ ಪೃಥಕ್ ಪೃಥಕ್ ತ್ವಂ ಕಿಂ ತ್ವಮೇವಾಹಮಿತಿ ಪ್ರಭುಃ ।**
**ಸ್ವಮಂತ್ರಿಣಮತಿಪ್ರೇಮ್ಣಾ ಕಿಂ ನ ವಕ್ತಿ ಪ್ರಿಯಂವದಃ ॥ ೩೮೩ ॥**

**ಅರ್ಥ–** ಪ್ರಿಯಂವದಃ = ಪ್ರಿಯಭಾಷಿಯಾದ, ಪ್ರಭುಃ = ರಾಜನು, ಅತಿಪ್ರೇಮ್ಣಾ = ಬಹಳ ಪ್ರೀತಿಯಿಂದ, ಸ್ವಮಂತ್ರಿಣಂ = ತನ್ನ ಮಂತ್ರಿಯನ್ನು ಕುರಿತು, ಅಹಂ ತ್ವಂ ಪೃಥಕ್ ಕಿಮ್? = ನಾನು ನೀನು ಬೇರೆ ಬೇರೆ ಏನು? ತ್ವಮ್ ಏವ ಅಹಮ್ = ನೀನೇ ನಾನು ಇತಿ = ಎಂದು, ನ ವಕ್ತಿ ಕಿಮ್? = ಹೇಳುವುದಿಲ್ಲವೇ?

**ಅನುವಾದ–** ಪ್ರಿಯಭಾಷಿಯಾದ ರಾಜನು ತನ್ನ ಮಂತ್ರಿಯನ್ನು ಕುರಿತು ಬಹಳ ಪ್ರೀತಿಯಿಂದ ನಾನು ನೀನು ಬೇರೆ ಬೇರೆಯೇ? ನೀನೇ ನಾನು ಎಂದು ಹೇಳುವುದಿಲ್ಲವೇ? ಹೇಳುತ್ತಾನೆ.

**ಭಾವವಿಲಾಸಿನೀ–** ಉದಾಹರಣಾಂತರಮಾಹ – **ಅಹಮಿತಿ** ॥ ಕಿಂ ಶಬ್ದಸ್ಯೋಭಯತ್ರಾಪಿ ಸಂಬಂಧಃ । ಪ್ರಿಯಂವದಃ ಪ್ರಭುರಿತಿ ಸಂಬಂಧಃ ॥ ೩೮೩ ॥

**ತಸ್ಮಾದೇತಾದೃಶೇ ವಾಕ್ಯೇ ಪ್ರತೀತಾರ್ಥೇ ತು ಬಾಧಿತೇ ।**
**ಪ್ರೇಮ ಗ್ರಾಹ್ಯಮಬಾಧೇತು ಸ್ವರೂಪೈಕ್ಯಮಿತಿ ಸ್ಥಿತಿಃ ॥ ೩೮೪ ॥**

**ಅರ್ಥ–** ತಸ್ಮಾದ್ = ಆದ್ದರಿಂದ, ಏತಾದೃಶೇ ವಾಕ್ಯೇ = ಇಂತಹ ವಾಕ್ಯದಲ್ಲಿ ಪ್ರತೀತಾರ್ಥೇ = ಮೊದಲು ತೋರುವ ಅರ್ಥವು, ಬಾಧಿತೇ ತು = ಪ್ರಮಾಣ ವಿರುದ್ಧವಾಗಿದ್ದಾಗ ಮಾತ್ರವೇ, ಪ್ರೇಮ = ಪ್ರೇಮವು (ಅರ್ಥವೆಂದು) ಗ್ರಾಹ್ಯಮ್ = ಗ್ರಹಿಸಲ್ಪಡಬೇಕು ಅಬಾಧೇ ತು = ಪ್ರಮಾಣ ವಿರೋಧವು ಇಲ್ಲದಿದ್ದರೆ, ಸ್ವರೂಪೈಕ್ಯಂ = ಆತ್ಮದ ಐಕ್ಯವು (ಅರ್ಥವೆಂದು) ಗ್ರಾಹ್ಯಂ – ಗ್ರಹಿಸಲ್ಪಡಬೇಕು ಇತಿ = ಎಂದು ಸ್ಥಿತಿಃ = ಲೋಕರೂಢಿಮತ್ತು ಪ್ರಾಜ್ಞರೂಢಿ.

**ಅನುವಾದ–** ಇಂತಹ ವಾಕ್ಯಗಳಲ್ಲಿ ಹೇಳುವ ವ್ಯಕ್ತಿಯ ಮತ್ತು ಹೇಳಲ್ಪಡುವ ವ್ಯಕ್ತಿಯ ಏಕತ್ವವು ಮೊದಲು ತೋರುವ ಅರ್ಥ. ಈ ಅರ್ಥವು ಪ್ರಮಾಣ ವಿರುದ್ಧವಾಗಿದ್ದರೆ ಇದನ್ನು ಗ್ರಹಿಸಬಾರದು. ರಾಜನಿಗೆ ಮತ್ತು ಮಂತ್ರಿಗೆ ತಾವಿಬ್ಬರೂ ಬೇರೆ ಬೇರೆ ಎಂದು ಅನುಭವವಿದೆ. ಏಕತ್ವವು ಇದಕ್ಕೆ ವಿರುದ್ಧ. ಆದ್ದರಿಂದ ಈ ಅರ್ಥವನ್ನು ಬಿಡಬೇಕು. ಪ್ರೀತಿಯಿದ್ದವರು ನಾವು ಒಂದೇ ಎಂದು ಹೇಳಿಕೊಳ್ಳುತ್ತಾರೆ. ಆದ್ದರಿಂದ ಬೇರೆ ಅಲ್ಲ ಒಂದೇ ಎಂಬ ಮಾತು ಪ್ರೀತಿಯ ದ್ಯೋತಕ ಎಂದು ಗ್ರಹಿಸಬೇಕು. ಪ್ರಮಾಣಬಾಧವಿಲ್ಲದಿದ್ದರೆ ಐಕ್ಯವನ್ನು ಅರ್ಥ ಎಂದು ಗ್ರಹಿಸಬೇಕು.

**ಭಾವವಿಲಾಸಿನೀ–** ಉದಾಹರಣಮುಪಸಂಹರನ್ ಪ್ರಮೇಯವಿಶೇಷಂ ಚಾಹ – **ತಸ್ಮಾದಿತಿ** ॥ ಪ್ರತೀತಾರ್ಥೇ ಆಪಾತತಃ ಪ್ರತೀತ್ಯೈಕ್ಯರೂಪಾರ್ಥೇ ಬಾಧಿತೇ ಸರ್ವಸಿದ್ಧವಿರುದ್ಧಧರ್ಮಾದಿನಾ ವಕ್ತುಮಶಕ್ಯೇ । ಅಬಾಧೇ ಅನಂತಾಸನಸ್ಥೇನ ಹರಿಣಾ ಸ್ವಾವತಾರಂ ಕೃಷ್ಣಂ ಪ್ರತೀಂದ್ರಾದಿಭಿರ-ರ್ಜುನಾದೀನ್ ಪ್ರತಿ ಚೇದೃಗ್ವಾಕ್ಯ ಕಥನದಶಾಯಾಮುಭಯೋರಪಿ ಸಮಗುಣತ್ವೇನ ಮುಖ್ಯಾರ್ಥಬಾಧಾಭಾವೇ ॥ ೩೮೪ ॥

ಅಹಂ ಭವಾನ್ ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವ ಭೋಃ ।
ನ ನೌ ಪಶ್ಯಂತಿ ಕವಯಶ್ಛಿದ್ರಂ ಜಾತು ಮನಾಗಪಿ ॥ ೩೮೫ ॥

ಇತಿ ಭಾಗವತೇ ಪ್ರೋಕ್ತಾ ತತೋ ಹಂಸಸ್ಯ ವಾಗಪಿ ।
ಲೋಕಾನುಸಾರಿಣೀ ಬೋಧ್ಯಹಂಸೇ ಪ್ರೇಮೈವ ಶಂಸತಿ ।
ಬೋಧ್ಯಬೋಧಕಯೋರಜ್ಞಸುಜ್ಞಯೋರೈಕ್ಯವಾದಿನೀ ॥ ೩೮೬ ॥

**ಅರ್ಥ–** ತತಃ = ಆದ್ದರಿಂದ ಭೋಃ! = ಜೀವಾತ್ಮನೇ! ವಿಚಕ್ಷ್ವ = ನೋಡು, ಅಹಂ = ನಾನು, ಭವಾನ್ = ನೀನು, ನ ಚ ಅನ್ಯಃ = ಬೇರೆ ಅಲ್ಲ, ತ್ವಮ್ ಏವ ಅಹಮ್ = ನೀನೇ ನಾನು, ಕವಯಃ = ಜ್ಞಾನಿಗಳು, ಜಾತು = ಯಾವ ಕಾಲದಲ್ಲೂ, ನೌ = ನಮ್ಮಿಬ್ಬರಲ್ಲಿ ಮನಾಕ್ ಅಪಿ = ಸ್ವಲ್ಪವೂ, ಛಿದ್ರಂ = ಒಡಕನ್ನು ನ ಪಶ್ಯಂತಿ = ಕಾಣುವುದಿಲ್ಲ ಇತಿ = ಎಂದು, ಭಾಗವತೇ = ಭಾಗವತ ಪುರಾಣದಲ್ಲಿ ಪ್ರೋಕ್ತಾಂ = ಹೇಳಲ್ಪಟ್ಟ (೪.೨೮.೬೨), ಬೋಧ್ಯ-ಬೋಧಕಯೋಃ = ಶಿಷ್ಯ ಮತ್ತು ಗುರುವಿಗೆ, ಅಜ್ಞ ಸುಜ್ಞಯೋಃ = ಅಜ್ಞಾನಿ ಮತ್ತು ಸುಜ್ಞಾನಿಗೆ, ಐಕ್ಯವಾದಿನೀ = ಐಕ್ಯವನ್ನು ಹೇಳುವ, ಹಂಸಸ್ಯ = ಹಂಸದ (ವೈದರ್ಭಿಯ ಪೂರ್ವಜನ್ಮದ ಮಿತ್ರನ), ವಾಕ್ ಅಪಿ = ಮಾತು ಕೂಡ, ಲೋಕಾನುಸಾರಿಣೀ = ಲೋಕರೂಢಿಗೆ ಅನುಗುಣವಾಗಿ, ಬೋಧ್ಯಹಂಸೇ = ಉಪದೇಶಿಸಲ್ಪಡುವ ಹಂಸದ (ವೈದರ್ಭಿ) ಮೇಲೆ, ಪ್ರೇಮ ಏವ = ಪ್ರೀತಿಯನ್ನೇ, ಶಂಸತಿ = ಹೇಳುತ್ತದೆ.

**ಅನುವಾದ–** ಅಹಂ ಭವಾನ್......! ...... ಜಾತು ಮನಾಗಪಿ । - ಈ ಪದ್ಯವು ಭಾಗವತದಲ್ಲಿ (೪.೨೮.೬೨) ಇದೆ. ಇದು ಪುರಂಜನೋಪಾಖ್ಯಾನದ ಕೊನೆಯ ಹಂತದಲ್ಲಿ ಬರುವ ಪದ್ಯ. ಪುರಂಜನೋಪಾಖ್ಯಾನದಲ್ಲಿ ಪುರಂಜನ ಎಂಬ ರಾಜನು ಭೋಗಾಸಕ್ತ ಜೀವಾತ್ಮಗಳ ಸಂಕೇತ. ಜೀವಾತ್ಮನ ಜೊತೆಯಲ್ಲಿ ಅವನಿಗೆ ತಿಳಿಯದಂತೆ ಇರುವ ಮಿತ್ರನು ಈ ಕಥೆಯಲ್ಲಿ ಇದ್ದಾನೆ. ಭೋಗಾಸಕ್ತ ಪುರಂಜನನು ಸ್ತ್ರೀ ಜನ್ಮವನ್ನು ಪಡೆದು ವೈದರ್ಭಿಯಾಗಿದ್ದಾನೆ. ಇವಳ ಪತಿ ಮಲಯಧ್ವಜ. ಇವನು ಪೂರ್ವಜನ್ಮದ ಪುರಂಜನಿ. ಮಲಯಧ್ವಜನ ಮರಣವು ಸಂಭವಿಸಿದಾಗ ಶೋಕತಪ್ತಳಾಗಿದ್ದ ವೈದರ್ಭಿಯ ಬಳಿ ಒಬ್ಬ ಬ್ರಾಹ್ಮಣನು ಬರುತ್ತಾನೆ. ಇವನೇ ಅವಿಜ್ಞಾತಸಖ, ಅವನು ಹೇಳುತ್ತಾನೆ : ನಾನು ಮತ್ತು ನೀನು ಹಂಸಗಳು,

ಗೆಳೆಯರು, ಮಾನಸ ಸರೋವರ ವಾಸಿಗಳು. ಒಂದು ಸಾವಿರ ವರ್ಷ ಇಬ್ಬರೂ ಸುಖವಾಗಿ ಅಲ್ಲಿ ವಾಸಿಸಿದೆವು ಇತ್ಯಾದಿ. ಈ ಎರಡು ಹಂಸಗಳಲ್ಲಿ ಒಂದು ಪರಮಾತ್ಮ. ಇನ್ನೊಂದು ಜೀವಾತ್ಮ. ಬ್ರಾಹ್ಮಣ ರೂಪದಲ್ಲಿ ಬಂದವನು ಪರಮಾತ್ಮ ಹಂಸ. ಈ ಹಂಸವು ವೈದರ್ಭಿಯಾಗಿದ್ದ ಜೀವಾತ್ಮಹಂಸಕ್ಕೆ ಉಪದೇಶವನ್ನು ಮಾಡಿದ ಸಂದರ್ಭದಲ್ಲಿ ಅಹಂ ಭವಾನ್.... ಇತ್ಯಾದಿ ಶ್ಲೋಕವಿದೆ. ಆದ್ದರಿಂದ ಇದು ಅಜ್ಞಾನಿಯಾದ ಜೀವಹಂಸಕ್ಕೆ ಸುಜ್ಞಾನಿಯಾದ ಪರಮಾತ್ಮಹಂಸವು ಮಾಡಿದ ಉಪದೇಶ.

**ಭಾವವಿಲಾಸಿನೀ– ಯದರ್ಥಮುಪೋದ್ಘಾತಸ್ತದಧುನಾಽಽಹ – ಅಹಂ ಭವಾನಿತಿ ॥ ತತಃ ಉಕ್ತನಿದರ್ಶನಾತ್ ॥ ೩೮೫ ॥**

ಬೋಧ್ಯಹಂಸ ಇತಿ ಬೋಧ್ಯಬೋಧಕಭಾವಾದಿರೂಪವಿರುದ್ಧಧರ್ಮ ಸ್ಫೋರಣಾರ್ಥ-ಮುಕ್ತಮ್ । ತದೇವ ವಿಶದಯತಿ । **ಬೋಧ್ಯಬೋಧಕಯೋರಜ್ಞಸುಜ್ಞಯೋರಿತಿ** ॥ ಬೋಧಕಸುಜ್ಞಃ ಬೋಧ್ಯಸ್ತ್ವಜ್ಞ ಇತಿ ಸುಪ್ರಸಿದ್ಧಮೇವ । ಲೋಕೇ ಸ್ವಸುಹೃದಂ ಪ್ರತಿ ಸುಹೃದ್ವಾ ರಾಜಕಾರ್ಯದೌ ಮಂತ್ರಿಣಂ ಪ್ರೇಷಯನ್ನತಿಕುಶಲೋ ರಾಜಾ ವಾ ತಸ್ಯ ಸ್ವಕಾರ್ಯ-ಸಂಪಾದನಾಯ ತಸ್ಮಿನ್ ಸ್ವಭಟಾನಾಂ ಭಯಸಂಪಾದನಾಯ ಚ ಯಥಾ ತ್ವಮೇವಾಹ-ಮಿತ್ಯಾದಿಪ್ರಿಯವಚನಂ ವಕ್ತಿ ತಥಾ ಪರಮಾತ್ಮಾಖ್ಯಬೋಧಕಹಂಸೋಽಪಿ ವಿಷಯೇಷ್ವೇ-ವಾಸಕ್ತಂ ಜೀವಾಖ್ಯಬೋಧ್ಯಹಂಸಂ ಸ್ವಭಕ್ತಮೇವ ಕರ್ತುಮೇವಂ ವಕ್ತೀತಿ ಭಾವಃ ॥ ೩೮೬ ॥

**ವಿವರಣೆ–** ನಾನು ಎಂದರೆ ಪರಮಾತ್ಮ ಹಂಸ. ನೀನು ಎಂದರೆ ಜೀವಾತ್ಮ ಹಂಸ. ಪರಮಾತ್ಮ ಹಂಸವು ಬೋಧಕ ಮತ್ತು ಸುಜ್ಞ. ಜೀವಾತ್ಮ ಹಂಸವು ಬೋಧ್ಯ ಮತ್ತು ಅಜ್ಞ. ಬೋಧಕತ್ವ ಮತ್ತು ಸುಜ್ಞತ್ವಗಳು ಪರಮಾತ್ಮನಲ್ಲಿ ಇವೆ. ಬೋಧ್ಯತ್ವ ಮತ್ತು ಅಜ್ಞತ್ವಗಳು ಜೀವಾತ್ಮನಲ್ಲಿ ಇವೆ. ಇವು ವಿರುದ್ಧ ಧರ್ಮಗಳು. ಇವುಗಳನ್ನು ತಮ್ಮಲ್ಲಿ ಅನುಭವಿಸಿರುವ ಈ ಎರಡು ಚೇತನಗಳಿಗೆ ತಾವು ಒಂದಲ್ಲ, ಭಿನ್ನರು ಎಂದು ಅಬಾಧಿತವಾದ ಜ್ಞಾನವಿದೆ. ಆದ್ದರಿಂದ ಈ ಪದಗಳನ್ನು ಕೇಳಿದಾಗ ಉಂಟಾಗುವ ಮೊದಲ ಜ್ಞಾನವು ಬಾಧಿತ; ಎಂದರೆ, ಅನುಭವ ವಿರುದ್ಧ. ಆದ್ದರಿಂದ ಮೊದಲು ತೋರುವ ಐಕ್ಯವನ್ನು ಒಟ್ಟು ಪರಮಾತ್ಮ ಹಂಸವು ತನಗೆ ಜೀವಾತ್ಮಹಂಸದ ಮೇಲಿರುವ ಪ್ರೇಮವನ್ನು ಈ ಪದಗಳಿಂದ ಹೇಳಿದೆ ಎಂದು ತಿಳಿಯುತ್ತದೆ.

ಪ್ರೇಮ ಇರುವವರಲ್ಲಿ ಒಡಕಿಗೆ ಅವಕಾಶವಿಲ್ಲ. ಆದ್ದರಿಂದ ತಿಳಿದವರು ಯಾರೂ ನಮ್ಮಲ್ಲಿ ಯಾವುದೇ ಒಡಕನ್ನು ಕಾಣುವುದಿಲ್ಲ ಎಂಬ ಮಾತು ಸುಸಂಗತವಾಗುತ್ತದೆ.

ವಿಶೇಷ ವಿಚಾರ : (1) ಪರಮಾತ್ಮ ಹಂಸವು ಭೋಗಾಸಕ್ತ ಜೀವಾತ್ಮ ಹಂಸವನ್ನು ತನ್ನ ಭಕ್ತನನ್ನಾಗಿ ಮಾಡುವುದಕ್ಕಾಗಿ ಪ್ರೇಮದ ಮಾತುಗಳನ್ನು ಆಡಿದೆ.

(2) ಪರಮಾತ್ಮನು ಜೀವಾತ್ಮನಿಗೆ ಅಸ್ತಿತ್ವವನ್ನು ಕೊಡುವವನು, ಎಂದರೆ, ಅಸ್ತಿತ್ವದ ನಿಯಾಮಕನು. ಪರಮಾತ್ಮನ ಸಾದೃಶ್ಯವು ಜೀವಾತ್ಮನಲ್ಲಿ ಇದೆ. ಈ ಕಾರಣದಿಂದ ಪರಮಾತ್ಮ-ಜೀವಾತ್ಮಗಳು ಒಂದೇ ಎಂಬ ಮಾತುಗಳಿರುತ್ತವೆ. ಒಂದೇ ಎಂಬ ಮಾತಿಗೆ ಜೀವಾತ್ಮನ ಸ್ವರೂಪವೇ ಪರಮಾತ್ಮ ಎಂದು ಅರ್ಥವಲ್ಲ.

**ಅಥವಾ ಬಿಂಬಭೂತಸ್ಯ ಸ್ವಸ್ಯ ಸ್ವಪ್ರತಿಬಿಂಬತಃ ।**
**ಜೀವಾದ್ ವಕ್ತ್ಯವಿನಾಭಾವಂ ನ ತ್ವೈಕ್ಯಂ ವಕ್ತಿ ಬಾಧಿತಮ್ ॥ ೩೮೭ ॥**

**ಅರ್ಥ–**ಅಥವಾ = ಅಥವಾ, ಬಿಂಬಭೂತಸ್ಯ ಸ್ವಸ್ಯ = ಬಿಂಬನಾದ ತನಗೆ, ಸ್ವಪ್ರತಿಬಿಂಬತಃ ಜೀವಾತ್ = ತನ್ನ ಪ್ರತಿಬಿಂಬನಾದ ಜೀವನಿಂದ, ಅವಿನಾಭಾವಂ = ಜೊತೆಗೇ ಇರುವಿಕೆಯನ್ನು (ಸಾಹಚರ್ಯ ನಿಯಮವನ್ನು) ವಕ್ತಿ = (ಭಾಗವತ ಪದ್ಯವು) ಹೇಳುತ್ತದೆ. ಬಾಧಿತಮ್ = ಬಾಧಿತವಾದ (ಪ್ರಮಾಣ ವಿರುದ್ಧವಾದ) ಐಕ್ಯಂ = ಐಕ್ಯವನ್ನು, ನ ತು ವಕ್ತಿ = ಹೇಳುವುದೇ ಇಲ್ಲ.

**ಅನುವಾದ–** ಜೀವಾತ್ಮನು ಪರಮಾತ್ಮನ ಪ್ರತಿಬಿಂಬ. ಪ್ರತಿಬಿಂಬವು ಇರುವಲ್ಲಿ ಬಿಂಬವು ಇದ್ದೇ ಇರುತ್ತದೆ. ಆದ್ದರಿಂದ ಜೀವಾತ್ಮನನ್ನು ಪರಮಾತ್ಮನು ವ್ಯಾಪಿಸಿದ್ದಾನೆ. ಯತ್ರ ಜೀವಾತ್ಮಾ ತತ್ರ ಪರಮಾತ್ಮಾ. ಈ ವ್ಯಾಪ್ತಿಯನ್ನು ಐಕ್ಯಾರ್ಥದ ಪದವಿನ್ಯಾಸದಿಂದ ಬೋಧಕಹಂಸವು ಹೇಳಿದೆ. ಸ್ವರೂಪೈಕ್ಯವು ಅನುಭವವಿರುದ್ಧ. ಆದ್ದರಿಂದ ಬಾಧಿತ. ಸರ್ವಜ್ಞನಾದ ಬೋಧಕಹಂಸವು ಬಾಧಿತವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಅರ್ಥಾಂತರಮಪ್ಯಾಹ – **ಅಥವೇತಿ** ॥ ಸ್ವಸ್ಯ ಪರಮಾತ್ಮರೂಪಹಂಸಸ್ಯ । ಸ್ವಪ್ರತಿಬಿಂಬತಃ ಪರಮಾತ್ಮಪ್ರತಿಬಿಂಬಾತ್ । ಜೀವಾಜ್ಜೀವಾಖ್ಯಹಂಸಾತ್ । ಅವಿನಾಭಾವಪದಂ ಸಾದೃಶ್ಯಸ್ಯಾಪ್ಯುಪಲಕ್ಷಣಮ್ । ಬಿಂಬಪ್ರತಿಬಿಂಬಯೋರೈಕ್ಯವ್ಯಪದೇಶಶ್ಚ ದರ್ಪಣೇ ಮುಖ-ಮಿತ್ಯಾದೌ ದೃಷ್ಟಃ ॥ ೩೮೭ ॥

**ವಿವರಣೆ–** (1) ಕನ್ನಡಿಯಲ್ಲಿ ಮುಖ ಎಂಬ ಪ್ರಯೋಗವಿದೆ. ಇಲ್ಲಿ ಮುಖ ಎಂದರೆ ಪ್ರತಿಮುಖ. ಮುಖ-ಪ್ರತಿಮುಖಗಳಿಗೆ ಅವಿನಾಭಾವವು ಇರುವುದರಿಂದ ಮುಖ ಶಬ್ದದಿಂದ ಪ್ರತಿಮುಖವನ್ನು ಹೇಳಲಾಗಿದೆ. ಇದರಂತೆ ಅಹಂ ಭವಾನ್ ಎಂಬ ಪ್ರಯೋಗ. ಸ್ವರೂಪೈಕ್ಯದ ಬೋಧನೆಯ ಅಭಿಪ್ರಾಯದಿಂದ ಅಲ್ಲ.

(2) ವ್ಯಾಪ್ತಿಯು ಇದ್ದರೆ ಐಕ್ಯಬೋಧಕ ಶಬ್ದಪ್ರಯೋಗವಿರುತ್ತದೆ. ಉದಾ : ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ - ಭಗವದ್ಗೀತೆ

ಸರ್ವವನ್ನೂ ವ್ಯಾಪಿಸಿರುವಿ, ಆದ್ದರಿಂದ ನೀನು ಸರ್ವ. ಪರಮಾತ್ಮನು ಜೀವಾತ್ಮನನ್ನು ವ್ಯಾಪಿಸಿದ್ದಾನೆ. ಆದ್ದರಿಂದ ಅಹಂ ಭವಾನ್ ಎಂದು ಪದವಿನ್ಯಾಸ.

**ವಿಶಿಷ್ಟೈಕ್ಯಾನಭಿಮತೇರ್ಮುಖ್ಯಾರ್ಥಸ್ತು ತವಾಪಿ ನ ।**
**ಅಮುಖ್ಯಾರ್ಥಾನುಸಾರಣೇ ಕುತೋ ಲೋಕವ್ಯತಿಕ್ರಮಃ ॥ ೩೮೮ ॥**

**ಅರ್ಥ–** ತವ = ನಿನಗೆ (ನಿನ್ನ ದರ್ಶನಕ್ಕೆ) ವಿಶಿಷ್ಟೈಕ್ಯಾನಭಿಮತೇಃ = ಅಜ್ಞತ್ತ ಮತ್ತು ಬೋಧ್ಯತ್ತವಿಶಿಷ್ಟ ಜೀವನಿಗೆ ಮತ್ತು ಸುಜ್ಞತ್ವ ಮತ್ತು ಬೋಧಕತ್ವ ವಿಶಿಷ್ಟ ಪರಮಾತ್ಮನಿಗೆ ಐಕ್ಯವು ಸಮ್ಮತವಲ್ಲ; ಆದ್ದರಿಂದ, ತವ ಅಪಿ = ನಿನಗೂ ಕೂಡ, ಮುಖ್ಯಾರ್ಥಃ = ಪರಮಾತ್ಮನೇ ಜೀವಾತ್ಮ ಎಂಬ ಅರ್ಥವು, ನತು = ಸರ್ವಥಾ ಸಮ್ಮತವಲ್ಲ. (ಆದ್ದರಿಂದ) ಅಮುಖ್ಯಾರ್ಥನುಸರಣೇ=ಅಮುಖ್ಯವಾದ ಅರ್ಥವನ್ನು ಹೇಳುವ ಕ್ರಮವನ್ನು ಅನುಸರಿಸುವಾಗ, ಲೋಕವ್ಯತಿಕ್ರಮಃ = ಲೋಕರೂಢಿಯ ಉಲ್ಲಂಘನೆಯು ಕುತಃ = ಏಕೆ? (ಮಾಡಲ್ಪಡಬೇಕು?)

**ಅನುವಾದ–** ಪರಮಾತ್ಮನು ಜೀವಾತ್ಮನಿಗೆ ಅಹಂ ಭವಾನ್ ತ್ವಮೇವಾಹಂ ಎಂದು ಹೇಳಿದಾಗ ಪರಮಾತ್ಮನಲ್ಲಿ ಬೋಧಕತ್ವ ಮತ್ತು ಸುಜ್ಞತ್ವಗಳು ಇವೆ ಎಂದು, ಜೀವಾತ್ಮನಲ್ಲಿ ಬೋಧತ್ವ ಮತ್ತು ಅಜ್ಞತ್ವಗಳು ಇವೆ ಎಂದು ಪರಮಾತ್ಮ-ಜೀವಾತ್ಮರ ಐಕ್ಯವನ್ನು ಪ್ರತಿಪಾದಿಸುವ ದರ್ಶನವೂ ಒಪ್ಪುತ್ತವೆ. ವಿರುದ್ಧ ಧರ್ಮಗಳಿರುವ ವಸ್ತುಗಳು ಅಭಿನ್ನವಾಗಲು ಅವಕಾಶವಿಲ್ಲ ಎಂದೂ ಈ ದರ್ಶನವು ಒಪ್ಪುತ್ತದೆ. ಆದ್ದರಿಂದ ಪುರಂಜನೋಪಾಖ್ಯಾನದಲ್ಲಿ ಬೋಧಕ-ಬೋಧ್ಯ ಆಗಿರುವ ವಿಶಿಷ್ಟ ಪರಮಾತ್ಮ ಮತ್ತು ವಿಶಿಷ್ಟ ಜೀವಾತ್ಮರ ಐಕ್ಯವನ್ನು ಅಹಂ ಭವಾನ್.... ಈ ಶ್ಲೋಕವು ಪ್ರತಿಪಾದಿಸುತ್ತಿದೆ ಎಂದು ಅದ್ವೈತ ದರ್ಶನಕ್ಕೂ ಸಮ್ಮತಿಯಿಲ್ಲ. ಆದ್ದರಿಂದ ಇವುಗಳ ಮುಖ್ಯ ಅರ್ಥವಾದ ವಿಶಿಷ್ಟಗಳ ಐಕ್ಯವನ್ನು ಬಿಟ್ಟು ಈ ಪದಗಳ ಅಮುಖ್ಯ ಅರ್ಥವನ್ನು ಗುರುತಿಸಿ ಅವುಗಳಿಗೆ ಐಕ್ಯವನ್ನು ಹೇಳಬೇಕು ಎಂದು ಅದ್ವೈತದರ್ಶನದ ಅಭಿಪ್ರಾಯವಿದೆ.

ಅಮುಖ್ಯ ಅರ್ಥವನ್ನು ಹೇಳಬೇಕು ಎಂದು ಶ್ರೀಮಧ್ವಾಚಾರ್ಯರ ದರ್ಶನದ ಅಭಿಪ್ರಾಯವೂ ಇದೆ.

ಅದ್ವೈತದರ್ಶನವು ಪರಮಾತ್ಮ ಶಬ್ದದ ಅರ್ಥದ ಭಾಗವಾಗಿರುವ ಬೋಧಕತ್ವ-ಸುಜ್ಞತ್ವಗಳನ್ನು ಮತ್ತು ಜೀವಾತ್ಮಶಬ್ದದ ಅರ್ಥವಾಗಿರುವ ಬೋಧ್ಯತ್ವ-ಅಜ್ಞತ್ವಗಳನ್ನು ಬಿಟ್ಟು ಎರಡೂ ಶಬ್ದಗಳಿಗೂ ಕೇವಲ ಚೇತನ ಎಂದು ಅರ್ಥವನ್ನು ಗ್ರಹಿಸಿ ಚೇತನ ಒಂದು ಎಂದು ವ್ಯಾಖ್ಯಾನಿಸುತ್ತದೆ. ಈ ಕ್ರಮವು ಲೋಕರೂಢಿಯಲ್ಲ. ಮಧ್ವದರ್ಶನವು ಲೋಕರೂಢಿಯನ್ನು ಅನುಸರಿಸಿ (ಶ್ಲೋಕ ೩೮೨-೩೮೪ ಮತ್ತು ೩೮೭) ಅಮುಖ್ಯ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಬಾಧಕಾಂತರಂ ಚ ಪರಮತೇ ದರ್ಶಯನ್ನುಕ್ತಮೇವಾರ್ಥಂ ದೃಢೀಕರೋತಿ **–ವಿಶಿಷ್ಟೇತಿ ॥** ಮುಖ್ಯೋಽರ್ಥಃ ಸಾಕ್ಷಾದೈಕ್ಯಮ್ । ಲೋಕವ್ಯತಿಕ್ರಮಃ ಅಸ್ಮದುಕ್ತಲೌಕಿಕ-ದೃಷ್ಟಾಂತಾತಿಕ್ರಮಃ । ಜಹದಜಹಲ್ಲಕ್ಷಣಾಯಾ ಲೋಕೇಷು ಕ್ವಾಪ್ಯದರ್ಶನಾತ್ ಅಸ್ಮದುಕ್ತ-ನಿದರ್ಶನಾನುಸಾರೇಣೈವಾರ್ಥೋ ವಾಚ್ಯ ಇತಿ ಭಾವಃ ॥ ೩೮೮ ॥

**ಬರ್ಹಿಷ್ಮನ್ ಏತದಾಖ್ಯಾನಂ ಪಾರೋಕ್ಷ್ಯೇಣ ಪ್ರಕೀರ್ತಿತಮ್ ।**
**ಯತ್ ಪರೋಕ್ಷಪ್ರಿಯೋ ದೇವೋ ಭಗವಾನ್ ವಿಶ್ವಭಾವನಃ ।**
**ಇತಿ ಪೌರಂಜನೋಪಾಖ್ಯಾನೋಪಸಂಹಾರವಾಗಿಯಮ್ ॥ ೩೮೯ ॥**

**ಅರ್ಥ–** ಬರ್ಹಿಷ್ಮನ್ = ಪ್ರಾಚೀನಬರ್ಹಿಯೇ, ಏತದಾಖ್ಯಾನಂ = ಈ ಪುರಂಜನೋಪಾಖ್ಯಾನವು, ಪಾರೋಕ್ಷ್ಯೇಣ = ಸ್ಪಷ್ಟವಾಗಿ ಗೋಚರವಾಗದಂತೆ, ಪ್ರಕೀರ್ತಿತಮ್ = ಹೇಳಲ್ಪಟ್ಟಿದೆ. ಯತ್ = ಏಕೆಂದರೆ, ವಿಶ್ವಭಾವನಃ = ಜಗಜ್ಜನಕನಾದ, ಭಗವಾನ್ = ಷಡ್ಗುಣಸಂಪನ್ನನಾದ ದೇವಃ = ಶ್ರೀಹರಿಯು ಪರೋಕ್ಷಪ್ರಿಯಃ = ನಿಗೂಢ ಪ್ರಿಯಃ= ಅರ್ಥವು ನೇರವಾಗಿ ಗೋಚರವಾಗದ ಉಕ್ತಿಗಳನ್ನು ಇಷ್ಟಪಡುವವನು. ಇತಿ ಇಯಂ = ಇದು, ಪೌರಂಜನೋಪಾಖ್ಯಾನ = ಪುರಂಜನನ ಕಥೆಯ, ಉಪಸಂಹಾರವಾಕ್ = ಮುಕ್ತಾಯದ ಮಾತು.

**ಅನುವಾದ–** ಬರ್ಹಿಷ್ಮನ್.... ವಿಶ್ವಭಾವನಃ ॥ ಈ ಪದ್ಯವು (ಭಾಗವತ ೪.೨೮.೬೫) ಪುರಂಜನೋಪಾಖ್ಯಾನದ ಕೊನೆಯ ಮಾತು. ಪ್ರಾಚೀನಬರ್ಹಿ ರಾಜನಿಗೆ ನಾರದರು ಇದನ್ನು ಹೇಳಿದರು. ಆದ್ದರಿಂದ ಬರ್ಹಿಷ್ಮನ್ ಎಂದು ರಾಜನಿಗೆ ನಾರದರ ಸಂಬೋಧನೆ.

**ಭಾವವಿಲಾಸಿನೀ–** ಕಿಂಚೋಪಸಂಹಾರವಾಕ್ಯಾನುಸಾರಿತ್ವಾಚ್ಚಾಸ್ಮದುಕ್ತ ಏವ ವಾಕ್ಯಾರ್ಥೋ ನ ತ್ವದುಕ್ತ ಇತಿ ವಕ್ತುಮುಪಸಂಹಾರವಾಕ್ಯಮೇವ ಪಠತಿ– **ಬರ್ಹಿಷ್ಮನ್ನಿತಿ ॥** ಬರ್ಹಿಷ್ಮನ್ನಿತಿ ಶ್ರೋತುಃ ಸಂಬುದ್ಧಿಃ । ಪೌರಂಜನೋಪಾಖ್ಯಾನಮಿತಿ ಪುರಂಜನಕಥಾರೂಪಸ್ಯಾಸ್ಯಾಧ್ಯಾಯಸ್ಯ ಸಂಜ್ಞಾ ॥ ೩೮೯ ॥

**ವಿವರಣೆ–** ದೇವತೆಗಳು ನಿಗೂಢ ಪ್ರಿಯರು ಎಂದು ಶ್ರುತಿಯು ಹೇಳುತ್ತದೆ. ಪರೋಕ್ಷಪ್ರಿಯಾ ಇವ ಹಿ ದೇವಾಃ

**ಅತಃ ಪರೋಕ್ಷತಸ್ತತ್ವಮತ್ರ ಸರ್ವತ್ರ ಕೀರ್ತಿತಮ್ ।**
**ಇತೋಽಪ್ಯಾಪಾತದೃಶ್ಯೋಽರ್ಥೋ ನಾತ್ರ ಮಾನ್ಯೋ ಮನೀಷಿಣಾ ॥೩೯೦॥**

**ಅರ್ಥ–** ಅತಃ = ಆದ್ದರಿಂದ, ಅತ್ರ ಸರ್ವತ್ರ = ಈ ಪುರಂಜನೋಪಾಖ್ಯಾನದ ಎಲ್ಲ ಕಡೆ, ತತ್ವಂ = ತತ್ವವು, ಪರೋಕ್ಷತಃ = ಗುಪ್ತವಾಗಿ ನೇರವಾಗಿ ಗೋಚರವಾಗದಂತೆ, ಕೀರ್ತಿತಂ =

ಹೇಳಲ್ಪಟ್ಟಿದೆ. ಇತಃ ಅಪಿ = ಈ ಕಾರಣದಿಂದಲೂ, ಮನೀಷಿಣಾ = ಬುದ್ಧಿವಂತನಿಂದ, ಅತ್ರ = ಇಲ್ಲಿ (ಪುರಂಜನೋಪಾಖ್ಯಾನದಲ್ಲಿ) ಆಪಾತದೃಶ್ಯಃ = ಮೇಲ್ನೋಟಕ್ಕೆ ಕಾಣುವ, ಅರ್ಥಃ = ಅರ್ಥವು, ನ ಮಾನ್ಯಃ = ಸ್ವೀಕಾರಾರ್ಹವಲ್ಲ.

**ಅನುವಾದ–** ಆದ್ದರಿಂದ ಈ ಸಮಗ್ರ ಪ್ರಕರಣದಲ್ಲಿ ತತ್ತ್ವವು ಒಗಟಿನಂತೆ ಹೇಳಲ್ಪಟ್ಟಿದೆ. ಆದ್ದರಿಂದಲೂ ವಿವೇಕಿಯಾದವನು ಇಲ್ಲಿ ಮೇಲೆ ತೋರುವ ಅರ್ಥವನ್ನು ಸ್ವೀಕರಿಸಬಾರದು.

**ಭಾವವಿಲಾಸಿನೀ–** ಅತಃ ಉಪಸಂಹಾರಾನುಸಾರಿತ್ವಾತ್ ಪೂರ್ವಭಾಗಸ್ಯ । ಸರ್ವತ್ರ ಪೂರ್ವ-ವಾಕ್ಯೇಷ್ವಪಿ । ಪಾರೋಕ್ಷ್ಯಂ ತತ್ವಸ್ಯ ಸಾಕ್ಷಾದದೃಶ್ಯತ್ವೇನ ನಿಗೂಹಿತತ್ವಮ್ । ಇತಃ ಪಾರೋಕ್ಷ್ಯೇಣೈವ ತತ್ವನಿರೂಪಕತ್ವಾತ್ ॥ ೩೬೦ ॥

> ಅಹಂ ಭವಾನ್ ನ ಚೇತ್ಯೇಕಂ ವಾಕ್ಯಂ ವಾತ್ರ ವಿಭಿದ್ಯತೇ ।
> ತೇನ ಹಂಸಾಂತರಾಭೇದಂ ಹಂಸರಾಟ್ ಸ್ವಸ್ಯ ನಿಹ್ನುತೇ ॥ ೩೬೧ ॥

**ಅರ್ಥ–**ವಾ = ಅಥವಾ, ಅತ್ರ = ಈ ಶ್ಲೋಕದಲ್ಲಿ ಅಹಂ ಭವಾನ್ ನ ಚ – (ನಾನು ನೀನು ಅಲ್ಲ) ಇತಿ = ಎಂದು ಏಕಂ ವಾಕ್ಯಂ = ಒಂದು ವಾಕ್ಯವು, ವಿಭಿದ್ಯತೇ = ವಿಭಾಗವಾಗುತ್ತದೆ. ತೇನ = ಈ ವಿಭಾಗದಿಂದ, ಹಂಸರಾಟ್ = ಪರಮಾತ್ಮಹಂಸವು, ಸ್ವಸ್ಯ = ತನಗೆ ಹಂಸಾಂತರಾಭೇದಂ = ಇನ್ನೊಂದು ಹಂಸದಿಂದ (ಜೀವಹಂಸದಿಂದ) ಅಭೇದವನ್ನು ನಿಹ್ನುತೇ = ನಿರಾಕರಿಸುತ್ತದೆ.

**ಅನುವಾದ–** ಅಹಂ ಭವಾನ್ನಚಾನ್ಯಸ್ತ್ವಂ ..... ಈ ಶ್ಲೋಕದಲ್ಲಿರುವ ಪದಗಳನ್ನು ವಾಕ್ಯಗಳಾಗಿ ಜೋಡಿಸಿಕೊಳ್ಳುವಾಗ ಅಹಂ ಭವಾನ್ ನ ಚ ಇಷ್ಟು ಪದಗಳನ್ನು ಒಂದು ವಾಕ್ಯವಾಗಿ ಪರಿಗಣಿಸಬಹುದು. ಹೀಗೆ ವಿಭಾಗವಾದಾಗ ಪರಮಾತ್ಮ ಹಂಸವು ತನಗೂ ಜೀವಹಂಸಕ್ಕೂ ಅಭೇದವಿಲ್ಲ ಎಂದು ಹೇಳುತ್ತದೆ ಎಂದು ಅರ್ಥವು ಲಭಿಸುತ್ತದೆ. ಆದ್ದರಿಂದ ಈ ಪದ್ಯವು ಜೀವಪರಮಾತ್ಮರ ಅಭೇದಬೋಧಕ ಎಂದು ನಿರ್ಣಯವಾಗುವುದಿಲ್ಲ.

**ಭಾವವಿಲಾಸಿನೀ–** ಅಧುನಾ ಪರಾಯುಧೇನೈವ ಪರಂ ಖಂಡಯಿತುಂ ಪ್ರಕಾರಾಂತರೇಣ ಶ್ಲೋಕಂ ಯೋಜಯತಿ–**ಅಹಂ ಭವಾನ್ನ ಚೇತಿ** ॥ ಅತ್ರ ಶ್ಲೋಕೇ । ತೇನ ವಾಕ್ಯೇನ । ಹಂಸಾಂತರಭೇದಂ ಜೀವಾಖ್ಯಹಂಸಾಭೇದಂ ನಿಹ್ನುತೇ ನಿರಾಕರೋತಿ । ಘಟಃ ಪಟೋ ನೇತ್ಯುಕ್ತೇ ಘಟಪಟಾ-ಭೇದನಿವೃತ್ತಿರೂಪಾನ್ಯೋನ್ಯಾಭಾವಸಿದ್ಧಿವತ್ ಅಹಂ ಭವಾನ್ನೈವೇತ್ಯುಕ್ತೇಽಪಿ ಅಹಂಪದಾರ್ಥ-ರೂಪೇ ಪರಮಾತ್ಮನಿ ಭವಚ್ಛಬ್ದೋದಿತಜೀವಾಖ್ಯಹಂಸಾಭೇದನಿವೃತ್ತಿರೂಪಾನ್ಯೋನ್ಯಾ-ಭಾವಸಿದ್ಧಿರಿತಿ ಭಾವಃ ॥ ೩೬೧ ॥

ಅನ್ಯಸ್ತ್ವಮಿತ್ಯನ್ಯದೇವ ವಾಕ್ಯಂ ತೇನಾತ್ಮಭಿನ್ನತಾಮ್ ।
ತಸ್ಯ ಬ್ರವೀತಿ ಹಂಸೋಽಸೌ ತ್ವಮೇವಾಹಂ ವಿಚಕ್ಷ್ವ ಭೋಃ ॥ ೩೯೨ ॥

ಇತಿ ವಾಕ್ಯಾಂತರೇಣಾಸೌ ತ್ವಮೇವ ತ್ವಯ್ಯಹಂಮತಿಮ್ ।
ಕುರು ನಾನ್ಯೇಷ್ವಿತಿ ಬ್ರೂತೇ ಸ್ಪಷ್ಟಂ ತರ್ಹ್ಯಾವಯೋರ್ಭಿದಾ ॥ ೩೯೩ ॥

ಕುತೋ ನ ದೃಶ್ಯತೇ ಸರ್ವೈರಿತಿ ಶಂಕಾಂತರೇ ಸತಿ ।
ತಸ್ಮಾದುತ್ತರವಾಕ್ಯೇನ ತಾಂ ಶಂಕಾಂ ಪ್ರತಿಷೇಧತಿ ॥ ೩೯೪ ॥

**ಅರ್ಥ–** ಅನ್ಯಃ ತ್ವಮ್ ಇತಿ ಅನ್ಯದ್ ಏವ ವಾಕ್ಯಮ್=ಅನ್ಯಃ ತ್ವಮ್ (ನೀನು ಬೇರೆ) ಎಂದು ಬೇರೆಯೇ ವಾಕ್ಯ. ತೇನ = ಆ ವಾಕ್ಯದಿಂದ, ಅಸೌ ಹಂಸಃ = ಈ ಪರಮಾತ್ಮ ಹಂಸವು, ತಸ್ಯ = ಆ ಜೀವನಿಗೆ, ಆತ್ಮಭಿನ್ನತಾಮ್ = ತನ್ನಿಂದ ಭೇದವನ್ನು, ಬ್ರವೀತಿ = ಹೇಳುತ್ತದೆ. ಭೋಃ ತ್ವಮ್ ಏವ ಅಹಮ್ ಇತಿ ವಿಚಕ್ಷ್ವ ಇತಿ = ಎಂಬ, ವಾಕ್ಯಾಂತರೇಣ = ಬೇರೆ ವಾಕ್ಯದಿಂದ ಅಸೌ = ಈ ಪರಮಾತ್ಮ ಹಂಸವು, ತ್ವಮ್ ಏವ = ನೀನೇ ತ್ವಯಿ = ನಿನ್ನಲ್ಲಿ, ಅಹಂಮತಿಂ ಕುರು = ನಾನು ಎಂಬ ಅಭಿಪ್ರಾಯವನ್ನು ಮಾಡು, ಅನ್ಯೇಷು = ಬೇರೆಯವರಲ್ಲಿ ಅಲ್ಲ ಇತಿ ಎಂದು, ಸ್ಪಷ್ಟಂ ಬ್ರೂತೇ = ಸ್ಪಷ್ಟವಾಗಿ ಹೇಳುತ್ತದೆ. ತರ್ಹಿ = ಹಾಗಾದರೆ, ಆವಯೋಃ = ನಮ್ಮಿಬ್ಬರ, ಭಿದಾ = ಭೇದವು, ಸರ್ವೈಃ = ಎಲ್ಲರಿಂದ, ಕುತಃ = ಏಕೆ ನ ದೃಶ್ಯತೇ = ನೋಡಲ್ಪಡುವುದಿಲ್ಲ ಇತಿ = ಎಂದು ಶಂಕಾಂತರೇ ಸತಿ = ಇನ್ನೊಂದು ಪ್ರಶ್ನೆಯು ಉಂಟಾದಾಗ, ತಸ್ಮಾದ್ ಉತ್ತರವಾಕ್ಯೇನ = ಅದರ ಮುಂದಿನ ವಾಕ್ಯದಿಂದ, ತಾಂ ಶಂಕಾಂ = ಆ ಪ್ರಶ್ನೆಯನ್ನು ಪ್ರತಿಷೇಧತಿ = ನಿರಾಕರಿಸುತ್ತದೆ (ಪರಿಹರಿಸುತ್ತಾರೆ)

**ಅನುವಾದ–** ಅಹಂ ಭವಾನ್ ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವಭೋಃ ಇದು ಭಾಗವತ ೪.೨೮.೬೨ ರ ಪೂರ್ವಾರ್ಧ. ಇದರಲ್ಲಿ ಮೂರು ವಾಕ್ಯಗಳು ಇವೆ. (೧) ಅಹಂ ಭವಾನ್ ನ ಚ (೨) ಅನ್ಯಃ ತ್ವಮ್ (೩) ತ್ವಮೇವಾಹಂ ವಿಚಕ್ಷ್ವಭೋಃ ಮೊದಲನೆಯ ವಾಕ್ಯದ ಭಾವವನ್ನು ೩೯೧ನೇ ಪದ್ಯದಲ್ಲಿ ವಿವರಿಸಲಾಗಿದೆ. ಎರಡನೆಯ ವಾಕ್ಯದಿಂದ ಬೋಧಕ ಪರಮಾತ್ಮಹಂಸವು ಜೀವಾತ್ಮನು ತನ್ನಿಂದ ಭಿನ್ನ ಎಂದು ಬೋಧಿಸುತ್ತಿದೆ. ಮೂರನೆಯ ವಾಕ್ಯದಿಂದ ನೀನು ನಿನ್ನನ್ನೇ ನಾನು ಎಂದು ಕಾಣು, ಬೇರೆಯವರಲ್ಲಿ ನಾನು ಎಂದು ಭಾವವನ್ನು ಹೊಂದಬೇಡ ಎಂದು ಬೋಧಿಸುತ್ತಿದೆ. ಈ ಮೂರು ವಾಕ್ಯಗಳೂ ಜೀವಾತ್ಮ-ಪರಮಾತ್ಮರ ಭೇದವನ್ನು ಹೇಳುವುದು ಸ್ಪಷ್ಟ

ಹೀಗೆ ಭೇದವಿದ್ದರೆ ನಮ್ಮಿಬ್ಬರ ಭೇದವು ಎಲ್ಲರಿಗೂ ಏಕೆ ಕಾಣಿಸುವುದಿಲ್ಲ ಎಂದು ಬೇರೊಂದು ಪ್ರಶ್ನೆಯು ಉಂಟಾಗುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಮುಂದಿನ ನ

**ನೌ ಪಶ್ಯಂತಿ ಕವಯಃ ಛಿದ್ರಂ ಜಾತು ಮನಾಗಪಿ ಎಂಬ ವಾಕ್ಯದಿಂದ ಬೋಧಕಹಂಸವು ಹೇಳುತ್ತದೆ.**

**ಭಾವವಿಲಾಸಿನೀ**– ಅನ್ಯದೇವ ವಾಕ್ಯಂ ವಾಕ್ಯಾಂತರಮಿತ್ಯರ್ಥಃ । ತೇನ ತ್ವಮನ್ಯ ಇತಿ ವಾಕ್ಯೇನ । ಆತ್ಮನಃ ಸ್ವಸ್ಮಾದ್ಭಿನ್ನತಾಮ್ । ತಸ್ಯ ಜೀವಸ್ಯ । ಘಟೋಽನ್ಯ ಇತ್ಯುಕ್ತೇ ಘಟೇ ಪಟಪ್ರತಿಯೋಗಿಕಭೇದಸ್ಯ ಸಿದ್ಧಿವತ್ತ್ವಮನ್ಯ ಇತ್ಯುಕ್ತೇಽಪಿ ತ್ವಂಪದವಾಚ್ಯೇ ಜೀವೇಽಹಮಿತಿ ಪ್ರಾಕ್ ಪ್ರಸ್ತುತಸ್ವಪ್ರತಿಯೋಗಿಕಭೇದಸ್ಯೈವ ಸಿದ್ಧಿಃ । ಪೂರ್ವವಾಕ್ಯೇ ಜೀವಪ್ರತಿಯೋಗಿಕಸ್ವಧರ್ಮಿಕಭೇದಂ ಸಾಧಯಿತ್ವೋತ್ತರವಾಕ್ಯೇ ಸ್ವಪ್ರತಿಯೋಗಿಕಜೀವಧರ್ಮಿಕಭೇದಂ ಸಾಧಯತೀತಿ ಭಾವಃ। ವಾಕ್ಯದ್ವಯಸ್ಯಾರ್ಥಮುಕ್ತ್ವಾ ತೃತೀಯವಾಕ್ಯಸ್ಯಾರ್ಥಮಾಹ–**ತ್ವಮೇವಾಹಮಿತಿ** ॥ ಅಸೌ ಪರಮಾತ್ಮಾಖ್ಯಹಂಸಃ । ಭೋ ಜೀವ ! ತ್ವಮೇವಾಹಮಿತಿ ವಿಚಕ್ಷ್ವ । ತ್ವಯ್ಯೇವಾಹಂಮತಿಂ ತ್ವಂ ಕುರು । ಅನ್ಯೈರ್ಜೀವಾಂತರೈಃ ಪರಮಾತ್ಮನಾ ಚಾಹಂಮತಿಂ ನ ಕುರ್ವಿತ್ಯೇವ ಶಬ್ದಾರ್ಥಕಥನಮ್ । ವಿಚಕ್ಷ್ವೇತಿ ಲೋಟಾ ಸ್ವಸ್ಮಿನ್ನೇವ ಸ್ವಸ್ಯಾಹಂಮತಿಂ ವಿಧತ್ತೇ । ಅನ್ಯೇಷು ಸ್ವಸ್ಯಾಹಂಮತಿಂ ಪ್ರತಿಷೇಧತಿ ಚ । ಅತೋ ವಿಹಿತೈವ ಮತಿಃ ಕರ್ತವ್ಯಾ । ನಿಷಿದ್ಧಾ ಪಾಪಸಾಧನತ್ವಾತ್ಕದಾಪಿ ನ ಕರ್ತವ್ಯೇತಿ ಭಾವಃ । ಉತ್ತರಾರ್ಧಸ್ಯಾರ್ಥಮಾಹ – **ಸ್ಪಷ್ಟಮಿತಿ** ॥ ಆವಯೋಸ್ತವ ಚ ಮಮ ಚ ಸ್ಪಷ್ಟಂ ನ ದೃಶ್ಯತ ಇತಿ ಸಂಬಂಧಃ । ತಸ್ಮಾತ್ ಪೂರ್ವಾರ್ಧಾತ್ ॥ ೩೯೨- ೩೯೪ ॥

**ವಿವರಣೆ**– 'ಅನ್ಯದೇವ ವಾಕ್ಯಂ' ಎಂದರೆ 'ವಾಕ್ಯಾಂತರ' ಎಂದು ಅರ್ಥ. ಆದ್ದರಿಂದ 'ನೀನು ಭಿನ್ನನಾದವನು' ಎಂಬ ವಾಕ್ಯದಿಂದ ಜೀವನಿಗೆ ತನ್ನಿಂದ ಭೇದವನ್ನು ಹೇಳುತ್ತಾನೆ. ಘಟವು ಭಿನ್ನವಾಗಿದೆ ಎಂದು ಹೇಳಿದರೆ ಪಟಪ್ರತಿಯೋಗಿಕಭೇದವೇ ಸಿದ್ಧವಾಗುವಂತೆ, ತ್ವಂಪದ ವಾಚ್ಯನಾದ ಜೀವನಲ್ಲಿ ನೀನು ಭಿನ್ನ ಎಂದು ಹೇಳಿದರೆ, ಮೊದಲು ಅಹಂ ಪದದಿಂದ ಪ್ರಸ್ತುತವಾದ ವಸ್ತುಪ್ರತಿಯೋಗಿಕವಾದ ಪದವೇ ಸಿದ್ಧವಾಗುತ್ತದೆ ಎಂದರೆ ಪೂರ್ವವಾಕ್ಯದಲ್ಲಿ ಜೀವಪ್ರತಿಯೋಗಿಕ ಸ್ವಧರ್ಮಿಕಭೇದವನ್ನು ಸಾಧಿಸಿ, ಉತ್ತರವಾಕ್ಯದಲ್ಲಿ ಹಂಸರೂಪಿ ಪರಮಾತ್ಮನು ಸ್ವಪ್ರತಿಯೋಗಿಕಜೀವಧರ್ಮಿಕಭೇದವನ್ನು ಸಾಧಿಸುತ್ತಾನೆ ಎಂದು ಅಭಿಪ್ರಾಯ. 'ತ್ವಮೇವಾಹಮ್ ವಿಚಕ್ಷ್ವ ಭೋ' ಎಂಬ ಮೂರನೆಯ ವಾಕ್ಯಕ್ಕೆ ಭೋ ಜೀವನೇ ! ನೀನು ನಿನ್ನಲ್ಲಿಯೇ 'ಅಹಂ' ಎಂಬ ಬುದ್ಧಿಯನ್ನು ಹೊಂದು. ಬೇರೆ ಜೀವರಲ್ಲಾಗಲೀ ಅಥವಾ ಪರಮಾತ್ಮನಲ್ಲಾಗಲೀ 'ಅಹಂ' ಎಂಬ ಬುದ್ಧಿಯನ್ನು ಮಾಡಬೇಡ ಎಂದು ಅರ್ಥ. 'ವಿಚಕ್ಷ್ವ' ಎಂಬಲ್ಲಿರುವ ಲೋಟ್ ಪ್ರತ್ಯಯವು ನಿನ್ನಲ್ಲೇ ನೀನು 'ಅಹಂ' ಎಂಬ ಬುದ್ಧಿಯನ್ನು ಮಾಡು ಎಂದು ವಿಧಾನ ಮಾಡುತ್ತದೆ. ಮತ್ತು ಇನ್ನೊಬ್ಬರಲ್ಲಿ 'ಅಹಂ' ಎಂಬ ಬುದ್ಧಿಯನ್ನು ಮಾಡಬೇಡ ಎಂದೂ ಪ್ರತಿಷೇಧ ಮಾಡುತ್ತದೆ. ಆದ್ದರಿಂದ ವಿಹಿತವಾದ ಬುದ್ಧಿಯನ್ನೇ ಹೊಂದಬೇಕು. ನಿಷಿದ್ಧವಾದ ಬುದ್ಧಿಯು ಪಾಪಸಾಧನವಾದುದರಿಂದ ಎಂದೂ ಅಂತಹ ಬುದ್ಧಿಯನ್ನು ಹೊಂದಬಾರದು ಎಂದು ಅಭಿಪ್ರಾಯ.

ಕ್ಷೀರಾಂತರ್ನೀರಮಿವ ಯದಾವಾಂ ಮಿಶ್ರೌ ಸದಾ ಮಿಥಃ ।
ನ ನೌ ಪಶ್ಯಂತಿ ತಚ್ಛಿದ್ರಂ ಮಧ್ಯೇ ತೇನಾವಯೋರ್ಭಿದಾ ॥ ೩೯೫ ॥

ನ ಸ್ಪಷ್ಟಂ ದೃಶ್ಯತೇ ಸಾ ವೈ ದೃಶ್ಯತೇ ಚ ವಿವೇಕಿಭಿಃ ।
ಇತಿ ವಾ ಗೂಢತತ್ತ್ವೋಕ್ತೇರ್ಹೃದಯಂ ಬುಧ್ಯತಾಂ ಬುಧೈಃ ॥ ೩೯೬ ॥

**ಅರ್ಥ**–(ಯದ್ = ಯಾವ ಕಾರಣದಿಂದ) ಆವಾಂ = ನಾವಿಬ್ಬರು ಕ್ಷೀರಾಂತಃ = ಹಾಲಿನ ಒಳಗೆ, ನೀರಮ್ ಇವ = ನೀರಿನಂತೆ, ಮಿಥಃ = ಪರಸ್ಪರ, ಸದಾ = ಯಾವಾಗಲೂ ಮಿಶ್ರೌ = ಮಿಶ್ರವಾಗಿದ್ದೇವೆಯೋ. ತತ್ = ಆದ್ದರಿಂದ ನೌ = ನಮ್ಮಿಬ್ಬರ, ಮಧ್ಯೇ= ಮಧ್ಯದಲ್ಲಿ ಛಿದ್ರಂ = ಅವಕಾಶವನ್ನು ನ ಪಶ್ಯಂತಿ = ಕಾಣುವುದಿಲ್ಲ, ತೇನ = ಆದ್ದರಿಂದ ಆವಯೋಃ = ನಮ್ಮಿಬ್ಬರ ಭಿದಾ = ಭೇದವು, ಸ್ಪಷ್ಟಂ = ಸ್ಪಷ್ಟವಾಗಿ, ನ ದೃಶ್ಯತೇ = ಕಾಣಲ್ಪಡುವುದಿಲ್ಲ. ಸಾ ಚ = ಆ ಭೇದವಾದರೂ, ವಿವೇಕಿಭಿಃ = ವಿವೇಚನೆಯ ಶಕ್ತಿವುಳ್ಳವರಿಂದ, ದೃಶ್ಯತೇ ವೈ = ತಪ್ಪದೇ ನೋಡಲ್ಪಡುತ್ತದೆ. ಇತಿ ವಾ = ಹೀಗಾದರೂ, ಗೂಢತತ್ತ್ವೋಕ್ತೇಃ = ಗುಪ್ತವಾಗಿ ತತ್ತ್ವದ ಉಕ್ತಿಯ, ಹೃದಯಂ = ಭಾವವು, ಬುಧೈಃ = ಪ್ರಾಜ್ಞರಿಂದ, ಬುಧ್ಯತಾಮ್ = ತಿಳಿಯಲ್ಪಡಲಿ.

**ಅನುವಾದ**– ಅಹಂ ಭವಾನ್ ನ ಚಾನ್ಯಸ್ತ್ವಂ........ ಈ ಭಾಗವತ ಶ್ಲೋಕವು ತತ್ತ್ವವನ್ನು ಗೂಢವಾಗಿ ಹೇಳಿದೆ.ಇದು ತತ್ತ್ವ: ಹಾಲಿನಲ್ಲಿ ಸೇರಿದ ನೀರನ್ನು ಹಾಲಿನಿಂದ ಬೇರೆಯಾಗಿ ನೋಡಲಾಗುವುದಿಲ್ಲ. ಪರಮಾತ್ಮನು ಸರ್ವವ್ಯಾಪಿ. ಜೀವರನ್ನೂ ವ್ಯಾಪಿಸಿದ್ದಾನೆ. ಆದ್ದರಿಂದ ಪರಮಾತ್ಮ-ಜೀವಾತ್ಮರು ಮಿಶ್ರವಾದ ಹಾಲು-ನೀರುಗಳಂತೆ. ಪರಸ್ಪರ ದೂರವಿರುವ ಘಟ-ಪಟಗಳ ಭೇದವು ಗೋಚರವಾಗುವಂತೆ ಪರಮಾತ್ಮ-ಜೀವಾತ್ಮರ ಭೇದವು ಗೋಚರವಾಗುವುದಿಲ್ಲ. ಪರಸ್ಪರ ದೂರದಲ್ಲಿ ಇಲ್ಲದಿರುವುದರಿಂದ. ಪರಮಾತ್ಮ-ಜೀವಾತ್ಮರ ಸ್ವರೂಪವನ್ನು ವಿವೇಚಿಸುವ ಸಾಮರ್ಥ್ಯವುಳ್ಳವರಿಗೆ ಭೇದವು ಗೋಚರಿಸುತ್ತದೆ. ವಿವೇಚನೆ ಹೀಗೆ: ನಾನು ಸರ್ವಜ್ಞ ಅಲ್ಲ, ಸರ್ವೇಶ್ವರ ಅಲ್ಲ, ನಿರ್ದುಃಖ ಅಲ್ಲ. ಇದು ನನ್ನ ಅಬಾಧಿತ ಅನುಭವ. ಪರಮಾತ್ಮನು ಸರ್ವಜ್ಞ, ಸರ್ವೇಶ್ವರ, ನಿರ್ದುಃಖ. ಹೀಗೆ ನಾನು ಶ್ರುತಿಯಿಂದ ತಿಳಿದಿದ್ದೇನೆ ಈ ವಿವೇಚನೆಯಿಂದ ಜೀವ-ಪರಮಾತ್ಮರ ಭೇದವು ಗೋಚರಿಸುತ್ತದೆ.

**ಭಾವವಿಲಾಸಿನೀ**– ಯದ್ಯಸ್ಮಾದಾವಾಂ ಜೀವಪರಮೌ ಮಿಥಸ್ಸದಾ ಮಿಶ್ರಾವಿತಿ ಸಂಬಂಧಃ । ಬಿಂಬಭೂತಸ್ಯ ಸ್ವಸ್ಯ ಪ್ರತಿಬಿಂಬಭೂತೇ ಜೀವೇ ನೀರೇ ಕ್ಷೀರವತ್ಸದಾಮಿಶ್ರಣಾದಿತಿ ಭಾವಃ । ತತ್ತಸ್ಮಾತ್ । ನೌ ಆವಯೋರ್ಮಧ್ಯೇ ಛಿದ್ರಮವಕಾಶಂ ಜಾತು ಕದಾಚಿತ್ । ಮನಾಗಲ್ಪಮ್ । ತೇನಾತಿಮಿಶ್ರಿತತ್ವೇನ ಕ್ಷೀರನೀರವದತಿಮಿಶ್ರಿತತ್ವಾತ್ ವಿದ್ಯಮಾನೋಽಪಿ ಬಿಂಬಪ್ರತಿಬಿಂಬ-ಯೋರಿವಾವಯೋರ್ಭೇದಃ ದೂರಸ್ಥಯೋರ್ಘಟಪಟಯೋರ್ಭೇದ ಇವ ನ ಸ್ಪಷ್ಟಂ

ವಿವಿಕ್ತತಯಾ ದೃಶ್ಯತೇ । ನಾಹಂ ಸರ್ವಜ್ಞೋ ನಾಹಂ ಸರ್ವೇಶ್ವರೋ ನಾಹಂ ನಿರ್ದುಃಖ ಇತ್ಯಾದ್ಯಾಕಾರೇಣ ದೃಶ್ಯತೇ ಚೇತ್ಯಪಿಪದೇನ ಸೂಚಯತಿ । ರೂಪಾಂತರೇಭ್ಯೋ ಮೂಲರೂಪಾಚ್ಚ ಭೇದಸ್ತತ್ಕೃತದುಷ್ಟಸಂಹಾರಜಗತ್ ಸೃಷ್ಟ್ಯಾದೇಶ್ಚ ಜೀವೇಷು ಸರ್ವಥಾಽಸಂಭವಾತ್ ಸರ್ವದಾ ಸರ್ವೈರಪ್ಯತಿಸ್ಪಷ್ಟಂ ದೃಶ್ಯತೇ । ಅತೋ ನ ಕ್ವಾಪ್ಯಭೇದ-ವಾರ್ತೇತಿ ಭಾವಃ । ಗೂಢತತ್ತ್ವೋಕ್ತೇರ್ಹೃದಯಮಿತಿ ವಾ ಬುಧ್ಯತಾಮಿತಿ ಸಂಬಂಧಃ । ಗೂಢ-ತತ್ತ್ವೋಕ್ತಿರಿತಿ ಹೇತುಗರ್ಭಂ ವಿಶೇಷಣಮ್ । ತತ್ತ್ವಪರೋಕ್ಷೀಕರಣಾಯ ಪ್ರವೃತ್ತವಾಕ್ಯತ್ವಾತ್ ಆಪಾತತೋಽನ್ಯಾರ್ಥಸ್ಯಾಪ್ಯವಕಾಶಂ ದದಾತಿ । ವಿವಿಚ್ಯ ವಿಚಾರೇ ತೂಕ್ತರೀತ್ಯಾ ತತ್ತ್ವಮೇವ ಬೋಧಯತೀತಿ ಭಾವಃ ॥ ೩೯೫-೩೯೬ ॥

**ವಿವರಣೆ–** (1) ತತ್ತ್ವವನ್ನು ಗೂಢವಾಗಿಸುವುದೇ ಅಹಂ ಭವಾನ್...... ಈ ಶ್ಲೋಕದ ಉದ್ದೇಶ. ಆದ್ದರಿಂದ ಇಲ್ಲಿಯ ವಾಕ್ಯಗಳು ತತ್ತ್ವವಲ್ಲದ ಅರ್ಥಕ್ಕೂ ಅವಕಾಶವನ್ನು ಕೊಡುತ್ತವೆ. ವಿವೇಚಿಸಿದರೆ ತತ್ತ್ವವೇ ತಿಳಿಯುತ್ತದೆ.

(2) ವಿಮೂಢಾ ನಾನುಪಶ್ಯಂತಿ, ಪಶ್ಯಂತಿ ಜ್ಞಾನಚಕ್ಷುಷಃ ಎಂದು ಭಗವದ್ಗೀತೆಯು ಹೇಳಿದೆ. ವಿವೇಚನೆಗೆ ಬೇಕಾದ ಜ್ಞಾನವುಳ್ಳವರು ಈ ಶ್ಲೋಕದಲ್ಲಿ ತತ್ತ್ವವನ್ನು ಕಾಣುತ್ತಾರೆ.

**ವ್ಯಾಪ್ಯವ್ಯಾಪಕಭಾವಂ ಚ ವ್ಯತಿರಿಕ್ತತ್ವಮಾತ್ಮನಃ ।**
**ಅನ್ಯೋನ್ಯಾಶ್ರಿತತಾಂ ನೋ ಚೇದ್ ಬೋಧ್ಯಬೋಧಕತಾಂ ತಥಾ ॥೩೯೭॥**

**ವ್ಯಭಿಚಾರೇಣ ನಷ್ಟಾಂ ಚ ಸ್ಮೃತಿಮವ್ಯಭಿಚಾರತಃ ।**
**ಅವಿನಾಭಾವಪರ್ಯಾಯಾತ್ ಕಥಂ ಲಬ್ಧಾಂ ಚ ಸೋಽವದತ್॥ ೩೯೮ ॥**

**ಅರ್ಥ–** ನೋ ಚೇತ್ = (ನಾವು ಹೇಳಿದ ಅರ್ಥವು) ಅಲ್ಲದಿದ್ದರೆ, ಸಃ = ಆ ನಾರದರು, ಆತ್ಮನಃ = ಜೀವಾತ್ಮ ಪರಮಾತ್ಮರಿಗೆ, ವ್ಯಾಪ್ಯವ್ಯಾಪಕ ಭಾವಂ = ವ್ಯಾಪ್ಯ ವ್ಯಾಪಕಭಾವವನ್ನು ಚ = ಮತ್ತು, ವ್ಯತಿರಿಕ್ತತ್ವಂ = ಭೇದವನ್ನು (೪.೨೮.೪೦) ಅನೋನ್ಯಾಶ್ರಿತತಾಂ = ಪರಸ್ಪರ ಆಶ್ರಯವನ್ನು, ತಥಾ = ಹಾಗೆಯೇ, ಬೋಧ್ಯಬೋಧಕತಾಂ = ಬೋಧ್ಯ-ಬೋಧಕ ಭಾವವನ್ನೂ (೪.೨೮.೫೨-೬೩) ಚ = ಮತ್ತು, ವ್ಯಭಿಚಾರೇಣ = ಪರಮಾತ್ಮನನ್ನು ಬಿಟ್ಟು ದೂರ ಗಮನದಿಂದ ನಷ್ಟಾಂ = ನಾಶವಾಗಿದ್ದ ಸ್ಮೃತಿಂ = ಸ್ಮತಿಯನ್ನು, ಅವಿನಾಭಾವಪರ್ಯಾಯಾತ್ = ಸಹಭಾವರೂಪವಾದ, ಅವ್ಯಭಿಚಾರತಃ = ಅವ್ಯಭಿಚಾರದಿಂದ, ಲಬ್ಧಾಂ= ಪಡೆದುದನ್ನು ಕಥಮ್ = ಹೇಗೆ, ಅವದತ್ = ಹೇಳಿದರು?

**ಅನುವಾದ–** ಭಾಗವತ ಪುರಾಣದ ಈ ಪದ್ಯಕ್ಕೆ ಯುಕ್ತಿಮಲ್ಲಿಕಾಕಾರರು ಹೇಳುವ ಅರ್ಥವು ಅಲ್ಲದಿದ್ದರೆ, ಜೀವ-ಪರಮಾತ್ಮರ ಐಕ್ಯವೇ ಅರ್ಥವಾದರೆ ನಾರದರು ಇದೇ ಪ್ರಕರಣದ ೪೦, ೪೨, ೬೪ನೇ ಪದ್ಯಗಳಲ್ಲಿ ಹೇಳಿರುವ ಜೀವಪರಮಾತ್ಮರ

ವ್ಯಾಪ್ಯ-ವ್ಯಾಪಕಭಾವ, ಭೇದ, ಪರಸ್ಪರ ಆಶ್ರಯತ್ವ, ಬೋಧ್ಯ ಬೋಧಕಭಾವ, ಜೀವಾತ್ಮನು ಪರಮಾತ್ಮನಿಂದ ದೂರ ಹೋದ ಕಾರಣದಿಂದ ಅಡಗಿಹೋಗಿದ್ದ ಸದ್ವಿಚಾರ, ಪುನಃ ಸಮಾಗಮದಿಂದ, ಪುನರುಜ್ಜೀವನ - ಇವುಗಳು ಹೇಗೆ ಸಂಗತವಾಗುತ್ತವೆ? ಹೇಗೂ ಸಂಗತವಾಗುವುದಿಲ್ಲ.

**ಭಾವವಿಲಾಸಿನೀ–** ಐಕ್ಯಾರ್ಥಕಥನೇ ಪುನರಪ್ಯತಿಸ್ಪಷ್ಟಾ ಆಂತರಾನುಪಪತ್ತೀರಾಹ – **ವ್ಯಾಪ್ಯವ್ಯಾಪಕೇತಿ** ॥ ನೋ ಚೇತ್ ಅಸ್ಮದುಕ್ತಾರ್ಥೋ ನೋ ಚೇತ್ । ಸಃ ಪರಮಾತ್ಮಾಖ್ಯ-ಹಂಸಃ । ಆತ್ಮನಃ ಪರಮಾತ್ಮನಃ । ಸರ್ವಸ್ಯಾಪಿ ದ್ವಿತೀಯಾಂತ ಪದಸ್ಯ ಕಥಮುವದದಿತ್ಯುತ್ತ-ರೇಣಾನ್ವಯಃ । ಅವಿನಾಭಾವಪರ್ಯಾಯಾತ್ ಅವ್ಯಭಿಚಾರತ ಇತಿ ಸಂಬಂಧಃ । ಸ್ವೋಕ್ತಪೂರ್ವೋಕ್ತಶ್ಲೋಕಸ್ಯೈಕ್ಯಾರ್ಥತ್ವೇ ತತ್ರೈವ ಸ ಏವ ಹಂಸಃ ಐಕ್ಯವಿರುದ್ಧಮಿದಂ ಸರ್ವಂ ಪ್ರಮೇಯಂ ನ ವದೇದೇವೇತಿ ಭಾವಃ ॥ ೩೯೭-೩೯೮ ॥

ಸ ವ್ಯಾಪಕತಯಾऽऽತ್ಮಾನಂ ವ್ಯತಿರಿಕ್ತತಯಾऽऽತ್ಮನಿ ।
ವಿದ್ವಾನ್ ಸ್ವಪ್ನ ಇವಾಮೃಶ್ಯ ಸಾಕ್ಷಿಣಂ ವಿರರಾಮ ಹ ॥ ೩೯೯ ॥

**ಅರ್ಥ–** ಸಃ = ಆ ಮಲಯಧ್ವಜನು, ಆತ್ಮನಿ = ತನ್ನಲ್ಲಿ ಇರುವ ಸಾಕ್ಷಿಣಂ = ನೇರವಾಗಿ ನೋಡುವ, ಆತ್ಮಾನಂ = ಪರಮಾತ್ಮನನ್ನು, ವ್ಯಾಪಕತಯಾ = ಸರ್ವ ವ್ಯಾಪಕನೆಂದು, ಸ್ವತಂತ್ರನೆಂದು, ವ್ಯತಿರಿಕ್ತತಯಾ = ಭಿನ್ನನೆಂದು, ವಿದ್ವಾನ್ = ತಿಳಿದವನಾಗಿ, ಸ್ವಪ್ನೇ ಇವ = ಸ್ವಪ್ನದಲ್ಲಿ ಹೇಗೋ ಹಾಗೆ (ಜೀವ ಭಿನ್ನನಾದ ಪರಮಾತ್ಮನು ಸ್ವಪ್ನಾವಸ್ಥಾಪ್ರೇರಕ ಎಂದು ತಿಳಿಯಬೇಕು, ಸ್ವಪ್ನಾವಸ್ಥೆಯನ್ನು ಸೃಷ್ಟಿಸುವ ಸಾಮರ್ಥ್ಯವು ಜೀವನಿಗೆ ಇಲ್ಲದಿರುವುದರಿಂದ, ಹಾಗೆ ಪರಮಾತ್ಮನು ಜೀವಾತ್ಮನ ಸರ್ವಾವಸ್ಥಾಪ್ರೇರಕ) ಎಂದು ಆಮೃಶ್ಯ = ವಿಮರ್ಶಿಸಿ, ವಿರರಾಮ ಹ= ವಿರಕ್ತನಾದನು.

**ಅನುವಾದ–** ನಾರದರು ಪ್ರಾಚೀನಬರ್ಹಿ ರಾಜನಿಗೆ ಹೇಳಿದ ಪುರಂಜನೋ-ಪಾಖ್ಯಾನದಲ್ಲಿ ಮಲಯಧ್ವಜ ಮತ್ತು ವೈದರ್ಭಿ ಎಂಬ ರಾಜ-ರಾಣಿಯರ ವೃತ್ತಾಂತವಿದ್ದು, ತಪೋನಿರತನಾದ ಮಲಯಧ್ವಜನನ್ನು ಕುರಿತು ಹೇಳುವ ಸಂದರ್ಭದಲ್ಲಿ ಈ ಪದ್ಯವು ಇದೆ.

ವಾಸುದೇವೇ ಭಗವತಿ ರತಿಮ್ ಉದ್ವಹನ್ ನ ಅನ್ಯದ್ ವೇದ ಎಂದು ಹಿಂದಿನ ಪದ್ಯದಲ್ಲಿದೆ (೪.೨೮.೩೯). ಕೇವಲ ವಾಸುದೇವರತನಾದ ಮಲಯಧ್ವಜನಿಗೆ, ಆ ಪರಮಾತ್ಮನು ತನ್ನಲ್ಲಿ ಇದ್ದಾನೆ, ಅವನು ಸರ್ವವ್ಯಾಪಿ, ಸ್ವತಂತ್ರ, ಆದ್ದರಿಂದ ತನ್ನಿಂದ ಭಿನ್ನ, ಸಾಕ್ಷಿ, ಸ್ವಪ್ನಾವಸ್ಥೆಗೆ ಹೇಗೆ ಪ್ರೇರಕನೋ ಹಾಗೆ ಸರ್ವಾವಸ್ಥಾಪ್ರೇರಕ ಎಂದು ಸುಸ್ಪಷ್ಟವಾಗಿ ತಿಳಿಯುತ್ತಿದೆ. ಈ ಜ್ಞಾನದ ಸ್ಥಿತಿಯಲ್ಲಿ ಸಂಪೂರ್ಣ ವಿರಕ್ತನಾಗಿ ಜೀವನ್ಮುಕ್ತ ಸ್ಥಿತಿಯನ್ನು ಹೊಂದಿದನು.

**ವಿವರಣೆ–** (1) ಪರಮಾತ್ಮನಿಗೂ-ತನಗೂ ಇರುವ ಭೇದವನ್ನು ಮಲಯಧ್ವಜನು ಗ್ರಹಿಸಿರುವ ವಿವರಣೆಯು ಈ ಪದ್ಯದಲ್ಲಿದೆ. ತನ್ನಲ್ಲಿ ಇಲ್ಲದ ಮಹಿಮೆಯನ್ನು ಪರಮಾತ್ಮನಲ್ಲಿ ರಾಜನು ಗಮನಿಸಿದ್ದಾನೆ. ಈ ದರ್ಶನವು ಜೀವಾತ್ಮ- ಪರಮಾತ್ಮರ ಭೇದ ಮೂಲಕವಾದದ್ದು (2) ಯುಕ್ತಿಮಲ್ಲಿಕೆಯ 397ನೇ ಪದ್ಯದಲ್ಲಿ ಹೇಳಿರುವ ವ್ಯಾಪ್ಯ ವ್ಯಾಪಕಭಾವ ಮತ್ತು ಭೇದಗಳನ್ನು ಈ ಭಾಗವತ ಪದ್ಯವು ಹೇಳಿದೆ.

**ಪರೇ ಬ್ರಹ್ಮಣಿ ಚಾತ್ಮಾನಂ ಪರಂಬ್ರಹ್ಮ ತಥಾಽಽತ್ಮನಿ ।**
**ವೀಕ್ಷಮಾಣೋಽವಿಹಾಯೇಕ್ಷಾಮಸ್ಮಾದುಪರರಾಮ ಹ ॥ ೪೦೦ ॥**

**ಅರ್ಥ–** ಆತ್ಮಾನಂ ಚ = ತನ್ನನ್ನು, ಪರೇ ಬ್ರಹ್ಮಣಿ = ಪರಬ್ರಹ್ಮನಲ್ಲಿ, ತಥಾ = ಹಾಗೆಯೇ, ಪರಂಬ್ರಹ್ಮ = ಪರಬ್ರಹ್ಮನನ್ನು, ಆತ್ಮನಿ = ತನ್ನಲ್ಲಿ ವೀಕ್ಷಮಾಣಃ = ಕಾಣುತ್ತಾ, ಈಕ್ಷಾಮ್ = ಜ್ಞಾನವನ್ನು (ಭಾಗವತ ೪.೨೮.೪೧ ಪದ್ಯವು ಹೇಳಿರುವ ಜ್ಞಾನವನ್ನು) ಅವಿಹಾಯ = ಬಿಡದೆ, ಅಸ್ಮಾದ್ = ಈ ಸಂಸಾರ ಚಕ್ರದಿಂದ, ಉಪರರಾಮ ಹ = ಮುಕ್ತನಾದನು.

**ಅನುವಾದ–** ತನಗೆ ಪರಬ್ರಹ್ಮನು ಆಶ್ರಯ ಎಂದೂ, ಪರಬ್ರಹ್ಮನು ತನ್ನ ಒಳಗೆ ಇದ್ದು ತನಗೆ ನಿಯಾಮಕ ಎಂದೂ ಮಲಯಧ್ವಜನು (ಗುರುವಿನ ಉಪದೇಶದಿಂದ ಲಭಿಸಿದ ವಿಶುದ್ಧಜ್ಞಾನದಿಂದ ೪.೨೮.೪೧) ನೋಡಿ ತಿಳಿದನು. ಈ ಸುಸ್ಪಷ್ಟ ಜ್ಞಾನಬಲದಿಂದ ಮನೋವೃತ್ತಿರೂಪವಾದ ಜ್ಞಾನವನ್ನು ತ್ಯಜಿಸಿ ಸಂಸಾರ ಚಕ್ರದಿಂದ ನಿವೃತ್ತನಾದನು.

**ವಿವರಣೆ–** (1) ಯುಕ್ತಿಮಲ್ಲಿಕಾದ 397ನೇ ಪದ್ಯದಲ್ಲಿ ಹೇಳಿರುವ ಅನ್ಯೋನ್ಯಾಶ್ರಿತತಾ ವನ್ನು ಈ ಭಾಗವತ ಪದ್ಯವು ಹೇಳಿದೆ.

(2) ವೀಕ್ಷಮಾಣೋ ವಿಹಾಯ. ಎಂಬುದನ್ನು ವಿಹಾಯ ಎಂದೂ, ಅವಿಹಾಯ ಎಂದೂ ಓದಬಹುದು. 4.28.41 ರಲ್ಲಿ ಹೇಳಿರುವ ವಿಶುದ್ಧಜ್ಞಾನವು ಮುಕ್ತಿಯಲ್ಲೂ ಮುಂದುವರಿಯುತ್ತದೆ. ಆದ್ದರಿಂದ ಅದರೊಂದಿಗೇ ರಾಜನಿಗೆ ಮುಕ್ತಿಯಾಗಿರುತ್ತದೆ. ಈ ಅಭಿಪ್ರಾಯದಿಂದ ಅವಿಹಾಯ ಎಂದು ಓದಬೇಕು. ಮುಕ್ತರಾಗುವವರಿಗೆ, ಅಲ್ಲಿಯವರೆಗೆ ಗಳಿಸಿದ ವೃತ್ತಿಜ್ಞಾನವು ಮುಂದುವರಿಯುವುದಿಲ್ಲ, ಅದನ್ನು ಬಿಟ್ಟುಬಿಡುತ್ತಾರೆ. ಈ ಅಭಿಪ್ರಾಯದಿಂದ ವಿಹಾಯ ಎಂದು ಓದಬೇಕು.

(3) 4.28.41 ರಲ್ಲಿ ಹೇಳಿದ ಅಪರೋಕ್ಷಜ್ಞಾನವನ್ನು ವಿಹಾಯ ಎಂದೂ ತಿಳಿಯಬಹುದು. ಋಜುಗಳಲ್ಲದವರ ಅಪರೋಕ್ಷಜ್ಞಾನವು ಸ್ಥಿರವಲ್ಲ, ಉಪದೇಶಾನಂತರ ಉಂಟಾದ ಅಪರೋಕ್ಷಜ್ಞಾನವು ಸ್ವಲ್ಪಕಾಲಾನಂತರ ಇಲ್ಲವಾಗುತ್ತದೆ. ಸ್ಪಷ್ಟವಾದ ಪರೋಕ್ಷಜ್ಞಾನವು ಮುಂದುವರಿಯುತ್ತದೆ. ಆದ್ದರಿಂದ ಈಕ್ಷಾಮ್ ವಿಹಾಯ ಅಪರೋಕ್ಷ ಜ್ಞಾನವನ್ನು ಬಿಟ್ಟು ಪರೋಕ್ಷಜ್ಞಾನದಲ್ಲಿ ಸ್ಥಿರವಾಗಿ ಎಂದು ಅರ್ಥ.

**ಏವಂ ಸ ಮಾನಸೋ ಹಂಸೋ ಹಂಸೇನ ಪ್ರತಿಬೋಧಿತಃ ।**
**ಸ್ವಸ್ಥಸ್ತದ್‌ವ್ಯಭಿಚಾರೇಣ ನಷ್ಟಾಮಾಪ ಪುನಃ ಸ್ಮೃತಿಮ್ ॥ ೪೦೧ ॥**

**ಅರ್ಥ–** ಏವಂ = ಹೀಗೆ, ಹಂಸೇನ = ಪರಮಾತ್ಮ ಹಂಸದಿಂದ ಪ್ರತಿಬೋಧಿತಃ = ಉಪದೇಶಿಸಲ್ಪಟ್ಟ(ಜ್ಞಾನಿಯಾಗಿಸಲ್ಪಟ್ಟ) ಸಃ = ಆ, ಮಾನಸಃ ಹಂಸಃ = ಮಾನಸ ಸರೋವರದ ಜೀವಹಂಸವು, ಸ್ವಸ್ಥಃ (ಬಭೂವ)= ಸ್ವತಂತ್ರನಾದ ಪರಮಾತ್ಮನಲ್ಲಿ ಮನಸ್ಸುಳ್ಳವನಾದನು. ತದ್‌ವ್ಯಬಿಚಾರೇಣ = ಅವನಿಂದ (ಪರಮಾತ್ಮನಿಂದ) ದೂರ ಹೋಗಿದ್ದ ಕಾರಣದಿಂದ, ನಷ್ಟಾಂ = ಮರೆಯಾಗಿದ್ದ ಸ್ಮತಿಂ = ಜ್ಞಾನವನ್ನು ಪುನಃ = ಮತ್ತೆ, ಆಪ = ಪಡೆದನು.

**ಅನುವಾದ–** ಹಿಂದೆ ವಿವರಿಸಿದಂತೆ ಪರಮಾತ್ಮ ಹಂಸದಿಂದ ಬೋಧನೆಯನ್ನು ಪಡೆದ ಜೀವಹಂಸವು ದುಃಖಕಾರಣವಾದ ದೋಷಗಳನ್ನು ತ್ಯಜಿಸಿ ಪರಮಾತ್ಮನಲ್ಲೇ ಮನಸ್ಸನ್ನು ಇಟ್ಟು ಸಮಾಧಾನವನ್ನು ಪಡೆಯಿತು. ಪರಮಾತ್ಮನಿಂದ ದೂರ ಹೋಗಿದ್ದ ಕಾರಣದಿಂದ ಮರೆಯಾಗಿದ್ದ ಜ್ಞಾನವನ್ನು ಪುನಃ ಪಡೆಯಿತು.

**ಭಾವವಿಲಾಸಿನೀ–** ಉಕ್ತಾರ್ಥಪ್ರತಿಪಾದಿಕಾಸ್ತತ್ರತ್ಯಾ ಏವ ಕಾರಿಕಾಃ ಪಠತಿ – **ಸವ್ಯಾಪಕತಯೇ-ತ್ಯಾದಿನಾ** ॥ ವಿದ್ವಾನ್ ಪರಮಾತ್ಮಹಂಸೋಪದಿಷ್ಟಮಾರ್ಗೇಣ ಜ್ಞಾನವಾನ್ ಸಃ ಜೀವಹಂಸಃ । ಸಾಕ್ಷಿಣಂ ಸಾಕ್ಷಾದ್‌ದ್ರಷ್ಟಾರಂ ಆತ್ಮಾನಂ ಪರಮಾತ್ಮಾನಮ್ ಆತ್ಮನಿ ಸ್ವಸ್ಮಿನ್ ವ್ಯಾಪಕತಯಾ ವ್ಯತಿ-ರಿಕ್ತತಯಾ ಚಾಽಮೃಶ್ಯ ಸಮ್ಯಗ್ವಿಚಾರ್ಯ । ಸ್ವಪ್ನ ಇವೇತ್ಯಲ್ಪಕಾಲೀನತ್ವಾಪೇಕ್ಷಯೋಕ್ತಮ್ । ನತು ಮಿಥ್ಯಾತ್ವಾಪೇಕ್ಷಯಾ । ತಥಾ ಸತಿ ವಿದ್ವಾನಿತ್ಯುಕ್ತಹಂಸವಿಶೇಷಣವಿರೋಧಾತ್ । ವಿದ್ವತ್ತ್ವಂ ಮಿಥ್ಯಾಜ್ಞಾನಿತ್ವಂ ಚ ಪರಸ್ಪರವಿರುದ್ಧಮಿತಿ ಸುಪ್ರಸಿದ್ಧಮೇವ । ಆಮೃಶ್ಯೇತಿ ಪದವಿರೋಧಾಚ್ಚ ವಿರರಾಮೇತಿ ಫಲಕಥನವಿರೋಧಾಚ್ಚ । ಅನೇನ ಸ್ವಪ್ನಸ್ಯಾಪಿ ಸತ್ಯತ್ವಮರ್ಥಾತ್ ಸಿದ್ಧಮಿತಿ ದ್ರಷ್ಟವ್ಯಮ್ । ವಿರರಾಮ ಸಾಂಸಾರಿಕಭ್ರಮಾದುಪರತೋಽಭೂತ್ । ವ್ಯಾಪ್ಯವ್ಯಾಪಕತಯಾ ವ್ಯತಿರಿಕ್ತತಯಾ ಚಾಽತ್ಮಾನಮಾತ್ಮನ್ಯಾಮೃಶ್ಯೇತ್ಯುಕ್ತ್ಯಾ ಸ್ವಸ್ಯ ವ್ಯಾಪ್ಯತ್ವಂ ಪರಮಾತ್ಮಧರ್ಮಿಕ ಭೇದಪ್ರತಿಯೋಗಿತ್ವಮಾಧಾರತ್ವಂ ಸಾಕ್ಷಿಣಮಿತ್ಯುಕ್ತ್ಯಾ ಪರಮಾತ್ಮನಸ್ಸರ್ವಜ್ಞತ್ವಂ ವಿರರಾಮೇ-ತ್ಯುಕ್ತ್ಯಾ ಸ್ವಸ್ಯಾಸರ್ವಜ್ಞತ್ವಂ ಹೇತ್ಯುಕ್ತ್ಯಾಸ್ಯ ಸರ್ವಸ್ಯ ಪ್ರಮಾಣಸಿದ್ಧತಾಂ ಚಾಽಽಹ । ಕಥಂ ಪುನರಸ್ಮಿನ್ನಧ್ಯಾಯ ಐಕ್ಯಸ್ಯಾವಕಾಶಃ । ಪರೇ ಬ್ರಹ್ಮಣೀತಿ ಶ್ಲೋಕೇನ ಜೀವಪರಯೋ-ರನ್ಯಾಶ್ರಿತತ್ವಕಥನಾತ್ಪರೇತಿ ವಿಶೇಷಣಭಾವಾಭಾವಾಭ್ಯಾಂ ಬ್ರಹ್ಮಣಃ ಪರಮತ್ವಲಾಭಾತ್ ಸ್ವಸ್ಯ ಚ ತದಲಾಭಾತ್ ಬ್ರಹ್ಮಣಿ ದ್ವಿಃಪರತ್ವೋಕ್ತ್ಯಾ ಉತ್ತಮತ್ವೇ ತಾತ್ಪರ್ಯಲಾಭಾತ್ ಅನಿವಾರ್ಯೋಚ್ಚನೀಚತ್ವಪ್ರಾಪ್ತ್ಯಾ ಚ ಕಥಮೈಕ್ಯಾವಕಾಶಃ। ಅಸ್ಮಾತ್ಸಂಸಾರಾತ್ । ಅವಿಹಾಯೇತಿ ಪದಚ್ಛೇದಃ । ಅನ್ಯಥಾ ನಷ್ಟಾಂ ಸ್ಮೃತಿಮವಾಪ ಹೇತ್ಯುತ್ತರವಾಕ್ಯವಿರೋಧಾತ್ । ವಿಹಾಯೇತಿ ಪದಚ್ಛೇದೇಽಪಿ ಋಜುಭ್ಯೋಽನ್ಯತ್ರಾಪರೋಕ್ಷಜ್ಞಾನಸ್ಯ ಸಾರ್ವಕಾಲೀನತ್ವಾಭಾವಾತ್ ಈಕ್ಷಾಂ ವಿಹಾಯ ಪರೋಕ್ಷಜ್ಞಾನ ಏವ ಸ್ಥಿರೋ ಭೂತ್ವೇತ್ಯರ್ಥಃ। ಸರ್ವಥಾ ಜ್ಞಾನಪರಿತ್ಯಾಗೇಽಸ್ಮಾದುಪ-ರರಾಮೇತ್ಯುಕ್ತಸಂಸಾರವಿರಾಮಾಯೋಗಾತ್ । ಈಕ್ಷಾಪದಸ್ಯ ಸ್ತ್ರೀಲಿಂಗತ್ವೇನಾಸ್ಮಾದಿತಿ

ಪರಾಮರ್ಶಾಯೋಗಾತ್ । ಕಥಂಚಿತ್ಪರಾಮರ್ಶೇ ಚ ವಿಹಾಯೇಕ್ಷಾಮಿತ್ಯನೇನಾಸ್ಮಾದುಪರರಾಮೇತ್ಯಸ್ಯ ಪೌನರುಕ್ತ್ಯಾಪಾತಾತ್ । ಅವಿಹಾಯೇತಿ ಪದಚ್ಛೇದೇ ಪರಸ್ಪರವಿರೋಧಾತ್ ಪ್ರಾಗುಕ್ತವ್ಯಾಪಕತ್ವ ವ್ಯತಿರಿಕ್ತತ್ವಪರತ್ವಾದಿಲಿಂಗವಿರೋಧಾನಿಸ್ತಾರಾಚ್ಚ ಸಂಸಾರಸ್ಯೈವಾಯಂ ಪರಾಮರ್ಶಃ । ಏತತ್ಸಮಾಖ್ಯಯಾ ಚ ಪೂರ್ವಶ್ಲೋಕೇಽಪಿ ಸಂಸಾರಾದೇವ ವಿರಾಮ ಇತಿ ಜ್ಞಾತವ್ಯಮ್ । ಜ್ಞಾನಸ್ಯೈವ ತ್ಯಾಗೇ ಉಪದೇಶವೈಯರ್ಥ್ಯಾಚ್ಚ । ನಹಿ ಸ್ವೋಕ್ತಜ್ಞಾನಪರಿತ್ಯಾಗಾರ್ಥಂ ಕೋಽಪ್ಯುಪದಿಶತಿ । ಏವಮಿತಿ ಮೈತ್ರೇಯೋಕ್ತ ಶ್ಲೋಕೇ ಚ ಪೂರ್ವಂ ನಾರದೋಕ್ತಸಕಲಜ್ಞಾನಾನ್ಯೇವಮಿತಿ ಪರಾಮೃಶ್ಯ ಹಂಸೇನ ಪ್ರತಿಬೋಧಿತ ಇತಿ ಹಂಸೋಪದಿಷ್ಟಪ್ರಬೋಧಾಪರಪರ್ಯಾಯ ಪ್ರತಿಬೋಧಕಕಥನಾತ್ ಸರ್ವಮಪಿ ಜ್ಞಾನಂ ಸಮ್ಯಗ್ಜ್ಞಾನಮೇವೇತಿ ಸಿದ್ಧಮ್ । ಮೈತ್ರೇಯೋಕ್ತಿಸಂವಾದೇನೈವಮಿತಿ ಪರಾಮೃಷ್ಟಪ್ರಾಚೀನ ನಾರದವಾಕ್ಯೋಕ್ತಜ್ಞಾನಸ್ಯ ಪ್ರಮಾರೂಪತ್ವಂ ಚ ಸಿದ್ಧಮ್ । ಸ್ವಪ್ನನಿದರ್ಶನಂ ಚ ಕಿಂಚಿತ್ಸಾಮ್ಯೇನೈವ । ನ ಸರ್ವಸಾಮ್ಯೇನೇತಿ ಚ ಸಿದ್ಧಮ್ । ಸರ್ವಥಾ ಸ್ವಪ್ನಸಮಾನತ್ವೇ ಪ್ರತಿಬೋಧಿತ ಇತಿ ಮಾನಸಹಂಸಸ್ಯ ಪ್ರಬುದ್ಧತ್ವೋಕ್ತ್ಯಯೋಗಾತ್ । ಉಕ್ತರೀತ್ಯಾ ಜ್ಞಾನಸ್ಯ ಸಂವಾದಿತ್ವಾಚ್ಚ । ಅಥವಾಽತ್ರ ಸ್ವಪ್ನಂ ಪ್ರತಿಬುದ್ಧತ್ವೋಕ್ತ್ಯಾ ಸ್ವಪ್ನ ಇತಿ ದೃಷ್ಟಾಂತೋ ಯಥಾ ಮಹಾಹ್ರದ ಇತಿವದ್ವೈಧರ್ಮ್ಯದೃಷ್ಟಾಂತೋ ವಾ । ಸ್ವಪ್ನೇ ಯಥಾಮಿಲಿಮಿಲಾಯಮಾನಂ ಜ್ಞಾನಂ ತಥಾ ನ, ಕಿಂತು ಸಮ್ಯಗಾಮೃಶ್ಯೇತ್ಯರ್ಥಸ್ಯೈವೈತತ್ಪದಾನುಸಾರಿತ್ವಾತ್ । ಅನ್ಯಥಾ ಸ್ಥಿರಜ್ಞಾನತ್ವಾರ್ಥಕಸ್ವಸ್ಥಪದವಿರೋಧಾತ್ । ತದ್ವ್ಯಭಿಚಾರೇಣ ನಷ್ಟಾಂ ಸ್ಮೃತಿಂ ತದವ್ಯಭಿಚಾರೇಣ । ಪುನರಾಪೇತಿ ಪ್ರಾಙ್ನಷ್ಟಾಯಾಃ ಸ್ಮೃತೇಃ ಪುನಃ ಪ್ರಾಪ್ತಿಕಥನಾಯೋಗಾಚ್ಚ । ನಹಿ ಸ್ವಪ್ನದೃಷ್ಟೋಽರ್ಥಃ ಪೌನಃಪುನ್ಯೇನ ದೃಶ್ಯತೇ ॥೩೯೯-೪೦೧॥

**ವಿವರಣೆ—** ತಾವು ಹೇಳಿದ ಅರ್ಥವನ್ನು ಪ್ರತಿಪಾದನೆ ಮಾಡುವ 'ಸವ್ಯಾಪಕತಯಾಽತ್ಮಾನಂ' ಇತ್ಯಾದಿಯಾದ ಭಾಗವತದ ಮೂರು ಶ್ಲೋಕಗಳನ್ನೇ ಇಲ್ಲಿ ಉದಾಹರಿಸುತ್ತಾರೆ. 'ವಿದ್ವಾನ್' ಎಂದರೆ ಪರಮಾತ್ಮ ಹಂಸನೆಂದು ಉಪದಿಷ್ಟರೀತಿಯಿಂದ ಜ್ಞಾನವನ್ನು ಪಡೆದ 'ಆ ಜೀವಹಂಸ' ಎಂದು ಅರ್ಥ. 'ಸಾಕ್ಷಿಣಂ' ಎಂದರೆ ಸಾಕ್ಷಾತ್ ದ್ರಷ್ಟೃವಾದ, ಆತ್ಮಾನಂ = ಪರಮಾತ್ಮನನ್ನು, ಆತ್ಮನೇ = ತನ್ನಲ್ಲಿ, ವ್ಯಾಪಕತಯಾ = ವ್ಯಾಪಕನೆಂದು, ವ್ಯತಿರಿಕ್ತತಯಾ ಚ = ಮತ್ತು ಭಿನ್ನನೆಂದು, ಅಮೃಶ್ಯ = ಚೆನ್ನಾಗಿ ವಿಚಾರ ಮಾಡಿ ಎಂದು ಅರ್ಥ. 'ಸ್ವಪ್ನೈವ' ಎಂಬ ದೃಷ್ಟಾಂತವು ವಿಮರ್ಶೆಗೆ ಅಲ್ಪಕಾಲೀನವಾದುದು ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ ಹೊರತು, ಮಿಥ್ಯಾತ್ವದ ದೃಷ್ಟಿಯಿಂದಲ್ಲ. 'ಮಿಥ್ಯಾ' ಎಂಬರ್ಥವನ್ನು ಸ್ವೀಕರಿಸಿದರೆ, ಆ ಹಂಸಕ್ಕೆ 'ವಿದ್ವಾನ್' ಎಂಬ ವಿಶೇಷಣವನ್ನು ಕೊಟ್ಟಿರುವುದರ ವಿರೋಧವುಂಟಾಗುತ್ತದೆ. ವಿದತ್ವಾ ಮತ್ತು ಮಿಥ್ಯಾಜ್ಞಾನತ್ವವು ಪರಸ್ಪರ ವಿರುದ್ಧವಾಗಿದೆಯೆಂದು ಸುಪ್ರಸಿದ್ಧವೇ ಆಗಿದೆ. ಮತ್ತು ಮಿಥ್ಯಾತ್ವವನ್ನು ಹೇಳಿದರೆ 'ಆಮೃಶ್ಯ' ಎಂಬ ಪದದ ವಿರೋಧವು ಬರುತ್ತದೆ. 'ಆಮೃಶ್ಯ' ಎಂದರೆ ಚೆನ್ನಾಗಿ ಎಂದು ಅರ್ಥವಷ್ಟೇ. ಭ್ರಾಂತಿರೂಪವಾದ ವಿಮರ್ಶೆಯು ಎಂದೂ ಸಮ್ಯಗ್ವಿಮರ್ಶೆಯಲ್ಲ.

ಮತ್ತು 'ವಿರರಾಮ' ಎಂಬ ಫಲಕಥನದಿಂದಲೂ ವಿರೋಧವುಂಟಾಗುತ್ತದೆ. ಭ್ರಾಂತಿಗೆ ಇಂತಹ ಫಲವನ್ನು ಹೇಳುವುದು ಅಯುಕ್ತವಾಗುವುದಷ್ಟೇ. ಹೀಗೆ ಸ್ವಪ್ನದೃಷ್ಟಾಂತವನ್ನು ಕೊಟ್ಟಿರುವುದರಿಂದ ಆರ್ಥಿಕವಾಗಿ ಸ್ವಪ್ನಕ್ಕೂ ಸತ್ಯತ್ವವು ಸಿದ್ಧವಾಗುತ್ತದೆ. 'ವಿರರಾಮ' ಎಂದರೆ 'ಸಾಂಸಾರಿಕ ಭ್ರಮದಿಂದ ಉಪರತನಾದನು' ಎಂದು ಅರ್ಥ. ಇಲ್ಲಿ 'ವ್ಯಾಪಕತಯಾ' ಎಂದು ಹೇಳಿದ್ದರಿಂದ ಜೀವನಿಗೆ ವ್ಯಾಪ್ತತ್ವವು, 'ವ್ಯತಿರಿಕ್ತತಯಾ ಚಾऽತ್ಮಾನಮ್' ಎಂದು ಹೇಳಿದ್ದರಿಂದ ಪರಮಾತ್ಮಧರ್ಮಿಕ ಭೇದಪ್ರತಿಯೋಗಿತ್ವವು, 'ಆತ್ಮನೀ' ಎಂದು ಹೇಳಿದ್ದರಿಂದ ಪರಮಾತ್ಮನನ್ನು ಕುರಿತು ಆಧಾರತ್ವವು, 'ಸಾಕ್ಷಿಣಂ' ಎಂದು ಹೇಳಿದ್ದರಿಂದ ಪರಮಾತ್ಮನ ಸರ್ವಜ್ಞತ್ವವು 'ವಿರರಾಮ' ಎಂದರೆ ಭ್ರಮದಿಂದ ನಿವೃತ್ತನಾದನು ಎಂದು ಹೇಳಿರುವುದರಿಂದ ತನ್ನ ಅಸರ್ವಜ್ಞತ್ವವು 'ಹಾ' ಎಂಬ ನಿಪಾತದಿಂದ ಈ ಎಲ್ಲ ಪ್ರಮೇಯಗಳು ಪ್ರಮಾಣಸಿದ್ಧವೆಂದು ಹೇಳಲ್ಪಟ್ಟಿದೆ. ಅಂತಹ ಈ ಅಧ್ಯಾಯದಲ್ಲಿ ಐಕ್ಯಕ್ಕೆ ಎಲ್ಲಿ ಅವಕಾಶವಿದೆ ? 'ಪರೇಬ್ರಹ್ಮಣೀ' ಎಂಬ ಶ್ಲೋಕದಲ್ಲಿ ಬ್ರಹ್ಮನಿಗೆ ಎರಡು ಬಾರಿ ಪರತ್ವವನ್ನು ಹೇಳಿರುವುದರಿಂದ ಅವನಿಗೆ ಉತ್ತಮತ್ವವು, ಜೀವನಿಗೆ ಪರತ್ವವನ್ನು ಹೇಳದಿರುವುದರಿಂದ ಅಧಮತ್ವವು ಲಭ್ಯವಾಗುವುದರಿಂದ ಈ ಉಚ್ಚನೀಚಗಳಿಗೆ ಎಲ್ಲಿ ಐಕ್ಯಕ್ಕೆ ಅವಕಾಶವಿದೆ ? 'ಈಕ್ಷಾಮಾಣೋ ವಿಹಾಯಕ್ಷಾಮ್' ಎಂಬಲ್ಲಿ ಅವಿಹಾಯ ಎಂದು ಪದಚ್ಛೇದ, ವಿಹಾಯ ಎಂದು ಪದಚ್ಛೇದ ಮಾಡಿದರೆ ಮುಂದಿನ ಶ್ಲೋಕದಲ್ಲಿ 'ನಷ್ಟಮಾಪಪುನಸ್ಸ್ಮೃತಿಂ' ಎಂದು ಪುನಃ ಜ್ಞಾನವನ್ನು ಪಡೆದನು ಎಂಬುದರಿಂದ ವಿರೋಧವೂ ಬರುತ್ತದೆ. 'ವಿಹಾಯ' ಎಂದು ಪದಚ್ಛೇದವನ್ನು ಮಾಡಿದರೂ ಋಜುಗಳನ್ನು ಬಿಟ್ಟು ಉಳಿದವರಿಗೆ ಅಪರೋಕ್ಷಜ್ಞಾನವು ಸರ್ವಥಾ ಇರುವುದಿಲ್ಲವಾದ್ದರಿಂದ 'ಈಕ್ಷಾಂ' = ಅಪರೋಕ್ಷಜ್ಞಾನವನ್ನು, ವಿಹಾಯ = ಬಿಟ್ಟು ಎಂದರೆ ಪರೋಕ್ಷಜ್ಞಾನದಲ್ಲಿಯೇ ಸ್ಥಿರನಾದವನಾಗಿ ಎಂದು ಅರ್ಥವನ್ನು ಮಾಡಬಹುದು. ಹೊರತು, 'ಸರ್ವಾತ್ಮನ ಜ್ಞಾನಪರಿತ್ಯಾಗ' ಎಂಬರ್ಥವನ್ನು ಮಾಡಬಾರದು. ಹಾಗೇ ಮಾಡಿದರೆ 'ಅಸ್ಮಾದುಪರರಾಮಃ' ಎಂದು ಹೇಳಿದ ಸಂಸಾರನಿವೃತ್ತಿಯು ಕೂಡುವುದಿಲ್ಲ. ಮತ್ತು ಈಕ್ಷಾಪದವು ಸ್ತ್ರೀಲಿಂಗವಾದ್ದರಿಂದ ಅದನ್ನು 'ಅಸ್ಮಾತ್' ಎಂಬ ನಪುಂಸಕಲಿಂಗಪದದಿಂದ ಪರಾಮರ್ಶ ಮಾಡಲು ಸಾಧ್ಯವಿಲ್ಲ. 'ಸಾಮಾನ್ಯನಪುಂಸಕಂ' ಎಂಬ ನ್ಯಾಯವನ್ನು ಹೇಳಿ ಕಷ್ಟದಿಂದ ಪರಾಮರ್ಶ ಮಾಡಿದರೂ 'ವಿಹಾಯೇಕ್ಷಾಮ್' ಎನ್ನುವುದಕ್ಕೂ 'ಸಂಸಾರ ಭ್ರಮನಿವೃತ್ತಿ' ಎಂದು ಅರ್ಥವಾಗುವುದರಿಂದ, 'ಅಸ್ಮಾದುಪರರಾಮಃ' ಎಂಬುದ್ಕೂ ಸಂಸಾರ ಭ್ರಮದಿಂದ ನಿವೃತ್ತಿ ಎಂದು ಅರ್ಥವಾಗುವುದರಿಂದ ಪುನರುಕ್ತಿಯು ಬರುತ್ತದೆ. 'ಅವಿಹಾಯ' ಎಂದು ಪದಚ್ಛೇದ ಮಾಡಿದರಂತೂ 'ಈಕ್ಷಾಂ ಅವಿಹಾಯ ಅಸ್ಮಾದುಪರರಾಮ' ಎಂಬ ಪದಗಳಿಗೆ ಭ್ರಮದಿಂದ ನಿವೃತ್ತನಾಗದೇ ಸಂಸಾರಭ್ರಮದಿಂದ ನಿವೃತ್ತನಾದನು ಎಂಬ ವ್ಯಾಹತವಾದ ಅರ್ಥವು ಉಂಟಾಗುತ್ತದೆ. ಮತ್ತು ಹಿಂದೆ ಹೇಳಿದ ವ್ಯಾಪಕತ್ವ, ವ್ಯತಿರಿಕ್ತತ್ವ,

ಪರತ್ವ ಮೊದಲಾದ ಲಿಂಗವಿರೋಧವೂ ಬರುತ್ತದೆ. ಆದ್ದರಿಂದ 'ಅಸ್ಮಾದಿ' ಎಂಬುದು ಸಂಸಾರದ ಪರಾಮರ್ಶವೇ ಆಗಿದೆ. ಈ ಶ್ಲೋಕದ ಸಮಾಖ್ಯೆಯಿಂದ ಹಿಂದಿನ ಶ್ಲೋಕದಲ್ಲಿ 'ವಿರರಾಮಃ' ಎಂದು ಹೇಳಿದ ವಿರಾಮವೂ ಸಹ ಸಂಸಾರದಿಂದಲೇ ವಿರಾಮವಾಗಿದೆ ಎಂದು ತಿಳಿಯಬೇಕು. 'ವಿಹಾಯ' ಎಂದು ಪದಚ್ಛೇದ ಮಾಡಿ ಜ್ಞಾನವನ್ನು ಪರಿತ್ಯಾಗ ಮಾಡುವುದಾದರೆ, ಉಪದೇಶವೇ ವ್ಯರ್ಥವಾಗುತ್ತದೆ. ತಾವು ಉಪದೇಶ ಮಾಡಿದ ಜ್ಞಾನವನ್ನು ಪರಿತ್ಯಾಗ ಮಾಡುವುದಕ್ಕಾಗಿ ಯಾರೂ ಉಪದೇಶ ಮಾಡುವುದಿಲ್ಲವಷ್ಟೇ, 'ಏವಂ ಸ ಮಾನಸೋऽಹಂಸ' ಎಂಬ ಕೊನೆಯ ಶ್ಲೋಕ. (ಇದು ಮೈತ್ರೇಯರು ಹೇಳುವ ಶ್ಲೋಕ). ಮೊದಲು ನಾರದರಿಂದ ಉಪದಿಷ್ಟವಾದ ಸಕಲಜ್ಞಾನವನ್ನು 'ಏವಂ' ಎಂದು ಪರಾಮರ್ಶ ಮಾಡಿ 'ಹಂಸೇನ ಪ್ರತಿಬೋಧಿತ' ಎಂದು ಹಂಸನಿಂದ ಉಪದಿಷ್ಟವಾದ ಪ್ರತಿಬೋಧವನ್ನು ಹೇಳಿರುವುದರಿಂದ, ಪ್ರತಿಬೋಧ ಎಂದರೂ ಪ್ರಬೋಧ ಎಂದರೂ, ಯಥಾರ್ಥಜ್ಞಾನವೆಂದರೂ ಪರ್ಯಾಯಗಳೇ ಆಗಿರುವುದರಿಂದ ಈ ಉಪದಿಷ್ಟವಾದ ಜ್ಞಾನಗಳೆಲ್ಲವೂ ಯಥಾರ್ಥಜ್ಞಾನವೆಂದೇ ಸಿದ್ಧವಾಗುತ್ತದೆ. ಅದೇ ಸಮೀಚೀನಜ್ಞಾನವಷ್ಟೇ. ಸ್ವಪ್ನನಿದರ್ಶನವೂ ಕೂಡ ಅಲ್ಪಸಾಮ್ಯ ದಿಂದಲೇ ಹೊರತು, ಸರ್ವಸಾಮ್ಯದಿಂದಲ್ಲ. ಸರ್ವಥಾ ಸ್ವಪ್ನಸಾಮ್ಯವನ್ನು ಸ್ವೀಕರಿಸಿದರೆ ಪ್ರತಿಬೋಧಿತಾ ಎಂಬ ಶಬ್ದದಿಂದ ಮಾನಸಹಂಸಕ್ಕೆ ಪ್ರಬೋಧವನ್ನು ಹೇಳಿರುವುದು ಅಯುಕ್ತವಾಗುತ್ತದೆ. ನಾರದಾದಿಜ್ಞಾನಸಂವಾದವನ್ನು ಹೇಳಿರುವುದರಿಂದಲೂ ಸರ್ವಥಾ ಸ್ವಪ್ನಸಾಮ್ಯವನ್ನು ತೆಗೆದುಕೊಳ್ಳಬಾರದು. ಒಬ್ಬನು ಸ್ವಪ್ನದಲ್ಲಿ ನೋಡಿರುವುದಕ್ಕೆ ಇನ್ನೊಬ್ಬನ ಸಂವಾದವಿರುವುದಿಲ್ಲವಷ್ಟೇ. ಅಥವಾ ಇಲ್ಲಿ ಸ್ವಪ್ನನಿದರ್ಶನವನ್ನು ವೈಧರ್ಮ್ಯ-ದೃಷ್ಟಾಂತವನ್ನಾಗಿ ತೆಗೆದುಕೊಳ್ಳಬಹುದು. ಸ್ವಪ್ನದಲ್ಲಿ ಉಂಟಾಗುವ ಜ್ಞಾನವು ಹೇಗೆ ಸಮುಗ್ಧಾಕಾರವಾಗಿರುತ್ತದೆಯೋ, ಹಾಗೇ ಜೀವಹಂಸನ ವಿಮರ್ಶಾತ್ಮಕ ಜ್ಞಾನವು ಸಮುಗ್ಧಾಕಾರವಾಗಿಲ್ಲ. ಅತ್ಯಂತ ಸ್ಪಷ್ಟವಾಗಿದೆಯೆಂದೇ ಅರ್ಥವಾಗುತ್ತದೆ. ಇಲ್ಲದಿದ್ದರೆ 'ಸ್ವಸ್ಥಃ ತದ್ವ್ಯಭಿಚಾರೇಣ' ಎಂಬಲ್ಲಿ ಸ್ವಸ್ಥ ಪದದಿಂದ 'ಸ್ಥಿರ' ಎಂಬ ಅರ್ಥವು ಕೂಡುವುದಿಲ್ಲ. ಮತ್ತು ಪರಮಾತ್ಮಹಂಸವನ್ನು ಪರಿತ್ಯಾಗಮಾಡಿದುದರಿಂದ ನಷ್ಟವಾದ ಸ್ಮೃತಿಯನ್ನು ಅವನನ್ನು ಪುನಃ ಸ್ವೀಕರಿಸುವುದರಿಂದ ಮರಳಿ ಪಡೆದನು ಎಂದು, ಮೊದಲು ನಷ್ಟವಾದ ಜ್ಞಾನಕ್ಕೆ ಪುನಃ ಪ್ರಾಪ್ತಿಯನ್ನು ಹೇಳಿರುವುದು ಸಂಗತವಾಗುವುದಿಲ್ಲ. ಏಕೆಂದರೆ ಸ್ವಪ್ನದಲ್ಲಿ ದೃಷ್ಟವಾದ ಅರ್ಥವು ಪುನಪುನಃ ಕಾಣುವುದಿಲ್ಲ ಎಂದು ಅಭಿಪ್ರಾಯ.

ಇತಿ ತತ್ರೈವ ತೇನೋಕ್ತವಚನಾನಿ ವಿಚಾರಯ ।
ನ ಚಾರಯ ಮತಿಂ ನೀಚಸ್ಯೋಚ್ಚಭಾವೇ ಕದಾಚನ ॥ ೪೦೨ ॥

**ಅರ್ಥ**– ಇತಿ = ಹೀಗೆ, ತತ್ರ ಏವ = ಪುರಂಜನೋಪಾಖ್ಯಾನದಲ್ಲೇ, ತೇನ = ನಾರದರಿಂದ ಮತ್ತು ಪರಮಾತ್ಮ ಹಂಸದಿಂದ, ಉಕ್ತವಚನಾನಿ = ಹೇಳಲ್ಪಟ್ಟ ಮಾತುಗಳನ್ನು ವಿಚಾರಯ =

ವಿಮರ್ಶಿಸು, ಕದಾಚನ = ಎಂದೂ, ನೀಚಸ್ಯ = ನೀಚನಿಗೆ, ಉಚ್ಚಭಾವೇ = ಉಚ್ಚತ್ವವಿದೆ ಎಂದು, ಮತಿಂ = ಆಲೋಚನೆಯನ್ನು, ನ ಚಾರಯ = ಹರಿಸಬೇಡ.

**ಅನುವಾದ–** ಹೀಗೆ ಅಲ್ಲಿಯೇ ನಾರದರಿಂದ ಮತ್ತು ಹಂಸದಿಂದ ಹೇಳಲ್ಪಟ್ಟ ಮಾತುಗಳನ್ನು ವಿಮರ್ಶಿಸು. ನೀಚನಾದ ಜೀವನಿಗೆ ಉಚ್ಚತ್ವವನ್ನು ಎಂದೂ ಯೋಚಿಸಬೇಡ.

**ಭಾವವಿಲಾಸಿನೀ–ಶ್ಲೋಕಚರ್ಚಾಮುಪಸಂಹರತಿ–ಇತೀತಿ** ॥ ತತ್ರ ಪೌರಂಜನೋಪಾಖ್ಯಾನೇ । ತೇನ ನಾರದೇನ ಮೈತ್ರೇಯೇಣ ಚ । ನೀಚಸ್ಯ ಜೀವಸ್ಯ ಉಚ್ಚಭಾವೇ ಬ್ರಹ್ಮಭಾವೇ ॥ ೪೦೨ ॥

**ಯಥೋಲ್ಮುಕಾದ್ ವಿಷ್ಫುಲಿಂಗಾದ್ ಧೂಮಾದ್ ವಾಪಿ ಸ್ವಸಂಭವಾತ್।**
**ಅಪ್ಯಾತ್ಮತ್ವೇನಾಭಿಮತಾದ್ ದಾಹಕೋಽಗ್ನಿಃ ಪೃಥಙ್ ಮತಃ ॥ ೪೦೩ ॥**

**ಭೂತೇಂದ್ರಿಯಾಂತಃಕರಣಾತ್ ಪ್ರಧಾನಾಜ್ಜೀವಸಂಜ್ಞಿತಾತ್ ।**
**ಆತ್ಮಾ ತಥಾ ಪೃಥಗ್‌ದ್ರಷ್ಟಾ ಭಗವಾನ್ ಬ್ರಹ್ಮಸಂಜ್ಞಿತಃ ॥ ೪೦೪ ॥**

**ಅರ್ಥ–** ಸ್ವಸಂಭವಾತ್ = ತನ್ನಿಂದ (ಅಗ್ನಿಯಿಂದ) ಹುಟ್ಟಿದ, ಆತ್ಮತ್ವೇನ = ತಾನು (ಅಗ್ನಿ) ಎಂದು, ಅಭಿಮತಾತ್ = (ಪಾಮರರಿಂದ) ತಿಳಿಯಲ್ಪಟ್ಟಿರುವ ಉಲ್ಮುಕಾದ್ = ಕೆಂಡದಿಂದ, ವಿಷ್ಫುಲಿಂಗಾತ್ = ಕಿಡಿಗಳಿಂದ, ಆಪಿ ವಾ = ಮತ್ತು, ಧೂಮಾದ್ = ಹೊಗೆಯಿಂದ, ದಾಹಕಃ ಅಗ್ನಿಃ = ದಾಹಕವಾದ ಅಗ್ನಿಯು, ಪೃಥಕ್ = ಬೇರೆ ಎಂದು, ಯಥಾ= ಹೇಗೆ, ಮತಃ = ತಿಳಿಯಲ್ಪಟ್ಟಿರುವುದೋ ತಥಾ = ಹಾಗೆ, ಭೂತೇಂದ್ರಿಯಾಂತಃಕರಣಾತ್ = ಪಂಚಭೂತ ಇಂದ್ರಿಯ ಅಂತಃಕರಣರೂಪವಾಗಿರುವ ಪ್ರಧಾನಾತ್ = ಪ್ರಕೃತಿಯಿಂದ (ಮತ್ತು) ಜೀವಸಂಜ್ಞಿತಾತ್ = ಜೀವ ಎಂಬ ಹೆಸರಿನ ಸಂಸಾರಿ ಚೇತನನಿಂದ, ದ್ರಷ್ಟಾ= ಸರ್ವಜ್ಞನಾದ, ಭಗವಾನ್ = ಷಡ್ಗುಣಸಂಪನ್ನನಾದ, ಬ್ರಹ್ಮಸಂಜ್ಞಿತಃ = ಬ್ರಹ್ಮ ಎಂಬ ಹೆಸರಿನ ಆತ್ಮಾ = ಚೇತನನು ಪೃಥಕ್ = ಬೇರೆ.

**ಅನುವಾದ–** ಅಗ್ನಿಯಿಂದ ಕೆಂಡ, ಕಿಡಿ, ಹೊಗೆ-ಇವು ಹುಟ್ಟುತ್ತವೆ. ಅಗ್ನಿಯಿಂದ ದಹಿಸಲ್ಪಡುವ ಕಾಷ್ಠವು ಕೆಂಡ (ಕೊಳ್ಳಿ). ಅಗ್ನಿಯ ಕಣ ಕಿಡಿ. ಈ ಮೂರನ್ನು ಅಗ್ನಿ ಎಂದೇ ಪಾಮರರು ಭಾವಿಸುತ್ತಾರೆ. ಅಗ್ನಿಯು ದಾಹಕ. ಕೆಂಡ ದಹಿಸಲ್ಪಡುವ ಕಾಷ್ಠ. ಸುಡುವ ಮತ್ತು ಸುಡಲ್ಪಡುವ ಪದಾರ್ಥಗಳಿಗೆ ಭೇದವನ್ನು ಪ್ರಾಜ್ಞರು ಗುರುತಿಸುತ್ತಾರೆ. ಅಗ್ನಿಯು ಜನಕ. ಧೂಮವು ಜನ್ಯ. ಜನಕ-ಜನ್ಯಗಳಿಗೆ ಭೇದವನ್ನು ಪ್ರಾಜ್ಞರು ಗುರುತಿಸುತ್ತಾರೆ.

(೧) ಪಂಚಭೂತಗಳು, ಹತ್ತು ಇಂದ್ರಿಯಗಳು ಮತ್ತು ಮನಸ್ಸು ಇವು ಪ್ರಕೃತಿಯ ವಿಕಾರಗಳು. ಆದ್ದರಿಂದ ಇವು ಪ್ರಕೃತಿ.

(೨) ಜೀವಾತ್ಮ

(೩) ಸರ್ವವ್ಯಾಪಿಯೂ, ನಿಯಾಮಕನೂ ಆದ ಪರಮಾತ್ಮನು ಸರ್ವಜ್ಞ ಷಡ್ಗುಣ ಸಂಪನ್ನ. ಇವನಿಗೆ ಬ್ರಹ್ಮ ಎಂದು ಹೆಸರು. ಕೆಂಡ ಮತ್ತು ಕಿಡಿಗಳು ದಾಹಕ ಅಗ್ನಿಯಿಂದ ಭಿನ್ನವಾಗಿರುವಂತೆ ಜನ್ಯಧೂಮವು ಜನಕ ಅಗ್ನಿಯಿಂದ ಭಿನ್ನವಾಗಿರುವಂತೆ ಪ್ರಕೃತಿ ಮತ್ತು ಜೀವಾತ್ಮರಿಂದ ಪರಮಾತ್ಮನು ಭಿನ್ನನಾಗಿದ್ದಾನೆ. (ಕಿಡಿಗಳು ಅಗ್ನಿಪುತ್ರರಿಂದ ಅಭಿಮನ್ಯವಾದುವುಗಳು ಎಂದು ಆಚಾರ್ಯರು ತಿಳಿಸಿದ್ದಾರೆ).

**ಭಾವವಿಲಾಸಿನೀ**– ಇದಾನೀಂ ತೃತೀಯಸ್ಕಂಧೇ ಕಪಿಲಾಖ್ಯಾನೇ ವಿದ್ಯಮಾನವಿಸ್ಪಷ್ಟಭೇದ ವಚನಮುದ್ಧರತಿ– **ಯಥೇತಿ** ॥ ಉಲ್ಮುಕಾತ್ ಅಂಗಾರಾತ್ । ಸ್ವಸಂಭವಾತ್ ಸ್ವಸ್ಮಾದಗ್ನೇಃ ಸಂಭವೋ ಯಸ್ಯ ಸಃ। ಅನೇನ ಜನ್ಯಜನಕಭಾವರೂಪಭೇದಕಧರ್ಮಂ ಸೂಚಯತಿ। ಆತ್ಮತ್ವೇನ ಅಗ್ನಿತ್ವೇನ । ವಹ್ನಿನಾ ದಹ್ಯಮಾನಕಾಷ್ಠಾದಿಷ್ವಯಮಗ್ನಿರಿತಿ ಲೋಕಸ್ಯಾಭಿಮಾನಾದಿತಿ ಭಾವಃ । ದಾಹಕ ಇತ್ಯನೇನ ತತ್ರಾಪಿ ದಾಹ್ಯದಾಹಕಭಾವರೂಪಭೇದಕಧರ್ಮಂ ಸೂಚಯತಿ । ಮತಃ ವಿವೇಕಿನಾಂ ಸಮ್ಮತಃ । ಉಲ್ಮುಕವಿಷ್ಫುಲಿಂಗಯೋಃ ಸಕಾಶಾದ್ದಾಹ್ಯದಾಹಕಭಾವೇನ ಪೃಥಕ್, ಧೂಮಾಜ್ಜನ್ಯಜನಕಭಾವೇನ ಪೃಥಗಿತಿ ವಿವೇಕಃ । ಪ್ರಧಾನಾತ್ ಪ್ರಕೃತೇಃ । ಜೀವ-ಸಂಜ್ಞಿತಾಚ್ಚೈತನ್ಯಾತ್ । ಆತ್ಮಾ ವ್ಯಾಪ್ತಃ। ದ್ರಷ್ಟಾ ಸಾಕ್ಷೀ ಭಗವಾನ್ ಷಡ್ಗುಣೈಶ್ವರ್ಯಪರಿ-ಪೂರ್ಣಃ । ಬ್ರಹ್ಮಸಂಜ್ಞಿತಃ ಪೂರ್ಣಗುಣಸಂಜ್ಞಿತಃ । ದ್ರಷ್ಟೃತ್ವಂ ಜಡಭೇದಕಮ್ । ಅನ್ಯಜ್ಜೀವಭೇದಕಂ । ತಥೋಲ್ಮುಕಾದಿವ ಭೂತೇಂದ್ರಿಯಾಂತಃಕರಣಾತ್ ಪೃಥಕ್ । ವಿಸ್ಫುಲಿಂಗಾದಿವ ಪ್ರಧಾನಾತ್ಪೃಥಕ್ । ಧೂಮಾದಿವ ಜೀವಾತ್ ಪೃಥಗಿತಿ । ಭಗವಾನಪ್ಯಗ್ನಿರಿವ ತ್ರಿತಯಾದಪಿ ಪೃಥಗಿತಿ ಯೋಜನಾ । ವಸ್ತುತಸ್ತು ಚೇತನಾಚೇತನಾತ್ಮಕ ಜಗತೋ ಭಿನ್ನ ಇತಿ ಭಾವಃ ॥ ೪೦೩-೪೦೪॥

**ವಿವರಣೆ** – ಈಗ ತೃತೀಯಸ್ಕಂಧದ ಕಪಿಲಾಖ್ಯಾನದಲ್ಲಿರುವ ಸ್ಪಷ್ಟವಾದ ಭೇದವಚನವನ್ನು ಉದಾಹರಿಸುತ್ತಾರೆ. 'ಉಲ್ಮುಕಾ' ಎಂದರೆ ಅಂಗಾರವು, 'ಸ್ವಸಂಭವ' ಎಂದರೆ ಅಗ್ನಿಯಿಂದ ಜನ್ಮವನ್ನು ಪಡೆಯುವುದರಿಂದ ಅಗ್ನಿ ಮತ್ತು ಅಂಗಾರಗಳಿಗೆ ಜನ್ಯಜನಕಭಾವರೂಪವಾದ ಭೇದಕಧರ್ಮವನ್ನು ಸೂಚಿಸುತ್ತಾರೆ. ಕಾಷ್ಠೌ = ಅಗ್ನ್ಯಜರಿಂದ ಅಗ್ನಿಯೆಂದೇ ತಿಳಿಯಲ್ಪಡುತ್ತದೆ. ಆದರೆ ಅಗ್ನಿಯು ದಾಹಕ, ಕಾಷ್ಠವು ದಾಹ್ಯ. ಇಲ್ಲಿಯೂ ದಾಹ್ಯದಾಹಕರೂಪವಾದ ಭೇದಕಧರ್ಮಗಳೇ ಇವೆ. ಧೂಮಕ್ಕೂ, ಅಗ್ನಿಗೂ ಜನ್ಯಜನಕಭಾವವು ಪ್ರಸಿದ್ಧವಾಗಿಯೇ ಇದೆ. ಅದರಂತೆ ಆತ್ಮಾನ್ = ವ್ಯಾಪ್ತನಾದ, ದ್ರಷ್ಟ = ಸಾಕ್ಷಿಯಾದ, ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಾದ, ಬ್ರಹ್ಮಸ್ರಂಹಿತಃ = ಪೂರ್ಣಗುಣನೆಂಬ ಹೆಸರನ್ನುಳ್ಳ ಪರಮಾತ್ಮನು 'ಪ್ರಧಾನ' ಎಂದರೆ ಪ್ರಕೃತಿಗಿಂತಲೂ ಮತ್ತು 'ಜೀವಸಂಜ್ಞಿತಾಚ್ಚೈತನ್ಯಾತ್' ಎಂದರೆ ಜೀವರಿಂದಲೂ

ಭಿನ್ನನಾದವನು. ಇಲ್ಲಿ ದ್ರಷ್ಟೃತ್ವವು ಜಡಭೇದಕಪ್ರಯೋಜಕವಾದ ಧರ್ಮ. ಉಳಿದ ಧರ್ಮಗಳು ಜೀವಭೇದಕಪ್ರಯೋಜಕವಾದವುಗಳು. ಉಲ್ಮುಖದಿಂದ ಅಗ್ನಿಯು ಭಿನ್ನನಾದಂತೆ ಭಗವಂತನು ಭೂತೇಂದ್ರಿಯಾಂತಃಕರಣದಿಂದ ಭಿನ್ನನಾಗಿದ್ದಾನೆ. ಅಗ್ನಿಯು ವಿಸ್ಫುಲಿಂಗದಿಂದ ಭಿನ್ನನಾದಂತೆ, ಭಗವಂತನು ಪ್ರಕೃತಿಯಿಂದ ಭಿನ್ನನಾಗಿದ್ದಾನೆ. ಅಗ್ನಿಯು ಧೂಮದಿಂದ ಭಿನ್ನವಾಗಿರುವಂತೆ ಪರಮಾತ್ಮನು ಜೀವನಿಂದ ಭಿನ್ನನಾಗಿದ್ದಾನೆ. ವಸ್ತುತಃ ಪರಮಾತ್ಮನು ಚೇತನಾಚೇತನಾತ್ಮಕವಾದ ಸಕಲ ಜಗತ್ತಿಗಿಂತಲೂ ಭಿನ್ನನಾಗಿದ್ದಾನೆ ಎಂದು ಅಭಿಪ್ರಾಯ.

ತೃತೀಯಸ್ಕಂಧಗೈಷಾ ವಾಗ್ ಜಡಾಜ್ಜೀವಾತ್ ಪೃಥಕ್ ಕೃತಮ್ ।
ಅದ್ವಿತೀಯಶ್ರುತೇರರ್ಥಂ ತೃತೀಯಂ ಬ್ರಹ್ಮ ಶಂಸತಿ ॥ ೪೦೫ ॥

**ಅರ್ಥ–** ತತೀಯಸ್ಕಂಧಗಾ = ಭಾಗವತ ಪುರಾಣದ ಮೂರನೆಯ ಸ್ಕಂದದಲ್ಲಿರುವ, ಏಷಾವಾಕ್ = ಈ ಮಾತು, ಜಡಾತ್ = ಜಡದಿಂದ, ಜೀವಾತ್ = ಜೀವನಿಂದ, ಪೃಥಕ್‌ಕೃತಂ = ಬೇರೆಯಾಗಿಸಲ್ಪಟ್ಟಿರುವ (ಆದ್ದರಿಂದಲೇ), ತೃತೀಯಂ ಬ್ರಹ್ಮ = ಮೂರನೆಯದಾದ ಬ್ರಹ್ಮವನ್ನು ಅದ್ವಿತೀಯಶ್ರುತೇಃ = ಏಕಮೇವಾ ದ್ವಿತೀಯಂ ಎಂಬ ಶ್ರುತಿಯ, ಅರ್ಥಂ = ಅರ್ಥ ಎಂದು, ಶಂಸತಿ = ಹೇಳುತ್ತದೆ.

**ಅನುವಾದ–** ೪೦೩, ೪೦೪ನೇ ಪದ್ಯಗಳು ಭಾಗವತ ತೃತೀಯಸ್ಕಂಧದಲ್ಲಿವೆ. ಇವು ಪರಬ್ರಹ್ಮನನ್ನು ಜಡ ಅಲ್ಲ, ಜೀವ ಅಲ್ಲ ಎಂದು ಹೇಳಿವೆ. ನೇತಿನೇತಿ ಆತ್ಮಾ ಗ್ರಾಹ್ಯಃ ಎಂಬ ಶ್ರುತಿಯೂ ಇದನ್ನು ಹೇಳಿದೆ. ಆದ್ದರಿಂದ ಪರಬ್ರಹ್ಮನು ಮೂರನೆಯ ವಿಧವಾಗಬೇಕು. ಶ್ರುತಿಯ ಅಭಿಪ್ರಾಯವನ್ನೇ ಭಾಗವತವು ಹೇಳಿದೆ. ಆದ್ದರಿಂದ ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಈ ಶ್ರುತಿಗೆ ದ್ವಿತೀಯನಲ್ಲದ ಬ್ರಹ್ಮನು ಒಬ್ಬನೇ ಎಂದು ಅರ್ಥ. ಜಡ-ಜೀವಗಳಿಂದ ಭಿನ್ನನಾದ ಬ್ರಹ್ಮನನ್ನು ದ್ವಿತೀಯನಲ್ಲ ಎಂದು ಶ್ರುತಿಯು ಹೇಳಿದಾಗ, ಪ್ರಥಮನಲ್ಲ ಎಂದೂ ಹೇಳಿದಂತೆಯೇ. ಪ್ರಥಮ-ದ್ವಿತೀಯ ಅಲ್ಲದವನು ತೃತೀಯ ಆಗಿರಲೇಬೇಕು. ಪ್ರಥಮ-ದ್ವಿತೀಯ ವರ್ಗಕ್ಕೆ ಸೇರಿದ ಜಡ ಮತ್ತು ಜೀವಗಳು ಅನೇಕ. ಆದರೆ ತೃತೀಯ ವಿಧದ ಬ್ರಹ್ಮನು ಒಬ್ಬನೇ.

ಹೀಗೆ, ಪ್ರಕೃತ ಭಾಗವತ ಪದ್ಯಗಳು ಏಕಮೇವಾದ್ವಿತೀಯಂ ಬ್ರಹ್ಮ - ಈ ಶ್ರುತಿಯು ಬ್ರಹ್ಮನನ್ನು ತೃತೀಯ ವಿಧ ಎಂದು ಹೇಳುತ್ತಿವೆ ಎಂದು ಪ್ರತಿಪಾದಿಸಿವೆ.

**ಭಾವವಿಲಾಸಿನೀ–** ಅನೇನೈವ ವಾಕ್ಯೇನ ಪ್ರಯೋಜನಾಂತರಂ ಚ ಸಿದ್ಧಮಿತ್ಯಾಹ –**ತೃತೀಯಸ್ಕಂಧೇತಿ** ॥ ಏಷಾ ವಾಕ್ ಜಡಾಜ್ಜೀವಾತ್ ಪೃಥಕ್ ಕೃತಮ್ । ಅತ ಏವ ತೃತೀಯಂ ಬ್ರಹ್ಮ ಅದ್ವಿತೀಯ-ಶ್ರುತೇರರ್ಥಂ ಶಂಸತೀತಿ ಯೋಜನಾ । ನೇತಿ ನೇತ್ಯಾತ್ಮಾಽಗೃಹ್ಯ ಇತಿ ಶ್ರುತ್ಯಾ ನಞ್‌ದ್ವಯೇನ ಜಡಂ ನ ಜೀವೋ ನೇತಿ ಆತ್ಮನಸ್ತೃತೀಯಕೋಟೌ ಪ್ರವೇಶನವತ್ ಮಯಾಪಿ ಪರಮಾತ್ಮನ-

ಸ್ತೃತೀಯಕೋಟೌ ಪ್ರವೇಶನಾತ್ ಏಕಮೇವಾದ್ವಿತೀಯಮಿತಿ ಶ್ರುತಿರಪಿ ಮತ್ಸಮಾಖ್ಯಯಾ ಬ್ರಹ್ಮ ದ್ವಿತೀಯಂ ನ ಕಿಂತು ತೃತೀಯಮೇವೇತಿ ಬ್ರಹ್ಮಣಸ್ತೃತೀಯಕೋಟೌ ಪ್ರವಿಷ್ಟತ್ವಮೇವ ವಕ್ತಿ ನತು ದ್ವಿತೀಯಾಭಾವಮಿತಿ ಸ್ವವಿರುದ್ಧೈಕ್ಯ ವಚನಸ್ಯ ಗತಿಕಥನಪೂರ್ವಕಮನಯಾ ವಾಚಾ ಭಗವತಿ ಜೀವಜಡಭೇದಃ ಸಾಧಿತ ಇತಿ ಭಾವಃ ॥ ೪೦೫ ॥

**ತಸ್ಮಾದ್ ಭೇದಮಭೇದೋಕ್ತೇರರ್ಥಂ ಚಾಹೇತಿ ಮೇ ಮತಿಃ॥ ೪೦೬ ॥**

**ಅರ್ಥ–** ತಸ್ಮಾದ್ = ಆದ್ದರಿಂದ, ಭಾಗವತ ಪದ್ಯಗಳು, ತಸ್ಮಾದ್ = ಜೀವ-ಜಡಗಳಿಂದ, ಭೇದಂ = ಭೇದವನ್ನು, ಅಭೇದೋಕ್ತೇಃ = ಅಭೇದವನ್ನು ಹೇಳುವಂತೆ ಕಾಣುವ, ಏಕಮೇವಾದ್ವಿತೀಯಂ ಶ್ರುತಿಯ, ಅರ್ಥಂ ಚ = ಅರ್ಥವೆಂದು, ಆಹ = ಹೇಳುತ್ತಿವೆ, ಇತಿ = ಎಂದು, ಮೇ = ನನ್ನ ಮತಿಃ = ಅಭಿಪ್ರಾಯ.

**ಅನುವಾದ–** ೪೦೫ನೇ ಪದ್ಯದಲ್ಲಿ ಹೇಳಿದ ಅಭಿಪ್ರಾಯದಂತೆ, ಭಾಗವತ ತೃತೀಯ ಸ್ಕಂಧದ ಎರಡು ಪದ್ಯಗಳು ಪರಮಾತ್ಮನಿಗೆ ಜೀವ-ಜಡಗಳಿಂದ ಭೇದವನ್ನು ಹೇಳುತ್ತವೆ; ಅಭೇದವನ್ನು ಹೇಳುವಂತೆ ಕಾಣುವ ಏಕಮೇವಾದ್ವಿತೀಯಮ್ ಎಂಬ ಶ್ರುತಿಗೆ ಭೇದವೆಂಬ ಅರ್ಥವನ್ನು ಹೇಳುತ್ತವೆ ಎಂದು ಯುಕ್ತಿಮಲ್ಲಿಕಾಕಾರರ ಅಭಿಪ್ರಾಯ.

**ಭಾವವಿಲಾಸಿನೀ–** ಏತದೇವ ವಿಶದಯತಿ – **ತಸ್ಮಾದಿತಿ** ॥ ತಸ್ಮಾದುಕ್ತವಿಧಯಾಽರ್ಥದ್ವಯಸ್ಯಾಪಿ ಲಾಭಾತ್ ॥ ೪೦೬ ॥

**ಅಪ್ಯಾತ್ಮತ್ವೇನಾಭಿಮತಾದಿತ್ಯಜ್ಞಾನ್ಯಭಿಮಾನಜಾಮ್ ।**
**ಅಶ್ರದ್ಧೇಯಾಮೈಕ್ಯಬುದ್ಧಿಂ ಗರ್ಹಾರ್ಥೋಽಪಿರಗರ್ಹಯತ್ ॥ ೪೦೭ ॥**

**ಅರ್ಥ–** ಅಪಿ ಆತ್ಮತ್ವೇನ ಅಭಿಮತಾದ್ = ಅಪಿ ಆತ್ಮತ್ವೇನ ಅಭಿಮತಾದ್ ಇತಿ = ಎಂಬ (ಉಕ್ತಿಯಲ್ಲಿರುವ), ಗರ್ಹಾರ್ಥಃ = ನಿಂದಾರ್ಥಕವಾದ, ಅಪಿಃ = ಅಪಿ ಎಂಬ ಅವ್ಯಯವು, ಅಜ್ಞಾನ್ಯಭಿಮಾನಜಾಮ್ = ಅಜ್ಞಾನಿಗೆ ಅಭಿಮಾನದಿಂದ ಹುಟ್ಟಿದ, ಅಶ್ರದ್ಧೇಯಾಂ = ಶ್ರದ್ಧೆಗೆ ಅರ್ಹವಲ್ಲದ, ಐಕ್ಯಬುದ್ಧಿಮ್ = ಐಕ್ಯಬುದ್ಧಿಯನ್ನು ಅಗರ್ಹಯತ್ = ನಿಂದಿಸಿದೆ.

**ಅನುವಾದ–** ೪೦೩ನೇ ಪದ್ಯವು ದೃಷ್ಟಾಂತವನ್ನೂ ೪೦೪ನೇ ಪದ್ಯವು ದಾರ್ಷ್ಟಾಂತಿಕವನ್ನೂ ಹೇಳುತ್ತವೆ. ದೃಷ್ಟಾಂತದಲ್ಲಿ ಅಪಿ ಆತ್ಮತ್ವೇನ ಅಭಿಮತಾದ್ ಎಂದು ಇದೆ. ಇದನ್ನು ಅಪಿ ಬ್ರಹ್ಮತ್ವೇನ ಅಭಿಮತಾದ್ ಎಂದು ಬದಲಿಸಿ ದಾರ್ಷ್ಟಾಂತಿಕದಲ್ಲಿ ಓದಿಕೊಳ್ಳಬೇಕು. ಇದು ಪ್ರಧಾನಾತ್ ಮತ್ತು ಜೀವಸಂಜ್ಞಿತಾತ್ ಪದಗಳಿಗೆ ಅನ್ವಯಿಸುತ್ತದೆ. ಬ್ರಹ್ಮ ಎಂದು ಅಭಿಮತವಾಗಿರುವ ಪ್ರಕೃತಿಯಿಂದ ಮತ್ತು ಜೀವನಿಂದ ಬ್ರಹ್ಮನು ಬೇರೆ ಎಂದು ೪೦೪ನೇ ಪದ್ಯದ

ಅರ್ಥವು ಲಭಿಸುತ್ತದೆ. ಇಷ್ಟು ಅರ್ಥವನ್ನು ತಿಳಿಸಲು ಬ್ರಹ್ಮತ್ವೇನ ಅಭಿಮತಾದ್ ಎಂದು ಸಾಕು. ಅಪಿ ಬೇಕಿಲ್ಲ ಎಂದು ಕಾಣುತ್ತದೆ. ನಿಜ. ಆದರೆ ಅಪಿ ಗೆ ಬೇರೆ ಪ್ರಯೋಜನವಿದೆ. ಅದ್ವಿತೀಯಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ ಮೊದಲಾದ ಶ್ರುತಿಗಳ ಅಭಿಪ್ರಾಯವನ್ನು ತಿಳಿಯದವರಿಗೆ ಜೀವ-ಬ್ರಹ್ಮರ ಐಕ್ಯದಲ್ಲಿ ಅಭಿನಿವೇಶವಿದೆ. ಅಜ್ಞಾನಮೂಲಕವಾದ ಈ ಅಭಿನಿವೇಶನವು ಪ್ರಮಾಣವಿರುದ್ಧವಾದ್ದರಿಂದ ನಿಂದ್ಯ. ಆದ್ದರಿಂದಲೇ ವಿಶ್ವಾಸಾರ್ಹವಲ್ಲ. ಅಪಿ ಎಂಬ ಅವ್ಯಯಕ್ಕೆ ನಿಂದೆಯೂ ಅರ್ಥ. ಐಕ್ಯದಲ್ಲಿ ಅಭಿನಿವೇಶವು ನಿಂದ್ಯ ಎಂದು ತಿಳಿಸುವುದಕ್ಕಾಗಿ ಭಾಗವತಕಾರರು ಅಪಿಯನ್ನು ಸೇರಿಸಿದ್ದಾರೆ.

**ಭಾವವಿಲಾಸಿನೀ–** ದೃಷ್ಟಾಂತೇ ಆತ್ಮತ್ವೇನಾಭಿಮತಾದಪೀತ್ಯುಕ್ತ್ವಾ ದಾರ್ಷ್ಟಾಂತಿಕೇಽಪಿ ಬ್ರಹ್ಮತ್ವೇನಾಭಿಮತಾದಪೀತಿ ಸಿದ್ಧ್ಯತಿ । ಅನ್ಯಥಾ ತಥೇತ್ಯುಕ್ತದೃಷ್ಟಾಂತ- ಸಾಮ್ಯಾಭಾವಪ್ರಸಂಗಾತ್ । ನಿಷೇಧಸ್ಯ ಪ್ರಸಕ್ತಿಪೂರ್ವಕತ್ವನಿಯಮಾಚ್ಚ । ತತಶ್ಚೇದಂ ಸಿದ್ಧಮಿತ್ಯಾಹ – **ಅಪೀತಿ** ॥ ಅಜ್ಞಾನ್ಯಭಿಮಾನಜಾಂ ಅಜ್ಞಾನಿನಾಂ ಅದ್ವಿತೀಯಂ ಬ್ರಹ್ಮೇತಿ ಶ್ರುತ್ಯಾ ಬ್ರಹ್ಮಣಿ ಜೀವಜಡಾಭೇದಂ ವದತಾಂ ಮಾಯಾವಾದಿನಾಮಭಿಮಾಸಜಾಮ್ । ಭಾಗವತವಾಕ್ಯಸಮಾಖ್ಯಯಾ ಸಂಭವದ್ವಾಕ್ಯಾರ್ಥಾಪರಿಜ್ಞಾನಾದಜ್ಞಾನಿನಾಮಿತ್ಯುಕ್ತಮ್ । ಅಪಿಃ ಸಂಭಾವನಾನ್ವವಸರ್ಗಗರ್ಹಾಸಮುಚ್ಚಯೇಷ್ವಿತಿ ವಚನಾತ್ ಗರ್ಹಾರ್ಥಃ ಅಪಿಃ ಅಪಿರಿತಿ ಶಬ್ದಃ ॥ ೪೦೭ ॥

**ಪರಪಕ್ಷಂ ಪ್ರತಿಕ್ಷಿಪ್ಯ ಸ್ವಪಕ್ಷಸ್ಥಾಪನೋದ್ಯತಾ ।**
**ಯದಿಯಂ ವಾಕ್ ತತ್ಶ್ಚೈಷಾ ಕೇಷಾಂ ತೋಷಾಯ ನೇಷ್ಯತೇ ॥ ೪೦೮ ॥**

**ಅರ್ಥ–** ಇಯಂ ವಾಕ್ = ಈ ಮಾತು (ಪದ್ಯ ೪೦೩, ೪೦೪) ಪರಪಕ್ಷಂ = ಬೇರೆ, ಭಾಗವತ ಸಿದ್ಧಾಂತಕ್ಕೆ ದೂರವಾದ, ಅಭಿಪ್ರಾಯವನ್ನು ಪ್ರತಿಕ್ಷಿಪ್ಯ = ದೂರ ಎಸೆದು, ಸ್ವಪಕ್ಷಸ್ಥಾಪನೋದ್ಯತಾ = ತನ್ನ ಸಿದ್ಧಾಂತದ ಸ್ಥಾಪನೆಗೆ ಪ್ರವೃತ್ತವಾಗಿದೆ. ತತಶ್ಚ = ಆದ್ದರಿಂದಲೂ, ಏಷಾ = ಈ ಮಾತು, ಕೇಷಾಂ = ಯಾರಿಗೆ ತಾನೇ, ತೋಷಾಯ ನ ಇಷ್ಯತೇ= ಸಂತೋಷಕರವಲ್ಲ.

**ಅನುವಾದ–** ೪೦೩, ೪೦೪ ಪದ್ಯಗಳು ಭಾಗವತ ಪದ್ಯಗಳು ಜೀವ-ಬ್ರಹ್ಮೈಕ್ಯವು ಭಾಗವತಕಾರರ ಪಕ್ಷವಲ್ಲ. ಜೀವ-ಬ್ರಹ್ಮಭೇದವು ಅವರ ಪಕ್ಷ. ಭಾಗವತಕಾರರಿಗೆ ಸಮ್ಮತವಲ್ಲದ ಪಕ್ಷವನ್ನು ದೂರ ಇಟ್ಟು ಅವರಿಗೆ ಸಮ್ಮತವಾದ ಪಕ್ಷವನ್ನು ಈ ಪದ್ಯಗಳು ಪ್ರತಿಪಾದಿಸುತ್ತಿವೆ. ಆದ್ದರಿಂದ ಈ ಪದ್ಯಗಳಿಂದ ಎಲ್ಲರಿಗೂ ಸಂತೋಷಕರ.

**ಭಾವವಿಲಾಸಿನೀ–** ಯದ್ಯಸ್ಮಾತ್ ॥ ೪೦೮ ॥

ಭಗವತ್ತ್ವೇನ ನೈರ್ಗುಣ್ಯ ಮಖಂಡಾರ್ಥಂ ಚ ಸಂಜ್ಞಯಾ ।
ನಿರಾಚಷ್ಟ ಬ್ರಹ್ಮನಿಷ್ಠಾಂ ಸ್ಪಷ್ಟಮಾಚಷ್ಟ ಚಾನ್ಯತಾಮ್ ॥
ಅನುವಾದಿತ್ವಶಂಕಾಯಾ ಗರ್ಭಸ್ರಾವೋಽಭವತ್ ತತಃ ॥ ೪೭೯ ॥

**ಅರ್ಥ–** ಭಗವತ್ತ್ವೇನ= ಐಶ್ವರ್ಯ ಮೊದಲಾದ ಆರು ಗುಣಗಳಿಂದ, ನೈರ್ಗುಣ್ಯಮ್= ನಿರ್ಗುಣಭಾವವನ್ನು, ಚ= ಮತ್ತು, ಸಂಜ್ಞಯಾ= ಬ್ರಹ್ಮ ಎಂಬ ವಾಚಕ ಶಬ್ದದಿಂದ, ಅಖಂಡಾರ್ಥಂ= ಬ್ರಹ್ಮನು ಧರ್ಮರಹಿತ ಎಂಬ ವಾದವನ್ನು (ಭಾಗವತ ೩.೨೯,೪೦ ಪದ್ಯವು) ನಿರಾಚಷ್ಟ= ನಿರಾಕರಿಸಿದೆ. ಚ= ಮತ್ತು, ಬ್ರಹ್ಮನಿಷ್ಠಾಂ= ಬ್ರಹ್ಮನಲ್ಲಿರುವ, ಅನ್ಯತಾಮ್= ಭೇದವನ್ನು, ಸ್ಪಷ್ಟಂ= ಸ್ಪಷ್ಟವಾಗಿ, ಆಚಷ್ಟ= ಹೇಳಿದೆ, ತತಃ= ಆದ್ದರಿಂದ, ಅನುವಾದಿತ್ವ ಶಂಕಾಯಾಃ= ಭೇದ ವಾಕ್ಯಗಳು ಅನುವಾದಕಗಳು ಎಂಬ ಶಂಕೆಗೆ, ಗರ್ಭಸ್ರಾವಃ= ಗರ್ಭಸ್ರಾವವು, ಅಭವತ್= ಆಯಿತು.

**ಅನುವಾದ–** ಯುಕ್ತಿಮಲ್ಲಿಕೆಯ ೪೦೪ನೇ ಪದ್ಯವು ಭಾಗವತದ ೩.೨೯.೪೦ನೇ ಪದ್ಯ. ಈ ಪದ್ಯದಲ್ಲಿರುವ ಭಗವಾನ್ ಪದದಲ್ಲಿರುವ ಭಗಶಬ್ದಕ್ಕೆ ಪೂರ್ಣ-ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ ಮತ್ತು ವಿಜ್ಞಾನ ಎಂದು ಅರ್ಥ. ಈ ಆರುಗುಣಗಳು ಪೂರ್ಣವಾಗಿ ಬ್ರಹ್ಮನಲ್ಲಿ ಇವೆ ಎಂದು ಭಗವಾನ್ ಪದದ ಅರ್ಥ. ಈ ಭಗವಾನ್ ಎಂಬ ಪದದಿಂದ ಭಾಗವತವು ಬ್ರಹ್ಮನು ನಿರ್ಗುಣ ಎಂಬ ವಿಚಾರವು ಸರಿಯಲ್ಲ ಎಂದು ಸ್ಪಷ್ಟವಾಗಿ ತಿಳಿಸಿದೆ.

ಇದೇ ಪದ್ಯದಲ್ಲಿ ಬ್ರಹ್ಮಸಂಜ್ಞಿತಃ ಎಂಬ ಪದವಿದೆ. ಈ ಪದದಲ್ಲಿ ಸಂಜ್ಞಾ ಶಬ್ದಕ್ಕೆ ಮುಖ್ಯವೃತ್ತಿಯಿಂದ ಅರ್ಥವನ್ನು ತಿಳಿಸುವ ಶಬ್ದ ಎಂದರೆ ವಾಚಕಶಬ್ದ ಎಂದು ಅರ್ಥ. ಬ್ರಹ್ಮಸಂಜ್ಞಿತಃ ಪದಕ್ಕೆ ಬ್ರಹ್ಮನ್ ಎಂಬ ವಾಚಕ ಶಬ್ದವುಳ್ಳವನು ಎಂದು ಅರ್ಥ. ಅದ್ವೈತದರ್ಶನವು ಯಾವ ಶಬ್ದವೂ ಬ್ರಹ್ಮವಾಚಕವಲ್ಲ; ಲಕ್ಷಣಾವೃತ್ತಿಯಿಂದಲೇ ಎಲ್ಲ ಶಬ್ದಗಳೂ ಬ್ರಹ್ಮಬೋಧಕಗಳು; ಆದ್ದರಿಂದ ಯಾವುದೇ ಶಬ್ದವು ಬ್ರಹ್ಮನಲ್ಲಿ ಗುಣವಿದೆ ಎಂದು ಬೋಧಿಸುವುದಿಲ್ಲ. ಆದ್ದರಿಂದ ಬ್ರಹ್ಮನಿರ್ಗುಣ ಅಖಂಡ, ವೇದವು ಅಖಂಡಾರ್ಥ ಎಂದು ಹೇಳುತ್ತದೆ. ಬ್ರಹ್ಮಸಂಜ್ಞಿತಃ ಪದವು ಬ್ರಹ್ಮನ್ ಶಬ್ದವು ವಾಚಕ ಎಂದು ಹೇಳುತ್ತಿದೆ. ಈ ಹೇಳಿಕೆಯಿಂದ ಭಾಗವತವು ವೈದಿಕ ಪದಗಳು ಅಖಂಡಾರ್ಥ ಎಂಬ ಅಭಿಪ್ರಾಯವನ್ನು ನಿರಾಕರಿಸಿದೆ. ಪ್ರಧಾನಾತ್ ಪೃಥಕ್, ಜೀವಸಂಜ್ಞಿತಾತ್ ಪೃಥಕ್ ಎಂದು ಈ ಪದ್ಯವು ಹೇಳಿದೆ. ಈ ಹೇಳಿಕೆಯಿಂದ ಬ್ರಹ್ಮನಲ್ಲಿ ಪ್ರಕೃತಿಯಿಂದ ಭೇದವಿದೆ, ಜೀವನಿಂದ ಭೇದವಿದೆ ಎಂದು ಅರ್ಥವಾಗುತ್ತದೆ. ಆದ್ದರಿಂದ ಭಾಗವತವು ಬ್ರಹ್ಮನಲ್ಲಿ ಜೀವ-ಜಡಾತ್ಮಕ ಪ್ರಪಂಚದಿಂದ ಭೇದವನ್ನು ಸ್ಪಷ್ಟವಾಗಿ ಹೇಳಿದೆ.

ಬೇರೆ ಪ್ರಮಾಣದಿಂದ ಸಿದ್ಧವಾದದ್ದನ್ನು ಹೇಳುವ ವಾಕ್ಯಗಳಿಗೆ ಅನುವಾದಕ ಎಂದು ಹೆಸರು; ಭೇದವು ಪ್ರತ್ಯಕ್ಷಪ್ರಮಾಣಸಿದ್ಧ; ಆದ್ದರಿಂದ ಜೀವ-ಈಶ್ವರರ ಭೇದವನ್ನು ಹೇಳುವ ಶ್ರುತಿವಾಕ್ಯಗಳು ಅನುವಾದಕ; ಆದ್ದರಿಂದ ಈ ವಾಕ್ಯಗಳು ಪ್ರಮಾಣವಲ್ಲ ಎಂದು ಅದ್ವೈತ ದರ್ಶನವು ಹೇಳುತ್ತದೆ.

ಪ್ರಕೃತ್ ಭಾಗವತ ಪದ್ಯವು ಬ್ರಹ್ಮನಲ್ಲಿ ಭೇದವಿದೆ ಎಂದು ಹೇಳುತ್ತಿದೆ. ಬ್ರಹ್ಮನು ಪ್ರತ್ಯಕ್ಷಸಿದ್ಧ ಅಲ್ಲ. ಆದ್ದರಿಂದ ಬ್ರಹ್ಮನಿಷ್ಠ ಭೇದವೂ ಪ್ರತ್ಯಕ್ಷಸಿದ್ಧವಲ್ಲ. ಆದ್ದರಿಂದ ಈ ಪದ್ಯವು ಪ್ರತ್ಯಕ್ಷಸಿದ್ಧ ಭೇದದ ಅನುವಾದಕ ಎಂಬ ಶಂಕೆಗೆ ಆಸ್ಪದವೇ ಇಲ್ಲ. ಅನುವಾದಿತ್ವ ಶಂಕೆಗೆ ಗರ್ಭಸ್ರಾವವಾಯಿತು ಎಂದರೆ ಅನುವಾದಕ ಎಂಬ ಶಂಕೆಯು ಹುಟ್ಟಲು ಆಸ್ಪದವಿಲ್ಲ ಎಂದು ಅರ್ಥ.

**ಭಾವವಿಲಾಸಿನೀ–** ಅಸ್ಮಾದೇವ ವಾಕ್ಯಾತ್ ಮತಾಂತರಖಂಡನಪ್ರಕಾರಮಪ್ಯಾಹ – **ಭಗವತ್ತ್ವೇನೇತಿ ॥** ಐಶ್ವರ್ಯಾದಿಷಡ್ಗುಣಪೂರ್ಣತ್ವೇನೇತ್ಯರ್ಥಃ । ಬ್ರಹ್ಮಸಂಜ್ಞಿತ ಇತ್ಯತ್ರೋಕ್ತ-ಸಂಜ್ಞಯಾ ವಾಚಕಶಬ್ದೇನ ಸಮ್ಯಕ್ ಮುಖ್ಯತಃ ಜ್ಞಾಯತೇ ಪ್ರತಿಪಾದ್ಯತೇಽರ್ಥೋಽನೇನೇತಿ ವ್ಯುತ್ಪತ್ತ್ಯಾ ಮುಖ್ಯವಾಚಕಶಬ್ದ ಏವ ಹಿ ಸಂಜ್ಞಾಪದೇನೋಚ್ಯತೇ । ಅಖಂಡಾರ್ಥಮ್ । ಅಖಂಡಃ ಸತ್ಯಾದಿ ಪದವಾಚ್ಯಸತ್ಯತ್ವಾದಿರಹಿತಃ ಅರ್ಥಸ್ಸತ್ಯಾದಿ ಪದಾನಾಮರ್ಥೋ ಯಸ್ಮಿನ್ವಾದೇ ಸೋಽಖಂಡಾರ್ಥಃ । ತಮ್ । ಬ್ರಹ್ಮಣಿ ಸಕಲಶಬ್ದಲಕ್ಷಣಾಪಕ್ಷಮಿತಿ ಯಾವತ್ । ಬ್ರಹ್ಮನಿಷ್ಠಾ-ಮನ್ಯತಾಂ ಸ್ಪಷ್ಟಮಾಚಷ್ಟ ಚ । ಪಂಚಮ್ಯಂತಜೀವಾದಿಭ್ಯಃ ಪ್ರತಿಯೋಗಿಭ್ಯೋ ಭಗವಾನ್ ಪೃಥಗಿತಿ ಭಗವನ್ನಿಷ್ಠಭೇದಸ್ಯೈವ ಸಾಧನಾತ್ । ತತಸ್ತಸ್ಮಾದ್ಧೇತೋಃ । ಅನುವಾದಿತ್ವಶಂಕಾಯಾಃ ಭೇದವಾಕ್ಯಸ್ಯ ಪ್ರತ್ಯಕ್ಷಸಿದ್ಧಭೇದಾನುವಾದಿತ್ವಶಂಕಯಾಃ । ಬ್ರಹ್ಮನಿಷ್ಠಭೇದಸ್ಯೈವ ಸಾಧಿತತ್ವೇನ ತಸ್ಯ ಚಾಸ್ಮದಾದಿಪ್ರತ್ಯಕ್ಷಾವಿಷಯತ್ವೇನೋಕ್ತಶಂಕಾಯಾ ಏವಾನುತ್ಥಾನಾದಿತಿ ಭಾವಃ ॥ ೪೯ ॥

**ವಿವರಣೆ–** ಭೇದವನ್ನು ಹೇಳುವ ಶ್ರುತಿಗಳು ಅನುವಾದಕಗಳು ಎಂಬ ಅದ್ವೈತದರ್ಶನದ ಚಿಂತನೆಯನ್ನು ಶ್ರೀಮಧ್ವಾಚಾರ್ಯರು ತಮ್ಮ ವಿಷ್ಣುತತ್ತ್ವ ವಿನಿರ್ಣಯದಲ್ಲಿ ತಲಸ್ಪರ್ಶಿಯಾಗಿ ವಿಮರ್ಶಿಸಿ ನಿರಾಕರಿಸಿದ್ದಾರೆ.

ನ ಚ ಜೀವೇಶ್ವರ ಭೇದಃ ಸಿದ್ಧ ಇತ್ಯನುವಾದಕತ್ವಂ ಭೇದವಾಕ್ಯಾನಾಮ್, ಆಗಮಂ ವಿನಾ ಈಶ್ವರಸ್ಯೈವಾಸಿದ್ಧೇಃ - ವಿಷ್ಣು ತತ್ತ್ವವಿನಿರ್ಣಯ.

ಈ ವಾಕ್ಯದಿಂದಲೇ ಮತಾಂತರಖಂಡನೆಯು ಸಿದ್ಧವಾಗುವ ರೀತಿಯನ್ನು ಹೇಳುತ್ತಾರೆ. 'ಭಗವಾನ್' ಎಂದರೆ ಷಡ್ಗುಣೈಶ್ವರ್ಯಸಂಪನ್ನನಾದವನು ಎಂದು ಅರ್ಥ. ಇದರಿಂದ ನಿರ್ಗುಣತ್ವವಾದವು ನಿರಾಕೃತವಾಗುತ್ತದೆ. 'ಬ್ರಹ್ಮಸಂಜ್ಞಿತಃ' ಎಂದರೆ ಬ್ರಹ್ಮಶಬ್ದದಿಂದ ವಾಚ್ಯನಾದವನು ಎಂದು ಅರ್ಥ. 'ಸಂಜ್ಞಾ' ಎಂಬ ಶಬ್ದವು ಮುಖ್ಯವಾಚಕಶಬ್ದ ಎಂದು ಅರ್ಥವನ್ನುಳ್ಳದ್ದಾಗಿದೆ. ಮುಖ್ಯವಾಚಕಶಬ್ದವಾಗಬೇಕಾದರೆ, ಆ ಶಬ್ದಪ್ರವೃತ್ತಿನಿಮಿತ್ತ-

ಧರ್ಮವನ್ನು ಆ ವಸ್ತುವು ಹೊಂದಿರಬೇಕು. ಆದ್ದರಿಂದ ಅಂತಹ ಧರ್ಮಗಳನ್ನು ಹೇಳಿರುವುದರಿಂದ ಅಖಂಡಾರ್ಥವಾದವು ನಿರಾಕರಿಸಲ್ಪಡುತ್ತದೆ. ಆದ್ದರಿಂದ ಎಲ್ಲ ಶಬ್ದಗಳಿಗೂ ಲಕ್ಷಣಾವನ್ನು ಮಾಡಿ, ಚೈತನ್ಯಮಾತ್ರಪರತ್ವವನ್ನು ಹೇಳಬೇಕೆಂಬ ಸಿದ್ಧಾಂತವು ನಿರಾಕೃತವಾಗುತ್ತದೆ. ಹಾಗೆಯೇ ಜೀವಾದಿಪ್ರತಿಯೋಗಿಕವಾದ ಭೇದವನ್ನು ಇಲ್ಲಿ ಹೇಳಿದೆ. ಅದು ಬ್ರಹ್ಮಧರ್ಮಕವಾದ ಭೇದವೇ ಆಗಿದೆ. ಬ್ರಹ್ಮನು ಅಪ್ರತ್ಯಕ್ಷನಾಗಿರುವುದರಿಂದ ಬ್ರಹ್ಮಧರ್ಮಕಭೇದವು ಪ್ರಮಾಂತರಪ್ರಾಪ್ತವಾಗಿಲ್ಲ. ಆದ್ದರಿಂದ ಈ ಭೇದವಾಕ್ಯವು ಅನುವಾದಕವಲ್ಲ. ಆದ್ದರಿಂದ 'ಎಲ್ಲ ಭೇದವಾಕ್ಯಗಳು ಅನುವಾದಗಳು' ಎಂಬ ಮತವು ನಿರಾಕೃತವಾಗುತ್ತದೆ ಎಂದು ಅಭಿಪ್ರಾಯ.

**ತತ್ವಸಂಖ್ಯಾನಕಾರ್ಯಾಯ ಯೋಽವತೀರ್ಣೋ ಮಹೀತಲೇ ।**
**ಸೋಂಬಾಂ ಪ್ರತ್ಯಾಹ ನಾತತ್ವಂ ತತ್ ಸರ್ವಂ ಪರಮಾರ್ಥಸತ್ ॥ ೪೧೦ ॥**

**ಅರ್ಥ–** ತತ್ವಸಂಖ್ಯಾನಕಾರ್ಯಾಯ = ತತ್ವಸಂಖ್ಯಾನಕ್ಕಾಗಿ, ಯಃ = ಯಾರು, ಮಹೀತಲೇ = ಭೂಮಿಯಲ್ಲಿ, ಅವತೀರ್ಣಃ = ಅವತರಿಸಿದನೋ, ಸಃ = ಅವನು (ಕಪಿಲನಾಮಕ ಪರಮಾತ್ಮನು), ಅಂಬಾಂ ಪ್ರತಿ = ತಾಯಿಗೆ, ಅತತ್ವಂ = ತತ್ವವಲ್ಲದ ವಿಷಯಗಳನ್ನು, ನ ಆಹ = ಹೇಳಲಿಲ್ಲ, ತತ್ = ಆದ್ದರಿಂದ, ಸರ್ವಂ = ಎಲ್ಲವೂ (ಕಪಿಲನಿಂದ ಉಪದಿಷ್ಟವಾದ ಎಲ್ಲ ವಿಷಯಗಳು) ಪರಮಾರ್ಥಸತ್= ಪಾರಮಾರ್ಥಿಕ ಸತ್ಯ.

**ಅನುವಾದ–** ತಾಯಿ ದೇವಹೂತಿಗೆ ತತ್ವಗಳನ್ನು ಉಪದೇಶಿಸುವುದಕ್ಕಾಗಿಯೇ ಪರಮಾತ್ಮನು ಅವತರಿಸಿದ್ದಾನೆ (ಈ ಅವತಾರಕ್ಕೆ ಕಪಿಲ ಎಂದು ಹೆಸರು). ಪರಮಾತ್ಮನು ತನ್ನ ತಾಯಿಗೆ ತತ್ವವಲ್ಲದ ವಿಷಯಗಳನ್ನು ಬೋಧಿಸುವ ಸಂದರ್ಭವಿಲ್ಲ. ಆದ್ದರಿಂದ ಕಪಿಲನು ಉಪದೇಶಿಸಿರುವ ಎಲ್ಲಾ ವಿಷಯಗಳೂ ಸತ್ಯ.

**ಭಾವವಿಲಾಸಿನೀ–** ಯಸ್ಮಾದತತ್ವಂ ನಾಽಹ । ತತ್ತಸ್ಮಾದಿತಿ ಸಂಬಂಧಃ । ಸರ್ವಂ ಭೇದಸದ್ಗುಣತ್ವ ಮುಖ್ಯವಾಚ್ಯತ್ವವಿರುದ್ಧಧರ್ಮಾದಿಕಮ್ ॥ ೪೧೦ ॥

**ಸ್ಪಷ್ಟದೃಷ್ಟಾಂತದೃಷ್ಟತ್ವಾದಂಬಾಸಂಬೋಧನತ್ವತಃ ।**
**ತತ್ವದೃಕ್ಕಪಿಲೋಕ್ತಿತ್ವಾತ್ ಸೇಯಂ ನೈವ ಪದಾಚ್ಚಲೇತ್ ॥ ೪೧೧ ॥**

**ಅರ್ಥ–** ಸ್ಪಷ್ಟದೃಷ್ಟಾಂತದೃಷ್ಟತ್ವಾತ್ = ಕೊಳ್ಳಿ, ಕಿಡಿಗಳಿಂದ ಅಗ್ನಿಯು ಪೃಥಕ್ ಎಂದು ದೃಷ್ಟಾಂತ, ಇಲ್ಲಿ ಪೃಥಕ್ ಪದವೇ ಸಂಗತ, ಹೀಗೆ ಸ್ಪಷ್ಟದೃಷ್ಟಾಂತದಲ್ಲಿ ಪೃಥಕ್ ಪದವೇ ನೋಡಲ್ಪಟ್ಟಿರುವುದರಿಂದ, ಅಂಬಾ ಸಂಬೋಧನತ್ವತಃ = ತಾಯಿಯನ್ನು ಕುರಿತು ಹೇಳಿರುವುದರಿಂದ, ತತ್ವದೃಕ್ಕಪಿಲೋಕ್ತಿತ್ವಾತ್ = ತತ್ವದರ್ಶಿಯಾಧ ಕಪಿಲನ ಉಕ್ತಿಯಾದ್ದರಿಂದ, ಸಾ ಇಯಂ = ಈ ಉಕ್ತಿಯು (ಆತ್ಮಾ ತಥಾ ಪೃಥಗ್ ದ್ರಷ್ಟಾ) ಪದಾತ್ = ಪೃಥಕ್ ಎಂಬ ಪದದಿಂದ, ನ ಚಲೇದ್ ಏವ = ದೂರಹೋಗುವುದೇ ಇಲ್ಲ.

**ಅನುವಾದ–** ಭಾಗವತ ಪುರಾಣದ ೩.೨೮.೩೯ ನೆಯ ಅಥವಾ ಭೇದ ಸೌರಭದ ೪೦೩, ೪೦೪ನೆ ಪದ್ಯಗಳು ಬ್ರಹ್ಮನಿಗೆ ಜೀವ-ಜಡಗಳಿಂದ ಭೇದವನ್ನು ಪ್ರತಿಪಾದಿಸುತ್ತವೋ? ಅಥವಾ ಅಭೇದವನ್ನೋ? ೪೦೪ನೆ ಪದ್ಯದಲ್ಲಿರುವ ತಥಾಪೃಥಕ್ ಪದಗಳನ್ನು ತಥಾ ಅಪೃಥಕ್ ಎಂದು ಬಿಡಿಸಬಹುದು, ಪೃಥಕ್ ಎಂದೂ ಬಿಡಿಸಬಹುದು. ಅಪೃಥಕ್ ಎಂದು ಬಿಡಿಸಿದರೆ ಅಭೇದ ಪ್ರತಿಪಾದನೆ ಎಂದು, ಪೃಥಕ್ ಎಂದು ಬಿಡಿಸಿದರೆ ಭೇದಪ್ರತಿಪಾದನೆ ಎಂದೂ ಅರ್ಥವಾಗುತ್ತದೆ. ಆದ್ದರಿಂದ ಈ ಸಂಶಯ.

ಭೇದವನ್ನು ಪ್ರತಿಪಾದಿಸುತ್ತವೆ. ೪೦೩ನೆ ಪದ್ಯದಲಿ ಕೊಳ್ಳಿ, ಕಿಡಿ ಮತ್ತು ಅಗ್ನಿಗಳ ದೃಷ್ಟಾಂತವನ್ನು ಹೇಳಲಾಗಿದೆ. ಕೊಳ್ಳಿ, ಕಿಡಿಗಳಿಂದ ಅಗ್ನಿಯು ಭಿನ್ನ ಎಂದು ಸ್ಪಷ್ಟ ಬಹಳ ಸ್ಪಷ್ಟವಾಗಿ ಭಿನ್ನವಾಗಿರುವ ವಸ್ತುಗಳ ದೃಷ್ಟಾಂತವನ್ನು ಹೇಳಿ ಜೀವ, ಜಡ-ಬ್ರಹ್ಮರನ್ನು ಅಪೃಥಕ್ ಎಂದು ಹೇಳುವುದು ಅತ್ಯಂತ ಅಸಂಗತ. ಆದ್ದರಿಂದ ಪೃಥಕ್ ಎಂದೇ ಬಿಡಿಸಬೇಕು. ಬ್ರಹ್ಮನು ಜೀವ-ಜಡದಿಂದ ಭಿನ್ನ ಎಂದು ಇದರಿಂದ ಅರ್ಥವಾಗುತ್ತದೆ. ಈ ಅರ್ಥವು ದೃಷ್ಟಾಂತಕ್ಕೆ ಅನುಗುಣವಾಗಿದೆ.

ಇದು ವ್ಯಾವಹಾರಿಕ ಭೇದದ ಉಪದೇಶ; ಮುಕ್ತಿಯವರೆಗೆ ಮಾತ್ರವೇ ಈ ಭೇದವಿರುತ್ತದೆ ಎಂದು ಹೇಳುವಂತಿಲ್ಲ. ಇದು ತಾಯಿಗೆ ಮಾಡಿರುವ ಉಪದೇಶ. ತತ್ತ್ವದರ್ಶಿಕಪಿಲನು ಮಾಡಿರುವ ಉಪದೇಶ. ತತ್ತ್ವದರ್ಶಿಯು ಅತತ್ತ್ವವನ್ನು ಬೋಧಿಸಲಾರ. ಅದೂ ತಾಯಿಗೆ. ಆದ್ದರಿಂದ ಮುಕ್ತಿಯಲ್ಲೂ ಇರುವ ಭೇದವನ್ನು ಇಲ್ಲಿ ಉಪದೇಶಿಸಲಾಗಿದೆ. ಪೃಥಕ್ ಪದದಿಂದ ತಿಳಿಸಲ್ಪಡುವ ಭೇದವು ಮುಕ್ತಿದೆಶೆಯಲ್ಲಿ ಇಲ್ಲವಾಗುವುದಿಲ್ಲ.

**ಭಾವವಿಲಾಸಿನೀ–** ಶಂಕಾಂತರಖಂಡನಂ ಚ ಸೂಚಯನ್ನುಕ್ತಾರ್ಥಮುಪಸಂಹರತಿ– **ಸ್ಪಷ್ಟ-ದೃಷ್ಟಾಂತೇತಿ ॥** ಸೇಯಂ ವಾಕ್ ದಾಹಕೋಽಗ್ನಿಃ ಪೃಥಗಿತಿ ಸ್ಪಷ್ಟಂ ದೃಷ್ಟಾಂತೇ ಪೃಥಕ್ಪದವತ್ತಯಾ ದೃಷ್ಟತ್ವಾತ್ । ಆತ್ಮಾ ತಥಾ ಪೃಥಕ್ ದ್ರಷ್ಟೇತಿ ದಾರ್ಷ್ಟಾಂತಿಕೇಽಪಿ ಅಸ್ಮಾದುಕ್ತಾತ್ ಪೃಥಗಿತಿ ಪದಾತ್ ನ ಚಲೇತ್ । ಪೃಥಗಿತಿ ಪದಂ ತ್ಯಕ್ತ್ವಾಽಪೃಥಗಿತಿ ಪದಚ್ಛೇದಂ ನ ಪ್ರಾಪ್ನುಯಾದಿ-ತ್ಯರ್ಥಃ । ತಥಾ ಸತಿ ದೃಷ್ಟಾಂತಾನಾನುಗುಣ್ಯಾದಿತಿ ಭಾವಃ । ಉತ್ತರವಿಶೇಷಣದ್ವಯಾತ್ । ಪದಾನ್ಮುಕ್ತಿಪದಾತ್ । ಮುಕ್ತಿಸ್ಥಾನಾದಿತಿ ಯಾವತ್ । ನ ಚಲೇತ್ ಪಾರಮಾರ್ಥಿಕತಯಾ ಮುಕ್ತಿ-ಕಾಲೀನಮೇವ ಭೇದಂ ಪ್ರತಿಪಾದಯೇತ್ । ನ ತ್ವಮುಕ್ತಿಕಾಲೀನಮಿತಿ ಭಾವಃ ॥ ೪೧೧ ॥

**ವಿವರಣೆ–** ಶಂಕಾಂತರ ವ್ಯಾಖ್ಯಾನವನ್ನು ಮಾಡುತ್ತಾ, ಈ ಶ್ಲೋಕದ ವ್ಯಾಖ್ಯಾನವನ್ನು ಉಪಸಂಹಾರ ಮಾಡುತ್ತಾರೆ. ದೃಷ್ಟಾಂತವಾದ ಅಗ್ನಿಯಲ್ಲಿ ಪೃಥಕ್ ಎಂದು ಸ್ಪಷ್ಟವಾಗಿ ಹೇಳಿರುವುದರಿಂದ, ದಾರ್ಷ್ಟಾಂತಿಕವಾದ ಆತ್ಮದಲ್ಲಿಯೂ ಪೃಥಕ್ ಎಂಬ ಪದವನ್ನೇ

ತೆಗೆದುಕೊಳ್ಳಬೇಕು. ಅದನ್ನು ಬಿಟ್ಟು, 'ಆತ್ಮಾ ತಥಾ ಪೃಥಕ್ ದೃಷ್ಟಾ ' ಎಂಬಲ್ಲಿ 'ಅಪೃಥಕ್' ಎಂದು ಪದಚ್ಛೇದವನ್ನು ಮಾಡಬಾರದು. ಹಾಗೇ ಮಾಡಿದರೆ ದೃಷ್ಟಾಂತವು ಅನನುಗುಣವಾಗುತ್ತದೆ. ಇದು ಸರ್ವಜ್ಞನಾದ ಕಪಿಲನು ತಾಯಿಯನ್ನು ಕುರಿತು ಉಪದೇಶ ಮಾಡಿದ ವಚನವಾದ್ದರಿಂದ ಯಥಾರ್ಥವಾದುದು. ಆದ್ದರಿಂದ 'ಪದಾತ್' ಎಂದರೆ ಮುಕ್ತಿಸ್ಥಾನದಿಂದಲೂ 'ನೈವಚಲೇತ್' ಈ ಭೇದವು ಚಲಿಸುವುದಿಲ್ಲ. ಎಂದರೆ ಈ ಭೇದವು ಮುಕ್ತಿಕಾಲದಲ್ಲಿಯೂ ಇರುವುದರಿಂದ ಪಾರಮಾರ್ಥಿಕವಾದುದು ಎಂದು ಅಭಿಪ್ರಾಯ.

**ಅಸ್ಪಷ್ಟಹಂಸವಾಕ್ ತಸ್ಮಾದಸ್ಮಾತ್ ತದ್ವಿಸ್ಪಷ್ಟವಾಕ್ಯತಃ ।**
**ಅವಿನಾಭಾವಮೇವಾಹ ತತ್ ಸರ್ವಮತಿಮಂಗಲಮ್ ॥ ೪೧೨ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ಅಸ್ಪಷ್ಟಹಂಸವಾಕ್ = ಅಸ್ಪಷ್ಟವಾದ ಪರಮಾತ್ಮ ಹಂಸದ ಮಾತು (ಭಾಗವತ ೪.೨೮.೬೨, ಭೇದಸೌರಭ-೩೮೫) ಅಸ್ಮಾದ್ = ಈ (ಭೇದಸೌರಭ ೪೦೩, ೪೦೪), ತದ್ವಿಸ್ಪಷ್ಟವಾಕ್ಯತಃ = ಕಪಿಲರೂಪಿಯ ಬಹಳ ಸ್ಪಷ್ಟವಾಕ್ಯದಿಂದ = ಬಹಳ ಸ್ಪಷ್ಟವಾಕ್ಯದ ಬೆಳಕಿನಲ್ಲಿ, ಅವಿನಾಭಾವಮ್ ಏವ = ಜೀವಾತ್ಮನಿಗೆ ಪರಮಾತ್ಮನಿಂದ ಅವಿನಾಭಾವವನ್ನೇ, ಆಹ = ಹೇಳುತ್ತದೆ. ತತ್ = ಆದ್ದರಿಂದ, ಸರ್ವಂ = ಎಲ್ಲ ಭಾಗವತ ವಾಕ್ಯಗಳೂ, ಅತಿಮಂಗಲಮ್ = ಪರಮಮಂಗಲವೇ ಆಗಿವೆ.

**ಅನುವಾದ–** ಅಹಂ ಭವಾನ್ನಚಾನ್ಯಸ್ತ್ವಂ..... (ಭಾಗವತ ೪.೨೮.೬೨, ಭೇದಸೌರಭ ೩೮೫) - ಈ ಪದ್ಯವು ಪರಮಾತ್ಮ ಮತ್ತು ಜೀವಾತ್ಮರ ಭೇದವನ್ನು ಪ್ರತಿಪಾದಿಸುವುದೋ? ಅಥವಾ ಅಭೇದವನ್ನೋ? - ಈ ಪದ್ಯದ ಪದಗಳ ವಿನ್ಯಾಸವು ಈ ಸಂಶಯಕ್ಕೆ ಅವಕಾಶವನ್ನು ಕೊಡುತ್ತದೆ. ತೃತೀಯಸ್ಕಂಧದ ೩.೨೯-೩೯,೪೦ ನೆಯ ಅಥವಾ ಭೇದಸೌರಭದ ೪೦೩, ೪೦೪ನೇ ಪದ್ಯಗಳು ಭೇದಮೂಲವಾದ ದೃಷ್ಟಾಂತದ ಮೂಲಕ ಪರಮಾತ್ಮನಿಗೆ ಜೀವ-ಜಡಗಳಿಂದ ಭೇದವನ್ನು ಹೇಳಿದೆ. ಇಲ್ಲಿ ಯಾವ ಅಸ್ಪಷ್ಟತೆಯೂ ಇಲ್ಲ. ತೃತೀಯಸ್ಕಂಧದ ಈ ಉಕ್ತಿಗಳು ಪರಮಾತ್ಮನ ಉಪದೇಶ. ನಾಲ್ಕನೆಯ ಸ್ಕಂಧದ ಅಹಂ ಭವಾನ್... ಇತ್ಯಾದಿ ಉಕ್ತಿಗಳೂ ಪರಮಾತ್ಮನ ಉಪದೇಶ. ಇವು ಉಪದೇಶ ಪಡೆಯುವವರನ್ನು ಅನುಗ್ರಹಿಸುವುದಕ್ಕಾಗಿಯೇ ಮಾಡಿದ ಉಪದೇಶಗಳು. ಆದ್ದರಿಂದ ಎರಡು ಉಪದೇಶಗಳು ಪರಸ್ಪರ ವಿರುದ್ಧವಾಗಿರುವ ಸಾಧ್ಯತೆಯು ಸರ್ವಥಾ ಇಲ್ಲ. ಆದ್ದರಿಂದ ಸ್ಪಷ್ಟ ವಚನಕ್ಕೆ ಅನುಗುಣವಾಗಿ ಅಸ್ಪಷ್ಟ ವಚನದ ಅರ್ಥವನ್ನು ನಿರ್ಣಯಿಸಬೇಕು. ಆದ್ದರಿಂದ ಪರಮಾತ್ಮ ಹಂಸವು ಜೀವಹಂಸಕ್ಕೆ ಜೀವ-ಪರಮಾತ್ಮರ ಭೇದವನ್ನೇ ಉಪದೇಶಿಸಿದೆ. ಪೂರ್ವಾಪರ ವಿರೋಧವಿಲ್ಲದ ಅರ್ಥದ ದರ್ಶನವು ಮಂಗಲಕರ. ಈ ದರ್ಶನದಿಂದ ಆಗುವ ಪರಮಾತ್ಮನ ಮಹಿಮೆಯ ಜ್ಞಾನವು ಅತಿಮಂಗಲಕರ.

**ಭಾವವಿಲಾಸಿನೀ**– ಅನಯೈವ ವಾಚಾ ಪ್ರಯೋಜನಾನಂತರಂ ಚ ಸಿದ್ಧಮಿತ್ಯಾಹ – **ಅಸ್ಪಷ್ಟೇತಿ** ॥ ಅಸ್ಮಾದಿದಾನೀಮುಕ್ತಾತ್ ತೃತೀಯಸ್ಕಂಧಗತ್ವೇನ ಚತುರ್ಥಸ್ಕಂಧಗಹಂಸವಾಕ್ಯಾತ್ ಪೂರ್ವ-ಕಾಲೀನಾದ್ವಾ। ಯಸ್ಮಾದವಿನಾಭಾವಮೇವಾಹ । ತತ್ತಸ್ಮಾತ್ ಸರ್ವಂ ಭಾಗವತವಾಕ್ಯಮತಿ-ಮಂಗಲಂ ಭಗವತೋ ಮಹಿಮ್ನ ಏವ ಪ್ರತಿಪಾದಕತ್ವೇನ ಪರಮಮಂಗಲಮಿತ್ಯರ್ಥಃ ॥ ೪೧೨ ॥

**ಮತಿಭೇದೋಽಪಿ ಭೇದೇ ಸ್ಯಾನ್ನೈಕದೈಕಸ್ಯ ಧೀರ್ದ್ವಿಧಾ ॥ ೪೧೩ ॥**

**ಅರ್ಥ**– ಮತಿಭೇದಃ ಅಪಿ = ಭಿನ್ನಾಭಿಪ್ರಾಯವೂ, ಭೇದೇ (ಸತಿ) ವ್ಯಕ್ತಿಗಳು ಬೇರೆ ಬೇರೆ ಆಗಿದ್ದಾಗ ಮಾತ್ರ, ಸ್ಯಾತ್ = ಉಪಪನ್ನವಾಗುವುದು. ಏಕಸ್ಯ = ಒಬ್ಬನ, ಧೀಃ= ಬುದ್ಧಿಯು = ಅಭಿಪ್ರಾಯವು, ಏಕದಾ = ಏಕ ಕಾಲದಲ್ಲಿ, ದ್ವಿಧಾ = ಎರಡು ವಿಧವಾದದ್ದು ನ = ಆಗುವುದಿಲ್ಲ.

**ಅನುವಾದ**– ಲೋಕದಲ್ಲಿ ಭಿನ್ನ ಅಭಿಪ್ರಾಯಗಳನ್ನು ಗಮನಿಸಿದ್ದೇವೆ. ಹೇಗೆ? (೧) ಏಕಕಾಲದಲ್ಲಿ ಬೇರೆ ಬೇರೆ ವ್ಯಕ್ತಿಗಳಲ್ಲಿ. (೨) ಒಬ್ಬನೇ ವ್ಯಕ್ತಿಗೆ ಬೇರೆ ಬೇರೆ ಕಾಲಗಳಲ್ಲಿ, ಒಬ್ಬನೇ ವ್ಯಕ್ತಿಗೆ ಏಕಕಾಲದಲ್ಲಿ, ಯಾವುದೇ ವಿಷಯದಲ್ಲಿ ಭಿನ್ನ ಅಭಿಪ್ರಾಯವು ಇರುವುದು ಅಸಂಭಾವಿತ.

**ಭಾವವಿಲಾಸಿನೀ**– ನಿರವಕಾಶಭೇದಶ್ರುತಿವಿರುದ್ಧತ್ವಾಚ್ಚ ಸಾವಕಾಶೈಕ್ಯವಾಕ್ಯಾನಿ ನ ಸ್ವಾರ್ಥ-ಪರಾಣೀತಿ ವಕ್ತುಂ ದ್ವಾಸುಪರ್ಣೇತ್ಯಾದಿ ಭೇದಶ್ರುತೇಃ ಸುಪರ್ಣಾವೇತಾವಿತಿ ತತ್-ಸಮಾಖ್ಯಾಸ್ಮೃತೇಶ್ಚ ನಿರವಕಾಶತಾಮುಪಪಾದಯತಿ – **ಮತಿಭೇದೇ ಇತಿ** ॥ ಭೇದಸ್ವರೂಪಭೇದೇ ಸತಿ । ಏಕದಾ । ಏಕಸ್ಯ ಧೀರ್ದ್ವಿಧಾ ನ ॥ ೪೧೩ ॥

**ವಿವರಣೆ**– ಭಿನ್ನಾಭಿಪ್ರಾಯವು ಎರಡು ರೀತಿಯಿಂದ ಇರಬಹುದು. ಮೂರನೆಯ ರೀತಿಯು ಇಲ್ಲ. ಎರಡು ರೀತಿಯನ್ನು ಈ ಪದ್ಯವು ವಿಶದಪಡಿಸಿದೆ.

ಆಥರ್ವಣೋಪನಿಷತ್ತಿನಲ್ಲಿರುವ ದ್ವಾಸುಪರ್ಣಾ ಶ್ರುತಿಯನ್ನು ವಿಮರ್ಶಿಸಲು ಈ ವಿಶದೀಕರಣವು ಉಪಯುಕ್ತ.

**ಯುಗಪನ್ಮತಿಭೇದೋ ವಾ ಯುಗಪತ್ ಸ್ಥಾನಭಿನ್ನತಾ ।**
**ವೈಲಕ್ಷಣ್ಯಂ ಚ ಯುಗಪದ್ ಭಿನ್ನಯೋರೇವ ನಾನ್ಯಥಾ ॥ ೪೧೪ ॥**

**ಅರ್ಥ**– ಯುಗಪತ್ = ಏಕಕಾಲದಲ್ಲಿ, ಮತಿಭೇದಃ ಭಿನ್ನಾಭಿಪ್ರಾಯವು, ವಾ = ಮತ್ತು, ಯುಗಪತ್ = ಏಕಕಾಲದಲ್ಲಿ, ಸ್ಥಾನಭಿನ್ನತಾ = ಸ್ಥಾನಭೇದವು, ಚ = ಮತ್ತು, ಯುಗಪದ್ = ಏಕಕಾಲದಲ್ಲಿ, ವೈಲಕ್ಷಣ್ಯಂ = ವಿರುದ್ಧ ಧರ್ಮಗಳು, ಭಿನ್ನಯೋಃ ಏವ = ಪರಸ್ಪರ ಭಿನ್ನರಾದ ಇಬ್ಬರು ವ್ಯಕ್ತಿಗಳಲ್ಲಿ ಅಥವಾ ಎರಡು ವಸ್ತುಗಳಲ್ಲಿ (ಇರಬಹುದು) ಅನ್ಯಥಾ = ಬೇರೆ ರೀತಿಯಿಂದ, ನ = ಅಲ್ಲ.

**ಅನುವಾದ–** (೧) ಏಕಕಾಲದಲ್ಲಿ ಭಿನ್ನಾಭಿಪ್ರಾಯ (೨) ಏಕಕಾಲದಲ್ಲಿ ಬೇರೆ ಬೇರೆ ಸ್ಥಾನ (೩) ಏಕಕಾಲದಲ್ಲಿ ವಿರುದ್ಧ ಧರ್ಮಗಳು - ಈ ಮೂರು ಪರಸ್ಪರ ಭಿನ್ನರಾದ ಎರಡು ಅಥವಾ ಹೆಚ್ಚು ವ್ಯಕ್ತಿಗಳಲ್ಲಿ ಅಥವಾ ವಸ್ತುಗಳಲ್ಲಿ ಇರಬಹುದು. ಏಕಕಾಲದಲ್ಲಿ ಒಬ್ಬನಲ್ಲಿ ಅಥವಾ ಒಂದೇ ವಸ್ತುವಿನಲ್ಲಿ ಇವು ಅಸಂಭಾವಿತ. (೧) ಒಬ್ಬನೇ ವ್ಯಕ್ತಿಯಲ್ಲಿ ಏಕಕಾಲದಲ್ಲಿ ಭಿನ್ನಾಭಿಪ್ರಾಯವು ಇರುವುದಿಲ್ಲ. ಒಬ್ಬನೇ ವ್ಯಕ್ತಿ ಏಕಕಾಲದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಇರುವುದಿಲ್ಲ. ಒಬ್ಬನೇ ವ್ಯಕ್ತಿಯಲ್ಲಿ ಏಕಕಾಲದಲ್ಲಿ ನಿರಪೇಕ್ಷ ವಿರುದ್ಧ ಧರ್ಮಗಳು ಇರುವುದಿಲ್ಲ.

(೨) ಒಂದೇ ವಸ್ತುವು ಏಕಕಾಲದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಇರುವುದಿಲ್ಲ. ಒಂದೇ ವಸ್ತುವಿನಲ್ಲಿ ಏಕಕಾಲದಲ್ಲಿ ನಿರಪೇಕ್ಷ ವಿರುದ್ಧ ಧರ್ಮಗಳು ಇರುವುದಿಲ್ಲ.

ಆದ್ದರಿಂದ ಏಕಕಾಲದಲ್ಲಿ ಭಿನ್ನಾಭಿಪ್ರಾಯವು ವ್ಯಕ್ತಿಗಳ ಭೇದಕ್ಕೆ ಸಾಧಕ. ಏಕಕಾಲದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಇರುವಿಕೆಯು ವ್ಯಕ್ತಿ/ ವಸ್ತುಗಳ ಭೇದವನ್ನು ಸಾಧಿಸುವ ಪ್ರಮಾಣ. ಏಕಕಾಲದಲ್ಲಿ ಇರುವ ನಿರಪೇಕ್ಷ ವಿರುದ್ಧ ಧರ್ಮಗಳೂ ಕೂಡ ವ್ಯಕ್ತಿ/ ವಸ್ತುಗಳ ಭೇದವನ್ನು ಸಾಧಿಸುವ ಪ್ರಮಾಣ.

**ಭಾವವಿಲಾಸಿನೀ–** ಭಿನ್ನಯೋಃ ಸ್ವರೂಪಭೇದಸಹಿತಯೋಃ । ಅನ್ಯಥಾ ಸ್ವರೂಪಭೇದಾಭಾವೇನ ॥ ೪೧೪ ॥

**ವಿವರಣೆ–** ಈ ಪದ್ಯವು ಲೋಕಸಿದ್ಧವಾದ ಭೇದವನ್ನು ಸಾಧಿಸುವ ಸೂತ್ರವನ್ನು ವಿಶದಪಡಿಸಿದೆ.

ತದ್ ಭೇದಶ್ರುತಿಸುಂದರ್ಯಾಃ ಸ್ವಾರ್ಥಃ ಸೂತ್ರಾಯತೇ ಗಲೇ ।
ಉಕ್ತಾರ್ಥೇಷು ವಿನೀತಾಪಿ ಯದ್ ಭೇದಂ ನೈವ ಮುಂಚತಿ ॥ ೪೧೫ ॥

**ಅರ್ಥ–** ತದ್ = ಆದ್ದರಿಂದ = ಮೇಲೆ ತೋರಿಸಿದ ಭೇದಸಾಧಕ ಸೂತ್ರಗಳಿಗೆ ಅನುಗುಣವಾಗಿ, ಭೇದಶ್ರುತಿ ಸುಂದರ್ಯಾಃ= ದ್ವಾಸುಪರ್ಣಾ ಸಯುಜಾ ಸಖಾಯಾ ಎಂಬ ಭೇದವನ್ನು ಹೇಳುವ ಸುಂದರ ಶ್ರುತಿಯು, ಸ್ವಾರ್ಥಃ= ತನ್ನ ಅರ್ಥವಾದ ಭೇದವು, ಉಕ್ತಾರ್ಥೇಷು = (ಹಿಂದಿನ ಪದ್ಯದಲ್ಲಿ) ಹೇಳಿದ ಮತಿಭೇದ = ಭಿನ್ನಾಭಿಪ್ರಾಯ, ಸ್ಥಾನಭೇದ ಮತ್ತು ವಿರುದ್ಧ ಧರ್ಮ ಈ ಅರ್ಥಗಳಲ್ಲಿ, ವಿನೀತಾ ಅಪಿ = ಅನ್ವಯಿಸಲ್ಪಟ್ಟರೂ, ಭೇದಂ = ಭೇದವನ್ನು, ನೈವ ಮುಂಚತಿ ಯತ್ = ಸರ್ವಥಾ ಬಿಡುವುದಿಲ್ಲವಾದ್ದರಿಂದ, ಗಲೇ = (ಈ ಸುಂದರಿಯ) ಕಂಠದಲ್ಲಿ, ಸೂತ್ರಾಯತೇ = ಮಂಗಲಸೂತ್ರವಾಗಿರುತ್ತದೆ.

**ಅನುವಾದ–** ದ್ವಾಸುಪರ್ಣಾ.. ಶ್ರುತಿಯು ಎರಡು ಹಕ್ಕಿಗಳು ಏಕಕಾಲದಲ್ಲಿ ಒಂದೇ ಮರದಲ್ಲಿ ಸಖ್ಯದಿಂದ ಇವೆ ಎಂದು ಹೇಳುತ್ತದೆ. ಆದ್ದರಿಂದ ಎರಡು ಹಕ್ಕಿಗಳಿಗೆ

ಮತಿಭೇದವೂ ಇಲ್ಲ, ಸ್ಥಾನಭೇದವೂ ಇಲ್ಲ. ಆದರೂ ಪಿಪ್ಪಲವನ್ನು ತಿನ್ನುವ ಮತ್ತು ತಿನ್ನದ ಕಾರಣದಿಂದ ವಿರುದ್ಧ ಧರ್ಮಗಳನ್ನೂ ಗುರುತಿಸಬಹುದು. ಸಮಾನಂ ವೃಕ್ಷಂ ಎಂದಿರುವುದರಿಂದ ಎರಡು ಹಕ್ಕಿಗಳು ಒಂದೇ ಮರದ ಬೇರೆ ಬೇರೆ ಸ್ಥಳಗಳಲ್ಲಿ ಕುಳಿತುಕೊಳ್ಳುವ ನಿದರ್ಶನದಿಂದ ಜೀವ-ಪರಮಾತ್ಮರು ಒಂದೇ ಶರೀರದ ಬೇರೆ ಬೇರೆ ಸ್ಥಾನಗಳಲ್ಲಿ ಇದ್ದಾರೆ ಎಂದು ಸ್ಥೂಲವಾಗಿ ಚಿಂತಿಸಬಹುದು. ಹೀಗೆ ಚಿಂತಿಸಿದರೂ ಈ ಮತಿಭೇದ-ಸ್ಥಾನಭೇದ- ವಿರುದ್ಧ ಧರ್ಮಗಳು ಏಕಕಾಲದಲ್ಲಿ ಇರುವುದರಿಂದ ಈ ಹಕ್ಕಿಗಳಿಗೆ ಭೇದವು ಅನಿವಾರ್ಯ. ಆದ್ದರಿಂದ ಮತಿಭೇದ ಇತ್ಯಾದಿಗಳನ್ನು ದ್ವಾಸುಪರ್ಣಾ ಶ್ರುತಿಯ ಹಕ್ಕಿಗಳಿಗೆ ಹೇಗೆಯೇ ಅನ್ವಯಿಸಿದರೂ ಈ ಶ್ರುತಿಯು ಹೇಳುವ ಜೀವ-ಪರಮಾತ್ಮರ ಭೇದಕ್ಕೆ ಹಾನಿಯು ಆಗುವುದೇ ಇಲ್ಲ.

**ಭಾವವಿಲಾಸಿನೀ–** ತತ್ತಸ್ಮಾತ್ ಯುಗಪನ್ಮತಿಭೇದಾದೇರಪಿ ಸ್ವರೂಪಭೇದಾವಿನಾಭೂತತ್ವಾತ್ । ಸ್ವಾರ್ಥಃ ಸ್ವರೂಪಭೇದಃ । ಯದ್ಯಸ್ಮಾತ್ ಉಕ್ತಾರ್ಥೇಷು ಮತಿಭೇದಾದ್ಯರ್ಥೇಷು ವಿನೀತಾ ಬಲಾತ್ಪ್ರಾಪಿತಾಪಿ । ಭೇದಂ ಸ್ವರೂಪಭೇದಮ್ । ತಸ್ಮಾದಿತಿ ಪೂರ್ವೇಣಾನ್ವಯಃ । ಯಥಾ ಪತಿಮತೀ ಕಂಠಸೂತ್ರಂ ಕದಾಪಿ ನ ತ್ಯಜತಿ । ಏವಂ ಭೇದಶ್ರುತಿರಪಿ ಮತಿಭೇದಾದ್ಯರ್ಥಕಥನೇಽಪಿ ಸ್ವಾರ್ಥಭೂತಂ ಸ್ವರೂಪಭೇದಂ ನೈವ ತ್ಯಜತೀತಿ ಭಾವಃ ॥ ೪೧೫ ॥

**ವಿವರಣೆ–** ಆದ್ದರಿಂದ ಏಕಕಾಲದಲ್ಲಿ ಮತಿಭೇದಾದಿಗಳು ಸ್ವರೂಪಭೇದವಿಲ್ಲದೇ ಕೂಡುವುದಿಲ್ಲ. ಆದ್ದರಿಂದ ಈ ವಾಕ್ಯವನ್ನು ಬಲಾತ್ಕಾರದಿಂದ ಮತಿಭೇದಾದಿ ಅರ್ಥದಲ್ಲಿ ತೆಗೆದುಕೊಂಡು ಹೋದರೂ ಮತಿಭೇದಾದಿಗಳು ಸ್ವರೂಪಭೇದವ್ಯಾಪ್ತವಾದ್ದರಿಂದ ಸ್ವರೂಪಭೇದವನ್ನು ತ್ಯಜಿಸುವುದಿಲ್ಲ ಎಂದು ಅನ್ವಯ. ಹೇಗೆ ಸುಮಂಗಲಿಯಾದವಳು ತನ್ನ ಕಂಠಸೂತ್ರವನ್ನು ಯಾವಾಗಲೂ ಪರಿತ್ಯಜಿಸುವುದಿಲ್ಲವೋ, ಆದರಂತೆ ಭೇದಶ್ರುತಿಯು ಬೇರೆ ಯಾವ ಅರ್ಥಗಳಲ್ಲಿ ತೆಗೆದುಕೊಂಡು ಹೋದರೂ ತನ್ನ ನಿಜವಾದ ಅರ್ಥವಾದ ಸ್ವರೂಪಭೇದವನ್ನು ಎಂದೂ ಬಿಡುವುದಿಲ್ಲ ಎಂದು ಅಭಿಪ್ರಾಯ.

ಸಖಾಯೌ ಸಯುಜೌ ಚೇತಿ ಪದದಾರ್ಢ್ಯಾಚ್ಚಲೇಚ್ಚ ನ ॥ ೪೧೬ ॥

**ಅರ್ಥ–** (ದ್ವಾಸುಪರ್ಣಾ... ಶ್ರುತಿಯಲ್ಲಿರುವ) ಸಖಾಯೌ ಚ ಸಯುಜೌ ಇತಿ = ಸಖಾಯೌ ಮತ್ತು ಸಯುಜೌ ಎಂಬ ಪದದಾರ್ಢ್ಯಾತ್ = ಪದಗಳ ಬಲದಿಂದ, ನ ಚಲೇತ್ ಚ = (ಶ್ರುತಿಯು) ಮತಿಭೇದ, ಸ್ಥಾನಭೇದ, ಈ ಅಭಿಪ್ರಾಯಗಳ ಕಡೆ ಸರ್ವಥಾ ಹೋಗುವುದಿಲ್ಲ.

**ಅನುವಾದ–**ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋಽಭಿಚಾಕಶೀತಿ ॥

ಈ ಶ್ರುತಿಯಲ್ಲಿ ಎರಡು ಹಕ್ಕಿಗಳನ್ನು ಸಯುಜೌ ಮತ್ತು ಸಖಾಯೌ ಎಂದು ವರ್ಣಿಸಲಾಗಿದೆ. ಸಖ್ಯವಿದೆ ಎಂದರೆ ಏಕಾಭಿಪ್ರಾಯವಿದೆ ಎಂದೇ ಅರ್ಥ. ಸಯುಜಾ ಎಂದರೆ ಒಂದೇ ಸ್ಥಾನದಲ್ಲಿದ್ದಾರೆ ಎಂದೇ ಅರ್ಥ. ಈ ಪದಗಳಿರುವುದರಿಂದ ಹಕ್ಕಿಗಳಿಗೆ ಮತಿಭೇದವಿದೆ, ಸ್ಥಾನಭೇದವಿದೆ ಎಂಬ ಅಭಿಪ್ರಾಯವನ್ನು ಶ್ರುತಿಯಲ್ಲಿ ಯಾವ ದಷ್ಟಿಯಿಂದಲೂ ಕಾಣಲು ಸಾಧ್ಯವಿಲ್ಲ. ಮತಿಭೇದ ಮತ್ತು ಸ್ಥಾನಭೇದಗಳು ಅರ್ಥವಾಗಿ ಕಾಣಿಸಿದ್ದರೆ ಹಕ್ಕಿಯು ಒಂದೇ ಆಗಿದ್ದು, ಬೇರೆ ಬೇರೆ ಕಾಲದ ಭಿನ್ನಾಭಿಪ್ರಾಯ ಮತ್ತು ಭಿನ್ನಸ್ಥಾನಗಳಿಂದ ಹಕ್ಕಿಯನ್ನು ಎರಡಾಗಿ ಶ್ರುತಿಯು ವರ್ಣಿಸಿದೆ ಎಂದು ಕಲ್ಪಿಸಲು ಕ್ಷೀಣ ಅವಕಾಶವಾದರೂ ಇರುತ್ತಿತ್ತು. ಹೀಗೆ ಕಾಣಲು ಅವಕಾಶವು ಸುತರಾಂ ಇಲ್ಲ. ಆದ್ದರಿಂದ ಈ ಶ್ರುತಿಯು ಹಕ್ಕಿಗಳ ಭೇದವನ್ನೇ ಹೇಳುತ್ತದೆ. ಐಕ್ಯವನ್ನು ಅಲ್ಲ.

**ಭಾವವಿಲಾಸಿನೀ**– ಕಿಂಚ ದ್ವಾಸುಪರ್ಣೇತಿ ಶ್ರುತೇರರ್ಥಾಂತರಶಂಕೈವ ನ ಘಟತ ಇತ್ಯಾಹ – **ಸಖಾಯಾವಿತಿ** ॥ ಸಖಾಯೌ ಏಕವಿಷಯಮತಿಮಂತೌ । ಇದಮೇವ ಹಿ ಸಖ್ಯಂ ನಾಮ । ಸಯುಜೌ ಸದೈಕಸ್ಮಿನ್ ದೇಹೇ ಸಂಬದ್ಧೌ । ಚಲೇತ್ ಮತಿಭೇದಾದೌ ಗಚ್ಛೇತ್ । ಮತ್ಯೈಕ್ಯ-ಸ್ಥಾನೈಕ್ಯಕಥಕ ಪದದ್ವಯಬಲಾನ್ಮತಿಭೇದಾದೌ ನೇತುಮಪಿ ನ ಶಕ್ಯೇತಿ ಭಾವಃ । ಪ್ರಸಂಗಾತ್ ಪ್ರಾಕ್ ಪ್ರಸ್ತಾವಿತೋಽಪ್ಯಯಮರ್ಥಃ ಶ್ರೌತಪದಾನಾಂ ಶೋಧನ ಸಮಯೇಽವಶ್ಯವಕ್ತವ್ಯ-ತ್ವಾತ್ಪುನರಪಿ ಪ್ರದರ್ಶಿತಃ ॥ ೪೧೬ ॥

**ವಿವರಣೆ**– ಇಲ್ಲಿ 'ದ್ವಾಸುಪರ್ಣಾ' ಎಂಬ ಶ್ರುತಿಗೆ ಅರ್ಥಾಂತರ ಶಂಕೆಯೇ ಕೂಡುವುದಿಲ್ಲ ಎಂದು ಹೇಳುತ್ತಾರೆ. 'ಸಖಾಯೌ' ಎಂದರೆ ಒಂದೇವಿಷಯದ ಬುದ್ಧಿಯುಳ್ಳವರು ಎಂದು ಅರ್ಥ. ಇದೇ ಸತ್ಯವಷ್ಟೇ. ಆದ್ದರಿಂದ ಮತಿಭೇದ ಎಂಬರ್ಥವನ್ನು ಮಾಡಲು ಸಾಧ್ಯವಿಲ್ಲ. 'ಸಯುಜೌ' ಎಂದರೆ ಒಂದು ಒಂದೇ ದೇಹದಲ್ಲಿ ಯಾವಾಗಲೂ ಸಂಬದ್ಧರಾಗಿದ್ದಾರೆ ಎಂದು ಅರ್ಥ. ಆದ್ದರಿಂದ ಇಲ್ಲಿ ಸ್ಥಾನ ಭೇದದ ಶಂಕೆಯನ್ನು ಮಾಡಲು ಸಾಧ್ಯವಿಲ್ಲ. 'ಸಾಯುಜೌ' ಎಂಬ ಶಬ್ದವು ಸ್ಥಾನೈಕ್ಯವನ್ನು ಹೇಳುತ್ತದೆ. ಈ ವಿಷಯವು ಹಿಂದೆ ಪ್ರಸ್ತಾಪಿಸಲ್ಪಟ್ಟಿದೆ. ಆದರೂ ಶ್ರುತಿಯ ಪದಗಳ ಅರ್ಥವನ್ನು ವಿಮರ್ಶೆಮಾಡುವ ಈ ಸಂದರ್ಭದಲ್ಲಿ ಪುನಃ ಅದನ್ನು ಹೇಳಿದ್ದಾರೆ.

ಅನ್ಯೋಽಯಮನ್ಯ ಇತ್ಯುಕ್ತೇ ದ್ವಾವಿಮಾವಿತಿ ಚೋದಿತೇ ।
ಭಿನ್ನಾವಿಮಾವಿತಿ ಪ್ರೋಕ್ತೇ ಕಿಮನ್ಯೋಽರ್ಥೋಽಪಿ ಮಾನ್ಯತೇ ॥ ೪೧೭ ॥

**ಅರ್ಥ**–ಅಯಂ = ಇವನು, ಅನ್ಯಃ = ಬೇರೆ, ಅಯಮ್ = ಇವನು ಅನ್ಯಃ = ಬೇರೆ, ಇತಿ = ಎಂದು ಉಕ್ತೇ = ಹೇಳಿದಾಗ, ಚ = ಮತ್ತು, ಇಮೌ ದ್ವೌ = ಇವರು ಇಬ್ಬರು, ಇತಿ = ಎಂದು ಉದಿತೇ = ಹೇಳಿದಾಗ, ಇಮೌ ಭಿನ್ನೌ = ಇವರಿಬ್ಬರು ಬೇರೆ ಬೇರೆ, ಇತಿ = ಎಂದು

ಪ್ರೋಕ್ತೇ = ಹೇಳಿದಾಗ, ಅನ್ಯಃ ಅರ್ಥಃ = ಬೇರೆ ಅರ್ಥವು (ಬೇರೆ ಅಲ್ಲ, ಭಿನ್ನ ಅಲ್ಲ, ಇಬ್ಬರು ಅಲ್ಲ ಎಂಬ ಅರ್ಥವು) ಮಾನ್ಯತೇ ಕಿಮ್? = ಅಂಗೀಕರಿಸಲ್ಪಡುವುದೇ?

**ಅನುವಾದ–** ಇವನು ಬೇರೆ, ಇವನು ಬೇರೆ, ಇವರಿಬ್ಬರು ಇವರಿಬ್ಬರು ಬೇರೆ ಬೇರೆ – ಈ ವಾಕ್ಯಗಳನ್ನು ಜನರು ಸಂದರ್ಭಾನುಗುಣವಾಗಿ ಹೇಳುತ್ತಾರೆ. ಈ ವಾಕ್ಯಗಳಲ್ಲಿರುವ ಬೇರೆ, ಇಬ್ಬರು, ಇಬ್ಬರು ಬೇರೆ ಬೇರೆ ಈ ಪದಗಳಿಗೆ ಬೇರೆ ಅಲ್ಲ, ಇಬ್ಬರಲ್ಲ - ಈ ಅರ್ಥಗಳನ್ನು ಯಾರಾದರೂ ಹೇಳುತ್ತಾರೆಯೋ? ಯಾರೂ ಹೇಳುವುದಿಲ್ಲ. ದ್ವಾಸುಪರ್ಣಾ.... ಶ್ರುತಿಯಲ್ಲಿ ದ್ವೌ ಮತ್ತು ಅನ್ಯಃ ಎಂಬ ಪದಗಳಿವೆ. ಈ ಪದಗಳಿಗೆ ಒಂದು ಹಕ್ಕಿ, ಬೇರೆ ಅಲ್ಲ - ಈ ಅರ್ಥಗಳನ್ನು ಯಾರೂ ಹೇಳುವುದಿಲ್ಲ. ಆದ್ದರಿಂದ ಈ ಶ್ರುತಿಯು ಯಾವ ದೃಷ್ಟಿಯಿಂದಲೂ ಜೀವ-ಬ್ರಹ್ಮರ ಐಕ್ಯವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಪದಾಂತರಬಲಾದಪ್ಯರ್ಥಾಂತರಶಂಕಾನಾತ್ರ ಘಟತೇ ಇತ್ಯಾಹ – ಅನ್ಯೋಽಯಮಿತಿ ॥ ತಯೋರಿತಿ ದ್ವಿವಚನಾಂತಪದೇನ ದ್ವೌ ಪ್ರಸ್ತಾವ್ಯ ಅಯಮನ್ಯಃ ಅಯಮನ್ಯಃ ಇತಿ ಪುನರ್ವಿವಿಚ್ಯ ಕಥನೇಸತಿ ದ್ವಾವಿಮೌ ಭಿನ್ನೌ ಇಮೌ ಇತಿ ಚ ಸ್ಪಷ್ಟಮ್ ದ್ವಿಚವನಾಂತಪದೇನ ಕಥನೇ ಚ ಸತೀತ್ಯರ್ಥಃ । ಅನ್ಯಾರ್ಥಃ ಮತಿಭೇದಸ್ಥಾನಭೇದಾದ್ಯರ್ಥಃ । ಶತಶೋ ಮತಿಸ್ಥಾನಭೇಜ್ಞಾತೇಪಿ ಏಕಸ್ಮಿನ್ ದ್ವಿವಚನಾಂತಪದ ಪ್ರಯೋಗಾದರ್ಶನಾತ್ । ಕ್ರಮಿ ಕ್ರಮ ಭೇದಾದೇರಪಿ ಶಂಕಾನಾತ್ರ ಘಟತ ಇತಿ ಭಾವಃ । ವಿರುದ್ಧ ಧರ್ಮಾಖ್ಯ ಸ್ವರೂಪಭೇದ-ಸಾಧಕೋಪಪತ್ತಿ ಸದ್‌ಭಾವಾಚ್ಚ (ಏತದ್ವ್ಯಾಖ್ಯಾನಂ ಮುದ್ರಿತಪುಸ್ತಕೇ ನಾಸ್ತ್ಯೇವ) ॥ ೪೧೭ ॥

ಬದ್ಧತ್ವಾಪೂರ್ಣತಾತೃತ್ವ ಪೂರ್ವೈರ್ಜೀವಪ್ರಕಾಶಕೈಃ ।
ನಿತ್ಯಮುಕ್ತತ್ವಪೂರ್ಣತ್ವಾನತ್ತ್ಯತ್ವಾದ್ಯೈಃ ಪರಪ್ರಿಯೈಃ ॥ ೪೧೮ ॥

ವಿರುದ್ಧ ಧರ್ಮಸದ್ರತ್ನೈಶ್ಚೂಡಾರತ್ನಾಯಿತೈಃ ಸದಾ ।
ಅಲಂಕೃತಾ ಭೇದವಾಕ್ ತು ನೈವ ಸ್ವಾರ್ಥಂ ವಿಮುಂಚತಿ ।
ಏಕಾಸ್ಯೋ ವಾ ದಶಾಸ್ಯೋ ವಾ ತಾಂ ನ ಭೀಷಯಿತುಂ ಕ್ಷಮಃ ॥ ೪೧೯ ॥

**ಅರ್ಥ–** ಜೀವಪ್ರಕಾಶಕೈಃ = ಜೀವ ಎಂದು ತೋರಿಸುವ, ಬದ್ಧತ್ವಾಪೂರ್ಣತಾತೃತ್ವಪೂರ್ವೈಃ = ಬದ್ಧತ್ವ, ಅಪೂರ್ಣತ್ವ, ಅತೃತ್ವ = ಮೊದಲಾದ ಮತ್ತು, ಪರಪ್ರಿಯೈಃ = ಪರಮಾತ್ಮನಿಗೆ ಪ್ರಿಯವಾದ, ನಿತ್ಯಮುಕ್ತತ್ವಪೂರ್ಣತ್ವಾನತ್ತ್ಯತ್ವಾದ್ಯೈಃ = ನಿತ್ಯಮುಕ್ತತ್ವ, ಪೂರ್ಣತ್ವ, ಅನತ್ತತ್ಯ ಮೊದಲಾದ ಚೂಡಾರತ್ನಾಯಿತೈಃ = ಶಿರೋರತ್ನದಂತೆ ಇರುವ ವಿರುದ್ಧಧರ್ಮಸದ್ರತ್ನೈಃ = ವಿರುದ್ಧ ಧರ್ಮಗಳೆಂಬ ಶ್ರೇಷ್ಠ ರತ್ನಗಳಿಂದ, ಸದಾ ಅಲಂಕೃತಾ = ಯಾವಾಗಲೂ ಅಲಂಕೃತವಾಗಿರುವ ಭೇದವಾಕ್ ತು = ಭೇದವನ್ನು ಹೇಳುವ

ಶ್ರುತಿ-ಸ್ಮತಿಗಳಾದರೋ, ಸ್ವಾರ್ಥಂ = ತಮ್ಮ ಅರ್ಥವನ್ನು, ನೈವ ಮುಂಚತಿ = ಸರ್ವಥಾ ಬಿಡುವುದಿಲ್ಲ. ಏಕಾಸ್ಯೋ ವಾ = ಒಂದು ಬಾಯಿಯವನಾಗಲೀ, ದಶಾಸ್ಯಃ ವಾ = ಹತ್ತು ಬಾಯಿಯವನಾಗಲೀ ತಾಂ = ಆ ಭೇದವಾಕ್ ಅನ್ನು, ಭೀಷಯಿತುಂ = ಹೆದರಿಸಲು, ನ ಕ್ಷಮಃ = ಸಮರ್ಥವಲ್ಲ.

**ಅನುವಾದ–**

ದ್ವಾಸುಪರ್ಣಾ ಸಯುಜಾಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋಽಭಿಚಾಕಶೀತಿ ॥
- ಅಥರ್ವಣೋಪನಿಷತ್

ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ ।
ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾನ್ ॥
ಆತ್ಮಾನಮನ್ಯಂ ಚ ಸ ವೇದ ವಿದ್ವಾನಪಿಪ್ಪಲಾದೋ ನ ತು ಪಿಪ್ಪಲಾದಃ ।
ಯೋಽವಿದ್ಯಯಾಂಧಃ ಸ ತು ನಿತ್ಯಬದ್ಧೋ ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ॥
- ಭಾಗವತ ೧೧-೧೧-೬,೭

ಈ ಶ್ರುತಿ-ಸ್ಮತಿಗಳು ಜೀವ-ಪರಮಾತ್ಮರ ಭೇದವನ್ನು ಹೇಳುತ್ತವೆ. ಆದ್ದರಿಂದ ಇವು ಭೇದವಾಕ್. ಇವು ಒಂದು ಹಕ್ಕಿಯು ಕರ್ಮಫಲವನ್ನು ಅನುಭವಿಸುತ್ತದೆ ಎಂದು ಹೇಳುತ್ತವೆ. ಸ್ಮೃತಿಯು (ಭಾಗವತವು) ಈ ಹಕ್ಕಿಯನ್ನು ನಿತ್ಯಬದ್ಧ ಅವಿದ್ಯೆಯಿಂದ ಅಂಧ ಎಂದು ಹೇಳುತ್ತದೆ. ಇದರಿಂದ ಈ ಹಕ್ಕಿಯ ಅಪೂರ್ಣತ್ವವು ಅರ್ಥಾತ್ ಸಿದ್ಧವಾಗುತ್ತದೆ. ಈ ಧರ್ಮಗಳು ಈ ಹಕ್ಕಿಯು ಜೀವಾತ್ಮ ಎಂದು ತೋರಿಸುತ್ತವೆ.

ಇನ್ನೊಂದು ಹಕ್ಕಿಯು ಏನನ್ನೂ ತಿನ್ನುವುದಿಲ್ಲ, ತಿನ್ನದೆ ಬೆಳಗುತ್ತಿದೆ ಎಂದು ಶ್ರುತಿ ಮತ್ತು ಸ್ಮೃತಿಗಳು ಹೇಳುತ್ತವೆ. ಇದರಿಂದ ಈ ಹಕ್ಕಿಯು ಕರ್ಮಬದ್ಧವಲ್ಲ, ಪೂರ್ಣ ಎಂದು ಅರ್ಥಾತ್ ಸಿದ್ಧವಾಗುತ್ತದೆ. ಸ್ಮತಿಯು (ಭಾಗವತವು) ಈ ಹಕ್ಕಿಯನ್ನು ವಿದ್ಯಾಮಯ, ನಿತ್ಯಮುಕ್ತ ಎಂದು ಹೇಳುತ್ತಿದೆ.

ಈ ಧರ್ಮಗಳು = ಕರ್ಮಾಬದ್ಧತ್ವ ಪೂರ್ಣತ್ವ ವಿದ್ಯಾಮಯತ್ವ ನಿತ್ಯಮುಕ್ತತ್ವಗಳು, ಈ ಹಕ್ಕಿಯು ಪರಮಾತ್ಮ ಎಂದು ತೋರಿಸುತ್ತವೆ.

ಈ ಭೇದವಾಕ್ ಹೇಳುತ್ತಿರುವ ಜೀವಧರ್ಮ ಮತ್ತು ಪರಮಾತ್ಮ ಧರ್ಮಗಳು ಪರಸ್ಪರ ವಿರುದ್ಧ. ಇವು ತತ್ತ್ವವನ್ನು ತಿಳಿಸುವ ಧರ್ಮಗಳು, ಆದ್ದರಿಂದ ಶ್ರೇಷ್ಠ ರತ್ನಗಳು. ಭೇದವಾಕ್ ಎಂಬ ಸುಂದರಿಯ ಚೂಡಾಮಣಿಗಳು. ಚೂಡಾಮಣಿಯ ಯಜಮಾನರು ಅದನ್ನು ಎಸೆಯುವುದಿಲ್ಲ. ಬೇರೆಯವರಿಗೆ ಕೊಟ್ಟುಬಿಡುವುದಿಲ್ಲ. ಅಂತೆಯೇ ಈ ಭೇದವಾಕ್ ತಾನು ಹೇಳುತ್ತಿರುವ ವಿರುದ್ಧಧರ್ಮಗಳನ್ನು ಯಾವ

ಪರಿಗಣನೆಯಿಂದಲೂ ಗೌಣವಾಗಿಸುವುದಿಲ್ಲ ಅಥವಾ ತ್ಯಜಿಸುವುದಿಲ್ಲ. ಈ ಶ್ರುತಿ-ಸ್ಮೃತಿಗಳು ಜೀವ-ಪರಮಾತ್ಮರ ಭೇದವನ್ನು ಯಾವುದೇ ಸಂಶಯಕ್ಕೆ ಅವಕಾಶವಿಲ್ಲದಂತೆ ಸ್ಥಾಪಿಸುತ್ತವೆ.

ಒಂದು ಮುಖದ ಶಿಶುಪಾಲನು ರುಗ್ಮಿಣಿಯನ್ನು ಹೆದರಿಸಲಾಗಲಿಲ್ಲ. ಹತ್ತು ಮುಖದ ರಾವಣನು ಸೀತೆಯನ್ನು ಹೆದರಿಸಲಾಗಲಿಲ್ಲ. ಎಂದರೆ ರುಗ್ಮಿಣಿ-ಸೀತೆಯರು ತಮ್ಮ ನಿಷ್ಠೆಯನ್ನು ತ್ಯಜಿಸುವಂತೆ ಮಾಡಲು ಶಿಶುಪಾಲ-ರಾವಣರಿಗೆ ಆಗಲಿಲ್ಲ. ಹಾಗೆಯೇ, ಒಂದೇ ದೃಷ್ಟಿಕೋನದಿಂದ ಅಪವ್ಯಾಖ್ಯಾನವನ್ನು ಮಾಡುವವನು ಈ ಭೇದವಾಕ್ಯಕ್ಕೆ ಅಪವ್ಯಾಖ್ಯಾನವನ್ನು ಮಾಡಲಾರ. ಹತ್ತು ದೃಷ್ಟಿಕೋನಗಳಿಂದ ಅಪವ್ಯಾಖ್ಯಾನವನ್ನು ಮಾಡುವ ಸಾಮರ್ಥ್ಯವುಳ್ಳವನೂ ಕೂಡ ಈ ಭೇದವಾಕ್ಯಕ್ಕೆ ಅಪವ್ಯಾಖ್ಯಾನವನ್ನು ಮಾಡಲಾರ.

ಈ ಭೇದವಾಕ್ಯದಲ್ಲಿ ಉಕ್ತವಾಗಿರುವ ವಿರುದ್ಧ ಧರ್ಮಗಳು ಎಲ್ಲಾ ಆಭಾಸಗಳನ್ನೂ ದೂರೀಕರಿಸಿ ಸಂಶಯಕ್ಕೆ ಅವಕಾಶವಿಲ್ಲದಂತೆ ಜೀವ-ಪರಮಾತ್ಮರ ಭೇದವನ್ನು ಸ್ಥಾಪಿಸುತ್ತವೆ.

**ಭಾವವಿಲಾಸಿನೀ**–ಸ್ವರೂಪಭೇದರೂಪಪೂರ್ವಸ್ವಾರ್ಥ ಏವತಾತ್ಪರ್ಯವತೀತ್ಯಾಹ–**ಬದ್ಧತ್ವೇತಿ**॥ ಅತ್ತೀತಿ ಜೀವಸ್ಯಕರ್ಮಫಲಭೋಕ್ತೃತ್ವ ಕಥನಾತ್ ಕರ್ಮಬದ್ಧತ್ವಂ ಅಪೂರ್ಣತ್ವಂ ಚ ಶ್ರುತಾವರ್ಥಾತ್ಸಿದ್ಧಮ್ । ಸ್ಮೃತೌ ತು ಯೋಽವಿದ್ಯಯಾಂಧಸ್ಸ ತು ನಿತ್ಯಬದ್ಧ ಇತಿ ಸ್ಪಷ್ಟಂ ಬದ್ಧತ್ವಾಪೂರ್ಣತ್ವೇ ಸಿದ್ಧೇ । ಅನಶ್ನನ್ನನ್ಯ ಇತಿ ಪರಮಾತ್ಮನಃ ಕರ್ಮಫಲಾನಶನಕಥನಾತ್ ಕರ್ಮಾಬದ್ಧತ್ವರೂಪನಿತ್ಯಮುಕ್ತತ್ವಂ ಪೂರ್ಣತ್ವಂ ಚ ಶ್ರುತಾವರ್ಥಾತ್ ಸಿದ್ಧಮ್ । ಸ್ಮೃತೌ ತು ಯೋಽವಿದ್ಯಯಾಂಧಃ ಸತು ನಿತ್ಯಬದ್ಧ ಇತಿ ಸ್ಪಷ್ಟಂ ಬದ್ಧತ್ವಾತ್ಪೂರ್ಣತ್ವೇ ಸಿದ್ಧೇ । ಅನಶ್ನನ್ನನ್ಯ ಇತಿ ಪರಮಾತ್ಮನಃ ಕರ್ಮಫಲನಾಶಕಥನಾತ್ಕರ್ಮಾಬದ್ಧತ್ವರೂಪನಿತ್ಯಮುಕ್ತತ್ವಂ ಪೂರ್ಣತ್ವಂ ಚ ಶ್ರುತಾವರ್ಥಾತ್ಸಿದ್ಧಮ್ । ಸ್ಮೃತೌ ತು ವಿದ್ಯಾಮಯೋ ಯಸ್ಸತು ನಿತ್ಯಮುಕ್ತ ಇತಿ ವಿದ್ಯಾದಿಗುಣ-ಪೂರ್ಣತ್ವನಿತ್ಯಮುಕ್ತತ್ವೇ ಸ್ಪಷ್ಟಮೇವ ಸಿದ್ಧೇ ಇತಿ ದ್ರಷ್ಟವ್ಯಮ್ । ಏಕಾಸ್ಯಃ ಶಿಶುಪಾಲಃ। ದಶಾಸ್ಯೋ ರಾವಣಃ ಇತಿ ಧ್ವನಿಃ। ಏಕಮುಖವಾನ್ ದಶಮುಖ ಸ್ವೀಕಾರವಾನ್ವೇತಿ ಪ್ರಕೃತೋಪಯೋಗ್ಯರ್ಥಃ॥ ತಾಂ ಶ್ರುತಿಸುಂದರೀಮ್ । ಸೀತಾಮಿವ ರುಗ್ಮಿಣೀಮಿವ ವೇತಿ ಧ್ವನಿಃ ॥ ೪೧೮-೪೧೯ ॥

ಐಕ್ಯಶ್ರುತಿಸ್ತು ಮತ್ಯೈಕ್ಯೆ ಸ್ಥಾನೈಕ್ಯೇ ಸ್ವಾರ್ಥಮುಜ್ಝತಿ ।
ಏಕೀಭೂತಾವಿಮೌವಿತ್ರತ್ಯೈಕ್ಯಂ ನಹಿ ತಯೋರ್ದ್ವಯೋಃ ॥ ೪೨೦ ॥

**ಅರ್ಥ**– ತು = ಆದರೆ, ಐಕ್ಯಶ್ರುತಿಃ = ಐಕ್ಯವನ್ನು ಹೇಳುವ ಶ್ರುತಿಯು (ಪರೇಽವ್ಯಯೇ ಸರ್ವ ಏಕೀಭವಂತಿ - ಮೊದಲಾದ ಶ್ರುತಿಗಳು) ಮತ್ಯೈಕ್ಯೇ = ಏಕಾಭಿಪ್ರಾಯ ಎಂಬ ಅರ್ಥಕ್ಕೆ ಅವಕಾಶವನ್ನು ಕೊಟ್ಟು ಸ್ಥಾನೈಕ್ಯೇ= ಒಂದು ಸ್ಥಾನದಲ್ಲಿ ಸ್ಥಿತಿ ಎಂಬ ಅರ್ಥಕ್ಕೆ

ಅವಕಾಶವನ್ನು ಕೊಟ್ಟು, ಸ್ವಾರ್ಥಂ = ಶಕ್ತಿವೃತ್ತಿಯಿಂದ ಗಮ್ಯವಾದ ತಮ್ಮ ಅಭೇದರೂಪವಾದ ಅರ್ಥವನ್ನು, ಉಜ್ಝತಿ = ಬಿಡುತ್ತದೆ, ಇಮೌ = ಇವರಿಬ್ಬರು, ಏಕೀಭೂತೌ = ಒಂದಾಗಿದ್ದಾರೆ, ಇತ್ಯತ್ರ = ಈ ವಾಕ್ಯದಲ್ಲಿ, ತಯೋಃ = ಆ ಇಬ್ಬರಿಗೆ, ಐಕ್ಯಂ = ಏಕತ್ವವು, ನ ಹಿ = ಇಲ್ಲವೇ ಇಲ್ಲ.

**ಅನುವಾದ–** ಏಕೀಭೂತೌ ಇಮೌ = ಇವರಿಬ್ಬರು ಒಂದಾಗಿದ್ದಾರೆ ಎಂದು ಜನರು ಹೇಳುತ್ತಾರೆ. ಯಾವಾಗ? ಭಿನ್ನಾಭಿಪ್ರಾಯದಿಂದ, ವೈಮನಸ್ಯದಿಂದ ದೂರವಾಗಿದ್ದ ಇಬ್ಬರು ಭಿನ್ನಾಭಿಪ್ರಾಯವನ್ನು ತೊರೆದು, ಸೌಮನಸ್ಯವನ್ನು ಹೊಂದಿದಾಗ. ಈ ಸಂದರ್ಭದಲ್ಲಿ ಹೇಳಲ್ಪಡುವ ಇಬ್ಬರು ಒಂದಾಗಿದ್ದಾರೆ ಎಂಬ ಮಾತಿಗೆ ಏಕಾಭಿಪ್ರಾಯವನ್ನು ಹೊಂದಿದ್ದಾರೆ ಎಂದು ಅರ್ಥ. ಇಲ್ಲಿಯವರೆಗೆ ಎರಡು ವ್ಯಕ್ತಿಗಳಾಗಿದ್ದರು, ಈಗ ಒಂದೇ ವ್ಯಕ್ತಿಯಾಗಿದ್ದಾನೆ ಎಂದು ಅಭಿಪ್ರಾಯವಲ್ಲ. ಪ್ರತ್ಯಕ್ಷ ವಿರುದ್ಧವಾದ ಇಂತಹ ಅಭಿಪ್ರಾಯವು ಉನ್ಮತ್ತನಿಗೂ ಇರುವುದಿಲ್ಲ. ಇಲ್ಲಿ ಏಕೀಭೂತೌ - ಪದವು ತನ್ನ ಮುಖ್ಯಾರ್ಥವನ್ನು ಬಿಟ್ಟು ಸಂಗತವಾದ ಅಮುಖ್ಯಾರ್ಥಕ್ಕೆ ಅವಕಾಶವನ್ನು ಕೊಟ್ಟಿದೆ.

ಹೀಗೆಯೇ, ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇವ್ಯಯೇ ಸರ್ವ ಏಕೀ ಭವಂತಿ. ಬ್ರಹ್ಮವೇದ ಬ್ರಹ್ಮೈವ ಭವತಿ ಮೊದಲಾದ ಐಕ್ಯವನ್ನು ಹೇಳುವಂತೆ ಕಾಣುವ ಶ್ರುತಿಗಳು ಬಾಧಿತವಾದ ಮುಖ್ಯಾರ್ಥವನ್ನು ಬಿಟ್ಟು ಅಬಾಧಿತವಾದ, ಲೋಕರೂಢಿಸಿದ್ಧವಾದ ಒಂದೇ ಅಭಿಪ್ರಾಯವುಳ್ಳವರು, ಒಂದೇ ಸ್ಥಾನದಲ್ಲಿ ಇರುವವರು - ಈ ಅರ್ಥಗಳಿಗೆ ಅವಕಾಶ ಮಾಡಿಕೊಡುತ್ತವೆ.

**ಭಾವವಿಲಾಸಿನೀ–** ಏಕೀಭವಂತೀತ್ಯಾದ್ಯೈಕ್ಯಶ್ರುತೇಃ ಸ್ವರೂಪೈಕ್ಯಂ ವಿನೈವ ಪ್ರವೃತ್ತಿಕಾರಣಂ ಸ್ಮಾರಯತಿ – **ಐಕ್ಯಶ್ರುತಿಸ್ತ್ವಿತಿ** ॥ ಸ್ವಾರ್ಥಂ ಸ್ವರೂಪೈಕ್ಯಮ್ ॥ ೪೨೦ ॥

**ವಿವರಣೆ–** ಇದರಿಂದ ವೇದದಲ್ಲಿರುವ ಎಲ್ಲ ವಾಕ್ಯಗಳ ಪುರ್ವಾಪರ ವಿರೋಧವಿಲ್ಲದ ಸುಸಂಗತ ಅರ್ಥವು ಗೋಚರವಾಗುತ್ತದೆ. ಭೇದಶ್ರುತಿಗಳ ಮುಖ್ಯಾರ್ಥ ಮತ್ತು ಐಕ್ಯಶ್ರುತಿಗಳ ಅಮುಖ್ಯಾರ್ಥವು ಒಗ್ಗಟ್ಟಿನಿಂದ ಸಕಲಶ್ರುತಿಗಳ ಐಕಕಂಠ್ಯವನ್ನು ತೋರಿಸುತ್ತವೆ. ಐಕಕಂಠ್ಯವೇ ವೇದಕ್ಕೆ ಭೂಷಣ. ಒಡಕು ಅವಲಕ್ಷಣ.

**ಅತೋ ಭೇದಶ್ರುತೇರಗ್ರೇ ಕಸ್ಯ ಸ್ಯಾತ್ ಪ್ರತ್ಯವಸ್ಥಿತಿಃ ।**
**ತಸ್ಮಾತ್ ಕ್ರೂರಕೃಪಾಣೀ ಸಾ ರಿಪುಸೈನ್ಯಭಯಂಕರೀ ॥ ೪೨೧ ॥**

**ಅರ್ಥ–** ಅತಃ = ಆದ್ದರಿಂದ, ಭೇದಶ್ರುತೇಃ = ಭೇದಶ್ರುತಿಯ, ಅಗ್ರೇ = ಎದುರು, ಕಸ್ಯ = ಯಾರಿಗೆ, ಪ್ರತ್ಯವಸ್ಥಿತಿಃ = ವಿರೋಧಿಯಾಗಿ ನಿಲ್ಲುವ ಸಾಮರ್ಥ್ಯವು ಸ್ಯಾತ್? = ಇದ್ದೀತು? ತಸ್ಮಾತ್ = ಆದ್ದರಿಂದ = ನಿರವಕಾಶವಾಗಿರುವ ಕಾರಣದಿಂದ ಬಲಿಷ್ಠವಾಗಿರುವುದರಿಂದ, ಸಾ

= ಆ ಭೇದಶ್ರುತಿಯು, ರಿಪುಸೈನ್ಯಭಯಂಕರೀ = ಭೇದ ಶತ್ರುಗಳ ಸೈನ್ಯಕ್ಕೆ ಭಯಂಕರವಾದ, ಕ್ರೂರಕೃಪಾಣೀ = ಹರಿತವಾದ ಖಡ್ಗ.

**ಅನುವಾದ–** ೪೧೮, ೪೧೯, ೪೨೦ ಪದ್ಯಗಳಲ್ಲಿ ವಿವರಿಸಿದಂತೆ, ಭೇದಶ್ರುತಿಗೆ ಭೇದವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಲು ಅವಕಾಶವಿಲ್ಲ. ಆದ್ದರಿಂದ ಭೇದಶ್ರುತಿಯು ನಿರವಕಾಶ. ಐಕ್ಯಶ್ರುತಿಗೆ ಐಕ್ಯವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಲು ಅವಕಾಶವಿದೆ. ಆದ್ದರಿಂದ ಐಕ್ಯಶ್ರುತಿಯು ಸಾವಕಾಶ. ನಿರವಕಾಶ - ಸಾವಕಾಶ ಶ್ರುತಿಗಳ ಮಧ್ಯೆ ನಿರವಕಾಶವು ಪ್ರಬಲ. ಆದ್ದರಿಂದ ನಿರವಕಾಶಭೇದಶ್ರುತಿಯನ್ನು ವಿರೋಧಿಸಲು ಯಾರಿಗೂ ಸಾಮರ್ಥ್ಯವಿಲ್ಲ. ಭೇದಶ್ರುತಿಯು ಎಲ್ಲಾ ಭೇದವಿರೋಧಿಗಳನ್ನು ನಿಗ್ರಹಿಸುವ ಹರಿತವಾದ ಖಡ್ಗ.

**ಭಾವವಿಲಾಸಿನೀ–** ಅತಃ ಐಕ್ಯಶ್ರುತೇಃ ಸಾವಕಾಶತ್ವಾತ್ । ತಸ್ಮಾತ್ ಸಾವಕಾಶ ನಿರವಕಾಶಯೋ-ರ್ನಿರವಕಾಶಸ್ಯೈವ ಪ್ರಬಲತ್ವಾತ್ ॥ ೪೨೧ ॥

**ನಿತ್ಯಾನಾಮಪಿ ನಿತ್ಯೋ ಯಶ್ಚೇತನಾನಾಂ ಚ ಚೇತನಃ ।**
**ಕಾಮ್ಯಾನರ್ಥಾನಿಮಾನ್ ಸರ್ವಾನನಿತ್ಯಸುಖದಾನ್ ಜಡಾನ್ ॥ ೪೨೨ ॥**

**ಏಕೋ ಬಹೂನಾಂ ಜೀವಾನಾಂ ವಿದಧಾತಿ ಕಿಲಾಂಜಸಾ ।**
**ಸೋಂತರ್ಯಾಮೀ ಕಿಲೈತೇಷಾಂ ಸರ್ವೇ ನಿತ್ಯಸುಖಾರ್ಥಿನಃ ॥ ೪೨೩ ॥**

**ಅರ್ಥ–** ಯಃ= ಯಾವ ಪರಮಾತ್ಮನು, ನಿತ್ಯಾನಾಮಪಿ ನಿತ್ಯಃ= ನಿತ್ಯಪದಾರ್ಥಕ್ಕಿಂತಲೂ ಅತಿಶಯವಾಗಿ ನಿತ್ಯನಾಗಿದ್ದಾನೋ, ಚೇತನಾನಾಂ ಚ ಚೇತನಃ= ಮತ್ತು ಚೇತನಗಳಿತಿಂಗಲೂ ಅತಿಶಯವಾಗಿ ಚೇತನನಾಗಿದ್ದಾನೋ, ಮತ್ತು ಯಾವನು, ಏಕಃ= ಒಬ್ಬನೇ, ಬಹೂನಾಂ ಜೀವಾನಾಂ= ಅನೇಕ ಜೀವಗಳಿಗೆ, ಜಡಾನ್= ಜಡವಾದ, ಅನಿತ್ಯಸುಖದಾನ್= ಅನಿತ್ಯ ಸುಖವನ್ನು ಕೊಡುವ, ಇಮಾನ್ ಸರ್ವಾನ್= ಈ ಎಲ್ಲಾ, ಕಾಮ್ಯಾನರ್ಥಾನ್= ಕಾಮ್ಯವಾದ ವಿಷಯಗಳನ್ನು, ಅಂಜಸಾ= ಚೆನ್ನಾಗಿ, ವಿದಧಾತಿ= ಸೃಷ್ಟಿಮಾಡುತ್ತಾನೆಯೋ, ಸಃ= ಅವನು, ಏತೇಷಾಂ= ಈ ಎಲ್ಲ ಜೀವರಿಗೆ, ಅಂತರ್ಯಾಮೀ ಕಿಲ= ಅಂತರ್ಯಾಮಿಯಷ್ಟೇ, ಸರ್ವೇ= ಈ ಎಲ್ಲ ಜೀವರು, ನಿತ್ಯ ಸುಖಾರ್ಥಿನಃ ಕಿಲ= ನಿತ್ಯಸುಖವನ್ನು ಬಯಸುವವರಷ್ಟೇ.

**ಅನುವಾದ–** ಯಾವ ಪರಮಾತ್ಮನು ನಿತ್ಯವಾದ ಜೀವಾದಿ ಪದಾರ್ಥಗಳಿಗಿಂತ ಅತಿಶಯವಾಗಿ ನಿತ್ಯನಾಗಿದ್ದಾನೆಯೋ ಮತ್ತು ಚೇತನರಿಗಿಂತ ಅತಿಶಯವಾಗಿ ಚೇತನನಾಗಿದ್ದಾನೆಯೋ ಮತ್ತು ಯಾವನು ಒಬ್ಬನೇ ಅನೇಕ ಜೀವರಿಗೆ ಅನಿತ್ಯವಾದ ಸುಖವನ್ನು ಕೊಡುವ ಜಡವಾದ ಈ ಎಲ್ಲಾ ಕಾಮ್ಯಪದಾರ್ಥಗಳನ್ನು

**ಚೆನ್ನಾಗಿ ಸೃಷ್ಟಿಮಾಡುತ್ತಾನೆಯೋ ಅವನು ಈ ಜೀವರ ಅಂತರ್ಯಾಮಿಯಷ್ಟೇ? ಈ ಎಲ್ಲಾ ಜೀವರು ನಿತ್ಯಸುಖವನ್ನು ಬಯಸುವವರಷ್ಟೇ?**

**ಭಾವವಿಲಾಸಿನೀ–** ಅಧುನಾ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮಿತಿ' ಭೇದವಿಷಯಕನಿರವಕಾಶಶ್ರುತ್ಯಂತರಂ ಚ ವ್ಯಾಖ್ಯಾತಿ – **ನಿತ್ಯಾನಾಮಿತ್ಯಾದಿನಾ** ॥ ನಿತ್ಯಾನಾಂ ಜೀವಾನಾಂಮಧ್ಯೇ । ನಿತ್ಯಃ ಅತಿಶಯೇನ ನಿತ್ಯ ಇತ್ಯರ್ಥಃ । ಚೇತನಾನಾಂ ಜೀವಾನಾಂ ಮಧ್ಯೇ ಚೇತನಃ ಅತಿಶಯೇನ ಚೇತನ ಇತ್ಯರ್ಥಃ। ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮಿತ್ಯಸ್ಯಾರ್ಥಕಥನಮಿದಮ್ । ಕಾಮ್ಯಾನರ್ಥಾನಿಮಾನ್ಸರ್ವಾನಿತಿ ಕಾಮಾನಿತ್ಯಸ್ಯಾರ್ಥಕಥನಮ್ । ಕಾಮ್ಯಂತ ಇತಿ ಕಾಮಾ ಇತಿ ವ್ಯುತ್ಪತ್ತೇರಿತಿ ಭಾವಃ। ಕಾಮಾನ್ವಿದಧಾತೀತಿ ಕಾಮಾನಾಂ ಸೃಜ್ಯತ್ವೋಕ್ತೇಃ ಶಾಶ್ವತಸುಖಸ್ಯ ಚ ದರ್ಶನಫಲತಯಾ ಭಾವ್ಯತ್ವೋಕ್ತೇಶ್ಚಾನಿತ್ಯಸುಖದಾನ್ ಜಡಾನಿತ್ಯುಕ್ತಮ್ । ಜೀವಾನಾಮೇವ ಕಾಮಸಂಭವಾತ್ ಬಹೂನಾಂ ಜೀವಾನಾಮಿತ್ಯುಕ್ತಮ್। ಸಃ ಪರಮಾತ್ಮಾ। ಏತೇಷಾಂ ಜೀವಾನಾಮ್। ಆತ್ಮಸ್ಥಪದಫಲಿತಕಥನಂ ಅಂತರ್ಯಾಮೀತಿ । ಅನಿತ್ಯಸುಖಸ್ಯ ಪ್ರಾಗೇವ ಸಿದ್ಧತ್ವಕಥನಾತ್ ಪುನರ್ಧ್ಯಾನದರ್ಶನಾದೇರ್ಭಾವಿಶಾಶ್ವತಸುಖಮೇವ ಫಲತಯಾಽಭಿಲಷಿತಮಿತಿ ಭಾವೇನೋಕ್ತಂ **ಸರ್ವೇ ನಿತ್ಯಸುಖಾರ್ಥಿನ ಇತಿ** ॥ ೪೨೨-೪೨೩ ॥

**ವಿವರಣೆ–** ಈಗ ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ಯೋವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಂ ನೇತರೇಷಾಂ ಎಂಬ ಕಾಠಕೋಪನಿಷತ್ತಿನ ಮಂತ್ರವನ್ನು ವ್ಯಾಖ್ಯಾನ ಮಾಡಿ ಭೇದವನ್ನು ಸ್ಥಾಪಿಸುತ್ತಾರೆ. ಅನೇಕ ಜೀವರಿಗೆ ಒಬ್ಬನೇ ಪರಮಾತ್ಮನು ಅನೇಕ ಜಡಪದಾರ್ಥಗಳನ್ನು ಸೃಷ್ಟಿಮಾಡಿಕೊಡುತ್ತಾನೆಂಬ ಅರ್ಥವಿರುವ ಈ ಮಂತ್ರದಿಂದ ಹಿಂದೆ ಪ್ರಕೃತವಾದ ಪಂಚಭೇದಗಳನ್ನು ಸಮರ್ಥನೆ ಮಾಡುತ್ತಾರೆ. ಮಂತ್ರದ ಮೊದಲನೆ ಭಾಗದ ಅರ್ಥವನ್ನು ಮೂಲದಲ್ಲಿಯೇ ಹೇಳಿದ್ದಾರೆ. ಉತ್ತರಾರ್ಧದ ಅರ್ಥವು ಹೀಗಿದೆ : ತಂ= ಆ ಪರಮಾತ್ಮನನ್ನು, ಆತ್ಮಸ್ಥಂ= ಆತ್ಮಸ್ಥನೆಂದು, ಯೇ ಧೀರಾಃ= ಯಾವ ಧೀರರು, ಅನುಪಶ್ಯಂತಿ= ತಮ್ಮ ಯೋಗ್ಯತೆಗೆ ಅನುಸಾರವಾಗಿ ತಿಳಿಯುತ್ತಾರೆಯೋ, ತೇಷಾಂ= ಅಂತಹ ಧೀರರಿಗೆ, ಶಾಶ್ವತಂ ಸುಖಂ= ಶಾಶ್ವತವಾದ ಸುಖವುಂಟಾಗುತ್ತದೆ, ಇತರೇಷಾಂ= ಹಾಗೆ ತಿಳಿಯದಿದ್ದವರಿಗೆ, ನ= ಶಾಶ್ವತ ಸುಖವುಂಟಾಗುವುದಿಲ್ಲ ಎಂದು. ಈ ಅರ್ಥವನ್ನು ಮುಂದಿನ ಶ್ಲೋಕಗಳಲ್ಲಿ ವಿಮರ್ಶೆ ಮಾಡುತ್ತಾರೆ.

ಈಗ 'ನಿತ್ಯೋ ನಿತ್ಯಾನಾಂ' ಎಂಬ ನಿರವಕಾಶ ಕಾಠಕಶ್ರುತಿಯನ್ನು ವ್ಯಾಖ್ಯಾನ ಮಾಡುತ್ತಾರೆ. 'ನಿತ್ಯೋ ನಿತ್ಯಾನಾಂ' ಎಂದರೆ ನಿತ್ಯರಾದ ಜೀವರ ಮಧ್ಯದಲ್ಲಿ ಅತಿಶಯವಾದ ನಿತ್ಯನಾದವನು ಎಂದು ಅರ್ಥ. 'ಚೇತನಶ್ಚೇತನಾನಾಂ' ಎಂದರೆ

ಚೇತನರಾದ ಜೀವರ ಮಧ್ಯದಲ್ಲಿ ಅತಿಶಯದ ಚೇತನ ಎಂದು ಅರ್ಥ. ಈ ಎರಡು ವಿಶೇಷಣಗಳನ್ನು ರಾಜರು 'ನಿತ್ಯಾನಾನಾಪಿ ನ ನಿತ್ಯಃ, ಚೇತನಾನಾಪಿ ನ ಚೇತನಃ' ಎಂದು ಸಂಗ್ರಹಿಸಿದ್ದಾರೆ. ಶ್ರುತಿಯಲ್ಲಿರುವ 'ಕಾಮಾನ್' ಎಂಬ ಪದದ ಅರ್ಥವನ್ನು 'ಕಾಮ್ಯಾನ್ ಅರ್ಥಾನ್ ನಿಮಾನ್ ಸರ್ವಾನ್' ಎಂದು ಸಂಗ್ರಹಿಸಿದ್ದಾರೆ. 'ಕಾಮಾ' ಎಂದರೆ ಕಾಮ್ಯವಾದ ಅರ್ಥಗಳಷ್ಟೇ. 'ಕಾಮಾನ್ ವಿದಧಾತಿ' ಎಂದು ಮಂತ್ರದಲ್ಲಿ ಕಾಮ್ಯಗಳಿಗೆ ಸೃಷ್ಟಿಯನ್ನು ಹೇಳಿರುವುದರಿಂದಲೂ, ಶಾಶ್ವತಸುಖವನ್ನು ದರ್ಶನಫಲವೆಂದು ಸಾಧ್ಯವಾಗಿ ಹೇಳಿರುವುದರಿಂದಲೂ ಈ ಕಾಮ್ಯಪದಾರ್ಥಗಳು 'ಜಡ' ಮತ್ತು 'ಅನಿತ್ಯ ಸುಖಪ್ರದ' ಎಂದು ತಿಳಿಯುತ್ತದೆ. ಅದನ್ನು ರಾಜರು 'ಅನಿತ್ಯಸುಖಾದಾನ್ ಜಡಾನ್' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ಕಾಮ' ಎಂದರೆ ಕಾಮಿತವಾದ ವಸ್ತು. ಅಂತಹ ಕಾಮ ಎಂದರೆ ಆದಿ, ಜೀವರಿಗೇ ಸಂಭವಿಸುತ್ತದೆ. ಆದ್ದರಿಂದ ಮಂತ್ರದಲ್ಲಿ 'ಬಹುನಾಂ' ಎಂದಿಷ್ಟೇ ಇದ್ದರೂ, ಅದನ್ನು 'ಬಹುನಾಂ ಜೀವನಾಮ್' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ಆತ್ಮಸ್ಥ' ಎಂಬ ಶ್ರುತಿಯಪದದ ಅರ್ಥವನ್ನು 'ಅಂತರ್ಯಾಮಿ' ಎಂಬ ಪದದಿಂದ ಸಂಗ್ರಹ ಮಾಡಿದ್ದಾರೆ. ಅನಿತ್ಯವಾದ ಸುಖವು ಜಡಪದಾರ್ಥಗಳಿಂದ ಮೊದಲೇ ಸಿದ್ಧವಾಗಿರುವುದರಿಂದ ಪುನಃ ಮಾಡುವ ದರ್ಶನಾದಿಗಳಿಗೆ ಮುಂದೆ ಉಂಟಾಗುವ ಶಾಶ್ವತಸುಖವೇ ಫಲವೆಂದು ಇಷ್ಟವಾಗಿದೆ ಎಂಬ ಅಭಿಪ್ರಾಯದಿಂದ 'ಸರ್ವೇ ನಿತ್ಯಸುಖಾರ್ಥಿನ' ಎಂದು ಹೇಳಿದ್ದಾರೆ. ಹೀಗೆ ಕಾಠಕೋಪನಿಷತ್ತಿನ ವಾಕ್ಯದ ಅರ್ಥವನ್ನು ಸಂಪೂರ್ಣವಾಗಿ ಸಂಗ್ರಹಿಸಿದ್ದಾರೆ.

**ಆತ್ಮಸ್ಥಮನುಪಶ್ಯಂತಿ ನಾಭೇದೇನ ತಮೀಶ್ವರಂ ।**
**ಕೇಚಿತ್ ಪಶ್ಯಂತಿ ಕೇಚಿಚ್ಚ ನ ಪಶ್ಯಂತಿ ಕಿಲ ಪ್ರಭುಂ ॥ ೪೨೪ ॥**

**ಅರ್ಥ–** ತಂ ಈಶ್ವರಂ= ಆ ಈಶ್ವರನನ್ನು, ಆತ್ಮಸ್ಥಂ= ಆತ್ಮಸ್ಥನೆಂದೇ, ಅನುಪಶ್ಯಂತಿ= ನೋಡುತ್ತಾರೆ, ಅಭೇದೇನ= ಅಭೇದದಿಂದ, ನ= ನೋಡುವುದಿಲ್ಲ, ಪ್ರಭುಂ= ಪ್ರಭುವಾದ ಅವನನ್ನು, ಕೇಚಿತ್ ಪಶ್ಯಂತಿ= ಕೆಲವರು ನೋಡುತ್ತಾರೆ, ಕೇಚಿಚ್ಚ= ಇನ್ನು ಕೆಲವರು, ನ ಪಶ್ಯಂತಿ ಕಿಲ= ನೋಡುವುದಿಲ್ಲವಷ್ಟೇ.

**ಅನುವಾದ–** ಧೀರರಾದವರು ಆ ಈಶ್ವರನನ್ನು ಆತ್ಮಸ್ಥನೆಂದು ಎಂದರೆ ಅಂತರ್ಯಾಮಿಯೆಂದು ನೋಡುತ್ತಾರೆ, ಅಭಿನ್ನನೆಂದು ನೋಡುವುದಿಲ್ಲ ಮತ್ತು ಕೆಲವು ನೋಡುತ್ತಾರೆ, ಇನ್ನು ಕೆಲವರು ನೋಡುವುದೇ ಇಲ್ಲವಷ್ಟೇ.

**ಭಾವವಿಲಾಸಿನೀ–** ಆತ್ಮಸ್ಥಮನುಪಶ್ಯಂತೀತಿ ವಿಶಿಷ್ಯೋಕ್ತೇರ್ವ್ಯಾವರ್ತ್ಯಕಥನಂ ನಾಭೇದೇನೇತಿ । ಆತ್ಮಸ್ಥಮೇವ ಪಶ್ಯಂತಿ ನ ತ್ವಾತ್ಮತಯೇತಿ ಭಾವಃ । ನೇತರೇಷಾಮಿತ್ಯಸ್ಯಾರ್ಥ ಕಥನಮ್ ಕೇಚಿಚ್ಚ ನ ಪಶ್ಯಂತಿ ಕಿಲ ಪ್ರಭುಮಿತಿ ॥ ೪೨೪ ॥

**ವಿವರಣೆ–** ಮಂತ್ರದಲ್ಲಿರುವ ಆತ್ಮಸ್ಥಶಬ್ದಕ್ಕೆ ಆತ್ಮಸ್ಥತ್ವೇನ ಎಂದು ಅರ್ಥವನ್ನು ಮಾಡಿ ಅಂತರ್ಯಾಮಿತ್ವೇನ ಎಂಬ ತಾತ್ಪರ್ಯವನ್ನು ಹೇಳಿದ್ದಾರೆ. ಈ ಆಶ್ರಯಾಶ್ರಯಿ ಭಾವದಿಂದಲೂ ಮತ್ತು ನಿಯಮ್ಯನಿಯಾಮಕ ಭಾವದಿಂದಲೂ ಭೇದವು ಸಿದ್ಧವಾಗುತ್ತದೆ. ನೇತರೇಷಾಂ ಎಂಬ ಪದದಿಂದ ಕೆಲವರು ತಿಳಿಯುತ್ತಾರೆ, ಇನ್ನು ಕೆಲವರು ಹಾಗೆ ತಿಳಿಯುವುದಿಲ್ಲ ಎಂಬ ಅರ್ಥವು ಲಭಿಸುತ್ತದೆ. ಯಾರು ಅಂತರ್ಯಾಮಿತ್ವವನ್ನು ತಿಳಿಯುವುದಿಲ್ಲವೋ ಅವರಿಗೆ ಶಾಶ್ವತವಾದ ಸುಖವಿಲ್ಲ ಎಂದರೆ ಮೋಕ್ಷವಿಲ್ಲ ಎಂಬ ಅರ್ಥವು ಲಭ್ಯವಾಗುತ್ತದೆ.

**ಶಾಶ್ವತಂ ಸುಖಂ ತೇಷಾಮುಕ್ತರೀತ್ಯೈವ ಪಶ್ಯತಾಂ ।**
**ನಾಭೇದಕೃತಬುದ್ಧೀನಾಂ ನಾಜ್ಞಾನಾಂ ಚ ಭವೇತ್ ಕಿಲ ॥ ೪೨೫ ॥**

**ಇತ್ಯಶೇಷಂ ಶ್ರುತಿರ್ನಿತ್ಯೋ ನಿತ್ಯಾನಾಮಿತಿ ಶಂಸತಿ ॥ ೪೨೬ ॥**

**ಅರ್ಥ–** ಉಕ್ತರೀತ್ಯೈವ= ಹಿಂದೆ ಹೇಳಿದ ಅಂತಸ್ಥತ್ವ ಪ್ರಕಾರದಿಂದಲೇ, ಪಶ್ಯತಾಂ= ನೋಡತಕ್ಕಂತಹ, ತೇಷಾಂ ತು= ಆ ಧೀರರಿಗೆ ಮಾತ್ರ, ಶಾಶ್ವತಂ ಸುಖಂ= ಶಾಶ್ವತವಾದ ಸುಖವು ದೊರೆಯುತ್ತದೆ, ಅಭೇದಕೃತಬುದ್ಧೀನಾಂ= ಅಭಿನ್ನತ್ವವನ್ನು ತಿಳಿಯುವವರಿಗೆ, ನ= ದೊರೆಯುವುದಿಲ್ಲ, ಅಜ್ಞಾನಾಂ ಚ= ಯಾವ ರೀತಿಯಲ್ಲಿಯೂ ತಿಳಿಯದೇ ಇದ್ದವರಿಗೂ, ನ ಭವೇತ್ಕಿಲ= ಶಾಶ್ವತವಾದ ಸುಖವು ದೊರೆಯುವುದಿಲ್ಲವಷ್ಟೇ, ಇತಿ= ಎಂದು, ಅಶೇಷಂ= ಎಲ್ಲ ವಿಷಯಗಳನ್ನೂ, ನಿತ್ಯೋನಿತ್ಯಾನಾಂ ಇತಿ ಶ್ರುತಿಃ= ನಿತ್ಯೋನಿತ್ಯಾನಾಂ ಎಂಬ ಶ್ರುತಿಯು, ಶಂಸತಿ= ಹೇಳುತ್ತದೆಯಷ್ಟೇ.

**ಅನುವಾದ–** ಯಾರು ಹಿಂದೆ ಹೇಳಿದಂತೆ ಆ ಪ್ರಭುವನ್ನು ಅಂತರ್ಯಾಮಿತ್ವೇನ ನೋಡುತ್ತಾರೆಯೋ ಅವರಿಗೆ ಶಾಶ್ವತವಾದ ಸುಖವುಂಟಾಗುತ್ತದೆ. ಅಭೇದಜ್ಞಾನಿಗಳಿಗೆ ಶಾಶ್ವತ ಸುಖವು ಉಂಟಾಗುವುದಿಲ್ಲ. ಅಜ್ಞಾನಿಗಳಿಗೂ ಶಾಶ್ವತ ಸುಖವು ಉಂಟಾಗುವುದಿಲ್ಲ ಎಂದು ಹೇಳಿ ನಿತ್ಯೋನಿತ್ಯಾನಾಂ ಎಂಬ ಶ್ರುತಿಯು ನಮಗೆ ಬೇಕಾದ ಎಲ್ಲ ಪ್ರಮೇಯಗಳನ್ನೂ ಪ್ರತಿಪಾದನೆ ಮಾಡುತ್ತದೆ.

**ಭಾವವಿಲಾಸಿನೀ–** ಅನುಪಶ್ಯದ್ಭ್ಯ ಇತರೇಷಾಮಪಶ್ಯತಾಂ ದರ್ಶನಾಯೋಗ್ಯಾನಾಮಿತಿ ಯಾವತ್ । ತೇಷಾಂ ಸುಖಂ ನೇತ್ಯುಕ್ತೇರಿದಂ ಲಬ್ಧಮ್ । ಸರ್ವೇऽಪಿ ಪಶ್ಯಂತಿ ಚೇದಿತರೇಷಾಂ ನೇತಿ ನಿಷೇಧೋ ವ್ಯರ್ಥಃ ಸ್ಯಾದಿತಿ ಭಾವಃ । ತೇಷಾಮಿತ್ಯಸ್ಯೈವಾರ್ಥಕಥನಮುಕ್ತರೀತ್ಯೈವ ಪಶ್ಯತಾಮಿತಿ । ಯಚ್ಛಬ್ದೋಕ್ತಾನಾಮೇವ ತಚ್ಛಬ್ದೇನ ಪರಾಮರ್ಶಾದಿತಿ ಭಾವಃ । ಏವಕಾರವ್ಯವಚ್ಛೇದ್ಯಮಾಹ – **ನಾಭೇದಕೃತಬುದ್ಧೀನಾಂ ನಾಜ್ಞಾನಾಂ ಚೇತಿ** ॥ ಭೇದೇನ ಪಶ್ಯದ್ಭ್ಯ ಇತರತ್ವಮಭೇದೇನ ಪಶ್ಯತಾಂ ಸರ್ವಥಾऽಪಶ್ಯತಾಂ ಚ ಸಂಭವತೀತಿ ಭಾವಃ ॥ ೪೨೫ ॥ ಇತ್ಯಶೇಷಂ ಪ್ರಮೇಯಮ್ । ನಿತ್ಯೋನಿತ್ಯಾನಾಮಿತಿ ಶ್ರುತಿರಿತಿ ಸಂಬಂಧಃ ॥೪೨೬॥

**ವಿವರಣೆ–** ಜೀವಾನಾಂ ಎಂದು ಬಹುವಚನವಿರುವುದರಿಂದ, ಜೀವಬಹುತ್ವ ಮತ್ತು ಆದರಿಂದ ಜೀವಭೇದವು ಸಿದ್ಧವಾಗುತ್ತದೆ. ಕಾಮಾನ್ ಎಂಬ ಪದಕ್ಕೆ ಅನಿತ್ಯಸುಖಪ್ರದವಾದ ಜಡಪದಾರ್ಥಗಳು ಎಂದು ಅರ್ಥ. ಆದ್ದರಿಂದ ಜಡಗಳಲ್ಲಿ ಭೇದವು ಸಿದ್ಧವಾಗುತ್ತದೆ. ಜೀವರು ತಾವೇ ಆ ಪದಾರ್ಥಗಳನ್ನು ಸೃಷ್ಟಿ ಮಾಡುವುದಿಲ್ಲ, ದೇವರು ಸೃಷ್ಟಿ ಮಾಡಿಕೊಡುತ್ತಾನೆ ಎಂದು ಹೇಳುವುದರಿಂದ ಜೀವೇಶ್ವರಭೇದವು ಸಿದ್ಧವಾಗುತ್ತದೆ ಮತ್ತು ಜಡೇಶ್ವರಭೇದವು ಸಿದ್ಧವಾಗುತ್ತದೆ. ಜೀವರು ಅನಿತ್ಯ ಪದಾರ್ಥಗಳನ್ನು ಭೋಗಿಸಿ ಸುಖವನ್ನು ಹೊಂದುತ್ತಾರೆ ಎಂದು ಹೇಳುವುದರಿಂದ ಜೀವಜಡಗಳಿಗೆ ಭೇದವು ಸಿದ್ಧವಾಗುತ್ತದೆ. ಜೀವರಿಗೆ ಸಾಧ್ಯವಿಲ್ಲದ ಅಂತಹ ಕರ್ತೃತ್ವವನ್ನು ಹೇಳುವುದರಿಂದ ದೇವರಿಗೆ ಪ್ರಭುತ್ವವು ಸಿದ್ಧವಾಗುತ್ತದೆ. ದೇವರು ಕೊಟ್ಟ ಆ ಪದಾರ್ಥಗಳನ್ನು ಜೀವರು ಭೋಗಿಸುವುದರಿಂದ ದೇವರಿಗೆ ಸ್ವಾತಂತ್ರ್ಯವೂ, ಜೀವರಿಗೆ ಪಾರತಂತ್ರ್ಯವೂ ಸಿದ್ಧವಾಗುತ್ತದೆ. ಹೀಗೆ ಅಪೇಕ್ಷಿತವಾದ ಎಲ್ಲಾ ಅರ್ಥಗಳನ್ನೂ ಒಂದೇ ಮಂತ್ರವು ಹೇಳುತ್ತದೆ ಎಂದು ಅಭಿಪ್ರಾಯ.

**ಚೇತನಸ್ಯೈವ ಜನ್ಮಾದಿಕರ್ತೃತ್ವಂ ಯಲ್ಲಟೋದಿತಂ ।**
**ತಟಸ್ಥತ್ವಕಥಾ ತಸ್ಯ ಮಠಸ್ಥಾಭೂತ್ ಕುಯೋಗಿನಾಂ ॥ ೪೨೭ ॥**

**ಅರ್ಥ–** ಯತ್= ಯಾವ ಕಾರಣದಿಂದ, ಚೇತನಸ್ಯೈವ= ಚೇತನಕ್ಕೇ, ಜನ್ಮಾದಿಕರ್ತೃತ್ವಂ= ಜನ್ಮಾದಿ ಕರ್ತೃತ್ವವು, ಲಟಾ= ಲಡಂತವಾದ ಕ್ರಿಯಾಪದದಿಂದ, ಉದಿತಂ= ಹೇಳಲ್ಪಟ್ಟಿದೆಯೋ, ಆ ಕಾರಣದಿಂದ, ತಸ್ಯ= ಆ ಜನ್ಮಾದಿಕರ್ತೃತ್ವಕ್ಕೆ, ತಟಸ್ಥತ್ವಕಥಾ= ತಟಸ್ಥತ್ವ ವಾದವು, ಕುಯೋಗಿನಾಂ= ಕುಯೋಗಿಗಳ, ಮಠಸ್ಥಾಭೂತ್= ಮಠಕ್ಕೇ ಸೀಮಿತವಾಯಿತು.

**ಅನುವಾದ–** ವಿದಧಾತಿ ಎಂಬಲ್ಲಿರುವ ವರ್ತಮಾನಕಾಲಾರ್ಥಕವಾದ 'ಲಟ್' ಪ್ರತ್ಯಯವು ಚೇತನಕ್ಕೇ ಜನ್ಮಾದಿಕರ್ತೃತ್ವವನ್ನು ಹೇಳುವುದರಿಂದ, ಜನ್ಮಾದಿಕರ್ತೃತ್ವವು ತಟಸ್ಥ ಲಕ್ಷಣ ಎಂದು ಹೇಳುವ ಮಾತು ಕುಯೋಗಿಗಳ ಮಠದ ಆವರಣಕ್ಕೇ ಸೀಮಿತವಾಯಿತು.

**ಭಾವವಿಲಾಸಿನೀ–** ಏತತ್ಶ್ರುತಿಸಿದ್ಧಂ ಪ್ರಮೇಯಾಂತರಂ ಚಾಹ – **ಚೇತನಸ್ಯೈವೇತಿ** ॥ ಚೇತನಶ್ಚೇತನಾನಾಮಿತ್ಯತ್ರೋಕ್ತಚೇತನಸ್ಯೈವ ಕಾಮ್ಯಪದೋಕ್ತಜಡಜಗಜ್ಜನ್ಮಾದಿ ಕರ್ತೃತ್ವಮ್ । ಯದ್ಯಸ್ಮಾತ್ । ಲಟಾ ವಿದಧಾತೀತ್ಯತ್ರ ವಿದ್ಯಮಾನಕರ್ತ್ರರ್ಥಕಲಟಾ । ತಸ್ಯ ಜನ್ಮಾದಿಕಾರಣತ್ವಲಕ್ಷಣಸ್ಯ । ತಟಸ್ಥತ್ವಕಥಾ ಅವಿದ್ಯಾನಿಷ್ಠತ್ವಕಥಾ । ಮಠಸ್ಥಾ ಮಠ ಏವಸ್ಥಿತಾ ನತು ಸಭಾಯಾಂ ಕಥಿತುಂ ಯೋಗ್ಯೇತ್ಯರ್ಥಃ । ಅನಯಾ ಶ್ರುತ್ಯಾ ಜಗಜ್ಜನ್ಮಾದಿಕರ್ತೃತ್ವಸ್ಯ ಸ್ಪಷ್ಟಂ ಬ್ರಹ್ಮಣಿ ಶಂಸನಾತ್ ತಸ್ಯೈವ ಶ್ರೌತತ್ವಾವಿಶೇಷೇಣ ವಿಶ್ವತೋಮುಖತಯಾ ಬಹುಶ್ರುತ್ಯರ್ಥಸೂಚಕಜನ್ಮಾದಿ-

ಸೂತ್ರೇಽಪಿ ಲಕ್ಷಣತ್ವಸಂಭವೇನ ಬ್ರಹ್ಮಲಕ್ಷಣಸ್ಯಾಬ್ರಹ್ಮನಿಷ್ಠತ್ವ ಕಥನಮಪಿ ನ ಸಭಾಯೋಗ್ಯಮ್। ಸೂತ್ರೇ ಚಾಸ್ಯ ಜನ್ಮಾದಿ ಯತೋ ಭವತಿ ತದ್ಬ್ರಹ್ಮೇತ್ಯೇವ ಯೋಜನಾಯಾಃ ಪ್ರಸಿದ್ಧತ್ವೇನೋ-ಪಾದಾನತ್ವಪ್ರಾಪ್ತೇಃ ಕಾರಣಾಭಾವಾತ್ । ಕರ್ತೃತ್ವಸ್ಯ ಚ ಚಿತ್ಯೇವಾನುಶಾಸನೇನಾನ್ಯತ್ರ ನಯನೇ ಕಾರಣಾಭಾವಾತ್ ಶ್ರುತಿತ್ವಾವಿಶೇಷೇಣಾಸ್ಯಾ ಏವ ಶ್ರುತೇರ್ವಿಷಯವಾಕ್ಯತ್ವ ಸಂಭವಾಚ್ಚೇತಿ ಭಾವಃ ॥ ೪೨೭ ॥

**ವಿವರಣೆ–** ಚೇತನಶ್ಚೇತನಾನಾಂ ಎಂಬಲ್ಲಿ ಚೇತನನಾದ ಜೀವನಿಗಿಂತ ಅತಿಶಯವಾದ ಚೇತನನೇ ವಿದಧಾತಿ ಅನೇಕ ಪದಾರ್ಥಗಳನ್ನು ಸೃಷ್ಟಿಮಾಡುತ್ತಾನೆ ಎಂದು ಹೇಳಿ ಮಂತ್ರವು ಚೇತನಕ್ಕೆ ಜನ್ಮಾದಿಕರ್ತೃತ್ವವನ್ನು ಹೇಳುತ್ತಿದೆ. ಲಟ್ ಪ್ರತ್ಯಯವು ವಿದ್ಯಮಾನಾರ್ಥವನ್ನು ಹೇಳುತ್ತದೆ. ಆದ್ದರಿಂದ ಚೇತನನಲ್ಲಿ ಜನ್ಮಾದಿಕರ್ತೃತ್ವವು ಇದೆ ಎಂದು ಸಿದ್ಧವಾಗುತ್ತದೆ. ಚೇತನರಲ್ಲಿ ಜಗಜನ್ಮಾದಿಕರ್ತೃತ್ವವು ಇರುವಾಗ ಅದಕ್ಕೆ ತಟಸ್ಥತ್ವವನ್ನು ಹೇಳಬೇಕಾದ ಅವಶ್ಯಕತೆಯೇ ಇಲ್ಲ. ತಟಸ್ಥವೆಂದರೆ ಅನ್ಯನಿಷ್ಠವೆಂದು ಅರ್ಥವಷ್ಟೇ. ತನ್ನಲ್ಲಿಯೇ ಜನ್ಮಾದಿಕರ್ತೃತ್ವವಿರುವಾಗ ಅದನ್ನು ಅನ್ಯನಿಷ್ಠ ಎಂದು ಹೇಳಿ, ಆದ್ದರಿಂದ ತಟಸ್ಥ ಎಂದು ಏಕೆ ಹೇಳಬೇಕು ಮತ್ತು ವಿದಧಾತಿ ಎಂದು ಕರ್ತೃತ್ವವನ್ನೇ ಹೇಳಿದೆ. ಆದ್ದರಿಂದ ಜನ್ಮಾದಿಸೂತ್ರದಲ್ಲಿಯೂ ಕೂಡ ಜನ್ಮಾದಿಕರ್ತೃತ್ವವೇ ಅಭಿಪ್ರೇತವಾದ ಲಕ್ಷಣವೇ ಹೊರತಾಗಿ ಉಪಾದಾನಕಾರಣತ್ವವು ಅಭಿಪ್ರೇತವಾದ ಲಕ್ಷಣವಲ್ಲ ಮತ್ತು ಜನ್ಮಾಧಿಕರಣದಲ್ಲಿ ನಿತ್ಯೋನಿತ್ಯಾನಾಂ ಎಂಬ ವಾಕ್ಯವನ್ನು ವಿಷಯವಾಕ್ಯವೆಂದು ಸ್ವೀಕರಿಸಬಹುದು. ಏಕೆಂದರೆ ಸೂತ್ರಗಳು ವಿಶ್ವತೋಮುಖ ವಾಗಿವೆಯಷ್ಟೇ? ಆದ್ದರಿಂದ ಇಲ್ಲಿ ಕರ್ತೃತ್ವವೇ ಪ್ರಸಕ್ತವಾಗಿರುವುದರಿಂದ ಉಪಾದಾನತ್ವದ ವಾರ್ತೆಯೇ ಇಲ್ಲ. ಆದ್ದರಿಂದ ತಟಸ್ಥ ಲಕ್ಷಣ ಎಂದು ಹೇಳಬೇಕಾದ ಪ್ರಸಂಗವೂ ಇಲ್ಲ ಎಂದು ಅಭಿಪ್ರಾಯ.

**ಬ್ರಹ್ಮೋಪಾದಾನತಾವಾರ್ತಾ ನಿರ್ಮೂಲಾ ಚಾಭವತ್ ತತಃ ।**
**ಕರ್ತೃತಾದ್ಯೈಶಧರ್ಮಾಣಾಮಧ್ಯಾಸೋಽಪಿ ನಿರಾಕೃತಃ ॥ ೪೨೮ ॥**

**ಅರ್ಥ–** ತತಃ= ಆ ಕಾರಣದಿಂದ, ಬ್ರಹ್ಮೋಪಾದಾನತಾವಾರ್ತಾ= ಜಗತ್ತಿಗೆ ಬ್ರಹ್ಮನು ಉಪಾದಾನವೆಂಬ ವಾರ್ತೆಯು, ನಿರ್ಮೂಲಾಽಭವತ್= ನಿರ್ಮೂಲವಾಯಿತು, ಕರ್ತೃತಾದ್ಯೈಶಧರ್ಮಾಣಾಂ= ಕರ್ತೃತ್ವ ಮೊದಲಾದ ಈಶ್ವರ ಧರ್ಮಗಳಿಗೆ, ಅಧ್ಯಾಸೋಽಪಿ= ಆರೋಪಿತತ್ವವು ಕೂಡ, ನಿರಾಕೃತಃ= ನಿರಾಕರಿಸಲ್ಪಟ್ಟಿತು.

**ಅನುವಾದ–** ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನ ಎಂಬ ವಾರ್ತೆಯು ನಿರ್ಮೂಲವಾಯಿತು ಮತ್ತು ಕರ್ತೃತ್ವ ಮೊದಲಾದ ಬ್ರಹ್ಮಧರ್ಮಗಳು ಆರೋಪಿತವಾದವು ಎಂಬುದೂ ನಿರಸ್ತವಾಯಿತು.

**ಭಾವವಿಲಾಸಿನೀ–** ತತಃ ಜನ್ಮಾದಿಸೂತ್ರೇ ಉಪಾದಾನತ್ವಾಪ್ರಸಂಗಾತ್ । ಕರ್ತೃತ್ವಾದ್ಯಾನಾಮೀಶ-ಧರ್ಮಾಣಾಮಧ್ಯಾಸೋಽಪಿ ತತೋ ಮೋಕ್ಷೋಪಯೋಗಿ- ಸಾಕ್ಷಾತ್ಕಾರವಿಷಯತ್ವಾನ್ನಿರಾಕೃತ ಇತಿ ತತಃ ಶಬ್ದಸ್ಯಾವೃತ್ತಿಃ ॥ ೪೨೮ ॥

**ವಿವರಣೆ–** ಜನ್ಮಾದಿ ಸೂತ್ರಕ್ಕೆ ನಿತ್ಯೋಽನಿತ್ಯಾನಾಂ ಎಂಬ ವಾಕ್ಯವು ವಿಷಯವಾಕ್ಯವಾಗಬಹುದು ಎಂದು ಹೇಳಿದುದರಿಂದ ಈ ವಾಕ್ಯದಲ್ಲಿ ಉಪಾದಾನತ್ವ ಪ್ರಸಕ್ತಿಯೇ ಇಲ್ಲದಿರುವುದರಿಂದ ಮತ್ತು ಕರ್ತೃತ್ವವು ಹೇಳಲ್ಪಡುವುದರಿಂದ ಜಗತ್ಕರ್ತೃತ್ವ ಲಕ್ಷಣವು ತಟಸ್ಥ ಎಂಬ ಮಾತಿಗೆ ಯಾವ ಆಧಾರವೂ ಇಲ್ಲ ಎಂದು ಸಿದ್ಧವಾಗುತ್ತದೆ. ಜೊತೆಗೆ ಚೇತನಃ ವಿದಧಾತಿ ಎಂದು ಹೇಳಿ ಲಟ್ ಪ್ರತ್ಯಯದಿಂದ ಚೇತನದಲ್ಲಿಯೇ ಕರ್ತೃತ್ವಕ್ಕೆ ವಿದ್ಯಮಾನತ್ವವನ್ನು ಹೇಳಿರುವುದರಿಂದ ಕರ್ತೃತ್ವಾದಿಗಳು ಆರೋಪಿತ-ವಾಗಬೇಕಾದ ಆವಶ್ಯಕತೆಯೂ ಇಲ್ಲ. ಆದ್ದರಿಂದ ಈ ಎರಡು ವಾದಗಳೂ ಇದರಿಂದ ನಿರಾಕೃತವಾಯಿತು ಎಂದು ಅಭಿಪ್ರಾಯ.

**ಮಹಾಸಾಮರ್ಥ್ಯಮೀಶಸ್ಯ ಪ್ರಭುತ್ವಂ ಚ ಪ್ರಸಾಧಿತಂ ।**
**ಉಪಾದಾನಾದಿವಿಜ್ಞಾನಾತ್ ಸಾರ್ವಜ್ಞಾದಿಮಹಾಗುಣಾಃ ।★**
**ಸ್ವಾತಂತ್ರ್ಯಂ ತಸ್ಯ ಜೀವಾನಾಂ ಪಾರತಂತ್ರ್ಯಂ ಚ ಸಾಧಿತಂ ॥ ೪೨೯ ॥**

**ಅರ್ಥ–** ಈಶಸ್ಯ= ಈಶ್ವರನಿಗೆ, ಮಹಾಸಾಮರ್ಥ್ಯಂ= ಮಹಾಸಾಮರ್ಥ್ಯವು, ಪ್ರಭುತ್ವಂ ಚ= ಮತ್ತು ಪ್ರಭುತ್ವವು, ಪ್ರಸಾಧಿತಂ= ಚೆನ್ನಾಗಿ ಸಾಧಿಸಲ್ಪಟ್ಟಿತು, ಉಪಾದಾನಾದಿ-ವಿಜ್ಞಾನಾತ್= ಉಪಾದಾನಾದಿಗಳ ವಿಶೇಷಜ್ಞಾನವಿರುವುದರಿಂದ, ಸಾರ್ವಜ್ಞಾದಿ ಮಹಾ-ಗುಣಾಃ= ಸಾರ್ವಜ್ಞ ಮೊದಲಾದ ಮಹಾಗುಣಗಳೂ, ತಸ್ಯ= ಈಶ್ವರನ, ಸ್ವಾತಂತ್ರ್ಯಂ= ಸ್ವಾತಂತ್ರ್ಯವೂ, ಜೀವಾನಾಂ ಚ= ಮತ್ತು ಜೀವನ, ಪಾರತಂತ್ರ್ಯಂ ಚ= ಮತ್ತು ಪಾರತಂತ್ರ್ಯವೂ, ಸಾಧಿತಂ= ಸಾಧಿಸಲ್ಪಟ್ಟಿತು.

**ಅನುವಾದ–** ಈಶ್ವರನ ಮಹಾಸಾಮರ್ಥ್ಯವು ಮತ್ತು ಪ್ರಭುತ್ವವು ಸಾಧಿಸಲ್ಪಟ್ಟಿತು. ಉಪಾದಾನಾದಿಗಳ ವಿಶೇಷಜ್ಞಾನವಿರುವುದರಿಂದ ಸರ್ವಜ್ಞತ್ವವೇ ಮೊದಲಾದ ಮಹಾಗುಣಗಳು ಸಾಧಿಸಲ್ಪಟ್ಟವು. ಹಾಗೆಯೇ ಈಶ್ವರನ ಸ್ವಾತಂತ್ರ್ಯವು ಮತ್ತು ಜೀವರ ಪಾರತಂತ್ರ್ಯವು ಚೆನ್ನಾಗಿ ಸಾಧಿಸಲ್ಪಟ್ಟಿತು.

**ಭಾವವಿಲಾಸಿನೀ–** ತತೋಽನಂತಜೀವಾಪೇಕ್ಷಿತಕಾಮ್ಯಪದಾರ್ಥ ಸ್ರಷ್ಟೃತ್ವಾತ್ತೈರ್ಧ್ಯೇಯ-ತ್ವಾಚ್ಚ ಮಹಾಸಾಮರ್ಥ್ಯಂ ಪ್ರಭುತ್ವಂ ಚ ಪ್ರಸಾಧಿತಮಿತಿ ಪೂರ್ವವದಾವೃತ್ತ್ಯಾ ಯೋಜ-ನೀಯಮ್ । ಮಹಾಸಾಮರ್ಥ್ಯಮಿತ್ಯುಪಲಕ್ಷಣಮ್ । ಅನಂತಪದಾರ್ಥೋಪಾದಾನ-ದ್ರಷ್ಟೃತ್ವಾತ್ ಸಾರ್ವಜ್ಞ್ಯಂ ಚ । ತಸ್ಯ ನಾರಾಯಣಸ್ಯ । ಏಕ ಏವ ವಿದಧಾತಿ ನ ತ್ವನ್ಯಪ್ರೇರಿತ

ಸೂತ್ರೇಽಪಿ ಲಕ್ಷಣತ್ವಸಂಭವೇನ ಬ್ರಹ್ಮಲಕ್ಷಣಸ್ಯಾಬ್ರಹ್ಮನಿಷ್ಠತ್ವ ಕಥನಮಪಿ ನ ಸಭಾಯೋಗ್ಯಮ್। ಸೂತ್ರೇ ಚಾಸ್ಯ ಜನ್ಮಾದಿ ಯತೋ ಭವತಿ ತದ್ಬ್ರಹ್ಮೇತ್ಯೇವ ಯೋಜನಾಯಾಃ ಪ್ರಸಿದ್ಧತ್ವೇನೋ-ಪಾದಾನತ್ವಪ್ರಾಪ್ತೇಃ ಕಾರಣಾಭಾವಾತ್ । ಕರ್ತೃತ್ವಸ್ಯ ಚ ಚಿತ್ಯೇವಾನುಶಾಸನೇನಾನ್ಯತ್ರ ನಯನೇ ಕಾರಣಾಭಾವಾತ್ ಶ್ರುತಿತ್ವಾವಿಶೇಷೇಣಾಸ್ಯಾ ಏವ ಶ್ರುತೇರ್ವಿಷಯವಾಕ್ಯತ್ವ ಸಂಭವಾಚ್ಚೇತಿ ಭಾವಃ ॥ ೪೨೭ ॥

**ವಿವರಣೆ–** ಚೇತನಶ್ಚೇತನಾನಾಂ ಎಂಬಲ್ಲಿ ಚೇತನನಾದ ಜೀವನಿಗಿಂತ ಅತಿಶಯವಾದ ಚೇತನನೇ ವಿದಧಾತಿ ಅನೇಕ ಪದಾರ್ಥಗಳನ್ನು ಸೃಷ್ಟಿಮಾಡುತ್ತಾನೆ ಎಂದು ಹೇಳಿ ಮಂತ್ರವು ಚೇತನಕ್ಕೆ ಜನ್ಮಾದಿಕರ್ತೃತ್ವವನ್ನು ಹೇಳುತ್ತಿದೆ. ಲಟ್ ಪ್ರತ್ಯಯವು ವಿದ್ಯಮಾನಾರ್ಥವನ್ನು ಹೇಳುತ್ತದೆ. ಆದ್ದರಿಂದ ಚೇತನನಲ್ಲಿ ಜನ್ಮಾದಿಕರ್ತೃತ್ವವು ಇದೆ ಎಂದು ಸಿದ್ಧವಾಗುತ್ತದೆ. ಚೇತನರಲ್ಲಿ ಜಗಜನ್ಮಾದಿಕರ್ತೃತ್ವವು ಇರುವಾಗ ಅದಕ್ಕೆ ತಟಸ್ಥತ್ವವನ್ನು ಹೇಳಬೇಕಾದ ಅವಶ್ಯಕತೆಯೇ ಇಲ್ಲ. ತಟಸ್ಥವೆಂದರೆ ಅನ್ಯನಿಷ್ಠವೆಂದು ಅರ್ಥವಷ್ಟೇ. ತನ್ನಲ್ಲಿಯೇ ಜನ್ಮಾದಿಕರ್ತೃತ್ವವಿರುವಾಗ ಅದನ್ನು ಅನ್ಯನಿಷ್ಠ ಎಂದು ಹೇಳಿ, ಆದ್ದರಿಂದ ತಟಸ್ಥ ಎಂದು ಏಕೆ ಹೇಳಬೇಕು ಮತ್ತು ವಿದಧಾತಿ ಎಂದು ಕರ್ತೃತ್ವವನ್ನೇ ಹೇಳಿದೆ. ಆದ್ದರಿಂದ ಜನ್ಮಾದಿಸೂತ್ರದಲ್ಲಿಯೂ ಕೂಡ ಜನ್ಮಾದಿಕರ್ತೃತ್ವವೇ ಅಭಿಪ್ರೇತವಾದ ಲಕ್ಷಣವೇ ಹೊರತಾಗಿ ಉಪಾದಾನಕಾರಣತ್ವವು ಅಭಿಪ್ರೇತವಾದ ಲಕ್ಷಣವಲ್ಲ ಮತ್ತು ಜನ್ಮಾಧಿಕರಣದಲ್ಲಿ ನಿತ್ಯೋಽನಿತ್ಯಾನಾಂ ಎಂಬ ವಾಕ್ಯವನ್ನು ವಿಷಯವಾಕ್ಯವೆಂದು ಸ್ವೀಕರಿಸಬಹುದು. ಏಕೆಂದರೆ ಸೂತ್ರಗಳು ವಿಶ್ವತೋಮುಖ ವಾಗಿವೆಯಷ್ಟೇ? ಆದ್ದರಿಂದ ಇಲ್ಲಿ ಕರ್ತೃತ್ವವೇ ಪ್ರಸಕ್ತವಾಗಿರುವುದರಿಂದ ಉಪಾದಾನತ್ವದ ವಾರ್ತೆಯೇ ಇಲ್ಲ. ಆದ್ದರಿಂದ ತಟಸ್ಥ ಲಕ್ಷಣ ಎಂದು ಹೇಳಬೇಕಾದ ಪ್ರಸಂಗವೂ ಇಲ್ಲ ಎಂದು ಅಭಿಪ್ರಾಯ.

ಬ್ರಹ್ಮೋಪಾದಾನತಾವಾರ್ತಾ ನಿರ್ಮೂಲಾ ಚಾಭವತ್ ತತಃ ।
ಕರ್ತೃತ್ವಾದ್ಯೇಶಧರ್ಮಾಣಾಮಧ್ಯಾಸೋಽಪಿ ನಿರಾಕೃತಃ ॥ ೪೨೮ ॥

**ಅರ್ಥ–** ತತಃ= ಆ ಕಾರಣದಿಂದ, ಬ್ರಹ್ಮೋಪಾದಾನತಾವಾರ್ತಾ= ಜಗತ್ತಿಗೆ ಬ್ರಹ್ಮನು ಉಪಾದಾನವೆಂಬ ವಾರ್ತೆಯು, ನಿರ್ಮೂಲಾಽಭವತ್= ನಿರ್ಮೂಲವಾಯಿತು, ಕರ್ತೃತ್ವಾದ್ಯೇಶಧರ್ಮಾಣಾಂ= ಕರ್ತೃತ್ವ ಮೊದಲಾದ ಈಶ್ವರ ಧರ್ಮಗಳಿಗೆ, ಅಧ್ಯಾಸೋಽಪಿ= ಆರೋಪಿತತ್ವವು ಕೂಡ, ನಿರಾಕೃತಃ= ನಿರಾಕರಿಸಲ್ಪಟ್ಟಿತು.

**ಅನುವಾದ–** ಆದ್ದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನ ಎಂಬ ವಾರ್ತೆಯು ನಿರ್ಮೂಲವಾಯಿತು ಮತ್ತು ಕರ್ತೃತ್ವ ಮೊದಲಾದ ಬ್ರಹ್ಮಧರ್ಮಗಳು ಆರೋಪಿತವಾದವು ಎಂಬುದೂ ನಿರಸ್ತವಾಯಿತು.

**ಭಾವವಿಲಾಸಿನೀ**– ತತಃ ಜನ್ಮಾದಿಸೂತ್ರೇ ಉಪಾದಾನತ್ವಾಪ್ರಸಂಗಾತ್ । ಕರ್ತೃತ್ವಾದ್ಯಾನಾಮೀಶ-ಧರ್ಮಾಣಾಮಧ್ಯಾಸೋಽಪಿ ತತೋ ಮೋಕ್ಷೋಪಯೋಗಿ- ಸಾಕ್ಷಾತ್ಕಾರವಿಷಯತ್ವಾನ್ನಿರಾಕೃತ ಇತಿ ತತಃ ಶಬ್ದಸ್ಯಾವೃತ್ತಿಃ ॥ ೪೨೮ ॥

**ವಿವರಣೆ**– ಜನ್ಮಾದಿ ಸೂತ್ರಕ್ಕೆ ನಿತ್ಯೋನಿತ್ಯಾನಾಂ ಎಂಬ ವಾಕ್ಯವು ವಿಷಯವಾಕ್ಯವಾಗಬಹುದು ಎಂದು ಹೇಳಿದುದರಿಂದ ಈ ವಾಕ್ಯದಲ್ಲಿ ಉಪಾದಾನತ್ವ ಪ್ರಸಕ್ತಿಯೇ ಇಲ್ಲದಿರುವುದರಿಂದ ಮತ್ತು ಕರ್ತೃತ್ವವು ಹೇಳಲ್ಪಡುವುದರಿಂದ ಜಗತ್ಕರ್ತೃತ್ವ ಲಕ್ಷಣವು ತಟಸ್ಥ ಎಂಬ ಮಾತಿಗೆ ಯಾವ ಆಧಾರವೂ ಇಲ್ಲ ಎಂದು ಸಿದ್ಧವಾಗುತ್ತದೆ. ಜೊತೆಗೆ ಚೇತನಃ ವಿದಧಾತಿ ಎಂದು ಹೇಳಿ ಲಟ್ ಪ್ರತ್ಯಯದಿಂದ ಚೇತನದಲ್ಲಿಯೇ ಕರ್ತೃತ್ವಕ್ಕೆ ವಿದ್ಯಮಾನತ್ವವನ್ನು ಹೇಳಿರುವುದರಿಂದ ಕರ್ತೃತ್ವಾದಿಗಳು ಆರೋಪಿತ-ವಾಗಬೇಕಾದ ಅವಶ್ಯಕತೆಯೂ ಇಲ್ಲ. ಆದ್ದರಿಂದ ಈ ಎರಡು ವಾದಗಳೂ ಇದರಿಂದ ನಿರಾಕೃತವಾಯಿತು ಎಂದು ಅಭಿಪ್ರಾಯ.

**ಮಹಾಸಾಮರ್ಥ್ಯಮೀಶಸ್ಯ ಪ್ರಭುತ್ವಂ ಚ ಪ್ರಸಾಧಿತಂ ।**
**ಉಪಾದಾನಾದಿವಿಜ್ಞಾನಾತ್ ಸಾರ್ವಜ್ಞಾದಿಮಹಾಗುಣಾಃ ।★**
**ಸ್ವಾತಂತ್ರ್ಯಂ ತಸ್ಯ ಜೀವಾನಾಂ ಪಾರತಂತ್ರ್ಯಂ ಚ ಸಾಧಿತಂ ॥ ೪೨೯ ॥**

**ಅರ್ಥ**– ಈಶಸ್ಯ= ಈಶ್ವರನಿಗೆ, ಮಹಾಸಾಮರ್ಥ್ಯಂ= ಮಹಾಸಾಮರ್ಥ್ಯವು, ಪ್ರಭುತ್ವಂ ಚ= ಮತ್ತು ಪ್ರಭುತ್ವವು, ಪ್ರಸಾಧಿತಂ= ಚೆನ್ನಾಗಿ ಸಾಧಿಸಲ್ಪಟ್ಟಿತು, ಉಪಾದಾನಾದಿ-ವಿಜ್ಞಾನಾತ್= ಉಪಾದಾನಾದಿಗಳ ವಿಶೇಷಜ್ಞಾನವಿರುವುದರಿಂದ, ಸಾರ್ವಜ್ಞಾದಿ ಮಹಾ-ಗುಣಾಃ= ಸಾರ್ವಜ್ಞ ಮೊದಲಾದ ಮಹಾಗುಣಗಳೂ, ತಸ್ಯ= ಈಶ್ವರನ, ಸ್ವಾತಂತ್ರ್ಯಂ= ಸ್ವಾತಂತ್ರ್ಯವೂ, ಜೀವಾನಾಂ ಚ= ಮತ್ತು ಜೀವನ, ಪಾರತಂತ್ರ್ಯಂ ಚ= ಮತ್ತು ಪಾರತಂತ್ರ್ಯವೂ, ಸಾಧಿತಂ= ಸಾಧಿಸಲ್ಪಟ್ಟಿತು.

**ಅನುವಾದ**– ಈಶ್ವರನ ಮಹಾಸಾಮರ್ಥ್ಯವು ಮತ್ತು ಪ್ರಭುತ್ವವು ಸಾಧಿಸಲ್ಪಟ್ಟಿತು. ಉಪಾದಾನಾದಿಗಳ ವಿಶೇಷಜ್ಞಾನವಿರುವುದರಿಂದ ಸರ್ವಜ್ಞತ್ವವೇ ಮೊದಲಾದ ಮಹಾಗುಣಗಳು ಸಾಧಿಸಲ್ಪಟ್ಟವು. ಹಾಗೆಯೇ ಈಶ್ವರನ ಸ್ವಾತಂತ್ರ್ಯವು ಮತ್ತು ಜೀವರ ಪಾರತಂತ್ರ್ಯವು ಚೆನ್ನಾಗಿ ಸಾಧಿಸಲ್ಪಟ್ಟಿತು.

**ಭಾವವಿಲಾಸಿನೀ**– ತತೋಽನಂತಜೀವಾಪೇಕ್ಷಿತಕಾಮ್ಯಪದಾರ್ಥ ಸ್ರಷ್ಟೃತ್ವಾತ್ತೈರ್ಧ್ಯೇಯ-ತ್ವಾಚ್ಚ ಮಹಾಸಾಮರ್ಥ್ಯಂ ಪ್ರಭುತ್ವಂ ಚ ಪ್ರಸಾಧಿತಮಿತಿ ಪೂರ್ವವದಾವೃತ್ತ್ಯಾ ಯೋಜ-ನೀಯಮ್ । ಮಹಾಸಾಮರ್ಥ್ಯಮಿತ್ಯುಪಲಕ್ಷಣಮ್ । ಅನಂತಪದಾರ್ಥೋಪಾದಾನ-ದ್ರಷ್ಟೃತ್ವಾತ್ ಸಾರ್ವಜ್ಞ್ಯಂ ಚ । ತಸ್ಯ ನಾರಾಯಣಸ್ಯ । ಏಕ ಏವ ವಿದಧಾತಿ ನ ತ್ವನ್ಯಪ್ರೇರಿತ

ಇತ್ಯುಕ್ತ್ಯಾ ಸ್ವತಂತ್ರಃ ಕರ್ತೇತಿ ವಚನಾತ್ ಕರ್ತೃತ್ವೋಕ್ತ್ಯಾ ಚ ಸ್ವಾತಂತ್ರ್ಯಮ್ । ತದ್ದತ್ತಭೋಗ-ಭೋಕ್ತೃತ್ವಾಜ್ಜೀವಾನಾಂ ಪಾರತಂತ್ರ್ಯಂ ಚ ॥ ೪೨೯ ॥

**ವಿವರಣೆ–** ಅನಂತ ಜೀವರಿಗೆ ಇಷ್ಟವಾದ ಅನಂತ ಪದಾರ್ಥಗಳನ್ನು ಸೃಷ್ಟಿಸಿ ಕೊಡುವುದರಿಂದ ಈಶ್ವರನಿಗೆ ಮಹಾಸಾಮರ್ಥ್ಯವು ಮತ್ತು ಪ್ರಭುತ್ವವು ಸಿದ್ಧವಾಗುತ್ತದೆ. ಆ ಪದಾರ್ಥಗಳನ್ನು ತಾವೇ ಸೃಷ್ಟಿಮಾಡಿಕೊಳ್ಳಲು ಸಾಮರ್ಥ್ಯವಿಲ್ಲದಿರುವುದರಿಂದ ಜೀವರಿಗೆ ಪಾರತಂತ್ರ್ಯವು ಸಿದ್ಧವಾಗುತ್ತದೆ. ಏಕೋ ವಿದಧಾತಿ ಎಂದು ಅನ್ಯಪ್ರೇರಣೆ ಇಲ್ಲದೇ ಈಶ್ವರನು ಸೃಷ್ಟಿಸುತ್ತಾನೆ ಎಂದು ಹೇಳುವುದರಿಂದ ಈಶ್ವರನಿಗೆ ಸ್ವಾತಂತ್ರ್ಯವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ನಿರ್ಧಾರಣೇ ತು ಯಾ ಷಷ್ಠೀ ಸಾ ನಿರ್ಧಾರಿತವಸ್ತುನಿ ।**
**ಆಧಿಕ್ಯಂ ವಕ್ತ್ಯತಶ್ಚೇಶೇ ಸಾರ್ವಜ್ಞಂ ನಿತ್ಯದೇಹಿತಾ ॥ ೪೩೦ ॥**

**ಅರ್ಥ–** ಯಾ ಷಷ್ಠೀ= ಯಾವ ಷಷ್ಠೀ ವಿಭಕ್ತಿಯು, ನಿರ್ಧಾರಣೇ ತು= ನಿರ್ಧಾರಣಾರ್ಥದಲ್ಲಿ ಇದೆಯೋ, ಸಾ= ಅದು, ನಿರ್ಧಾರಿತವಸ್ತುನಿ= ನಿರ್ಧರಿಸಲ್ಪಟ್ಟ ವಸ್ತುವಿನಲ್ಲಿ, ಆಧಿಕ್ಯಂ ವಕ್ತಿ= ಅತಿಶಯವನ್ನು ಹೇಳುತ್ತದೆ, ಅತಶ್ಚ= ಆ ಕಾರಣದಿಂದಲೂ, ಈಶೇ= ಈಶ್ವರನಾದ ಹರಿಯಲ್ಲಿ, ಸಾರ್ವಜ್ಞಂ= ಸರ್ವಜ್ಞತ್ವವು, ನಿತ್ಯದೇಹಿತಾ= ಮತ್ತು ನಿತ್ಯದೇಹಿತ್ವವು ಸಿದ್ಧವಾಗುತ್ತದೆ.

**ಅನುವಾದ–** ನಿರ್ಧಾರಣ ಷಷ್ಠಿಯು ನಿರ್ಧಾರಿತ ವಸ್ತುವಿಗೆ ಉಳಿದ ವಸ್ತುವಿಗಿಂತ ಅತಿಶಯವನ್ನು ಹೇಳುತ್ತದೆ. ಆದ್ದರಿಂದ ಈಶ್ವರನಿಗೆ ಸರ್ವಜ್ಞತ್ವವು ಮತ್ತು ನಿತ್ಯದೇಹಿತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅತಃ ಕಾರಣಾಚ್ಚ ಚೇತನಶ್ಚೇತನಾನಾಮಿತ್ಯನೇನ ಸಾರ್ವಜ್ಞಮ್ । ನಿತ್ಯೋ ನಿತ್ಯಾನಾಮಿತ್ಯನೇನ ನಿತ್ಯದೇಹಿತಾ ಅನಿತ್ಯದೇಹೇಭ್ಯಃ ಸ್ವರೂಪತೋ ನಿತ್ಯೇಭ್ಯಶ್ಚ ಜೀವೇಭ್ಯೋತಿಶಯಃ ಪರಿಶೇಷಾತ್ ಸಾಧಿತಾ ಏವೇತಿ ಭಾವಃ । ಪೂರ್ವಮಪಿ ಸಾರ್ವಜ್ಞಸ್ಯ ಪ್ರಸಾಧಿತತ್ವಾಚ್ಚಶಬ್ದಃ ॥೪೩೦॥

**ವಿವರಣೆ–** ಚೇತನಶ್ಚೇತನಾನಾಂ ಎಂಬಲ್ಲಿ ನಿರ್ಧಾರಣ ಷಷ್ಠೀ ಇದೆ. ಆದ್ದರಿಂದ ಈಶ್ವರ ಚೇತನದಲ್ಲಿ ಉಳಿದ ಚೇತನಗಳಿಗಿಂತ ಅತಿಶಯವು ಸಿದ್ಧವಾಗುತ್ತದೆ. ಜ್ಞಾನವು ಎಲ್ಲ ಚೇತನರಿಗೂ ಸಮಾನವಾದುದು. ಅದರಲ್ಲಿ ಅತಿಶಯವೆಂದರೆ ಸಾರ್ವಜ್ಞ ಎಂದು ಹೇಳಬೇಕು. ಆದ್ದರಿಂದ ಈಶ್ವರನಿಗೆ ಸಾರ್ವಜ್ಞವು ಸಿದ್ಧವಾಗುತ್ತದೆ. ಅದರಂತೆಯೇ ಎಲ್ಲ ಚೇತನರಿಗೂ ಒಂದು ದೇಹವಿದೆ. ಆ ದೇಹಗಳು ಅನಿತ್ಯವಾದವುಗಳು. ನಿರ್ಧಾರಿತವಾದ ಈಶ್ವರನಿಗೆ ಇನ್ನೊಂದು ಅತಿಶಯವೆಂದರೆ ನಿತ್ಯದೇಹ. ಆದ್ದರಿಂದ ಈ ನಿರ್ಧಾರಣ-

ಷಷ್ಠಿಯಿಂದಲೇ ದೇವರಿಗೆ ಸರ್ವಜ್ಞತ್ವವು ಮತ್ತು ನಿತ್ಯದೇಹವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅಭ್ಯಾಸೇನ ಗುಣೇಷ್ವಸ್ಯಾಸ್ತಾತ್ಪರ್ಯಂ ಗಮ್ಯತೇ ಶ್ರುತೇಃ ॥ ೪೩೧ ॥**

**ಅರ್ಥ-** ಅಭ್ಯಾಸೇನ= ಪುನಃ ಪುನಃ ಹೇಳುವುದರಿಂದ, ಅಸ್ಯಾಶ್ರುತೇಃ= ಈ ಶ್ರುತಿಗೆ, ಗುಣೇ ತಾತ್ಪರ್ಯಂ ಗಮ್ಯತೇ= ಗುಣಗಳಲ್ಲಿ ತಾತ್ಪರ್ಯವು ಸಿದ್ಧವಾಗುತ್ತದೆ.

**ಅನುವಾದ–** ಪುನಃ ಪುನಃ ಗುಣಗಳನ್ನು ಹೇಳುವುದರಿಂದ ಈ ಶ್ರುತಿಗೆ ಗುಣಗಳಲ್ಲಿ ತಾತ್ಪರ್ಯವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಗುಣೇಷು ನಿತ್ಯತ್ವಚೇತನತ್ವೈಕತ್ವಕರ್ತೃತ್ವಾದ್ಯುಕ್ತ್ಯಾ ಭಗವದ್ಗುಣೇಷ್ವೇವಾಭ್ಯಾಸೇನಾಸಕೃದುಕ್ತ್ಯಾ ಪೌನಃಪುನ್ಯೇನ ಗುಣಾನಾಮೇವ ಕಥಿತತ್ವಾದಿತ್ಯರ್ಥಃ । ಅಸ್ಯಾಃ ಶ್ರುತೇರಿತಿ ಸಂಬಂಧಃ ॥ ೪೩೧॥

**ವಿವರಣೆ–** ನಿತ್ಯತ್ವ, ಚೇತನತ್ವ, ಏಕತ್ವ, ಕರ್ತೃತ್ವ ಮೊದಲಾದ ಗುಣಗಳನ್ನು ಪುನಃ ಪುನಃ ಹೇಳುವುದರಿಂದ ಈ ವಾಕ್ಯಕ್ಕೆ ಗುಣಗಳಲ್ಲಿ ತಾತ್ಪರ್ಯವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅನಂತಾನಂತಜೀವೇಷು ಸ್ಥಿತಸ್ಯಾಪ್ಯೇಕತೋಕ್ತಿತಃ ।**
**ಅನಂತಸ್ವಾವತಾರಾಣಾಂ ಸ್ವಸ್ಯ ಚಾಭೇದ ಈರಿತಃ ॥ ೪೩೨ ॥**

**ಅರ್ಥ–** ಅನಂತಾನಂತಜೀವೇಷು= ಅನಂತಾನಂತ ಜೀವರಲ್ಲಿ, ಸ್ಥಿತಸ್ಯಾಪಿ= ಇರುವವನಾದರೂ ಸಹ, ಏಕತೋಕ್ತಿತಃ= ಏಕತ್ವವನ್ನು ಹೇಳಿದ ಕಾರಣದಿಂದ, ಅನಂತಸ್ವಾವತಾರಾಣಾಂ= ತನ್ನ ಅನಂತ ಅವತಾರಗಳಿಗೂ, ಸ್ವಸ್ಯ ಚ= ಮತ್ತು ತನಗೂ, ಅಭೇದಃ= ಅಭೇದವು, ಈರಿತಃ= ಹೇಳಲ್ಪಡುತ್ತದೆ.

**ಅನುವಾದ–** ಅನಂತಾನಂತ ಜೀವರಲ್ಲಿರುವ ಪರಮಾತ್ಮನ ರೂಪಕ್ಕೆ ಏಕತ್ವವನ್ನು ಹೇಳಿದ ಕಾರಣದಿಂದ ಪರಮಾತ್ಮನ ಅನಂತ ಅವತಾರಗಳಿಗೂ ಮತ್ತು ಮೂಲರೂಪಕ್ಕೂ ಅಭೇದವು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಸ್ಥಿತಸ್ಯ ಆತ್ಮಸ್ಥಮಿತ್ಯುಕ್ತ್ಯಾಽನಂತರೂಪೈಃ ಸ್ಥಿತಸ್ಯ । ಏಕ ಇತ್ಯೇಕತ್ವೋಕ್ತಿತಃ ॥೪೩೨॥

**ವಿವರಣೆ–** ಏಕೋ ಬಹೂನಾಂ ಎಂಬಲ್ಲಿ ಜೀವರ ಬಹುತ್ವವನ್ನು ಬಹೂನಾಂ ಎಂಬ ಶಬ್ದವು ಹೇಳುತ್ತವೆ. ಇದು ಉಪಲಕ್ಷಣ. ಚೇತನಾನಾಂ ಎಂಬಲ್ಲಿರುವ ಬಹುವಚನವೂ ಸಹ ಬಹುತ್ವವನ್ನು ಹೇಳುತ್ತದೆ. ಈ ಬಹುತ್ವವನ್ನು ಸಂಕೋಚ ಮಾಡಲು ಕಾರಣವಿಲ್ಲದಿರುವುದರಿಂದ ಅದು ಅನಂತತ್ವದಲ್ಲೇ ಪರ್ಯಾವಸಾನವನ್ನು ಹೊಂದುತ್ತದೆ.

ಅನಂತ ಜೀವರ ಅಂತರ್ಯಾಮಿ ರೂಪಕ್ಕೂ ಮತ್ತು ಹೊರಗಿರುವ ರೂಪಕ್ಕೂ ಅಭೇದವನ್ನು ಹೇಳಿದ ಮೇಲೆ ಹರಿಯ ಅನಂತ ಅವತಾರಗಳಿಗೂ ಮತ್ತು ಮೂಲರೂಪಕ್ಕೂ ಅಭೇದವು ಅನಾಯಾಸವಾಗಿ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಭೇದಕಾರ್ಯಕರಃ ಶಕ್ತಿವಿಶೇಷಃ ಪರಮಾತ್ಮನಿ ।**
**ಪುಚ್ಛಸ್ಯ ಪುಚ್ಛಿನೈಕ್ಯಂ ತತ್ ಕೈಮುತ್ಯೇನ ಪ್ರಸಾಧಿತಂ ॥ ೪೩೩ ॥**

**ಅರ್ಥ–** ಪರಮಾತ್ಮನಿ= ಪರಮಾತ್ಮನಲ್ಲಿ, ಭೇದಕಾರ್ಯಕರಃ= ಭೇದಕಾರ್ಯವನ್ನು ನಿರ್ವಹಿಸುವ, ಶಕ್ತಿ ವಿಶೇಷಃ= ಶಕ್ತಿ ವಿಶೇಷವೂ ಸಹ, (ಈ ಮಂತ್ರದಿಂದಲೇ ಸಿದ್ಧವಾಗುತ್ತದೆ), ತತ್= ಆ ಕಾರಣದಿಂದ, ಪುಚ್ಛಸ್ಯ= ಆನಂದಮಯ ಪುಚ್ಛನಿಗೆ, ಪುಚ್ಛಿನಃ= ಅವಯವಿಯಾದ ಆನಂದಮಯನಿಂದ, ಐಕ್ಯಂ= ಅಭೇದವು, ಕೈಮುತ್ಯೇನ= ಕೈಮುತ್ಯ ನ್ಯಾಯದಿಂದಲೇ, ಪ್ರಸಾಧಿತಂ= ಚೆನ್ನಾಗಿ ಸಾಧಿಸಲ್ಪಟ್ಟಿತು.

**ಅನುವಾದ–** ಪರಮಾತ್ಮನಲ್ಲಿ ಭೇದವಿಲ್ಲದಿದ್ದರೂ ಭೇದಕಾರ್ಯನಿರ್ವಾಹಕವಾದ ಸಾಮರ್ಥ್ಯ ವಿಶೇಷ ರೂಪವಾದ ಶಕ್ತಿ ಎಂಬ ವಿಶೇಷ ಪದಾರ್ಥವು ಈ ಮಂತ್ರದಿಂದಲೇ ಸಿದ್ಧವಾಗುತ್ತದೆ. ಆನಂದಮಯ ಪುಚ್ಛನಾದ ಬ್ರಹ್ಮನಿಗೂ ಮತ್ತು ಅವಯವಿಯಾದ ಆನಂದಮಯನಿಗೂ ಅಭೇದವೂ ಸಹ ಕೈಮುತ್ಯನ್ಯಾಯ-ದಿಂದಲೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಭೇದಕಾರ್ಯಕರಃ ಏಕತ್ವೇಽಪ್ಯನಂತರೂಪತ್ವಾಖ್ಯಭೇದಕಾರ್ಯಕರಃ । ಏಕಮೇವಾದ್ವಿತೀಯಂ ಇತಿ ಶ್ರುತ್ಯಾ ಬ್ರಹ್ಮಣಿ ಸ್ವಗತಭೇದಾಭಾವಃ ಸರ್ವಸಂಪ್ರತಿಪನ್ನಃ । ಉಕ್ತ-ವಿಧಯಾ ಭೇದಕಾರ್ಯಸ್ಯಾಪಿ ದರ್ಶನಾತ್ ತತ್ ಸಾಧಕೋ ಭೇದಪ್ರತಿನಿಧಿಃ ಸಾಮರ್ಥ್ಯ-ವಿಶೇಷಾಖ್ಯೋ ವಿಶೇಷೋಽಪಿ ಭಗವತ್ಯನಯೈವ ಶ್ರುತ್ಯಾಽರ್ಥಾತ್ ಪ್ರಸಾಧಿತ ಇತಿ ಭಾವಃ । ತತ್ತಸ್ಮಾತ್ । ದೂರದೂರಸ್ಥಾನೇಕರೂಪೈರ್ಮೂಲರೂಪಸ್ಯೈಕ್ಯಕಥನಾತ್ ಪುಚ್ಛಸ್ಯಾಽ-ನಂದಮಯಪಾದಸ್ಯ ಪುಚ್ಛಿನಾಽನಂದಮಯಾಖ್ಯಾವಯವಿನಾ । ಭಿನ್ನಭಿನ್ನಜೀವಾಖ್ಯೋಪಾಧಿ ಗತಾನ್ಯೋನ್ಯಾಸಂಬದ್ಧರೂಪಾಣಾಮೈಕ್ಯಸಿದ್ಧೌ ಸದಾ ಸಂಬದ್ಧೈಕದೇಹಭಾಗ ಭೂತಪುಚ್ಛೈಕ್ಯಸ್ಯ ಸುತರಾಂ ಸಿದ್ಧೇಃ ಕೈಮುತ್ಯೇನೇತ್ಯುಕ್ತಮ್ ॥ ೪೩೩ ॥

**ವಿವರಣೆ–** ಏಕ ಎಂಬ ಶಬ್ದಕ್ಕೆ ಸ್ವಗತಭೇದವಿವರ್ಜಿತ ಎಂಬ ಅರ್ಥವು ಎಲ್ಲ ವಾದಿಗಳಿಗೂ ಸಂಪ್ರತಿಪನ್ನವಾಗಿದೆ. ಆದರೂ ಅವನ ರೂಪಗಳಲ್ಲಿ ಅನಂತತ್ವವಿದೆ ಎಂದು ಪ್ರಮಾಣ ಪ್ರಮಿತವಾಗಿದೆ ಮತ್ತು ಈ ಮಂತ್ರದಲ್ಲಿಯೂ ಹೇಳಲ್ಪಡುತ್ತದೆ. ಅನಂತತ್ವವನ್ನು ಭೇದದಿಂದ ನಿರ್ವಾಹ ಮಾಡಬೇಕು. ಆದರೆ ಪರಮಾತ್ಮನಲ್ಲಿ ಸ್ವಗತಭೇದವಿಲ್ಲ. ಆದ್ದರಿಂದ ಭೇದಪ್ರತಿನಿಧಿಯಾದ ಸಾಮರ್ಥ್ಯಾತಿಶಯರೂಪವಾದ ವಿಶೇಷವೆಂಬ ಒಂದು ಪದಾರ್ಥವನ್ನು ಪರಮಾತ್ಮನಲ್ಲಿ ಅಂಗೀಕರಿಸಿ ಅದರ ಬಲದಿಂದ ಒಬ್ಬನೇ ಆದ

ಪರಮಾತ್ಮನಿಗೆ ರೂಪಾನಂತ್ಯವನ್ನು ಉಪಪಾದನೆ ಮಾಡಬೇಕು. ಇದೇ ಮಂತ್ರದಲ್ಲಿ ಭಿನ್ನ ಭಿನ್ನ ಸ್ಥಳಗಳಲ್ಲಿರುವ ಅನಂತ ಜೀವರ ಅಂತರ್ಯಾಮಿ ರೂಪಗಳಿಗೂ ಮತ್ತು ಹೊರಗಿರುವ ಭಗವಂತನ ರೂಪಕ್ಕೂ ಅಭೇದವನ್ನು ಹೇಳಿರುವುದರಿಂದ ಆನಂದಮಯ ಪ್ರಕರಣದಲ್ಲಿ ಒಂದೇ ಶರೀರದ ಭಾಗವಾಗಿರುವ ಪುಚ್ಛಕ್ಕೂ ಮತ್ತು ಶರೀರಿಯಾದ ಆನಂದಮಯನಿಗೂ ಅಭೇದವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸ್ವಾಭೇದೇನ ಗುಣಾದೀನಾಂ ಚಿನ್ಮಯತ್ವಂ ಪ್ರಸಾಧಿತಂ ।**
**ಧ್ಯೇಯತೋಕ್ತ್ಯೇಷ್ಟದೇವತ್ವಂ ಸೌಂದರ್ಯಂ ಸುಪ್ರಸನ್ನತಾ ॥ ೪೩೪ ॥**

**ಅರ್ಥ**— ಗುಣಾದೀನಾಂ= ಗುಣಗಳಿಗೆ, ಸ್ವಾಭೇದೇನ= ತನ್ನ ಅಭೇದವು ಇರುವುದರಿಂದ, ಚಿನ್ಮಯತ್ವಂ= ಚೈತನ್ಯಾತ್ಮಕತ್ವವು, ಪ್ರಸಾಧಿತಂ= ಚೆನ್ನಾಗಿ ಸಾಧಿಸಲ್ಪಟ್ಟಿತು, ಧ್ಯೇಯತೋಕ್ತ್ಯಾ= ಧ್ಯೇಯತ್ವವನ್ನು ಹೇಳಿದ್ದರಿಂದ, ಇಷ್ಟದೇವತ್ವಂ= ಇಷ್ಟದೇವತಾತ್ವವೂ, ಸೌಂದರ್ಯಂ= ಸೌಂದರ್ಯವೂ, ಸುಪ್ರಸನ್ನತಾ= ಸುಪ್ರಸನ್ನತೆಯೂ ಚೆನ್ನಾಗಿ ಸಾಧಿಸಲ್ಪಟ್ಟವು.

**ಅನುವಾದ**— ಗುಣಗಳಿಗೆ ಪರಮಾತ್ಮನ ಅಭೇದವನ್ನು ಹೇಳಿದ್ದರಿಂದ ಎಲ್ಲ ಗುಣಗಳೂ ಚಿನ್ಮಯವೆಂದು ಸಿದ್ಧವಾಯಿತು. ಪರಮಾತ್ಮನಿಗೆ ಧ್ಯೇಯತ್ವವನ್ನು ಹೇಳಿದ್ದರಿಂದ ಅವನಲ್ಲಿ ಇಷ್ಟದೈವತ್ವವು, ಸೌಂದರ್ಯವು ಮತ್ತು ಸುಪ್ರಸನ್ನತೆಯು ಸಿದ್ಧವಾದವು.

**ಭಾವವಿಲಾಸಿನೀ**— ಸ್ವಾಭೇದೇನ ಸ್ವಗತಸಕಲಗುಣಾದ್ಯಭೇದಕಥನೇನ । ಆದಿಪದೇನ ದೇಹಾದಿಕಂ ಗೃಹ್ಯತೇ । ಆತ್ಮಸ್ಥಮಾತ್ಮನಿ ಧ್ಯೇಯತಯಾ ಸ್ಥಿತಮಿತ್ಯಪರೋಕ್ಷಜ್ಞಾನಸಾಧನಧ್ಯಾನಸ್ಯಾಪಿ ಕಥನಾದ್ಧ್ಯೇಯತೋಕ್ತ್ಯೇತ್ಯುಕ್ತಮ್ । ಅನ್ಯಥಾಽಽತ್ಮಸ್ಥತ್ವಮಾತ್ರಸ್ಯಾಸುರಜೀವೇಷ್ವಪಿ ವಿದ್ಯಮಾನ-ತ್ವಾತ್ತೇಷಾಮಪಿ ದರ್ಶನಪ್ರಸಂಗಃ ॥ ೪೩೪ ॥

**ವಿವರಣೆ**— ಪರಮಾತ್ಮನು ಸ್ವಗತಭೇದವಿವರ್ಜಿತನಾಗಿರುವುದರಿಂದ ಅವನಲ್ಲಿ ಇರುವ ಗುಣ, ಕ್ರಿಯಾ ಅಥವಾ ಅವನ ದೇಹ ಯಾವುದೂ ಅವನಿಂದ ಭಿನ್ನವಲ್ಲ. ಆದ್ದರಿಂದ ಪರಮಾತ್ಮನಿಗಿಂತ ಅಭಿನ್ನವಾದ ಗುಣಗಳು ಪರಮಾತ್ಮನಂತೆ ಚಿನ್ಮಯವೆಂದೇ ಸಿದ್ಧವಾಗುತ್ತವೆ. ತಮಾತ್ಮಸ್ಥಂ ಯೇನುಪಶ್ಯಂತಿ ಎಂಬಲ್ಲಿ ತಮ್ಮಲ್ಲಿ ಅಂತರ್ಯಾಮಿ ಆಗಿರುವ ಅವನನ್ನು ಯಾರು ಧ್ಯಾನಮಾಡಿ ನೋಡುತ್ತಾರೆಯೋ ಎಂದೇ ಅರ್ಥ. ಇಲ್ಲದಿದ್ದರೆ ಆತ್ಮಸ್ಥತ್ವವು ಅಸುರರಿಗೂ ಸಾಧಾರಣವಾದ್ದರಿಂದ ಅವರಿಗೂ ಪರಮಾತ್ಮನ ದರ್ಶನವಾಗಲಿ ಎಂಬ ಪ್ರಸಂಗವು ಬರುತ್ತದೆ. ಅವರಿಂದ ಧ್ಯೇಯನಲ್ಲ, ಆದ್ದರಿಂದ ಅವರಿಗೆ ದರ್ಶನವಿಲ್ಲ ಎಂದು ಹೇಳಬೇಕು. ಆದ್ದರಿಂದ ಇಲ್ಲಿ ಆತ್ಮಸ್ಥತ್ವವನ್ನು ಧ್ಯಾನ ಮಾಡುವುದಕ್ಕಾಗಿ ಹೇಳಲಾಗಿದೆ. ಆದ್ದರಿಂದ ಪರಮಾತ್ಮನಿಗೆ ಧ್ಯೇಯತ್ವವು ಸಿದ್ಧವಾಯಿತು. ಧ್ಯೇಯತ್ವವಿರಬೇಕಾದರೆ ಅವನಲ್ಲಿ ಇಷ್ಟತ್ವವು ಮತ್ತು ಸೌಂದರ್ಯವು ಇರಬೇಕು.

ಇಲ್ಲದಿದ್ದರೆ ಧ್ಯಾನವನ್ನು ಮಾಡಲು ಸಾಧ್ಯವಿಲ್ಲ. ಹಾಗೆಯೇ ಅವನು ಸುಪ್ರಸನ್ನನಾಗಿಯೂ ಇರಬೇಕು. ಸುಪ್ರಸನ್ನವಾಗಿಲ್ಲದ ಯಾವ ಚೇತನವನ್ನೂ ಯಾರೂ ಧ್ಯಾನ ಮಾಡುವುದಿಲ್ಲ. ಆದ್ದರಿಂದ ಈ ಎಲ್ಲ ಗುಣಗಳು ಪರಮಾತ್ಮನಲ್ಲಿ ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

**ತದಂತಸ್ಥಸ್ಯ ಸಾರ್ವಜ್ಞಶಕ್ತಿಸ್ವಾತಂತ್ರ್ಯಪೂರ್ವಕಾಃ ।**
**ಸ್ರಷ್ಟೃತ್ವಕಾಮದಾತೃತ್ವಮುಕ್ತಿದತ್ವಾದಯೋ ಗುಣಾಃ ।**
**ಸರ್ವೇಶ್ವರತ್ವಪೂರ್ಣತ್ವನಿತ್ಯತ್ವಾದ್ಯಾಶ್ಚ ಸಾಧಿತಾಃ ॥ ೪೩೫ ॥**

**ಅರ್ಥ**– ತತ್= ಆ ಕಾರಣದಿಂದ, ಅಂತಸ್ಥಸ್ಯ= ಅಂತಸ್ಥನಾದ ಪರಮಾತ್ಮನಿಗೆ, ಸಾರ್ವಜ್ಞ= ಸರ್ವಜ್ಞತ್ವ, ಶಕ್ತಿ= ಸಾಮರ್ಥ್ಯ, ಸ್ವಾತಂತ್ರ್ಯ ಪೂರ್ವಕಾಃ= ಸ್ವಾತಂತ್ರ್ಯವೇ ಮೊದಲಾದ, ಸ್ರಷ್ಟೃತ್ವ= ಸೃಷ್ಟಿಕರ್ತೃತ್ವ, ಕಾಮದಾತೃತ್ವ= ಕಾಮಪ್ರದತ್ವ, ಮುಕ್ತಿದತ್ವಾದಯಃ= ಮೋಕ್ಷ ಪ್ರದತ್ವ ಮೊದಲಾದ, ಗುಣಾಃ= ಗುಣಗಳು, ಸರ್ವೇಶ್ವರತ್ವ= ಸರ್ವೇಶ್ವರತ್ವ, ಪೂರ್ಣತ್ವ= ಪೂರ್ಣತ್ವ, ನಿತ್ಯತ್ವಾದ್ಯಾಶ್ಚ= ಮತ್ತು ನಿತ್ಯತ್ವ ಮೊದಲಾದ ಗುಣಗಳು, ಸಾಧಿತಾಃ= ಸಾಧಿಸಲ್ಪಟ್ಟವು.

**ಅನುವಾದ**– ಆದ್ದರಿಂದ ಈ ಮಂತ್ರದಿಂದ ಪರಮಾತ್ಮನಲ್ಲಿ ಸರ್ವಜ್ಞತ್ವ, ಸಾಮರ್ಥ್ಯ, ಸ್ವಾತಂತ್ರ್ಯ ಮೊದಲಾದ ಗುಣಗಳು ಸೃಷ್ಟಿಕರ್ತೃತ್ವ ಕಾಮಪ್ರದತ್ವ ಮುಕ್ತಿಪ್ರದತ್ವ ಮೊದಲಾದ ಗುಣಗಳು ಸರ್ವೇಶ್ವರತ್ವ, ಪೂರ್ಣತ್ವ ನಿತ್ಯತ್ವ ಮೊದಲಾದ ಗುಣಗಳು ಸಾಧಿಸಲ್ಪಟ್ಟವೆ.

**ಭಾವವಿಲಾಸಿನೀ**– ಭೇದಸಾಧನಾರ್ಥಮುಕ್ತಯಾಶ್ರುತ್ಯಾಽಽನುಷಂಗಿಕತಯಾ ಸಿದ್ಧಭಗವತ್ ಗುಣಾನಪಿ ಬುದ್ಧ್ಯಾವಾರೋಹಾಯ ಸಂಗೃಹ್ಣಾತಿ – **ತದಿತಿ** ॥ ತತ್ಶ್ರೌತಪದರತ್ನಬಲಾತ್ । ಬಹೂನಾಂ ಕಾಮಾನ್ವಿದಧಾತೀತ್ಯುಕ್ತ್ಯಾ ಸ್ವಸ್ಯ ತದನಪೇಕ್ಷತ್ವಲಾಭಾತ್ ಪೂರ್ಣತ್ವಸಿದ್ಧಿರಿತಿ ದ್ರಷ್ಟವ್ಯಮ್ ॥ ೪೩೫ ॥

**ವಿವರಣೆ**– ಭೇದವನ್ನು ಸಾಧನೆ ಮಾಡಲು ಹೊರಟ ಈ ಶ್ರುತಿವಾಕ್ಯದಿಂದ ಆನುಷಂಗಿಕವಾಗಿ ಸಿದ್ಧವಾದ ಭಗವದ್ಗುಣಗಳನ್ನು ಈ ಶ್ಲೋಕದಲ್ಲಿ ಸಂಗ್ರಹ ಮಾಡಿದ್ದಾರೆ. ಜೀವರಿಗೆ ಪದಾರ್ಥಗಳನ್ನು ಸೃಷ್ಟಿಮಾಡಿಕೊಡುತ್ತಾನೆ ಎಂದು ಹೇಳುವುದರಿಂದ ತನಗೆ ಆ ಕಾಮ್ಯವಸ್ತುಗಳ ಅಪೇಕ್ಷೆ ಇಲ್ಲದಿರುವುದರಿಂದ ಈಶ್ವರನಿಗೆ ಪೂರ್ಣತ್ವವು ಸಿದ್ಧವಾಗುತ್ತದೆ.

**ಮೋಕ್ಷೋಪಯೋಗಿಜ್ಞಾನತ್ವಂ ತಮಿತ್ಯುಕ್ತ್ಯೈಷು ದರ್ಶಿತಮ್ ।**
**ತತೋಽಪಿ ತದ್ಗುಣಾಂಭೋಧೇಃ ಪಾರಮಾರ್ಥ್ಯಂ ಪ್ರಸಿಧ್ಯತಿ ॥ ೪೩೬ ॥**

**ಅರ್ಥ–** ಯೇಷು= ಈ ಗುಣಗಳಲ್ಲಿ, ತಮಿತ್ಯುಕ್ತ್ಯಾ= ತಮಾತ್ಮಸ್ಥಂಯೇನುಪಶ್ಯಂತಿ ಎಂಬ ವಚನದಿಂದ, ಮೋಕ್ಷೋಪಯೋಗಿಜ್ಞಾನತ್ವಂ= ಮೋಕ್ಷಜನಕ ಜ್ಞಾನವಿಷಯತ್ವವು, ದರ್ಶಿತಂ= ಹೇಳಲ್ಪಟ್ಟಿತು, ತತೋಪಿ= ಆ ಕಾರಣದಿಂದಲೂ ಕೂಡ, ತದ್ಗುಣಾಂಭೋಧೇಃ= ಪರಮಾತ್ಮನ ಗುಣಸಮೂಹಕ್ಕೆ, ಪಾರಮಾರ್ಥ್ಯಂ= ಪಾರಮಾರ್ಥಿಕತ್ವವು, ಪ್ರಸಿದ್ಧ್ಯತಿ= ಸಿದ್ಧವಾಗುತ್ತದೆ.

**ಅನುವಾದ–** ತಮಾತ್ಮಸ್ಥಂ ಎಂದು ಹೇಳಿ ಈ ಗುಣಗಳಿಗೆ ಈ ಮಂತ್ರವು ಮೋಕ್ಷೋಪಯೋಗಿ ಜ್ಞಾನವಿಷಯತ್ವವನ್ನು ಹೇಳುತ್ತವೆ. ಆ ಕಾರಣದಿಂದಲೂ ಸಹ ಪರಮಾತ್ಮನ ಗುಣಸಮುದ್ರವು ಪಾರಮಾರ್ಥಿಕವೆಂದೇ ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಏಷು ಗುಣೇಷು ॥ ೪೩೬ ॥

**ವಿವರಣೆ–** ತಮಾತ್ಮಸ್ಥಂಯೇನುಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಂ ಎಂಬ ಉತ್ತರಾರ್ಧದಲ್ಲಿ ಪೂರ್ವೋಕ್ತ ಗುಣವಿಶಿಷ್ಟನಾದವನನ್ನು ಯಾವ ಅಧಿಕಾರಿಯು ನೋಡುತ್ತಾನೆಯೋ ಅವನಿಗೆ ಮೋಕ್ಷರೂಪವಾದ ಶಾಶ್ವತ ಸುಖ ಎಂದು ಹೇಳಿರುವುದರಿಂದ ಈ ಎಲ್ಲ ಗುಣಗಳ ಜ್ಞಾನವು ಮೋಕ್ಷೋಪಯೋಗಿ ಎಂದಾಯಿತು. ಆದ್ದರಿಂದ ಪಾರಮಾರ್ಥಿಕತ್ವವು ಸಿದ್ಧವಾಗುತ್ತದೆ.

**ಮುಕ್ತಾನಾಂ ಬಹುತಾ ಮುಕ್ತಸ್ವಾಮಿತ್ವಂ ಚ ಪ್ರಭೋರಭೂತ್ ।**
**ಆತ್ಮಸ್ಥಭಗವದ್ದೃಷ್ಟೇರ್ಮುಕ್ತಾವಪ್ಯನುವರ್ತನಂ ॥ ೪೩೭ ॥**

**ಅರ್ಥ–** ಮುಕ್ತಾನಾಂ= ಮುಕ್ತರ, ಬಹುತಾ= ಬಹುತ್ವವು, ಪ್ರಭೋಃ= ಪ್ರಭುವಾದ ಹರಿಗೆ, ಮುಕ್ತಸ್ವಾಮಿತ್ವಂ ಚ= ಮುಕ್ತಸ್ವಾಮಿತ್ವವೂ ಸಹ, ಅಭೂತ್= ಸಿದ್ಧವಾಯಿತು, ಆತ್ಮಸ್ಥಭಗವದ್ದೃಷ್ಟೇಃ= ತನ್ನಲ್ಲಿರುವ ಭಗವದ್ರೂಪದ ದರ್ಶನಕ್ಕೆ, ಮುಕ್ತಾವಪಿ= ಮೋಕ್ಷದಲ್ಲಿಯೂ ಕೂಡ, ಅನುವರ್ತನಂ= ಅನುವೃತ್ತಿಯೂ ಸಿದ್ಧವಾಯಿತು.

**ಅನುವಾದ–** ಇದೇ ಮಂತ್ರದಿಂದ ಮುಕ್ತರ ಬಹುತ್ವವು, ಹರಿಗೆ ಮುಕ್ತಸ್ವಾಮಿತ್ವವು ಸಿದ್ಧವಾಯಿತು ಮತ್ತು ಆತ್ಮಸ್ಥಭಗವದ್ದರ್ಶನವು ಮೋಕ್ಷಕಾಲದಲ್ಲಿಯೂ ಅನುವೃತ್ತವಾಗಿರುತ್ತದೆ ಎಂದು ಸಿದ್ಧವಾಯಿತು.

**ಭಾವವಿಲಾಸಿನೀ–** ತೇಷಾಂ ಶಾಶ್ವತಂ ಸುಖಮಿತ್ಯುಕ್ತ್ಯಾ ಮುಕ್ತಾನಾಂ ಬಹುತಾ । ತಸ್ಯ ಚ ಸುಖಸ್ಯ ತಂ ಯೇನುಪಶ್ಯಂತಿ ತೇಷಾಂ ಸುಖಮಿತರೇಷಾಂ ನೇತ್ಯುಕ್ತ್ಯಾಽಪರೋಕ್ಷಜ್ಞಾನಪ್ರಸನ್ನಭಗವದಧೀನತ್ವಲಾಭಾತ್ ಮುಕ್ತಸ್ವಾಮಿತ್ವಂ ಚ ಸಿದ್ಧಮಿತಿ ಭಾವಃ । ಯೇಽನ್ವಪಶ್ಯನ್ನಿತ್ಯನುಕ್ತ್ವಾಽನುಪಶ್ಯಂತೀತಿ ಲಟಾ ನಿರ್ದೇಶಾತ್ ಸುಖಕಾಲೇ ಆತ್ಮಸ್ಥಗುಣಭಗವದ್ದರ್ಶನಸ್ಯಾಪ್ಯುಕ್ತ್ಯಾ ತಸ್ಯ ಮುಕ್ತಾವಪ್ಯನುವರ್ತನಂ ಸಿದ್ಧಮಿತ್ಯರ್ಥಃ । ಇತೋಽಪಿ ಗುಣಾದೇರ್ನ ಮಿಥ್ಯಾತ್ವಮಿತಿ ಭಾವಃ ॥ ೪೩೭ ॥

**ವಿವರಣೆ–** ತೇಷಾಂ ಸುಖಂ ಎಂಬಲ್ಲಿ ಬಹುವಚನವಿರುವುದರಿಂದ ಮುಕ್ತರ ಬಹುತ್ವ ಸಿದ್ಧವಾಗುತ್ತದೆ. ಆದ್ದರಿಂದ ಮುಕ್ತಿಯಲ್ಲಿಯೂ ಭೇದವು ಸಿದ್ಧವಾಗುತ್ತದೆ. ಯೇನು ಪಶ್ಯಂತಿ ತೇಷಾಂ ಸುಖಂ ಎಂದು ಹೇಳಿ ದರ್ಶನಜನ್ಯಭಗವತ್ಪ್ರಸಾದದಿಂದಲೇ ಮೋಕ್ಷವೆಂದು ಹೇಳಿರುವುದರಿಂದ ಮುಕ್ತರಿಗೆ ಭಗವದಧೀನತ್ವವು ಸಿದ್ಧವಾಗುವುದರಿಂದ ಹರಿಗೆ ಮುಕ್ತಸ್ವಾಮಿತ್ವವು ಸಿದ್ಧವಾಯಿತು. ಯೇನು ಪಶ್ಯಂತಿ ತೇಷಾಂ ಸುಖಂ ಎಂದು ಅನುಪಶ್ಯಂತಿಯಲ್ಲಿ ಲಟ್ ಪ್ರಯೋಗವನ್ನು ಮಾಡಿ ಸುಖಕಾಲೀನತ್ವವನ್ನು ಹೇಳಿರುವುದರಿಂದ ಮೋಕ್ಷಕಾಲದಲ್ಲಿಯೂ ಭಗವದ್ದರ್ಶನವು ಸಿದ್ಧವಾಯಿತು.

ಪಂಚಭೇದಾಸ್ತಯಾ ಸಿದ್ಧಾ ಮುಕ್ತೇರ್ನಿತ್ಯಸುಖಾತ್ಮತಾ ।
ಭೇದಜ್ಞಾನೈಕಸಾಧ್ಯತ್ವಮುಕ್ತಸರ್ವವಿಶೇಷಣೈಃ ।
ಸಹೈವ ತಚ್ಚ ವಿಜ್ಞಾನಂ ಯೋಗ್ಯತಾಮನುಸೃತ್ಯ ಚ ॥ ೪೩೮ ॥

ತಾರತಮ್ಯೇನ ತದ್ದೃಷ್ಟಿರ್ಜೀವಾನಾಂ ತ್ರಿಪ್ರಕಾರತಾ ।
ಆತ್ಮಸ್ಥದ್ರಷ್ಟೃಭಿನ್ನತ್ವಂ ದ್ವೇಧಾಭವತಿ ಯದ್ ವಿದಾಂ ॥ ೪೩೯ ॥

**ಅರ್ಥ–** ಉಕ್ತಸರ್ವವಿಶೇಷಣೈಃ= ಈ ಮಂತ್ರದಲ್ಲಿ ಹೇಳಿದ ಎಲ್ಲಾ ವಿಶೇಷಣಗಳಿಂದ, ತಯಾ= ಈ ಶ್ರುತಿಯಿಂದ, ಪಂಚಭೇದಾಃ= ಪಂಚಭೇದಗಳು, ಮುಕ್ತೇಃ= ಮೋಕ್ಷಕ್ಕೆ, ನಿತ್ಯಸುಖಾತ್ಮತಾ= ನಿತ್ಯಸುಖಸ್ವರೂಪತ್ವವು, ಭೇದಜ್ಞಾನೈಕಸಾಧ್ಯತ್ವಂ= ಮೋಕ್ಷಕ್ಕೆ ಭೇದ ಜ್ಞಾನ ಮಾತ್ರ ಸಾಧ್ಯತ್ವವು, ತಾರತಮ್ಯೇನ ತದ್ದೃಷ್ಟಿಃ= ಭಗವದ್ದರ್ಶನದಲ್ಲಿ ತಾರತಮ್ಯವು, ಜೀವಾನಾಂ ತ್ರಿಪ್ರಕಾರತಾ= ಜೀವರ ತ್ರೈವಿಧ್ಯವು, ಸಿದ್ಧಾಃ= ಸಿದ್ಧವಾದವು, ಯತ್= ಏಕೆಂದರೆ, ವಿದಾಂ= ಜ್ಞಾನಿಗಳ ಪಕ್ಷದಲ್ಲಿ, ಆತ್ಮಸ್ಥದ್ರಷ್ಟೃಭಿನ್ನತ್ವಂ= ಆತ್ಮಸ್ಥದ್ರಷ್ಟೃಭೇದವು, ದ್ವೇಧಾ= ಎರಡು ರೀತಿಯಿಂದ, ಭವತಿ= ಉಪಪನ್ನವಾಗುತ್ತದೆ.

**ಅನುವಾದ–** ಈ ಶ್ರುತಿವಾಕ್ಯದಲ್ಲಿ ಹೇಳಿದ ಎಲ್ಲಾ ವಿಶೇಷಣಗಳ ಸಾಮರ್ಥ್ಯದಿಂದ ಪಂಚಭೇದವು, ಮೋಕ್ಷಕ್ಕೆ ನಿತ್ಯಸುಖಸ್ವರೂಪತ್ವವು ಮತ್ತು ಭೇದಜ್ಞಾನ ಮಾತ್ರ ಸಾಧ್ಯತ್ವವು, ಭಗವದ್ದರ್ಶನದಲ್ಲಿ ತಾರತಮ್ಯವು ಮತ್ತು ಜೀವರ ತ್ರೈವಿಧ್ಯವು ಸಿದ್ಧವಾಗುತ್ತದೆ. ಏಕೆಂದರೆ ಜ್ಞಾನಿಗಳ ಮತದಲ್ಲಿ ಆತ್ಮಸ್ಥ ಪರಮಾತ್ಮನ ದ್ರಷ್ಟೃಭಿನ್ನತ್ವವು ಎರಡು ರೀತಿಯಲ್ಲಿ ಉಪಪನ್ನವಾಗುತ್ತವೆ.

**ಭಾವವಿಲಾಸಿನೀ–** ತಯಾ ಶ್ರುತ್ಯಾ । ಪಂಚಭೇದಸಿದ್ಧಿಪ್ರಕಕಾರಂ ಸ್ವಯಮೇವ ವಕ್ಷ್ಯತಿ । ಸುಖಸ್ಯ ಶಾಶ್ವತತ್ವಕಥನಾದಾತ್ಮಸ್ಥಂ ಯೇಽನುಪಶ್ಯಂತೀತಿ ಕಥನಾಚ್ಚ ಮುಕ್ತೇರ್ನಿತ್ಯಸುಖಾತ್ಮತಾ ಭೇದಜ್ಞಾನೈಕಸಾಧ್ಯತ್ವಂ ಚ ಸಿದ್ಧಮಿತಿ ಯೋಜನಾ । ತಮಿತಿಶ್ರುತ್ಯುಕ್ತಸಕಲವಿಶೇಷವಿಶಿಷ್ಟಸ್ಯ ಪರಾಮರ್ಶಾತ್ ತದಿತ್ಯುಕ್ತಮ್ । ಅನುಪಶ್ಯಂತೀತ್ಯತ್ರೋಕ್ತಸ್ಯಾನ್ವಿತ್ಯುಪಸರ್ಗಸ್ಯಾನುಸೃತ್ಯೇತ್ಯರ್ಥ-

ಸದ್ಭಾವಾದ್ಯೋಗ್ಯತಾಮನುಸೃತ್ಯೇತ್ಯುಕ್ತಮ್ । ಅನಂತರಮಿತ್ಯಸ್ಯಾಪಿ (ಅರ್ಥಸ್ಯ) ಸದ್ಭಾವಾದ್ವಿಷ್ಣೋರನು ಬ್ರಹ್ಮಾ ತಮನು ರುದ್ರ ಇತ್ಯಸ್ಯಾರ್ಥಸ್ಯ ಲಾಭಾತ್ತಾರತಮ್ಯೇನೇತ್ಯುಕ್ತಮ್ । ತಸ್ಯ ಭಗವತೋ ದೃಷ್ಟಿಸ್ತದ್ದೃಷ್ಟಿಃ । ಸಾ ಚ ಸಾ ದೃಷ್ಟಿಶ್ಚೇತಿ ವಾ । ಯದ್ಯಸ್ಮಾತ್ । ಏದಾಂ ವಿದುಷಾಂ ಮತೇ । ದ್ವೇಧಾ ವೈಪರೀತ್ಯೇನ ದ್ರಷ್ಟೃತಯಾ ಸರ್ವಥಾ ತದದ್ರಷ್ಟೃಯಾ ಚ । ತತ್ತಸ್ಮಾತ್ । ದ್ರಷ್ಟೄಣಾಂ ವಿಪರೀತದ್ರಷ್ಟೄಣಾಂ ಅದ್ರಷ್ಟೄಣಾಂ ಜೀವಾನಾಂ ಚ ಲಾಭಾತ್ । ಯದ್ವಾ ದ್ವೇಧಾ ವೈಪರೀತ್ಯೇನ ದ್ರಷ್ಟೃತಯೋಭಯಥಾಪಿ ದ್ರಷ್ಟೃತಯೇತ್ಯರ್ಥಃ । ಏವಂ ಚ ಸಮ್ಯಕ್ ದ್ರಷ್ಟೃವಿಪರೀತದ್ರಷ್ಟೃಮಿಶ್ರದ್ರಷ್ಟೄಣಾಂ ಚ ಲಾಭಾದಿತ್ಯರ್ಥಃ ॥ ೪೩೮,-೪೩೯ ॥

**ವಿವರಣೆ–** ಪಂಚಭೇದಗಳು ಸಿದ್ಧವಾಗುವ ರೀತಿಯನ್ನು ಗ್ರಂಥಕಾರರೇ ಮುಂದಿನ ಶ್ಲೋಕಗಳಲ್ಲಿ ಹೇಳುತ್ತಾರೆ. 'ತೇಷಾಂ ಸುಖಂ ಶಾಶ್ವತಂ' ಎಂದು ಹೇಳಿದ್ದರಿಂದ ಮೋಕ್ಷಕ್ಕೆ ನಿತ್ಯತ್ವವು ಮತ್ತು ಸುಖರೂಪತ್ವವು ಸಿದ್ಧವಾಗುತ್ತದೆ. 'ಆತ್ಮಸ್ಥಂ ಯೇನು ಪಶ್ಯಂತಿ' ಎಂದು ಹೇಳಿದ್ದರಿಂದ ಮೋಕ್ಷಕ್ಕೆ ಭೇದಜ್ಞಾನಮಾತ್ರಸಾಧ್ಯತ್ವವು ಸಿದ್ಧವಾಗುತ್ತದೆ. ಅನುಪಶ್ಯಂತಿ ಎಂಬಲ್ಲಿ 'ಅನು' ಎಂಬ ಉಪಸರ್ಗಕ್ಕೆ ಎರಡು ಅರ್ಥ. ಮೊದಲನೆ ಅರ್ಥ ತಮ್ಮ ಯೋಗ್ಯತೆಗೆ ಅನುಗುಣವಾಗಿ ಎಂದು. ಆದ್ದರಿಂದ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ದೇವರ ದರ್ಶನವನ್ನು ಮಾಡುವುದರಿಂದ ಜೀವರಲ್ಲಿ ತಾರತಮ್ಯವು ಸಿದ್ಧವಾಗುತ್ತದೆ. 'ಅನು' ಎಂಬ ಉಪಸರ್ಗಕ್ಕೆ ಅನಂತರ ಎಂದು ಇನ್ನೊಂದು ಅರ್ಥ. ಆದ್ದರಿಂದ ದೇವರ ಗುಣವನ್ನು ಆತ್ಮಸ್ಥನಾದ ಪರಮಾತ್ಮನನ್ನು ಲಕ್ಷ್ಮಿಯು ನೋಡುತ್ತಾಳೆ, ಅನಂತರ ಬ್ರಹ್ಮದೇವರು ನೋಡುತ್ತಾರೆ, ಅನಂತರ ರುದ್ರದೇವರು ನೋಡುತ್ತಾರೆ, ನಂತರ ಇಂದ್ರದೇವರು ನೋಡುತ್ತಾರೆ ಎಂಬ ಅರ್ಥವು ದೊರೆಯುವುದರಿಂದ ಜೀವರ ತಾರತಮ್ಯವು ಸಿದ್ಧವಾಗುತ್ತದೆ. ನೇತರೇಷಾಂ ಎಂಬಲ್ಲಿ ಹಿಂದೆ ಹೇಳಿದ ದ್ರಷ್ಟೃಗಳಿಗಿಂತ ಭಿನ್ನರಾದವರಿಗೆ ಎಂಬ ಅರ್ಥವಿದೆ. ಭಿನ್ನರಾದವರು ಎರಡು ರೀತಿ. ಹಿಂದೆ ಹೇಳಿದ ರೀತಿಗಳಿಗಿಂತ ಭಿನ್ನವಾದ ರೀತಿಯಲ್ಲಿ ದೇವರನ್ನು ನೋಡುವವರು, ದೇವರನ್ನು ಸರ್ವಥಾ ನೋಡದೇ ಇರುವವರು ಎಂದು. ಆದ್ದರಿಂದ ದೇವರನ್ನು ಈ ಮಂತ್ರೋಕ್ತ ಗುಣವಿಶಿಷ್ಟವಾಗಿ ನೋಡುವ ಜೀವರು ಒಂದು ವಿಧ. ಈ ರೀತಿಯಲ್ಲಿ ನೋಡದೆ, ಬೇರೆ ರೀತಿಯಲ್ಲಿ ನೋಡುವವರು ಇನ್ನೊಂದು ವಿಧ. ಸರ್ವಥಾ ನೋಡದೇ ಇರುವವರು ಮತ್ತೊಂದು ವಿಧ. ಹೀಗೆ ಜೀವರ ತ್ರೈವಿಧ್ಯವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಚೇತನಾನಾಂ ಬಹುತ್ವೋಕ್ತ್ಯಾ ಜೀವಭೇದಃ ಪರಸ್ಪರಂ ।**
**ದಾತುಃ ಪ್ರಭೋರನೇಕೇಭ್ಯೋ ಭೇದಶ್ಚೈಕಸ್ಯ ಸಿಧ್ಯತಿ ॥ ೪೪೦ ॥**

**ಅರ್ಥ–** ಚೇತನಾನಾಂ= ಚೇತನರಿಗೆ, ಬಹುತ್ವೋಕ್ತ್ಯಾ= ಬಹುತ್ವವನ್ನು ಹೇಳಿದ ಕಾರಣದಿಂದ, ಪರಸ್ಪರಂ= ಪರಸ್ಪರವಾಗಿ, ಜೀವಭೇದಂ= ಜೀವಭೇದವೂ, ದಾತುಃ= ಎಲ್ಲ

ಕಾಮಗಳನ್ನು ಕೊಡುವ, ಏಕಸ್ಯ= ಒಬ್ಬನೇ ಆದ, ಪ್ರಭೋಃ= ಪ್ರಭುವಾದ ಹರಿಗೆ, ಅನೇಕೇಭ್ಯಃ= ಅನೇಕ ಜೀವರಿಂದ, ಭೇದಶ್ಚ= ಭೇದವೂ ಸಹ, ಸಿದ್ಧ್ಯತಿ= ಸಿದ್ಧಿಸುತ್ತದೆ.

**ಅನುವಾದ–** ಚೇತನಶ್ಚೇತನಾನಾಂ ಎಂಬಲ್ಲಿ ಚೇತನಗಳಿಗೆ ಬಹುತ್ವವನ್ನು ಹೇಳಿದ್ದರಿಂದ ಪರಸ್ಪರ ಜೀವಭೇದವು ಸಿದ್ಧವಾಗುತ್ತದೆ. ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ಎಂಬಲ್ಲಿ ಒಬ್ಬ ಪರಮಾತ್ಮನೇ ಅನೇಕರಿಗೆ ಕಾಮಪ್ರದನೆಂದು ಹೇಳಿರುವುದರಿಂದ ಅನೇಕರಾದ ಜೀವರಿಗೂ ಮತ್ತು ಏಕನಾದ ಪರಮಾತ್ಮನಿಗೂ ಭೇದವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ– ಪಂಚಭೇದಸಿದ್ಧಿಪ್ರಕಾರಂ ದರ್ಶಯತಿ – ಚೇತನಾನಾಮಿತಿ ॥ ಇದಂ ಚ ಬಹೂನಾಮಿತ್ಯಸ್ಯೋಪಲಕ್ಷಣಮ್ । ಚೇತನಾನಾಂ ಬಹುತ್ವೋಕ್ತ್ಯಾ ದಾತುಃ ಪ್ರಭೋರೇಕಸ್ಯೇತಿ ವಿಶೇಷಣಬಲಾದನೇಕೇಭ್ಯಃ ಪ್ರತಿಗ್ರಹೀತೃಭ್ಯೋ ಭೃತ್ಯೇಭ್ಯಶ್ಚೇತಿ ಲಭ್ಯತೇ ॥ ೪೪೦ ॥**

**ವಿವರಣೆ–** ಚೇತನಾನಾಂ ಎಂಬಲ್ಲಿರುವ ಬಹುವಚನವು ಜೀವಭೇದವನ್ನು ಹೇಳುತ್ತದೆ ಎಂಬುದು ಉಪಲಕ್ಷಣ. ಬಹೂನಾಂ ಎಂಬಲ್ಲಿರುವ ಬಹುವಚನವು ತೇಷಾಂ ಎಂಬಲ್ಲಿರುವ ಬಹುವಚನವು, ಇತರೇಷಾಂ ಎಂಬಲ್ಲಿರುವ ಬಹುವಚನವೂ ಸಹ ಜೀವರಿಗೆ ಪರಸ್ಪರವಾಗಿ ಭೇದವನ್ನು ಹೇಳುತ್ತದೆ.

**ತೇನ ಜೀವೇಶಯೋರ್ಭೇದಃ ಸಾಧಿತಃ ಸೋಪಪತ್ತಿಕಃ ।**
**ಮೋಕ್ಷೋಪಯೋಗಿಜ್ಞಾನತ್ವಾದ್ ಭೇದಸ್ಯಾತ್ಯಂತಸತ್ಯತಾ ॥ ೪೪೧ ॥**

**ಅರ್ಥ–** ತೇನ= ಆ ಕಾರಣದಿಂದ, ಜೀವೇಶಯೋರ್ಭೇದಃ= ಜೀವೇಶ್ವರ ಭೇದವು, ಸೋಪಪತ್ತಿ ಕಃ= ಯುಕ್ತಿ ಸಹಿತವಾಗಿ, ಸಾಧಿತಃ= ಸಾಧಿಸಲ್ಪಟ್ಟಿದೆ, ಭೇದಸ್ಯ= ಭೇದಕ್ಕೆ, ಮೋಕ್ಷೋಪ ಯೋಗಿಜ್ಞಾನತ್ವಾತ್= ಮೋಕ್ಷೋಪಯೋಗಿ ಜ್ಞಾನ ವಿಷಯವಾಗಿ ರುವುದರಿಂದ, ಅತ್ಯಂತ ಸತ್ಯತಾ= ಅತ್ಯಂತ ಸತ್ಯತ್ವವೂ ಸಹ ಸಾಧಿತವಾಗಿದೆ.

**ಅನುವಾದ–** ಆದ್ದರಿಂದ ಜೀವೇಶ ಭೇದವು ಯುಕ್ತಿಸಹಿತವಾಗಿ ಈ ಮಂತ್ರದಲ್ಲಿ ಸಾಧಿಸಲ್ಪಟ್ಟಿವೆ. ಭೇದವು ಮೋಕ್ಷೋಪಯೋಗಿಜ್ಞಾನ ವಿಷಯವಾದುದರಿಂದ ಅದು ಅತ್ಯಂತ ಸತ್ಯವೆಂದೂ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತೇನ ಬಹುವಿಧಭೇದಕಧರ್ಮಸದ್ಭಾವೇನ ॥ ೪೪೧ ॥

**ವಿವರಣೆ–** ಪರಮಾತ್ಮನು ಏಕ, ಜೀವರು ಅನೇಕರು. ಪರಮಾತ್ಮನು ದಾತೃ, ಜೀವರು ಪ್ರತಿಗೃಹೀತೃಗಳು. ಇಂತಹ ವಿರುದ್ಧ ಧರ್ಮಾಧಿಕರಣತ್ವವನ್ನು ಹೇಳಿ ಈ ಮಂತ್ರವು ಅನುಮಾನಮುದ್ರೆಯಿಂದ ಭೇದವನ್ನು ಸಾಧಿಸುತ್ತದೆ ಎಂದು ಅಭಿಪ್ರಾಯ.

**ಕಾಮ್ಯಾನಾಂ ಚ ಬಹುತ್ವೋಕ್ತ್ಯಾ ಜಡಭೇದಃ ಪರಸ್ಪರಂ ।**
**ತೇಷಾಮೀಶಕೃತತ್ವೋಕ್ತ್ಯಾ ಜಡೇಶ್ವರಭಿದಾ ತಥಾ ॥ ೪೪೨ ॥**

**ಅರ್ಥ–** ಕಾಮ್ಯಾನಾಂ ಚ= ಮತ್ತು ಕಾಮ್ಯವಾದ ಪದಾರ್ಥಗಳಿಗೆ, ಬಹುತ್ವೋಕ್ತ್ಯಾ= ಬಹುತ್ವವನ್ನು ಹೇಳಿದ ಕಾರಣದಿಂದ, ಪರಸ್ಪರಂ= ಪರಸ್ಪರವಾಗಿ, ಜಡ ಭೇದಃ= ಜಡವಾದ ಅವುಗಳಿಗೆ ಭೇದವು, ತೇಷಾಂ= ಅವುಗಳಿಗೆ, ಈಶಕೃತತ್ವೋಕ್ತ್ಯಾ= ಈಶ್ವರಕೃತತ್ವವನ್ನು ಹೇಳಿದ ಕಾರಣದಿಂದ, ಜಡೇಶ್ವರಭಿದಾ= ಜಡೇಶ್ವರ ಭೇದವು, ತಥಾ= ಹಾಗೆಯೇ ಸಿದ್ಧವಾಗುತ್ತದೆ.

**ಅನುವಾದ–** ಕಾಮ್ಯಮಾನವಾದ ಪದಾರ್ಥಗಳಿಗೆ ಬಹುತ್ವವನ್ನು ಹೇಳಿರುವುದರಿಂದ ಪರಸ್ಪರವಾಗಿ ಜಡಭೇದವು ಸಿದ್ಧವಾಗುತ್ತದೆ. ಆ ಕಾಮ್ಯಮಾನವಾದ ಪದಾರ್ಥಗಳು ಈಶ್ವರನಿಂದ ಸೃಷ್ಟಿಸಲ್ಪಟ್ಟಿವೆ ಎಂದು ಹೇಳಿರುವುದರಿಂದ ಅದರಂತೆ ಜಡೇಶ್ವರ ಭೇದವು ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಕಾಮಾನಿತಿ ಕಾಮ್ಯಾನಾಂ ಬಹುತ್ವೋಕ್ತ್ಯಾ । ತೇಷಾಂ ಕಾಮ್ಯಾನಾಮ್ । ವಿದಧಾತೀತಿ ಈಶಕೃತತ್ವೋಕ್ತ್ಯಾ ॥ ೪೪೨ ॥

**ವಿವರಣೆ–** ಯೋ ವಿದಧಾತಿ ಕಾಮಾನ್ ಎಂಬಲ್ಲಿ ಬಹುವಚನವಿದೆ. ಇಲ್ಲಿ ಕಾಮ ಎಂದರೆ ಕಾಮ್ಯಮಾನವಾದ ಪದಾರ್ಥ. ಅದು ಜಡರೂಪವಾದುದು. ಆದುದರಿಂದ ಜಡದ ಬಹುತ್ವವನ್ನು ಹೇಳಿದ್ದಾರೆ ಎಂದು ಅಭಿಪ್ರಾಯ.

**ಸೃಷ್ಟ್ಯುಕ್ತ್ಯಾ ತಸ್ಯ ಜಗತಃ ಸತ್ಯತ್ವಮಪಿ ಸಿಧ್ಯತಿ ।**
**ಸದೈವ ವರ್ತಮಾನತ್ವಂ ಲಟಾ ವಿಶ್ವಸ್ಯ ಸೂಚಿತಂ ॥ ೪೪೩ ॥**

**ಅರ್ಥ–** ಸೃಷ್ಟ್ಯುಕ್ತ್ಯಾ= ಸೃಷ್ಟಿಯನ್ನು ಹೇಳಿರುವುದರಿಂದ, ತಸ್ಯ ಜಗತಃ= ಆ ಜಗತ್ತಿಗೆ, ಸತ್ಯತ್ವಮಪಿ= ಸತ್ಯತ್ವವು ಕೂಡ, ಸಿಧ್ಯತಿ= ಸಿದ್ಧಿಸುತ್ತದೆ, ಲಟಾ= ಲಟ್ ಪ್ರಯೋಗದಿಂದ, ವಿಶ್ವಸ್ಯ= ಜಗತ್ತಿಗೆ, ಸದಾವರ್ತಮಾನತ್ವ ಮೇವ= ಸದಾ ವರ್ತಮಾನತ್ವವೇ, ಸೂಚಿತಂ= ಸೂಚಿತವಾಗುತ್ತದೆ.

**ಅನುವಾದ–** ಸೃಷ್ಟಿಯನ್ನು ಹೇಳಿರುವುದರಿಂದ ಜಗತ್ತಿಗೆ ಸತ್ಯತ್ವವೇ ಸಿದ್ಧವಾಗುತ್ತದೆ. ಲಟ್ ಪ್ರತ್ಯಯವು ಸರ್ವದಾ ವರ್ತಮಾನತ್ವವನ್ನೇ ಸೂಚಿಸುತ್ತದೆ.

**ಭಾವವಿಲಾಸಿನೀ–** ತಸ್ಯ ಕಾಮ್ಯರೂಪಸ್ಯ । ಮಿಥ್ಯಾಭೂತಶುಕ್ತಿರಜತಾದೇಃ ಶಶಶೃಂಗಸ್ಯ ಚ ಸೃಷ್ಟ್ಯದರ್ಶನಾದಿತಿ ಭಾವಃ । ನಿರ್ಮಾಣಕ್ರಿಯಾಯಾಃ ಸದಾತನತ್ವೇ ನಿರ್ಮೇಯಜಗತೋಽ-ಪ್ಯರ್ಥಾತ್ ಸದಾತನತ್ವಲಾಭಾತ್ ಸೂಚಿತ ಮಿತ್ಯುಕ್ತಮ್ ॥ ೪೪೩ ॥

**ವಿವರಣೆ–** ಸತ್ಯವಾದ ಪದಾರ್ಥಕ್ಕೇ ಸೃಷ್ಟಿಯು ಸಾಧ್ಯ. ಅಸತ್ಯವಾದ ಶುಕ್ತಿರಜತಾದಿ ಗಳಿಗೆ ಸೃಷ್ಟಿ ಇಲ್ಲವಷ್ಟೇ. ಇದು ಅದ್ವೈತಿಗಳಿಗೂ ಸಮ್ಮತ. ಸತೋಹಿ ಘಟಾದೇ-

ರುಪ್ತತ್ತಿರ್ದೃಷ್ಟಾ.... ಎಂದು ಶಾಂಕರ ಭಾಷ್ಯವಿದೆ. ಜಗತ್ತು ಸೃಷ್ಟಿಸಲ್ಪಡುವುದರಿಂದ ಸತ್ಯವೇ ಆಗುತ್ತದೆ. ವಿದಧಾತಿ ಎಂಬಲ್ಲಿ ಲಟ್ ಪ್ರಯೋಗವಿದೆ. ಪರಮಾತ್ಮನ ನಿರ್ಮಾಣ ಕ್ರಿಯೆಯು ನಿತ್ಯವಾದುದು. ಆದ್ದರಿಂದ ನಿರ್ಮಾಣ ಮಾಡಲ್ಪಡುವ ವಸ್ತುವೂ ನಿತ್ಯವಾಗಿರಬೇಕು. ವಿದಧಾತಿ ಎಂಬಲ್ಲಿರುವ ಲಟ್ ಪ್ರತ್ಯಯವು ಸರ್ವಕಾಲದಲ್ಲಿ ವರ್ತಮಾನತ್ವವನ್ನು ಕಂಠತಃ ಹೇಳದಿದ್ದರೂ ಸೂಚನೆಯಿಂದ ತಿಳಿಸುತ್ತದೆ ಎಂದು ಅಭಿಪ್ರಾಯ.

ಜೀವಸಂಬಂಧಿತೋಕ್ತ್ಯಾ ಚ ಜಡಜೀವಭಿದಾ ಸ್ಫುಟಾ ॥ ೪೪೪ ॥

**ಅರ್ಥ–** ಜೀವಸಂಬಂಧಿತೋಕ್ತ್ಯಾ ಚ= ಜೀವಸಂಬಂಧವನ್ನು ಹೇಳಿರುವ ಕಾರಣದಿಂದಲೂ ಸಹ, ಜಡಜೀವಭಿದಾ= ಜಡಜೀವಭೇದವು, ಸ್ಫುಟಾ= ಸ್ಪಷ್ಟವಾಗಿ ಸಿದ್ಧಿಸುತ್ತವೆ.

**ಅನುವಾದ–** ಜೀವಸಂಬಂಧವನ್ನು ಹೇಳಿರುವ ಕಾರಣದಿಂದ ಜಡಜೀವಭೇದವು ಸ್ಪಷ್ಟವಾಗಿ ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಬಹೂನಾಂ ಕಾಮಾನಿತಿ ಜೀವಸಂಬಂಧಿತೋಕ್ತ್ಯಾ ಸಂಬಂಧಸ್ಯ ಷಷ್ಠ್ಯರ್ಥತ್ವಾತ್ ತಸ್ಯ ಚ ದ್ವಿನಿಷ್ಠತಾಯಾಃ ಪ್ರಸಿದ್ಧತ್ವಾತ್ ಸ್ಫುಟೇತ್ಯುಕ್ತಮ್ । ಉಪಲಕ್ಷಣಂ ಚೈತತ್ । ಕಾರ್ಯತ್ವಾಕಾರ್ಯತ್ವಾಭ್ಯಾಂ ಜಡತ್ವಚೇತನತ್ವಾಭ್ಯಾಂ ಚೇತಿ ದ್ರಷ್ಟವ್ಯಮ್ ॥ ೪೪೪ ॥

**ವಿವರಣೆ–** ಬಹೂನಾಂ ಕಾಮಾನ್ ಎಂಬಲ್ಲಿ ಅನೇಕ ಜೀವರಿಗೆ ಸಂಬಂಧಿಸಿದ ಇಷ್ಟವಾದ ಪದಾರ್ಥಗಳನ್ನು ಸೃಷ್ಟಿಸುತ್ತಾನೆ ಎಂದು ಹೇಳಲಾಗಿದೆ. ಜೀವರಿಗೆ ಸಂಬಂಧಿಸಿದ ಜಡ ಪದಾರ್ಥಗಳು ಎಂದು ಹೇಳಿರುವುದರಿಂದ ಜೀವರಿಗೂ ಮತ್ತು ಜಡಕ್ಕೂ ಭೇದವು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

ಏಕಜೀವಕಥಾ ಜೀವಾಭೇದೋ ಜೀವೇಶ್ವರಾಭಿದಾ ।
ಚಿದ್ರೂಪತ್ವೈವ ಜೀವಾನಾಂ ಚಿತ್ಯಕರ್ತೃತ್ವಮಿತ್ಯಪಿ ॥ ೪೪೫ ॥

ನಿಷ್ಪ್ರಕಾರೈಕ್ಯವಿಜ್ಞಾನಾನ್ಮುಕ್ತಿರ್ಜಗದಸತ್ಯತಾ ।
ಸಕೃತ್ ಸರ್ವವಿಮೋಕ್ಷಶ್ಚೇತ್ಯೇತತ್ ಸರ್ವಂ ಹಿ ದೂಷಿತಮ್ ॥ ೪೪೬ ॥

**ಅರ್ಥ–** ಏಕಜೀವಕಥಾ= ಏಕಜೀವವಾದವು, ಜೀವಾಭೇದಃ= ಜೀವರ ಪರಸ್ಪರ ಅಭೇದವು, ಜೀವೇಶ್ವರಾಭಿದಾ= ಜೀವೇಶ್ವರರ ಅಭೇದವು, ಜೀವಾನಾಂ= ಜೀವರಿಗೆ, ಚಿದ್ರೂಪತ್ವೈವ= ಕರ್ತೃತ್ವಾದಿಗಳು ಇಲ್ಲದ ಕೇವಲ ಚೈತನ್ಯರೂಪತ್ವವು, ಅಪಿ= ಮತ್ತು, ಚಿತಿ= ಚೈತನ್ಯದಲ್ಲಿ, ಅಕರ್ತೃತ್ವಮಿತಿ= ಕರ್ತೃತ್ವವಿಲ್ಲವೆಂಬುದು, ನಿಷ್ಪ್ರಕಾರೈಕ್ಯವಿಜ್ಞಾನಾತ್=

ನಿಷ್ಪ್ರಕಾರಕವಾದ ಅಭೇದ ಜ್ಞಾನದಿಂದ, ಮುಕ್ತಿಃ= ಮೋಕ್ಷವು ಎಂಬುದು, ಜಗದಸತ್ಯತಾ= ಜಗತ್ತಿನ ಅಸತ್ಯತ್ವವೂ, ಸಕೃತ್ಸರ್ವವಿಮೋಕ್ಷಶ್ಚ= ಒಂದೇ ಕಾಲದಲ್ಲಿ ಎಲ್ಲ ಜೀವರ ಮೋಕ್ಷವು, ಇತ್ಯೇತತ್ಸರ್ವಂ= ಈ ಎಲ್ಲ ಪ್ರಮೇಯಗಳೂ ಸಹ, ದೂಷಿತಂ ಹಿ= ದೂಷಿಸಲ್ಪಟ್ಟಿದೆಯಷ್ಟೇ.

**ಅನುವಾದ–** ಏಕಜೀವವಾದ, ಜೀವಾಭೇದ, ಜೀವೇಶ್ವರ ಅಭೇದ, ಜೀವರಿಗೆ ಕರ್ತೃತ್ವಾದಿ ರಹಿತ ಚೈತನ್ಯಸ್ವರೂಪತ್ವವು, ಚೈತನ್ಯಕ್ಕೆ ಕರ್ತೃತ್ವಾಭಾವ, ನಿಷ್ಪ್ರಕಾರಕವಾದ ಐಕ್ಯಜ್ಞಾನದಿಂದ ಮೋಕ್ಷ, ಜಗತ್ತಿನ ಅಸತ್ಯತ್ವ, ಒಂದೇ ಬಾರಿ ಎಲ್ಲ ಜೀವರಿಗೂ ಮೋಕ್ಷ, ಈ ಎಲ್ಲಾ ಪರಾಭಿಪ್ರೇತವಾದ ಪ್ರಮೇಯಗಳೂ ಈ ಮಂತ್ರದಿಂದ ದೂಷಿಸಲ್ಪಡುತ್ತವೆ.

**ಭಾವವಿಲಾಸಿನೀ–** ಏವಂ ಸ್ವಮತಸಿದ್ಧಿಪ್ರಕಾರಮುಕ್ತ್ವಾ ಪರಮತನಿರಾಕರಣಪ್ರಕಾರಮಪ್ಯಾಹ – **ಏಕಜೀವೇತಿ** ॥ ಬಹೂನಾಮಿತಿ ಜೀವಬಾಹುಲ್ಯಕಥನಾದೇಕಜೀವಕಥಾ ಏಕ ಏವ ಜೀವ ಇತಿ ಕಥಾ । ಬಹುಜೀವವಾದೇಽಪಿ ಜೀವಾಭೇದಃ । ಜೀವಾನಾಂ ಪರಸ್ಪರಭೇದಶ್ಚೋಕ್ತವಿಧಯಾ ಜೀವೇಶ್ವರಭೇದಸಾಧನಾತ್ ಜೀವೇಶ್ವರಾಭಿದಾ । ಮುಕ್ತೌ ಸಂಸಾರೇ ಚ ಸುಖಭೋಕ್ತೃತ್ವ-ಕಥನಾತ್ ಜೀವಾನಾಂ ಚಿದ್ರೂಪತ್ವೈವ ಭೋಕ್ತೃತ್ವಾದಿರಹಿತಚಿನ್ಮಾತ್ರರೂಪತೇತ್ಯರ್ಥಃ । ಚೇತನೋ ವಿದಧಾತೀತ್ಯುಕ್ತತ್ವಾತ್ ಚಿತೋಽಕರ್ತೃತ್ವಮ್ ॥ ೪೪೫ ॥

ಆತ್ಮಸ್ಥಂ ತಮನುಪಶ್ಯಂತೀತಿ ಸಪ್ರಕಾರಕಭೇದಜ್ಞಾನಸ್ಯೋಕ್ತತ್ವಾನ್ನಿಷ್ಪ್ರಕಾರಕೈಕ್ಯವಿಜ್ಞಾನಾನ್ಮುಕ್ತಿಃ । ನಿಷ್ಪ್ರಕಾರಂ ಚ ತದೈಕ್ಯವಿಜ್ಞಾನಂ ಚೇತಿ ಸಮಾಸಃ । ಪ್ರಷ್ಟೃತ್ವೋಕ್ತೇರ್ಜಗದಸತ್ಯತಾ । ತೇಷಾಂ ಸುಖಮಿತರೇಷಾಂ ನೇತ್ಯುಕ್ತೇಃ ಸಕೃತ್ಸರ್ವಮೋಕ್ಷಶ್ಚೇತ್ಯೇತತ್ಸರ್ವಮನಯಾ ಶ್ರುತ್ಯಾ ವಿದೂಷಿತಮಿತಿ ಸಂಬಂಧಃ ॥ ೪೪೬ ॥

**ವಿವರಣೆ–** ಹೀಗೆ ಈ ಮಂತ್ರದಿಂದ ನಮ್ಮ ಮತದ ಎಲ್ಲಾ ಪ್ರಮೇಯಗಳೂ ಸಿದ್ಧವಾಗುವ ಪ್ರಕಾರವನ್ನು ತಿಳಿಸಿ ಇಲ್ಲಿ ಪರಮತಪ್ರಮೇಯಗಳನ್ನು ನಿರಾಕರಣೆ ಮಾಡುವ ಪ್ರಕಾರಗಳನ್ನು ತಿಳಿಸುತ್ತಾರೆ. ಎಲ್ಲದರ ಅರ್ಥವೂ ಸ್ಪಷ್ಟವಾಗಿವೆ. ತೇಷಾಂ ಸುಖಂ ಶಾಶ್ವತಂ ನೇತರೇಷಾಂ ಎಂಬಲ್ಲಿ ಯಾರು ಪೂರ್ವೋಕ್ತ ಗುಣವಿಶಿಷ್ಟವಾದ ಪರಮಾತ್ಮನ ದರ್ಶನ ಮಾಡುತ್ತಾರೆಯೋ ಅವರಿಗೆ ಮೋಕ್ಷವಾಗುತ್ತದೆ. ಉಳಿದವರಿಗೆ ಮೋಕ್ಷವಾಗುವುದಿಲ್ಲ ಎಂದು ಹೇಳಿರುವುದರಿಂದ, ಒಂದೇ ಕಾಲದಲ್ಲಿ ಎಲ್ಲ ಜೀವರಿಗೂ ಮೋಕ್ಷವಾಗುತ್ತದೆ ಎಂಬ ವಾದವು ನಿರಾಕೃತವಾಗುತ್ತದೆ ಎಂದು ಅಭಿಪ್ರಾಯ.

ಏತಾವಂತಮಪಿ ಹ್ಯರ್ಥಮೇಕೈವ ಶ್ರುತಿರಾದದೇ ।
ಸರ್ವಶ್ರುತ್ಯರ್ಥಕುಶಲೌ ಸೂತ್ರಭಾಷ್ಯಕೃತೌ ಸ್ತುಮಃ ॥ ೪೪೭ ॥

**ಅರ್ಥ–** ಏತಾವಂತಂ ಅರ್ಥಮಪಿ= ಇಷ್ಟು ಅರ್ಥಗಳನ್ನೂ ಕೂಡ, ಏಕೈವ ಶ್ರುತಿಃ= ಒಂದೇ ಶ್ರುತಿವಾಕ್ಯವು, ಆದದೇ= ಸ್ವೀಕಾರ ಮಾಡಿದೆ, ಸರ್ವಶ್ರುತ್ಯರ್ಥಕುಶಲೌ= ಹೀಗೆ

ಎಲ್ಲಾ ಶ್ರುತಿಗಳಿಗೂ ಅರ್ಥವನ್ನು ಹೇಳುವುದರಲ್ಲಿ ಕುಶಲರಾದ, ಸೂತ್ರಭಾಷ್ಯಕೃತೌ= ಸೂತ್ರಕಾರರನ್ನು ಮತ್ತು ಭಾಷ್ಯಕಾರರನ್ನು, ಸ್ತುಮಃ= ಸ್ತೋತ್ರಮಾಡುತ್ತೇವೆ.

**ಅನುವಾದ–** ಹೀಗೆ ಒಂದೇ ಶ್ರುತಿಯು ಇಷ್ಟು ಅರ್ಥಗಳನ್ನು ಪ್ರತಿಪಾದನೆ ಮಾಡುತ್ತಿದೆ. ಎಲ್ಲ ಶ್ರುತಿಗಳಿಗೂ ಅರ್ಥವನ್ನು ಮಾಡುವುದರಲ್ಲಿ ಕುಶಲರಾದ ಸೂತ್ರಕಾರರನ್ನೂ ಮತ್ತು ಭಾಷ್ಯಕಾರರನ್ನೂ ನಾವು ಸ್ತೋತ್ರ ಮಾಡುತ್ತೇವೆ.

**ಭಾವವಿಲಾಸಿನೀ–** ಉಕ್ತರೀತ್ಯಾ ಸಕಲಸ್ವಸಿದ್ಧಾಂತಸಾಧಿಕಾಂ ಸಕಲಪರಮತಬಾಧಿಕಾಂ ಚೇಮಾಂ ಶ್ರುತಿಂ ಸ್ತುವನ್ನೇತಾದೃಶಸಕಲಶ್ರುತಿಮೀಮಾಂಸಾನಿಪುಣೌ ಸೂತ್ರಕಾರಭಾಷ್ಯಕಾರೌ ಚ ಸ್ತೌತಿ **– ಏತಾವಂತಮಿತ್ಯಾದಿನಾ** ॥ ೪೪೭ ॥

**ವಿವರಣೆ–** ಒಂದೊಂದು ವಾಕ್ಯದಿಂದಲೇ ನಮಗೆ ಅಭಿಮತವಾದ ಇಷ್ಟೊಂದು ಪ್ರಮೇಯಗಳು ಮತ್ತು ಪರಮತ ನಿರಾಕರಣೆಯು ದೊರೆಯುವಂತೆ ವ್ಯಾಖ್ಯಾನ ಮಾಡುವ ಭಾಷ್ಯಕಾರರು ಮತ್ತು ಅದನ್ನು ಸೂಚಿಸುವ ಸೂತ್ರಕಾರರು ಎಲ್ಲ ಶ್ರುತಿಗಳಿಗೂ ಅರ್ಥವನ್ನು ಮಾಡುವಾಗ ಸಿದ್ಧಾಂತ ಪ್ರಮೇಯಗಳು ಅತ್ಯಂತ ದೃಢವಾಗಿ ಸಿದ್ಧವಾಗುತ್ತವೆ ಮತ್ತು ಪರಮತವು ಅತ್ಯಂತ ದೃಢವಾಗಿ ನಿರಾಕರಿಸಲ್ಪಡುತ್ತವೆ. ಆ ಕಾರಣದಿಂದ ಅವರಿಬ್ಬರಿಗೆ ನಮ್ಮ ಸ್ತೋತ್ರವು ಸಲ್ಲುತ್ತದೆ ಎಂದು ಅಭಿಪ್ರಾಯ.

ಸ್ಯಾದೇಕಾಂಗವೀರೋಽಯಂ ವೇದವ್ಯಾಸಭಟಾಗ್ರಣೀಃ ।
ತತ್ತದ್ವಾಕ್ಯೈಶ್ಚ ತತ್ಸಿದ್ಧೌ ದ್ವಿರ್ಬದ್ಧಸ್ಯ ಸುಬದ್ಧತಾ ॥ ೪೪೮ ॥

**ಅರ್ಥ–** ತಸ್ಮಾತ್= ಆ ಕಾರಣದಿಂದ, ಅಯಂ= ಈ, ವೇದವ್ಯಾಸಭಟಾಗ್ರಣೀಃ= ವೇದವ್ಯಾಸರ ಸೈನಿಕರಲ್ಲಿ ಅಗ್ರೇಸರನಾದ, ಅಯಂ= ಈ ಕಾಠಕವಾಕ್ಯವು, ಏಕಾಂಗವೀರಃ= ಅಸಹಾಯ ವೀರನಾಗಿದೆ, ತತ್ತದ್ವಾಕ್ಯೈಶ್ಚ= ಆಯಾ ಬೇರೆ ಬೇರೆ ವಾಕ್ಯಗಳಿಂದಲೂ, ತತ್ಸಿದ್ಧೌ= ಆಯಾ ಪ್ರಮೇಯಗಳು ಸಿದ್ಧವಾಗುವಾಗ, ದ್ವಿರ್ಬದ್ಧಸ್ಯ= ಎರಡು ಗಂಟನ್ನು ಹಾಕಿದ ವಸ್ತುವಿಗೆ, ಸುಬದ್ಧತಾ= ಸುಬದ್ಧತ್ವವೇ ಉಂಟಾಗುವುದಷ್ಟೇ.

**ಅನುವಾದ–** ಆ ಕಾರಣದಿಂದ ನಿತ್ಯೋನಿತ್ಯಾನಾಂ ಎಂಬ ಈ ಕಾಠಕೋಪನಿಷತ್ತಿನ ವಾಕ್ಯವು ಏಕಾಂಗವೀರನಾಗಿ ವೇದವ್ಯಾಸರ ಸೈನಿಕರಲ್ಲಿ ಅಗ್ರಸ್ಥಾನದಲ್ಲಿ ನಿಲ್ಲುತ್ತದೆ. ಬೇರೆ ಬೇರೆ ವಾಕ್ಯಗಳಿಂದಲೂ ಈ ಪ್ರಮೇಯಗಳು ಸಿದ್ಧವಾದರೆ ಎರಡು ಗಂಟನ್ನು ಹಾಕಿದ ವಸ್ತುವು ಸುಭದ್ರವಾಗಿರುವಂತೆ ಈ ಪ್ರಮೇಯಗಳು ಇನ್ನೂ ದೃಢವಾಗುತ್ತವೆ.

**ಭಾವವಿಲಾಸಿನೀ–** ಅಯಮುಕ್ತವಾಕ್ಯರೂಪೋ ವೇದವ್ಯಾಸಭಟಾಗ್ರಣೀರೇಕಾಂಗವೀರಃ ಸಹಾಯಾಂತರಮನಪೇಕ್ಷ್ಯ ಸ್ವಯಮೇಕ ಏವ ಸರ್ವದುರ್ಮತಸೇನಾಸಂಹಾರಕ ಇತ್ಯರ್ಥಃ ।

ತತ್ತದ್ವಾಕ್ಯೈರ್ಜಗತ್ಸತ್ಯತ್ವಾದಿಸಾಧಕೈಸ್ತೈಸ್ತೈರ್ವಿಶ್ವಂ ಸತ್ಯಂ, ದ್ವಾಸುಪರ್ಣಾ, ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತೀತ್ಯಾದಿ ವಾಕ್ಯೈಸ್ತತ್ಸಿದ್ಧೌ ಜಗತ್ಸತ್ಯವಾದಿಸಿದ್ಧೌ। ಏಕಪ್ರಮಾಣೋಕ್ತ-ಸ್ಯಾರ್ಥಸ್ಯಪ್ರಮಾಣಾಂತರೇಣ ಸಾಧನೇಽನುವಾದಕತಯಾಽಪ್ರಾಮಾಣ್ಯಂ ಯಃ ಪರೋಽವಕ್ತಿ ಸಃ ದ್ವಿರ್ಬದ್ಧಂ ಸುಬದ್ಧಂ ಭವತೀತಿ ಲೌಕಿಕಾಭಾಣಕಮಪಿ ನ ಜಾನಾತೀತಿ ಸೂಚನಾಯ ದ್ವಿರ್ಬದ್ಧಸ್ಯ ಸುಬದ್ಧತೇತ್ಯುಕ್ತಮ್ ॥ ೪೪೮ ॥

**ವಿವರಣೆ–** ಈ ಮಂತ್ರವೇ ನಮ್ಮ ಸಿದ್ಧಾಂತಕ್ಕೆ ಬೇಕಾದ ಎಲ್ಲ ಪ್ರಮೇಯಗಳನ್ನೂ ಸಾಧಿಸುತ್ತದೆ. ಜೊತೆಗೆ ಒಂದೊಂದು ಪ್ರಮೇಯವನ್ನು ಸಾಧಿಸುವ ಬೇರೆ ಬೇರೆ ವಾಕ್ಯಗಳಿವೆ. ವಿಶ್ವಂ ಸತ್ಯಂ ಇನ್ನುವ ವಾಕ್ಯವು ವಿಶ್ವಸತ್ಯತ್ವವನ್ನು, ದ್ವಾ ಸುಪರ್ಣಾ ಎಂಬ ವಾಕ್ಯವು ಜೀವೇಶ ಭೇದವನ್ನು, ಗುಣಾಃ ಶ್ರುತಾಃ ಎಂಬ ವಾಕ್ಯವು ಗುಣಪೂರ್ಣತ್ವವನ್ನು ಸಾಧನೆ ಮಾಡಿಕೊಡುತ್ತವೆ. ಈ ಮಂತ್ರದಿಂದ ಹೇಳಲ್ಪಟ್ಟ ಪ್ರಮೇಯವು ಇನ್ನೊಂದು ವಾಕ್ಯದಿಂದಲೂ ಸಿದ್ಧವಾದರೆ ಆಗ ಎರಡು ವಾಕ್ಯಗಳಿಂದಲೂ ಸಿದ್ಧವಾದ ಪ್ರಮೇಯವು ಅತ್ಯಂತ ದೃಢವಾಗುತ್ತದೆ. ಆ ಕಾರಣದಿಂದ ನಮ್ಮ ಸಿದ್ಧಾಂತವು ಅತ್ಯಂತ ದೃಢವಾಗಿ ಸ್ಥಾಪಿತವಾಗುತ್ತದೆ ಎಂದು ಅಭಿಪ್ರಾಯ.

**ತದ್ ವ್ಯಾಸಕೃತವಿಸ್ತಾರಾ ಶ್ರುತಿಃ ಸೂತ್ರಾನುಸಾರಿಣೀ ।**
**ತಾನಿ ಸರ್ವಾಣಿ ಭೇದಾದೇಃ ಸಾಧಕಾನೀತಿ ಸುಸ್ಥಿತಂ ॥ ೪೪೯ ॥**

**ಅರ್ಥ–** ತತ್= ಆ ಕಾರಣದಿಂದ, ವ್ಯಾಸಕೃತವಿಸ್ತಾರಾ= ವೇದವ್ಯಾಸರಿಂದ ವಿಸ್ತಾರ ಮಾಡಲ್ಪಟ್ಟ, ಶ್ರುತಿಃ= ಶ್ರುತಿಯು, ಸೂತ್ರಾನುಸಾರಿಣೀ= ಬ್ರಹ್ಮಸೂತ್ರಗಳನ್ನು ಅನುಸರಿಸಿ ನಡೆಯುತ್ತವೆ, ತಾನಿ ಸರ್ವಾಣಿ= ಆ ಎಲ್ಲ ಬ್ರಹ್ಮಸೂತ್ರಗಳೂ, ಭೇದಾದೇಃ= ಭೇದ ಮೊದಲಾದ ತತ್ತ್ವಗಳಿಗೆ, ಸಾಧಕಾನೀತಿ= ಸಾಧಕವಾಗಿವೆ ಎಂಬುದು, ಸುಸ್ಥಿತಂ= ಚೆನ್ನಾಗಿ ಸ್ಥಾಪಿತವಾಯಿತು.

**ಅನುವಾದ–** ಆದ್ದರಿಂದ ವ್ಯಾಸರಿಂದ ವಿಭಜಿಸಲ್ಪಟ್ಟ ವೇದವು ಸೂತ್ರಗಳನ್ನೇ ಅನುಸರಿಸಿಕೊಂಡು ನಡೆಯುತ್ತದೆ. ಆ ಬ್ರಹ್ಮಸೂತ್ರಗಳಾದರೂ ಎಲ್ಲವೂ ಭೇದಾದಿ ಪ್ರಮೇಯ ಸಾಧಕಗಳಾಗಿವೆ ಎಂಬುದು ಸುಸ್ಥಾಪಿತವಾಯಿತು.

**ಭಾವವಿಲಾಸಿನೀ–** ತತ್ತಸ್ಮಾತ್ । ತಾನಿ ಸೂತ್ರಾಣಿ । ಸುಸ್ಥಿತಮ್ । ಸಕಲಮಸ್ಮನ್ಮತಪ್ರಮೇಯಂ ಸುಸ್ಥಿತಮಾಸೀದಿತ್ಯರ್ಥಃ ॥ ೪೪೯ ॥

—o—



## ರಾಜಸುಭಾಷಿತ

**ಭಕ್ತಿಃ ಸ್ಯಾತ್ ತ್ವಯಿ ಗೋವಿಂದ ತೃಪ್ತಿಃ ಸ್ಯಾತ್ ತ್ವನ್ನಿಷೇವಯಾ ।**
**ತ್ವತ್ತೋಽನ್ಯತ್ರ ವಿರಕ್ತಿಃ ಸ್ಯಾನ್ಮುಕ್ತಿಶ್ಚ ಸ್ಯಾನ್ಮುಕುಂದ ಮೇ ॥**

ಎಲೈ ಗೋವಿಂದನೇ! ನನಗೆ ನಿನ್ನಲ್ಲಿ ಭಕ್ತಿ ಉಂಟಾಗಲಿ ಮತ್ತು ನಿನ್ನ ಸೇವೆಯಿಂದ ತೃಪ್ತಿ ಉಂಟಾಗಲಿ. ನಿನ್ನನ್ನು ಬಿಟ್ಟು ಬೇರೆ ವಿಷಯದಲ್ಲಿ ವೈರಾಗ್ಯ ಉಂಟಾಗಲಿ. ಎಲೈ ಮುಕುಂದನೇ! ನನಗೆ ನಿನ್ನ ಅನುಗ್ರಹದಿಂದ ಮುಕ್ತಿಯೂ ಉಂಟಾಗಲಿ.

